# ಶಿವಾನುಭವ.

ಸಂಪುಟ-೧೭

೧೯೪೨.

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೭] ಅಕ್ಟೋಬರ ೧೯೪೨. [ಸಂಚಿಕೆ ೧

## ವಿಷಯಾನುಕ್ರಮಣಿಕೆ.


| ವಿಷಯುಗಳು. | ಲೇಖಕರು. | ಪುಟ |
|---|---|---|
| ೧ ಆತ್ಮ ನಿವೇದನೆ | ಸಂಪಾದಕರು | ೧ |
| ೨ ಶಿವಾನುಭವ | ಶ್ರೀ ಜ. ಷಂ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು | ೬ |
| ೩ ಗುರು ಲಿಂಗ ಜಂಗಮ | ಶ್ರೀ ಬ. ಚೆ. ಪಟ್ಟೇದ ವಂಟಮುರಿ | ೧೧ |
| ೪ ಬಸವೇಶ್ವರನ ಚರಿತ್ರ | ,, ರಾ. ಬ. ಫ. ಗು. ಹಳಕಟ್ಟಿ ವಿಜಾಪುರ | ೨೩ |
| ೫ ಶಿವಶರಣರ ಶಿವದೀಕ್ಷಾಕಾಲ | ,, ಗುರುಮೂರ್ತಿದೇವರು ಜಗದ್ಗುರು ಶ್ರೀಮನ್ನಿಡುಮಾಮಿಡಿ | ೩೭ |
| ೬ ಅಷ್ಟಾವರಣ | ಶ್ರೀ ಪುರಾಣಿಕ ಬುದ್ಧಯ್ಯ ಸ್ವಾಮಿಗಳು ಧಾರವಾಡ | ೪೫ |
| ೭ ಲಿಂಗಧಾರಣ ಅರ್ಥಾತ್ ಶಿವದೀಕ್ಷೆ | ಶ್ರೀ ಜೀರಗೆ ಕ. ಬಸವಪ್ಪ ಬೆಂಗಳೂರ | ೪೮ |
| ೮ ಸ್ಫುಟ ವಿಷಯ | ಸಂಪಾದಕರು | ೫೭ |
| ೯ ವೀರಶೈವ ರಾಜಮನೆತನಗಳ ಚರಿತ್ರೆಗಳು | ಸಂಪಾದಕರು | ೯—೧೬ |

# ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವದ ಕಾಣಿಕೆ.

| | | |
|---|---|---|
| ೧ | ಶ್ರೀ ರಾಮಪ್ಪ ಲಕ್ಷ್ಮಣಪ್ಪ ಚಿಕ್ಕೋಡಿ, ರಬಕವಿ | ೧೦೦-೦-೦ |
| ೨ | ,, ಪರಪ್ಪ ಸಂಗಪ್ಪ ಪಾಟೀಲ ಢವಳಗಿ | ೨೫-೦-೦ |
| ೩ | ,, ಬಸಪ್ಪ ದಾನಪ್ಪ ನಾಗಠಾಣ ಮುದ್ದೇಬಿಹಾಳ | ೫-೦-೦ |
| ೪ | ,, ಅಮರಪ್ಪ ಹಳ್ಳೂರ ಮುದ್ದೇಬಿಹಾಳ | ೨೫-೦-೦ |
| ೫ | ,, ಎಮ್. ಸಿ. ಪಾಟೀಲ ,, | ೫-೦-೦ |
| ೬ | ,, ಬಸಪ್ಪ ಜುಮ್ಮಣ್ಣ ಹುಲ್ಲೂರ ಮುದ್ದೇಬಿಹಾಳ | ೫-೦-೦ |
| ೭ | ,, ಆರ್. ಸಿ. ಬಸವಶ್ರೇಷ್ಠಿ ,, | ೫-೦-೦ |
| ೮ | ,, ಎಂ. ಎಸ್. ಹಿರೇಮಠ. ,, | ೫-೦-೦ |
| ೯ | ,, ಬಸಪ್ಪ ಬುಡ್ಡರ ,, | ೫-೦-೦ |
| ೧೦ | ,, ಗು. ವಿ. ಚಿತ್ತವಾಡಿಗಿ ,, | ೫-೦-೦ |
| ೧೧ | ,, ಎಂ. ಎಸ್. ಶಿವಪ್ಪ ಆ್ಯಂಡ ಬ್ರದರ್ಸ ಬೆಂಗಳೂರ ಸಿಟಿ | ೫-೦-೦ |
| ೧೨ | ,, ಜಗದ್ಗುರು ಅನ್ನದಾನ ಸ್ವಾಮಿಗಳು ಸಂಸ್ಥಾನ ಮಠ ಮುಂಡರಗಿ | ೧೫-೦-೦ |
| ೧೩ | ,, ಬಸಪ್ಪ ವೀರಪ್ಪ ಬಳ್ಳಾರಿ ಗದಗ | ೧೦-೦-೦ |
| ೧೪ | ,, ಚನ್ನಬಸವ ಪಟ್ಟದ್ದೇವರು ಭಾಲ್ಕಿ | ೫-೦-೦ |
| ೧೫ | ,, ಸಿದ್ಧಲಿಂಗಪ್ಪ ನಾಗಪ್ಪ ಮಹಾಂತಣ್ಣವರ ಹೊನೂರ | ೧೦-೦-೦ |
| ೧೬ | ,, ಶ್ರೀಮನ್ನಿರಂಜನ ಅನ್ನದಾನ ಸ್ವಾಮಿಗಳು ಆನಂದಾಶ್ರಮ ಗದಗ | ೧೦-೦-೦ |
| ೧೭ | ,, ಜೆ. ವ್ಹಿ. ವಾಗಲೆ ಬಿ. ಇ. ಇಂಜನೀಯರ (ಡಿ. ಎಲ್. ಬಿ.) ವಿಜಾಪುರ | ೫-೦-೦ |

# ಹಡಪದಪ್ಪಣ್ಣಗಳ ಸ್ವರವಚನ



ನಾ ನೀನೆನಬೇಡ । ಮೋನ ಮುಗ್ಧರೆನಬೇಡ । ಮಾನವರ ಬೇಡ ಬೇಡ । ಮನುಜರೊಳು ನುಡಿಯಬೇಡ । ಅದು ನಾನು ತಾನಾದುದೆ ಮಹಾ ಘನವು ॥ ಪಲ್ಲ ॥

ಕಂಡೆನೆಂದು ನುಡಿಯಬೇಡ ಕಾಣೆನೆಂದು ನೋಡಬೇಡ । ಉಂಡೆನೆಂದು ಉಲಿಯಬೇಡ ಉಣ್ಣೆನೆಂದು ಸುಮ್ಮನಿರಬೇಡ । ಅಂಡಾಯುವ ಮಾಡಿ ಛಂಡುಮಾಡಿಕೊಳಬೇಡ । ಚಂಡ ವಿಕ್ರಮ ಬಸವಪ್ರಿಯ ಕೂಡಲ ಚನ್ನಬಸವನ ಶರಣ ॥ ೧ ॥

ಕತ್ತಲೆ ಬೆಳಗೆನ್ನಬೇಡ ಸತ್ಯ ತಾನೆನ್ನಬೇಡ । ಚಿತ್ತವ ಸುಯಿಧಾನವ ಮಾಡಿ । ಮೊತ್ತದ ಹೆಣ್ಣು ಹೊನ್ನು ಮಣ್ಣಗೆದ್ದರೆ । ನಿರ್ಮುಕ್ತ ಬಸವಪ್ರಿಯ ಕೂಡಲ ಚನ್ನಬಸವನೊಳು ॥ ೨ ॥

ವಂದನೆಗೆ ನಿಲ್ಲಬೇಡ ನಿಂದೆಗಂಜಿ ಓಡಬೇಡ । ಹಿಂದುಮುಂದು ಹಾರಬೇಡ ಸಂದೇಹಗೊಳಬೇಡ । ದ್ವಂದ್ವ ಬುದ್ಧಿಯ ಕಳೆದುಳಿದು ನಿಂದರೆ । ನಿರ್ಬಂಧ ಬಸವಪ್ರಿಯ ಕೂಡಲ ಚನ್ನಬಸವನೊಳು ॥ ೩ ॥

ಕಾಡಬೇಡ ಕಂಡವರ ಬೇಡಬೇಡ ನರರುಗಳ । ಆಡಬೇಡ ಅನೃತವ ನೋಡಬೇಡ । ಪರಸ್ತ್ರೀಯರ ಗಾಢ ಗಂಭೀರಲಿಂಗ । ಗೂಡಾದ ಬಸವಪ್ರಿಯ ಕೂಲ ಚನ್ನಬಸವಣ್ಣನೊಳು ॥ ೪ ॥

ಕಟ್ಟಬೇಕು ಕರಣವ ಮೆಟ್ಟಬೇಕು ಮದವ । ಸುಟ್ಟಿರುಹಬೇಕು ಸಪ್ತ ವ್ಯಸನಗಳ । ತೊಟ್ಟಿಲ ಮುರಿದು ಕಣ್ಣಿಯ ಹರಿದು ಆ । ಬಟ್ಟಬಯಲ ಬೆರೆದರೆ ಬಸವಪ್ರಿಯ ಕೂಡಲಚನ್ನಬಸವಣ್ಣ ತಾನೆ ॥ ೫ ॥

ಸಂಜೆ ಮುಂಜಾನೆನ್ನಬೇಡ ಅಂಜಬೇಡ ಅಳುಕಬೇಡ । ಉಂಬರೆ ಬಲಿಗಂಜಿ ಎನಬೇಡ । ಇಂದಿಗೆ ನಾಳಿಗೆಂದು ಸಂದೇಹಗೊಳಬೇಡ । ಒಂದಾದ ಲಿಂಗೈಕ್ಯ ಬಸವ ಪ್ರಿಯ ಕೂಡಲ ಚನ್ನಬಸವನೊಳು ॥ ೬ ॥

ಕಟ್ಟಬೇಡ ಹಣ ಹೊನ್ನ ಮೆಟ್ಟಬೇಡ ಭೂಮಿಯನು । ದಿಟ್ಟಿಸಿ ನೋಡಬೇಡ ಹೆಣ್ಣೆಂಬುದ । ಬಿಟ್ಟು ಇವ ಮೂರು ತೊಟ್ಟಕೊಯಿದರೆ । ನೆಟ್ಟನೆ ಮುಂದೆ ನಿಲ್ವ ಬಸವ ಪ್ರಿಯ ಕೂಡಲಚನ್ನಬಸವ ತಾನೆ ॥ ೭ ॥

ಆಡಿ ಓಡಲಿಬೇಡ ಕೂಡಿ ಅಗಲಬೇಡ । ನೀಡಿ ಮಾಡಿದೆನೆಂದು ಹಮ್ಮು ನುಡಿಯಬೇಡ । ಗಾಡಿ ಮೋಡಿಯ ಬಿಟ್ಟು ಗನ್ನಗತಕ ಹದಿರು ಚದುರ । ನೋಡದಿದ್ದರೆ ಬಸವಪ್ರಿಯ ಕೂಡಲ ಚನ್ನಬಸವ ತಾನೆ ॥ ೮ ॥

ಅಶನ ವ್ಯಸನವನು ನಿಲಿಸಿ । ಹಸಿವು ತೃಷೆ ಹುಸಿಕಳವನೆ ಬಿಟ್ಟು । ಎಸೆವ ಅಜ್ಞಾನದ ಮುಸುಕನುಗಿದರೆ । ಬಸವಪ್ರಿಯ ಕೂಡಲಚನ್ನಬಸವಣ್ಣ ತಾನೆ ॥ ೯ ॥

ಪಂಚೀಕೃತಿಗಳ ಸಂಚವ ನಿಲಿಸಿ । ಪಂಚವಿಂಶತಿ ತತ್ವವನರಿದು । ಪಂಚೇಂದ್ರಿಯಂಗಳ ಸಂಚಕೆ ಹರಿಯದೆ । ನಿರ್ವಂಚಕನಾಗಿ ನಿಂದರೆ । ಬಸವಪ್ರಿಯ ಕೂಡಲಚನ್ನಬಸವಣ್ಣನ ಶರಣ ॥ ೧೦ ॥

ಷಡಾಧಾರದ ಚಕ್ರದ ಗಡಣೆಯನರಿದು । ಷಡಕ್ಷರವನೇಕಾಕ್ಷರವ ಮಾಡಿ । ಒಡನಿಹ ಲಿಂಗ ಒಂದೆಂಬುದನರಿದರೆ । ದೃಢ ಭಕ್ತರೊಳಧಿಕ ಬಸವಪ್ರಿಯ ಕೂಡಲ ಚನ್ನಬಸವಣ್ಣನ ಶರಣ ॥ ೧೧ ॥

ಆಶೆ ರೋಷವೆಂಬ ದ್ವೇಷವ ಬಿಟ್ಟು । ದೋಷ ದುರಿತವೆಂಬ ಕ್ಲೇಶವ ಹರಿದು । ಸಾಸಿರ ಮುಖದೊಳು ಸೂಸುವ ಮನವ ನಿಲಿಸಿ । ನಿರಾಶಕನಾಗಿ ನಿಂದರೆ ಬಸವಪ್ರಿಯ ಕೂಡಲ ಚನ್ನಬಸವಣ್ಣನ ಶರಣ ॥ ೧೨ ॥

ಕರಿದೈದು ಬಿಳಿದೈದು ಭಾಸುರವೈದು । ಈ ಹದಿನೈದು ಬಗೆಯ ಕರಣವ ಸುಟ್ಟು । ಸುರತದ ಸುಗ್ಗಿ ಕಾಲ ಕಾಮಾದಿಗಳಿರವ ಗೆದ್ದರೆ । ಬಸವಪ್ರಿಯ ಕೂಡಲಚನ್ನಬಸವನ ಶರಣ ॥ ೧೩ ॥

ಆಟಕೋಟಲೆ ಎಂಬ ರಾಟಳ ಮುರಿದು । ನೋಟನುಡಿಗಳೆಂಬ ಸೂತ್ರವ ಹರಿದು । ಸಪ್ತ ವ್ಯಸನ ಮದವೆಂಟ ನೋಟ ಬೇಟದೊಳಾಲಿಂಗದೊಳು ಬೆರೆದರೆ । ಬಸವಪ್ರಿಯ ಕೂಡಲಚನ್ನಬಸವ ತಾನೆ ॥ ೧೪ ॥

ಅಂಗ ಗುಣಗಳನೆಲ್ಲವ ಅನಲಂಗಿಕ್ಕಿ । ಲಿಂಗ ಗುಣವನೆ ಗಟ್ಟಿಮಾಡಿ ಕಂಗಳು ಲಿಂಗ ಕರಸ್ಥಲ ಜಂಗಮವೆಂಬ । ಇಂಗಿತವನರಿದರೆ ಬಸವಪ್ರಿಯ ಕೂಡಲಚನ್ನಬಸವಣ್ಣನ ಶರಣ ॥ ೧೫ ॥

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ । ಸತ್ಯಶರಣ ಐಕ್ಯರೆಂಬ ಇತ್ತತ್ತ । ಗೊತ್ತು ಬಿಟ್ಟು ನಿರ್ವಯಲ ಲಿಂಗದೊಳು ನಿ । ಮುರ್ಕ್ತನಾಗಿ ನಿಂದರೆ ಬಸವಪ್ರಿಯ ಕೂಡಲಚನ್ನಬಸವಣ್ಣನ ಶರಣ ॥ ೧೬ ॥

ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ । ಪ್ರಸಾದ ಲಿಂಗ ಇರವರಿದು । ಮಹಾಲಿಂಗವೊಳು ಬೆರೆದುರೆ ಹರನ ಕೂಡಿದರೆ । ಬಸವಪ್ರಿಯ ಕೂಡಲ ಚನ್ನಬಸವಣ್ಣನ ಶರಣ ॥ ೧೭ ॥

ಈಡ ಪಿಂಗಳ ಸುಷುಮ್ನ ನಾಳದೆ । ಗಾಢಾಗಮ್ಯಗಳನರಿದು । ನೋಡೆ ಬ್ರಹ್ಮರಂಧ್ರವ ತಟಹಾಯಿದು । ಕೂಡೆ ಪಶ್ಚಿಮದೊಳು ಬೆರೆದರೆ ಬಸವ ಪ್ರಿಯ ಕೂಡಲ ಚನ್ನಬಸವ ತಾನೆ ॥ ೧೮ ॥

ಆಗುತಿವೆ ಉದಯ ಮಧ್ಯಾಹ್ನ ಅಸ್ತಮಯ । ಹೋಗುತಿವೆ ದಿನ ವಾರ ಮಾಸ ಸಂವತ್ಸರ । ಸಾಗುತಿವೆ ಆಯುಷ್ಯ ಭವಿಷ್ಯ ಇವರೊಳು । ಬೇಗ ತಿಳಿದು ನೀಗಿ ನಿಷ್ಪತ್ತಿಯಾದರೆ । ಬಸವಪ್ರಿಯ ಕೂಡಲ ಚನ್ನಬಸ ವಣ್ಣನ ಶರಣ ॥ ೧೯ ॥

ಒಳಗು ಹೊರಗೆಂಬೆರಡು ಬಟ್ಟೆಗಳೊಳು । ಸುಳಿದು ಸೂಸುವ ಬೆಳ ಗನೆ ಕಂಡು । ತಳುವಿಲ್ಲದೆ ತಾಮಸವನೆ ನೂಕಿ । ಆ ಬೆಳಗಿನೊಳು ಬೆರೆ ದರೆ ಬಸವಪ್ರಿಯ ಕೂಡಲಚನ್ನಬಸವ ತಾನೆ ॥ ೨೦ ॥

ಇಂದು ನಾಳೆ ಎಂಬ ಸಂದೇಹವ ಬಿಟ್ಟು । ನಿಂದು ನಿಜಾನಂದದಿಂದ ನೋಡಿ । ಹಿಂದುಮುಂದು ಕುಂದುಹೆಚ್ಚು । ದಂದುಗ ಧಾವತಿಯ ಕೊಂದು ನಿಂದರೆ । ಬಸವಪ್ರಿಯ ಕೂಡಲಚನ್ನ ಬಸವನ ಶರಣ ॥ ೨೧ ॥

ಕರಕನಿಷ್ಠದ ಕಬ್ಬಿನಕೆ ವರಪುರುಷ ಮುಟ್ಟಲು ಚಿನ್ನವಾಗದೆ । ಗುರುಕಾರುಣ್ಯವ ಪಡೆದವರು ಎಮ್ಮ ಶರಣರೊಳು ಬೆರೆದರೆ । ಬಸವಪ್ರಿಯ ಕೂಡಲ ಚನ್ನಬಸವ ತಾನೆ ॥ ೨೨ ॥

ಅವಿರಳ ಲಿಂಗವ ಕಂಡೆಹೆನೆಂದು ಅವರಿವರಿನ್ನೇನ ಕೇಳುವಿರಿ । ಭವರಹಿತ ಗುರುಲಿಂಗ ಜಂಗಮದೊಳು । ತವೆ ಬೆರೆಯೆ ತಲ್ಲಿಯ್ಯವಾಗಿ ಪ್ಪಲ್ಲಿಯೆ । ಬಸವಪ್ರಿಯ ಕೂಡಲ ಚನ್ನಬಸವನ ಶರಣ ॥ ೨೩ ॥

ಕೀಡೆ ತುಂಬಿಯ ಬಿಡದೆ ನೆನೆಯೆ । ನೋಡಲಾಕ್ಷಣ ತುಂಬಿ ಆಗು ತಿದೆ । ಈ ರೂಢಿಯೊಳಗೆಮ್ಮ ಶರಣರ ಪಾದವೆ । ಗೂಡಾಗಿ ನಿಂದರೆ ಬಸ ವಪ್ರಿಯ ಕೂಡಲಚನ್ನಬಸವ ತಾನೆ ॥ ೨೪ ॥

ಹಾಲ ಸಾಗರದೊಳೋಲಾಡುತಿರ್ದ । ಚಿಲಿಮೆಯ ನೀರಿಗೆ ಹರಿಯಬೇಡ । ಮೇಲುಗಿರಿ ಶಿಖರದ ಪಶ್ಚಿಮದಲಿ ಲೋಲಾಡುತಿರೆ । ಬಸವಪ್ರಿಯ ಕೂಡಲ ಚನ್ನಬಸವಣ್ಣ ತಾನೆ ॥ ೨೫ ॥

ಮೂರು ಮಣಿಗೆ ಒಂಬತ್ತು ದ್ವಾರ । ಬೇರೆ ಆರು ಸ್ಥಾನಗಳಿರುತಿಪ್ಪವು । ಈರಾರು ಇಪ್ಪತ್ತೈದ ಮೀರಿ ತೋರುವ ಘನವೊಂದು । ಬಸವಪ್ರಿಯ ಕೂಡಲಚನ್ನಬಸವಣ್ಣನರಿದರೆ ॥ ೨೬ ॥

ಈಯನುವನರಿದು ಲಿಂಗವ ನೋಡಿ ಕೂಡೆಹನೆಂದರೆ । ಮನವನೆಲ್ಲವನಿರಿಸಿ ಇರಬೇಕು । ಈ ಘನಪರಾಕ್ರಮವುಳ್ಳ ಭಕ್ತರ ತನುವೆ ಲಿಂಗ । ಬಸವಪ್ರಿಯ ಕೂಡಲ ಚನ್ನಬಸವಣ್ಣನೊಳು ॥ ೨೭ ॥

ಅಂಗ ಲಿಂಗ ಸಂಬಂಧವಾದ ಬಳಿಕ ಮನ । ಹಿಂಗದಿಪ್ಪದು ತನುವನು ಬಿಟ್ಟು । ಸಂಗ ಸುಖ ಶರಣರ ಗೋಷ್ಠಿಯೊಳು ಇಪ್ಪಾತ । ಮಂಗಳಾತ್ಮಕ ಬಸವಪ್ರಿಯ ಕೂಡಲ ಚನ್ನಬಸವಣ್ಣನ ಶರಣ ॥ ೨೮ ॥

ಜಪ ತಪ ನೇಮ ನಿತ್ಯದಿಂದ । ನಿಶ್ಚಿಂತರೂಪನ ಕಂಡಿಹೆನೆಂಬಿರಿ । ಆ ಪರಾತ್ಪರದೊಳಗಾಡುವ ಶರಣರ ಪಾದನಖದೊಳು ಬೆರೆಯೆ । ಬಸವಪ್ರಿಯ ಕೂಡಲ ಚನ್ನಬಸವನಹನು ॥ ೨೯ ॥

---

## ಹಡಪದಪ್ಪಣ್ಣಗಳ ಮಂತ್ರಗೋಪ್ಯ.

ಆತ್ಮ ಕೇಳಾನಂದ ಜ್ಯೋತಿರ್ಲಿಂಗದೊಳು । ನಿತ್ಯಮುಕ್ತನಾದ ನಿಜ ಶರಣನನುವ ॥ ಪಲ್ಲ ॥

ನಾದ ಬ್ರಹ್ಮದಿಂದ ನಮಃ ಶಿ । ವಾಯುವೆಂಬ ಪಂಚಾಕ್ಷರಿ ಉದಯ । ಪಂಚಾಕ್ಷರಿಗೆ ಪರಶಕ್ತಿ ರೂಪು । ಶಕ್ತಿರೂಪಾಗಿ ಚಿತ್ತ ಸಂಚಲಿಸಲಿಕೆ । ಮತ್ತೆ ಆಯುವಾಯಿತ್ತು ಸಚರಾಚರವೆಲ್ಲವು ॥ ೧ ॥

ಆದಿ ಅನಾದಿ ಅಂತ್ಯವ ನುಡಿವರು । ಇದರ ಭೇದಾದಿಭೇದವನರಿವರಾರು । ಆದಿಯೆಂದರೆ ದೇಹ ಅನಾದಿಯೆಂದರೆ ನಿರೂಪು । ಅಂತ್ಯವೆಂದರೆ ಪ್ರಾಣವೆನುತಿರ್ದೆನು ॥ ೨ ॥

ಅಂಗ ಭವಿಯಾಗಿ ಬಂದ ಬದ್ಧ ಮಲಕಾಯಕ್ಕೆ । ಲಿಂಗಬರಲು ನಿತ್ಯವೆಂದು ಕಂಡೆ । ಜಂಗಮದ ಶೇಷ ಪಾದಾಂಬುವೆ ಚೈತನ್ಯ । ಹಿಂಗದೆ ಲಿಂಗೈಕ್ಯನಾದೆ ನಾನು ॥ ೩ ॥

ಕಡೆನಡುವಿಲ್ಲದ ಘನವು । ಹಿಡಿಹಿನಲಿ ಬಂದಿರಲು । ಮೃಡ ತನ್ನ ಲೀಲೆಗೆ ಮೂರಾದನು । ಬಿಡದೆ ನೋಡುತ್ತ ನೋಡಲಾಗಿ । ಎಡೆವಿಡದೆ ಒಡನಿಹ ಘನವೆಂದರಿದೆನು ॥ ೪ ॥

ದ್ವಿದಳ ವಲಯದ ಕೆಳಗೆ ಷೋಡಶದಳ । ನಡುವಂತ್ಯದಲ್ಲಿ ನಾದ ಬ್ರಹ್ಮ । ಆ ನಾದಬ್ರಹ್ಮ ತಾನೋಂಕಾರ ಒಂದಾಗೆ । ಅನಾದಿ ಅಂಗವ ಕಂಡು ಸುಖಿಯಾದೆನು ॥ ೫ ॥

ಆಧಾರಒಡಿಯಾಣ ಜಾಲೇಂದ್ರದಿಂಮೇಲೆ । ಸ್ವಾಧಿಷ್ಠದನುವ ಜೇವಡೆದನು । ವೇಧಿಸಿ ಮಣಿಪೂರಕಗ್ನಿಸರವನೆ ಹೂಡಿ । ವೈದ್ಯರುಗಳನೆಲ್ಲ ವೇಧಿಸುತಿದ್ದೆನು ॥ ೬ ॥

ಆನಂದದಿಂದನಾಹತದ ಮೇಲಣ ಕಾಲ । ಜ್ಞಾನಾಗ್ನಿಯಿಂದದಂ ಕಡಿದು ಬಿಸುಟು । ಮೇಲೆ ವಿಶುದ್ಧಿಯ ಸ್ಥಾನದಲ್ಲಿಯೆ ನಿಂದು । ಭಾನುವಿನ ಬೆಳಗಿನೊಳಗೋಲಾಡಿದೆ ॥ ೭ ॥

ಶತಕೋಟಿ ಸೋಮ ಸೂರ್ಯ ಬೆಳಗಿನೊಳಗೆ । ಪಥವಿಡಿದು ಬರಲು ಆಜ್ಞೆಯ ಕಂಡೆನು । ಸತಿಯಿಲ್ಲ ಪತಿಯಿಲ್ಲವೆಂದೆನುತ ನಿಂದಿರಲು । ಬೇರೊಂದು ಪಥವಿರಲು ಕಂಡು ನಾ ಬೆರಗಾದೆನು ॥ ೮ ॥

ಚಂದ್ರಕಾಂತದ ಶಿಲೆಯಂತಿಪ್ಪ ದೇಹದೊಳು ಇ । ನ್ನೊಂದು ಕಾಳಿಕೆಯು ಕಳೆಯಲುಂಟೆ । ಸಂದು ಸಂಶಯವಳಿದು । ಹಿಂದು ಮುಂದನೆ ಹರಿದು ನಿಂದ ನಿಜೈಕ್ಯಂಗೆ ಒಂದುವಿಲ್ಲ ॥ ೯ ॥

ಆಧಾರವನೊತ್ತಿ ಊರ್ಧ್ವ ಮುಖವನೆ ಮಾಡಿ । ಮೇದಿನಿಯುಪ್ಪು ಅಗ್ನಿದಗ್ಧವಮಾಡಿ । ಶೋಧಿಸಿ ಕರ್ಪೂರದಂತಿಪ್ಪ ದೇಹದೊಳು । ವೇಧಿಸಿತು ಗುರುಕರುಣವೆಂಬ ಜ್ಯೋತಿ ॥ ೧೦ ॥

ಸ್ಥೂಲ ತನುವಿಲಿ ಇಪ್ಪ ನವ ಬಾಗಿಲುಗಳು । ಲೀಲೆಯಿಂ ಸೂಕ್ಷ್ಮತನುವಿನಲಿ ಪ್ರಾಣವು । ಮೇಲೆ ಕಾರಣ ತನುವಿನಲ್ಲಿ । ತೃಪ್ತಿಯು ಬೆಳಗು ಹೇಳು ವರಿನ್ನಾರಿಗಳವಲ್ಲವು ॥ ೧೧ ॥

ನವ ಬಾಗಿಲಂಗಳಿಗೆ ನವಲಿಂಗ ಕಾವಲು । ಕವಿವ ತಮಂಧಕ್ಕೆ ದಿವಾಕರನು । ಅವರೊಳಗಿಹ ಷಡುಸ್ಥಲ ಬ್ರಹ್ಮವ ನೋಡೆ । ಅವಿರಳವಾಗಿ ತೋರಿದ ಘನವು ॥ ೧೩ ॥

ತ್ರಿವಿಧ ಅಂಗತ್ರಯಕೆ ತ್ರಿವಿಧ ಲಿಂಗತ್ರಯ । ತ್ರಿವಿಧ ಸಂಗತ್ರಯ ಏಕವಾಗೆ । ತ್ರಿವಿಧವನರಿದು ತ್ರಿವಿಧವರ್ಪಿತಮಾಡೆ । ಅವನಿಯೊಳಾತಂಗೆ ಎಣೆಇಲ್ಲವು ॥ ೧೪ ॥

ನಾಹಮ್ಮ ಕೋಹಮ್ಮ ಸೋಹಮ್ಮ । ಎಂಬ ಭ್ರಮೆಯಳಿದು । ತಾನು ತಾನಾದ ನಿಜ ಶರಣನು । ನಾನು ನೀನೆಂಬ ಅನುಸಂಧಾನವನು ಮೀರಿ ತಾನಾದ । ತ್ರಿಕೂಟದಲ್ಲಿಯೆ ಬೆರೆದನು ॥ ೧೫ ॥

ನಡೆಗೆಟ್ಟು ನುಡಿಗೆಟ್ಟು ಒಡಲು ಹಾಳಾಯಿತು । ಅಡಿ ಮುಡಿ ಮಧ್ಯವದಕಿಲ್ಲವು । ಕಡೆಗಣ್ಣು ಕೆಂಪಾಗಿ ನಡುಗಣ್ಣು ಬಿಳಿದಾಗಿ । ಒಡನಿಪ್ಪ ಕಾಳಿಕೆ ಬೆಂದು ಕಣ್ಗೆಂಡಿಯಾಯಿತು ॥ ೧೬ ॥

ಕಾಯಕರಣಾದಿಗಳ ಹೇಳಿಹೆನೆಂದರೆ । ಭಾವಿಸಲು ಕೋಟಾನುಕೋಟಿಯುಂಟು । ಆವುದರೊಳಿಲ್ಲದ ಪರಬ್ರಹ್ಮವನೆ ತಂದು । ದೇವ ತಾನಾಗಿ ನುಡಿವುತಿರ್ದನು ॥ ೧೭ ॥

ಶರಣರ ಪರಿಯೆಂತಿಹುದೆಂದರೆ । ಕರಿಗಳನೆಲ್ಲ ಒಂದು ಹುಲಿ ನುಂಗಿತು । ತರುಗಂಹರಂಗಳನು ರವಿಕಿರಣ ನುಂಗಿತು । ತರುಮರಾದಿಯನೆಲ್ಲ ಉರಿ ನುಂಗಿತು. ॥ ೧೮ ॥

ಬಣ್ಣಗಳನುಟ್ಟು ಬಹ ಹೆಣ್ಣುಗಳನೆ ಕಂಡು । ಕಣ್ಣುಗೆಡಿಸಿ ಕಾಡಿಕೊಲುತಿರ್ದನು । ಇವು ನಮ್ಮ ಸೊಮ್ಮು ಎಂದು । ಅವ ಧ್ಯಾನಿಸಿಕೊಂಡಿಪ್ಪ ಅಣ್ಣಗಳೆಲ್ಲರು ಅಳುತಿರ್ದರು ॥ ೧೯ ॥

ಪೂರ್ವ ಪಶ್ಚಿಮ ದಕ್ಷಿಣ ಉತ್ತರಭಾಗದಲಿ । ಮೇರುವಿನ ತುದಿಯಲ್ಲಿ । ಘನಕೆಘನ ಪಾರವೇಧಿಸಿ ನೋಡಿ ಪಶ್ಚಿಮ ನಾಳದೊಳು । ಆರೈದು ನೋಡೆ ಅಮೃತವಿಪ್ಪುದು ॥ ೧೯ ॥

ಅಮೃತವಾರೋಗಣೆಯ ಯುವತಿಯರ ಸಹಿತುಂಡು । ಭವವ ದಾಂಟಿ ಭಾಗ್ಯನಾಗಿ ನಿಂದು । ಭುವನಕ್ಕೆ ತಾನಾಗಿ ತಾನಿಲ್ಲದವನಾಗಿ । ಶಿವನೊಳಗೆ ಬೆರೆದು ಬೇರಿಲ್ಲ ಶರಣ ॥ ೨೦ ॥

ಒಂದಾದುದನರಿದರೆ ಎರಡೆಂಬುದ ಬಲ್ಲ । ಎರಡರಿಂದ ಮುಂದೆ ಮೂರಪ್ಪುದು । ಮೂರರಿಂದ ನಾಲ್ಕರ ಭೇದವನು । ಮೂರೆರಡನಿಳುಹಿ ನಿಂದಾತ ಬಲ್ಲ ॥ ೨೧ ॥

ನಾನೆಂಬುದೆ ಆರು ನೀನೆಂಬುದೆ ಏಳು । ತಾನು ಶುದ್ಧಾತ್ಮನೆಂಬುದೆ ಎಂಟವು । ಆ ನಾದ ಸಂಭ್ರಮದ ಶೃಂಗಾರ ಒಂಭತ್ತು । ಜ್ಞಾನ ಪರತತ್ವವೆಂಬುದೆ ಹತ್ತುವು ॥ ೨೨ ॥

ಹನ್ನೊಂದು ಎಂದರೆ ತನ್ನನೆ ನುಂಗಿತ್ತು । ಉನ್ಮನಿಯ ಸ್ಥಾನದಲಿ ನಿನ್ನ ಬೆಳಗು । ಕನ್ನಡಿಯೊಳಗಣ ಪ್ರತಿಬಿಂಬದಂತೆ। ಭಿನ್ನವಿಲ್ಲದೆ ಸೂಕ್ಷ್ಮವ ಬೆರೆಯಿತ್ತು ॥ ಬಿಂಬದಿಂದಾ ಪ್ಪಟ್ಟು ಅದು ಜನರಿಂದ ಸೇವಿಸಿ

ನಿತ್ಯವೆಶೀಚರಮೂಲತ್ವವೆಂಬುದು ಹುಸಿಯು । ಎತ್ತ ನೋಡಿದರೆ ತಾನಲ್ಲದನ್ಯವಿಲ್ಲ । ವ್ಯರ್ಥವಪ್ಪ ದೇಹ ನಿತ್ಯವಾದುದ ಕಂಡು । ಕರ್ತೃ ತಾನಾಗಿ ಬೆರಗಾದನಣ್ಣ ॥ ೨೪ ॥

ನೀರು ನೀರನೆ ಕೂಡಿ ಮೇರೆದಪ್ಪಿದವೊಲು । ನೀರು ಬಲಿದು ಆಲಿಯಾದ ತೆರದಿ । ಆಲಿ ತಾ ಕರಗಿ ನೀರಾದಂತೆ ಲಿಂಗೈಕ್ಯ । ಓರಂತೆ ಒಂದಾದ ನಿಜ ಶರಣನು ॥ ೨೫ ॥

ಆರೈದು ನೋಡೆ ಸುರಾಳ ನಿರಾಳದಲಿ । ಭೇರಿನಾದದ ರಭಸ ನಿಲಬಾರದು । ಊರಡಗಿ ಉಲುಹಡಗಿ ಭೇರಿನಾದವು ನಿಂದು । ಭೂರಿದೈವಂಗಳಿಗೆ ಪತಿಯಾದನು ॥ ೨೬ ॥

ಬಯಲ ಲಿಂಗವ ಒಂದು ನೆವಕೆ ರೂಪನೆ ತೊಟ್ಟು । ಭುವನದೊಳು ತನ್ನ ಲೀಲೆಯನೆ ನಟಿಸಿ । ಭವ ರಹಿತ ಬಸವಪ್ರಿಯ ಕೂಡಲಚನ್ನಬಸವನೊಳು । ಅವಿರತವಾಗಿ ತಾ ಬೆರೆದ ಶರಣ ॥ ೨೭ ॥

# ಪಾದೋದಕ.

(ಲೇಖಕ— ರಾ। ಬ। ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.)

ಶಿವಾನುಭವ ಪತ್ರಿಕೆಯ ಹೋದ ತಿಂಗಳಿನ ಸಂಚಿಕೆಯಲ್ಲಿ ವೀರಶೈವ ಸಮಾಜದಲ್ಲಿಯ ಒಬ್ಬ [illegible] ಸ್ವಾಮಿಗಳು ಪಾದೋದಕವನ್ನು ಕುರಿತು ಆಕ್ಷೇಪಿಸಿದ್ದ[illegible] ಲಿಂಗಪ್ಪ ಮಾಮನಿ ಇವರು ಒಂದು ಲೇಖ ಮಾಡಿ[illegible] ನಾನು ನೀನಂ[illegible] ವಾಚಕರ ಸ್ಮರಣೆಯಲ್ಲಿರಬಹುದ[illegible] ಬರೆದನು ॥ ೧೪ ॥ [illegible] ವೇಳೆ ಹಿಂದಿನ ಕಾಲದಲ್ಲಿ ಎತ್ತಲ್ಪಟ್ಟಿದ್ದರೆ ಸಮಾಜದಲ್ಲಿ ಕ್ಷೋಭೆವು ಉತ್ಪನ್ನವಾಗದೆ ಇರುತ್ತಿದ್ದಿಲ್ಲ. ಅದರಲ್ಲಿ ವೀರಶೈವ ಮಠಾಧೀಶರಂತೂ ಇಂಥ ಸಂಗತಿಯನ್ನು ತೀವ್ರವಾಗಿ ನಿಷೇಧಿಸದೆ ಇರುತ್ತಿದ್ದಿಲ್ಲ. ವೀರಶೈವರಲ್ಲಿ ಪಾದೋದಕದ ಮಹತ್ವವು ಇಷ್ಟು ಮಿಗಿಲಾದದ್ದದೆ. ಹೀಗೆ ಪಾದೋದಕ ದೂಷಣೆಮಾಡುವದು ಮಹಾಪಾಪವೆಂದು ಶಿವಶರಣರ ಉಕ್ತಿಗಳಿವೆ. ಆದರೆ ಈಚೆಗೆ ವಚನಶಾಸ್ತ್ರದ ಅಭ್ಯಾಸವು ನಿಂತುಹೋಗಿರುತ್ತದೆ. ಷಟ್‌ಸ್ಥಲ ಮತ್ತು ಅಷ್ಟಾವರಣ ಇವುಗಳ ಮರ್ಮವನ್ನು ತಿಳಿದವರು ಅತ್ಯಂತ ವಿರಳರಾಗಿದ್ದಾರೆ. ಆದ್ದರಿಂದ ವೀರಶೈವರ ವಿಧಿಗಳನ್ನು ದೂಷಿಸುವವರು ಈಚೆಗೆ ಅನೇಕರು ಉತ್ಪನ್ನರಾಗಹತ್ತಿದ್ದಾರೆ. ಅವರಲ್ಲಿ ಮಠಾಧೀಶ್ವರರು ಪ್ರಮುಖ ಭಾಗವಹಿಸುತ್ತಿರುವದು ಸಮಾಜದ ದುರ್ದೈವವಾಗಿದೆ.

ವಚನಶಾಸ್ತ್ರದ ಆಳವಾದ ಅಭ್ಯಾಸವು ವೀರಶೈವ ಸಮಾಜದಲ್ಲಿ ಈಗಲೂ ಇರುವದಿಲ್ಲ. ಇದರಿಂದ ವೀರಶೈವ ಆಚರಣೆಗಳಲ್ಲಿ ಅಡಕವಾಗಿರುವ ಗೂಢತತ್ವಗಳ ಅರಿವು ಇದ್ದವರು ಬಹು ಸ್ವಲ್ಪ ಜನರು. ಹಳೇ ಸಾಂಪ್ರದಾಯದ ಮಠಾಧೀಶ್ವರರೂ ಭಕ್ತರೂ ಈ ಆಚರಣೆಗಳನ್ನು ಅಂಧತೆಯಿಂದ ಆಚರಿಸುತ್ತಬಂದಿದ್ದಾರೆ. ಆದರೆ ಈಬಗ್ಗೆ ಚಿಕಿತ್ಸಾಬುದ್ಧಿಯುಳ್ಳವರು ಸಮಾಜದಲ್ಲಿ ಉಂಟಾಗುತ್ತಲಿದ್ದಾರೆ. ಇದು ಸಮಾಜದ ಪ್ರಗತಿಯೆಂತಲೇ ನಾವು ಭಾವಿಸಬೇಕು. ಆದರೆ ಈ ಆಕ್ಷೇಪಕರು ಇಂಥ ಆಚರಣೆಗಳ ಉದ್ದೇಶಗಳೇನೆಂಬದನ್ನು ಮೊದಲು ತಿಳಿಯಲು ಪ್ರಯತ್ನಿಸಬೇಕು. ಅವರು ಏನನ್ನೂ ತಿಳಿದುಕೊಳ್ಳದೆ ಅವುಗಳನ್ನು ದೂರುವದು

ಯುಕ್ತವಾದುದಲ್ಲ. ಈ ವಿಷಯದ ಹೊಣೆಗಾರಿಕೆಯು ಮಠಾಧಿಕಾರಿಗಳ ಮತ್ತು ಸುಶಿಕ್ಷಿತರ ಮೇಲೆ ವಿಶೇಷವಾಗಿರುತ್ತದೆ.

ಪಾದೋದಕವೆಂದರೆ ಒಬ್ಬ ಪೂಜ್ಯ ಮನುಷ್ಯನ ಪಾದವನ್ನು ತೊಳೆದ ನೀರು ಎಂದು ಸಾಮಾನ್ಯವಾಗಿ ಹಿಂದೂ ಜನರಲ್ಲಿ ಭಾವಿಸಲ್ಪಟ್ಟಿರುತ್ತದೆ. ದೇವಾಲಯುಗಳಲ್ಲಿರುವ ದೇವರ ಮೇಲೆ ಹಾಕಿದ ನೀರು ಹೇಗೆ ತೀರ್ಥವೆಂದು ತಿಳಿದು ಅದು ಭಕ್ತಜನರಿಂದ ಗ್ರಹಿಸಲ್ಪಡುತ್ತದೆಯೋ ಅದರಂತೆಯೇ ಸ್ವಾಮಿಗಳ ಪಾದದಿಂದಾದ ತೀರ್ಥವು ಪೂಜ್ಯವಾದುದೆಂದು ಭಾವಿಸಲ್ಪಟ್ಟು ಅದು ಜನರಿಂದ ಸೇವಿಸಲ್ಪಡುತ್ತದೆ. ಹೂಲಿಯ ಹಿರೇಮಠದ ಶ್ರೀಚರಮೂರ್ತಿಗಳವರು ಪಾದೋದಕದ ಬಗ್ಗೆ ಇಂಥ ತಿಳುವಳಿಕೆಯನ್ನು ಮಾಡಿಕೊಂಡು ತಮ್ಮ ಪದಗಳನ್ನು ರಚಿಸಿದಂತೆ ತೋರುತ್ತದೆ. ಆದರೆ ವೀರಶೈವರಲ್ಲಿರುವ ಪಾದೋದಕದ ಅರ್ಥವನ್ನು ಅವರು ತಿಳಿದುಕೊಂಡಂತೆ ತೋರುವದಿಲ್ಲ. ಅದರಲ್ಲಿ ಒಂದು ವಿಶೇಷತರದ ಅರ್ಥವಿದೆ. ಅದರಂತೆಯೇ ಅಷ್ಟಾವರಣಗಳೆಲ್ಲವುಗಳಿಗೂ ವಿಶೇಷಾರ್ಥಗಳಿವೆ. ಅವುಗಳನ್ನು ತಿಳಿಯದಹೊರ್ತು ಅಷ್ಟಾವರಣಗಳ ಆಚರಣೆಯು ವೀರಶೈವನಿಗೆ ಪ್ರಾಪ್ತವಾಗಲಾರದು.

ಅಷ್ಟಾವರಣಗಳ ಸಾಧನೆಯು ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲೆಲ್ಲ ನಡೆಯುತಕ್ಕದ್ದು. ಅವುಗಳ ವಿವರಣೆಯು ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ಈ ಗ್ರಂಥದ ಪುಟ ೭೮ ರಿಂದ ೮೩ ವರೆಗೆ ಇರುವ ವಚನಗಳಲ್ಲಿ ಬಂದಿರುತ್ತದೆ. ಅದರಲ್ಲಿಯ ವಚನಗಳನ್ನು ವಾಚಕರು ಅವಶ್ಯವಾಗಿ ಅವಲೋಕಿಸತಕ್ಕದ್ದು. ಆ ರೀತಿಯಾಗಿ ಅಷ್ಟಾವರಣಗಳನ್ನು ನಡಿಸಿದ್ದಾದರೆ ಭಕ್ತನಲ್ಲಿ ಷಡ್ ಲಿಂಗಗಳು ಪ್ರಜ್ವಲಿಸಹತ್ತುವವು. ಮತ್ತು ಅವನಲ್ಲಿ ಲಿಂಗದ ವಿಕಾಸವು ಉಂಟಾಗುವದು. ಮತ್ತು ಕಡೆಗೆ ಭಕ್ತನು ಲಿಂಗಾಂಗ ಸಾಮರಸ್ಯವನ್ನು ಹೊಂದುವನು. ಈ ರೀತಿಯಾಗಿ ವೀರಶೈವರ ಅಷ್ಟಾವರಣಗಳ ರಚನೆ ಇದೆ.

ಈ ಅಷ್ಟಾವರಣಗಳಿಗೆ ಮೂಲವಾದವುಗಳು ಗುರು ಲಿಂಗ ಜಂಗಮ ಇವುಗಳೇ ಇರುತ್ತವೆ. ಇವುಗಳ ಮರ್ಮವನ್ನು ಭಕ್ತನು ಮೊದಲು ತಿಳಿದುಕೊಳ್ಳಬೇಕು. ಇವುಗಳು ಕೇವಲ ಬಾಹ್ಯಸ್ಥಿತಿಯಲ್ಲಿ ನಮಗೆ ತೋರುವ ವ್ಯಕ್ತಿಗಳು ಅಥವಾ ಆಕೃತಿಗಳು ಇರುವದಿಲ್ಲ. ಅವುಗಳು ಕೇವಲ ಬಾಹ್ಯ

ಆವರಣಗಳು. ಆದರೆ ಈ ಬಾಹ್ಯ ಆವರಣಗಳೆಲ್ಲವು ಅಂತರಂಗಕ್ಕೆ ಸಂಬಂಧಪಡಲು ಅವುಗಳಿಗೆ ಅಂತರಷ್ಟಾವರಣಗಳೆನ್ನುವರು. ಗುರುವು ಸ್ಥೂಲಶರೀರಕ್ಕೆ, ಲಿಂಗವು ಸೂಕ್ಷ್ಮಶರೀರಕ್ಕೆ, ಮತ್ತು ಜಂಗಮವು ಕಾರಣಶರೀರಕ್ಕೆ, ಸಂಬಂಧಪಡುತ್ತವೆ. ಈ ಮೂರರ ಮೂಲಕ ಮನುಷ್ಯನಿಗಿರುವ ತ್ರಿವಿಧ ಶರೀರಗಳು ವಿಕಾಸ ಹೊಂದುತ್ತ ಹೋಗುತ್ತವೆ. ಈ ಪ್ರಕಾರ ಅವುಗಳಲ್ಲಿ ವಿಕಾಸವು ಉಂಟಾಗಲು ಅವು ಪರಸ್ಪರ ಸಾಮರಸ್ಯವನ್ನು ಹೊಂದುವ ಪರಿಸ್ಥಿತಿಯು ಒದಗುವದು. ಈ ಸ್ಥಿತಿಯೇ ಅತ್ಯಂತ ಶ್ರೇಷ್ಠವಾದದ್ದು. ಗುರು ಲಿಂಗ ಜಂಗಮ ಇವುಗಳ ಸಂಬಂಧ ಮತ್ತು ಭಕ್ತನಲ್ಲಿ ಅವುಗಳ ಸಾಮರಸ್ಯ ಇವುಗಳನ್ನು ತೋರಿಸುವದೇ ಪಾದೋದಕ ವಿಧಿಯ ಮುಖ್ಯ ಉದ್ದೇಶವಿರುತ್ತದೆ.

ಪಾದೋದಕವನ್ನು ಸಿದ್ಧಪಡಿಸುವಲ್ಲಿ ಮೇಲ್ಕಂಡ ಎಲ್ಲ ವಿಷಯಗಳು ಭಕ್ತನ ಮನಸ್ಸಿನಲ್ಲಿ ಬಿಂಬಿಸುವಂತೆ ಅದರ ರಚನೆ ಇರುತ್ತದೆ. ಇದರ ತಿಳುವಳಿಕೆಯು ಇಲ್ಲದ ಮೂಲಕ ಇಂಥ ಪ್ರವಾದಗಳು ವೀರಶೈವ ಸಮಾಜದಲ್ಲಿಯ ಮಹನೀಯರಿಂದ ಉಂಟಾಗಹತ್ತಿರುತ್ತವೆ. ಇದು ವಚನಶಾಸ್ತ್ರವನ್ನು ಅರಿಯದ್ದರ ಪರಿಣಾಮವಾಗಿದೆ.

ಪಾದೋದಕಕ್ಕೆ ಗುರು ಲಿಂಗ ಜಂಗಮದ ಸಂಬಂಧವಿದ್ದು ಅದನ್ನು ಮೊದಲು ಅರಿಯುವದು ಅವಶ್ಯವು. ಇದು ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ಪುಟ ೨೦೨ ರಿಂದ ೨೨೨ ರ ವರೆಗೆ ವಿವೇಚಿಸಲ್ಪಟ್ಟಿರುತ್ತದೆ. ಅದರಲ್ಲಿಯ ವಚನಗಳನ್ನು ವಾಚಕರು ಅವಶ್ಯವಾಗಿ ನೋಡಬೇಕು. ಆದರೆ ಇಲ್ಲಿ ನಾವು ಕೆಲವು ವಚನಗಳ ಆವಶ್ಯಕ ಭಾಗಗಗಳನ್ನು ಮಾತ್ರ ಆಯ್ದು ಉದಹರಿಸಿದ್ದೇವೆ. ಅವುಗಳಿಂದ ಗುರು ಲಿಂಗ ಜಂಗಮದ ಪರಸ್ಪರ ಸಂಬಂಧವು ವಾಚಕರಿಗೆ ತಿಳಿಯದೆ ಇರಲಾರದೆಂದು ನಾವು ಭಾವಿಸಿದ್ದೇವೆ.

೧ ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ (ಪುಟ ೨೦೮ ವಚನ ೭೮)

೨ ಗುರುವೆಂದಡೆ ತನು, ಲಿಂಗವೆಂದಡೆ ಆತ್ಮ, ಜಂಗಮವೆಂದಡೆ ಆತ್ಮನ ಅರಿವು (ಪುಟ ೨೦೮ ವಚನ ೭೮)

೩ ಕಾಯುವಿದ್ದು ಕಾಂಬುವುದು ಗುರುಸ್ಥಲ, ಜೀವವಿದ್ದು ಕಾಂಬುವುದು ಲಿಂಗಸ್ಥಲ, ಭಾವವಿದ್ದು ಕಾಂಬುದು ಜಂಗಮಸ್ಥಲ. (ಪುಟ ೨೦೮ ವಚನ ೭೯)

೪ ತನುವಿಡಿದು ಕಾಂಬುದು ಗುರುವಿನ ಭೇದ, ಮನವಿಡಿದು ಕಾಂಬುದು ಲಿಂಗದ ಭೇದ, ಜ್ಞಾನವಿಡಿದು ಕಾಂಬುದು ಜಂಗಮದ ಭೇದ. (ಪುಟ ೨೦೮ ವಚನ ೮೦)

೫ ಗುರುವೇ ಅಂಗ, ಲಿಂಗವೇ ಮನ, ಜಂಗಮವೇ ಪ್ರಾಣವಯ್ಯ. ನಾದವೇ ಗುರು, ಬಿಂದುವೇ ಲಿಂಗ, ಕಳೆಯೇ ಜಂಗಮವಯ್ಯ. (ಪುಟ ೨೦೯ ವಚನ ೮೧)

ಈ ಪ್ರಕಾರ ಮನುಷ್ಯನ ಮೂರೂ ಶರೀರಗಳಲ್ಲಿ ಗುರು ಲಿಂಗ ಜಂಗಮಗಳು ಬೇರೆ ಬೇರೆ ಪರಿಣಾಮಗಳನ್ನು ಮಾಡುತ್ತವೆ. ಈ ಆವರಣಗಳ ಆಚರಣೆಯು ಮೂಲಕ ಈ ಶರೀರಗಳು ಉತ್ಕೃಷ್ಟತೆಯನ್ನು ಹೊಂದುತ್ತಲೇ ಇರುತ್ತವೆ. ಈ ಪ್ರಕಾರ ಅವು ವಿಕಾಸ ಹೊಂದುವಲ್ಲಿ ಅವು ಪರಸ್ಪರವಾಗಿಯೂ ಪರಿಣಾಮ ಮಾಡುತ್ತವೆ. ಈ ಬಗ್ಗೆ ವಚನಕಾರರು ಹೇಳುವದೇನಂದರೆ—

೧ ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೇ ಲಿಂಗವೆಂದು ಅರುಹಿದನಯ್ಯ ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು. ಆ ಅರಿವೆ ಜಂಗಮವೆಂದರುಹಿದನಯ್ಯ ಬಸವಣ್ಣನು. (ಪುಟ೨೦೯ ವಚನ ೮೩)

೨ ಮೃದು ರುಚಿ ರೂಪು ಕೂಡಿ ಸಕ್ಕರೆಯಾಯಿತ್ತು. ಗುರು ಲಿಂಗ ಜಂಗಮ ಕೂಡಿ ವಸ್ತುವಾಯಿತ್ತು. ಮೃದುವಿನಂತೆ ಗುರು, ರುಚಿಯಂತೆ ಲಿಂಗ, ರೂಪಿನಂತೆ ಜಂಗಮ. (ಪುಟ ೨೧೦ ವಚನ ೮೮)

೩ ತನ್ನ ತಾನರಿದಡೆ ತನ್ನರಿವೇ ಗುರು, ತಾನೇ ಲಿಂಗ, ತನ್ನ ನಿಷ್ಪತ್ತಿಯೇ ಜಂಗಮ. (ಪುಟ ೨೧೧ ವಚನ ೮೯)

೪ ಪೂಜಿಸಿ ಕಾಂಬುವದು ಗುರುವಿನ ಭೇದ, ಧ್ಯಾನಿಸಿ ಕಾಂಬುವದು ಲಿಂಗದ ಭೇದ, ಉಭಯದಲ್ಲಿ ನಿಂದು ವಿಚಾರಿಸಿ ಕಾಂಬುವದು ಜಂಗಮದ ಭೇದ. (ಪುಟ ೨೧೨ ವಚನ ೯೭)

ಮೇಲ್ಕಂಡ ವಚನಗಳಿಂದ ಅಷ್ಟಾವರಣಗಳಲ್ಲಿ ಗುರು ಲಿಂಗ ಜಂಗಮಗಳಿಗಿರುವ ಮಹತ್ವದ ಸ್ಥಾನವು ಮತ್ತು ಅವುಗಳ ಕ್ರಿಯೆಗಳು ವಾಚಕರಿಗೆ ಗೊತ್ತಾಗಬಹುದು. ಅಲ್ಲದೆ ಅವುಗಳಲ್ಲಿ ಪರಸ್ಪರ ಸಂಬಂಧವೂ ಉಂಟು. ಈ ಸಂಬಂಧವನ್ನು ಅರಿತುಕೊಂಡು ಆ ರೀತಿ ಭಕ್ತನು ಆಚರಿಸುತ್ತ ಕಡೆಗೆ ಅವನಲ್ಲಿ ಆ ಮೂರೂ ಒಂದಾಗಬೇಕು. ಅವು ಒಂದಾದಲ್ಲಿಯೇ ಅಷ್ಟಾವರಣಗಳ ಆಚರಣೆಯು ಮನುಷ್ಯನಲ್ಲಿ ಪೂರ್ಣವಾಗುತ್ತದೆ. ಈ ವಿಷಯವಾಗಿ ವಾಚಕರು ಈ ಕೆಳಗಿನ ವಚನಗಳನ್ನು ಲಕ್ಷಿಸತಕ್ಕದ್ದು.

೧ ಗುರುಪೂಜೆಯ ಮಾಡುವಲ್ಲಿ ಗುರುಪೂಜೆಯಲ್ಲಿಯೇ ಮುಕ್ತರು. ಲಿಂಗಪೂಜೆಯ ಮಾಡುವಲ್ಲಿ ಲಿಂಗಪೂಜೆಯಲ್ಲಿಯೇ ಮುಕ್ತರು. ಜಂಗಮ ಪೂಜೆಯ ಮಾಡುವಲ್ಲಿ ಜಂಗಮ ಪೂಜೆಯಲ್ಲಿಯೇ ಮುಕ್ತರು. ಈ ಮೂರೊಂದಾದಲ್ಲಿ ಬೇರೊಂದಂಗವಿಲ್ಲ. (ಪು. ೨೧೭ ವ. ೧೨೨)

೨ ತ್ರಿವಿಧಕ್ಕೆ ರೀತಿಯಾಗಿ ತ್ರಿವಿಧದ ನಿಜವ ತಿಳಿದು ತ್ರಿವಿಧವನವಗ್ರಹಿಸಿ ತ್ರಿವಿಧಪದವ ಮೀರಿ, ತ್ರಿವಿಧ ನಿರ್ಣಯದಲ್ಲಿ ನಿಷ್ಪತ್ತಿಯಾದಲ್ಲಿ ಕೂಡಲಚನ್ನಸಂಗ ನಿಮ್ಮ ಶರಣ-(ಪುಟ ೨೨೦ ವ. ೧೨೯)

ಈ ಪ್ರಕಾರ ಗುರು ಲಿಂಗ ಜಂಗಮ ಮತ್ತು ಭಕ್ತ ಇವುಗಳ ಸಂಬಂಧವಿದ್ದು ಅವುಗಳಲ್ಲಿ ಇರತಕ್ಕ ಸಾಮರಸ್ಯವನ್ನು ಸೂಚಿಸುವ ಆವರಣವು ಪಾದೋದಕವಾಗಿವೆ. ಈ ಪಾದೋದಕದ ವಿಧಿಯಲ್ಲಿ ಮೇಲ್ಕಂಡ ಎಲ್ಲ ತತ್ವಗಳು ಅಡಕವಾಗಿರುತ್ತವೆ. ಈ ಸಂಗತಿಯನ್ನು ಅರಿತು ಆಚರಿಸಬೇಕು. ಆದರೆ ಈ ವಿಧವನ್ನು ತಿಳಿಯದೆ ಆಚರಿಸಿದ್ದಾದರೆ ಅದು ಪಾದೋದಕವೆಂದು ಎಣಿಸಲ್ಪಡಲಾರದು. ಬ್ರಾಹ್ಮಣರಲ್ಲಿ ಪಾದೋದಕ ಅರ್ಥವು ಇದಕ್ಕೆ ತೀರ ಭಿನ್ನವಾಗಿರುತ್ತದೆ. ವೀರಶೈವರಲ್ಲಿ ಗುರು ಲಿಂಗ ಜಂಗಮದ ಯಾವ ಕಲ್ಪನೆಯು ಇದೆಯೋ ಅದು ಅವರಲ್ಲಿಲ್ಲ. ಆದ್ದರಿಂದ ಅವರು ಸ್ಥೂಲ

ರೀತಿಯಿಂದ ತಮ್ಮ ಗುರುಗಳನ್ನು ಕುರಿತು ಆಚರಿಸಿ ಅವರ ಪಾದೋದಕವನ್ನು ಸ್ವೀಕರಿಸುತ್ತಾರೆ. ಅವರಲ್ಲಿ ಲಿಂಗಕ್ಕೆ ಪಾದೋದಕವು ಸಂಬಂಧ ಪಡುವದಿಲ್ಲ. ಆದರೆ ವೀರಶೈವರಲ್ಲಿ ಅಷ್ಟಾವರಣಗಳಲ್ಲಿ ಒಂದಾದ ಇಷ್ಟಲಿಂಗದ ವಿಚಾರವು ಒಂದು ವಿಶಿಷ್ಟ ತೆರನಾಗಿರುತ್ತದೆ. ಅದಿಲ್ಲದ ಹೊರ್ತು ಅವರ ಪಾದೋದಕ ಕ್ರಿಯೆಯು ನಡಿಯಲಾರದು. ಇದರಂತೆ ಭಕ್ತ ಜಂಗಮರ ಮತ್ತು ಗುರುವಿನ ಕಲ್ಪನೆಗಳಾದರೂ ವಿಶೇಷತರವಾಗಿವೆ. ಅವು ಪರಸ್ಪರ ಸಂಬಂಧ ಪಡುತ್ತವೆ. ಅವುಗಳ ಕ್ರಿಯೆಗಳೆಲ್ಲವೂ ಭಕ್ತನಲ್ಲಿ ಸಮರಸವಾಗಬೇಕು. ಇದರಿಂದ ಪರಮಾತ್ಮನ ಕಳೆಯು ಅವನಲ್ಲಿ ಸೇರ್ಪಡೆಯಾಗುತ್ತ ಹೋಗುತ್ತದೆ. ಈ ಎಲ್ಲ ವಿಚಾರಗಳು ಪಾದೋದಕದ ವಿಧಿಯಲ್ಲಿ ಅಡಕವಾಗಿವೆ.

ಆದುದರಿಂದ ಪಾದೋದಕವೆಂದರೆ ಪರಮಾತ್ಮನ ಚಿದ್ರೂಪು ಎಂದು ತಿಳಿಯಲ್ಪಟ್ಟಿದೆ. ಅದರಲ್ಲಿ ಚೈತನ್ಯವಿದೆ. ಸಿದ್ಧರಾಮೇಶ್ವರನು ತನ್ನ ಒಂದು ವಚನದಲ್ಲಿ ಹೇಳಿರುವದೇನಂದರೆ—

ಪಾದೋದಕವೆಂಬುದು ಪರಮಾತ್ಮನ ಚಿದ್ರೂಪು ನೋಡಾ. ಪಾದೋದಕವೆಂಬುದು ಮೋಕ್ಷದ ಮಾರ್ಗ ನೋಡಾ. ಪಾದೋದಕವೆಂಬುದು ಪಾಪದ ಕೇಡು ನೋಡಾ. ಪಾದೋದಕವೆಂಬುದು ಪ್ರಮಥರ ಇರವು ನೋಡಾ. ಪಾದೋದಕವೆಂಬುದು ಕಪಿಲಸಿದ್ಧ ಮಲ್ಲಿಕಾರ್ಜುನನ ಮಹಿಮೆ ನೋಡಾ.

ಕಾಡಸಿದ್ಧೇಶ್ವರರು ವೀರಶೈವ ಸಮಾಜದಲ್ಲಿ ಆಗಿಹೋದ ಮಹಾಮಹಿಮರು. ಅವರ ವಚನ ಗ್ರಂಥವು ಬಹು ಪ್ರಸಿದ್ಧವಾಗಿದೆ. ಅವರು ಪಾದೋದಕವು ಶರಣನ ಸರ್ವಾಂಗವನೊಳಕೊಂಡು ಥಳಥಳಿಸಿಹೊಳೆವ ಚಿದ್ರಸವೆಂದು ಹೇಳುತ್ತಾರೆ. ಅದನ್ನು ಸ್ವೀಕರಿಸಲು ಶ್ರೇಷ್ಠ ವರ್ತನೆಯುಳ್ಳವರೇ ಯೋಗ್ಯರೆಂದು ಅವರು ಹೇಳುತ್ತಾರೆ. ಅವರು ನುಡಿದಿರುವದೇನಂದರೆ—

ಪಾದೋದಕ ಪಾದೋದಕವೆಂದುಕೊಂಬಿರಿ. ಎಲ್ಲರಿಗೆಲ್ಲಿಯದೊ ಪಾದೋದಕ? ಈ ಭೇದವ ಬಲ್ಲರೆ ಹೇಳಿ, ಅರಿಯದಿದ್ದರೆ ಕೇಳಿ. ಪಾದೋದಕವೆಂಬುದು ಪಾತಾಳಾದಿ ಪರಲೋಕಾಂತ್ಯವಾದ ಅಖಿಳ ಕೋಟಿ

ಬ್ರಹ್ಮಾಂಡಗಳ ಗರ್ಭೀಕರಿಸಿ ಕೊಂಡಿರ್ದ ಪರಿಪೂರ್ಣತತ್ವವು. ಪಾದೋದಕವೆಂಬುದು ಶರಣನ ಸರ್ವಾಂಗವನೊಳಕೊಂಡು ಥಳಥಳಿಸಿ ಹೊಳೆವ ಚಿದ್ರಸವು. ಇಂತಪ್ಪ ಪಾದೋದಕದ ಭೇದವ ಬಲ್ಲವರು ನಿಜಗುಣ ಸ್ವಾಮಿಗಳು ಅಜಗಣ್ಣತಂದೆಗಳು ನಿಜಮುಂಚಣ್ಣ ಮೊದಲಾದ ಅಸಂಖ್ಯಾತ ಮಹಾ ಪ್ರಮಥಗಣಂಗಳು ಬಲ್ಲರಲ್ಲದೆ, ಸತ್ತು ಹೋಗುವ ಹೇಸಿ ಮೂಳ ಕತ್ತೆಗಳೆತ್ತ ಬಲ್ಲರು? ಇಂತಪ್ಪ ಪರಾಪರ ನಾಮವನುಳ್ಳ ಪರಂಜ್ಯೋತಿ ಸ್ವರೂಪವಾದ ಪರತತ್ವ ಪಾದೋದಕವನರಿದು ಕೂಡಬಲ್ಲರೆ ಗುರುಲಿಂಗ ಜಂಗಮವೆಂದೆನಬಹುದು. ಇಂತೀ ವಿಚಾರವ ತಿಳಿದುಕೊಳಬಲ್ಲರೆ ಸತ್ಯ ಸದ್ಭಕ್ತರೆಂದೆನಬಹುದು. ಇಂತಪ್ಪ ಭೇದವನರಿಯದೆ ಮತಿ ಭ್ರಷ್ಟ ಮರುಳು ಮಾನವರು ಅಣವಾದಿ ಕಾರ್ಮಿಕಾಂತ್ಯವಾದ ಮಲತ್ರಯದ ಬಲೆಯಲ್ಲಿ ಸಿಲ್ಕಿ ದೇಹಾದಿ ಮನಾಂತ್ಯವಾದ ಅರುವತ್ತಾರುಕೋಟಿ ಕರಣಾದಿ ಗಣಂಗಳು ಮೊದಲಾದ ಸಕಲ ಸಂಸಾರ ವಿಷಯ ಲಂಪಟದಲ್ಲಿ ಮಗ್ನರಾಗಿ ಮಂದಮತಿ ಅಧಮ ಜಂಗಮನ ಕಾಲವನು ತ್ರಿಕಾಲದಲ್ಲಿ ಜಲದಿಂದ ತೊಳೆದು ಪಾದೋದಕವೆಂದು ಬಟ್ಟಬಟ್ಟಲ ತುಂಬ ನೀರ ಕುಡಿದು ತಮ್ಮ ದೇಹದ ಪ್ರಾಣಾಗ್ನಿಯ ತೃಷೆಯನಡಗಿಸಿಕೊಂಡು ಗಳಿಗೆ ತಾಸಿನ ಮೇಲೆ ಮೂತ್ರವ ಮಾಡಿ ವಿಸರ್ಜಿಸಿ ಮಡಿ ಮೈಲಿಗೆಂದು ನುಡಿವ ಮಲದೇಹಿಗಳ ಮೋಗಣ ತುಟಿ ತನಕ ಕೊಯಿದು ಇಷ್ಟಂಗಿಯುಲೊರಸಿ ಕಟವಾಯ ಸೀಳಿ ಕನ್ನಡಿಯ ತೋರಿ ಮೇಲು ಮುಂದಾಗಿ ಅಟ್ಟೆಂದ ಕಾಣಾ ನಿಮ್ಮ ಶರಣ ಕೂಡಿನೊಳಗಾದ ಶಂಕರ ಪ್ರಿಯ ಚನ್ನ ಕದಂಬ ಲಿಂಗ ನಿರ್ಮಾಯ ಪ್ರಭುವೇ.—

ವಚನಶಾಸ್ತ್ರದಲ್ಲಿ ಮೂರು ವಿಧದ ಪಾದೋದಕಗಳಿರುತ್ತವೆ. (೧) ದೀಕ್ಷಾ ಪಾದೋದಕ. ಇದಕ್ಕೆ ಗುರು ಪಾದೋದಕ ಮತ್ತು ಧೂಳ ಪಾದೋದಕ ಎಂಬ ಬೇರೆ ಎರಡು ಹೆಸರುಗಳು ಇರುತ್ತವೆ. (೨)ಶಿಕ್ಷಾ ಪಾದೋದಕ. ಇದಕ್ಕೆ ಕ್ರಿಯಾ ಪಾದೋದಕವೆಂಬ ಇನ್ನೊಂದು ಹೆಸರಿದೆ. (೩) ಜ್ಞಾನ ಪಾದೋದಕ. ವಚನಗ್ರಂಥಗಳಲ್ಲಿ ಈ ಮೂರು ವಿಧ ಪಾದೋದಕಗಳು ತಾತ್ವಿಕ ದೃಷ್ಟಿಯಿಂದ ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತವೆ.

ಅಷ್ಟಾವರಣಗಳಲ್ಲಿ ಪಾದೋದಕವು ಇದ್ದು ಇದರ ವಿಧಿಯಲ್ಲಿ ಮೇಲ್ಕಂಡ ಮೂರೂ ಪಾದೋದಕಗಳು ಸಮಾವೇಶವಾಗುವಂತೆ ಅದರ

ರಚನೆ ಇರುತ್ತದೆ. ಧರ್ಮ ಶಾಸ್ತ್ರಕಾರರು ತತ್ವಗಳನ್ನು ನಿರೂಪಿಸುವದಲ್ಲದೆ ಅವುಗಳ ನೆನಪು ಉಳಿಯುವದಕ್ಕೋಸ್ಕರ ನಿತ್ಯಾಚರಣೆಯಲ್ಲಿ ಅವುಗಳ ಬಗ್ಗೆ ಕೆಲವು ವಿಧಿಗಳನ್ನು ಕಲ್ಪಿಸುತ್ತಾರೆ. ಇವು ಪೂಜಾ ಅರ್ಚನಾದಿಗಳೇ ಇರುತ್ತವೆ. ಇವುಗಳನ್ನು ಆಚರಿಸುವಲ್ಲಿ ಅವುಗಳಿಗೆ ಸಂಬಂಧಿಸಿದ ಆಯಾ ತತ್ವಗಳ ಜ್ಞಾನವು ಪೂಜಕಲ್ಲಿರತಕ್ಕದ್ದು. ಹೀಗಿಲ್ಲದಿದ್ದರೆ ಅಂಥ ವಿಧಿಗಳ ಆಚರಣೆಯಿಂದ ಅವನ ಮನಸ್ಸಿನ ಮೇಲೆ ಆವ ಪರಿಣಾಮಗಳು ಉಂಟಾಗಲಾರವು. ಪಾದೋದಕದ ವಿಷಯವು ಹೀಗೆಯೇ ಇರುತ್ತದೆ.

ದೀಕ್ಷಾ ಪಾದೋದಕವು ಬಾಹ್ಯ ಶರೀರಕ್ಕೆ, ಶಿಕ್ಷಾ ಪಾದೋದಕವು ಮನಸ್ಸಿಗೆ ಅಥವಾ ಸೂಕ್ಷ್ಮಶರೀರಕ್ಕೆ, ಮತ್ತು ಜ್ಞಾನ ಪಾದೋದಕವು ಜ್ಞಾನಕ್ಕೆ ಅಥವಾ ಕಾರಣಶರೀರಕ್ಕೆ, ಸಂಬಂಧಪಡುತ್ತವೆ. ಈ ಪ್ರಕಾರ ನಾವು ಇವುಗಳ ವಿಷಯವಾಗಿ ಸ್ಥೂಲವಾಗಿ ಹೇಳಬಹುದು. ಈ ಬಗ್ಗೆ ಸಿದ್ಧರಾಮೇಶ್ವರನ ವಚನವಿದ್ದು ಅವನು ಅದರಲ್ಲಿ ಹೇಳಿರುವದೇನಂದರೆ—

ಗುರುಪಾದೋದಕದಿಂದ ಸ್ಥೂಲ ದೇಹ ಶುದ್ಧಿ. ಕ್ರಿಯಾ ಪಾದೋದಕದಿಂದ ಸೂಕ್ಷ್ಮ ದೇಹ ಶುದ್ಧಿ. ಜ್ಞಾನ ಪಾದೋದಕದಿಂದ ಕಾರಣ ದೇಹ ಶುದ್ಧಿ. ಗುರು ಪಾದೋದಕದಲ್ಲಿ ಇಷ್ಟಲಿಂಗ ಸಂಬಂಧ. ಕ್ರಿಯಾ ಪಾದೋದಕದಿಂದ ಪ್ರಾಣಲಿಂಗ ಸಂಬಂಧ. ಜ್ಞಾನ ಪಾದೋದಕದಿಂದ ಭಾವಲಿಂಗ ಸಂಬಂಧ. ಅದು ಕಾರಣ ಪಾದೋದಕವೇ ಪ್ರತ್ಯಕ್ಷ ಪರಬ್ರಹ್ಮ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ.

ಈ ಮೂರು ಪಾದೋದಕಗಳ ತತ್ವಗಳು ಮೇಲೆ ಕಾಣಿಸಿದಂತೆ ಇದ್ದು ಅವುಗಳನ್ನು ಆಚರಿಸುವಲ್ಲಿ ಅವುಗಳಿಗನುಗುಣವಾದ ಭಾವಗಳು ಪೂಜಕನಲ್ಲಿ ಇರತಕ್ಕದ್ದು. ಇದರಿಂದ ಅವನಲ್ಲಿ ಇಷ್ಟ ಪ್ರಾಣ ಭಾವ ಲಿಂಗಗಳು ಸಂಬಂಧಪಡುತ್ತವೆ. ಪಾದೋದಕ ವಿಧಿಯಲ್ಲಿ ಈ ಎಲ್ಲ ವಿಷಯಗಳು ಅಡಕವಾಗಿರುತ್ತವೆ. ಈ ತತ್ವಗಳನ್ನು ತಿಳಿದು ಅವನು ಪಾದೋದಕವನ್ನು ಗ್ರಹಿಸತಕ್ಕದ್ದು. ಪಾದೋದಕ ವಿಧಿಯ ಸಂಬಂಧವಾಗಿ ಅನೇಕ ವಚನಗಳು ಉಪಲಬ್ಧವಿವೆ. ಅವುಗಳಲ್ಲಿ ಸಂಕ್ಷಿಪ್ತವಾಗಿರುವ ಒಂದನ್ನು ಮಾದರಿಗಾಗಿ ನಾವು ಇಲ್ಲಿ ಉದಹರಿಸುತ್ತೇವೆ. ಅದು ಯಾವದೆಂದರೆ—

ಗುರು ಪಾದೋದಕವೆಂದು ಕ್ರಿಯಾ ಪಾದೋದಕವೆಂದು ಜ್ಞಾನ ಪಾದೋದಕವೆಂದು ಮೂರು ತೆರನುಂಟು. ಗುರು ಪಾದೋದಕವೆಂದರೆ ಅಯ್ಯಗಳ ಪಾದಗಳ ಎರಡಂಗುಲಿಗಳಲ್ಲಿ ಪಾದಗಳೆರಡರ ಮೂಲಾಂಗುಲಿ ಹಿಮ್ಮಡಗಳ ಅಗ್ರದಲ್ಲಿ ತನ್ನ ಪಂಚಾಂಗುಲಿಯಿಂದ ಉದಕವನೆದ್ದಿ ಮಂತ್ರದಿಂದಿಳುಹುವುದೇ ಗುರು ಪಾದೋದಕ. ಕ್ರಿಯಾ ಪಾದೋದಕ ವೆಂದರೆ ಪಾದದ್ವಯದ ಅಂಗುಲಿಗಳಲ್ಲಿ ಶಿವಶಕ್ತಿಯ ಪ್ರಣವವ ಬರೆದು ಭಸ್ಮವ ಧರಿಸಿ ನೇತ್ರದಳಗಳ ಅರ್ಪಣಂಗೈದು ತನ್ನ ತರ್ಜನಿಯ ಮೂರು ವೇಳೆ ಮೂಲ ಶಕ್ತಿ ಪ್ರಣವ ಸಹಿತ ಪಂಚಾಕ್ಷರೀ ಮಂತ್ರದಿಂ ಗುರು ಪಾದೋದಕವನೆದ್ದಿ ಎಳೆಯುವದೇ ಕ್ರಿಯಾ ಪಾದೋದಕವು. ಜ್ಞಾನ ಪಾದೋದಕವೆಂದರೆ ದಶಾಂಗುಲಿಗಳಲ್ಲಿ ದಶ ಪ್ರಣವ ಮಂತ್ರದಿಂದ ಸಹಿತ ಭಸ್ಮದಿಂ ಲಿಖಿಸಿ ಷೋಡಶೋಪಚಾರದಿಂ ಪೂಜೆಯ ಮಾಡಿ ಎರಡಂಗುಲಿ ಮಧ್ಯ ಮೂರು ಸ್ಥಾನಂಗಳಲ್ಲಿ ಪಂಚಾಕ್ಷರೀ ತ್ರಯದಿಂದ ಎರೆಯುವದೇ ಜ್ಞಾನ ಪಾದೋದಕ. ಇಂತಪ್ಪ ಪಾದೋದಕ ತ್ರಯಂಗಳ ಸೇವಿಸಿ ಸುಖಿಸಬಲ್ಲಡೆ, ಆತನೇ ಪರತತ್ವ ವಸ್ತು, ಕಪಿಲಸಿದ್ಧಮಲ್ಲಿಕಾರ್ಜುನದೇವ ನೋಡಾ.

ಈ ಬಗ್ಗೆ ಚನ್ನಬಸವೇಶ್ವರನ ಉಕ್ತಿಯೊಂದಿದ್ದು ಅದು ಬಹು ವಿಸ್ತಾರವಾಗಿರುತ್ತದೆ. ಅದರಲ್ಲಿ ಪಾದೋದಕದ ವಿಭೇದಗಳು ಹೇಗೆ ಉಂಟಾಗುತ್ತವೆಂಬದು ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತದೆ. ವಿಸ್ತಾರ ಭಯಕ್ಕಾಗಿ ನಾವು ಅದನ್ನು ಇಲ್ಲಿ ಉದಹರಿಸಿಲ್ಲ. ಈ ಪಾದೋದಕಗಳೆಲ್ಲ ಮಂತ್ರಾಕ್ಷರಗಳಿಂದಲೇ ಸಿದ್ಧವಾಗುತ್ತವೆ. ಈ ಮಂತ್ರಾಕ್ಷರಗಳು ಗುರು ಲಿಂಗ ಜಂಗಮಗಳಿಗೆ ಸಂಬಂಧಪಡುತ್ತವೆ. ಹೀಗೆ ಸಿದ್ಧವಾದ ಪಾದೋದಕ ವನ್ನು ಗುರು ಶಿಷ್ಯರೀರ್ವರೂ ಸ್ವೀಕರಿಸುವರು. ಹೀಗೆ ಸ್ವೀಕರಿಸಿದಲ್ಲಿ ಭಕ್ತ ಗುರು ಲಿಂಗ ಜಂಗಮ ಇವರಲ್ಲಿ ಸಾಮರಸ್ಯವು ಉಂಟಾಗುತ್ತದೆ. ಪಾದೋದಕವು ಮಂತ್ರದಿಂದ ತಯಾರಿಸಲ್ಪಟ್ಟಿರುವದರಿಂದ ಅದು ಪರಮಾತ್ಮನ ಕಳೆಯಿಂದ ಕೂಡಿಕೊಂಡಿದೆಂಬ ಭಾವನೆಯು ಇವರಲ್ಲಿ ಪೂರ್ಣವಾಗಿರುತ್ತದೆ. ಇಂಥ ಭಾವನೆಯಿಂದಲೇ ಈ ಆಚಾರವನ್ನು ಭಕ್ತನು ನಿರ್ವಹಿಸತಕ್ಕದ್ದು. ಆಯಾ ಸಮಾಜಗಳು ಆಚರಿಸುವ ಆಚರಣೆಗಳಲ್ಲೆಲ್ಲ ಒಂದು ಭಾವನೆಯು ಕಂಡುಬರುತ್ತದೆ. ಪೂಜಾದಿ ವಿಧಿಗಳು ಯಾವಾಗಲೂ ಭಾವನಾಪೂರ್ಣವಾದವುಗಳು. ಆದರೆ ಭಾವನೆಗೆ ಕೆಲವೊಂದು ತತ್ವವು

ತಳಹದಿಯಾಗಿರುತ್ತದೆ. ಆ ತಿಳುವಳಿಕೆಯನ್ನು ಭಕ್ತನು ಉಂಟು ಮಾಡಿ ಕೊಳ್ಳತಕ್ಕದ್ದು. ಹಾಗೆ ನಂಬುಗೆಯಿಂದ ಅವನು ಆಚರಿಸಿದಲ್ಲಿ ಆ ವಿಧಿಯ ಪರಿಣಾಮವು ಮನಸ್ಸಿನ ಮೇಲೆ ಆಗುತ್ತದೆ. ಹಾಗಿಲ್ಲದಿದ್ದರೆ ಅಂಥ ಪೂಜಾದಿ ಕಾರ್ಯಗಳು ವ್ಯರ್ಥವಾಗುವವು.

ಪಾದೋದಕದ ವಿಧಿಯಲ್ಲಿ ತಾನು, ಜಂಗಮ, ಗುರು, ಲಿಂಗ ಇವುಗಳ ಸಾಮರಸ್ಯಭಾವವು ಉಂಟಾಗುತ್ತದೆ. ದೀಕ್ಷಾ ಮತ್ತು ಶಿಕ್ಷಾ ಪಾದೋದಕದೊಡನೆ ಉಂಟಾದ ಜ್ಞಾನ ಪಾದೋದಕವನ್ನು ಸೇವಿಸಲು ಅದರ ಪರಿಣಾಮವೇನೆಂಬುವನ್ನು ಒಬ್ಬ ವಚನಕಾರನು ಕೆಳಗೆ ಬರೆದಂತೆ ವಿವರಿಸಿದ್ದಾನೆ. ಅದು ಹೇಗೆಂದರೆ—

ನಿತ್ಯಾನಂದ ನಿಜದಾಕಾರದ ಪರಮ ನಿರ್ಮಲ ಲಿಂಗ ತೇಜದೊಳಗೆ ಮನವಳಿದು, ಲೀಯ್ಯವಾದ ಮತ್ತೆ, ತಾನೆಂಬುದಿಲ್ಲ. ಅನಾದಿ ದಿವ್ಯವ ಮೀರಿನಿಂದ ಪರಮಾನಂದ ಜ್ಞಾನ ಪಾದೋದಕ ರೂಪು ತಾನೆಯಲ್ಲದೆ ಅನ್ಯವಿಲ್ಲ. ಇದು ಕಾರಣ ಅರಿವುದೆಲ್ಲ ಅರುಹಿಸಿಕೊಂಬುದೆಲ್ಲ ಅರಿವು ಅರುಹಿಸಿಕೊಂಬುದು ಈ ಉಭಯ ಒಂದಾದ ನಿಲವೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನೆಂಬೆನು.

ಪಾದೋದಕವನ್ನು ಸಿದ್ಧಮಾಡುವಲ್ಲಿ ಲಿಂಗದ ಕಳೆಯು ಅದರಲ್ಲಿ ಬರಮಾಡಿಕೊಳ್ಳುವದು ಅವಶ್ಯವು. ಈ ಉದ್ದೇಶದಿಂದ ಪಾದೋದಕವನ್ನು ಲಿಂಗಕ್ಕೆ ಸಂಬಂಧಿಸುತ್ತಾರೆ. ಅಂದರೆ ಅದರ ಮೇಲೆ ಎರೆಯುವದುಂಟು. ಗುರು ಲಿಂಗ ಜಂಗಮದಲ್ಲಿ ವಿಭೇದವಿಲ್ಲ. ಅವುಗಳ ಸಾಮರಸ್ಯದಿಂದಲೇ ವಸ್ತುವು. ಈ ಬಗೆಯ ಸಾಮರಸ್ಯವು ಪಾದೋದಕದಲ್ಲಿ ಜರಗುತ್ತದೆ. ಇಲ್ಲಿ ಉಚ್ಚ ನೀಚ ಭಾವವಿಲ್ಲ. ಉಳಿದ ಸಮಾಜದವರಲ್ಲಿ ಪಾದೋದಕದ ವಿಚಾರಗಳು ತೀರ ಭಿನ್ನವಾಗಿರುತ್ತವೆ. ಮೇಲ್ಕಂಡ ವಿಚಾರಗಳು ಅವರಲ್ಲಿ ಯತ್ಕಿಂಚಿತ್ತಾದರೂ ಇರುವದಿಲ್ಲ. ಪಾದೋದಕ ಕೊಡುವವನು ಸ್ವೀಕರಿಸುವವನು ಇವರಲ್ಲಿ ಹೆಚ್ಚು ಕಡಿಮೆ ಭಾಗವು ಅವರಲ್ಲಿರುವದರಿಂದ ಅವರ ಕ್ರಿಯೆಗಳು ಬೇರೆ ಇವೆ. ಆದರೆ ವೀರಶೈವರಲ್ಲಿರುವ ಪಾದೋದಕ ವಿಷಯವು ಅವರಿಗಿಂತಲೂ ತೀರಭಿನ್ನವಾಗಿದೆ. ಗುರು ಲಿಂಗ ಜಂಗಮವನ್ನು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಿಗೆ ಸಂಬಂಧಿಸಿಕೊಂಡು ಆಚರಿಸತಕ್ಕ ಆಚರಣೆಯು ಇದಾಗಿದೆ. ಈ ಸಂಬಂಧವು ಅವರಲ್ಲಿ ಮಂತ್ರ, ವಿಭೂತಿ, ರುದ್ರಾಕ್ಷಿ ಇವು

ಗಳ ಮೂಲಕ ಆಗುವದು. ಹೀಗೆ ಆದೊಡನೆಯೇ ಅದು ಪಾದೋದಕ-ಪ್ರಸಾದವೆನಿಸಿಕೊಳ್ಳುತ್ತದೆ. ಈ ತರದ ಪಾದೋದಕ-ಪ್ರಸಾದಗಳನ್ನು ವೀರಶೈವರು ಸ್ವೀಕರಿಸತಕ್ಕದ್ದು. ವೀರಶೈವರಲ್ಲಿ ೮ ಆವರಣಗಳಿರುತ್ತವೆ. ಇವುಗಳಿಗೆ ಸಂಬಂಧಿಸಿದ ಕ್ರಿಯೆಗಳ ಹೊರ್ತು ಬೇರೆ ಕ್ರಿಯೆಗಳು ವೀರಶೈವರಿಗೆ ಇಲ್ಲ. ಯಜ್ಞ ಯಾಗಾದಿಗಳು, ನಾನಾ ದೇವತೆಗಳ ಪೂಜೆಗಳು, ಅನೇಕ ಬಗೆಯ ನಿತ್ಯನೇಮಗಳು, ವ್ರತಗಳು ಅವರಲ್ಲಿಲ್ಲ. ಆದರೆ ಅವರ ಪೂಜೆಗಳು, ನಿತ್ಯನೇಮಗಳು. ಜಪತಪಗಳು ಅಷ್ಟಾವರಣಗಳಿಗೆ ಸಂಬಂಧಪಡುತ್ತವೆ. ಈ ಅಷ್ಟಾವರಣಗಳಿಗೆ ಸಂಬಂಧಿಸಿಯೇ ಅವರ ಶಿವಯೋಗಾಚರಣೆಯು ಇದೆ. ಇಂಥ ಆಚರಣೆಯಿಂದ ಭಕ್ತನಲ್ಲಿ ಇಷ್ಟ ಪ್ರಾಣ ಭಾವ ಲಿಂಗಗಳು ಅಳವಡುವವು. ಮತ್ತು ಕಡೆಗೆ ಅವನು ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದುವನು. ಈ ವಿಷಯುವನ್ನು ಕುರಿತು ಪ್ರಭುದೇವರು ಅನ್ನುವದೇನಂದರೆ—

ಅಂಗ ವಿಕಾರ ಆಚಾರದೊಳಡಗಿ, ಆಚಾರ ಕ್ರಿಯೆಗಳು ಗುರುವಿನೊಳಡಗಿ, ಗುರುವೆನ್ನಂಗದೊಳಡಗಿ, ಅಂಗ ಲಿಂಗಸಂತೃಪ್ತಿಯೊಳಡಗಿ, ಲಿಂಗನಿಷ್ಠೆ ಅಂಗದಾಚರಣೆಯು ಆಚಾರವಾವರಿಸಿ, ಆಚಾರದ ನಿಲವ ಗುರುಮೂರ್ತಿಯಾವರಿಸಿ, ಗುರುಮೂರ್ತಿಯು ಸರ್ವಾಂಗವಾವರಿಸಿ, ಸರ್ವಾಂಗವ ಲಿಂಗನಿಷ್ಠೆಯಾವರಿಸಿ, ಲಿಂಗ ನಿಷ್ಠೆ ಸಾವಧಾನವಾವರಿಸಿ, ಸಾವಧಾನವ ಸುವಿಚಾರವಾವರಿಸಿ ಸುವಿಚಾರವ ಮಹಾಜ್ಞಾನವಾವರಿಸಿ, ಮಹಾಜ್ಞಾನದೊಳಗೆ ಪರಮಾನಂದ ನಿಜ ನಿಂದು, ಆ ನಿಜದೊಳಗೆ ಪರಮಾಮೃತ ತುಂಬಿ ಮೊದಲು ಕಟ್ಟೆಯನೊಡೆದು ನಡುವಣ ಕಟ್ಟೆಯ ನಾಂತು ನಿಂದು, ನಡುವಣ ಕಟ್ಟೆಯೂ ಮೊದಲಣ ಕಟ್ಟೆಯೂ ಎರಡೂ ಕೂಡಿ ಬಂದು, ಕಡೆಯ ಕಟ್ಟೆಯನಾಂತುದು. ಈ ಮೂರು ಕಟ್ಟೆಯೊಡೆದ ಮಹಾ ಜಲವನು ಪರಮ ಪದವಾಂತುದು. ಆ ಪದದಲ್ಲಿ ನಾನೆರಗಿ ಪಾದೋದಕವ ಕೊಂಡು ಎನ್ನ ನಾನರಿಯದಾದೆ ಕಾಣಾ ಗುಹೇಶ್ವರಾ.

ಈ ವಚನವು ಅತ್ಯಂತಗರ್ಭಿತಾರ್ಥವುಳ್ಳದ್ದಾಗಿದೆ. ಇದರಲ್ಲಿ ಗುರು ಲಿಂಗ ಜಂಗಮ ಮತ್ತು ಪಾದೋದಕ ಇವುಗಳಲ್ಲಿರುವ ಸಂಬಂಧವು ತೋರಿಸಲ್ಪಟ್ಟಿದೆ. ಆ ರೀತಿಯಂತೆ ಆಚರಿಸಿದಲ್ಲಿ ಪರಮ ಪದವು ದೊರೆಯುತ್ತದೆಂದು ಅಲ್ಲಮ ಪ್ರಭುವು ಇಲ್ಲಿ ಹೇಳಿದ್ದಾನೆ.

---

# ಜಗತ್ತಿನ ಬಗ್ಗೆ ವೀರಶೈವ ಧರ್ಮದಲ್ಲಿರುವ ವಿಚಾರಗಳು.

---

[ ಶ್ರೀ ಕುಮಾರಸ್ವಾಮಿಗಳು ಬಿ. ಏ. ನವಕಲ್ಯಾಣಮಠ ಧಾರವಾಡ ಇವರು 'ಪ್ರಬುದ್ಧ ಭಾರತ' ಎಂಬ ಮಾಸಪತ್ರಿಕೆಯಲ್ಲಿ ಮೇಲ್ಕಂಡ ವಿಷಯದ ಬಗ್ಗೆ ಬರೆದ ಅನುವಾದವು ಇದು ಇರುತ್ತದೆ. ---ಸಂಪಾದಕ. ]

ವೀರಶೈವವು ಆಗಮಾಂತ ಧರ್ಮಗಳಲ್ಲಿ ಒಂದಾಗಿದೆಂದು ಎಣಿಸಲ್ಪಟ್ಟಿರುತ್ತದೆ. ೧೨ನೇ ಶತಮಾನದಲ್ಲಿ ವೀರಶೈವ ಧರ್ಮೋದ್ಧಾರದ ಬಗ್ಗೆ ಒಂದು ಮಹತ್ವದ ಚಳವಳಿಯು ಕರ್ನಾಟಕದಲ್ಲಿ ಉದ್ಭವಿಸಿತು. ಇದನ್ನು ಪುರಸ್ಕರಿಸಿದ ಮಹಾಪುರುಷನು ಬಸವೇಶ್ವರನೇ ಇದ್ದಾನೆ. ಇವನು ೧೧೫೭ರಿಂದ ೧೧೬೭ರ ವರೆಗೆ ಕಲ್ಯಾಣ ಪಟ್ಟಣದಲ್ಲಿ ರಾಜ್ಯಭಾರಮಾಡಿದ ಜೈನ ಅರಸನಾದ ಬಿಜ್ಜಳನಿಗೆ ಪ್ರಧಾನಿಯಾಗಿದ್ದನು. ಈ ಕಲ್ಯಾಣ ಪಟ್ಟಣವು ನಿಜಾಮುಇಲಾಖೆಯಲ್ಲಿ ಕಲಬುರ್ಗಿಯಿಂದ ೬೦ ಮೈಲು ದೂರ ಇರುತ್ತದೆ. ಶ್ರೀ ಬಸವೇಶ್ವರನು ಅತ್ಯಂತ ಆಕರ್ಷಕ ಪುರುಷನಾಗಿದ್ದದರಿಂದ ಅರಸನಿಂದ ಹಿಡಿದು ಒಕ್ಕಲಿಗನ ವರೆಗೂ ನಾನಾ ಸಂಗಡಗಳ ಜನರು ಅವನಿಗೆ ಸಮೀಪವರ್ತಿಗಳಾದರು. ಅವರಲ್ಲಿ ಸುಮಾರು ೩೦೦ ಜನರು ಬಸವೇಶ್ವರನಿದ್ದೆಡೆಗೆ ಮಿಲಿತರಾಗಿ ಧರ್ಮಚರ್ಚೆಗಳನ್ನು ನಡಿಸುತ್ತ ಶಿವಾನುಭವವನ್ನು ಕುರಿತು ಅನೇಕ ತರದ ವಚನಗಳನ್ನು ರಚಿಸಿದ್ದಾರೆ. ಇವುಗಳು ಅತ್ಯಂತ ಸುಂದರವಾದವುಗಳೂ ಸ್ಫೂರ್ತಿದಾಯಕವೂ ಇದ್ದು ಶಿವೈಕ್ಯ ಸ್ಥಿತಿಯನ್ನು ಹೊಂದುವ ವಿಷಯವಾಗಿ ಅವು ಬಹು ಗೂಢವಾದ ವಿಚಾರಗಳನ್ನು ವ್ಯಕ್ತಪಡಿಸುತ್ತವೆ. ಈ ವಚನಕಾರರಲ್ಲಿ ಸುಮಾರು ೬೦ ಜನ ಸ್ತ್ರೀಯರಿರುವದು ಬಹು ಮಹತ್ವವಾದುದು. ಇವರಲ್ಲಿ ಉನ್ನತಸ್ಥಾನವನ್ನು ಹೊಂದಿದವಳು ಅಕ್ಕಮಹಾದೇವಿಯಾಗಿದ್ದಳು. ಹೀಗೆ ಪ್ರಸಿದ್ಧಿಗೆ ಬಂದಂಥವರಿಗೆ ಶಿವಶರಣರೆಂಬ ಹೆಸರು ಇದೆ. ಅವರು ರಚಿಸಿದ ವಚನಗಳು ಉಪನಿಷದ್ವಾಕ್ಯಗಳಿಗೆ ಸಮಾನವಾದವುಗಳೆಂಬ ಅಭಿಪ್ರಾಯವನ್ನು ದಿವಂಗತ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯ ಇವರು ಪ್ರಕಟಪಡಿಸಿರುತ್ತಾರೆ. ಈ ಶಿವಶರಣರಿಗೆ ದೇವರ ಬಗ್ಗೆ ಅತ್ಯುತ್ಕಟೇಚ್ಛೆ ಉತ್ಪನ್ನವಾಗಲು ಅವರ

ಹೃದಯದೊಳಗಿಂದ ಸ್ವಾಭಾವಿಕವಾಗಿ ಹೊರಹೊರಟ ವಿಚಾರಗಳೇ ಇಂಥ ವಚನಗಳ ರೂಪವಾಗಿ ಹೇಳಲ್ಪಟ್ಟಿರುತ್ತವೆ. ಅವು ಇಷು ಸ್ಫೂರ್ತಿಯುಳ್ಳವುಗಳಾಗಿವೆ. ಅವುಗಳಲ್ಲಿ ಪರಮಾತ್ಮನ ಬಗ್ಗೆ ಮಹತ್ತರವಾದ ವಿಚಾರಗಳು ತುಂಬಿಕೊಂಡಿರುತ್ತವೆ. ನಿಜಾಂತಃಕರಣದಿಂದ ಹೊರಹೊರಡುವ ಭಾವಗಳು ಅವುಗಳಲ್ಲಿ ಮೂಡಿಕೊಂಡಿರುತ್ತವೆ.

ವೀರಶೈವ ಧರ್ಮವು ಈ ಪ್ರಕಾರ ಆಗಮಾಂತಕ್ಕೆ ಹೊಂದಿದ್ದಾದರೂ ಅದರಲ್ಲಿ ಶ್ರೀ ಬಸವೇಶ್ವರನೂ ಅವನ ಜೋಡಿಗರೂ ಅನೇಕ ಮಾರ್ಪಾಡುಗಳನ್ನು ಮಾಡಿದ್ದಾರೆಂದು ಕಂಡುಬರುತ್ತದೆ. ಆದ್ದರಿಂದ ಕರ್ನಾಟಕದ ವೀರಶೈವ ಧರ್ಮಕ್ಕೆ 'ಲಿಂಗಾಯತ ಧರ್ಮ' ಎಂಬ ಹೆಸರು ಪ್ರಾಪ್ತವಾಗಿರುತ್ತದೆ. ಈ ಧರ್ಮವನ್ನು ಕುರಿತು ನಾವು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸುತ್ತೇವೆ.

ಜಗತ್ತು ಎಂಬುದಕ್ಕೆ ಅಸ್ತಿತ್ವವಿದ್ದು ಅದರ ಸ್ವರೂಪವನ್ನು ಕುರಿತು ವಿಚಾರಮಾಡುವ ಶಾಸ್ತ್ರಕ್ಕೆ ತತ್ವಜ್ಞಾನವೆಂಬ ಹೆಸರು ಎಂದು ರಾಬರ್ಟ ಆರ್ಚ ಎಂಬವರ ಅಭಿಪ್ರಾಯವದೆ. ಆದರೆ ನಮಗೆ ತೋರುವ ಜಗತ್ತು ದ್ವೈವಿಧ್ಯವಾಗಿ ಇರುತ್ತದೆಂದು ನಮ್ಮ ದೃಷ್ಟಿಗೆ ಕಾಣಬರುತ್ತದೆ. ದೃಶ್ಯ ಜಗತ್ತು ಒಂದು, ಮತ್ತು ಅದಕ್ಕೆ ಮೇಲ್ತರದ್ದಾಗಿದ್ದುಕೊಂಡು ಇಂದ್ರಿಯಗಳಿಗೆ ಅಗೋಚರವಾದ ಜಗತ್ತು ಇನ್ನೊಂದು, ಹೀಗಿರುವದು ಕಂಡುಬರುತ್ತದೆ. ಆದರೆ ಇವುಗಳೊಳಗೆ ಪರಸ್ಪರ ಸಂಬಂಧ ಇರುವದೆಂಬದನ್ನು ಸಾಮಾನ್ಯ ಜನರು ಅರಿಯರು. ಆದರೆ ಆಳವಾಗಿ ವಿಚಾರ ಮಾಡಿದಲ್ಲಿ ಕೆಲವೊಂದು ನಿಕಟ ಸಂಬಂಧವು ಅವುಗಳಲ್ಲಿದೆ, ಎಂದು ಭಾಸವಾಗದೆ ಇರದು. ಈ ಎರಡೂ ಜಗತ್ತುಗಳು ಪರಸ್ಪರ ವಿರೋಧಿಗಳಾಗಿರದೆ ಅವುಗಳಲ್ಲಿ ನಿಜವಾಗಿ ಪರಸ್ಪರತೆಯು ಇರುತ್ತವೆ.

ಮೇಲೆ ಹೇಳಿದ ಎರಡು ವಿಧ ನಿರ್ಮಾಣಗಳನ್ನು ನಿರ್ದೇಶಿಸುವಂಥ ಶಬ್ದವು ಅವಶ್ಯವಿದ್ದು ಅದು ಮಹತ್ ಅಥವಾ ಬೃಹತ್ ಎಂದಿದೆಂದು ಹಿಂದೀ ತತ್ವಜ್ಞರು ಭಾವಿಸಿದ್ದಾರೆ. ಜಗತ್ತಿನಲ್ಲೆಲ್ಲ ಇರುವ ಶಕ್ತಿಯು ಪ್ರಾಣಿಚೈತನ್ಯದಲ್ಲಿ ಮತ್ತು ಈ ಚೈತನ್ಯವು ವಸ್ತುವಿನಲ್ಲಿ ತೋರಲು ವಸ್ತುಗಳಲ್ಲಿರುವ ದ್ವೈವಿಧ್ಯವು ದೂರಾಗುತ್ತದೆ. ಅವುಗಳಲ್ಲಿ ಪರಸ್ಪರತೆಯುಂಟೆಂದು ನಾವು ಭಾವಿಸದೆ ಇದ್ದಲ್ಲಿ ಅವು ಪರಸ್ಪರ ವಿರೋಧವಾಗುವವೆಂದು ತಿಳಿಯಬೇಕಾಗುತ್ತದೆ.

ಈ ಮಹತ್ ಎಂಬುದು ಮೂಲದಲ್ಲಿ ಒಂದೇ ಒಂದು ಇದ್ದು, ಅದು ಸೃಷ್ಟಿಯಲ್ಲಿ ತೋರಿದಾಗ ಅನೇಕ ಬಗೆಯಾಗಿ ಮುಖ್ಯವಾಗಿ ಬೇರೆ ಬೇರೆ ಅಂತಸ್ತುಗಳಾಗಿ ರೂಪುಗೊಳ್ಳುತ್ತದೆ. ಈ ಅಂತಸ್ತುಗಳು ಕೆಳಗಿಳಿಯುತ್ತಲೂ ಮುಂದೆ ಅವುಗಳು ಮೇಲಿನ ಮಟ್ಟಕ್ಕೇರು ತ್ತಲೂ ಹೋಗುತ್ತವೆ. ಈ ಎರಡು ತುದಿಗಳ ಮಧ್ಯದಲ್ಲಿ ಸೃಷ್ಟಿಯ ವಸ್ತುಗಳು ಅನೇಕ ರೂಪಗಳಾಗಿ ವ್ಯವಹರಿಸುತ್ತವೆ ಇದರಲ್ಲಿ ಚೈತನ್ಯವು ಮೇಲಿನದು ಮತ್ತು ದೃಶ್ಯವಾದುದು ಕೆಳಗಿನದು ಎಂದು ಸಾಮಾನ್ಯವಾಗಿ ಹೇಳಬಹುದು. ಆದರೆ ಇವುಗಳಿಗೆಲ್ಲ ಮೂಲವಾದುದು ಸತ್ಯವಸ್ತುವೆಂ ಬುದು ಇರುತ್ತದೆ. ಇದಕ್ಕೆ ವೀರಶೈವ ತತ್ವಜ್ಞಾನಿಗಳು ಮಹಾಲಿಂಗ ಎಂದು ಕರೆದಿದ್ದಾರೆ. ಇದಕ್ಕೆ ಶೈವರು ಶಿವ ಎಂತಲೂ, ಉಪನಿಷತ್ಕಾರರು ಬ್ರಹ್ಮನ್ ಎಂತಲೂ ಕರೆದಿದ್ದಾರೆ.

ಈ ಮಹಾಲಿಂಗದಲ್ಲಿ ಎರಡು ವಿಭಾಗಗಳನ್ನು ಮಾಡಬಹುದು. ಒಂದಕ್ಕೆ ಸ್ಥಿರ, ಶಿವ, ಅಥವಾ ಲಿಂಗವೆಂಬ ಹೆಸರು ಇದೆ. ಎರಡನೆಯದಕ್ಕೆ ಚರ, ಶಕ್ತಿ, ಅಥವಾ ಜಂಗಮ ಎಂಬ ಹೆಸರಿದೆ. ಚರ ಅಥವಾ ಶಕ್ತಿಗೆ ಪರ ಮಾತ್ಮನ ಪ್ರಗತಿಪರವಾದ ಚಿತ್ ಎಂಬ ಹೆಸರೂ ಇದೆ. ಇದಕ್ಕೆ ಶಿವ ಲಿಂಗವೆಂದೂ ಹೇಳುವದುಂಟು, ಈ ಚಿತ್ತು ಸಮುದ್ರದಲ್ಲಿಯ ವಡಬಾ ಗ್ನಿಯಂತೆ, ಚಂದ್ರನಲ್ಲಿಯ ಅಮೃತದಂತೆ, ಹೂವಿನೊಳಗಿನ ಗಂಧದಂತೆ, ಕನ್ನೆಯಲ್ಲಿಯ ಸ್ನೇಹದಂತೆ, ಅಡಗಿರುತ್ತದೆಂದು ಬಸವೇಶ್ವರನು ತನ್ನ ಒಂದು ವಚನದಲ್ಲಿ ಹೇಳಿದ್ದಾನೆ.

ಈ ಪ್ರಕಾರ ಜಗತ್ತಿನಲ್ಲಿ ಶಿವಶಕ್ತಿಗಳು ಕೂಡಿರುತ್ತವೆಂದು ವೀರ ಶೈವರು ಭಾವಿಸುತ್ತಿದ್ದು ಇದಕ್ಕೆ “ಶಕ್ತಿ ವಿಶಿಷ್ಟಾದ್ವೈತ”ವೆಂಬ ಹೆಸರು ಇದೆ. ಈ ಶಕ್ತಿಯ ಅಸ್ತಿತ್ವವನ್ನು ಪಾಶ್ಚಿಮಾತ್ಯ ತತ್ವಜ್ಞಾನಿಗಳು ಒಪ್ಪುತ್ತಲಿ ದ್ದರೂ ಅದರ ಸ್ವರೂಪವನ್ನು ಕುರಿತು ಅವುದನ್ನೂ ಹೇಳಲಿಕ್ಕೆ ಅವರಿಗೆ ಶಕ್ಯ ವಾಗಿಲ್ಲ. ಈ ಶಕ್ತಿಯ ಪರಿಣಾಮುಗಳು ಜಗತ್ತಿನಲ್ಲಿ ತೋರುತ್ತವೆ. ಅದರ ಪ್ರಭಾವದ ಮೂಲಕವಾಗಿಯೇ ಶರಣನಾದವನು ಉಚ್ಚಸ್ಥಿತಿಯನ್ನು ಹೊಂದಲಪೇಕ್ಷಿಸುತ್ತಾನೆ. ಪಾಶ್ಚಿಮಾತ್ಯ ತತ್ವವೇತ್ತಿಗಳು ಇದರ ವಿಷಯ ವಾಗಿ ಅನೇಕ ತರದ ಅಭಿಪ್ರಾಯುಗಳುಳ್ಳವರಿದ್ದಾರೆ. ಶೊಪೆನಹೋರಮತ್ತು ಹೆನ್ರಿ ಬೆರ್ಗಸನ್ನ ಇವರು ಇವರಲ್ಲಿ ಮುಖ್ಯರಾಗಿದ್ದಾರೆ. ಬರ್ಗಸನ್ನನು

ಈ ಶಕ್ತಿಯು ಒಂದು "ಚೈತನ್ಯಯುಕ್ತ ಪ್ರವಾಹ" ಎಂದು ಹೇಳಿದ್ದಾನೆ. ಇದು ಜಗತ್ತಿನಲ್ಲೆಲ್ಲ ಆವರಿಸಿದೆ. ಮತ್ತು ಜಗತ್ತಿನ ದೃಶ್ಯ ವಸ್ತುಗಳು ಅದರ ಚಲನವಲನೆಯ ಪರಿಣಾಮಗಳಾಗಿವೆ. ಆದರೆ ಶರಣನ ವಿಚಾರಗಳು ಇದಕ್ಕೆ ತೀರ ಬೇರೆ ಇವೆ. ಶರಣನು ಇಂಥ ವಿಚಾರಗಳನ್ನು ಪರಮಾತ್ಮನಿಗೆ ಸಂಬಂಧಪಡಿಸುತ್ತಾನೆ. ಅಂದರೆ ಪರಮಾತ್ಮನಲ್ಲಿಗೆ ಹೋಗಬೇಕೆಂಬ ಲನಲವಿಕೆಯೇ ಈ ಚೈತನ್ಯಕ್ಕೆ ಕಾರಣವೆಂದು ಅವನು ಭಾವಿಸುತ್ತಾನೆ. ಮನುಷ್ಯನಲ್ಲಿ ಪ್ರೇರಣೆ ಎಂಬುದು ಇರುತ್ತದಷ್ಟೇ. ಇದು ಮನುಷ್ಯನಲ್ಲಿಯೇ ಉತ್ಪನ್ನವಾಗುತ್ತದೆಂದು ಬರ್ಗಸನ್ನನು ಹೇಳುತ್ತಾನೆ. ಆದರೆ ಇದು ಚಿತ್ ಶಕ್ತಿಯ ಪರಿಣಾಮವೆಂದು ಶರಣನು ತಿಳಿಯುತ್ತಾನೆ. ಈ ತಿಳುವಳಿಕೆಗೆ ಶಾಪೆನ ಹೋರನ ವಿಚಾರಗಳು ಸಮೀಪವಾಗಿವೆ. ಶಾಪೆನ ಹೋರನು ಇಚ್ಛೆಗೆ ಮಹತ್ವದ ಸ್ಥಾನವನ್ನು ಕೊಟ್ಟಿರುತ್ತಾನೆ. ಇವರಿಂದಲೇ ಕಲ್ಪನೆಗಳ ಉಗಮವು. ಆದರೆ ಅವನಿಗೆ ಹಿಂದೂ ಧರ್ಮ ಶಾಸ್ತ್ರದಲ್ಲಿ ಉಪಯೋಗಿಸಲ್ಪಡುವ ಮಹತ್ ಅಥವಾ ಬೃಹತ್ ಇದರ ತಿಳುವಳಿಕೆಯು ಇರುವದಿಲ್ಲ. ಈ ಮಹತ್ ಇದರಿಂದಲೇ ಇಂದ್ರಿಯಾತೀತವಾದ ಅರಿವು ಇದೆ ಎಂಬ ವಿಚಾರಗಳು ಅವನಲ್ಲಿ ಇರುವದಿಲ್ಲ

ಶರಣನು ಈ ಶಕ್ತಿ ಅಥವಾ ಇಚ್ಛೆ ಇವಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿರುವದೇನೋ ನಿಜವು. ಆದರೆ ಅವನು ಅದನ್ನು ಶಿವನಿಗೆ ಸಂಬಂಧಿಸುತ್ತಾನೆ. ಆದ್ದರಿಂದ ಶಿವ ಮತ್ತ ಶಕ್ತಿ, ಲಿಂಗ ಮತ್ತು ಜಂಗಮ ಮತ್ತು ನಿಜ ಮತ್ತು ಇಚ್ಛೆ ಇವುಗಳು ನಿಕಟ ಸಂಬಂಧವುಳ್ಳವುಗಳಿರುತ್ತವೆಂದು ಅವನು ಭಾವಿಸುತ್ತಾನೆ. ಈ ಸಂಬಂಧವು ಎಂದಿಗೂ ಅಗಲಲಾರದಂಥಾದ್ದು. ಈ ಅಭಿಪ್ರಾಯವನ್ನು ಅವನು ಅತ್ಯುತ್ತಮ ರೀತಿಯಿಂದ ಪ್ರತಿಪಾದಿಸುವದುಂಟು. ಶಿವ-ಶಕ್ತಿ ಇವುಗಳು ಜಗತ್ತಿಗೆ ಮೀರಿದವುಗಳೆಂತಲೂ, ಅವು ಪರವಸ್ತುಗಳೆಂತಲೂ ಅವನು ಹೇಳುತ್ತಾನೆ. ಇವುಗಳಲ್ಲಿ ಲಿಂಗ ಜಂಗಮಗಳು ದೃಶ್ಯ ಜಗತ್ತಿಗೆ ಸಂಬಂಧಪಡುತ್ತವೆ. ಆದರೂ ದೃಶ್ಯವಾದವುಗಳೆಲ್ಲ ಅದೃಶ್ಯದೊಳಗಿಂದಲೇ ಹೊರಟಿರುತ್ತವೆ.

ಈ ಶಕ್ತಿಯಲ್ಲಿ ಹುಟ್ಟಿಸುವ, ರಕ್ಷಿಸುವ ಮತ್ತು ನಾಶ ಮಾಡುವ ಗುಣಗಳಿರುತ್ತವೆ. ಆದರೆ ಶಿವತತ್ವವು ಇವುಗಳಿಗೆ ಮೀರಿದಂಥಾದ್ದು

ಅದು ಪ್ರಕಾಶಮಯವಾದುದು. ನಿಶ್ಶಬ್ದವಾದುದು. ಅದರ ಬೆಳಗು ಜಗತ್ತಿನಲ್ಲೆಲ್ಲ ಪಸರಿಸಿರುತ್ತದೆ. ಅದನ್ನು ಮನುಷ್ಯನು ತನ್ನ ಇಂದ್ರಿಯ ಗಳಿಂದ ಕಾಣಲಾರನು. ಅದು ಪೂರ್ಣ ಸ್ವತಂತ್ರತೆಯ ಆನಂದವೆಂದು ನಾವು ಹೇಳಬಹುದು. ಇದೇ ಮಹಾಲಿಂಗವು. ಇದು ಪರಿಪೂರ್ಣವಾದದ್ದು. ಇಚ್ಛಾಶಕ್ತಿ ಎಂಬುದು ಅದರ ಬೆಳಗಿನಲ್ಲಿಯೇ ಸಂಚಲಿಸುತ್ತದೆ. ಆದ್ದರಿಂದ ಅದು ಪರಮಾತ್ಮಲ್ಲಿಂದಲೇ ಉಗಮ ಹೊಂದಿತೆಂದು ತಿಳಿಯಬೇಕಾಗುವದು: ಜಗತ್ತಿನಲ್ಲಿ ಪದಾರ್ಥ ಮತ್ತು ಶಕ್ತಿ ಎಂಬವುಗಳು ಇರುವವಷ್ಟೇ. ಅವು ಪರಮಾತ್ಮನ ಇಚ್ಛಾಶಕ್ತಿಯ ಮೂಲಕವಾಗಿ ತೋರುತ್ತವೆ. ಈ ಶಕ್ತಿಯ ಮೂಲಕವೇ ಜೀವರಾಶಿಗಳಲ್ಲಿ ಅನೇಕ ತರಗತಿಗಳುಂಟಾಗಿರುತ್ತವೆ.

ಈ ಮಹಾಲಿಂಗದ ಮೂಲಕ ದೃಶ್ಯ ಜಗತ್ತು, ಚೈತನ್ಯ ಮತ್ತು ಮಾನಸಿಕ ವ್ಯಾಪಾರಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆ. ಹೀಗೆ ಭಾವಿಸುವದು ವೀರಶೈವ ಧರ್ಮದ ವೈಶಿಷ್ಟ್ಯವಾಗಿದೆ. ಪದಾರ್ಥವು ಕೂಡ ಲಿಂಗಮಯವೆಂದು ಈ ಧರ್ಮದಲ್ಲಿಯ ತತ್ವವೇತ್ತಿಗಳು ಹೇಳುತ್ತಾರೆ. ಗ್ರೀಸ ದೇಶದ ಪ್ರಸಿದ್ಧ ತತ್ವಜ್ಞಾನಿಯಾದ ಪ್ಲೇಟೋನು ಇಂದ್ರಿಯಗಳಿಗೆ ಅತೀತವಾದುದರಲ್ಲಿ ಸುಖವಿದೆ ಎಂದು ತಿಳಿದಿದ್ದಾನೆ. ಕ್ರಿಶ್ಚನರ ಬಾಯಬಲಿನಲ್ಲಿ ಯಾವಾಗಲೂ ದ್ವೈತ ಭಾವವಿದೆ. ಅದು ಪದಾರ್ಥ ಮತ್ತು ದೈವೀಶಕ್ತಿ ಇವುಗಳನ್ನು ಯಾವಾಗಲೂ ವಿಂಗಡಿಸುತ್ತದೆ. ಇವುಗಳಲ್ಲಿ ಯಾವುದು ದೈವೀಶಕ್ತಿಯೋ ಅದು ನಿಜವು. ಆದರೆ ದೃಶ್ಯ ಪದಾರ್ಥವು ನಿಜವಲ್ಲೆಂದು ಅದು ಹೇಳುತ್ತದೆ. ವೇದಾಂತ ಮತ್ತು ಸಾಂಖ್ಯ ಶಾಸ್ತ್ರಗಳು ಅಜ್ಞಾನವನ್ನು ತಿರಸ್ಕರಿಸಿ ಜಗತ್ತಿಗೆ ಯಾವದು ಮೀರಿದ್ದೋ ಅದನ್ನೇ ಸ್ವೀಕರಿಸಿವೆ. ಆದರೂ ಅವುಗಳು ಪದಾರ್ಥ ಮತ್ತು ಪರವಸ್ತು ಇವುಗಳಲ್ಲಿ ಭಿನ್ನತೆಯನ್ನು ಕಲ್ಪಿಸುತ್ತವೆ. ಆಗಮಗಳು ಸಹ ಮನುಷ್ಯನು ಶಿವತತ್ವವನ್ನು ಸಾಧಿಸಬೇಕೆಂದು ಹೇಳುತ್ತವೆ. ಆದರೆ ಜಗತ್ತಿನಲ್ಲಿ ಅವುಗಳಲ್ಲಿ ಭಿನ್ನತೆ ಇವೆ ಎಂದು ಅವು ತಿಳಿದಿವೆ. ಆದರೆ ವೀರಶೈವ ತತ್ವ ಜ್ಞಾನಿಗಳು ಇಂಥ ಭಿನ್ನತೆಯನ್ನು ಕಲ್ಪಿಸಿರುವದಿಲ್ಲ. ಶಿವ-ಶಕ್ತಿ ಇವು ಯಾವಾಗಲೂ ಕೂಡಿಯೇ ಇರುವದರಿಂದ ಪದಾರ್ಥ ಮತ್ತು ದೈವೀಶಕ್ತಿ ಇವುಗಳಲ್ಲಿ ಅವರು ಯಾವ ತರದ ಭೇದವನ್ನು ಮಾಡುವದಿಲ್ಲ. ಆದ್ದರಿಂದ ಮನುಷ್ಯನು ತನ್ನ ಆಯುಷ್ಯವನ್ನು

ಲಿಂಗಮಯವಾಗಿ ಮಾಡುವ ಧ್ಯೇಯವನ್ನು ಇಟ್ಟುಕೊಳ್ಳಬೇಕೆಂದು ವೀರಶೈವ ಧರ್ಮವು ಯಾವಾಗಲೂ ಹೇಳುತ್ತದೆ.

ಪದಾರ್ಥ ಮತ್ತು ದೈವೀಶಕ್ತಿ ಇವುಗಳನ್ನು ಅನುಕ್ರಮವಾಗಿ ಅಂಗ ಮತ್ತು ಲಿಂಗ ಎಂದು ಹೇಳಬಹುದು. ಇವುಗಳಲ್ಲಿ ಶಿವಶರಣರು ಯಾವ ಭೇದವನ್ನು ಎಣಿಸುವದಿಲ್ಲ. ಇದರಿಂದ ಮನುಷ್ಯನ ಕಾರ್ಯಗಳಿಗೆ ಹೊಸ ಸ್ವರೂಪವು ಉಂಟಾಗುತ್ತದೆ. ಶರೀರವು ಪ್ರಗತಿಪರವಾಗಿದ್ದು ಅದಕ್ಕೆ ಲಿಂಗದ ಸಂಬಂಧವು ಉಂಟಾದಲ್ಲಿ ಈ ಶರೀರವು ಸಹ ಪರಮಾತ್ಮನ ಪ್ರಭಾವವುಳ್ಳದ್ದಾಗುತ್ತದೆ. ಹಾಗೆಯೇ ಮನುಷ್ಯನ ದೇಹ ಮತ್ತು ಅವನ ಮನಸ್ಸು ಇವುಗಳಲ್ಲಿಯೂ ಭಿನ್ನತೆಯನ್ನು ಕಲ್ಪಿಸಕೂಡದು.

ವೀರಶೈವರಲ್ಲಿ ಚಿತ್‌ಶಕ್ತಿಯೊಂದು ನಿತ್ಯವಾದುದು. ಅದರಿಂದ ಪ್ರಕಟವಾಗುವ ಶಕ್ತಿಯು ಮನುಷ್ಯನ ಶರೀರವನ್ನು ವ್ಯಾಪಿಸಲು, ಮನುಷ್ಯನ ಸಂಸಾರದ ಮೇಲಿರುವ ಲೋಲುಪತೆಯು ಹೋಗಿಬಿಡುತ್ತದೆ. ಒಟ್ಟಿಗೆ ನಿಜವಸ್ತುವಾಗಿರುವದು ಲಿಂಗವು. ಮತ್ತು ಅದಕ್ಕೆ ಆಧಾರವಾಗಿರುವದು ಶರೀರವು. ಈ ಶರೀರದ ಕ್ರಿಯೆಗಳು ಉತ್ಕೃಷ್ಟತೆಯನ್ನು ಹೊಂದುತ್ತ ಹೋಗತಕ್ಕದ್ದು.

ಮೇಲ್ಕಂಡ ವಿಧಾನಗಳನ್ನು ನಾವು ನಂಬಿದಲ್ಲಿ ಇಹ ಮತ್ತು ಪರ ಎಂಬವುಗಳಲ್ಲಿ ಭಿನ್ನತೆಯು ಉಳಿಯುವದಿಲ್ಲ. ಇದರಿಂದ ಪರಮಾತ್ಮನಿರುವ ಸ್ಥಾನವು ಬೇರೆ ಎಲ್ಲಿಯೂ ಇರದೆ, ಅದು ತನ್ನಲ್ಲಿಯೇ ಇದೆ ಎಂದು ತಿಳಿಯಬೇಕಾಗುತ್ತದೆ. ಆದ್ದರಿಂದ ಪರಮಾತ್ಮನನ್ನು ಕಂಡು ಹಿಡಿಯಬೇಕಾದರೆ ಇಹವನ್ನು ಬಿಟ್ಟು ಇದಕ್ಕೆ ಮೀರಿದಂಥಾದ್ದರಲ್ಲಿ ಹುಡುಕಲಿಕ್ಕೆ ಹೋಗಬಾರದು. ಅದನ್ನು ವಸ್ತುವಿನಲ್ಲಿಯೇ ಅಂದರೆ ತನ್ನಲ್ಲಿಯೇ ಕಾಣಬೇಕು. ಈ ಪ್ರಕಾರ ಬಸವೇಶ್ವರನು ತನ್ನ ಕೆಲವು ವಚನಗಳಲ್ಲಿ ಹೇಳಿದ್ದಾನೆ. ಇಹ, ಪರ ಇವೆರಡನ್ನು ವಿಂಗಡಿಸುವವನು ಸಂಸಾರದಿಂದ ದೂರಾಗಲಾರನೆಂತಲೂ, ಇಹವೆಂಬುದು ಕರ್ತಾರನ ಟಂಕಸಾಲೆ ಎಂತಲೂ, ಇಲ್ಲಿ ಸಲ್ಲುವವನು ಪರದಲ್ಲಿಯೂ ಸಲ್ಲುವನೆಂತಲೂ ಅವನ ವಚನಗಳಿವೆ. ಈ ರೀತಿ ವ್ಯವಹರಿಸಿದಲ್ಲಿ ಮನುಷ್ಯನಲ್ಲಿ ಪೂರ್ಣತ್ವವು ಒದಗುತ್ತದೆ. ಈ ತತ್ವವನ್ನು ಲಿಂಗಾಯತರು ಸ್ವೀಕರಿಸಿರುವದರಿಂದ ಮನುಷ್ಯನು ಇಲ್ಲಿ ಮಾಡುವ ಪ್ರತಿಯೊಂದು ಕಾ

ರ್ಯದಲ್ಲಿ ನಿಜತ್ವವು ಉಂಟಾಗುತ್ತದೆ. ಮತ್ತು ಅದು ಗರ್ಭಿತಾರ್ಥವು ಳ್ಳದ್ದಾಗುತ್ತದೆ. ಜಗತ್ತಿನಲ್ಲಿ ಅರ್ಥವಿಲ್ಲದ್ದು ಯಾವದೂ ಇಲ್ಲ. ಪ್ರತಿಯೊಂದಕ್ಕೆ ಉದ್ದೇಶವು ಇದ್ದೇ ಇದೆ. ಪದಾರ್ಥಗಳ ಚಲನವಲನೆಯಲ್ಲೆಲ್ಲ ಕೂಡ ಆನಂದವೆಂಬುದಿದೆ. ಈ ತೆರದ ವಿಚಾರಗಳು ಲಿಂಗಾಯತರಲ್ಲಿರುವ ಮೇಲ್ಕಂಡ ತತ್ವಗಳ ಮೂಲಕ ನಿಷ್ಪನ್ನವಾಗುತ್ತವೆ.

ವೀರಶೈವ ಧರ್ಮದ ಪ್ರಕಾರ ಜಗತ್ತಿನಲ್ಲಿ ಯಾವುದು ಸತ್ಯವಾದುದೋ ಅದರಲ್ಲಿ ಅಂತಃಪ್ರೇರಣೆ ಇದ್ದು ಈ ಪ್ರೇರಣೆಯಿಂದಲೇ ಜಗತ್ತು ನಿರ್ಮಾಣವಾಗುತ್ತದೆ. ಈ ಜಗತ್ತು ಇಂಥ ಸತ್ಯವಸ್ತುವಿನೊಳಗಿಂದಲೇ ಪ್ರಕಟವಾಗುತ್ತದೆ. ಇದು ಮಾಯೆಯುಳ್ಳದ್ದಲ್ಲ. ಅದು ಅದರೊಳಗಿನ ನಿಜವಾದ ಚಲನೆಯುಮೂಲಕ ಉಂಟಾದದ್ದು ಇದೆ. ಈ ಸಂಗತಿಯುಮೂಲಕ ಶಂಕರನ ತತ್ವಜ್ಞಾನದಿಂದ ವೀರಶೈವ ಮತವು ಭಿನ್ನವಾಗಿದೆ. ಹಾಗೆಯೇ ಚೈತನ್ಯ ಮತ್ತು ರಾಮಾನುಜ ಇವರು ದೇವರ ವಿಷಯವಾಗಿ ವಿವರಿಸುವ ಅಭಿಪ್ರಾಯಗಳು ಬೇರೆ ಇರುವ ಮೂಲಕ ಆ ಮತಗಳಾದರೂ ವೀರಶೈವ ಮತದಿಂದ ಭಿನ್ನವಾಗಿರುತ್ತವೆ. ವೈಷ್ಣವ ಧರ್ಮಗಳು ಅಂತರಂಗ ಲೀಲೆ ಮತ್ತು ಬಹಿರಂಗ ಲೀಲೆ ಎಂದು ಲೀಲೆಯಲ್ಲಿ ಭೇದಮಾಡುತ್ತವೆ. ಆದರೆ ಶಿವಶರಣರು ಹೀಗೆ ಭೇದ ಮಾಡದೆ ಲೀಲೆಯು ನಿಜವಾದುದೆಂದು ಭಾವಿಸಿರುತ್ತಾರೆ. ಲೀಲೆ ಅಥವಾ ಶಕ್ತಿಯಲ್ಲಿ ಸತ್ಯವಿದೆ, ಅದರಲ್ಲಿ ಹುಟ್ಟಿಸುವ ಸಾಮರ್ಥ್ಯವಿದೆ, ಮತ್ತು ಸಹಜವಾದ ಮೇಳನವಿದೆ. ಶಕ್ತಿಯಲ್ಲಿ ಬದಲಾವಣೆಗಳು ಆಗಬಹುದು. ಆದರೆ ಯಾವ ತರದ ಬದಲಾವಣೆಗಳಾದರೂ ಕೂಡ ಅವುಗಳಲ್ಲಿ ಯಾವಾಗಲೂ ಒಂದು ತರದ ಮೇಳಣವಿರುತ್ತದೆ.

ಆಯುಷ್ಯದಲ್ಲಿ ಮಾಡತಕ್ಕ ಕ್ರಿಯೆಗಳಲ್ಲಿ ಪಾರಮಾರ್ಥ ಶಕ್ತಿಯನ್ನು ಬೆಳಿಸಿ ಅದನ್ನು ನಿರ್ವಹಿಸುವ ಧೋರಣವು ವೀರಶೈವನದಾಗಿದೆ. ವೀರಶೈವ ಧರ್ಮದ ವೈಶಿಷ್ಟವು ಇದೇ ಇದೆ. ಇತರ ಹಿಂದೂ ಧರ್ಮಗಳಲ್ಲಿ ಈ ವಿಷಯಕ್ಕೆ ಸಾಕಷ್ಟು ಲಕ್ಷವು ಪೂರೈಸಲ್ಪಟ್ಟಿರುವದಿಲ್ಲ. ಆಗಮ ಮತ್ತು ತಂತ್ರಗಳಲ್ಲಿ ಈ ಧೋರಣದಿಂದ ಕೆಲವು ಪ್ರಯತ್ನಗಳು ಆಗಿವೆ. ಆದರೆ ಅವುಗಳೂ ಕೂಡ ಜಗತ್ತಿನಲ್ಲಿ ಆಗತಕ್ಕ ಕಾರ್ಯಗಳ ಬಗ್ಗೆ ಲಕ್ಷವನ್ನು ಅಷ್ಟು ಪೂರೈಸಿಲ್ಲ. ವೀರಶೈವ

ಧರ್ಮದಲ್ಲಿ ಮಾತ್ರ ಜಗತ್ತಿನ ಕಾರ್ಯಗಳನ್ನು ಇಷ್ಟಲಿಂಗದ ದ್ವಾರಾ ಹ್ಯಾಗೆ ಲಿಂಗಮಯವಾಗಿ ಮಾಡಬೇಕೆಂದು ಹೆಚ್ಚಿಗೆ ವಿವೇಚಿಸಲ್ಪಟ್ಟಿರುತ್ತದೆ. ಇದಕ್ಕೆ ಷಟ್‌ಸ್ಥಲ ಶಾಸ್ತ್ರವೆಂಬ ಹೆಸರು. ಈ ಶಾಸ್ತ್ರದಂತೆ ವರ್ಣಿಸಿದಲ್ಲಿ ಮನುಷ್ಯನ ಶಕ್ತಿಗಳೆಲ್ಲವೂ ಲಿಂಗಮಯವಾಗುತ್ತವೆ. ಆದ್ದರಿಂದ ಶರಣನು ಮೋಕ್ಷವನ್ನು ಸಹ ಹೊಂದುವದನ್ನು ಅಪೇಕ್ಷಿಸುವದಿಲ್ಲ. ಅವನು ತನ್ನ ಕ್ರಿಯೆಗಳನ್ನು ಲಿಂಗಮಯವಾಗಿ ಹೇಗೆ ಮಾಡಬೇಕೆಂಬುದನ್ನು ಅಪೇಕ್ಷಿಸುತ್ತಾನೆ. ಇದರಿಂದ ಅವನು ಪರಮಾತ್ಮನನ್ನು ತೊರೆದವನೆಂದು ಭಾವಿಸಕೂಡದು. ಯಾಕಂದರೆ ಪರಮಾತ್ಮನ ಶಕ್ತಿಯನ್ನು ಅವನು ಪೂರ್ಣವಾಗಿ ಅರಿತವನಾಗಿರುತ್ತಾನೆ. ಇದನ್ನು ಅರಿತುಕೊಂಡು ತನ್ನ ಕಾರ್ಯಗಳನ್ನು ಲಿಂಗಮಯವಾಗಿ ಮಾಡುವದು ಅವನ ಮುಖ್ಯ ಉದ್ದೇಶವಾಗಿರುತ್ತದೆ. ಇದರಿಂದಲೇ ಅವನಲ್ಲಿ ಶಾಂತಿಯು ನೆಲೆಗೊಳ್ಳುತ್ತದೆ. ಅವನು ಜಗತ್ತಿನಲ್ಲಿ ವ್ಯವಹರಿಸಿಯೂ ಕೂಡ ಅವನು ಲಿಂಗದ ಬೆಳಕಿನಲ್ಲಿರುತ್ತಾನೆ. ಇದಕ್ಕೆ ಸರ್ವಾಂಗಲಿಂಗ ಸ್ಥಲವೆಂಬ ಹೆಸರಿದೆ. ವೀರಶೈವ ಧರ್ಮದ ವೈಶಿಷ್ಟ್ಯವು ಇಂಥ ವಿಚಾರಗಳಲ್ಲಿಯೇ ತೋರಿಬರುತ್ತದೆ.

---

# ಬಸವೇಶ್ವರನ ಚರಿತ್ರೆ.

(ಲೇಖಕಃ— ರಾವಬಹಾದ್ದೂರ ಪಿ. ಜಿ. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ. ವಿಜಾಪುರ.)

(ಲೇಖಾಂಕಃ— ೧)

ಬಸವೇಶ್ವರನ ಚರಿತ್ರೆಯನ್ನು ಬರೆಯುವದಕ್ಕೋಸ್ಕರ ಬಹು ಜನರು ಅನೇಕ ಸಾರೆ ನಮಗೆ ಸೂಚಿಸುತ್ತಾ ಇದ್ದಾರೆ. ಆದರೆ ಈ ಕಾರ್ಯವು ಬಹಳ ಬಿಕ್ಕಟ್ಟಿನದೆಂದು ನಮಗೆ ತೋರಿದ್ದರಿಂದ ಈ ಸಾಹಸವನ್ನು ನಾವು ಕೈಕೊಂಡಿರುವದಿಲ್ಲ. ಯಾಕಂದರೆ ಬಸವೇಶ್ವರನ ವಿಷಯವಾಗಿ ನಂಬಲರ್ಹವಾದ ಸಂಗತಿಗಳು ಸಾಕಷ್ಟು ಪ್ರಮಾಣದಿಂದ ದೊರೆಯುವದಿಲ್ಲ. ಅವನ ಚರಿತ್ರೆಗಳುಳ್ಳ ಗ್ರಂಥಗಳು ಅನೇಕವಿರುತ್ತವೆಂಬದು ನಿಜವು. ಆದರೆ ಅವುಗಳಲ್ಲಿ ನಿರ್ದೇಶಿಸಲ್ಪಟ್ಟ ಸಂಗತಿಗಳು ಎಷ್ಟರಮಟ್ಟಿಗೆ ನಂಬಲರ್ಹವಾದವುಗಳೆಂಬದನ್ನು ಕಂಡುಹಿಡಿಯುವದು ಬಹಳ ದುಸ್ತರವಿರುತ್ತದೆ. ಆದರೆ ಈಚೀಚೆಗೆ ಅವನ ಕಾಲಕ್ಕಿನ ವಾಙ್ಮಯವು ಪ್ರಸಿದ್ಧವಾಗುತ್ತ ಇದೆ. ಅನೇಕ ಮಹತ್ವದ ಶಿಲಾಶಾಸನಗಳೂ ಪ್ರಕಾಶಕ್ಕೆ ಬಂದಿರುತ್ತವೆ. ಅಲ್ಲದೆ ಅನೇಕ ಸ್ಥಾನಿಕ ಐತಿಹ್ಯಗಳೂ ವೀರಶೈವ ಕ್ಷೇತ್ರಗಳ ವರ್ಣನೆಗಳೂ ಹೊರಪಟ್ಟಿರುತ್ತವೆ. ಇವುಗಳ ಸಹಾಯದಿಂದ ಅವನ ಚರಿತ್ರೆಯಲ್ಲಿಯ ನಿಜಾಂಶಗಳನ್ನು ಕಂಡು ಹಿಡಿಯುವದು ಕೆಲಮಟ್ಟಿಗೆ ಶಕ್ಯವಾಗಿರುವದರಿಂದ ಈ ವಿಷಯವನ್ನು ಕುರಿತು ಈ ಲೇಖದಲ್ಲಿ ಚರ್ಚಿಸಲು ಅಪೇಕ್ಷಿಸಿದ್ದೇವೆ.

ಬಸವೇಶ್ವರನ ಚರಿತ್ರೆಯನ್ನು ಮೊದಲಿನ ಕಾಲದಲ್ಲಿ ಅನೇಕ ವೀರಶೈವ ಕವಿಗಳು ಬರೆದಿರುವರು. ಅವರಲ್ಲಿ ಹರಿಹರನು ಮೊದಲನೆಯವನೆಂದು ಹೇಳಬಹುದು. ಅವನು ಬರೆದ 'ಬಸವರಾಜ ರಗಳೆಯು' ಬಹು ಪ್ರಸಿದ್ಧವಾಗಿರುತ್ತದೆ. ಪಾಲ್ಕುರಿಕೆ ಸೋಮಾರಾಧ್ಯನು ಬಸವೇಶ್ವರನ ಚರಿತ್ರೆಯನ್ನು ಆಂಧ್ರಭಾಷೆಯಲ್ಲಿ ಬರೆದನು. ಆಮೇಲೆ ಇದನ್ನು ಅನುಸರಿಸಿ ಭೀಮಕವಿಯು ಕನ್ನಡದಲ್ಲಿ ಬಸವಪುರಾಣವನ್ನು ಬರೆದನು. ಆದರೆ ಈ ಮೂವರು ಮಹಾ ಕವಿಗಳಲ್ಲಿ ಯಾರೂ ಬಸವನ ಸಮಕಾ

ಲೀನರಲ್ಲ. ಸೋಮಾರಾಧ್ಯನು ಆಂಧ್ರದೇಶದವನು. ಹಾಗೆಯೇ ಭೀಮ ಕವಿಯಾದರೂ ಆಂಧ್ರದೇಶಕ್ಕೆ ಸಮೀಪವರ್ತಿಯಾದ ಪ್ರಾಂತದವನು. ಇವರು ಬಸವೇಶ್ವರನಿದ್ದ ಪ್ರಾಂತದಿಂದ ಬಹು ದೂರದಲ್ಲಿದ್ದು ಕೇವಲ ಜನರ ಹೇಳಿಕೆಗಳ ಮೇಲಿಂದ ಅವನ ಚರಿತ್ರೆಯನ್ನು ಬರೆದಿರಬೇಕೆಂದು ತೋರುತ್ತದೆ. ಹರಿಹರನ ಸ್ಥಿತಿಯಾದರೂ ಹೀಗೆಯೇ ಇರುತ್ತದೆ. ಅವನು ದಕ್ಷಿಣ ದೇಶದಲ್ಲಿ ಹೆಚ್ಚಾಗಿ ಇದ್ದವನು. ಅವನು ತನ್ನ ಒಂದು ರಗಳೆಯಲ್ಲಿ ಕೂಡಲಸಂಗಮದೇವ ಸ್ಥಾನವು ಬಾಗೇವಾಡಿ ಗ್ರಾಮದಿಂದ ಪೂರ್ವಕ್ಕೆ ಇರುತ್ತದೆಂದು ಬರೆದಿದ್ದಾನೆ. ಇದರ ಮೇಲಿಂದ ಅವನು ಬಾಗೇವಾಡಿಯನ್ನಾಗಲಿ ಇಲ್ಲವೆ ಕೂಡಲಸಂಗಮಸ್ಥಾನವನ್ನಾಗಲಿ ಪ್ರತ್ಯಕ್ಷ ನೋಡದಂತೆ ಕಾಣುವದಿಲ್ಲ. ಯಾಕಂದರೆ ಬಾಗೇವಾಡಿಯ ದಕ್ಷಿಣ ದಿಕ್ಕಿಗೆ ಕೂಡಲಸಂಗಮ ದೇವಾಲಯವು ಇರುತ್ತದೆ. ಅದು ಪೂರ್ವಕ್ಕೆ ಇರುವದಿಲ್ಲ. ಆದರೂ ಹರಿಹರನ ಕಾಲವು ಬಸವೇಶ್ವರನಿಗೆ ಸಮೀಪವಾಗಿರುವದರಿಂದ ಅವನ ಕಾಲದಲ್ಲಿ ಅನೇಕ ದಂತಕಥೆಗಳು ಬಸವೇಶ್ವರನ ಬಗ್ಗೆ ಉತ್ಪನ್ನವಾಗಿದ್ದರೂ ಕೂಡ ಅವನು ಯಾವಾಗಲೂ ತಾನು ನಿರೂಪಿಸುವ ವಿಷಯಗಳನ್ನು ಅತಿಶಯೋಕ್ತಿಯನ್ನು ಮಾಡಿ ಹೇಳುವದಿಲ್ಲ. ಆದ್ದರಿಂದ ಅವನ ವಿವರಣೆಗಳಿಗೆ ನಾವು ಮಹತ್ವವನ್ನು ಕೊಡಬೇಕಾಗುತ್ತದೆ. ಮುಂದೆ ೧೫ನೇ ೧೬ನೇ ಶತಮಾನಗಳಲ್ಲಿ ಅನೇಕ ವೀರಶೈವ ಗ್ರಂಥಗಳು ವಿದ್ವಜ್ಜನರಿಂದ ಬರೆಯಲ್ಪಟ್ಟವು. ಆಗ ಬಸವೇಶ್ವರನ ಕಾಲದ ಗ್ರಂಥಗಳನ್ನು ಸಂಗ್ರಹಿಸುವ ಪ್ರಯತ್ನಗಳೂ ನಡೆದವು. ಆದರೆ ಆ ಕಾಲಕ್ಕೆ ರಚಿಸಲ್ಪಟ್ಟ ಗ್ರಂಥಗಳಲ್ಲಿ ಸಹ ಬಸವೇಶ್ವರನ ಬಗ್ಗೆ ವಿವರಣೆಗಳು ಹೆಚ್ಚಾಗಿ ಕಂಡುಬರುವದಿಲ್ಲ. ಅವನ ಸ್ತೋತ್ರಗಳುಳ್ಳ ಪದ್ಯಗಳು ಮಾತ್ರ ಹೇರಳವಾಗಿ ದೊರೆಯುತ್ತವೆ. ಅವುಗಳಲ್ಲಿ ಐತಿಹಾಸಿಕ ಕಥಾಭಾಗಗಳು ಅತ್ಯಲ್ಪವಾಗಿರುತ್ತವೆ. ಈ ಗ್ರಂಥಗಳಲ್ಲದೆ ಕಾಲಜ್ಞಾನವೆಂಬ ಹೆಸರಿನ ಅನೇಕ ಗ್ರಂಥಗಳು ಬೇರೆ ಬೇರೆ ಕಾಲಗಳಲ್ಲಿ ಬರೆಯಲ್ಪಟ್ಟಿರುತ್ತವೆ. ಅವುಗಳಲ್ಲಿ ಹಿಂದಿನ ಕಾಲದಲ್ಲಿ ಆಗಿಹೋದ ಐತಿಹಾಸಿಕ ವಿಷಯಗಳು ಕಂಡುಬರುತ್ತವೆ. ಅವುಗಳಲ್ಲಿ ಬಸವೇಶ್ವರನ ವಿವರಣೆಗಳಿರುತ್ತವೆ. ಆದರೆ ಅವುಗಳಲ್ಲೆಲ್ಲ ದಂತಕಥೆಗಳೇ ಹೆಚ್ಚಾಗಿ ತುಂಬಿರುತ್ತವೆ. ಇದಲ್ಲದೆ ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಉತ್ಪನ್ನರಾದ ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸುವ ಪದ್ಧತಿಯು ಹಿಂದುಗಡೆ ಉಂಟಾದದ್ದು ಕಂಡು

ಬರುತ್ತದೆ. ಅವುಗಳಲ್ಲಿ ಆಗಿಂದಾಗ್ಗೆ ಐತಿಹಾಸಿಕ ಮತ್ತು ಚರಿತ್ರಾತ್ಮಕ ವಿಷಯುಗಳಿರುತ್ತವೆ. ಶರಣ ಲೀಲಾಮೃತ ಮತ್ತು ಭೈರವೇಶ್ವರ ಮೊದಲಾದ ಪುರಾಣಾಂತರ್ಗತ ಕಥೆಗಳು ಈ ವರ್ಗದಲ್ಲಿ ಬರುತ್ತವೆ. ಅವು ಬಹುತರವಾಗಿ ಗದ್ಯ, ಸಾಂಗತ್ಯ ಅಥವಾ ಚೌಪದನಗಳಲ್ಲಿ ಬರೆಯಲ್ಪಟ್ಟಿರುತ್ತವೆ. ಆದರೆ ಬಸವೇಶ್ವರನ ಬಗ್ಗೆ ಈ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ವಿಷಯುಗಳಲ್ಲಿ ಏಕವಾಕ್ಯತೆಯು ಇರುವದಿಲ್ಲ. ವೀರಶೈವ ಗ್ರಂಥಗಳ ಪರಿಸ್ಥಿತಿಯು ಹೀಗೆ ಇರುವದು ಕಂಡುಬರುತ್ತಿದೆ. ಇದು ನಿಜವಾಗಿ ಅತ್ಯಂತ ಶೋಚನೀಯವಾಗಿರುತ್ತಿದೆ.

ಬಸವೇಶ್ವರನ ವಿಷಯುವಾಗಿ ಇತರ ಧರ್ಮೀಯರು ಅವರಲ್ಲಿ ಮುಖ್ಯವಾಗಿ ಜೈನರು ಕೆಲವು ಗ್ರಂಥಗಳನ್ನು ಬರೆದಿರುತ್ತಾರೆ. ಆದರೆ ಅವೆಲ್ಲವುಗಳು ಈ ಮಹಾಪುರುಷನ ಬಗ್ಗೆ ದ್ವೇಷಬುದ್ಧಿಯಿಂದ ಬರೆದವುಗಳಿದ್ದದ್ದು ಅವುಗಳನ್ನು ನೋಡಿದ ಕೂಡಲೇ ಗೊತ್ತಾಗುತ್ತದೆ. ನಂಬಲರ್ಹವಾದವುಗಳಲ್ಲದ ಅನೇಕ ಸಂಗತಿಗಳು ಅವುಗಳಲ್ಲಿ ನಿರೂಪಿಸಲ್ಪಟ್ಟಿರುತ್ತವೆ. ಇದಲ್ಲದೆ ಅವುಗಳನ್ನು ಬರೆದವರಾರೂ ಬಸವೇಶ್ವರನಿಗೆ ಸಮಕಾಲೀನರಲ್ಲ.

ಹಿಂದುಸ್ತಾನದಲ್ಲಿ ಈ ವರೆಗೆ ಅನೇಕ ಧರ್ಮಸ್ಥಾಪಕರೂ, ಧರ್ಮಪ್ರಸಾರಕರೂ ಆಗಿಹೋಗಿದ್ದಾರೆ. ಆದರೆ ನಿಜಾಂಶಗಳುಳ್ಳ ಅವರ ಚರಿತ್ರೆಗಳು ಕೆಲಮಟ್ಟಿಗಾದರೂ ಉಪಲಬ್ಧವಿವೆ. ಆದ್ದರಿಂದ ಆ ಮಹಾನುಭಾವರ ವಿಷಯವಾಗಿ ಆದರ ಭಾವವು ಇಡೀ ದೇಶದಲ್ಲಿ ಉಂಟಾಗಲು ಕಾರಣವಾಗಿರುತ್ತದೆ. ಅಂಥ ಮಹಾಪುರುಷರಲ್ಲಿ ಬಸವೇಶ್ವರನು ಒಬ್ಬನಾಗಿದ್ದಾನೆ. ಅವನು ಸಮಾಜದಲ್ಲಿ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯನ್ನು ಮಾಡಿದವನೂ, ಸಮಾಜಸುಧಾರಕನೂ ಆಗಿದ್ದಾನೆ. ಯಾವ ಸುಧಾರಣೆಗಳು ಸಾಂಪ್ರತಕಾಲದಲ್ಲಿ ದುಸ್ತರವಾದುವೆಂದು ಭಾವಿಸಲ್ಪಟ್ಟಿರುತ್ತವೆಯೋ ಅಂಥವುಗಳನ್ನು ಸಹ ಅವನು ವ್ಯವಹಾರದಲ್ಲಿ ತಂದವನಾಗಿದ್ದಾನೆ. ಚಿಕ್ಕಂದಿನಿಂದ ಮರಣಹೊಂದುವವರೆಗೂ ಅವನು ಕಷ್ಟ ಭೋಗಿಸಿರುತ್ತಾನೆ. ಸ್ವಬಾಂಧವರು, ರಾಜರು, ಇತರ ಸಮಾಜದವರು ಕೊಟ್ಟ ಅನೇಕ ತೊಂದರೆಗಳಿಗೆ ಅವನು ಈಡಾಗಿದ್ದಾನೆ. ಆದರೂ ಅವನು ದೇಶದಲ್ಲಿ ಒಂದು ಮಹತ್ವದ ಕ್ರಾಂತಿಯನ್ನುಂಟು ಮಾಡಲು ಸಮರ್ಥನಾದನು. ಇಂಥವನ ಪೂರ್ಣ ಚರಿತ್ರೆಯು ಗೊತ್ತಾಗದೆ ಇದ್ದದ್ದು

ವೀರಶೈವರಿಗಷ್ಟೇ ಅಲ್ಲ, ಕರ್ನಾಟಕಕ್ಕೂ ಹಿಂದುಸ್ತಾನಕ್ಕೂ ದುರ್ದೈವದ ಸಂಗತಿಯಾಗಿದೆ.

ಅವನ ಚರಿತ್ರೆಯು ಉಪಲಬ್ಧವಾಗದಿರಲಿಕ್ಕೆ ಕೆಲವು ಕಾರಣಗಳಿವೆ. ಅವನ ಚಳವಳಿಯಿಂದ ಸಮಾಜದಲ್ಲಿ ಒಂದು ಕ್ಷೋಭವು ಎದ್ದಿತು ಅವನು ಧರ್ಮಬಾಹಿರನೆಂದು ಮೊದಲು ಎಣಿಸಲ್ಪಟ್ಟನು ಹೀಗೆ ಎಣಿಸಲ್ಪಟ್ಟವನ ಚರಿತ್ರೆಯನ್ನು ಆಗಿನವರು ಬರೆಯುವರಾರು? ಆರಂಭ ಕಾಲದಲ್ಲಿ ಬಸವೇಶ್ವರನಿಗೆ ಸಹಾಯವಾದವರು ಪ್ರಮುಖ ಸಮಾಜದವರಲ್ಲ. ಅವನಿಗೆ ಸಹಾಯವಾದವರು ಒಬ್ಬ ಅಗಸ, ಒಬ್ಬ ಕಿನ್ನರಿ ಬಾರಿಸುವವ, ಒಬ್ಬ ಮದ್ದಲಿಗ, ಒಬ್ಬ ಒಡ್ಡರ ನಾಯಕ, ಒಬ್ಬ ನಾಪಿತ, ಹೊಲೆಯ, ಘೋರ, ಕಟ್ಟಿಗೆಯನ್ನು ಮಾರಿ ಉಪಜೀವಿಸುವವನೊಬ್ಬ. ದೇಶತ್ಯಾಗ ಮಾಡಿದ ಒಬ್ಬ ಸ್ತ್ರೀಯಳು ಇಂಥವರೇ ಇದ್ದಾರೆ. ಕ್ರೈಸ್ತನಿಗೆ ಮೊದಲು ಅನುಯಾಯಿಗಳಾದವರು ಇಂಥವರೇ. ಮಹಮ್ಮದ, ಬುದ್ಧ ಇವರ ಸ್ಥಿತಿಯಾದರೂ ಹೀಗೆಯೇ ಇದೆ. ಮೇಲಿನ ತರಗತಿಯ ಸಮಾಜದವರು ಇಂಥ ಮಹಾತ್ಮರನ್ನು ಆರಂಭದಲ್ಲಿ ಪೀಡಿಸುತ್ತಾರೆ. ಈ ಸ್ಥಿತಿಯಲ್ಲಿ ಇವರ ಚರಿತ್ರೆಗಳನ್ನು ಸಮಕಾಲೀನರು ಹೇಗೆ ಬರೆದಿಡಬೇಕು? ಮೇಲ್ತರಗತಿಯವರು ಬರೆಯುವ ಸಂಭವವಿಲ್ಲ. ಕೆಳಗಿನವರು ಪೀಡಿಸಲ್ಪಟ್ಟವರು, ವಿಪನ್ನಸ್ಥಿತಿಯಲ್ಲಿದ್ದವರು. ಆದ್ದರಿಂದ ಇಂಥ ಮಹಾನುಭಾವರ ಚರಿತ್ರೆಗಳನ್ನು ಬರೆದಿಡುವ ಕಾಲವು ಮುಂದೆ ನೂರಿನ್ನೂರು ವರ್ಷಗಳ ಮೇಲೆ ಬರುತ್ತದೆ. ಆದರೆ ಈ ಅವಧಿಯಲ್ಲಿ ಅವರ ಬಗ್ಗೆ ಅನೇಕ ದಂತಕಥೆಗಳು ಉತ್ಪನ್ನವಾಗುತ್ತವೆ. ಭಾವಿಕ ಜನರು ಅಂಥವುಗಳನ್ನು ಸಂಗ್ರಹಿಸಿ ಈ ಮಹಾನುಭಾವರ ಚರಿತ್ರೆಗಳನ್ನು ಹಿಂದುಗಡೆ ಬರೆದಿಡುತ್ತಾರೆ. ಇದೇ ಸ್ಥಿತಿಯು ಬಸವೇಶ್ವರನ ಚರಿತ್ರೆಯದಾಗಿದೆ.

ಬಸವೇಶ್ವರನು ಕಷ್ಟದಿಂದಲೇ ತನ್ನ ಜೀವಿತಕ್ರಮವನ್ನು ಪ್ರಾರಂಭಿಸಿದನು. ಆದರೆ ಅವನು ತನ್ನ ತತ್ತ್ವವನ್ನು ಬಿಡಲು ಒಪ್ಪಲಿಲ್ಲ. ತನ್ನ ಮನೆಮಾರು ದೇಶಕೋಶಗಳನ್ನು ತೊರೆದನು. ಆದರೆ ಮುಂದೆ ಅವನು ಒಂದು ಮಹತ್ವದ ರಾಜ್ಯದಲ್ಲಿ ಶ್ರೇಷ್ಠ ಸ್ಥಾನವನ್ನು ಪಡೆದನು. ಆದರೆ ಅವನು ಅಲ್ಲಿ ಇದ್ದದ್ದು ೫—೬ ವರ್ಷ ಮಾತ್ರ. ಇಷ್ಟರಲ್ಲಿಯೇ ದೇಶದಲ್ಲಿ ಒಂದು ಮಹತ್ತಾದ ಕ್ರಾಂತಿಯುಂಟಾಯಿತು. ಆ ಕ್ರಾಂತಿಯ ಮೂಲಕ ರಾಜನನ್ನು ಮೊದಲ್ಗೊಂಡು ಆಗಿನ ಎಲ್ಲ ಪ್ರಮುಖ ಸಮಾಜದವರು ಬಸ

ವೇಶ್ವರನ ಅನುಯಾಯಿಗಳನ್ನು ಸಂಪೂರ್ಣ ನಾಶಮಾಡುವ ಪ್ರಯತ್ನ ದಲ್ಲಿ ತೊಡಗಿದರು. ಆಗ ಇವರು ಅರಣ್ಯವನ್ನು ಸೇರಬೇಕಾಯಿತು. ಅಲ್ಲಿ ಅವರು ನಾಶವಾದರು. ಆದರೆ ಅಷ್ಟರಲ್ಲಿ ಬಸವೇಶ್ವರನು ಸಮಾಜದಲ್ಲಿ ಬಿತ್ತಿದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯ ಬೀಜಗಳು ಆ ಅರಣ್ಯ ಪ್ರದೇಶದಲ್ಲಿ ನಾಶಹೊಂದಲಿಲ್ಲ. ಅವು ಮುಂದೆ ಮೊಳೆತು ಮರವಾಗಿ ಬೆಳೆದು ಎಲ್ಲ ಕಡೆಗೂ ಪಸರಿಸಿದವು. ಹೀಗೆ ದೇಶದಲ್ಲಿ ಮೊದಲು ಕ್ರಾಂತಿಯುಂಟಾಗಿ ಎಲ್ಲೆಲ್ಲಿಯೂ ಅವ್ಯವಸ್ಥೆಯಾಗಿರಲು ಇದಕ್ಕೆ ಕಾರಣ ನಾದವನ ಚರಿತ್ರೆಯನ್ನು ಆಗಿನವರು ಬರೆದಿಡುವವರಾರು ? ಇದರಿಂದ ಬಸವೇಶ್ವರನ ಚರಿತ್ರೆಯು ಆಗ ಬರೆಯಲ್ಪಟ್ಟಂತೆ ತೋರುವದಿಲ್ಲ. ಆದರೆ ಮುಂದೆ ಒಂದೆರಡು ತಲಾಂತರಗಳು ಸಂದಿ ಹೋದಬಳಿಕ ಅವನ ಚರಿತ್ರೆಗಳು ಬರೆಯಲ್ಪಡಹತ್ತಿದವು. ಅಷ್ಟರಲ್ಲಿ ಅವನ ವಿಷಯವಾಗಿ ಅನೇಕ ಬಗೆಯ ಕಾಲ್ಪನಿಕ ಕಥೆಗಳು ಉತ್ಪನ್ನವಾಗಿದ್ದವು. ಮತ್ತು ಅವುಗಳಲ್ಲಿ ಅವನ ಚರಿತ್ರೆಯ ನಿಜಾಂಶಗಳು ಅಡಗಿಹೋಗಿದ್ದವು. ಮುಂದೆ ಕೆಲವು ಕಾಲದ ಮೇಲೆ ಮಠಾಧಿಕಾರಿಗಳು ಈ ಶಿವಶರಣರ ಬಗ್ಗೆ ಪುರಾಣಗಳನ್ನು ಬರೆಯಹತ್ತಿದರು. ಈ ಪುರಾಣಕರ್ತರು ತಮ್ಮ ಪುರಾಣಗಳ ಮೂಲಕ ಜಂಗಮರ ಮಹತ್ವವನ್ನು ಮತ್ತು ಅವರ ಬಗ್ಗೆ ಅಂಧಶ್ರದ್ಧೆಯನ್ನು ಅಜ್ಞಜನರಲ್ಲಿ ಹೆಚ್ಚಿಸುವ ಉದ್ದಿಶ್ಯವುಳ್ಳವರಾದ್ದರಿಂದ ನಾನಾಬಗೆಯ ಕಟ್ಟು ಕಥೆಗಳನ್ನು ಅವರು ಇವುಗಳಲ್ಲಿ ಸೇರಿಸಿದರು. ಈ ಪ್ರಕಾರ ಮಿತ್ರರೂ, ಶತ್ರುಗಳೂ ಎಲ್ಲರೂ ಕೂಡಿ ಬಸವೇಶ್ವರನು ಮಾಡಿದ ಮಹತ್ಕಾರ್ಯಗಳನ್ನು ಯಾರೂ ಅರಿಯದಂತೆ ಮಾಡಿಬಿಟ್ಟಿದ್ದಾರೆ! ಈತರದ ಪರಿಸ್ಥಿತಿಯು ಹಿಂದುಸ್ತಾನದಲ್ಲಿ ಆಗಿಹೋದ ಒಬ್ಬ ಮಹಾಪುರುಷನ ಚರಿತ್ರೆಯ ಬಗ್ಗೆ ಉಂಟಾಗಿರುವದು ಅತ್ಯಂತ ಖೇದ ಜನಕವಾಗಿದೆ.

ಈ ಸ್ಥಿತಿಯಲ್ಲಿ ಬಸವೇಶ್ವರನ ಚರಿತ್ರೆಯನ್ನು ಯಾವುದಾದರು ಒಂದು ಗ್ರಂಥವನ್ನು ಅವಲಂಬಿಸಿ ಬರೆಯಲಿಕ್ಕೆ ಬರಲಾರದು. ಅವನ ಬಗ್ಗೆ ಹೇಳಿದ ಪ್ರತಿಯೊಂದು ವಿಷಯವನ್ನು ನಾವು ಶೋಧಿಸಬೇಕಾಗಿದೆ. ಈಗ ಯಾವದನ್ನೂ ನಾವು ನಂಬಲಿಕ್ಕೆ ಬರದಂತೆ ಆಗಿದೆ. ಆದರೂ ನಾವು ನಿರಾಶರಾಗುವ ಕಾರಣವಿಲ್ಲ. ಯಾಕಂದರೆ ಅವನ ವಿಷಯವಾಗಿ ಬರೆಯಲ್ಪಟ್ಟ ಗ್ರಂಥಗಳನ್ನು ನಾವು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ಅವುಗಳಲ್ಲಿ

ನಿಜೇತಿಹಾಸದ ಕಣಗಳಿವೆ ಎಂಬದು ತಿಳಿದುಬರುತ್ತದೆ. ಆದರೆ ಈ ಕಣಗಳು ನಿಜವಲ್ಲದ ಸಂಗತಿಗಳಿಂದ ಮುಚ್ಚಿಹೋಗಿರುತ್ತವೆ. ಹೀಗೆ ಆವು ಮರೆಯಾಗಿದ್ದರೂ ಅವುಗಳ ಹೊಳಪು ಹೋಗಲಾರದು. ಇಂಥ ಕಣಗಳನ್ನು ನಾವು ಆಯ್ದುಕೊಳ್ಳಬೇಕು. ಅವುಗಳನ್ನು ಆಯ್ದು ಸರ ಗೊಳಿಸಿ ಪೋಣಿಸುವ ಪ್ರಯತ್ನ ಮಾಡಿದಲ್ಲಿ ಬಸವೇಶ್ವರನ ಚರಿತ್ರೆಯನ್ನು ಬರೆಯುವದು ಶಕ್ಯವಾಗುತ್ತದೆ.

ಹೀಗೆ ಸಿದ್ಧಪಡಿಸಿದ ಚರಿತ್ರೆಯು ಸಣ್ಣದಾಗಬಹುದು. ಆದರೆ ಅದರ ಮಹತ್ವವು ಕಡಿಮೆಯಾಗಲಾರದು. ಈಗ ಸಾಮಾನ್ಯವಾಗಿ ಜನರು ಮಹಾಪುರುಷರ ಜೀವಿತದಲ್ಲಿ ಆಗಿಹೋಗಿರುವ ಸಣ್ಣ ದೊಡ್ಡ ಸಂಗತಿಗಳನ್ನೆಲ್ಲ ತಿಳಿಯಲು ಅಪೇಕ್ಷಿಸುತ್ತಾರೆ. ಆದರೆ ಈ ರೀತಿಯಾಗಿ ಹಿಂದುಸ್ತಾನದಲ್ಲಿಯ ಧಾರ್ಮಿಕ ಪುರುಷರ ಚರಿತ್ರೆಗಳನ್ನು ಬರೆಯು ಲಿಕ್ಕೆ ಬರಲಾರದು. ಈಗಿನವರಂತೆ ಅವರು ತಮ್ಮದನ್ನು ಎಂದೂ ಹೇಳಿಕೊಂಡಿಲ್ಲ. ಈ ಪರಿಸ್ಥಿತಿಯು ಬಸವೇಶ್ವರನ ಚರಿತ್ರೆಯಲ್ಲಿಯೂ ಕಂಡುಬರುತ್ತದೆ. ಈ ಸ್ಥಿತಿಯಲ್ಲಿ ಅವನ ಚರಿತ್ರೆಯಲ್ಲಿ ಅವನು ಆಗಿನ ಕಾಲದಲ್ಲಿ ಯಾವ ಧೋರಣದಿಂದ ನಡೆದನು, ಯಾವ ಕಾರ್ಯಗಳನ್ನು ಕೈಕೊಂಡನು, ಯಾವ ಬಗೆಯ ಕ್ರಾಂತಿಯನ್ನು ಮಾಡಿದನು, ಇವುಗ ಳನ್ನು ಸಾಮಾನ್ಯವಾಗಿ ತಿಳಿಯಲು ಶಕ್ಯವಿರುತ್ತದೆ. ಈ ದೃಷ್ಟಿಯನ್ನು ಮುಖ್ಯವಾಗಿಟ್ಟುಕೊಂಡು ನಾವು ಅವನ ಚರಿತ್ರೆಯನ್ನು ಸಂಶೋಧಿಸ ಬೇಕಾಗಿರುತ್ತದೆ.

ಬಸವೇಶ್ವರನ ಚರಿತ್ರೆಗಳಲ್ಲಿ ಆವ ಸಂಗತಿಗಳು ನಂಬಲು ಅರ್ಹ ವಾದುವು ಎಂಬುದನ್ನು ಕಂಡುಹಿಡಿಯಲಿಕ್ಕೆ ಏನಾದರೂ ಸಾಧನಗಳಿ ವೆಯೋ ಹೇಗೆ ಎಂದು ಅನೇಕರು ಪ್ರಶ್ನೆಮಾಡಬಹುದು. ಅವರಿಗೆ ಇಂಥ ಸಾಧನಗಳು ಈಚೆಗೆ ಉಪಲಬ್ಧವಾಗಹತ್ತಿವೆ ಎಂದು ನಾವು ಹೇಳಬಹುದಾಗಿದೆ. ಅವು ಯಾವವೆಂದರೆ:—

(೧) ಶಿಲಾಶಾಸನಗಳು:— ದೇಶದ ಮತ್ತು ವ್ಯಕ್ತಿಯ ನಿಜಸ್ಥಿತಿ ಯನ್ನು ತಿಳಿಯಲಿಕ್ಕೆ ಇವು ಅತ್ಯುತ್ತಮ ಸಾಧನಗಳಾಗಿವೆ. ಇವು ಐತಿ ಹಾಸಿಕ ಸಂಗತಿಗಳು ಜರಗಿದ ಕಾಲಕ್ಕೆ ಬರೆದವುಗಳಿರುತ್ತವೆ. ಜನ ಸಾಮಾನ್ಯರೆಲ್ಲರು ನೋಡುವಂಥ ಸ್ಥಳದಲ್ಲಿ ಅಂದರೆ ದೇವಾಲಯ ವೊದ

ಲಾದ ಸಾರ್ವಜನಿಕ ಸ್ಥಲಗಳಲ್ಲಿ ಅವು ಇಡಲ್ಪಟ್ಟಿರುತ್ತವೆ. ಆದ್ದರಿಂದ ಅವುಗಳಲ್ಲಿ ಸುಳ್ಳು ಸಂಗತಿಗಳನ್ನು ಅವುಗಳ ಲೇಖಕರು ಬರೆಯುವದು ಶಕ್ಯವಿಲ್ಲ. ಈಚೀಚಿಗೆ ಬಸವೇಶ್ವರನ ಕಾಲದಲ್ಲಾದ ಅನೇಕ ಶಿಲಾಶಾಸನಗಳು ಉಪಲಬ್ಧವಾಗಹತ್ತಿರುತ್ತವೆ. ಅವುಗಳ ಸಹಾಯದಿಂದ ಬಸವೇಶ್ವರನ ಚರಿತ್ರೆಯಲ್ಲಿ ನಂಬಲರ್ಹವಾದ ಸಂಗತಿಗಳಾವವೆಂಬದನ್ನು ನಾವು ಕಂಡು ಹಿಡಿಯುಬಹುದಾಗಿದೆ.

(೨) ವಚನವಾಙ್ಮಯವು-ಬಸವೇಶ್ವರನಿದ್ದ ಕಾಲಕ್ಕೆಯೇ ಈ ವಾಙ್ಮಯವು ಉಚ್ಚಸ್ಥಿತಿಗೆ ಬಂದಿದೆ. ಅವನ ಕಾಲಕ್ಕಿದ್ದ ಶಿವಶರಣರೇ ಅವುಗಳನ್ನು ರಚಿಸಿದ್ದಾರೆ. ಅವುಗಳನ್ನು ನಾವು ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸಿದಲ್ಲಿ ನಿಜವಾದ ಅನೇಕ ಸಂಗತಿಗಳು ಅವುಗಳೊಳಗಿಂದ ಹೊರಬೀಳುವಂತೆ ಇವೆ. ನಮ್ಮ ದೇಶದಲ್ಲಿ ಆಗಿಹೋದ ಮಹಾನುಭಾವರು ಆತ್ಮಚರಿತ್ರೆಯನ್ನು ಬರೆಯಲು ಅಪೇಕ್ಷಿಸದಿದ್ದರೂ ಅವರು ಅಕಸ್ಮಾತ್ತಾಗಿ ತಮ್ಮ ಬಾಯಿಂದ ತಮ್ಮ ಚರಿತ್ರೆಯ ಮೇಲೆ ಪ್ರಕಾಶವನ್ನು ಕೆಡಹುವಂತಹ ಮಾತುಗಳನ್ನು ಆಡುವದುಂಟು. ಅಂಥ ಉಕ್ತಿಗಳು ಆ ಮಹಾನುಭಾವರ ಚರಿತ್ರೆಯ ಮೇಲೆ ವಿಶೇಷ ಪ್ರಕಾಶವನ್ನು ಹರಹುತ್ತಿವೆ.

(೩) ಹರಿಹರನ ರಗಳೆಗಳು—ಹರಿಹರನ ಕಾಲವು ಬಸವೇಶ್ವರನಿಗೆ ಸಮೀಪವಾಗಿರುತ್ತದೆ. ಅವನು ಶಿವಶರಣರ ಅನೇಕ ಚರಿತ್ರೆಗಳನ್ನು ಬರೆದಿರುತ್ತಾನೆ. ಅವುಗಳಿಂದ ಬಸವೇಶ್ವರ ಮೊದಲಾದ ಶಿವಶರಣರ ಚರಿತ್ರೆಗಳ ಮೇಲೆ ಮಹತ್ವದ ಪ್ರಕಾಶವು ಬೀಳುವಂತಿದೆ.

(೪) ಸ್ಥಾನಿಕ ಐತಿಹ್ಯಗಳು ಮತ್ತು ಕುರುಹುಗಳು-ಶಿವಶರಣರು ಯಾವ ಪ್ರಾಂತದಲ್ಲಿ ಅಥವಾ ಗ್ರಾಮದಲ್ಲಿ ಇದ್ದರೆಂಬದನ್ನು ನಾವು ಕಂಡು ಹಿಡಿದು ಆ ಸ್ಥಾನಗಳನ್ನು ನಾವು ನಿರೀಕ್ಷಿಸಬೇಕು. ಅಂದರೆ ಅಲ್ಲಿ ಇರುವ ದೇವಾಲಯಗಳು, ಆ ದೇವಾಲಯಗಳಲ್ಲಿರುವ ಕುರುಹುಗಳು ಇವೇ ಮೊದಲಾದವುಗಳನ್ನು ಪರೀಕ್ಷಿಸಬೇಕು. ಇವುಗಳು ಪುರಾತನ ಕಾಲದ ಪರಿಸ್ಥಿತಿಯ ಮೇಲೆ ಚನ್ನಾಗಿ ಬೆಳಕನ್ನು ಕೆಡಹುತ್ತವೆ.

(೫) ಮಹಾತ್ಮರ ಚರಿತ್ರೆಗಳಲ್ಲಿ ಕೆಲವೊಂದು ಸಂಗತಿಯು ಬಹು ಪುರಾತನಕಾಲದಿಂದ ಈ ವರೆಗೆ ಒಂದೇ ವಿಧವಾಗಿ ನಿರೂಪಿಸಲ್ಪಟ್ಟಿದ್ದು ಕಂಡುಬರುತ್ತದೆ. ಅಂಥವುಗಳನ್ನು ನಾವು ಕೂಡಲೆ ಅವಿಶ್ವಸಿಸಬಾರದು.

ಅವುಗಳ ಬಗ್ಗೆ ಭಿನ್ನ ಮತ್ತು ವಿರುದ್ಧವಾದ ಸಂಗತಿಗಳು ಇದ್ದರೆ ಮಾತ್ರ ಅವುಗಳ ಸತ್ಯತೆಯ ಬಗ್ಗೆ ನಾವು ಅವಶ್ಯವಾಗಿ ಪರೀಕ್ಷಿಸಬೇಕು. ಆದರೆ ಕೆಲವೊಂದು ವಿಷಯದ ಬಗ್ಗೆ ಶಿವಶರಣರ ಕಾಲದಿಂದ ಈ ವರೆಗೆ ಎಲ್ಲ ಗ್ರಂಥಕಾರರ ವಿವರಣೆಗಳು ಮತ್ತು ದಂತಕಥೆಗಳು ಒಂದೇ ವಿಧವಾಗಿದ್ದು ಅವುಗಳನ್ನು ಸಮರ್ಥಿಸಲು ಸ್ಥಾನಿಕ ಕುರುಹುಗಳೂ ಜನರಲ್ಲಿ ಪ್ರವಾದಗಳೂ ಇದ್ದದ್ದಾದರೆ ನಾವು ಅವುಗಳಿಗೆ ಮಹತ್ವಕೊಡಬೇಕು. ವಿರುದ್ಧ ಆಧಾರಗಳು ದೊರೆಯುವ ವರೆಗಾದರೂ ನಾವು ಅವುಗಳನ್ನು ನಂಬಬೇಕು.

ಈ ಎಲ್ಲ ಸಂಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಒಬ್ಬ ವ್ಯಕ್ತಿಯ ಚರಿತ್ರೆಯಲ್ಲಿ ಅನೇಕ ಅದ್ಭುತ ಸಂಗತಿಗಳು ಇದ್ದರೂ ಕೂಡ ಅವುಗಳಲ್ಲಿ ನಿಜವಾದ ಸಂಗತಿಗಳಾವವು ಎಂಬುದನ್ನು ಕಂಡುಹಿಡಿಯಲು ಶಕ್ಯವಾಗುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ನಾವು ಬಸವೇಶ್ವರನ ಚರಿತ್ರೆಯನ್ನು ಈಗಿನ ಮತ್ತು ಮುಂದಿನ ಲೇಖಾಂಕಗಳಲ್ಲಿ ನಿರೂಪಿಸಲು ಪ್ರಯತ್ನಿಸುತ್ತೇವೆ.

ಈಚೆಗೆ ಬಸವೇಶ್ವರನ ಬಗ್ಗೆ ಇಡೀ ಪ್ರಾಂತದಲ್ಲಿ ಆದರ ಭಾವವು ಉತ್ಪನ್ನವಾಗಹತ್ತಿರುತ್ತದೆ. ಆದ್ದರಿಂದ ಅವನ ಚರಿತ್ರೆಯು ಆವುದೆಂಬದನ್ನು ತಿಳಿಯಲು ಬಹುಜನರು ಅಪೇಕ್ಷಿಸುತ್ತಾರೆ. ಆದರೆ ಒಂಭತ್ತು ನೂರು ವರ್ಷಗಳ ತರುವಾಯ ಅವನ ಆಯುಷ್ಯಕ್ರಮದಲ್ಲಿ ಜರಗಿದ ಪ್ರತಿಯೊಂದು ಸಂಗತಿಯನ್ನು ಕಂಡುಹಿಡಿದು ವರ್ಣಿಸುವದು ಅಶಕ್ಯವೇ ಸರಿ. ಆದರೂ ಅವನು ಮಾಡಿದ ಮುಖ್ಯ ಕಾರ್ಯಗಳಾವವು, ಅವುಗಳನ್ನು ಅವನು ಹೇಗೆ ಜರಿಗಿಸಿದನು, ಇವುಗಳ ಬಗ್ಗೆ ಏಕಮತವಿರುವದು ಅವಶ್ಯವು. ಇಂಥ ಸಂಗತಿಗಳನ್ನು ಕುರಿತು ನಾವು ಈ ಲೇಖಮಾಲೆಯಲ್ಲಿ ಪ್ರಸ್ತಾಪಿಸುತ್ತೇವೆ.

### ಬಸವೇಶ್ವರನು ಐತಿಹಾಸಿಕ ಪುರುಷನು.

ಬಸವೇಶ್ವರನ ಚರಿತ್ರೆಯಲ್ಲಿ ನಾವು ಸಿದ್ಧಪಡಿಸತಕ್ಕ ಮೊದಲನೆಯ ವಿಷಯವು ಅವನು ಐತಿಹಾಸಿಕ ಪುರುಷನೋ ಹೇಗೆಂಬುದಿದೆ. ಆ ಪ್ರಶ್ನೆಯು ಅನೇಕರಿಗೆ ಆಶ್ಚರ್ಯವನ್ನುಂಟುಮಾಡಬಹುದು. ಆದರೆ ಅವನು ಐತಿಹಾಸಿಕ ಪುರುಷನಿರದೆ ಕಾಲ್ಪನಿಕ ಪುರುಷನೆಂಬ ತಿಳುವಳಿಕೆಯು ಮೊದಲಿಗೆ ರೂಢವಾಗಿದ್ದಿತು. ಈ ತರದ ಸಂಶಯವನ್ನು ಗತಿಸಿದ

ಫ್ಲೀಟಸಾಹೇಬರವರೇ ವಹಿಸಿದ್ದಾರೆ. ಅವರು ಪ್ರಸಿದ್ಧ ಇತಿಹಾಸ ಸಂಶೋಧಕರು. ಅವರು ಕರ್ನಾಟಕದಲ್ಲಿರುವ ವರೆಗೆ ಬಸವೇಶ್ವರನ ಉಲ್ಲೇಖವಿದ್ದ ಒಂದಾದರೂ ಶಿಲಾಶಾಸನವು ಅವರಿಗೆ ದೊರೆಯಲಿಲ್ಲ. ಉತ್ತರಕ್ಕೆ ಸೊಲ್ಲಾಪೂರ ಜಿಲ್ಲೆಯಿಂದ ದಕ್ಷಿಣಕ್ಕೆ ಶಿವಮೊಗ್ಗೆ ಜಿಲ್ಲೆಯ ವರೆಗೆ ಬಿಜ್ಜಳನ ಉಲ್ಲೇಖವಿದ್ದ ಅಸಂಖ್ಯ ಶಿಲಾಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಅವನ ಕೈಕೆಳಗಿರುವ ಅನೇಕ ದಂಡಾಧಿಪತಿಗಳ, ಮಂತ್ರಿಗಳ ಮತ್ತು ಮಹಾಮಂಡಲೇಶ್ವರರ ಉಲ್ಲೇಖಗಳಿರುತ್ತವೆ. ಬಹು ಪ್ರಸಿದ್ಧರಾದ ಕೇಶಿರಾಜ ಬರ್ಮದೇವ ದಂಡನಾಯಕರು, ದಂಡನಾಯಕ ಸಿದ್ದಪ್ಪಯ್ಯ, "ಮಹಾಪ್ರಧಾನ ಸೇನಾಧಿಪತಿ ದಂಡನಾಯಕ ಕೈಲಾರಯ್ಯ" ಸಚಿವನಾದ ಬಲದೇವ, ಇವರೇ ಮೊದಲಾದವರ ಹೆಸರುಗಳು ಅವುಗಳಲ್ಲಿ ಬಂದಿರುತ್ತವೆ. ಆದರೆ ಇಂಥವರ ಹೆಸರುಗಳೊಡನೆ ಪ್ರಧಾನ ಮತ್ತು ದಂಡನಾಯಕನೆಂದೆನಿಸಿಕೊಂಡ ಬಸವೇಶ್ವರನ ಹೆಸರು ಬಂದಿರುವದಿಲ್ಲ. ಈ ಸಂಗತಿಯು ಬಸವೇಶ್ವರನ ಅಸ್ತಿತ್ವದ ಬಗ್ಗೆ ಫ್ಲೀಟಸಾಹೇಬರಲ್ಲಿ ಸಂಶಯವನ್ನುಂಟುಮಾಡಿರುತ್ತದೆ. ಮುಂದೆ ಅಬ್ಬಲೂರಿನಲ್ಲಿರುವ ಏಕಾಂತದ ರಾಮಯ್ಯನ ಶಿಲಾಶಾಸನವು ಉಪಲಬ್ಧವಾಯಿತು. ಆಗ ಅವರು ವೀರಶೈವ ಧಾರ್ಮಿಕ ಚಳವಳಿಯನ್ನು ಮೊದಲು ಪ್ರಾರಂಭಿಸಿದವನು ಏಕಾಂತರಾಮಯ್ಯನೆಂದು ಭಾವಿಸಿದರು. ಮುಂದೆ ಅವರು ನಿವೃತ್ತರಾದ ಬಳಿಕ ಮನಗೂಳಿಯ ಶಿಲಾಶಾಸನವು ಅವರ ದೃಷ್ಟಿಪಥಕ್ಕೆ ಬಿದ್ದಿತು. ಅದರಲ್ಲಿ ಉಲ್ಲೇಖಿಸಲ್ಪಟ್ಟ ಬಸವನೇ ವೀರಶೈವ ಧರ್ಮೋದ್ಧಾರ ಮಾಡಿದ ಬಸವನೆಂದು ಭಾವಿಸಿದರು. ಆದರೆ ಈ ಮನಗೂಳಿಯ ಬಸವನು ಕಾಳಾಮುಖನಾಗಿದ್ದನೆಂಬುದೂ ಅದರಲ್ಲಿ ಉಲ್ಲೇಖಿಸಲ್ಪಟ್ಟ ಅವನ ಮಾತಾಪಿತರುಗಳು ತೀರ ಬೇರೆ ಇರುವರೆಂಬುದೂ ಅವರ ಲಕ್ಷಕ್ಕೆ ಬಂದಿರಲಿಲ್ಲ. ಈ ಎಲ್ಲ ಸಂಗತಿಗಳು ಬಸವೇಶ್ವರನ ಅಸ್ತಿತ್ವದ ಬಗ್ಗೆ ಸಂಶಯವನ್ನುಂಟು ಮಾಡಲು ಕಾರಣವಾದವು.

ಆದರೆ ಈಚೆಗೆ ಉಪಲಬ್ಧವಾಗಿರುವ ಶಿಲಾಲೇಖಗಳ ಮೂಲಕ ಬಸವೇಶ್ವರನ ಅಸ್ತಿತ್ವದ ಬಗ್ಗೆ ಸಂದೇಹಕ್ಕೆ ಎಡೆ ಇಲ್ಲದಂತಾಗಿರುತ್ತದೆ. ಚೌಡದಾನಪುರದ ಶಿಲಾಶಾಸನದಲ್ಲಿ "ಸಂಗಮೇಶನ ಪುತ್ರಂ ಬಸವಯ್ಯ" ಎಂದು ಸ್ಪಷ್ಟವಾದ ಉಲ್ಲೇಖವಿದೆ. ಮುಂದೆ ಅರ್ಜುನವಾಡದ ಶಿಲಾಲೇಖದಲ್ಲಿ "ಸಂಗನಬಸವ" ಎಂದು ಅವನ ಉಲ್ಲೇಖವು ದೊರೆತಿರು

ತ್ತದೆ. ಈ ಎರಡೂ ಶಾಸನಗಳು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಗಳಲ್ಲಿ ಸವಿಸ್ತಾರವಾಗಿ ಚರ್ಚಿಸಲ್ಪಟ್ಟಿರುತ್ತವೆ. ಇವಲ್ಲದೆ ಇನ್ನೂ ಕೆಲವು ಶಿಲಾಶಾಸನಗಳಲ್ಲಿ ಬಸವೇಶ್ವರನ ಹೆಸರು ಉಪಲಬ್ಧವಿರುತ್ತದೆ. ೧೨೦೦ನೇ ಇಸ್ವಿಯ ಮರಡಿಪುರ ಶಾಸನದಲ್ಲಿ "ದಾಸವರ್ಯ, ಕುಂಬಾರ ಗುಂಡ, ಭೋಗದೇವ, ಕೇಶರಾಜ, ಸಂಗನಬಸವಯ್ಯ, ಸೊನ್ನಲಿಗೆಯ ರಾಮಯ್ಯ" ಎಂದು ಉಲ್ಲೇಖಗಳಿರುತ್ತವೆ. ಚಿತ್ರಕಲ್‌ದುರ್ಗ ಜಿಲ್ಲೆಯಲ್ಲಿ ಕಲ್ಲೇದೇವರಪುರ ಎಂಬ ಗ್ರಾಮದಲ್ಲಿಯ ಯಾದವರಾಜರ ಶಿಲಾಶಾಸನದಲ್ಲಿ ಚಿಕ್ಕ, ಕಕ್ಕ, ಬಸವರಾಜ ಈ ಮೊದಲಾದ 'ಮರ್ತ್ಯಲೋಕದ ಮಹಾಗಣಾಚಾರ" ಎಂದು ಇವರೆಲ್ಲರು ಹೇಳಲ್ಪಟ್ಟಿದ್ದಾರೆ. ಅರಸಿಕೆರೆ ಹಿರಿಯೂರು ಶಾಸನದಲ್ಲಿ "ಬಸವಯ್ಯ ಸಿಂಧು ಬಲ್ಲಾಳ ಧರೆ ಕೊಂಡಾಡುವ ದಾಸಿಮಯ್ಯ" ಎಂದು ಈ ಶರಣರು ಉಲ್ಲೇಖಿಸಲ್ಪಟ್ಟಿದ್ದಾರೆ. ಈ ಶಾಸನಗಳು ದೊರೆತಿರುವದರಿಂದ ಬಸವೇಶ್ವರನು ಐತಿಹಾಸಿಕ ಪುರುಷನೆಂಬುದರ ಬಗ್ಗೆ ಆವ ಸಂಶಯುವೂ ಈಗ ಉಳಿದಿರುವದಿಲ್ಲ. ಬಸವೇಶ್ವರನಿಗೆ ಸಂಬಂಧಿಸಿದ ಮೇಲೆ ಕಾಣಿಸಿದ ಶಿಲಾಲೇಖಗಳು ವಿಜಾಪುರ, ಧಾರವಾಡ, ಚಿತ್ರಕಲ್‌ದುರ್ಗ, ಹಾಸನ, ಈಪ್ರಕಾರ ದೂರ ದೂರ ಪ್ರದೇಶಗಳಲ್ಲಿ ಉಪಲಬ್ಧವಾದವುಗಳಿರುತ್ತವೆ. ಇದರ ಮೇಲಿಂದ ಬಸವೇಶ್ವರನ ಪ್ರಖ್ಯಾತಿಯು ಕರ್ನಾಟಕದ ಬಹು ಭಾಗದಲ್ಲಿ ಹಬ್ಬಿತ್ತೆಂಬುದು ಸ್ಪಷ್ಟವಾಗುತ್ತದೆ. ಈ ಶಿಲಾಶಾಸನಗಳಲ್ಲಿ ಅವನು ಒಳ್ಳೇ ಮಹತ್ವಿಕ ಪುರುಷನೆಂದು ಭಾವಿಸಲ್ಪಟ್ಟಿದ್ದು ಅವುಗಳಲ್ಲಿರುವ ವರ್ಣನೆಗಳಿಂದ ಕಂಡುಬರುತ್ತದೆ. ಆದ್ದರಿಂದ ಬಸವೇಶ್ವರನು ೧೨ನೇ ಶತಮಾನದಲ್ಲಿ ನಿಜವಾಗಿ ಪ್ರಸಿದ್ಧಿಗೆ ಬಂದನೆಂಬುದು ನಿರ್ವಿವಾದವಾದ ಸಂಗತಿಯಾಗಿದೆ. ಆದರೆ ಕರ್ನಾಟಕದಲ್ಲಿರುವ ಶಿಲಾಶಾಸನಗಳು ಇನ್ನೂ ಪೂರ್ಣವಾಗಿ ಶೋಧಿಸಲ್ಪಟ್ಟಿಲ್ಲ. ಒಂದುವೇಳೆ ಶೋಧಿಸಿದ್ದಾದರೆ ಬಸವೇಶ್ವರನ ಚರಿತ್ರೆಯ ಮೇಲೆ ಮಹತ್ವದ ಪ್ರಕಾಶವನ್ನು ಕೆಡಹುವಂಥ ಶಾಸನಗಳು ನಮಗೆ ಇನ್ನೂ ಹೆಚ್ಚಿಗೆ ದೊರೆಯಬಹುದೆಂದು ಭಾವಿಸುತ್ತೇವೆ.

(ಮುಂದುವರಿಯುವದು.)

# ಸ್ಫುಟ ವಿಷಯಗಳು.

## ಪ್ರಕೃತ ಸಂಚಿಕೆಯಲ್ಲಿಯ ಲೇಖಗಳು ಮತ್ತು ಗ್ರಂಥಗಳು:-

ಈ ಸಂಚಿಕೆಯಲ್ಲಿಯ ಪುಟಗಳು ೧೨೮ ಇದ್ದು, ಈ ವರ್ಷಾಂತ್ಯದಲ್ಲಿ ಈವರೆಗೆ ಕಡಿಮೆಯಾದ ಪುಟಗಳೆಲ್ಲವನ್ನು ನಾವು ಪೂರ್ತಿಮಾಡುವೆವೆಂದು ವಾಚಕರಿಗೆ ಭರವಸೆಯನ್ನು ಕೊಡುತ್ತಾ ಇದ್ದೇವೆ. ನಮ್ಮ ಪ್ರೆಸ್ಸಿನ ಸಹಾಯವಿಲ್ಲದೆ ಶಿವಾನುಭವ ಪತ್ರಿಕೆಯನ್ನು ನಡಿಸುವದು ಅಶಕ್ಯವಾಗಿರುತ್ತದೆಂದು ಹೇಳಲು ವಿಷಾದಿಸುತ್ತೇವೆ. ಆದ್ದರಿಂದ ಅದರ ಹಿತಾಹಿತಗಳನ್ನು ನಾವು ಲಕ್ಷಿಸುವದು ಬಹು ಅವಶ್ಯವಾಗಿರುತ್ತದೆ. ಒಂದು ವೇಳೆ ಪತ್ರಿಕೆಗೆ ಚಂದಾದಾರರ ಪೂರ್ಣ ಸಹಾಯವಿದ್ದಿದ್ದಾದರೆ ಈ ನಕಿಂತಲೂ ನಾವು ಎಷ್ಟೋ ಪಾಲು ಹೆಚ್ಚಾಗಿ ಕಾರ್ಯಗಳನ್ನು ಮಾಡಬಹುದಾಗಿತ್ತು ಆದರೆ ವೀರಶೈವ ಸಮಾಜದ ಸದ್ಯದ ಪರಿಸ್ಥಿತಿಯ ಮೂಲಕ ಇದು ಅಶಕ್ಯವಾಗಿದ್ದು, ವಾಙ್ಮಯ ಕಾರ್ಯವು ಮಂದವಾಗಿ ಸಾಗಬೇಕಾಗಿರುತ್ತವೆ. ಈಗಿನ ಸಂಚಿಕೆಯಲ್ಲಿ ಬಂದ ವಿಷಯಗಳನ್ನು ಕುರಿತು ಕೆಲವು ವಿವರಣೆಗಳನ್ನು ನಾವು ಇಲ್ಲಿ ವಾಚಕರೆದುರಿಗೆ ಇಡಲು ಅಪೇಕ್ಷಿಸಿದ್ದೇವೆ.

**ಸಟೀಕ ಏಕೋತ್ತರ ಶತಸ್ಥಲ:—** ಈ ಪತ್ರಿಕೆಯಲ್ಲಿ ಇದೊಂದು ಹೊಸ ಗ್ರಂಥವನ್ನು ಪ್ರಾರಂಭಿಸಿದ್ದೇವೆ. ಏಕೋತ್ತರಶತಸ್ಥಲವು ಷಟ್ಸ್ಥಲಶಾಸ್ತ್ರದ ಒಂದು ಮಹತ್ವದ ಭಾಗವಾಗಿದೆ. ಕನ್ನಡ ಭಾಷೆಯಲ್ಲಿ ಈ ವಿಷಯದ ಮೇಲೆ ನಮಗೆ ದೊರಕಿರುವ ಗ್ರಂಥಗಳಲ್ಲಿ ಈಗಿನದು ಬಹಳ ಮಹತ್ವದ್ದಾಗಿದೆ. ವಿಜಯನಗರದ ರಾಜನಾದ ದೇವರಾಯನ ಓಲಗದಲ್ಲಿದ್ದ ಜಕ್ಕಣಾರ್ಯನು ರಚಿಸಿದ ಏಕೋತ್ತರಶತಸ್ಥಲವು ಪ್ರಸಿದ್ಧವಾಗಿದೆ. ವಚನಶಾಸ್ತ್ರಸಾರ ಭಾಗ ೨ ಇದರಲ್ಲಿರುವ ಏಕೋತ್ತರಶತಸ್ಥಲವು ಈ ಗ್ರಂಥವನ್ನು ಅನುಸರಿಸಿರುತ್ತದೆ. ಆದರೆ ಈಗ ನಾವು ಪ್ರಕಟಿಸಿರುವ ಗ್ರಂಥದಲ್ಲಿ ಈ ವಿಷಯದ ವಿವೇಚನೆಯು ಜಕ್ಕಣಾರ್ಯನ ಗ್ರಂಥಕ್ಕಿಂತಲೂ ಹೆಚ್ಚು ವಿಸ್ತಾರವಾಗಿ ಮಾಡಲ್ಪಟ್ಟಿರುತ್ತದೆ. ಶಿವಾನುಭವ ಗ್ರಂಥಮಾಲೆಯಲ್ಲಿ 'ಸಿದ್ಧಲಿಂಗೇಶ್ವರ ಏಕೋತ್ತರಶತಸ್ಥಲ' ಎಂಬ

ಮಹತ್ವದ ಗ್ರಂಥವಿದೆ. ಅದರಲ್ಲಿರುವ ಸೂತ್ರ ಮತ್ತು ಪದಗಳ ಮೇಲೆಯೇ ವಿಸ್ತೃತ ಟೀಕೆಯು ಈ ಗ್ರಂಥದಲ್ಲಿ ಮಾಡಲ್ಪಟ್ಟಿರುತ್ತದೆ. ವಾಚಕರು ಇದರಲ್ಲಿಯ ನಿರೂಪಣೆಗಳನ್ನು ಓದಿದಲ್ಲಿ ಇದು ಒಂದು ಮೇಲ್ತರದ ಗ್ರಂಥವೆಂದು ಅವರಿಗೆ ಮನವರಿಕೆಯಾಗದೆ ಇರದು.

**ಅವಧೂತ ಗೀತೆ**— ೧೫ನೆಯ ಶತಮಾನದ ಮಧ್ಯಕಾಲದಲ್ಲಿ ವಿಜಯನಗರದ ದೇವರಾಯನ ಕಾಲದಲ್ಲಿ ಪ್ರಸಿದ್ಧಿಗೆ ಬಂದ ಗುರು ಬಸವ ಕವಿಯಿಂದ ಇದು ರಚಿತವಾಗಿದೆ. ಇವನು ಶಿವಯೋಗಾಂಗ ವಿಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭ ಗೀತೆ, ಅವಧೂತಗೀತೆ ಮತ್ತು ಮನೋವಿಜಯ ಎಂಬ ಕಾವ್ಯಗಳನ್ನು ರಚಿಸಿದ್ದಾನೆ. ಇವೆಲ್ಲವು ಕನ್ನಡ ಭಾಷೆಯಲ್ಲಿ ಉಚ್ಚ ಪ್ರತಿಯ ಗ್ರಂಥಗಳು. ಇವುಗಳಲ್ಲಿ ಮನೋ ವಿಜಯ ಕಾವ್ಯವು ಈ ಮೊದಲೇ ಪ್ರಸಿದ್ಧವಾಗಿದೆ. ಉಳಿದ ೫ ಕಾವ್ಯಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸುತ್ತಾ ಹೋಗುವೆವು. ಈ ಸಂಚಿಕೆಯಲ್ಲಿ ನಾವು 'ಅವಧೂತಗೀತೆ' ಎಂಬುದನ್ನು ಪ್ರಾರಂಭಿಸಿದ್ದೇವೆ. ಇದು ಚೌಪದಿಯಲ್ಲಿ ಬರೆಯಲ್ಪಟ್ಟಿರುತ್ತದೆ. ಇದು ಬಹು ಪ್ರೌಢ ಗ್ರಂಥವೆಂಬದು ವಾಚಕರಿಗೆ ಗೊತ್ತಾಗದೆ ಇರದು.

**ಹಡಪದಪ್ಪಣ್ಣನ ಕೆಲವು ಕೃತಿಗಳು**— ಹಡಪದಪ್ಪಣ್ಣನು ಬಸವೇಶ್ವರನ ಸಮಕಾಲೀನನು. ಅವನು ಸ್ವರವಚನ ಮತ್ತು ಮಂತ್ರ ಗೋಪ್ಯ ಎಂದು ಹಾಡಿನ ರೂಪದಲ್ಲಿ ವೀರಶೈವ ತತ್ವಗಳನ್ನು ನಿರೂಪಿಸಿದ್ದಾನೆ. ಇವೆರಡರಲ್ಲಿಯೂ "ಬಸವಪ್ರಿಯ ಕೂಡಲಚನ್ನಸಂಗಮ ದೇವಾ" ಎಂಬ ಅವನ ಮುದ್ರಿಕೆಯು ಇವೆ. ಸಾಧುಗಳು ಮತ್ತು ವಚನಕಾರರು ಎರಡನೆಯವರ ಮುದ್ರಿಕೆಗಳನ್ನು ತಮ್ಮ ಕೃತಿಗಳಲ್ಲಿ ಉಪಯೋಗಿಸುವದು ಕಂಡು ಬರುವದಿಲ್ಲ. ಆದ್ದರಿಂದ ಈ ಎರಡೂ ಹಾಡಗಳು ಹಡಪದಪ್ಪಣ್ಣನು ರಚಿಸಿದವುಗಳೇ ಇರಬೇಕೆಂದು ನಾವು ಅನುಮಾನ ಮಾಡುತ್ತೇವೆ.

**ಹರಳಯ್ಯನ ತ್ರಿವಿಧಿ**— ಈ ಗ್ರಂಥವು ಈ ಸಂಚಿಕೆಯಲ್ಲಿ ಪೂರ್ಣವಾಗಿ ಮುಗಿದಿರುತ್ತದೆ.

**ಹರಿಹರನ ರಗಳೆಗಳು**:— ಇದರಲ್ಲಿ 'ವೀರಭದ್ರನ ರಗಳೆಯು' ಪ್ರಾರಂಭವಾಗಿದೆ. ಇದು ವೀರರಸ ಪ್ರಧಾನವಾದದ್ದು. ಹರಿಹರನು

ಮೀಗಿಲಾದ ವರ್ಣನಾ ಶಕ್ತಿಯುಳ್ಳವನು. ಅವನ ರಗಳೆಗಳಲ್ಲಿ ಭಕ್ತಿರಸ, ಶೃಂಗಾರರಸ, ಕರುಣರಸ ಇವುಗಳನ್ನು ನಾವು ಹೇರಳವಾಗಿ ಕಾಣಬಹುದು. ಅವುಗಳಂತೆಯೇ ಅವನು ವೀರರಸವನ್ನು ಕೂಡ ಅತ್ಯುತ್ತಮವಾಗಿ ವರ್ಣಿಸಬಲ್ಲನೆಂಬದು ಈಗಿನ ರಗಳೆಯಿಂದ ಚನ್ನಾಗಿ ತಿಳಿದುಬರುವಂತಿದೆ.

**ಸೊಡ್ಡಳ ಬಾಚರಸನ ವಚನಗಳು**— ನಮಗೆ ದೊರೆದ ಚಿಕ್ಕ ಚಿಕ್ಕ ವಚನಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸುತ್ತಾ ಇದ್ದೇವೆ. ಸೊಡ್ಡಳ ಬಾಚರಸನು ಬಿಜ್ಜಳನ ಒಬ್ಬ ಸೈನ್ಯಾಧಿಕಾರಿಯಾಗಿದ್ದನು. ಆವನು ಬಸವನ ಸಮಕಾಲೀನನು. ಅವನ ವಚನಗಳನ್ನು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಲು ಪ್ರಾರಂಭಿಸಿರುತ್ತೇವೆ. ಅವು ಹೆಚ್ಚಿನ ತರಗತಿಯವಿರುತ್ತವೆಂಬುದು ವಾಚಕರಿಗೆ ಗೊತ್ತಾಗದೆ ಇರದು. ಶಕ್ಯವಿದ್ದಷ್ಟರ ಮಟ್ಟಿಗೆ ಅವನ ವಚನಗಳನ್ನು ಷಟ್‍ಸ್ಥಲಕ್ಕನುಸರಿಸಿ ಜೋಡಣೆಯನ್ನು ಮಾಡಿ ಇಲ್ಲಿ ಪ್ರಸಿದ್ಧಿಸಿದ್ದೇವೆ.

**ಶಿವಾನುಭವ ಶಬ್ದಕೋಶಃ**— ಈ ಗ್ರಂಥವನ್ನು ನಾವು ಆರಂಭಿಸುವ ಪೂರ್ವದಲ್ಲಿ ಇದೊಂದು ಚಿಕ್ಕ ಕೈಪಿಡಿಯಾಗಬಹುದೆಂದು ಎಣಿಸಿದ್ದೆವು. ಆದರೆ ಈ ಕಾರ್ಯವನ್ನು ಕೈಕೊಂಡಬಳಿಕ ಶಿವಾನುಭವ ಶಬ್ದಗಳು ಬೇರೆ ಬೇರೆ ಸಂದರ್ಭಗಳಲ್ಲಿ ಭಿನ್ನ ಭಿನ್ನ ಅರ್ಥಗಳುಳ್ಳವುಗಳಿರುವೆಂಬದು ನಮಗೆ ತೋರಿಬರಹತ್ತಿತು. ಆದ್ದರಿಂದ ಆ ಸಂದರ್ಭಗಳನ್ನೆಲ್ಲ ವಿವೇಚಿಸಿ ಶಬ್ದಗಳ ಅರ್ಥವನ್ನು ನಿರೂಪಿಸುವ ಪ್ರಸಂಗವು ನಮಗೆ ಬಂದೊದಗಿದೆ. ಇದರಿಂದ ನಾವು ಇಡೀ ವೀರಶೈವ ಸಿದ್ಧಾಂತವನ್ನೇ ಇಲ್ಲಿ ವಿವೇಚಿಸುವ ಭಾರವು ನಮ್ಮ ಮೇಲೆ ಬಂದು ಬಿದ್ದಿದೆ. ಆದರೆ ಈ ಕಾರ್ಯವನ್ನು ನಾವು ಆದಷ್ಟು ಸಂಕ್ಷಿಪ್ತವಾಗಿ ಮಾಡಬೇಕಾಗಿರುತ್ತದೆ. ಶಕ್ಯವಿದ್ದಷ್ಟರ ಮಟ್ಟಿಗೆ ಅರ್ಥವು ಅಸ್ಪಷ್ಟವಾಗದಂತೆ ಸಂದರ್ಭಕ್ಕನುಸರಿಸಿ ಆಯಾ ಶಬ್ದಗಳ ಅರ್ಥನಿರೂಪಣೆ ಮಾಡಬೇಕಾಗಿದೆ. ಈ ವಿಷಯವು ಎಲ್ಲಿಯವರೆಗೆ ಮುಂದುವರಿಯುವದೆಂಬುದು ನಮಗೆ ಈಗ ಹೇಳದಂತಾಗಿದೆ. ಆದರೂ ಗ್ರಂಥವನ್ನು ವಿಸ್ತಾರಪಡಿಸದೆ ಸ್ವಲ್ಪದರಲ್ಲಿಯೇ ಮುಗಿಸಲು ಪ್ರಯತ್ನಿಸುವೆವು.

**ಲೇಖಗಳುಃ**— ಮೇಲ್ಕಂಡ ಗ್ರಂಥಗಳಲ್ಲದೆ ಕೆಲವು ಮಹನೀಯರಿಂದ ಬರೆಯಲ್ಪಟ್ಟ ಮಹತ್ವದ ಲೇಖಗಳೂ ಇದರಲ್ಲಿ ಬಂದಿವೆ. ಲಿಂಗ

ಧಾರಣ ಮತ್ತು ಪಾದೋದಕ ಈ ವಿಷಯಗಳು ಚರ್ಚೆಗಳಿಗೆ ಸ್ಥಾನವಾಗಿ ನಿರೂಪಿಸಲ್ಪಟ್ಟಿರುತ್ತವೆ. ವೀರಶೈವ ಮತತತ್ವಗಳ ನಿರೂಪಣೆಯನ್ನು ಇಂಥ ಚರ್ಚೆಗಳ ಮೂಲಕ ನಡಿಸಲು ಒಂದು ಉತ್ತಮ ಸಾಧನವಾಗಿರುತ್ತದೆ. ಈ ವರೆಗೆ ಇಂಥ ವಿಷಯಗಳ ಚರ್ಚೆಗಳು ಅತ್ಯುಚ್ಚರೀತಿಯಿಂದ ಪತ್ರಿಕೆಯಲ್ಲಿ ನಡೆಯುತ್ತಬಂದಿದ್ದು ಸಮಾಧಾನಕರವಾಗಿದೆ. ಇನ್ನುಮುಂದೆ ನಿರೂಪಣೆಯಲ್ಲಿ ಹೊಸ ವಿಷಯಗಳು ಬಾರದೆ ಇದ್ದಲ್ಲಿ ಈ ಚರ್ಚೆಗಳನ್ನು ಅಲ್ಲಿಯೇ ನಿಲ್ಲಿಸುವದು ಯೋಗ್ಯವೆಂದು ನಮಗೆ ತೋರಹತ್ತಿದೆ.

ಬಸವೇಶ್ವರನ ಚರಿತ್ರೆಯನ್ನು ಚರ್ಚಿಸುವ ಹೊಸ ವಿಷಯವನ್ನು ನಾವು ಈಗ ಕೈಕೊಂಡಿದ್ದೇವೆ. ಆದರಲ್ಲಿ ಬರುವ ವಿಷಯಗಳನ್ನು ವಾಚಕರು ಅವಗಾಹನೆಗೆ ತಂದುಕೊಂಡು ಈ ಮಹತ್ವದ ವಿಷಯದ ಸಂಶೋಧನೆಯ ಕಾರ್ಯವನ್ನು ವಾಚಕರು ಮುಂದುವರಿಸವರೆಂದು ನಾವು ಬಿನ್ನವಿಸಿಕೊಳ್ಳುತ್ತೇವೆ.

ಮೇಲ್ಕಂಡ ನಿರೂಪಣೆಗಳಿಂದ ಶಿವಾನುಭವ ಪತ್ರಿಕೆಯು ತಾನು ಕೈಕೊಂಡ ಕಾರ್ಯವನ್ನು ಎಂದಿನಂತೆ ತನ್ನ ಧ್ಯೇಯವನ್ನು ಬಿಡದೆ ಮುಂದುವರಿಸುತ್ತಿದೆ ಎಂಬುದು ವಾಚಕರ ಲಕ್ಷಕ್ಕೆ ಬರದೆ ಇರಲಾರದೆಂದು ನಾವು ಭಾವಿಸಿದ್ದೇವೆ.

**ಶ್ರೀಸಿದ್ಧರಾಮೇಶ್ವರನ ಜಯಂತಿ ದಿನವು** – ವೀರಶೈವ ಶಿವಶರಣರಲ್ಲಿ ಶ್ರೀ ಸಿದ್ಧರಾಮೇಶ್ವರನು ಬಹು ಉನ್ನತ ಸ್ಥಾನವನ್ನು ಹೊಂದಿದ್ದಾನೆ. ಅವನು ಬಸವೇಶ್ವರನ ಸಮಕಾಲೀನನಾಗಿ ಶಿವಾನುಭವ ಮಂಟಪದಲ್ಲಿ ನಡೆಯುತಿದ್ದ ಶಿವಾನುಭವ ಗೋಷ್ಠಿಗಳಲ್ಲಿ ಭಾಗವಹಿಸಿ ಶಿವಶರಣರ ಅತ್ಯಂತ ಆದರಕ್ಕೆ ಪಾತ್ರನಾಗಿದ್ದನು. ಅವನು ಸೊಲ್ಲಾಪುರ ಪಟ್ಟಣವನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡು ಮುಂದೆ ಬಸವೇಶ್ವರ ಚನ್ನಬಸವೇಶ್ವರರ ತರುವಾಯ ಜಗದ್ಗುರುವೆಂದೆನಿಸಿಕೊಂಡನು. ಹರಿಹರನು ತನ್ನ ರಗಳೆಯಲ್ಲಿ ಈತನನ್ನು 'ಜಗದ್ಗುರು' ಎಂದು ಕರೆದಿದ್ದಾನೆ. ಇವನ ಉಲ್ಲೇಖವಿರುವ ಕೆಲವು ಶಿಲಾಶಾಸನಗಳು ಹಾವೇರಿ ತಾಲೂಕು ಮತ್ತು ಶಿವಮೊಗ್ಗಾ ಜಿಲ್ಲೆಗಳಲ್ಲಿ ಈಚೆಗೆ ಉಪಲಬ್ಧವಾಗಿದ್ದು ಅವು ಶಿವಾನುಭವ ಪತ್ರಿಕೆಯಲ್ಲಿ ಈ ಮೊದಲಿಗೆ ಪ್ರಸಿದ್ಧವಾಗಿವೆ. ಸಿದ್ಧರಾಮೇಶ್ವರನ ದೇವಸ್ಥಾನಗಳು ಗೋಡೆಕೆರೆ, ಯಳನಡು, ಭಟ್ಟರಹಳ್ಳಿ, ತಮ್ಮಡಿಹಳ್ಳಿ, ಸುಂಟರಮಳೆ, ಹಾವೇನಹಳ್ಳಿ, ಸಿದ್ರಾಮದೇವರಹಳ್ಳಿ, ಮಾದಿಹಳ್ಳಿ,

ಸುಂಕದಹಳ್ಳಿ, ಅರಸಿಕೆರೆ ಈ ಮೊದಲಾದ ಕಡೆಯಲ್ಲಿ ಇರುತ್ತವೆ. ಈ ಗ್ರಾಮಗಳು ತುಮಕೂರ ಜಿಲ್ಹೆಯಲ್ಲಿದ್ದು ಸಿದ್ಧರಾಮೇಶ್ವರನು ಈ ಭಾಗದಲ್ಲಿ ಕೆಲಕಾಲ ವಾಸಿಸಿದ್ದನೆಂದು ತೋರುತ್ತದೆ. ಈಚೆಗೆ ಈ ಭಾಗದ ಮಹಾಜನರು ಈತನ ಜಯಂತಿಯನ್ನು ಆಚರಿಸಬೇಕೆಂದು ಅಪೇಕ್ಷಿಸುತ್ತಿರುವುದು ಅಭಿನಂದನೀಯವಾಗಿದೆ. ತಿಪಟೂರಿನ ಶ್ರೀಯುತ ಎಸ್. ಆರ್. ಮಲ್ಲಪ್ಪ ಇವರು ಸಿದ್ಧರಾಮೇಶ್ವರನ ಜನ್ಮ ದಿನವನ್ನು ತಮಗೆ ತಿಳಿಸಬೇಕೆಂದು ನಮಗೆ ಅಪೇಕ್ಷಿಸಿದರು. ಆದರೆ ಈ ಉಲ್ಲೇಖವು ಯಾವ ಗ್ರಂಥದಲ್ಲಿಯೂ ಉಪಲಬ್ಧವಿರುವದಿಲ್ಲ. ಆದರೆ ಸಿದ್ಧರಾಮೇಶ್ವರನ ಜಾತ್ರೆಯು ಸೊಲ್ಲಾಪುರ ಪಟ್ಟಣದಲ್ಲಿ ಮಕರಸಂಕ್ರಾಂತಿಯ ದಿನಗಳಲ್ಲಿ ಬಹು ವೈಭವದಿಂದ ನಡೆಯುತ್ತಿರುವದರಿಂದ ಅದೇ ಸಮಯದಲ್ಲಿ ಈ ಜಯಂತಿ ದಿನವನ್ನು ಆಚರಿಸಲು ಇವರಿಗೆ ತಿಳಿಸಿದ್ದೇವೆ. ಸಿದ್ಧರಾಮೇಶ್ವರನ ಜಾತ್ರೆಯಲ್ಲಿ ನಡೆಯುವ ಪದ್ಧತಿಗಳನ್ನು ನಿರೀಕ್ಷಿಸಿದಲ್ಲಿ ಸಿದ್ಧರಾಮೇಶ್ವರನಿಗೆ ಸಂಬಂಧಿಸಿದ ಉತ್ಸವಗಳೊಡನೆ ಮಲ್ಲಿಕಾರ್ಜುನ ಉತ್ಸವಗಳೂ ಸೇರ್ಪಡೆಯಾಗಿದ್ದು ಕಂಡುಬರುತ್ತದೆ. ಬಹುಶಃ ಈ ಕಾಲದಲ್ಲಿಯೇ ಸಿದ್ಧರಾಮೇಶ್ವರನ ದೀಕ್ಷಾ ಸಮಾರಂಭವೂ ನಡೆದಿರಬಹುದು. ವೀರಶೈವರಲ್ಲಿ ದೀಕ್ಷೆಯು ಮಹತ್ವದ ಪ್ರಸಂಗವಿರುವದರಿಂದ ಈ ತಿಥಿಯನ್ನು ಅಂದರೆ ಮಕರಸಂಕ್ರಾಂತಿಯ ಹಿಂದಿನ ದಿನವನ್ನು ಸಿದ್ಧರಾಮೇಶ್ವರನ ಜಯಂತಿಗೋಸ್ಕರ ಗೊತ್ತುಪಡಿಸಿಕೊಳ್ಳಬೇಕೆಂದು ನಾವು ಶ್ರೀಯುತ ಎಸ್. ಆರ್. ಮಲ್ಲಪ್ಪ ಇವರಿಗೆ ಸೂಚಿಸಿದ್ದೇವೆ. ಈ ವಿಷಯವಾಗಿ ಯಾರಿಗಾದರೂ ಸೂಚನೆಗಳನ್ನು ಮಾಡತಕ್ಕದ್ದಿದ್ದಲ್ಲಿ ಅವರು ಅವುಗಳನ್ನು ಅವಶ್ಯವಾಗಿ ಮಾಡಬೇಕೆಂದು ನಮ್ಮ ವಿನಂತಿ ಇದೆ.

**ಪುಸ್ತಕ ಪರೀಕ್ಷೆ:**— ಈ ಬಗ್ಗೆ ಅನೇಕ ಮಹತ್ವದ ಗ್ರಂಥಗಳು ಈಚೆಗೆ ಪ್ರಕಟವಾಗಹತ್ತಿರುವದು ಬಹು ಸಮಾಧಾನಕರವಾಗಿರುತ್ತದೆ. ಮೈಸೂರ ವಿಶ್ವವಿದ್ಯಾಲಯದ ವತಿಯಿಂದ ಕೆಲವು ಉದ್ಗ್ರಂಥಗಳು ಅಲ್ಲದೆ ಪ್ರಚಾರ ಪುಸ್ತಕಮಾಲೆ ಎಂಬ ಹೆಸರಿನ ಕೆಳಗೆ ಉಪಯುಕ್ತವಾದ ಚಿಕ್ಕ ಚಿಕ್ಕ ಪುಸ್ತಕಗಳು ಪ್ರಕಟವಾಗಹತ್ತಿರುತ್ತವೆ. ಅವುಗಳನ್ನು ನಾವು ಇಲ್ಲಿ ವಿವರಿಸುತ್ತೇವೆ.

೧. **ಹಿಂದೂ ದರ್ಶನಸಾರ:**— ಇದು ಮಹಾಮಹೋಪಾಧ್ಯಾಯ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಿಂದ ರಚಿಸಲ್ಪಟ್ಟ

ಮೈಸೂರು ವಿಶ್ವವಿದ್ಯಾಲಯದ ಗ್ರಂಥಮಾಲೆಯ ೧೪ನೆಯ ಗ್ರಂಥವಾಗಿರುತ್ತದೆ. ಇದರಲ್ಲಿ ಹಿಂದುಸ್ತಾನದಲ್ಲಿ ಉದ್ಭವಿಸಿದ ಮುಖ್ಯ ಧರ್ಮಗಳ ವಿವರಣೆಯು ಇರುತ್ತದೆ. ಬೌದ್ಧ, ಸಾಂಖ್ಯ, ಜೈನ, ಯೋಗ, ಲೌಕಿಕ ಮೀಮಾಂಸಾ, ಅದ್ವೈತ ದರ್ಶನಗಳು ಇದರಲ್ಲಿ ನಿರೂಪಿಸಲ್ಪಟ್ಟಿರುತ್ತವೆ. ಇವುಗಳಲ್ಲಿರುವ ಸಾಮಾನ್ಯ ತತ್ವಗಳು ಸರಳಭಾಷೆಯಲ್ಲಿ ಬಹು ಸ್ಫುಟವಾಗಿ ಹೇಳಲ್ಪಟ್ಟಿರುತ್ತವೆ. ಹಿಂದೂಧರ್ಮದ ಸಾಮಾನ್ಯ ತತ್ವಗಳ ಜ್ಞಾನವು ನಮ್ಮಲ್ಲಿ ಬಹುಶಃ ಇರುವದಿಲ್ಲೆಂದು ಹೇಳಿದರೆ ಸಲ್ಲುವದು. ಈ ಸ್ಥಿತಿಯು ಶೋಚನೀಯವಾಗಿರುತ್ತದೆ. ಈ ವಿಷಯವನ್ನು ತಿಳಿಯಲಪೇಕ್ಷಿಸುವವರಿಗೆ ಈ ಗ್ರಂಥವು ಬಹು ಉಪಯುಕ್ತವಾಗಿದೆ.

೨. **ಹದಿಬದೆಯ ಧರ್ಮಃ**— ಸಂಚಿಯ ಹೊನ್ನಮ್ಮನು ರಚಿಸಿದ ಈ ಕಾವ್ಯವು ಮೈಸೂರ ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿರುತ್ತದೆ. ಇದರ ಸಂಪಾದಕಿಯರು ಶ್ರೀಮತಿ ಡಿ. ಚಂಪಾಬಾಯಿಯವರು. ಇದರಲ್ಲಿ ಟಿಪ್ಪಣಿಗಳು, ಶಬ್ದಕೋಶ ಮತ್ತು ವಿಸ್ತೃತವಾದ ಪೀಠಿಕೆ ಇವುಗಳಿವೆ. ಇವುಗಳೆಲ್ಲ ವಾಚಕರಿಗೆ ಬಹು ಉಪಯುಕ್ತವಾಗಿವೆ. ಮನೆತನದಲ್ಲಿ ಯಾವರೀತಿಯಾಗಿ ಇರಬೇಕೆಂಬುದನ್ನು ಕುರಿತು ಉಪಯುಕ್ತ ಸೂಚನೆಗಳುಳ್ಳದ್ದಾದ ಈ ಗ್ರಂಥವು ಕನ್ನಡ ವಾಙ್ಮಯದಲ್ಲಿ ಉನ್ನತ ಸ್ಥಾನವನ್ನು ಹೊಂದಿರುತ್ತದೆ. ಈ ಗ್ರಂಥವು ಪ್ರತಿಯೊಬ್ಬ ಕುಟುಂಬಸ್ತನಲ್ಲಿ ಇರುವದು ಅವಶ್ಯವು.

೩. **ಸಂಖ್ಯೋದ್ಯಾನಃ**— ಇದು ಮೈಸೂರ ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆಯಲ್ಲಿಯ ಗ್ರಂಥವಾಗಿದೆ. ಇದು ಶ್ರೀಯುತ ಬಿ. ಸೀತಾರಾಮಶಾಸ್ತ್ರಿ ಇವರಿಂದ ರಚಿತವಾಗಿದೆ. ಇದರಲ್ಲಿ ಗಣಿತಶಾಸ್ತ್ರಕ್ಕೆ ಸಂಬಂಧಿಸಿದ ಅನೇಕ ವಿನೋದಪರ ಗೋಷ್ಠಿಗಳು ಸಮಾವೇಶ ಮಾಡಲ್ಪಟ್ಟಿವೆ. ಶಿಕ್ಷಕರಿಗೆ ಅತಿ ಉಪಯುಕ್ತವಾದ ಗ್ರಂಥವು.

೪. **ಸಾರ್ವಜನಿಕ ವೆಚ್ಚಃ**— ಈ ಗ್ರಂಥವು ಶ್ರೀಯುತ ಎಮ್. ಎಚ್. ಗೋಪಾಲ ಇವರಿಂದ ರಚಿತವಾಗಿ ಮೈಸೂರ ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯೊಳಗಿನದಾಗಿದೆ. ಇದರಲ್ಲಿ ಸಾರ್ವಜನಿಕ ಸಂಸ್ಥೆಗಳ ವರಮಾನವನ್ನು ಈ ಸಂಸ್ಥೆಗಳು ಹೇಗೆ ವೆಚ್ಚಮಾಡುತ್ತವೆ ಮತ್ತು ಮಾಡಬೇಕು ಎಂಬ ವಿಷಯಗಳು ಹೇಳಲ್ಪಟ್ಟಿವೆ. ನಾಗ

ರಿಕ ಶಿಕ್ಷಣದಲ್ಲಿ ಇಂಥ ವಿಷಯಗಳು ಬಹು ಅವಶ್ಯಕವಾದವುಗಳು. ಜನ ಸಾಮಾನ್ಯರಲ್ಲಿ ಈ ವಿಷಯದ ತಿಳುವಳಿಕೆಯು ತೀರಕಡಿಮೆ. ಗ್ರಾಮೋದ್ಧಾರ ಕಾರ್ಯವನ್ನು ಕೈಕೊಂಡವರು ಈ ಗ್ರಂಥವನ್ನು ಎಲ್ಲ ಕಡೆಗೂ ಪ್ರಚಾರ ಮಾಡುವದರಿಂದ ಜನತೆಗೆ ಉಪಯೋಗವಾಗದಿರದು.

**೫. ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯ:—** ಇದರ ಸಂಪಾದಕರು ದಿವಂಗತ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಶ್ರೀಯುತ ಡಿ. ಎಲ್. ನರಸಿಂಹಾಚಾರ್ಯ ಇವರು ಇರುತ್ತಾರೆ. ಈ ಗ್ರಂಥವು ಶಿವಮೊಗ್ಗೆಯ ಕರ್ನಾಟಕ ಸಂಘದ ಪರವಾಗಿ ಪ್ರಸಿದ್ಧವಾಗಿದ್ದು ಈ ಕಾರ್ಯವನ್ನು ಅವರು ಈ ಮೇರೆಗೆ ನೆರವೇರಿಸಿದ್ದಕ್ಕೋಸ್ಕರ ಸಂಘದವರನ್ನು ನಾವು ಅಭಿನಂದಿಸುತ್ತೇವೆ. ಇದು ವಿಸ್ತೃತವಾದ ಮುನ್ನುಡಿ ಮತ್ತು ಟಿಪ್ಪಣೆಗಳಿಂದ ಕೂಡಿದ್ದಾಗಿದೆ. ರಾಘವಾಂಕ ಮಹಾಕವಿಯು ರಚಿಸಿದ ಈ ಷಟ್ಪದಿ ಗ್ರಂಥದಲ್ಲಿ ಅಲ್ಲಲ್ಲಿ ಮತತತ್ವಗಳ ನಿರೂಪಣೆಯಲ್ಲದೆ ಗಂಭೀರವಾದ ಭಕ್ತಿಗೌರವಗಳಿಂದ ಕೂಡಿದ ಅನೇಕ ವಿಷಯಗಳಿರುತ್ತವೆ. ಈ ಗ್ರಂಥವು ಶುದ್ಧವಾಗಿಯೂ ಸುಂದರವಾಗಿಯೂ ಅಚ್ಚು ಹಾಕಿದ್ದಾಗಿದೆ. ಇದು ಸಂಗ್ರಾಹ್ಯ ಗ್ರಂಥವಾಗಿದೆ. ಇದರ ಬೆಲೆ ೧ ರೂ. ೮ ಆಣೆ.

**೬. ನಿರಂಜನಶತಕ:—** ವೀರಶೈವ ವಾಙ್ಮಯದಲ್ಲಿ ಅನೇಕ ಶತಕಗಳಿವೆ. ಅವುಗಳಲ್ಲಿ ಶ್ರೀ. ವಿರಕ್ತತೋಂಟದಾರ್ಯನು ರಚಿಸಿದ ಶತಕಗಳು ಮಹತ್ವವಾದವುಗಳು. ಈಗಿನ ನಿರಂಜನ ಶತಕವು ಈ ಕವಿಯೇ ರಚಿಸಿದ್ದಾನೆ ಇದಕ್ಕೆ ವಿದ್ಯಾವಾಚಸ್ಪತಿ ಶ್ರೀಶಂಭುಲಿಂಗಶಿವಾಚಾರ್ಯರು ಮು. ವಿಜಾಪುರ ಹಿರೇಮಠ ಇವರು ಟೀಕೆಯನ್ನು ಬರೆದಿದ್ದಾರೆ. ಮತ್ತು ವಿಜಾಪುರದ ಶ್ರೀಯುತ ರಾಚೋಟಪ್ಪ ಹೇರಲಗಿ ಇವರು ಇದನ್ನು ಪ್ರಕಾಶಗೊಳಿಸಿದ್ದಾರೆ. ಮರಿತೋಂಟದಾರ್ಯನು ಕೆಳದಿ ಬಸವಪ್ಪನಾಯಕನಿಗೆ ಸಮಕಾಲೀನನು. ಇವನು ಸಿದ್ಧೇಶ್ವರ ಪುರಾಣ, ಪಾಲ್ಕುರಿಕೆಯ ಸೋಮೇಶ್ವರ ಪುರಾಣ, ಕರ್ನಾಟಕ ಶಬ್ದಮಂಜರಿ, ಇವೇ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ನಿರಂಜನ ಶತಕದಲ್ಲಿ ವೀರಶೈವ ಧರ್ಮದ ಮುಖ್ಯ ತತ್ವಗಳು ಬಹು ಸ್ಫುಟವಾಗಿ ವಿವೇಚಿಸಲ್ಪಟ್ಟಿರುತ್ತವೆ. ಇದರ ಬೆಲೆ ೦–೮–೦.

೭. **ಶಂಕರದಾಸಿಮಯ್ಯ ಪುರಾಣ:**— ಇದರ ಸಂಪಾದಕರು ಶ್ರೀಯುತ ವೀರಭದ್ರಪ್ಪ ಬಸವಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ. ನಿವೃತ್ತ ಮೊದಲನೇ ವರ್ಗ ನ್ಯಾಯಾಧೀಶರು ಇದ್ದು ಅವರು ಇದನ್ನು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿಸಂಸ್ಥೆಯ ಸಮಿತಿಯವರಿಗೆ ಅರ್ಪಿಸಿದ್ದಾರೆ. ಈ ಪುರಾಣವನ್ನು ಭಾಮಿನಿಷಟ್ಪದಿಯಲ್ಲಿ ಮಲ್ಲಿಕಾರ್ಜುನ ಎಂಬ ಹೆಸರಿನ ಕವಿಯು ರಚಿಸಿದ್ದಾನೆ. ಈತನ ಕಾಲವು ದಿವಂಗತ ಆರ್. ನರಸಿಂಹಾಚಾರ್ಯರು ೧೬೮೭ ಎಂದು ಅಭಿಪ್ರಾಯಪಟ್ಟಿದ್ದಾರೆ. ವೀರಶೈವ ಮತೋದ್ಧಾರ ಕಾರ್ಯದಲ್ಲಿ ಶಂಕರದಾಸಿಮಯ್ಯನು ಪ್ರಮುಖನಾಗಿದ್ದು ಆತನು ಕ್ರಿ. ಶ. ೧೦೧೫ ರಿಂದ ೧೦೪೨ ರ ವರೆಗೆ ಆಳಿದ ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದನು. ಈತನ ಮೂಲ ಗ್ರಾಮವು ಹುನಗುಂದ ತಾಲೂಕಿನ ಮೇರೆಯಲ್ಲಿ ಕೃಷ್ಣಾತೀರದಲ್ಲಿರುವ ನವಿಲೆ ಎಂಬುದಿರುತ್ತದೆಂದು ಸಂಪಾದಕರು ಶಾಸನಗಳ ಆಧಾರದಿಂದ ಬಹು ಪರಿಶ್ರಮಪೂರ್ವಕವಾಗಿ ಕಂಡುಹಿಡಿದಿದ್ದಾರೆ. ಈ ಪುರಾಣದಲ್ಲಿ ಉಲ್ಲೇಖವಾಗಿದ್ದ ಜಡೆಯಶಂಕರ ದೇವಾಲಯವು ಇಲ್ಲಿಯೇ ಇರುತ್ತದೆ. ಗ್ರಂಥವು ಶುದ್ಧವಾಗಿಯೂ ಸುಂದರವಾಗಿಯೂ ಅಚ್ಚುಹಾಕಲ್ಪಟ್ಟಿದೆ. ಇದಕ್ಕೆ ವಿಸ್ತೃತವಾದ ಪ್ರಸ್ತಾವನೆ, ಕಥಾಸಾರ, ಮತ್ತು ಕಠಿಣ ಶಬ್ದಗಳ ಕೋಶ ಇವುಗಳಿದ್ದು ಇದರಿಂದ ಈ ಗ್ರಂಥದ ಉಪಯುಕ್ತತೆಯು ಹೆಚ್ಚಿರುತ್ತದೆ. ಈ ಗ್ರಂಥದಲ್ಲಿ ವೀರಶೈವ ಮತತತ್ವದ ನಿರೂಪಣೆಯು ಇದ್ದು ೭ ಸುಂದರವಾದ ಚಿತ್ರಗಳು ಸೇರಿಸಲ್ಪಟ್ಟಿವೆ. ವೀರಶೈವರಿಗೆ ಸಂಗ್ರಾಹ್ಯವಾದ ಗ್ರಂಥವಾಗಿದೆ. ಇಂಥ ಗ್ರಂಥವನ್ನು ಶ್ರೀಯುತ ಹಾಲಭಾವಿಯವರು ಪ್ರಕಟಿಸಿದ್ದಕ್ಕೆ ನಾವು ಅವರನ್ನು ಅಭಿನಂದಿಸುತ್ತೇವೆ.

**ಶಿವಾನುಭವ ಸಂಘಗಳು:**— ಈಚೆಗೆ ಈ ಸಂಘಗಳು ಕರ್ನಾಟಕದಲ್ಲೆಲ್ಲ ಕ್ರಮೇಣ ಪ್ರಸಾರವಾಗುತ್ತ ನಡೆದಿರುವದು ಶುಭಚಿನ್ಹವಾಗಿದೆ. ಇವುಗಳ ಸಭಾಸದರು ಆಚರಿಸಬಹುದಾದ ಕಾರ್ಯಗಳನ್ನು ಕುರಿತು ನಾವು ಹಿಂದಿನ ಸಂಚಿಕೆಯಲ್ಲಿ ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅವುಗಳ ಉಪಯುಕ್ತತೆಯನ್ನು ಕುರಿತು ಅನೇಕ ಮಹನೀಯರು ನಮಗೆ ಪತ್ರಗಳನ್ನು ಬರೆದಿರುತ್ತಾರೆ. ಕೆಲವರು ಅವು ಬಹು ಗಡುಚಾದವುಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಯಾವನು ನಾಗರಿಕ ವರ್ತನೆಯುಳ್ಳವನಿರುವನೋ ಅವನಿಗೆ ಅವು ದಿನದ ನಿತ್ಯಕ್ರಮಗಳಾಗಿಯೇ

ಪರಿಣಮಿಸುತ್ತವೆ. ಶಿವಾನುಭವ ಸಂಘಗಳ ಉದ್ದೇಶಗಳು ಕುಟುಂಬ ಸುಧಾರಣ ಮತ್ತು ಆತ್ಮಸುಧಾರಣ ಇವುಗಳೇ ಇರುತ್ತವೆ. ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳು ಮೊದಲು ಕುಟುಂಬದ ಉತ್ಕೃಷ್ಟಸ್ಥಿತಿಯ ಮೇಲೆ ಅವಲಂಬಿಸಿರುತ್ತವೆ. ಅನೇಕರು ಶಿವಾನುಭವ ಸಂಘಗಳ ಸಂಘಟನೆಯ ಕಾರ್ಯದಲ್ಲಿ ಕಾಂಗ್ರೆಸ್ಸಿನ ಕಾರ್ಯ ಪದ್ಧತಿಗಳನ್ನು ಅನುಸರಿಸುವ ಅಭಿಪ್ರಾಯವುಳ್ಳವರಿರುವದು ಕಂಡುಬಂದಿದೆ. ಆದರೆ ಇದು ತಪ್ಪುಮಾರ್ಗವಾಗಿರುತ್ತದೆ. ರಾಜಕೀಯ ಚಳವಳಿಗಳ ಪದ್ಧತಿಗಳು ಸಾಮಾಜಿಕ ಸುಧಾರಣೆಯ ಪದ್ಧತಿಗಳಿಗೆ ಅನ್ವಯಿಸಲಾರವು. ದೇಶದ ಪ್ರಕೃತ ಪರಿಸ್ಥಿತಿಯಲ್ಲಿ ಕಾಂಗ್ರೆಸ್ಸು ಮೊದಲಾದ ರಾಜಕೀಯ ಸಂಸ್ಥೆಗಳು ಅನೇಕವಿಧವಾಗಿ ಜನಸಮುದಾಯವನ್ನು ತಮ್ಮ ತಮ್ಮ ಕಡೆಗೆ ಎಳೆದುಕೊಂಡು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡು, ಸರಕಾರದಿಂದ ಹಕ್ಕುಗಳನ್ನು ಸಂಪಾದಿಸಿಕೊಳ್ಳುವದರಲ್ಲಿ ತೊಡಗಿರುತ್ತವೆ. ಈ ದೃಷ್ಟಿಯಿಂದ ಇವುಗಳ ಕಾರ್ಯಪದ್ಧತಿಗಳು ನಿರ್ಮಿಸಲ್ಪಟ್ಟಿರುತ್ತವೆ. ಆದರೆ ಸಾಮಾಜಿಕ ಕಾರ್ಯಗಳು ಈ ರೀತಿಯಾಗಿ ನೆರವೇರಲಾರವು. ಶಿವಾನುಭವ ಸಂಘಗಳ ಬಗ್ಗೆ ಅನೇಕರು ಅಲ್ಲಲ್ಲಿ ಪ್ರಯತ್ನಿಸುವದು ಕಂಡುಬರುತ್ತದೆ ಅವರು ಕಾಂಗ್ರೆಸ್ಸಿನ ಮಾದಿರಿಯನ್ನು ತೆಗೆದುಕೊಂಡು ತಮ್ಮಲ್ಲಿ ಅಧಿಕಾರ ಸ್ಥಾನಗಳನ್ನು ಏರ್ಪಡಿಸಿ ಕಾಂಗ್ರೆಸ್ಸು ಹೇಗೆ ಸರಕಾರದ ಮೇಲೆ ಒತ್ತಾಯ ಮಾಡುತ್ತದೋ ಹಾಗೆ ಜನಸಮುದಾಯದ ಮೇಲೆ ಒಂದು ಬಗೆಯ ವರ್ಚಸ್ಸು ಉಂಟುಮಾಡುವ ಅಭಿಪ್ರಾಯವು ಇವರದಿದ್ದ ಹಾಗೆ ಕಂಡುಬರುತ್ತದೆ. ಆದರೆ ಇಂಥ ಧೋರಣದಿಂದ ಕಾರ್ಯಗಳಾಗವು. ವಾಙ್ಮಯ ಪ್ರಸಾರ, ಸಮಾಜ ಸಂಸ್ಕರಣ, ಧಾರ್ಮಿಕ ಸುಧಾರಣೆ ಇವುಗಳಿಗೋಸ್ಕರ ನಿಷ್ಕಲಂಕ ಪ್ರೀತಿಯು ಬೇಕು. ಒಂದೇ ಸಮನೆ ಶ್ರಮಪಡಬೇಕು. ಆದರೆ ಈ ಕಾರ್ಯದಲ್ಲಿ ಪ್ರಯತ್ನಿಸುವವರು ತಮ್ಮನ್ನು ಮೊದಲು ಸುಧಾರಿಸಿಕೊಳ್ಳಬೇಕು, ಆಮೇಲೆ ತಮ್ಮ ಕುಟುಂಬದ ಜನರನ್ನು ಸುಧಾರಿಸಬೇಕು. ಅವರಲ್ಲೆಲ್ಲ ಉಚ್ಚತರದ ಪದ್ಧತಿಗಳು ನೆಲೆಗೊಳ್ಳಬೇಕು. ಈ ದೃಷ್ಟಿಯಿಂದ ಕಾರ್ಯಮಾಡುವದರಿಂದ ಸ್ಥಿರತರವಾದ ಪರಿಣಾಮಗಳುಂಟಾಗುವವು. ಇದು ಸಾಧ್ಯವಾಗಲು ವ್ಯಕ್ತಿಗಳ ನಿಸ್ವಾರ್ಥಬುದ್ಧಿ ಉಚ್ಚ ವರ್ತನೆ ಮತ್ತು ಮನಸ್ಸಿನ ಉತ್ಕೃಷ್ಟತೆ ಇವು ಅವಶ್ಯವು. ಈ ಪ್ರಕಾರ ದುಡಿಯುವವರು ಗ್ರಾಮಾಂ

ತರಗಳಲ್ಲಿ ಉಂಟಾಗಬೇಕು. ಮತ್ತು ಅವರು ತಮ್ಮ ಮತ್ತು ತಮ್ಮ ಸುತ್ತಲಿನ ಗ್ರಾಮಗಳಲ್ಲಿ ಪ್ರಯತ್ನಿಸಬೇಕು. ಈ ರೀತಿಯಾಗಿ ಸ್ಥಾಪಿಸಲ್ಪಟ್ಟ ಶಿವಾನುಭವ ಸಂಘಗಳು ದೇಶದಲ್ಲಿ ಹೆಚ್ಚಾಗಬೇಕು. ಅಂದರೆ ಮಾತ್ರ ಶಿವಾನುಭವ ಸಂಘಗಳಿಂದ ಉಪಯುಕ್ತ ಕಾರ್ಯಗಳಾಗುವವು.

**ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ ಗದಗ:—** ಈ ಸಮಿತಿಯವರು ವೀರಶೈವ ಸಾಹಿತ್ಯ ಪರೀಕ್ಷೆಗಳನ್ನು ಪ್ರತಿವರ್ಷ ಡಿಶಂಬರ ಹಾಗೂ ಜೂನ ತಿಂಗಳುಗಳಲ್ಲಿ ಏರ್ಪಡಿಸಬೇಕೆಂದು ನಿರ್ಧರಿಸುವದಾಗಿ ನಮಗೆ ತಿಳಿಯುತ್ತದೆ. ಇದು ಸ್ತುತ್ಯಉಪಕ್ರಮವು. ಇದರಲ್ಲಿ ಅವರು ಮೂರು ತರಗತಿಗಳನ್ನು ಮಾಡಲು ಯೋಚಿಸಿದ್ದಾರೆ. ಪರೀಕ್ಷೆಗಳಲ್ಲಿ ಉತ್ತೀರ್ಣರಾದವರಿಗೆ ಬಿರುದುಗಳನ್ನು ಕೊಡಲೂ ಅಪೇಕ್ಷಿಸಿದ್ದಾರೆ. ಈ ತರದ ಪ್ರಯತ್ನಗಳಿಂದ ವೀರಶೈವ ಧರ್ಮದ ತತ್ವಗಳ ಅಭ್ಯಾಸವು ಎಲ್ಲ ಕಡೆಗೆ ನಡೆಯಲಿಕ್ಕೆ ಉತ್ತೇಜನವು ಉಂಟಾಗುವದು. ಎಲ್ಲ ಕಡೆಯ ಪಾಠಶಾಲೆಗಳು ಈ ಪ್ರಯತ್ನವನ್ನು ಅವಶ್ಯವಾಗಿ ಪುರಸ್ಕರಿಸತಕ್ಕದ್ದು. ಈಪ್ರಕಾರ ಪಾಠಶಾಲೆಗಳಷ್ಟೇ ಅಲ್ಲ, ಇವಿಲ್ಲದ ಬೇರೆ ಗ್ರಾಮದವರೂ ಕೂಡ ನೇಮಿಸಲ್ಪಟ್ಟ ಗ್ರಂಥಗಳ ಅಭ್ಯಾಸವು ತಮ್ಮಲ್ಲಿ ನಡೆಯುವ ಏರ್ಪಾಡು ಮಾಡತಕ್ಕದ್ದು. ಇದರಿಂದ ಸಮಾಜದಲ್ಲಿ ನಿಜವಾದ ಧರ್ಮ ಜಾಗ್ರತಿಯು ಉತ್ಪನ್ನವಾಗದೆ ಇರದು.

ಕವಿ ಗುರುಬಸವಕೃತ.

# ಅವಧೂತಗೀತೆ.

(ಚೌಪದಿ)

ಸ್ವಸ್ತಿ ಸಮಸ್ತ ಜಗಂ ನಿಜರೂಪ
ಭಕ್ತಮನೋಮಂದಿರ ಚಿದ್ದೀಪ
ನಿತ್ಯಂ ಗುರುಬಸವೇಶ ಪರಾಪ
ಕೂರ್ತೆನ್ನೊಳು ನೆಲಸಿರು ನಿರ್ಲೇಪ ॥೧॥

ಗುರು ಬಸವೇಶ ಸಮಗ್ರ ಪರೇಶ
ಶರಣ ಮನಸ್ಸರಸಿರುಹನಿವಾಸ
ಪರಮ ನಿರಂತರ ಸುಖಪರಿತೋಷ
ವರತರ ಸಲಹೆನ್ನನು ಭವನಾಶ ॥೨॥

ಸಹಜ ಸಮಗ್ರಾದ್ವಯ ಸುಖತುಷ್ಟಿ
ವಿಹಿತ ಷಡಂಗ ಶಿವಾಂಗಿಕ ಶಿಷ್ಟಿ
ಗಹನಕಡರಿ ಪರಸಮರಸ ಪುಷ್ಟಿ
ಯೆಹಗಿರಲಹಗನುಭವಗುರುದೃಷ್ಟಿ ॥೩॥

ವಡಬ ಜಡಂ ಗುಣಮಹಿಸಂತಾನ
ಸುಡುವ ವಿಷಂ ಪೀಯೂಷ ಸಮಾನ
ಪೊಡೆವ ಸಿಡಿಲ್ಮಂಜುಳ ವರಗಾನ
ಮೃಡಗುರು ಕರುಣ ಕಟಾಕ್ಷದ ಭಾನ ॥೪॥

ಕಚಟ್ತಪೋಚ್ಚಾರಣೆಯನು ಮಾಡೆ
ವಿಚಲಿಸಲಹುದೆ ಸಮಗ್ರವ ಕೂಡೆ
ಉಚಿತ ರಹಸ್ಯವನಲ್ಲದನಾಡೆ
ಪ್ರಚುರವೆನಿಸಿ ಗಾದೆಗಳೊಳಗಾಡೆ ॥೫॥

ನೀ ಪರಮಾತ್ಮನಖಂಡಿತನಾಗಿ
ವ್ಯಾಪಿಸುತಿಹೆ ಮಿಥ್ಯಾಸುಖಕಾಗಿ
ಯ್ಯೆ ಪರಮ ಸುಧಾಂಬುಧಿ ತೃಷೆಗಾಗಿ
ಕೂಪೋದಕ ಪೀರ್ದುದು ಗಡ ಪೋಗಿ ॥೬॥

ಕರಣಾಲಯ ಸಜ್ಜನ ಗಡ ತನಗೆ
ಕಿರಣೋದಕ ಬಳಿಸಲು ಗಡ ಮನೆಗೆ
ಸ್ಮರಶಾಸ್ತ್ರಾನುಗ್ರಹ ಗಡ ಮುನಿಗೆ
ಸುರಧನುವಾಯುಧ ಗಡ ರಣಮೊನೆಗೆ ॥೭॥

ನಿನ್ನಾಯತ ನಿನಗನುಗುಣವಾಗಿ
ದುರ್ನೀತಿಯು ಬಿಡದಿಹೆ ನುಗ್ಗಾಗಿ
ಬನ್ನ ಬಟ್ಟು ಜೀವಿಸುವಂತಾಗಿ
ಮನ್ನಿಸುವನೆ ಯಮರಾಟ್ ನಿನಗಾಗಿ ॥೮॥

ತಳುವದೆ ಸಲೆಸಂಸೃತಿಯನು ಪಳಿಯೆ
ಹೊಳೆವುದು ತನುಸಂಸೃತಿಯದನಳಿಯೆ
ಉಳಿದ ಮನಸಂಸೃತಿಯದ ಕಳೆಯೆ
ಬೆಳಗುತಿಹನು ಪರಮನು ಸಂದಳಿಯೆ ॥೯॥

ಉಗ್ಗರಿಸುತಲಾಹುತಿಗೊಳುವಂತೆ
ನುಗ್ಗಾಗಿಯು ಬಿಡೆ ವಿಷಯವ ಮುಂತೆ
ಹಿಗ್ಗುವೆ ನೀ ತೋರಿಕೆಗೋರಂತೆ
ತಗ್ಗುವೆ ತತ್ಕ್ಷಣದೊಳಗಂತಂತೆ ॥೧೦॥

ನೀನೊರ್ವನು ಹಲಬರ ಹೋರಾಟ
ಜ್ಞಾನೋತ್ತರಮಾರ್ಗಕೆ ಜಂಜಾಟ
ವಾನರಕೊದಗಿದ ತೊನಚಿಯ ಕಾಟ
ತಾನದರಿಂ ದಿನದಿನ ಕುಚ್ಚಾಟ ॥೧೧॥

ಅದಕಿದು ನೀಚವಿದಕ್ಕದು ನೀಚ
ತುದಿಗೈದಿಸಲದಕದು ಸಂಕೋಚ
ಹದನಿದು ತಿಳಿ ಸಂಸೃತಿನಾರಾಚ
ವಿಧಿ ಗಹಗಹಿಸಲು ಸುಖವೆ ವಿನೋಚ ॥೧೨॥

ಆಯುವಿಹುದು ಕಾಲಾಖ್ಯವ ತಾಳಿ
ಹಾಯೆನುತಿಹೆ ತಿಥಿವಾರವ ಕೇಳಿ
ದಾಯಗೆಡಲು ತಿಳಿಯದೆ ಮತಿಹೊಳಿ
ಮಾಯಕೆ ಸುಖಸುತ್ತಿಹೆ ಕಾಕೋಳಿ ॥೧೩॥

ಶುನಿಮಸ್ತಕ ಮುಕ್ಷುಕ ರತಿಯಾಗಿ
ವಿನಯದಿ ಪಿಡಿಯಲದುಂ ಕನಸಾಗಿ
ತನು ಸಂಸೃತಿಗುಪಮಾನವುದಾಗಿ
ಕನಲದಿರದಕೆ ಜಡಾತ್ಮಕನಾಗಿ ॥೧೪॥

ಕನಸಿನೊಳಗೆ ಸಂಸಾರದ ಸಂಗ
ಕನಸಿಂದೆಚ್ಚರೆ ಬಿಡುಗದರಂಗ
ನೆನೆದಡೆ ಭವಸಾಗರದುತ್ತುಂಗ
ತನುಪೂರ್ವಕಮಾದೊಡೆ ಸುಖಭಂಗ ॥೧೫॥

ತೋರಿಕೆ ಮಾತ್ರವೆನಿಪ ಸಂಸೃತಿಯು
ಮೀರದೆ ಬಹು ಕಂಟಕ ಸಂದಣಿಯು
ಹೆರುಹತನುಕರಣೇಂದ್ರಿಯಾವಳಿಯು
ನೆರಿದವಂ ಸುಖದಿಂದಿರಲರಿಯು ॥೧೬॥

ಎಹಗಹುದ್ದೈ ವೈಭವ ಈಷಣದ
ಕುಹಕದನಾರ್ಜಲ್ಲರು ಸಿರಿಗರದ
ಅಹಹ ವೃಥಾ ಮೋಹಿಸಿ ಸಂಶಯದ
ಸಿಹಿಗೆಳತಟಗೊಳುವರೆ ಕೃತ್ರಿಮದ ॥೧೭॥

ಭವಣಿಯ ಮೇಲೆ ಬಳಾರಿಯ ತೂಳ
ಹವಣಿಸಿದಂತೆ ಶರೀರದ ಮೇಳ
ತವೆ ಸಂಸೃತಿ ಬಹು ಕರ್ಮದ ಕೋಳ
ಶಿವಶಿವ ತನುಮಾಯಿತಿಂತುರಿದೇಳ ॥ ೮॥

ಅನವರತಂ ಗುರುಚರಣವ ಕೂರ್ತು
ನೆನೆಯದಿರಲು ಕಾಲಂಗವ ತುತ್ತು
ತನುಕರ್ಮವ ತನುವಿಂಗುಣಲಿತ್ತು
ತನಗೆ ದಿನಂಗಳಿವುದು ತಾ ಹೊತ್ತು ೧೯

ತಟತಟ ತಾನೆನಿಸುವ ಸಂಸಾರ
ಘಟಿಸಿ ವಿಜೃಂಭಿಸುತಿಹ ಭವಭಾರ
ದಿಟವುಸಿಗಳ ಮಧ್ಯದ ಕುವಿಚಾರ
ನಟಿಸಿದನವಗೆ ತನು ನೆರೆ ನಿರ್ಧಾರ ॥೨೦॥

ಹಸುಗಳೆಯದೆ ಸೊಣಗನು ಮತಿಗೆಟ್ಟು
ಮುಸುರೆಯ ಮಡಿಕೆಯೊಳಗೆ ಮೊಗವಿಟ್ಟು
ದೆಸೆಗಾಣದೆ ಬಾಧೆಗೆ ತನುಗೊಟ್ಟು
ಪೆಸರ್ಗೊಳಲಿದು ಸಂಸಾರದ ಗುಟ್ಟು ॥೨೧॥

ಎನಿತರುವಿರಲಹಮೆನುತಿಹ ಖಳನು
ಮನುಜನೆಯವ ಸಾಕ್ಷಾನ್ನರಖರನು
ಜನರೊಳಗವನೊರ್ವನೆ ಪಾತಕನು
ತನುಭೇದದೊಲನ್ನವ ತಿನುತಿಹನು ॥೨೨॥

ತನು ಸವೆಸವೆದು ಮನಃಕವಲಿರಿದು
ದಿನಚರಿಯದ ಕೋಟಲೆಯೊಳಗೊಡದು
ಜಿನುಗುತ್ತಿಹನಜ್ಞನು ಕುದಿಕುದಿದು
ಕನಸಿನ ತೋರಿಕೆಯಂ ನೆನೆನೆನೆದು ॥೨೩॥

ಮನುಜನ ಮತಿಯೊಳಗಿಲ್ಲ ವಿರಕ್ತಿ
ಇನಿತುಳ್ಳೊಡೆ ಹೊರಗಿಹುದದು ಹತ್ತಿ
ಜಿನುಗುತಿಹುದು ಮನದೊಳು ದುರ್ವರ್ತಿ
ಜನಿಸುತಿಹುದು ಪರದೊಳು ದುಃಕೀರ್ತಿ ॥೨೪॥

ಪರಿಮಳ ಕಾವ್ಯರಸಂ ರುಚಿಗಾನ
ಸುರುಚಿರಲಾಸ್ಯಸುಪುಷ್ಪವಿಧಾನ
ಪರಿಕಿಸಲಿವರನು ಸಂಗದಿ ದಿನ
ಪರಿಹಕದಿನ ಭಕದಿಂದವನೊನ ॥೨೫॥

ಜಡ ಭೌತಿಕ ದೇಹೇಂದ್ರಿಯದಾಟ
ಬಿಡೆ ಸಂಸಾರವಿಷಯದೊಳಗೂಟ
ಷಡರಿವಿಕಾರ ಗುಣಂಗಳ ನೋಟ
ತಡೆಯದೆ ನಿರಯಾವಧಿ ನಿಟ್ಟೋಟ ॥೨೬॥

ತಟತಟ ತನುತಾಪದಿನುದರಾರ್ಥಂ
ಕಟಪಟ ವಚನ ವೃಥಾ ವಾದಾರ್ಥಂ
ಚಿಟಿಪಿಟಿ ಮನಸಿನಿಸುಂ ಲೋಭಾರ್ಥಂ
ದಿಟದಿಟ ಮುಕ್ತಿಗೆಮೋಹಗದು ಸ್ವಾರ್ಥಂ ||೨೭||

ಅನೃತವಹ ಗೃಹದೊಳು ತಪದಾಟ
ಮನಕನುಗುಣವಾಗದು ಹಾರಾಟ
ತನಗಿನಿತರ ತಾತ್ಪರ್ಯದ ಮಾಟ
ಇನಿಸಾದೊಡೆ ನೆಲೆಯುಂ ಬಿಟ್ಟಾಟ ||೨೮||

ತಟತಟಯುಹ ಲಾಲಸೆಯನು ಸೂಡಿ
ಪಟಪಟನೈದಿ ಪರರ ತಾ ಬೇಡಿ
ದಿಟಋಸಿಗಳ ಮನದೊಳಗೆಡೆಮಾಡಿ
ಕಟ ಮನುಜರು ಬಳಲ್ವರು ಸುಖಕಾಡಿ ||೨೯||

ಸಿಡಿಲೆರಗಿದ ಪರಿಯುಂತಾರ್ಭಡಿಸಿ
ಕೊಡಹುತ ಗಾದೆಗಳಂ ಗಡಬಡಿಸಿ
ನುಡಿನಡೆಯೊಳು ಮದಮತ್ಸರ ಜನಿಸಿ
ಘುಡುಘುಡಿಸುವನಜ್ಞನು ಭವವೆರಸಿ ||೩೦||

ಮನವಿದು ತನುವಿನುಪಾಧಿಕವಾಗಿ
ತನುವಿಷಯೇಂದ್ರಿಯಗಳಿಗತಿ ಬೀಗಿ
ದಿನದಿನ ವಿಷಯೋಪಾಧಿಕವಾಗಿ
ತನಗೆ ಭವಂಗರವವು ತಾವು ಕೂಗಿ ||೩೧||

ಮನಕನುಗುಣವಾಗದು ನೆನೆದಂತೆ
ತನುವಿಷಯದ ಬಗೆಗಳು ತಾವು ಸಂತೆ
ತನಗಿದರಿಂ ಸುಖವಿರದೋರಂತೆ
ಜನನಲಯಸ್ಥಿತಿಗಳು ತಾವು ಮುಂತೆ ||೩೨||

ಅವತರಿಸಿಯೆ ಹಸುತೃಷೆ ಸಮವಾಗಿ
ತವೆ ಸತಿ ಸುತರನುರಾಗಕೆ ಬೀಗಿ
ಭವಣಿಬಡುವನಿಹಸುರಗಳಿಗಾಗಿ
ಭವಬಡುವರು ಮನುಜರು ಸುಖಕಾಗಿ ||೩೩||

ಎಲೆಯಲುಗಲು ತರತರಿಸುವ ನರನು
ಗೆಲುವನದೆಂತು ಮಹಾ ಸಮರವನು
ನಿಲಹಿಡಿಯದೆ ಮನಸಿಗೆ ಬೆದರಿಹನು
ಸುಲಭದಿತ ಪವನದೆಂತಾನುವನು

ಎಲೆಲೆ ಮನಸ್ಥಿರಕರಪರವಾಗಿ
ಅಲುಗಲದೆಂಬಂಧನವಹುದಾಗಿ
ಹಲವೆಣಿಕೆಯ ಮಾಡುವೆ ಸುಖಕಾಗಿ
ಸಲೆ ಗುರುವಚನದ ಬಲುಹುಂಟಾಗಿ

ಮನವಿದು ನೆನೆದಂತಾಚರಿಸುವನು
ತನು ತಾನೆಂದುಳುಮೆಯ ಮರೆದವನು
ತನಗಿತರವ ಕಲ್ಪಿಸಿ ಬರಿದಹನು
ಜನಿವೃತಿಗಳಿಗಂಗವ ಕೊಟ್ಟವನು

ಅದುಕಾರಣ ವಿಷಯೇಂದ್ರಿಯಗಳನು
ಬಿದರಿಸಿ ಗುರುಚರಣದ ಸಂಗವನು
ಮುದವದಿರದೆ ಮಾಡುತ ಭವಗಳನು
ಸದೆಬಡೆದಮಲಾತ್ಮನ ಕೂಡಿದನು

ಮನವಿದು ಸಯ್ಯಮದಿಂ ಪೀಯೂಷ
ಬಿನಯವ ಮಾಡಲದೆಂ ಭವನಾಶ
ತನಗೊದವಿದ ಮನದಿಂದುದ್ದೇಶ
ಜನಿಸದಿರಲು ತನಗತಿ ಪರಿತೋಷ

ಕ್ಷಿತಿಯೊಳಗತಿ ಮತದಿಂ ಮಿಗೆ ಕೂಡೆ
ಹಿತವಂತರನರಶುತ್ರಿಹ ಪೀಡೆ
ವೃತಭಾವನೆ ಮನದಿಂದೆದ್ದೊಡೆ
ಹಿತವರಹಾ ಸರ್ವರುಮಂ ಕೂಡೆ

ಬೇಸರದೆ ನುಡಿವಂವದಿಯೆಂದು
ಈಸಾಡುವೆ ಸಂಸಾರದೊಳೆಂದು

ಆಸುರದಿಂ ಭವಭವದೊಳು ಬಂದು
ಹೇಸಲು ಬೇಕದರಿಂ ನೀನೊಂದು ॥೪೦॥

ಸಾವಿರ ಶತದೋಷಂಗಳೊಳಿಡಿದು
ಭಾವಿಸಲೊಂದು ಮಹಾಗುಣವಿಹುದು
ಆವವನೇಹಗಾಚರಿಸುವನೊಲಿದು
ತಾ ವಿಹರಿಸುತಿಪ್ಪುದು ತನು ಮಣಿದು ॥೪೧॥

ಹಸು ತೃಷೆ ಸಂಸಾರಿಕ ವೇಷವನು
ಬಿಸುಡುತ ದಿಗ್ವಿಜಯವ ಮಾಡಿದನು
ವಿಷನು ಭವಾಟವಿಯೊಳಗಾಗಿರನು
ವಸವಾಗಿರುತಿರುವಾತ್ಮನೊಳತನು ॥೪೨॥

ಪರಮಾಣುಕತನದಿಂ ತನು ಮುನ್ನ
ಬೆರಸಿಹ ಕಥದಿಂದಲು ಕೇಳಿನ್ನ
ಹೊರೆಯದಿರಲು ವಿಷಯಗಳಿಂತೆನ್ನ
ವರ ಮುಕುತಿಯನೀವುದು ದಿಟ ಚೆನ್ನ ॥೪೩॥

ಇದರಿಂದೀ ತನುವನು ಲಾಲಸದಿಂ
ಸದೆಬಡೆಯುದೆ ಗುರುಮತಸಯ್ಯಮದಿಂ॥
ಪದುಳದಿ ಸಲಹದಿರಲು ಸಂತಸದಿಂ ।
ತುದಿಗೀವುದು ನಿನಗಾತ್ಮನ ಭರದಿಂ ॥೪೪॥

ತನು ತಾನ ತನುವಹುದು ಗುರುವಿಂದ
ಜನಿಮೃತಿಗಳು ಕೇಳ್ಪೊಗುವವನಿಂದ
ತನಗೆ ಚಿದದ್ವಯ ಸುಖವದರಿಂದ
ನೆನೆ ಗುರುಬಸವೇಶನನೆಲೆ ಕಂದ ॥೪೫॥

ತಲೆಗರಸಿಕ್ಷಿತಬಲು ಹೊರೆ ಬಂದು
ಗೆಲವಾವುದು ತಾಂ ಚರಿಸಲಿಕಿಂದು
ಸಲೆ ಕೃತ ದುಃಕೃತಚಿಂತೆಗೆ ಸಂದು
ಫಲವಾವುದು ನಿರ್ಗುಣ ನಿನಗೊಂದು ॥೪೬॥

ತ್ಯಾಗಾಂಗದ ಫಲದಿಂ ನಿರಯುವನು
ನೀಗಿ ನಿಜಾನ್ವಯಸಹಗುರುಪರನು
ಯಾಗಸಹಸ್ರೋತ್ತ್ರರ ಪದವಿಯನು
ಭೋಗಿಸಿ ತಾಂ ನಿಜಸುಖಿಯಾಗಿಹನು

ಅವರವರಿಗೆ ತನು ತಕ್ಕಂತಾಗಿ
ವಿವರಿಸಿ ಕರ್ಮವದಕೆ ಸಮವಾಗಿ
ತವೆ ಸುಖದುಃಖ ತನಗೆ ನೆಲೆಯಾಗಿ
ಭವಬಿಡದಾತ್ಮವಿವೇಕವ ನೀಗಿ

ಸದುಗುರುಪದಚಿಂತನದೊಳು ನಿರುತ
ಬೆದರುವನೆ ಕರಣಾಃಖ್ಯಕೆ ನಿರತ
ಪದುಳದಿ ಮುದವದಿರದ ನಿಶ್ಚಲಿತ
ಮದಗಜದಂತಿರಬೇಕವಧೂತ

ಇಹಪರದೊಳಗಿಹದಿಂ ಪರವಧಿಕ
ಇಹ ತಾಂ ಪರಕೋಸುಗ ಸಂಗ್ರಹಿಕ
ವಿಹಿತವಿದಿಹ ಪರಗಳ ಮಾಮುಷಕ
ಗ್ರಹಿಸದಿರಲು ಭವಭಯುಕವ ನಿಲುಕ

ಕಳನೊಳು ಮನೆಗಟ್ಟಿಹ ಪಟುಭಟನು
ಹೊಳಹಿಲ್ಲದ ಚಿತ್ತವನುಳ್ಳವನು
ನೆಲನೆಲ್ಲವ ಸಂಚರಿಸಿದನವನು
ಸುಲಭದಿ ಶಿವನೊಲವಿಂಗೊಳಗಹನು

ತಪ್ಪೆ ತನುಸಿದ್ಧಿ ತನಗೆ ಬೇಕೆಂದು
ಹವಣಿಸಲೇಕೌಷಧಿಗಳನಿಂದು
ಶಿವಶಿವಯೆಂದುಚ್ಚರಿಸಲಿಕೆಂದು
ಭವಭವದೊಳು ತನುವಿರುತಿಹುದೊಂದು

ಷಡರಿ ವಿಕಾರ ಗುಣಭ್ರಮೆಗಳನು
ಕೊಡಹುತ ದಿಗ್ವಿಜಯವ ಮಾಡಿದನು
ಕಡೆಗೆ ಮುಮುಕ್ಷುವೆನಿಸಿ ಮುಕುತಿಯನು
ಪಡೆದು ಪರಮಾತ್ಮನೊಳಗೆ ಸುಖಿಯಹನು

# ಸಟೀಕ ಏಕೋತ್ತರ ಶತಸ್ಥಲ.

ಏಕೋತ್ತರ ಶತಸ್ಥಲ – ಏಕ ಒಂದೇ, ಉತ್ತರ ಮೇಲಾದ, ಶತಸ್ಥಲ ನೂರು ಸ್ಥಲವು, ಪ್ರಥಮದಲ್ಲಿ ಪಿಂಡಸ್ಥಲ.

## (೧) ಪಿಂಡಸ್ಥಲ.

ಸಚ್ಚಿದಾನಂದಬ್ರಹ್ಮವೆನಿಸಿಕೊಂಬ ನಿಃಕಲ ಪರಶಿವನ ಸ್ವಯಂ ಪ್ರಕಾಶಮಯವಪ್ಪ ಮೂಲ ಚೈತನ್ಯವಾದಡೆ, ಆ ಪರಶಿವನ ಸೃಷ್ಟಿಗೆ ಕಾರಣವಾದ ಮಾಯಾ ಶಕ್ತಿಯು ಶುದ್ಧ ಸಾತ್ವಿಕಗುಣವೊಂದರೊಡನೆ ಕೂಡಿ ಸರ್ವಾತ್ಮಕಪ್ರೇರಕನಾದಂತಹ ಈಶ್ವರವೆಂದು, ಮತ್ತಂ, ಸತ್ವರಜಂಗಳೆರಡರ ಮಿಶ್ರದೊಡನೆ ಕೂಡಿ ಭೋಕ್ತೃ ಸಂಬಂಧಿಯಾದಾತನೆಂದು ಬಿಂಬ ಪ್ರತಿಬಿಂಬಗಳ ಹಾಗೆ ಎರಡು ಸ್ವರೂಪವಾಗಿ ಕಲ್ಪಿಸಲ್ಪಟ್ಟಿತ್ತು. ಅದಾಗಿ ಶಿವಾಂಶಿಕನಾದಾತ್ಮನು ಸೃಷ್ಟಿಕಾಲದಲ್ಲಿ ಶಿವಾಜ್ಞೆಯಿಂದ ತೊಟ್ಟಂಥ ದೇಹಮೋಹಭ್ರಾಂತಿಯಿಂದ ತಾನಾರೆಂಬುದನು ಮರೆದು ಸಂಸಾರದಲ್ಲಿ ಜೀವಿಸುತ್ತ ಜೀವಾತ್ಮನೆನಿಸಿ ಶಿವನ ಮಾಯಾ ಸೂತ್ರವಿಡಿದು ಜನ್ಮಾಂತರವನೆಯ್ದಿ ಬರುವಲ್ಲಿ ಆ ಮಾಯಾ ಜನ್ಮಂಗಳಲ್ಲಿ ಮಾಡಲ್ಪಟ್ಟ ಸಮಸ್ತ ಪುಣ್ಯಂಗಳೊಬ್ಬುಳಿಯಿಂದ ಪಾಪಕ್ಷಯವಾಗಿ ಅಂತಃಕರಣ ಶುದ್ಧವನೆಯ್ದಿ ತನ್ನ ಮುನ್ನಿನ ಶಿವಸಂಸ್ಕಾರವನೊಳಕೊಂಡು ಪುಟವಿಕ್ಕಿದ ಸುವರ್ಣದಂತೆ ಕಡೆಗಂಡು ಬಂದು ನಿಂದುದೀಗ ಪಿಂಡಸ್ಥಲ.

ನಿಶ್ಶೂನ್ಯದಲ್ಲಿ ಅಬ್ಜತೇಜದಿಂದೊಪ್ಪುವ ಅನಾದಿ ಚಿತ್ಸ್ವರೂಪನು ನಿರಂಜನದಲ್ಲಿ ವಿಪ್ಪು ಲಿಂಗದ ಹಾಗಿರುವ ಶೂನ್ಯಕಳಾರೂಪನು, ಶೂನ್ಯ ತತ್ವದಲ್ಲಿ ಮೌಕ್ತಿಕ ಪ್ರಕಾಶಯುಕ್ತವಾದ ಓಂಕಾರದಿಂದೊಪ್ಪುವ ಮೂಲ ಚಿತ್ಸ್ವರೂಪನು. ನಾದಬ್ರಹ್ಮದಲ್ಲಿ ವಿದ್ಯುತ್ಪ್ರಭೆಯುಕ್ತವಾದ ಳಕಾರಸ್ವ ರೂಪಿನಿಂದೊಪ್ಪುವ ಚಿದ್ಶಕ್ತಿ ಸ್ವರೂಪನು. ಶಿವತತ್ವದಲ್ಲಿ ಜ್ಯೋತಿ ಪ್ರಕಾಶಯುಕ್ತವಾದ ಪ್ರಣವದಿಂದೊಪ್ಪುವ ಪರಶಕ್ತಿಸ್ವರೂಪನು. ಸದಾಶಿವ ತತ್ವದಲ್ಲಿ ರಾತ್ಮಪ್ರಕಾಶಯುಕ್ತವಾದ ಪಕಾರ ಸ್ವರೂಪಿನಿಂದಿರುವ

ಶಾಂತ್ಯತೀತೋತ್ತರೆ ಎಂಬ ಕಲಾರೂಪನು. ಉಭಯಲಿಂಗವೇ ತನು, ಉತ್ತರ ಲಿಂಗವೇ ತಾನು, ಇಂತೀ ಅನಾದಿ ಭಕ್ತನ ಸ್ವರೂಪು ಅದು ಹೇಗಯ್ಯ ಎಂದಡೆ, ಆದ್ಯರು ವೇದ್ಯರು ಸಾಧ್ಯರು, ಆದಿಪಿಂಡ ಮಧ್ಯ ಪಿಂಡ ಅಂತ್ಯಪಿಂಡ, ಮರ್ಕಟಜ್ಞಾನ ವಿಹಂಗಜ್ಞಾನ ಪಿಪೀಲಿಕ ಜ್ಞಾನ, ಆದಿಗತಿ ಮಧ್ಯಗತಿ ತೀವ್ರಗತಿ. ಆದ್ಯರು ಎಂದರೆ ಬಸವಣ್ಣ, ಚನ್ನಬಸವಣ್ಣ, ಪ್ರಭುಸ್ವಾಮಿಗಳು, ಮಡಿವಾಳಯ್ಯ, ಮೋಳಿಗೆಮಾರಯ್ಯ, ಹಡಪದಪ್ಪಣ್ಣ, ಸೊಡ್ಡಳ ಬಾಚರಸರು, ಮರುಳುಶಂಕರ ಸ್ವಾಮಿಗಳು ಸಿದ್ಧರಾಮಯ್ಯ ಕಿನ್ನರಯ್ಯಗಳು ಮೊದಲಾದ ಎಲ್ಲ ಶಿವಗಣಂಗಳೇ ಆದ್ಯಗಣಂಗಳೆನಿಸುವರು. ವೇದ್ಯರು ಎಂದರೆ ಕೋವಿ ಶಾಂತಯ್ಯ, ಕೋಲ ಶಾಂತಯ್ಯ, ಕುದುರೆ ಶಾಂತಯ್ಯ, ಮಂಚದ ಶಾಂತಯ್ಯ ಮೊದಲಾದ ನೂರೊಂದು ವಿರಕ್ತರೆಲ್ಲ ವೇದ್ಯಗಣಂಗಳೆನಿಸುವರು. ಸಾಧ್ಯರು ಎಂದರೆ ತೋಂಟದ ಸಿದ್ಧೇಶ್ವರ ಸ್ವಾಮಿಗಳು, ಮರುಳು ಸ್ವಾಮಿಗಳು, ಸ್ವತಂತ್ರ ಸ್ವಾಮಿಗಳು, ಗುಮ್ಮಳಾಪುರದ ಸ್ವಾಮಿಗಳು, ಚೆನ್ನಂಜೇ ಸ್ವಾಮಿಗಳು, ಮೊದಲಾದ ನೂತನ ಪುರಾತರೇ ಸಾಧ್ಯ ಗಣಂಗಳೆನಿಸುವರು. ಆದಿ ಪಿಂಡ ಬಸವಾದಿ ಪ್ರಮಥರಿಗೆ ಸಂಬಂಧವಾದಂತಹದು. ಮಧ್ಯ ಪಿಂಡ ನೂರೊಂದು ವಿರಕ್ತರಿಗೆ ಸಂಬಂಧವಾದಂತಹದು. ಅಂತ್ಯ ಪಿಂಡ ನೂತನ ಪುರಾತರಿಗೆ ಸಂಬಂಧವಾದಂತಹದು. ಮರ್ಕಟನು ಆವುದಾನೊಂದು ಮರದ ಶಾಖೆಯಿಂದ ಮತ್ತೊಂದು ಶಾಖೆಗೆ ಲಂಘಿಸುವಲ್ಲಿ ಲಾಗತಪ್ಪಿ ಬೀಳಲು ಏನಾರು ಕೈಯಲ್ಲಿ ಸೊಪ್ಪು ಹಿಡಿದುಕೊಂಡು ಬಿದ್ದದ್ದಾ ಯಿತ್ತೇ. ಅದರ ಕುಲಕೋಟಿಗಳೆಲ್ಲ ನೆರೆದು ಮುತ್ತಿ ನೋಡಿ ಆ ಎಲೆಯು ಕುರುಹ ನೋಡಿ ಕೂಡಿಕೊಂಬುವು. ಆ ಎಲೆಯು ಕುರುಹು ಏನು ಇಲ್ಲದೆ ಇದ್ದಲ್ಲಿ ಕುಲದಿಂದ ಹೊರಯಿಕೆ ಹಾಕಿ ಬಿಡುವವು. ಹಾಗೆ ಶೀಲ ವ್ರತಾಚಾರ ಸಮೇತರಾದ ಸದ್ಭಕ್ತ ಶರಣ ಜನಂಗಳನೆ ಅಂಗೀಕರಿಸಿ ತಮ್ಮ ಕಬಳಿಕೆಗೆ ಯೋಗ್ಯನ ಮಾಡಿಕೊಂಬರು. ಅದರಲ್ಲಿ ಏನು ಕಿಂಚಿತ್ತು ಕೊರತೆ ಕಂಡಲ್ಲಿ ಅನುಸರಣೆ ಇನಿತುಂ ನೋಡದೆ ಕಳೆದು ಬಿಡುವಂ ತಹದೆ ಮರ್ಕಟಜ್ಞಾನವೆನಿಸುವುದು. ವಿಹಂಗನು ಇದ್ದೆಡೆಯಲ್ಲಿ ಹನ್ನೆ ರಡು ಯೋಜನಾಂತರ ಭೂಮಿಯಲ್ಲಿರ್ದ ಫಳರಸವನರಿವುತಿರ್ಪುದು. ಅಂತಲ್ಲದೆ ಆ ಫಳವಿದ್ದ ದಿಕ್ಕಿಗೆ ರಕ್ಕೆ ಎಳಸುವುದು. ಆ ರಕ್ಕೆ ಎಳಸಿ ದಲ್ಲಿ ಹೋಗಿ ಸೇವಿಸಿ ಬೇಗ ಬಂದು ತನ್ನೆಡೆಯಲ್ಲಿ ತಪ್ಪದಿರುವ ಹಾಗೆ

ತಾವಾವಾಚರಣೆಯಲ್ಲಿರ್ದಡೂ ಅನಾದಿ ಶಿವತತ್ವಜ್ಞಾನ ಸಂಧಾನವ ನರಿದು ಶಿವತತ್ವಭೋಗವನನುಭವಿಸಿ ಪೂರ್ವಾಚರಣೆವಿಡಿದೆಯ್ದಿ ಆ ಶಿವ ತತ್ವದಲ್ಲಿ ಎರಕವಾಗಿರುವದೇ ವಿಹಂಗಜ್ಞಾನವೆನಿಸುವುದು. ಪಿಪೀಲಿಕನು ಆವುದಾನೊಂದು ಫಲವಾದ ತರುವಿನ ಮೂಲವ ಮೂಸಿ ನೋಡಿ ಮೇಲೆ ಹಣ್ಣಿದೆ ಎಂಬುದ ಬಲ್ಲದು. ಆ ಹಣ್ಣಿಗೈದುವಲ್ಲಿ ತನಗೆ ಶತ್ರುವಾಗಿ, ಹಲ್ಲಿ ಓತಿ ಮೊದಲಾದ ಪ್ರಾಣಿಗಳ ಕಂಟಕವುಂಟು. ಅದನು ಜಯಿಸಿ ದಾಂಟಿಕೊಂಡು ಹೋದಲ್ಲಿ ಆ ಹಣ್ಣರಸವ ಸೇವಿಸಿ ಸುಖದಲ್ಲಿರುವ ಹಾಗೆ ಶಿವಶಾಸ್ತ್ರ ಸಮ್ಮತಿಯ ನೆಲೆವಿಡಿದು ಎಯ್ದಿದಡೆ ಮುಕ್ತಿಯಹು ದೆಂಬ ಶ್ರುತಜ್ಞಾನವ ಬಲ್ಲವನು. ಅದು ಕಾರಣವಾಗಿ ಜ್ಞಾನ ಕ್ರಿಯಾ ಚಾರ ಮಾರ್ಗವಿಡಿದು ಗಮಿಸುವಲ್ಲಿ ಕಲಿ ಕಾಲ ಕಾಮ ಮಾಯಾದಿಗಳ ಭೀತಿ ಬಂದು ತಟ್ಟಿದರೂ ಅದಕ್ಕು ಸಿಲ್ಕದೆ ನೆಲೆಗಳೆವವನಾಗಿ ಆ ಮುಕ್ತಿ ಫಳರಸವ ಸೇವಿಸಿ ಶಿವಾಗಮಾವಸ್ಥೆ ಜ್ಞಾನಾಚರಣೆಯಿಂದೆ ತಪ್ಪದೆ ಅನು ಭವಿಸುವಂತಹದೇ ಪಿಪೀಲಿಕ ಜ್ಞಾನವೆನಿಸುವುದು. ತ್ರಿವಿಧಾಂಗ ತ್ರಿವಿ ಧಲಿಂಗದಾಚರಣೆ ಆದಿಗತಿ, ಷಡ್ವಿಧಾಂಗ ಷಡ್ವಿಧಲಿಂಗದಾಚರಣೆಯೇ ಮಧ್ಯಗತಿ, ನೂರೊಂದು ಸ್ಥಳ ಕುಳಂಗಳಾಚರಣೆ ತೀವ್ರಗತಿ, ಇಂತಿವೆ ಲ್ಲವನು ಒಳಕೊಂಡಿರುವಂತಹದೇ ಚಿತ್ಪಿಂಡ ಸ್ಥಲವೆನಿಸುವುದು.

**ಮೂಲ**— ಬಿಂದು ಬಿನ್ನಾಣದೊಳಗಂದವಿಟ್ಟಹ ಕಳಾನಂದಪಿಂಡೋ ದಯದ ಜ್ಞಾನನಿರುತ.

**ಟೀಕು**— ಬಿಂದು ಮಾಂಸ ಬಿಂದು ಪ್ರವೇಷ್ಟಿತವಾದ ಶರೀರವು ಬಿನ್ನಾಣದ ಆ ದೇಹಕ್ಕೆ ಚೈತನ್ಯ ಸ್ವರೂಪವಾದಂತಹ ಆತ್ಮನು ಒಳಗೆ ದೇಹಾತ್ಮರುಗಳ ಮಧ್ಯದಲ್ಲಿ ಅಂದವಿಟ್ಟಹ ಒಪ್ಪವಿಟ್ಟಿರ್ದಂತಹ ಕಳಾ ನಂದ ಅಖಂಡ ಶಿವ ಕಳಾನಂದ ಚೈತನ್ಯಸ್ವರೂಪವಾದಂಥ ಪಿಂಡ, ಪಿಂಡನಾಮಪರ್ಯಾಯವನುಳ್ಳ ಪರಬ್ರಹ್ಮವು ಜ್ಞಾನೋದಯಕ್ಕೆ ಮೊದಲೆ ಆ ಪರಬ್ರಹ್ಮವು ಪಿಂಡದಲ್ಲಿ ಪಿಂಡವಾಗಿಹುದು. ಬಿಂದು ಬಿನ್ನಾಣದೊ ಳಗೆ ಪ್ರಕಾಶ ದ್ವಾರದಲ್ಲಿ ಅಂದವಿಟ್ಟಹ ಒಪ್ಪವಿಟ್ಟಿರ್ದಂತಹ ಕಳಾನಂದ ಜ್ಞಾನದಲ್ಲಿ ಸುಖಿಸುವಂತಹ ಪಿಂಡ ಚಿತ್ಪಿಂಡದಲ್ಲಿ ಜ್ಞಾನೋದಯದ ಸಮ್ಯ ಜ್ಞಾನ ಉತ್ಪತ್ತ್ಯವಾಗುವಂಥ ನಿರುತ ನಿಶ್ಚಯವೆಂಬುದರ್ಥ. ಅಂತುಮ ಲ್ಲದೆ ವೇದಪ್ರಸಿದ್ಧ ಶಾಸ್ತ್ರಪ್ರಸಿದ್ಧ ಪುರಾಣ ಪ್ರಸಿದ್ಧವು.

**ಮೂಲ**-ಕಾರಮೇಘದೊಳು ಮಿಂಚಡಗಿ ತೋರದ ತೆರದಿ ನೀರೊಳಡಕಂಗೆಯ್ದ ಕಿಚ್ಚಿನಂತೆ ಬೀರುತ್ತಿಹ ಫಳರಸದೊಳಿಪ್ಪ ನವರುಚಿಯಂತೆ ವಾರಣದ ಮಸ್ತಕದ ಮುತ್ತಿನಂತೆ.

**ಟೀಕು** – ಕಾರಮೇಘದೊಳು ಮಿಂಚಡಗಿ ತೋರದ ತೆರದಿ ಕಪ್ಪಿನ ಮೋಡದಲ್ಲಿ ವಿದ್ಯುಲ್ಲತೆಯ ಪ್ರಕಾಶವು ಅಡಗಿರ್ದು ಕುರುಹುಗಾಣಿಸಿಕೊಳ್ಳದೆ ಇರುವ ಹಾಗೆ ಅಭ್ರಚ್ಛಾಯಮಾತ್ರವಾದ ಪಿಂಡದ ಮಧ್ಯದಲ್ಲಿ ಚಿಚ್ಛಾಯ ಮಾತ್ರವಾದ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿ ಒಪ್ಪುತ್ತಿಹುದು. ನೀರೊಳಡಕಂಗೆಯ್ದ ಕಿಚ್ಚಿನಂತೆ ಒಂದಾನೊಂದು ಸಮುದ್ರದ ಮಧ್ಯದಲ್ಲಿ ವಡಬಾಗ್ನಿ ಅಡಗಿರ್ದು ಉದಕದಾಪ್ಯಾಯನದೋರಿ ಆ ಸಮುದ್ರವನು ಸೀರದೆ ಆ ಸಮುದ್ರದ ಶೈತ್ಯದಲ್ಲಿ ತಾನು ನಂದದೆ ಆ ಸಮುದ್ರದ ತದ್ರೂಪ ತದಾಕಾರವಾಗಿರುವ ಹಾಗೆ ಜಲಬುದ್ಬುದಾಕಾರಮಯವಪ್ಪ ಪಿಂಡದ ಮಧ್ಯದಲ್ಲಿ ಮಹಾಜ್ಞಾನಾಗ್ನಿ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನದಾಪ್ಯಾಯನ ತಲೆದೋರಿ ಆ ಪಿಂಡವನು ದಹಿಸದೆ ಆ ಪಿಂಡದ ಮರವೆಯಲ್ಲಿ ತಾನು ನಂದದೆ ಜ್ಞಾನೋದಯಕ್ಕೆ ಮೊದಲೆ ಆ ಪಿಂಡದ ತದ್ರೂಪ ತದಾಕಾರವಾಗಿ ಒಪ್ಪುತ್ತಿಹುದು. ಬೀರುತಿಹ ಫಳರಸದೊಳಿಪ್ಪ ನವರುಚಿಯಂತೆ ಬೀರುತಿಹ ದಿಗ್ದಿಸೆಗಳಲ್ಲಿ ಸದ್ವಾಸನೆಯ ತೀಡುತ್ತಿರ್ದಂಥ ಅವುದಾನೊಂದು ಮಾವಿನಹಣ್ಣು, ನೇರಿಲಹಣ್ಣು ಹಲಸಿನಹಣ್ಣಿನಲ್ಲಿ ನವೀನವಾದ ಮಾಧುರ್ಯವು ಅಡಗಿರುವ ಹಾಗೆ ಆ ವಸ್ತು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡವಾಗಿಹುದೆಂಬರ್ಥ. ಅಂತುಮಲ್ಲದೆ ಅವುದಾನೊಂದು ಮಾವಿನಹಣ್ಣು ನರಸದ ಮಧ್ಯದಲ್ಲಿ ನೂತನವಾದ ಪರಿಮಳವು ಆ ವಾಟೆಯನು ಹೊದ್ದದೆ ಅತ್ವಕ್ಕನುಹೊದ್ದದೆ, ಅದರ ಮಧ್ಯದಲ್ಲಿ ಅಡಗಿರುವ ಹಾಗೆ ದೇಹಾತ್ಮರುಗಳ ಮಧ್ಯದಲ್ಲಿ ಅಖಂಡ ಚಿದ್ರೂಪ ಚಿತ್‌ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ವಾರಣದ ಮಸ್ತಕದ ಮುತ್ತಿನಂತೆ ಮದಕರಿಯ ಶಿರಸ್ಸಿನ ಮಧ್ಯದಲ್ಲಿ ಜಲ, ಆ ಜಲದ ಮಧ್ಯದಲ್ಲಿ ಸೈಕತ ಆ ಸೈಕತದ ಮಧ್ಯದಲ್ಲಿ ಸೂಕ್ತಿ, ಆ ಸೂಕ್ತಿ ಮಧ್ಯದಲ್ಲಿ ಮೌಕ್ತಿಕವು ಅಡಗಿರ್ದು ಕುರುಹುಗಾಣಿಸಿಕೊಳ್ಳದೆ ಇರುವ ಹಾಗೆ ಅಷ್ಟತನುಯುಕ್ತವಾದ ಶರೀರಕ್ಕೆ ಶಿರಃಪ್ರಧಾನವಾದ ಆತ್ಮನ ಮಧ್ಯ

ದಲ್ಲಿ ಮನೋಜಲ, ಆ ಮನೋಜಲ ಮಧ್ಯದಲ್ಲಿ ತತ್ವವಿಪರಿತಜ್ಞಾನ ಆ ತತ್ವವಿಪರಿತಜ್ಞಾನದ ಮಧ್ಯದಲ್ಲಿ ಚಿಚ್ಛಕ್ತಿ ಆ ಚಿಚ್ಛಕ್ತಿಯ ಮಧ್ಯದಲ್ಲಿ ನಿಜಮೋಕ್ಷ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥಲವಾಗಿಹುದು.

**ಮೂಲ—** ಶಶಿಕಾಂತದೊಳಗುದಕವೊಸರಡಗಿ ನಿಂದಂತೆ ಹಸುಳೆಯೊಳಗಣ ಸ್ವಪ್ನ ತೋರದಂತೆ ನಸುನನೆಯೊಳಡಗಿರ್ದ ನವಸುಗಂಧದ ತೆರದಿ ಉಸಿರೊಳಡಗಿರ್ದ ಚೈತನ್ಯದಂತೆ.

**ಟೀಕು:—** ಶಶಿಕಾಂತದೊಳಗುದಕ ಒಸರಡಗಿ ನಿಂದಂತೆ ಚಂದ್ರಕಾಂತ ಶಿಲೆಯ ಮಧ್ಯದಲ್ಲಿ ಉದಕದ ಸಂಚಲವಡಗಿರ್ದು ಪೌರ್ಣಿಮೆಯ ಚಂದ್ರನು ಉದಯವಾದಲ್ಲಿ ಕಲ್ಲುಗಳು ಕರಗಿ ಪ್ರದೇಶ ನೀರಾಗಿ ಹಳ್ಳಹೊಳೆಗಳಾಗಿ ಚರಿಸುವದಲ್ಲದೆ ಆ ಪೌರ್ಣಿಮೆ ಚಂದ್ರ ಉದಯವಾಗದೆ ಇದ್ದಲ್ಲಿ ಅದರ ಮಧ್ಯದಲ್ಲಿಯೇ ಅಡಗಿರುವ ಹಾಗೆ ಸಂಸಾರ ವಿಷಯ ರಸದ ಸೀತಳಕೃತವಾದ ಪಿಂಡನ ಮಧ್ಯದಲ್ಲಿ ಚಿತ್ಕಿರಣಾವರಣವನುಳ್ಳ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಹಸುಳೆಯೊಳಗಣ ಸ್ವಪ್ನದೋರದಂತೆ ಒಂದಾನೊಂದು ಸಣ್ಣ ಮಗುವು ನೋಡಿದ ಸ್ವಪ್ನದ ಮರ್ಯಾದೆಯ ಹಾಗೆ ಆ ವಸ್ತುವು ಪಿಂಡದಲ್ಲಿ ಪಿಂಡಸ್ಥವಾಗಿರ್ದಿತ್ತೆಂಬುದು ಅರ್ಥ. ಅದುವಲ್ಲದೆ, ಆವುದಾನೊಂದು ಚಿಕ್ಕ ಶಿಸುವು ಸುಖ ದುಃಖ ಸ್ವರೂಪವಾದಾತ್ಮ ಸ್ವಪ್ನವ ಕಂಡು, ತನ್ನಲ್ಲಿ ತಾನೇ ಗಹಗಹಿಸಿ ನಗುವುದಲ್ಲದೆ ಇದಿರಾಗಿ ಮತ್ತೊಬ್ಬರ ಕೂಡೆ ಉಸಿರಿತೇ, ಉಸಿರಲರಿಯದೆಂಬುವ ಹಾಗೆ ಜ್ಞಾನ ವಿಹೀನವಾದಾತ್ಮನ ಮಧ್ಯದಲ್ಲಿ ನಿಜಸುಷುಪ್ತಿ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ನಸುನನೆಯೊಳಡಗಿರ್ದ ನವ ಸುಗಂಧದ ತೆರದಿ ಆವುದಾನೊಂದು ಕೊರೆ ಸರ್ಜಕದ ಮಧ್ಯದಲ್ಲಿ ನೂತನವಾದ ದ್ರವ್ಯವು ಅಡಗಿರ್ದು ಏನಾರು ಆ ಸರ್ಜಕ ವಿಕಸನವಾದಲ್ಲಿ ಆ ಪರಿಮಳ ತೀವಿ ಪಸರಿಸಿ ತೋರುವದಲ್ಲದೆ ಇಲ್ಲದಲ್ಲಿ ಅದರ ಮಧ್ಯದಲ್ಲಿಯೇ ಅಡಗಿರುವ ಹಾಗೆ ಕಷ ಮಲಯುಕ್ತವಾದ ಪಿಂಡದ ಮಧ್ಯದಲ್ಲಿ ಸ್ವಾನುಭಾವ ಸದ್ವಾಸನಾ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ತತ್ವ ಸಂಕೋಚಮಯವಪ್ಪ ಪಿಂಡದ ಮಧ್ಯದಲ್ಲಿ

ಸದ್ವಾಸನಾ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಉಸಿರೊಳಡಗಿರ್ದ ಚೈತನ್ಯ ದಂತೆ ಪ್ರಾಣವಾಯುವಿನ ಮಧ್ಯದಲ್ಲಿ ಪ್ರಾಣಚೈತನ್ಯವು ಅಡಗಿರ್ದು ಕುರುಹುಗಾಣಿಸಿಕೊಳ್ಳದೆ ಇರುವ ಹಾಗೆ ದಶವಾಯುಗಳಿಂದ ಬದ್ಧೀಕೃತ ವಾದ ಪಿಂಡದ ಮಧ್ಯದಲ್ಲಿ ಚಿತ್‌ಪ್ರಾಣ ಪ್ರಾಣಚೈತನ್ಯ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದ ಮಧ್ಯದಲ್ಲಿ ಪಿಂಡಸ್ಥವಾಗಿಹುದು.

**ಮೂಲ**— ಕ್ಷೀರದೊಳು ಘೃತವಡಗಿ ನೀರು ಮುತ್ತಿನೊಳಡಗಿ ಅರ್ರೈದು ನೋಡೆ ಬೀಜದೊಳು ವೃಕ್ಷ ಸಾರಿರ್ದು ಮೊಳೆದೋರದಂತಿಪ್ಪ ಮಹಾ ಘನವನಾರು ಭೇದಿಸಿ ಕಾಣಲರಿದು ನೋಡಾ.

**ಟೀಕು**— ಕ್ಷೀರದೊಳು ಘೃತವಡಗಿ ದುಗ್ಧದೊಳಗಣ ಆಜ್ಯದ ಹಾಗೆ ಆ ವಸ್ತುವು ಪಿಂಡದ ಮಧ್ಯದಲ್ಲಿ ಪಿಂಡಸ್ಥವಾಗಿಹುದೆಂಬುದು ಅರ್ಥ. ಅಂತುಮಲ್ಲದೆ ಒಂದಾನೊಂದು ಹಾಲಿನ ಮಧ್ಯದಲ್ಲಿ ತುಪ್ಪವು ಅಡಗಿರ್ದು ಏನಾರು ಕರೆದು ಕಾಸಿ ಹೆಪ್ಪನಿಕ್ಕಿ ದಧಿಯನು ಮಾಡಿದಲ್ಲಿ ಆ ದಧಿಯನು ಸೋಸಿ ಮಥನವ ಮಾಡಿದಲ್ಲಿ ನವನೀತವು ಬರುವುದು. ಆ ನವನೀತವನು ವಹ್ನಿಯ ಮೇಲೆ ಮಡಗಿದಲ್ಲಿ ಆಜ್ಯವಾಗುವುದು. ಈ ಆವ ಕ್ರಿಗಳು ಇಲ್ಲದಲ್ಲಿ ಅದರ ಮಧ್ಯದಲ್ಲಿಯೇ ಅಡಗಿರುವ ಹಾಗೆ ಗರ್ಭಾವಸ್ಥೆ, ಜನ್ಮಾವಸ್ಥೆ, ಬಾಲ್ಯಾವಸ್ಥೆ, ಯೌವನಾವಸ್ಥೆ, ಕಾಮ್ಯಾವಸ್ಥೆ, ವೃದ್ಧಾವಸ್ಥೆ, ಮರಣಾವಸ್ಥೆ ಇಂತೀ ಸಪ್ತಾವಸ್ಥೆ ಸಂಯುಕ್ತವಾದ ಪಿಂಡದ ಮಧ್ಯದಲ್ಲಿ ಘೃತಕಾಠಿಣ್ಯಸ್ವರೂಪವಾದ ಪಿಂಡದ ಮಧ್ಯದಲ್ಲಿ ಸಚ್ಚಿದಾನಂದವನ್ಮೂರ್ತಿಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೇ ಪಿಂಡದಲ್ಲಿ ಪಿಂಡಸ್ಥವಾಗಿಹುದು. ನೀರು ಮುತ್ತಿನೊಳಡಗಿ ಕಟ್ಟಾಣಿ ಮುತ್ತಿನ ಮಧ್ಯದಲ್ಲಿ ಸುಪ್ಪಾಣಿಯು ಅಡಗಿರ್ದು ಕುರುಹುಗಾಣಿಸಿಕೊಳ್ಳದೆ ಇರುವ ಹಾಗೆ ಮೋಕ್ಷಸ್ವರೂಪವಾದ ಪಿಂಡದ ಮಧ್ಯದಲ್ಲಿ ಚಿಜ್ಜಲಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಅರ್ರೈದು ನೋಡೆ ಪರೀಕ್ಷೆ ಮಾಡಿ ನೋಡೆ ಬೀಜದೊಳು ಬಿತ್ತಿನಲ್ಲಿ ವೃಕ್ಷ ತರುವು ಸಾರಿರ್ದು ಸೇರಿದ ಸಂಬಂಧವಾಗಿರ್ದು ಮೊಳೆದೋರದಂತಿಪ್ಪ ಅಂಕುರಗಾಣಿಸಿಕೊಳ್ಳ ಇಹುದೆಂಬುದು ಅರ್ಥ. ಅಂತುಮಲ್ಲದೆ, ಒಂದಾನೊಂದು ಭೂಮಿಯನು

ಹಸನುಮಾಡಿ ಪಾತಿಯನು ಕಟ್ಟಿ ಬೀಜವನು ಬಿತ್ತಿ ಉದಕವನು ಎರೆದು ಕಾಪಾಡಿದಲ್ಲಿ ಕೆಳಯಿಂಕೆ ಬೇರೂರಿ ಮೇಲಕ್ಕೆ ಅಂಕುರದೋರಿ ಎಲೆಯಿಕ್ಕಿ ಕೊನರ್ತು, ಚಿಗುರ್ತು, ತಳಿರ್ತು, ಪಲ್ಲವಿಸಿ, ಶಾಖೋಪಶಾಖೆಗಳಾಗಿ ಹೂತು, ಕಾತು, ಹಣ್ಣಾಗುವದಲ್ಲದೆ ಆ ಭೂಮಿಯನು ಹಸನವ ಮಾಡದೆ ಪಾತೆಯನು ಕಟ್ಟದೆ ಬೀಜವನು ಬಿತ್ತದೆ ಉದಕವನು ಎರೆಯದೆ ಕಾಪಾಡದೆ ಇರ್ದಲ್ಲಿ ಅದರ ಮಧ್ಯದಲ್ಲಿಯೇ ಅಡಗಿರುವ ಹಾಗೆ ಸಕಲ ತತ್ವಕಾರಣವಾದ ಸ್ವರೂಪವಾದ ಆತ್ಮನ ಮಧ್ಯದಲ್ಲಿ ಸರ್ವಾಚಾರಸಂಪತ್ತಿನ ಶಾಖೋಪಶಾಖೆಯನುಳ್ಳ ಚಿದ್ಬ್ರಹ್ಮವೃಕ್ಷಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಮಹಾಘನವನು ಮೋಕ್ಷಾಧಿಕ್ಯವಾದ ಚಿದ್ಘನ ಲಿಂಗವನು ಆರಯಿದೋ ಹಂಮೆಂದುಭಯುವನಳಿದ ಮಹಾನುಭಾವಿಯೇ ತಿಳಿದು ಬಲ್ಲನಲ್ಲದೆ ಉಳಿದಾದ ದ್ವೈತಾದ್ವೈತಿಗಳಾರು ಷಟ್ಸಮಯಾದಿಗಳಾರು ಷಟ್‌ಶೈವಾದಿಗಳಾರು ಕವಿ ಗಮಕಿ ವಾದಿ ವಾಗ್ಮಿಗಳೆಂಬ ಚತುರಾಶ್ರಮಿಗಳಾರು ಭೇದಿಸಿಕಾಣಲು ಅರಿದು ನಿರೀಕ್ಷಣೆಯ ಮಾಡಲು ಅರಿದು ನೋಡಾ, ಆ ಪರಬ್ರಹ್ಮವು ಅಸಾಧ್ಯವಾಗಿಪ್ಪುದು ಕಂಡಾ.

**ಮೂಲ**— ಪಾಷಾಣದೊಳಗಗ್ನಿ ಸೂಸದೆ ಬೆಡಂಗು ಪ್ರತಿಭಾಷೆದೋರದ ಜಲದ ನಿಲವಿನಂತೆ ನೇಸರೊಳಡಗಿರ್ದ ಮರೀಚನಂದದೊಳು ಲೀಲಾಶಿಸುವ ಪಿಂಡ ವೈದೋರದಿಹುದು.

**ಟೀಕು**— ಪಾಷಾಣದೊಳಗಗ್ನಿ ಸೂಸದೆ ಬೆಡಂಗು ಒಂದಾನೊಂದು ಕಲ್ಲಿನ ಮಧ್ಯದಲ್ಲಿ ಬೆಂಕಿಯು ಅಡಗಿರ್ದು ಏನಾರು ದೂಡಿ ಚಕಮಕಿಗಳಿಂದ ಮಥನವ ಮಾಡಿದಲ್ಲಿ ಸ್ಫುರಿಸೆ ಪೊರಪೊಣ್ಮಿ ಕಾಣಿಸುವುದಲ್ಲದೆ ಈ ಯಾವ ಕ್ರಿಗಳು ಇಲ್ಲದಿಪ್ಪಲ್ಲಿ ಅದರ ಮಧ್ಯದಲ್ಲಿಯೇ ಅಡಗಿರುವ ಹಾಗೆ ಜಡ ಪಾಷಾಣಸ್ವರೂಪವಾದ ಪಿಂಡದ ಮಧ್ಯದಲ್ಲಿ ಚಿದಗ್ನಿ ಸ್ವರೂಪವಾದ ಪರಬ್ರಹ್ಮವು ಅಡಗಿಹುದೆಂಬ ಅರ್ಥ. ಅಂತುಮಲ್ಲದೆ ಕಲುಹೃದಯಮಪ್ಪ ಪಿಂಡದ ಮಧ್ಯದಲ್ಲಿ ಚಿತ್‌ಶಿಖಿ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಪ್ರತಿಭಾಷೆದೋರದ ಒಂದಾನೊಂದು ಚರ್ಮತಂತಿಗಳಿಂದೆ ಬಿಗಿದು ಬಾರಿಸಲ್ಪಕ್ಕ ವೊಲ್ಲಕೀ ಮೃದಂಗಗಳನು ಆರಾರು ಆತ್ಮರುಗಳು ಬಾರಿಸಿದಲ್ಲಿ ಶಬ್ದ ಹುಟ್ಟುವುದಲ್ಲದೆ ಇಲ್ಲದೆ ಇಪ್ಪಲ್ಲಿ ಅದರ ಮಧ್ಯ

ದಲ್ಲಿಯೇ ಅಡಗಿರುವ ಹಾಗೆ ಚರ್ಮದೇಹವಪ್ಪ ಪಿಂಡದ ಮಧ್ಯದಲ್ಲಿ ಪ್ರಣವಮನಾದ ಘೋಷಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ಜಲದ ನಿಲವಿನಂತೆ ಶಬ್ದಜಾಲವಿಲ್ಲದ ಗಂಭೀರೋದಕ ಘಾತಕವನು ಆರಾರು ಆತ್ಮರುಗಳು ಕಾಣುವುದಕ್ಕೆ ಆದೀತೇ ಅಗದೆಂಬ ಹಾಗೆ ಜಲಬುದ್ಬುದಾಕಾರಮಯವಪ್ಪ ಪಿಂಡದ ಮಧ್ಯದಲ್ಲಿ ನಿರಾಘೂಟ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ನೇಸರದೊಳಡಂಗಿರ್ದ ಮರೀಚನಂದದೊಳು ಸೂರ್ಯಾತಪದ ಮಧ್ಯದಲ್ಲಿ ಮರೀಚಿಕಾ ಜಲವು ಅಡಗಿರ್ದು ಕುರುಹುಗಾಣಿಸಿಕೊಳ್ಳದೆ ಇರುವ ಹಾಗೆ ಜ್ಞಾನಾತ್ಮನಪ್ಪ ಇನನ ಮಧ್ಯದಲ್ಲಿ ಚಿಚ್ಛಾಯಮಾತ್ರ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ವಿಲಾಸಿಸುವ ಹಾಗೆ ವಿನೋದಿಸುವಂತಹ ಪಿಂಡ ಪಿಂಡನಾಮಮಯರ್ಾಯವನುಳ್ಳ ಪರಬ್ರಹ್ಮವು ವೈದೋರದೆ ಜ್ಞಾನೋದಯಕ್ಕೆ ಮೊದಲೆ ಕುರುಹುಗಾಣಿಸಿಕೊಳ್ಳದೆ ಇಹುದು. ಪಿಂಡದಲ್ಲಿ ಪಿಂಡಸ್ಥವಾಗಿಹುದು.

**ಮೂಲ**— ರೂಪು ರೂಪಿನೊಳಗಡಗಿ ರೂಪಿಸದೆ ನಿಂದ ನಿಜರೂಪ ನಿಶ್ಚಲವಾಗಿ ಸಂಚಲಿಸದೆ ತಾ ಪರಾತ್ಪರವಾಗಿ ನಿಂದ ನಿಜಪದವು-ಚಿದ್ರೂಪ ಕೂಡಲಚೆನ್ನಸಂಗಯ್ಯನು.

**ಟೀಕು**— ರೂಪು ರೂಪಿನೊಳಡಗಿ ರೂಪಿಸದೆ ಮಯೂರನು ಸಿಖಂಡಿ ಪಕ್ಷಿಯು ನವಿಲುವಕ್ಕಿಯು ಹೇಗಿದ್ದಿತ್ತು ಹಾಗೆ ಆ ವಸ್ತುವು ಪಿಂಡದಲ್ಲಿ ಪಿಂಡಸ್ಥವಾಗಿಹುದು ಎಂಬುದು ಅರ್ಥ. ಅಂತುಮಲ್ಲದೆ ಒಂದಾನೊಂದು ನವಿಲುವಕ್ಕಿಯುತ್ಪತ್ತಿಯನಿಕ್ಕಿ, ಮೊಟ್ಟೆವೊಡೆದು ಮರಿಬಲಿದು ರಕ್ಕೆಯನಿಕ್ಕಿದಲ್ಲಿ ಕಾಣಿಸುವುದಲ್ಲದೆ ಆ ತತ್ತಿಯನಿಕ್ಕದೆ ಮೊಟ್ಟೆವಡೆಯದೆ ಮರಿಬಲಿಯದೆ ರಕ್ಕೆಯನಿಕ್ಕದೆ ಇದ್ದಲ್ಲಿ ಆ ನವಿಲುವಕ್ಕಿಯು ಪೊಗೆಯು ಆ ಚಿತ್ರದ ರಂಜನೆಯು ಅದರ ಮಧ್ಯದಲ್ಲಿ ಅಡಗಿರುವ ಹಾಗೆ ಷಡುವರ್ಣ ಯುಕ್ತವಾದ ಪಿಂಡದ ಮಧ್ಯದಲ್ಲಿ ವಿಚಿತ್ರಪದ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥವಾಗಿಹುದು. ನಿಂದ ಪಿಂಡದಲ್ಲಿ ಪಿಂಡಸ್ಥವಾಗಿ ನೆಲಸಿದ ನಿಜರೂಪು ಆ ಪರಬ್ರಹ್ಮದ ನಿಜಸ್ವರೂಪು ನಿಶ್ಚಲವಾಗಿ ಸ್ಥಿರಕರವಾಗಿ

ಸಂಚಲಿಸದೆ ಜ್ಞಾನದನೆನಹುದೋರದೆ ಆ ಪರಬ್ರಹ್ಮವು ತಾನು ಪರಾತ್ಪ
ವಾಗಿ ಸುಖದುಃಖ ಪುಣ್ಯಪಾಪ ಸ್ವರ್ಗನರಕ ಬಂಧಮೋಕ್ಷದ್ವಂದ್ವ ಕರ್ಮ
ಗಳಿಗೆ ಅನ್ಯೋನ್ಯವಾಗಿ ನಿಂದ ನೆಲಸಿದ ನಿಜಪದವು. ಸ್ವಯಂಭು ಜ್ಞಾನ
ಸ್ವರೂಪವಾದ ನಿಃಕಲಲಿಂಗದ ಚಿದ್ಘನಲಿಂಗದ ಪದವು ಚಿದ್ರೂಪಜ್ಞಾನ
ಸ್ವರೂಪವಾದಂಥ ಕೂಡಲಭಕ್ತರ ದೇಹದಲ್ಲಿ ಕೂಡುವ ಕೂಟದಲ್ಲಿ ವಿಯೋ
ಗವಿಲ್ಲದಿದ್ದಂಥ ಚನ್ನ ಕಾಯ ಕಾಂತಿ ಲಾವಣ್ಯವನುಳ್ಳಂಥ ಸಂಗಯ್ಯನು
ಅಂಗವುನ ಪ್ರಾಣಂಗಳಲ್ಲಿ ಹೆರೆ ಹಿಂಗದೆ ಇರ್ದಂಥ ಎಲೆ ಪರಶಿವಲಿಂಗವೇ.

**ಸೂತ್ರ**—'ಯತ್ತೇನ ಭಾವಸೂತ್ರೇ ಶಿವ ಸಿದ್ಧಾಂತ ತಂತ್ರೆ ಷಟ್ಸ್ಥಲ ನಿರ್ಣಯೇ' ಎಂದು ಸುರುಚಿರಪಿಂಡಾದಿ ಜ್ಞಾನ ಶೂನ್ಯಾಂತವಾದ ಸರ್ವಾ ಡಂಬರ ಸಂಪತ್ತಿನಾಚರಣೆಯನು ಸೂಚಿಸಿ ಕೊಡುತಿರ್ದಂತಹದೇಇಂತಪ್ಪ ಹೀಗಾದಂಥ ಮಹತು ಪೂಜ್ಯವೆತ್ತಂಥ ಪಿಂಡಸ್ಥಲವು. "ಸ್ಥಲೇನ ಅಂಗ ಮುಚ್ಯತೆ, ಸ್ಥಲೇನ ಲಿಂಗಮುಚ್ಯತೆ" ಎಂದು ಪಿಂಡನಾಮಪರ್ಯಾಯವ ನುಳ್ಳ ಪರಬ್ರಹ್ಮವು ತನ್ನ ಲೀಲೆಯಿಂ ತನ್ನ ಚಿದಂಗ ಸೃಷ್ಟಿಯಮಾಡಿ ನಟಿ ಸಬೇಕೆಂಬ ಅವಹೇಳನೆಯಿಂದೆ ತನ್ನೊಳಡಗಿದ ತನ್ನಲ್ಲಿ ಅಂತರ್ಗತವಾದ ಸಕಳ ನಿಃಕಳಾತ್ಮಕ ತತ್ವಂಗಳನು ಸಾಕಾರವಾದ ಅಂಗಸ್ಥಲವು ೪೪, ನಿರಾಕಾರವಾದ ಲಿಂಗಸ್ಥಲವು ೫೭, ಸಾಕಾರವಾದ ಅಂಗತತ್ವ ೨೫, ನಿರಾಕಾರವಾದ ಲಿಂಗತತ್ವ ೧೧, ಸಾಕಾರವಾದ ದೇಹವು ನಿರಾಕಾರ ವಾದ ಆತ್ಮನು ಸಾಕಾರವಾದ ಮಹೇಶ್ವರ ತತ್ವವು ನಿರಾಕಾರವಾದ ಸದಾಶಿವ ತತ್ವವು ಸಾಕಾರವಾದ ಸದಾಶಿವತತ್ವ ನಿರಾಕಾರವಾದ ಪರ ತತ್ವವು ಆ ಪೃಥ್ವಿ ಅಪ್ಪು ತೇಜ ವಾಯು ಚಂದ್ರ ಸೂರ್ಯರೇ ಸಾಕಾರವಾದಂತಹವು, ವಾಯು, ಆಕಾಶ, ಆತ್ಮ ಇವು ನಿರಾಕಾರವಾ ದಂತಹವು, ಹೀಗೆ ಸಗುಣ ನಿರ್ಗುಣ ಸ್ವರೂಪವಾದ ಆತ್ಮ ತತ್ವಂಗಳನು ಉಂಟುಮಾಡಿ ಉಳ್ಳಮಾಡಿ ತೋರಬೇಕೆಂದು ತಮ್ಮ ಚಿತ್ತಿನ ಚಿದಂಗ ಭೂತರಾದ ಜ್ಞಾನಿಗಳಿಗೆ ಅರುಹಿಕೊಡಬೇಕೆಂದು ನಿಶ್ಚಯಿಸಲು ಜ್ಞಾನದ ನೆನಹುದೋರಲು ಅಲ್ಲಿ ಪಿಂಡದಲ್ಲಿ ಪಿಂಡಸ್ಥವಾದ ವಸ್ತುವಿನಲ್ಲಿ ಜ್ಞಾನೋ ದಯವಾಯಿತ್ತಾಗಿ ಸಮ್ಯಜ್ಞಾನ ಉದಯವಾಯಿತ್ತಾಗಿ ಮುಂದೆ ಪುರ ಸ್ಸರದಲ್ಲಿ ಪಿಂಡಜ್ಞಾನಸ್ಥಲವಾದುದು, ಪಿಂಡಜ್ಞಾನಸ್ಥಲವೆಂದು ಹೇಳಲಾ ಯಿತ್ತು.

---

## (೨) ಪಿಂಡಜ್ಞಾನ ಸ್ಥಲ.

**ಮೂಲ—** ಜ್ಞಾನ ನೇತ್ರ ಮುಸುಕ ತೆರೆದು ತಾನು ತನ್ನ ನಿಜವ ನೋಡಿ ತಿಳಿದ ಮಹಿಮನು.

**ಟೀಕು—** ಜ್ಞಾನ ನೇತ್ರ ಮುಸುಕ ಶಿವಾಂಶಿಕನಾದಾತ್ಮನ ಮೂಲ ಜ್ಞಾನ ದೃಷ್ಟಿಯನು ಮುಸುಕಿಕೊಂಡಿರ್ದ ಅಜ್ಞಾನಮಯಾತ್ಮನಪ್ಪನು ಸ್ವಾನುಭಾವದುದಯದಿಂದ ಸ್ವಾತ್ಮ ಜ್ಞಾನದುತ್ಪತ್ಯದಿಂದ ತೆರೆದು ಒಂದಾನೊಂದು ನೀರಮೇಲಣ ಪಾಂಸೆಯನು ಕಲಂಕಿ ನೂಕಿ ಬೇರ್ಪಡಿಸುವ ಹಾಗೆ ಸುಜ್ಞಾನ ದೃಷ್ಟಿಯನು ಪ್ರಭಾವಿಸಿದನು. ತಾನು ಅಜ್ಞಾನ ಕಲಾತ್ಮನು ತನ್ನ ನಿಜವ ನೋಡಿ ತನ್ನ ನಿಜ ಸ್ವರೂಪವಾದ ವಸ್ತುವೇ ತಾನೆಂದು ನಿರೀಕ್ಷಿಸಿ ತಿಳಿದ ಚಿತ್ತೇ ಅಂಗ, ಚಿದ್ಘನ ಲಿಂಗವೇ ಪ್ರಾಣವೆಂದು ಅರಿದವನು ಮಹಿಮನು ಮಹಾತ್ಮನು.

**ಮೂಲ—** ಚಿತ್ತಬಿಂದುಪ್ರಕೃತಿ ಹಿಂಗಿ ನಿತ್ಯಾನಿತ್ಯ ವಿವೇಕದಿಂದಲತ್ತ ನಿಲಿಕಿ ನೋಡಿ ಕಂಡ ಸಕಲದಳಿವನು। ತತ್ವದಲ್ಲಿ ವಿವೇಕಿಯಾಗಿ ನಿಶ್ಚಲದ ನಿಜಾಂತರಂಗ ನಿಶ್ಚಯುವನೆಯ್ದಿ ಸುಖದ ಮುಖವನರಿದನು.

**ಟೀಕು—** ಚಿತ್ತ ಮನಸ್ಸು ಬಿಂದು ದೇಹ ಪ್ರಕೃತಿ ಮಾಯೆ ಹಿಂಗಿ ಮನವಳಿದು ಉನ್ಮನಿಯ ತತ್ವಸ್ವರೂಪವಾಗಿ ದೇಹವಳಿದು ಆಚಾರಂಗವಾಗಿ ಮಾಯೆಯುಳಿದು ನಿರ್ಮಾಯಿಯಾಗಿ ಅನಿತ್ಯಜಗತ್ತೋರಿಕೆ ಮಾಯಾಪ್ರಪಂಚೆಲ್ಲವು ಅನಿತ್ಯವಾದವು. ನಿತ್ಯವಾದಂತಹದೇ ಶಿವ ತತ್ವವು ಎಂದು ವಿವೇಕದಿಂದೆ ಅತ್ತ ನಿಲಿಕಿ ಪರಬ್ರಹ್ಮದತ್ತ ನಿಲಿಕಿ ಮಹಾಜ್ಞಾನದಿಂದ ಎಟಕಿ ಸಕಲದಳಿವನು ಅನಂತ ತತ್ವ ಭುವನ ಬ್ರಹ್ಮಾಂಡಾದಿಗಳೆಲ್ಲವು ಅಳಿದುಳಿದು ಹೋಗುವಲ್ಲಿ ನೋಡಿ ಕಂಡು ತನ್ನ ನಿಜಸ್ವರೂಪವಾದ ವಸ್ತುವೇ ತಾನೆಂದು ಮಹಾ ಜ್ಞಾನ ದೃಷ್ಟಿಯಿಂದ ನಿರೀಕ್ಷಿಸಿ ಕಂಡು ಆ ತತ್ವದಲ್ಲಿ ನಿಃಕಲ ಪರಶಿವತತ್ವದಲ್ಲಿ ವಿವೇಕಿಯಾಗಿ ವಿಚಾರ ಪರವುಳ್ಳವನಾಗಿ ನಿಶ್ಚಲದ ಚಲಿಸಬಾರದ ನಿಜಾಂತರಂಗ ತನ್ನಂತರಂಗದಲ್ಲಿ ನಿಶ್ಚಯುವನೆಯ್ದಿ ನಿರ್ಧಾರವುಳ್ಳಾತನಾಗಿ ಸುಖದ ನಿಃಕಲ ಲಿಂಗವು ಮುಖವ ಚಿತ್ತುವನರಿದನು, ಚಿತ್ತೇ ಅಂಗ ಚಿದ್ಘನಲಿಂಗವೇ ಪ್ರಾಣವೆಂದು ಅರಿದನು ತಿಳಿದನು.

**ಮೂಲ—** ಜ್ಞಾನಮುಕುರದೊಳಗೆ ನೋಡಿ ತಾನು ತನ್ನ ಕುರುಹುವಿಡಿದು ತಾನು ತನಗೆ ಅನ್ಯವಿಲ್ಲವೆಂಬ ಭೇದವ। ತಾನೆಯರಿದು ಮಾಯಾ ಮಿಥ್ಯವಂ ನಿವೃತ್ತಿಮಾಡಿ ಶಿವಧ್ಯಾನದಲ್ಲಿ ಮನವನಿತ್ತ ಸೌಖ್ಯ ಶರಣನು.

**ಟೀಕು—** ಜ್ಞಾನ ಮುಕುರದೊಳಗೆ ಸುಜ್ಞಾನವೆಂಬ ಕೈಪಿಡಿಯಲ್ಲಿ ನೋಡಿ ತನ್ನ ಪೂರ್ವಾಪರವನು ನಿರೀಕ್ಷಣೆಯ ಮಾಡಿ ತಾನು ಅಜ್ಞಾನ ಕಲಾತ್ಮನು ತನ್ನ ಕುರುಹಿಡಿದು ತನ್ನ ನಿಜಸ್ವರೂಪವಾದ ವಸ್ತುವಿನ ಲಕ್ಷಣವನು ಗ್ರಹಿಸಿ ತಾನು ಆ ಜ್ಞಾನ ಕಲಾತ್ಮನು ತನಗೆ ಆ ವಸ್ತುವಿಗೆ ಅನ್ಯವಿಲ್ಲವೆಂಬ ಭೇದವ ಸ್ವರೂಪವನು ತಾನೆಯರಿದು ತನ್ನ ಸ್ವಾತ್ಮಜ್ಞಾನದಿಂದ ತಾನೇ ತಿಳಿದು ಮಾಯಾ ಮಿಥ್ಯವಂ ಅವಿದ್ಯಾ ಹುಸಿಯನು ನಿವೃತ್ತಿ ಮಾಡಿ, ಇದಂ ನೇತಿ ಇದಂ ನೇತಿ, ಎಂದು ತಿರಸ್ಕಾರವ ಮಾಡಿ ಶಿವಧ್ಯಾನದಲ್ಲಿ ಬ್ರಹ್ಮಜ್ಞಾನದಲ್ಲಿ ಮನವನಿತ್ತ ಮಾನಸವನು ಆರೋಪಿಸಿದಂಥ ಸತ್ಯ ಶರಣನು ಪಾರಮಾರ್ಥವಾದ ಸುಖಸ್ವರೂಪವಾದಂಥ ಶಿವಶರಣನು.

**ಮೂಲ—** ಹಿಂದೆ ಹರಿದು ಹರಿದ ಹಿಂದನೊಂದು ಮಾಡಿ ಬೆರಸದಾನಂದದಿಂದಲೆಯ್ದಿ ಮನೋಭಾವಿಯಾಗಿ। ಬಿಂದುನಾದ ಕಳಾತ್ರಯದ ಸಂದನಳಿದು ಚಿತ್‌ಸ್ವರೂಪನು ಬಿಂದುವಿನೊಳು ನಿಂದು ಮೆರೆದ ಸತ್ಯ ಶರಣನು.

**ಟೀಕು:—** ಹಿಂದೆ ಹರಿದು ಪೂರ್ವದ ಜಾತಿ ವರ್ಣ ಕುಲ ಗೋತ್ರ ನಾಮ ಸೀಮೆಗಳನು ಸುಜ್ಞಾನದಿಂದ ಭೇದಿಸಿ ಹರಿದು ಅವನು ನಷ್ಟವ ಮಾಡಿದ ಮೇಲೆ ಹಿಂದನೊಂದುಮಾಡಿ ಆ ಜಾತಿ ವರ್ಣ ಕುಲ ಗೋತ್ರ ನಾಮ ಸೀಮೆಗಳನು ಏಕವ ಮಾಡಿ ಬೆರಸದ ಕೂಡಿ ಸಮರಸವಾಗದ ಆನಂದದಿಂದ ಆಹ್ಲಾದದಿಂದ ಎಯ್ದಿ ಪರಬ್ರಹ್ಮದಲ್ಲಿ ಸ್ಥಾಪಿಸಿ ಮನೋಭಾವಿಯಾಗಿ ಮನದಲ್ಲಿ ನೆನೆದು ಅರಿವಿನಲ್ಲಿ ಭಾವಿಸಲ್ತಕ್ಕಾತನಾಗಿ ಭಾವದಲ್ಲಿ ಭಾವಿಸಲ್ತಕ್ಕಾತನಾಗಿ ಬಿಂದು ನಾದ ಕಳಾತ್ರಯದ ದೇಹ ಪ್ರಾಣ ಆತ್ಮ ಮೂರರ ಸಂದನಳಿದು ಆ ತನುತ್ರಯಂಗಳ ಭಿನ್ನ ಪ್ರಕೃತಿಯನು ಗಳಿತವ ಮಾಡಿ ಎಂಬುದೀಗ ಚಿತ್‌ಸ್ವರೂಪ ಜ್ಞಾನಸ್ವರೂಪವಾದಂಥ

ಬಿಂದುವಿನೊಳು ಚಿದ್ಬಿಂದಾತ್ಮಕವಾದ ವಸ್ತುವಿನಲ್ಲಿ ನಿಂದು ಚಿತ್ತೇ ಅಂಗ ಚಿದ್ಘನಲಿಂಗವೇ ಪ್ರಾಣವಾಗಿ ನೆಲಸಿದ ಮೆರೆದ ಮಹಾಜ್ಞಾನದಿಂದ ರಾಜಿಸಿದ ವಿಡಂಬಿಸಿದ ಸೌಖ್ಯ ಶರಣನು ಮಹಾ ಜ್ಞಾನದ ಸುಖಸ್ವರೂಪವಾದ ಶಿವಶರಣನು.

**ಮೂಲ—** ಶಕ್ತಿಯೊಳು ಶಿವಾತ್ಮವಡಗಿ ಶಕ್ತಿರಹಿತನೆಂಬ ಬೆಡಗ ಶಕ್ತಿಮುಖದೊಳರಿದು ಶಕ್ತಿ ಸಂಗ ಭಂಗವ । ರಕ್ತಿಯಿಂದ ಗೆಲಿದು ಪರಮಭಕ್ತಿ ಸುಖವ ಕಂಡ ಸುಖಿಯು ಚಿತ್ತದರಿವು ಜಗವನುಂಗಿಯುಗುಳದಿರ್ದುದು.

**ಟೀಕು—** ಶಕ್ತಿಯೊಳು ಚಿತ್ಶಕ್ತಿ ಸ್ವರೂಪವಾದ ಶ್ರೀಗುರುವಿನಲ್ಲಿ ಶಿವಾತ್ಮ ಅಡಗಿ ಶಿವಾಂಶಿಕವಾದ ಜ್ಞಾನ ಕಲಾತ್ಮನು ಆ ಆ ಶ್ರೀಗುರುವಿನ ಭಕ್ತಿಯಲ್ಲಿ ಅಂತರ್ಗತವಾಗಿ ಶಕ್ತಿ ರಹಿತನೆಂಬ ಅಜ್ಞಾನ ತಮೋರೂಪಿಣಿಯಾದ ಅವಿದ್ಯಾ ಶಕ್ತಿಯು ಇಲ್ಲವೆಯಾದಾತ್ಮನೆಂಬ ಬೆಡಗು ಕುಶಲಗತಿಯ ಬಣಿತಿಯನು ಶಕ್ತಿ ಮುಖದೊಳರಿದು ಚಿತ್ಶಕ್ತಿಸ್ವರೂಪವಾದ ಶ್ರೀಗುರು ದೇವನ ವಕ್ತ್ರದಿಂದ ತಿಳಿದು ಶಕ್ತಿ ಸಂಗ ಭಂಗವ ಅಜ್ಞಾನತಮೋರೂಪಿಣಿಯಾದ ಅವಿದ್ಯಾಶಕ್ತಿಯ ಸಂಗ ತತ್ಸಂಗದ ಭಂಗವ ಭವ ಭಂಗದ ಕೊರತೆಯನು ವಿರಕ್ತಿಯಿಂದೆ ಗೆಲಿದು ಪರಮ ನಿರಾಗತಿಯಿಂದ ಜಯಿಸಿ ಪರಶಕ್ತಿ ಸುಖವ ಕಂಡಾ ಮಹಾಜ್ಞಾನ ಶಕ್ತಿಯ ಸೌಖ್ಯವನು ಮೂಲ ಜ್ಞಾನದೃಷ್ಟಿಯಿಂದ ನಿರೀಕ್ಷಣೆ ಮಾಡಿದಂಥ ಸುಖಿಯು ಪರಬ್ರಹ್ಮ ಪರಿಣಾಮಿಯು ಚಿತ್ತದರಿವು ಮನದ ಸುಜ್ಞಾನವು ಜಗವ ನುಂಗಿ ಅನಂತ ತತ್ವಭುವ ಬ್ರಹ್ಮಾಂಡಾದಿಗಳನು ಒಳಕೊಂಡು ಉಗುಳದಿರ್ದುದು ಸೇವ್ಯ ಸೇವಕತ್ವ ಕರ್ತೃಭೃತ್ಯತ್ವ ಒಡೆಯ ಬಂಟತ್ವವಿಲ್ಲದೆ ಹೋದಿತ್ತೆಂದು ಉದ್ಗಾರಿಸದೆ ಇರ್ದುದು.

**ಮೂಲ—** ಆದಿ ಮಧ್ಯ ಅಂತ್ಯವೆಂಬ ಭೇದವಾಕ್ಯದೊಳಗೆ ಪುಗದನಾದಿ ಸಂಸಿದ್ಧವಾಗಿ ತನ್ನ ತಾನೆ ಕಂಡು। ಅಭೇದ್ಯ ಪದವನೆಯ್ದಿ ಕೂಡಲ ಚನ್ನಸಂಗಯ್ಯನಲ್ಲಿ ಭೇದವಿಲ್ಲದಿಪ್ಪ ದಿವ್ಯಜ್ಞಾನಿ ನೋಡಾ.

**ಟೀಕು—** ಆದಿ ಮಧ್ಯ ಅಂತ್ಯವೆಂಬ ಪಶುಪದಾರ್ಥ ಪಾಶುಪದಾರ್ಥ ಪತಿಪದಾರ್ಥ ಜೀವನು ಮಾಯೆ ಶಿವನು ಆದಿಯಲ್ಲಿ ಉಂಟು ಮಧ್ಯದಲ್ಲಿ ಉಂಟು ಅಂತ್ಯದಲ್ಲಿ ಉಂಟೆಂಬ ಭೇದವಾಕ್ಯದೊಳಗೆ ಭಿನ್ನಾ

ಗಮುದ ವಚಸ್ಸಿನಲ್ಲಿ ಪೊಗದ ಪ್ರವೇಶವಾಗದ ಅನಾದಿ ಸಂಸಿದ್ಧವಾಗಿ ಅನಾದಿ ವಸ್ತುವಿನಲ್ಲಿ ಸಂಸಿದ್ಧವಾಗಿ ಎಂಬುದು ಅರ್ಥ. ಅಂತುಮಲ್ಲದೆ ಎಲ್ಲಕ್ಕು ಮೊದಲಿಗನಾದ ವಸ್ತುವೇ ತನುಮನಾತ್ಮನಲ್ಲಿ ಪ್ರಸಿದ್ಧವಾಗಿ ತನ್ನ ತಾನೆ ಕಂಡು ತನ್ನ ನಿಜ ಸ್ವರೂಪವಾದ ವಸ್ತುವೇ ತಾನೆಂದು ನಿರೀಕ್ಷಿಸಿ ಅಭೇದ್ಯ ಪದವನೆಯ್ದಿ ದ್ವೈತಾದ್ವೈತ ಹಠಕರ್ಮಯೋಗಿಗಳಿಗೆ ಭೇದಿಸಬಾರದಿರ್ದಂಥ ಚಿದ್ಘನಲಿಂಗಪದ ಸ್ವರೂಪವಾದ ಮೋಕ್ಷ ಪದದಲ್ಲಿ ಕೂಡಿ ಕೂಡಲ ಚೆನ್ನಸಂಗನಲ್ಲಿ ಪರಶಿವಲಿಂಗದಲ್ಲಿ ಭೇದವಿಲ್ಲದಿಪ್ಪ ಲಿಂಗಕ್ಕ ತನಗು ಇಂಬು ಇಲ್ಲದಿರ್ದಂಥ ದಿವ್ಯಜ್ಞಾನಿ ನೋಡಾ ಸವ್ಯಜ್ಞಾನಿ ಕಂಡಾ.

**ಸೂತ್ರ** — ಉಚ್ಯತೆ ಎಂದು ಹಿಂದಣದರ್ಥವನು ಮುಂದಣ ಸ್ಥಲಕ್ಕೆ ಕೊರೆದ ಮಣಿಗಣ ಸೂತ್ರದ ಹಾಗೆ ಪಟ್ಟುಗೊಂಡೆಯ ಕತ್ತರಿಸಿದ ಹಾಗ್ಯೆ ಬಸವನ ಬಾಲದ ಹಾಗೆ ಮುತ್ತು ಪವಣಿಗೆಯ ಮಾಡಿದ ಹಾಗೆ ಸೂತ್ರ ಹರಿಕಿಲ್ಲದೆ ಸೂಚಿಸಿ ಕೊಡಲ್ಪಟ್ಟಂಥಾದ್ದೇ ಇಂತು ಈ ಪ್ರಕಾರ ದೆಶೆಯಿಂದೆ ಪಿಂಡ ಜ್ಞಾನೋದಯವಾದ ಪಿಂಡದಲ್ಲಿ ಸವ್ಯ ಜ್ಞಾನ ಉತ್ಪತವಾದ ಮಹಾಂತನು ಮಹಿಮನು ನಿತ್ಯಾನಿತ್ಯ ವಸ್ತುವಿವೇಕವನರಿದು ಜಗತ್ತ್ರೋರಿಕೆ ಮಾಯಾ ಪ್ರಪಂಚೆಲ್ಲವು ಅನಿತ್ಯವಾದಂತಹವು ನಿತ್ಯವಾದಂತಹದೇ ಶಿವತತ್ವವೆಂಬ ವಿಚಾರವನು ತಿಳಿದು ಅನಿತ್ಯವಾದ ಅಪ್ರಸಿದ್ಧವಾದ ಅಶಾಶ್ವತವಾದ ಸಂಸಾರ ಧರೆ ದಾರಾ ಧರಿತ್ರಿಯೆಂಬ ಸಂಸೃತಿಯ ಹೊನ್ನು ಹೆಣ್ಣು ಮಣ್ಣೆಂಬ ಸಂಸೃತಿಯ ಅಷ್ಟಭೋಗಮಲತ್ರಯವೆಂಬ ಸಂಸೃತಿಯ ಪಂಚವಿಷಯಂಗಳೆಂಬ ಸಂಸೃತಿಯ ಪುತ್ರ ಮಿತ್ರ ಕಳತ್ರವೆಂಬ ಸಂಸೃತಿಯ ಎಂಬುದೀಗ ಧ್ಯೇಯ ಜಿಗುಪ್ಸೆಯು ಉಪಾಯುಮಂ ಉಪಮಾನಿಕೆಯನು ತಂತ್ರಭಾಗೆಯನು ತೊಲಗಿ ಹೋಗುವಂಥ ಹರಿತವನು ಕಂಡು ನೋಡಿ ತಾನು ಜ್ಞಾನ ಕಲಾತ್ಮನು ತಾನು ನಿರಸನ ಮಾಡುತ್ತಿರಲು ಇದಂ ನೆಲೆಯಿದಂ ನೆಲೆಯೆಂದು ತಿರಸ್ಕಾರವ ಮಾಡುತ್ತಿರಲು ಮುಂದೆ ಪುರಸ್ಸರದಲ್ಲಿ ಸಂಸಾರ ಹೇಯ ಸ್ಥಲವಾದುದು, ಸಂಸಾರ ಹೇಯಸ್ಥಲವೆಂದು ಹೇಳಲಾದುದು.

## ಸಂಸಾರ ಹೇಯಸ್ಥಲ

**ಮೂಲ—** ಏವೆ ಸಂಸಾರ ಮಾಯಾಮಯದ ಭಯ ತನುವ ನಾವರಿಸಿ ನುಂಗುತಿದೆ ನಾನಾ ಭವದ ದುಃಖಧಾವತಿಗೆ ಹೇವರಿಸಿ ಮೊರೆ ಹೊಕ್ಕೆ ಮದನಾರಿ ಕಾಯಿ ಕಾರುಣ್ಯನಿಧಿಯೇ.

**ಟೀಕು—** ಸಂಸಾರ ಹೊನ್ನು ಹೆಣ್ಣು ಮಣ್ಣೆಂಬ ಸಂಸೃತಿಯ ಮಾಯಿ ಅವಿದ್ಯೆಯ ಆ ಮಾಯೆಯ ಹೆಚ್ಚಿದ ರೋಗದ ಭಯ ಅದರ ಭೀತಿಯು ತನುವನು ಅಂಗವನು ಆವರಿಸಿ ಆಪೋಷಣಂಗೊಂಡು ನುಂಗುತಿದೆ ಹೇಳನಂಗೆಯ್ಯುತಿದೆ. ಏವೆ ? ಇನ್ನೇನು ಜಪವ ಮಾಡಲೋ ತಪವ ಮಾಡಲೋ ಧ್ಯಾನವ ಮಾಡಲೋ ಮೌನವ ಮಾಡಲೋ ಕೃತ್ಯೋಪವಾಸವ ಮಾಡಲೋ ಎಂದು ಚಿಂತಿಸುತ್ತಿಹೆನು. ಜ್ಞಾನ ಕಲಾತ್ಮನು ನಾನಾ ಭವದ ಹಲವು ಜನ್ಮದ ದುಃಖ ದುಗುಡವು ಧಾವತೆಗೆ ಓಡಾಟದ ದಂದುಗಕ್ಕೆ ಹೇವರಿಸಿ ಜಿಗುಪ್ಸಿತನಾಗಿ ಮದನಾರಿ ಮನ್ಮಥ ಸಂಸಾರಿಯಾದಂಥ ಎಲೆ ಪರಮೇಶ್ವರನೇ ಮರೆಹೊಕ್ಕೆ, ಆಸ್ಪದಗೊಂಡೆನು, ಶರಣಾಗತನಾದೆನು. ಕಾರುಣ್ಯ ನಿಧಿಯೇ ಘೃಣಾಶೀಲನಾದ ಎಲೆ ಪರಮೇಶ್ವರನೇ ದಯಕ್ಕೆ ಸ್ಥಾನವಾದ ಎಲೆ ಪರಮೇಶ್ವರನೇ ಕಾಯಿ ಅಂತರಂಗದಲ್ಲಿ ಜ್ಞಾನೋದಯವನ್ನಿತ್ತು ಬಹಿರಂಗದಲ್ಲಿ ಗುರುವಾಗಿ ಬಂದು ವೇಧಾ ಮಂತ್ರ ಕ್ರಿಯೆಗಳೆಂಬ ದೀಕ್ಷಾತ್ರಯವನು ಕರುಣಿಸಿ ನಿನ್ನ ಪಾದೋದಕ ಪ್ರಸಾದವನು ಕೊಟ್ಟು ಸಂರಕ್ಷಣೆಯ ಮಾಡು.

**ಮೂಲ—** ಶುಕ್ಲ ಶೋಣಿತ ಬದ್ಧಮಲದಿಂದಲಾದಂಗೆ। ಪ್ರಕೃತಿ ಕಾಯಕೆ ಸತ್ಯ ಮಾಯಾಮಲತ್ರಯದ। ಸಕಲ ಪ್ರಪಂಚು ಮೋಹಾನು ಬಂಧನವೆ ವ್ಯಾಪ್ತಿಯಾಗಿ ನಿಮ್ಮಾ ॥ ಸಕೃತ ಚಿಂತನೆ ಮಾಡಲೀಯದಿದನೆ ತೋರಿ। ವಿಕಳನೆನಿಸದೆ ಕರುಣದಿಂ ಬಂದು ಭಕ್ತದೇ। ಹಿಕ ದೇವನೆಂಬುದುಂಟೆದ ನೋಡಿ ಪರಿಹರಿಸು ಮಾಯಾವಿಡಂಬನವನು.

**ಟೀಕು—**ಶುಕ್ಲ ಶೋಣಿತ ತಂದೆಯ ವೀರ್ಯವು ತಾಯಿಯ ರಕ್ತವು ಬದ್ಧ ಈರ್ವರ ಶರೀರದಲ್ಲಿ ಗಟ್ಟಿಕೊಂಡು ಹುಟ್ಟಿದಂಥ ಮಲದಿಂದ ಕಲ್ಮಷದಿಂದ ಆದ ಆಗುವ 'ಪ್ರಾದುರ್ಭಾವೆ' ಎಂಬ ಧಾತುವಿನಿಂದೆ ಪ್ರಾದುರ್ಭವಿಸಿದ ಅಂಗಶರೀರವು ಪ್ರಕೃತಿ ಕಾಯಕ್ಕೆ ಪ್ರಪಂಚಿನ ಶರೀರಕ್ಕೆಂಬುದು

ಅರ್ಥ. ಅಂತಃಮಲ್ಲದೆ ಶುಕ್ರ ಶೋಣಿತ ಆತ್ಮಸಂಗದಿಂದ ಅಂಗಕ್ಕೆ ಮಾಯಾ ಮಲತ್ರಯದ ಅವಿದ್ಯಾ ಮಲ ಮೂರನು ಸಕಲ ಪ್ರಪಂಚು ಅದರಿಂದಾದ ಹೊನ್ನು ಪ್ರಪಂಚ, ಹೆಣ್ಣು ಪ್ರಪಂಚ, ಮಣ್ಣು ಪ್ರಪಂಚ, ಇಂದಿಗೆ ನಾಳಿಗೆ ಳಿದರೂ ತೀರಬಾರದೆ ಇರ್ದ ಸಂಸ್ಕೃತಿಯು. ಮೋಹ ಮಮಕಾರವು ಆನು ಬೇಂಬಳಿಯು ಬಂಧದ ಬಂಧನವೇ ಕಟ್ಟಿನ ಕಟ್ಟಳೆಯೇ ಪ್ರಾಪ್ತಿಯಾಗಿ ಆತ್ಮನಿಗೆ ವಿಧಿಯಾಗಿ ದೊರವಣವಾಗಿ ದೊರಕೊಂಡಿತ್ತಾಗಿ ನಮ್ಮ ಎಲೆ ಪರಶಿವಲಿಂಗವೇ ನಿಮ್ಮ ಸಕೃತ್ ಕಿಂಚಿತ್ತು ಹೊತ್ತು ಒಂದೆಪ್ಪೊತ್ತು ಚಿಂತನೆಯ ಮಾಡಲೀಯದು. ಶಿವಲಿಂಗ ಧ್ಯಾನದೊಳು ಸ್ಮರಿಸಲೀಸದು. ಇದನೆ ತೋರಿ ನೋಡುವ ಕಣ್ಣಿಗೆ ಹೆಣ್ಣು ತೋರಿ ನೆನೆವ ಮನಕ್ಕೆ ಹೊನ್ನು ತೋರಿ ಪೂಜಿಸುವ ಕೈಗೆ ಮಣ್ಣನು ಕಾಣಿಸಿ ವಿಕಳನೆನಿಸದೆ ಅದರಲ್ಲಿಯೇ ಹುಚ್ಚಾತ್ಮನೆನಿಸದೆ ಮರುಳಾತ್ಮನೆನಿಸವೆ ಕರುಣದಿಂದೆ ಕೃಪೆಯಿಂದೆ ಬಂದು ಅಂತರಂಗದಲ್ಲಿ ಜ್ಞಾನೋದಯವಿತ್ತು ಬಹಿರಂಗದಲ್ಲಿ ಗುರುವಾಗಿ ಬಂದು ಭಕ್ತದೇಹಿಕ ದೇವನೆಂಬುದುಂಟು, ಭಕ್ತ ದೇಹಿಕ ದೇವಾನಾಂ ದೇಹಿಕ ಭಕ್ತಾನಾಂ, ಎಂದು ಶೃತಿವಾಕ್ಯವುಂಟು. ಅದ ಆ ಶ್ರುತಿ ವಾಕ್ಯವನು ನೋಡಿ ನಿನ್ನ ಘೃಣಾ ದೃಷ್ಟಿಯಿಂದೆ ನಿರೀಕ್ಷಿಸಿ ಮಾಯಾ ವಿಡಂಬನವನ್ನು ಎಲ್ಲರನು ತನ್ನ ದಿನದಲ್ಲಿ ಮಡಿಗಿಕೊಂಡು ಉಲ್ಲಂಘಿಸಿ ಬಿಡುವ ಉದ್ದಂಡ ವೃತ್ತಿಯನುಳ್ಳ ಅವಿದ್ಯೆಯ ವಿಶೇಷವಾದ ಹೆಚ್ಚುಗಾರಿಕೆಯನ್ನು ಪರಿಹರಿಸು ನಷ್ಟವ ಮಾಡು.

**ಮೂಲ** — ಆಸೆಯಾಮಿಷದ ಸಂಸಾರ ತಾಮಸದ ವಾರಾಶಿಯೊಳಗಾಳುತ್ತೇಳುತ್ತಲದಕೆ ಕಡೆಗಾಣ। ದಾಸತ್ತಳಲುತ್ತೊಡಲ ಹೊರೆವ ಮಾಯಾ ಭ್ರಮೆಯ ಕ್ಲೇಶ ದಂಡಲೆ ತನುವನು॥ ಗಾಸಿ ಮಾಡಿ ಹಿತೇಷಣತ್ರಯದ ಮೋಹಿನಿಯ ಪಾಶ ಪಾಣಿಯೊಳು ಸಿಲ್ಕಿದ ಶಿಸುವಿಗ ಭಯಂಕರದಾಶೆ ದೋರೆಳದುಕೋ ನಿಮ್ಮತ್ತ ದುರಿತಾರಿ ಪಾಶ ನಿರ್ಮುಕ್ತ ಶಿವನೇ.

**ಟೀಕು** — ಆಶೆಯು ಧರೆ ದಾರ ದ್ರವ್ಯದ ಮೇಲಣ ವಾಂಛೆಯು ಹೊನ್ನಾಗಬೇಕು ಹೆಣ್ಣಾಗಬೇಕು ಮಣ್ಣಾಗಬೇಕೆಂಬ ಅಪೇಕ್ಷೆಯು ಆಮಿಷದ ಹೊನ್ನಿರ್ದು ಹೊನ್ನು ಹೆಣ್ಣಿರ್ದು ಹೆಣ್ಣು ಮಣ್ಣಿರ್ದು ಮಣ್ಣು

ಅನ್ನಾಚ್ಛಾದನವಿರ್ದು ಅನ್ನಾಚ್ಛಾದನವಾಗಬೇಕೆಂಬ ಅಂತಿಕಾಂಕ್ಷೆಯು ಸಂಸಾರ ಸಂಸ್ಕೃತಿಯು ತಾಮಸದ ತಮಂಧದ ದುರಾಶೆಯೊಳಗೆ ಸಮುದ್ರದಲ್ಲಿ ಅಳುತ್ತೇಳುತ್ತ ತೇಲುತ್ತ ಮುಳುಗುತ್ತ ಜನನವಾಗಿ ಮರಣಕ್ಕೆ ಬರುತ್ತ ಮರಣವಾಗಿ ಜನನಕ್ಕೆ ಬರುತ್ತ ಅದಕ್ಕೆ ಆ ಸಂಸಾರವೆಂಬ ಸಮುದ್ರಕ್ಕೆ ಕಡೆಗಾಣದೆ ಪಾರವಗಾಣದೆ ಆಸತ್ತು ಆತ್ಮ ಸತ್ವಗುಂದಿ ಅಳಲುತ್ತ ಆಯಸಂಬಡುತ್ತ ಒಡಲ ಕೊರೆವ ೨೫ ತತ್ವಯುಕ್ತವಾದ ಘಟ ರಕ್ಷಣೆಯ ಮಾಡುವ ಮಾಯಾ ಭ್ರಮೆಯು ಅವಿದ್ಯಾ ಸಂದೇಹದ ಕ್ಲೇಶದ ಪಂಚಕ್ಲೇಶದ ದ್ವೇಷ ಅಂಡಲೆ ಅಟ್ಟುಳಿಯು ಅಲೆದಾಟವು ಎದ್ದೊಡಿಕೆಯು ತನುವನು ಅಂಗವನು ಗಾಸಿ ಮಾಡಿ ಗಾರು ಮಾಡಿ ಹಿತ ಆತ್ಮನಿಗೆ ಸಖವಾದ ಈಷಣತ್ರಯದ ಅರ್ಥೇಷಣ ಪುತ್ರೇಷಣ ದಾರೇಷಣವೆಂಬ ಮೂರರ ಮೋಹಿನಿಯು ಜಗನ್ಮೋಹಿನಿಯು ಪ್ರ ಮಾಯೆಯು ಪಾಶ ಅಷ್ಟಪಾಶ ನವಪಾಶ ಮಾಯಾಪಾಶ ಪ್ರಪಂಚ ಪಾಶ ಕ್ಲೇಶಪಾಶ ಆಶಾ ಪಾಶಂಗಳ ಎಂಬುದೀಗ ಪಾಣಿಯೊಳು ಹಸ್ತದಲ್ಲಿ ಶಿಲುಕಿದ ವಶಗತವಾದ ಶಿಶುವಿಗೆ ಜ್ಞಾನವಿಹೀನವಾದ ಆತ್ಮನಿಗೆ ಅಭಯಕರದ ಅಭಯ ಹಸ್ತದ ಆಶೆ ದೋರಿ ನಿಜಾಪೇಕ್ಷೆಯನು ಕಾಣಿಸಿ ನಿಮ್ಮತ್ತ ಎಲೆ ಪರಶಿವಲಿಂಗವೇ ನಿಮ್ಮ ದಿಕ್ಕಿಗೆ ಎಳೆದುಕೋ ಅಭಿಮುಖಾಸ್ಪದವ ಮಾಡಿಕೋ ದುರಿತಾರಿ ಅಷ್ಟೋತ್ತರ ಶತವ್ಯಾಧಿಗಳಿಗೆ ವೈರಿಯಾದಂಥ ಪಾಶ ಅಷ್ಟಪಾಶ ನವಪಾಶ ಮಲಪಾಶ ಮಾಯಾ ಪಾಶಂಗಳನು ನಿರ್ಮುಕ್ತ ಶಿವನೇ ನೆರೆ ಬಿಡಲ್ಪಟ್ಟಂಥ ಎಲೇ ಪರಮೇಶ್ವರನೇ.

**ಮೂಲ** — ಆವಾವ ಮುಖ ಮುಖದೊಳಲ್ಲಿಗಲ್ಲಿಗೆ ತಾನೆ। ಭಾವಿ ತಾ ಭಾವದೊಳು ನಿಮ್ಮ ಭ್ರಮೆಯುಂ ಬೀರು। ತಾವಳೋಕಿಸುತ್ತವಗ್ರಹಿಸಿಪ್ಪ ಸಂಸಾರ ಸರ್ವತೋಮುಖವೆನ್ನನೂ ॥ ಆವ ಕಡೆಗಡಿಯಿಡಲು ತೆರಹುಗುಡದೈ ಮಹಾದೇವ ನಿಮ್ಮುವ ನೆನೆಯಲೀಯದಿನ್ನೇವೆನೀ। ದಾವತಿಯ ಪರಿಹರಿಪುದೇನರಿದು ಮದನಾರಿ ಮಾಯಾರಿ ದುರಿತಾರಿ ಗುರುವೇ.

**ಟೀಕು**— ಆವಾವ ಮುಖದೊಳು ನೂರೊಂದು ಕುಲ ಹದಿನೆಂಟು ಜಾತಿಯ ವಕ್ತ್ರವಕ್ತ್ರದಲ್ಲಿ ಅಲ್ಲಿಗಲ್ಲಿಗೆ ತಾನು ಆಯಾಯ ಸ್ಥಾನಕ್ಕೆ ತಾನೇ- ಎಳ್ಳಿಗೆ ಎಣ್ಣೆಯಾಗಿ ಮುಳ್ಳಿಗೆ ಮೊನೆಯಾಗಿ ಊರಿಗೆ ದಾರಿಯಾಗಿ ಯತಿಗೆ ಪರಾಕ್ರಮಿಯಾಗಿ ವ್ರತಿಗೆ ಕಂಥಣಿಯಾಗಿ ಜೋಗಿಗೆ ಜೋಗು

ತೆಯಾಗಿ ದಾಸನಿಗೆ ದಾಸತೆಯಾಗಿ ಜಂಗಮನಿಗೆ ತೊಂಡಶೀಲವಂತಿ
ಯಾಗಿ ಹೀಗೆ ಆಯಾಯ ಮತಾಂತರಕ್ಕೆ ತಕ್ಕ ಷಡುದರುಶನ ಸ್ವರೂ
ಪಿಣಿಯಾಗಿರ್ಪಳು ಎಂಬುದೀಗ ಭಾವಿತ ಭಾವದೊಳು ಸಿದ್ಧಾಸನ ಪದ್ಮಾ
ಸನ ಪರ್ಯಂಕಾಸನ ಅರ್ಧ ಚಂದ್ರಾಸನಂಗಳಲ್ಲಿ ಕುಳಿತು ಹೃದಯ ಕಂಠ
ಭ್ರೂಮಧ್ಯ ಸ್ಥಾನಂಗಳಲ್ಲಿ ವಸ್ತುವನು ಕುರುಹಿಟ್ಟು ಕಂಡು ಕೂಡಬೇ
ಕೆಂದು ಬಗೆವ ಭಿನ್ನ ಯೋಗಿಗಳ ಅಂತರಂಗದಲ್ಲಿ ಎಂಬುದೀಗ ನಿಂದು
ತನ್ನ ದುಶ್ಚರಿತ್ರವೆಂಬ ಚರಣವನೂರಿ ಅದಸ್ಯ ಮಾಡಿ ತುಳಿದು ನೆಲಸಿ
ಭ್ರಮೆಯುಂ ಹೊನ್ನಾಗಬೇಕು, ಹೆಣ್ಣಾಗಬೇಕು, ಮಣ್ಣಾಗಬೇಕೆಂಬ
ಭ್ರಮೆಯುಂ ಭ್ರಾಂತನೆ ಬೀರುತ್ತ, ಉಂಟು ಮಾಡುತ್ತ, ಬಿತ್ತರಿಸುತ್ತ,
ಅವಳೋಕಿಸುತ್ತ, ಎಲವೋ ನಿನ್ನ ಜನನ ಮರಣಂಗಳಲ್ಲಿ ತಂದು ಕಾಲ
ಕಾಮ ಮಾಯಾದಿಗಳ ಕೈಯಲ್ಲಿ ಕೊಟ್ಟು ಸಂಹರಿಸಿದರೆ ಬಿಡಿಸಿಕೊಂಬು
ವರಾರಿದ್ದರೆಲವೋ ಎಂದು ತನ್ನಜ್ಞಾನ ಮಾಯ ಧೂರ್ತದೃಷ್ಟಿಯಿಂದೆ
ನಿರೀಕ್ಷಿಸುತ್ತ ಸಂಸಾರ ಸಂಸೃತಿಯು ಸರ್ವತೋಮುಖವೆನ್ನ ಅನುಗ್ರಹಿ
ಸಿರ್ಪುದು. ಮಗಳು ಅಕ್ಕ ತಂಗಿಯು ಮಿಗೆ ಸೊಸೆ ನಾದಿನಿಯು ಜಗದ ವನಿ
ತೆಯರು ಜನನಿ ಮುಂತಾದವರು ಜಗಕೊಬ್ಬಳೈಸೆ ಎಂದು ಅಕ್ಕನಾಗಿ
ತಂಗಿಯಾಗಿ ಸೊಸೆಯಾಗಿ ಸಹೋದರಿಯಾಗಿ ಎಲ್ಲ ಕಡೆಯಲ್ಲಿ ವಕ್ರವಾಗಿ
ನನ್ನನು ಹಿಡಿದಿರ್ಪುದು. ಆವ ಕಡೆಗೆ ಆವ ದಿಕ್ಕಿನಲ್ಲಿ ಅಡಿಯಿಡಲು ಹಜ್ಜೆ
ಯಿಡಲು ಅಂತುಮಲ್ಲದೆ ಕ್ರಿಯಾಪಾದ, ಜ್ಞಾನಪಾದ, ಯೋಗಪಾದ
ಚರ್ಯಾಪಾದಂಗಳಿಂದೆ ಅಡಿಯಿಟ್ಟು ಚರಿಪೆನೆಂದರು ತೆರುಹುಗುಡದು
ತೆರಪುಗೊಡದೀ ಮಾಯಾ ಪ್ರಪಂಚು ಇಂಬುಗೊಡದೀ ಪ್ರಕೃತಿಯು
ಅಯಿ ಮಹಾದೇವ, ದೇವರ ದೇವ, ದೇವಶಿಖಾಮಣಿ, ದೇವ ಚೂಡಾ
ಮಣಿ, ಪರದೈವ ವೇಶ್ಯಾಭುಜಂಗ, ಬೋಳೆಯರರಸ, ಎಲ್ಲ ದೇವರಿಗೆ ವಲ್ಲ
ಭನಾದಂಥ ಎಲೆ ಪರಮೇಶ್ವರನೇ, ನಿಮ್ಮ ಲಿಂಗವ ನೆನೆಯಲೀಯದು
ಸ್ಮರಿಸಲೀಸದು, ಇನ್ನೇವೆ ಇನ್ನೇನ ಜಪವ ಮಾಡಲೋ ತಪವ ಮಾಡಲೋ
ಕೃತ್ಯೋಪವಾಸ ಮಾಡಲೋ ಎಂದು ಚಿಂತಿಸುತ್ತಿಹನು ಜ್ಞಾನಕಲಾ
ತ್ಮನು. ಈ ಧಾವತೆಯ ಈ ಓಡಾಟವನು ಪರಿಹರಿಪುದೇನು ನಷ್ಟವ
ಮಾಡುವುದೇನು ನಿನಗೇನು ಕಷ್ಟವೆ? ಕಾಲನ ಕೊಂದೆ, ಕಾಮನ ಕೊಂದೆ,
ತ್ರಿಪುರ ಸಂಹಾರವ ಮಾಡಿದೆ, ಒಕ್ಕು ಮಿಕ್ಕ ದೈತ್ಯರ ಸಂಹರಿಸಿದೆ, ನಿನ್ನಂ
ಶೀಭೂತನಾದ ಜ್ಞಾನ ಕಲಾತ್ಮ ಎನ್ನನು ಸುತ್ತಿ ಮುತ್ತಿ ಆವರಿಸಿದ

ಮಾಯಾ ಪಾಶವನು ನಿರಹರಣವ ಮಾಡುವುದು ಇದೇನು ನಿನಗೆ ಆಶ್ಚರ್ಯವೇ ಚೋದ್ಯವೇ ಮದನಾರಿ, 'ಮದನೋ ಮನ್ಮಥೋ ಮಾರೋ ಪ್ರದ್ಯುಮ್ನೋ ಮೀನ ಕೇತನಃ ಕಂದರ್ಪ ದರ್ಪಕೋನಂಗಃ ಕಾಮಃ ಪಂಚ ಶರಃ ಸ್ಮರಃ' ಎಂದು ಮನ್ಮಥನಿಗೆ ಶತ್ರುವಾದಂಥ ಎಂಬುದೀಗ ಮಾಯಾರಿ ಕೃಷ್ಣಾಂಗಿಗೆ ಹಗೆಯಾದಂಥ ದುರಿತಾರಿ ಅಷ್ಟೋತ್ತರಶತವ್ಯಾಧಿಗಳಿಗೆ ವೈರಿಯಾದಂಥ ಗುರುವೇ, ಸ್ವಯಂ ಜ್ಯೋತಿ ಸ್ವರೂಪವಾದಂಥ ಆಚಾರ್ಯನೇ.

**ಮೂಲ**— ಹುಟ್ಟಿ ಹೊಂದುವ ಹೊಂದಿ ಹುಟ್ಟುತ್ತಿಹ ಭವ ಮಾಲಿಯಟ್ಟುಳಿಯ ಕ್ಲೇಶ ನಾನಾ ಕರ್ಮ ರೋಗ, ಭಯ, ಕಷ್ಟ, ವ್ಯಸನಂಗಳಿಂ ಬೇವ ದುಷ್ಕೃತದ ತಾಮಸ ತವಕ ಮಾಯೆ ಮನವಾ। ಮೆಟ್ಟಿಕೂಗಿಡೆ ಕೊಲುತಲಿದೆ ಇದರ ದೆಸೆಯಿಂದೆ ಕೆಟ್ಟೆ ಶಿವಧೋ ಶಿವನೇ ದಂದುಗದ ದಾಳಿಯುರಿಯುಟ್ಟುತ್ತಿದೆ ನಿಲಲಾರೆ ನಿಮ್ಮಡಿಯ ಮರೆಯೊಳಿಂಬಿಟ್ಟು ರಕ್ಷಾಮಣಿಯೇ ರಕ್ಷಿಸುವುದು.

**ಟೀಕು**— ಹುಟ್ಟಿ ಉತ್ಪತ್ಯವಾಗಿ ಹೊಂದುವ ಲಯುವ ಹೊಂದುವ ಹೊಂದಿ ಲಯುವ ಹೊಂದಿ ಹೊಂದಿ ಹುಟ್ಟುತ್ತಿಹ ಮತ್ತೆ ಉತ್ಪತ್ಯವಾಗುತ್ತಿರ್ದಂಥ ಭವಮಾಲೆ, ಅಂಡಜ ೨೧ ಲಕ್ಷ ಉದ್ಭಿಜ ೨೧ ಲಕ್ಷ ಸ್ವೇದಜ ೨೧ ಲಕ್ಷ ಜರಾಯುಜ ೨೧ ಲಕ್ಷ ಇಂತೀ ಎಂಬತ್ತುನಾಲ್ಕು ಲಕ್ಷಯೋನಿಯ ಮುಖದಲ್ಲಿ ಮರುದ್ಗತ ಪತ್ರಮುಸಕ ತಾಲವೃಂತ ಕಲಾಲನ ಚಕ್ರಬಡಿಸಿದನಡ್ವ ಅಂಮಾಲಿ ಕಂತುಕ ಸಾಣಿ ಬಾರು ರಾಟಾಳದ ಘಟದೋಪಾದಿಯಲ್ಲಿ ಹುಟ್ಟಿ ಹುಟ್ಟಿ ಬರುವ ಜನ್ಮ ಸರಮಾಲೆಯು ಅಟ್ಟುಳಿಯು ಎದ್ದೊಡಿಕೆಯು ಕ್ಲೇಶವ ದ್ವೇಷದ ಪಂಚಕ್ಲೇಶದ ನಾನಾ ಕರ್ಮ ಫಲವು ಪಾಪಕ್ರಿಯು ಸಮಸ್ತ ಷಟ್‌ಕೃಷಿ ವ್ಯಾಪಾರವು ರೋಗ ಅದರಿಂದ ಬಂದು ತಟ್ಟುವಂಥ ವ್ಯಾಧಿಯು ಭಯ ಅದರಿಂದ ಬರುವ ಭೀತಿಯು ಕಷ್ಟ ಕೆಟ್ಟಂಥ ವ್ಯಸನಂಗಳಿಂ ಸಪ್ತ ವ್ಯಸನಂಗಳಿಂದ ಬೇವ ದಹನವಾಗುವ ದುಷ್ಕೃತದ ಪಾಪರೂಪವಾದ ಸುಕೃತವಲ್ಲದಿರ್ದಂಥ ತಾಮಸ ತಮಂಥವು ತವಕ ತ್ವರಿತವು ಮಾಯೆ ಅವಿದ್ಯೆಯು ಮನವ ಮಾನಸವ ಮೆಟ್ಟಿ ದುಶ್ಚರಿತ್ರವೆಂಬ ಚಣದಿಂದ ಅದಸ್ಸಮಾಡಿ ತುಳಿದು ಎಂಬುದೀಗ ಕೂಗಿಡೆ ಶಿವಧೋ, ಎಂದು ಮೊರೆಯಿಟ್ಟಡೂ ಕೋಲುತಲಿದೆ ಬಿಡದೆ ಸಂಹರಿಸುತ್ತಿದೆ. ಇದರ ದೆಶೆಯಿಂದೆ ಈ ಮಾಯಾ ಪ್ರಪಂಚಿನ

ದಿಕ್ಕಿನಿಂದೆ ಕೆಟ್ಟಿ ಶಿವತತ್ವ ಕೆಟ್ಟು ಜೀವನಾದೆನು. ಶಿವಧೋ ಶಿವನೇ ಶಿವಶಿವ ಧೋ ಎನ್ನ ಮೊರೆಯನು ಲಾಲಿಸು. ದಂದುಗ ಧಾವತಿಯ ದಾಳಿ ಸೂರೆಯು ಎರೆಯಟ್ಟುತ್ತಿದೆ, ಎರೆಯಟ್ಟಿ ಎಬ್ಬಟ್ಟಿ 'ಅನುಧಾವನೆ' ಎಂದು ಆತ್ಮನ ಬೆನ್ನಟ್ಟುತ್ತಿದೆ ನಿಲಲಾರೆ ಈ ಮಾಯಾಪ್ರಪಂಚಿನ ದಿಕ್ಕಿಗೆ ಎದೆ ಗೊಟ್ಟು ನಿಲಲಮ್ಮೆನು ನೆಲಸಲಮ್ಮೆನು. ಸೈರಿಸಲಮ್ಮೆನು ನಿಮ್ಮಡಿಯ ಮರೆಯೊಳು ನಿಮ್ಮ ಪಾದಕಮಲ ಸ್ವರೂಪವಾದ ಇಷ್ಟಲಿಂಗದ ಜವನಿ ಕೆಯಲ್ಲಿ ಇಂಬಿಟ್ಟು ಎಡೆಯಿಟ್ಟು ರಕ್ಷಿಸುವಲ್ಲಿ ಮಣಿಯೆ ಸುರಮಣಿ ಸ್ವರೂಪವಾದ ರಕ್ಷಣ ಕರ್ತುವಾದ ಮೇಲೆ ಪರಮೇಶ್ವರನೇ ರಕ್ಷಿಸುವುದು. ಅಂತ ರಂಗದಲ್ಲಿ ಜ್ಞಾನೋದಯವಿತ್ತು ಬಹಿರಂಗದಲ್ಲಿ ಗುರುವಾಗಿ ಬಂದು ಮಾಯಾಪ್ರಪಂಚೆಲ್ಲವನು ನಿರಹರಣವ ಮಾಡು ನಿನ್ನ ಪಾದೋದಕ ಪ್ರಸಾದವನು ಕೊಟ್ಟು ಸಲಹುವದು.

**ಮೂಲ** — ಭವಪಾಶಬಂಧದಿಂ ಬಿಗಿದು ಕವಿಲೆಯ ಹುಲಿಯ। ಗವಿಯೊಳಗೆ ಕಟ್ಟಿದಂತಾದೆ ಸಂಸಾರವೆಂ। ಬವಿಚಾರಸರ್ಪ ಸರ್ವ ಗ್ರಾಸ ಗೊಂಡುದಿದನೊಮ್ಮೆ ನೋಡಿ ಪರಿಹರಿಸಿ ನಿಮ್ಮಾ॥ ಅವಿರಳ ಶ್ರೀಪಾದದೊಳು ಮನ ಮಗ್ನವಾಗಿ ಮ। ತ್ರವಿಕಲ್ಪ ಸಮಸುಖಾನಂದದೊಳಗೆಂದಿಹೆನೋ। ಭವರಹಿತ ಪರಮೇಶ ಪಾಲಿಸೈ ಮದ್ಗುರುವೆ ಉಳಿವುಮೇಶ್ವರಲಿಂಗವೇ.

**ಟೀಕು**-ಭವಪಾಶ ಜನ್ಮಪಾಶ ನೇಣಿನ ಬಂಧದಿಂ ಕಟ್ಟಿನಿಂದೆ ಬಿಗಿದು ಬಂಧಿಸಿ ಕವಿಲೆಯ ಜೀವನ ಹುಲಿಯ ಕಾಲವ್ಯಾಘ್ರನ ಗವಿಯೊಳಗೆ ದೇಹವೆಂಬ ಗುಹೆಯಲ್ಲಿ ಕಟ್ಟಿದಂತಾದೆ. ಆಶಾಪಾಶಗಳೇ ಬದ್ದೆ "ಗುಹಿ ಸಾಕಾವಲಂಬಿನಾ ಪುತ್ರದ್ವಾರದ್ವಯೋಶ್ವಾನ ಭಾದ್ಯ ತಲೆ ನಹಪನೆ" ಎಂದು ಆಶೆಯೆಂಬ ಪಾಶದಲ್ಲಿ ಬಂಧಿಸಿದ ಹಾಗೆ ಪರಾಧೀನವನುಳ್ಳ ಜೀವ ನಾದೆನು ಎಂಬುದರ್ಥ. ಅಂತುಮಲ್ಲದೆ ಒಬ್ಬಾನೊಬ್ಬ ಹಲಾಯುಧನು ತನ್ನ ಕ್ಷೇತ್ರವನು ಮೆಯಬಂದ ತುಂಡು ಪಶುವನು ಹಿಡಿದುಕೊಂಡು ಹೋಗಿ ಹುಲಿಯ ಗವಿಯೊಳಗೆ ಗೂಟವ ನಡಿಸಿ ಕಣ್ಣಿ ಹಚ್ಚಿ ಹುಲ್ಲು ಹಾಕಿ ನೀರು ಹೊಯ್ದು ಹೋಗುವನು. ಹೋದಲ್ಲಿ ಹುಲಿಯ ವ್ಯೆಗಾ ವಲು ತಾಗುವದು. ತಾಗಿದಲ್ಲಿ ಭಯಮಾವರಿಸುವುದು. ಆವರಿಸಿದಲ್ಲಿ ಆ ಹುಲಿ ಬಂದು ಅವಾಗ ಮುರಿದು ಹೋದೀತೋ, ಎನ್ನೊಡೆಯ ಬಂದು ಆವಾಗ ಕೊರಳ ಕಣ್ಣಿಯ ಕಳಚಿ ತೆಗೆದುಕೊಂಡು ಹೋದಾನೋ, ಎಂದು ಆ ಹುಲ್ಲನು ಮೇಯದೆ ನೀರನು ಕುಡಿಯದೆ ಚಿಂತಿಸುವ ಗೋವಿನೋ

ಪಾದಿಯಲ್ಲಿ ಕಾಲವ್ಯಾಘ್ರಂಗಾಶ್ರಯವಾದ ದೇಹವೆಂಬ ಗುಹೆಯಲ್ಲಿರ್ದ ಜೀವನೆಂಬ ಪಶುವಿನ ಅದೃಢವೆಂಬ ಕಂಠವನು ದುರ್ಭಾವವೆಂಬ ಸ್ತಂಭಕ್ಕೆ ಮಾಯಾಪಾಶದಿಂ ತೊಡರ್ಚಿ ತೃಣವಿಷಯವನು ಮೆಯಿಗೊಟ್ಟು ಸಂಸಾರ ವಿಷಯ ಜಲವನು ಮೋಹಿಸಿದಲ್ಲಿ ಆ ಕಾಲವ್ಯಾಘ್ರನ ದುರ್ವಾಸನಾ ಭಯವು ತಾಗುವದು. ತಾಗಿದಲ್ಲಿ ಆ ದೇಹವೆಂಬ ಗುಹೆಯಲ್ಲಿರ್ದ ಕಾಲವ್ಯಾಘ್ರನು ಆವಾಗ ಬಂದು ಮುರಿದು ಹೋದೀತೋ ಎನಗೊಡೆಯನಾದ ಶ್ರೀಗುರು ಮೂರ್ತಿಯು ಆವಾಗ ಬಂದು ಈ ಮಾಯಾಪಾಶವನು ಬಿಡುಗಡೆಯ ಮಾಡಿ ತನ್ನತ್ತ ತೆಗೆದುಕೊಂಡು ಹೋದಾನೋ ಎಂದು ಚಿಂತಿಸುತ್ತಿಹನು ಆ ಜ್ಞಾನಕಲಾತ್ಮನು ಎಂಬುದೀಗ 'ಸಂಸಾರ ಸರ್ಪದಷ್ಟಾನಾಂ ತ್ರೈಲೋಕ್ಯಂ ಸಚರಾಚರಂ। ಚಂದ್ರಶೇಖರ ಪಾದಾಬ್ಜ ಸ್ಮರಣಂ ಪರಮೌಷಧಂ' ಎಂದು ಸಂಸಾರವೆಂಬ ಸಂಸೃತಿಯೆಂಬ ಅವಿಚಾರಸರ್ಪ ವಿಚಾರಹೀನವಾದ ಪನ್ನಗನೆಂಬುದು ಅರ್ಥ. ಅಂತುಮಲ್ಲದೆ ಒಂದಾನೊಂದು ವಿಚಾರಸರ್ಪನು ತನ್ನ ಸೋಂಕಿದಲ್ಲಿ ತುಳಿದಲ್ಲಿ ಬಂದು ಕಚ್ಚುವದು. ಆ ವಿಚಾರ ಸರ್ಪನೇ ತನ್ನ ತಟ್ಟದೆ ಮುಟ್ಟದೆ ತುಳಿಯದೆ ಇದ್ದಲ್ಲಿ ನೆಗೆನೆಗೆದು ಬಂದು ಕಚ್ಚುವದು ಹಾಗೆ ಹೊನ್ನಾಗಬೇಕು, ಹೆಣ್ಣಾಗಬೇಕು, ಮಣ್ಣಾಗಬೇಕೆಂದು ದೆಸೆದೆಸೆ ತಿರುಗಿದರೂ ಪ್ರಾಪ್ತಿಯಾಗದು, ಒಲ್ಲೆನೆಂದು ಉಲ್ಲಂಘಿಸಿ ಬಿಡುವಂತವರುಗಳಿಗೆ ಬಂದು ಬಂದು ತೋರಿ ಕಾಡುತ್ತಿರ್ದ ಕಾರಣ, ಅದು ವಿಚಾರಹೀನವಾದ ಪನ್ನಗನು ಸರ್ವಗ್ರಾಸಗೊಂಡು ಸಮಸ್ತಂಗವನು ಹಿಡಿದುಕೊಂಡು ಇದನು ಈ ಮಾಯಾಪ್ರಪಂಚವನು ಒಮ್ಮೆ ಒಂದು ವೇಳೆ ನೋಡಿ ನಿನ್ನ ಘೃಣಾದೃಷ್ಟಿಯಿಂದ ನಿರೀಕ್ಷಿಸಿ ಪರಿಹರಿಸು ನಿರಹರಣವ ಮಾಡು. ನಿಮ್ಮ ನಿಮ್ಮ ಸಂಬಂಧವಾದ ಅವಿರಳ ಅಭಿನ್ನ ಸ್ವರೂಪವಾದ ಶ್ರೀಪಾದ ಐಶ್ವರ್ಯೋಪಲಕ್ಷಿತವಾದ ಚರಣಕಮಲ ಸ್ವರೂಪವಾದ ಇಷ್ಟಲಿಂಗದೊಳು ಆ ಇಷ್ಟಲಿಂಗದ ಸತ್ಕ್ರಿಯಾಚರಣೆಯಲ್ಲಿ ಮನ ಮಗ್ನನಾಗಿ ಹಲವ ನೆನೆದು ಹಲವ ಭಾವಿಸಿ ಹಲವು ಕಡೆಯಲ್ಲಿ ಚರಿಸುವಂತ ಮಾನಸವು ಅಂತರ್ಗತ ಒದಗಿ ಮತ್ತೆ ಮರಳಿ ಅವಿಕಲ್ಪ, ಸಂಕಲ್ಪ, ವಿಕಲ್ಪ ಹೀನವಾದ ಪರಮಸುಖಾನಂದದೊಳಗೆ. ಅಂಗದ ಸುಖವೇ ಲಿಂಗದ ಸುಖ, ಲಿಂಗದ ಸುಖವೇ ಅಂಗದ ಸುಖವೆಂಬ ಲಿಂಗಾಂಗ ಸಮರಸದಲ್ಲಾದ ಸೌಖ್ಯದಲ್ಲಿ ಎಂದಿಹೆನೋ, ಆವಕಾಲಕ್ಕೆ ಇರುವೆನೋ, ಭವರಹಿತ ಜನ್ಮ

ಸಂಸಾರದ ಭವಣೆಯು ವಿಲಕ್ಷಣವಾದ ಪರಮೇಶ ಪ್ರಕೃತಿ ಶಕ್ತಿಗೆ ಒಡೆಯನಾದ ಪರಶಕ್ತಿಗೆ ಒಡೆಯನಾದ ಐ ಸದ್ಗುರುವೇ ಎಲೆ ಶ್ರೀಗುರು ಸ್ವಾಮಿಯೇ ಉಳಿಯುಮೇಶ್ವರ ಅನಂತ ತತ್ವ ಭುವನ ಬ್ರಹ್ಮಾಂಡಾದಿಗಳು ಅಳಿದಳಿದು ಹೋಗುವಲ್ಲಿ ಉಳುಮೆ ಸ್ವರೂಪವಾದ ಉಮೇಶ್ವರ ಪಾರ್ವತೀ ರಮಣನಾದಂಥ ಲಿಂಗವೇ, ಉತ್ಪತ್ತಿ ಸ್ಥಿತಿ ಪ್ರಳಯಕ್ಕಾಧಾರವಾದ ಪರಮಲಿಂಗವೇ, ಪಾಲಿಸು ರಕ್ಷಿಸು.

ಸೂತ್ರ— ಇಂತು “ಭವ ಸೂತ್ರೆ ಶಿವ ಸಿದ್ಧಾಂತ ತಂತ್ರೆ ಷಟ್ ಸ್ಥಲ ನಿರ್ಣಯಿ” ಎಂದು ಸುರುಚಿರ ಪಿಂಡಾದಿ ಜ್ಞಾನ ಶೂನ್ಯಾಂತವಾದ ಸರ್ವಾಚಾರ ಸಂಪತ್ತಿನಾಚರಣೆಯನು ಸೂಚಿಸಿ ಕೊಡುವಂತಹದೆ ಇಂತು ಈ ಪ್ರಕಾರದ ದೆಶೆಯಿಂದೆ ಸಂಸಾರ ಸಂಸೃತಿಯು ಹೇಯಮಂ ಜಿಗುಪ್ಸೆಯನು ನಿರಸನಮಂ ಮಾಡಿ ‘ಇದಂ ನೇತಿ, ಇದಂ ನೇತಿ’ ಎಂದು ತಿರಸ್ಕಾರವ ಮಾಡಿ ತನ್ನಿಜವ ತಾ ನೋಡಿಹೆನೆಂದಡೆ ತನ್ನ ಸ್ವರೂಪವನು ನಿರೀಕ್ಷಿಸಿಹೆನೆಂದರೆ ತನ್ನ ನಿಜ ಸ್ವರೂಪವಾದ ವಸ್ತುವನು ನಿರೀಕ್ಷಿಸಿಹೆನೆಂದರೆ ಇದಿರಿಟ್ಟಲ್ಲದೆ ಅಂತರಂಗದ ಜ್ಞಾನ ಗುರುವನೇ ಬಹಿರಂಗದಲ್ಲಿ ಕ್ರಿಯಾ ಘನ ಗುರುವಾಗಿ ಅಭಿಮುಖಾಸ್ಪದವಾಗಿ ಮಡಿಗಿಕೊಂಡಲ್ಲದೆ ತನ್ನ ಕಾಣಬಾರದು, ತನ್ನ ಸ್ವರೂಪವನು ನೋಡಬಾರದು. ಅದೆಂತೆಂದೊಡೆ ಅದು ಹೇಗಯ್ಯ ಎಂದು ಮೋಕ್ಷ ಸ್ವರೂಪರಾಗಿ ಒಪ್ಪಲ್ಪಟ್ಟ ಸದ್ಭಕ್ತ ಶರಣ ಜನಂಗಳು ಬೆಸಗೊಂಡು ಕೇಳಿದಲ್ಲಿ ಮುಂದೆ ತ್ರಿವಿಧ ಲಿಂಗಾನುಭಾವಿಗಳಾದ ಜ್ಞಾನಿಗಳಿಗೆ ಅನ್ಯೋಪದೇಶವಾಗಿ ನಿರೂಪಿಸುತ್ತಿಹರು. ತನ್ನ ಮುಖವ ತನ್ನ ವಕ್ತ್ರವನು ತಾ ನೋಡಿಹೆನೆಂಬವನು ತಾ ನಿರೀಕ್ಷಿಸಿಹೆನೆಂಬವನು ಇದಿರ ಸಮ್ಮುಖವಾಗಿ ಕನ್ನಡಿ ಕೈಪಿಡಿಯನು ಹಿಡಿದಲ್ಲದೆ ಗ್ರಹಿಸಿದಲ್ಲದೆ ತನ್ನ ಕಾಣೆನೆಂದು ತನ್ನ ಸ್ವರೂಪವನು ನೋಡೆನೆಂದು ಕನ್ನಡಿಯನು ಉಂಟು ಮಾಡಿಕೊಂಡು ಸಂತೆ ಪೇಟೆಗೆ ಹೋಗಿ ಕಾಸ ವೀಸಾದಿಗಳನು ಕೊಟ್ಟು ಕನ್ನಡಿಯ ಕೈಪಿಡಿಯನು ಉಂಟು ಮಾಡಿಕೊಂಡು ಆಗು ಮಾಡಿಕೊಂಡು ನೋಡುವವನಂತೆ ತನ್ನ ಕಂಡು ಕಲೆ ರೂಪು ರೇಖೆ ಲಾವಣ್ಯವನು ನಿರೀಕ್ಷಿಸುವವನ ಹಾಗೆ ತನ್ನಿದಿರೆ ತನ್ನಿಟ್ಟಿದಿರಿನಲ್ಲಿ ಸಮ್ಮುಖವಾಗಿ ಗುರುವನುಂಟು ಮಾಡಿಕೊಂಡು ಅಂತರಂಗದ ಜ್ಞಾನ ಗುರುವನೆ ಬಹಿರಂಗದಲ್ಲಿ ಕ್ರಿಯಾಗುರುವಾಗಿ ಆಗು ಮಾಡಿಕೊಂಡು ಉಪಾವಸ್ಥೆಯ ಮಾಡು

ತ್ತಿರಲು "ಗುರುದೇವೋ ಮಹಾದೇವೋ ಗುರುದೇವೋ ಸದಾಶಿವಃ ಗುರು ದೇವೋ ಪರಂ ನಾಸ್ತಿ ತಸ್ಮೈ ಶ್ರೀ ಗುರವೆ ನಮಃ" ಎಂದು ಗುರು ಸ್ತೋತ್ರವ ಮಾಡುತ್ತಿರಲು ಮುಂದೆ ಪುರಸ್ಸರದಲ್ಲಿ ಗುರುಕರುಣ ಸ್ಥಲ ವಾದುದು. ಸ್ವಯಂ ಜ್ಯೋತಿ ಸ್ವರೂಪವಾದ ಆಚಾರ್ಯನು ವೇಧಾ ಮಂತ್ರ ಕ್ರಿಗಳಿಂದ ದಯಮಾಡಿದಂತಾದೇ ಗುರುಕರುಣಸ್ಥಲ, ಅಂತಪ್ಪ ಗುರುಕರುಣಸ್ಥಲವೆಂದು ಹೇಳಲಾಯಿತ್ತು.

---

## (೪) ಗುರುಕರುಣಸ್ಥಲ.

**ಮೂಲ**— ನಾನಾ ಭವ ಭಯ ಸಂಸಾರದಜ್ಞಾನ ಜಡವ ಪರಿ ಹರಿಸಿ। ಜ್ಞಾನನುಗ್ರಹ ಜನ್ಮ ಜನಿತನನು ಮಾಡಿದುದೆನ್ನಯ ಕರುಣಾ.

**ಟೀಕು**—ನಾನಾ ಭವಭಯಸಂಸಾರದ ೮೪ ಲಕ್ಷ ಯೋನಿ ಮುಖ ದಲ್ಲಿ ಹುಟ್ಟಿ ಹುಟ್ಟಿ ಬರುವ ಜನ್ಮ ಸಂಸಾರದೊಡನೆ ಕೂಡಿದ ಭೀತಿಯು ದೇಹ ಸಂಸಾರವೆಂಬುದು ಅರ್ಥ. ಅಂತು ಮಲ್ಲದೆ ದೂರ್ವಾ ಪಿಪೀಲಿಕಾ ಪಕ್ಷಿ "ಜಲಂತು ಜಲಜಂತುಭಿಃ ಚತು:ಸಮಾನವಾದೆಹ। ಸಪ್ತಜನ್ಮ ಪ್ರ ಕೀರ್ತಿತ:" ಎಂದು ಏಳು ಜನ್ಮದಲ್ಲಿ ಹುಟ್ಟಿ ಬರುವ ಜನ್ಮ ಭೀತಿಯೊ ಡನೆ ಕೂಡಿದ ಹೊನ್ನು ಹೆಣ್ಣು ಮಣ್ಣೆಂಬ ಸಂಸೃತಿಯು ಅಜ್ಞಾನ ಜಡವ ಪರಿಹರಿಸಿ ಮರವೆ ಜಾಡ್ಯವು ಮರವೆ ಜಾಡ್ಯವನು ತನುತ್ರಯಂ ಗಳು ಆ ತನುತ್ರಯಂಗಳ ಪ್ರಕೃತಿಯನು ನಷ್ಟವ ಮಾಡಿ ಅಲ್ಲಿ ತ್ರಿವಿಧ ಲಿಂಗಸಂಬಂಧವ ಮಾಡಿ ಕೊಟ್ಟನು. ಜ್ಞಾನಾನುಗ್ರಹ ಮಹಾಜ್ಞಾನ ಸಂಬಂಧವಾದ ತ್ರಿವಿಧಾನುಗ್ರಹದಿಂದೆ ಜನ್ಮ ಜನಿತನನು ಮಾಡಿದುದು. ಭವವಳಿದು ನಿರ್ಭವಾತ್ಮಕನು ಮಾಡಿದಂಥದು ಏನು ಎಂದರೆ ಎನ್ನಯ ಗುರು ಕರುಣ ಎನ್ನ ಸಂಬಂಧವಾದ ಶ್ರೀಗುರುನಾಥನ ಕೃಪೆಯು.

**ಮೂಲ**— ಕರ್ಮಜಾತ ಜನಿತೇಂದ್ರಿಯವ ದುಷ್ಕರ್ಮಂಗಳ ಪೂರ್ವಾಶ್ರಯವ ನಿರ್ಮೂಲನಂಗೆಯ್ದು ಶಿವಜ್ಞಾನದ ಮರ್ಮವ ತೋರಿದ ಗುರು ಶರಣು.

**ಟೀಕು**—ಕರ್ಮ ಪುಣ್ಯ ಪಾಪವೆಂಬ ಕರ್ಮದ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕೃತ್ಯವು ಜಾತ ಜನಿತ ಶುಕ್ರ ಶೋಣಿತ ಆತ್ಮಸಂಗ ದಿಂದೆ ದೇಹನೆತ್ತಿ ಹುಟ್ಟುವಲ್ಲಿ ಉದಯವಾದ ಇಂದ್ರಿಯದ ಜ್ಞಾನ

ಕರ್ಮೇಂದ್ರಿಯದ ದುಃಕರ್ಮಂಗಳ ಕೆಟ್ಟಂತೆ ವಿಷಯ ಕೃತ್ಯಂಗಳ ಪೂರ್ವಾಶ್ರಯವ ಅವರ ಮೊದಲಾದರವೇನಯ್ಯಾ ಎಂಬಲ್ಲಿ ಭವದಲ್ಲಿ ಗಮನ ನೋಟದಲ್ಲಿ ಕಾಮ ಶಬ್ದದಲ್ಲಿ ವಿರೋಧ ಇವೀಗ ಅವರ ಗುಣವು ನಿರ್ಮೂಲನಂಗೆಯ್ದು ಅವ ನಷ್ಟವ ಮಾಡಿ ಮೂಲ ನಾಶವ ಮಾಡಿ ಆವ ಸಿನೆ ಬಂಜಿನೆಯಾಗಿ ಶಿವಜ್ಞಾನದ ಬ್ರಹ್ಮಜ್ಞಾನದ ಮಾರ್ಗವ ತೋರಿದ ಭಾವಕ್ಕೆ ಗುರುವಾಗಿ ನೋಟಕ್ಕೆ ಜಂಗಮವಾಗಿ ಶಬ್ದಕ್ಕೆ ಮಂತ್ರವಾಗಿ ಸರ್ವಾಚಾರ ಸಂಪತ್ತಿನಾಚರಣೆ ಸ್ವರೂಪವಾದ ಸಕೀಲವನು ಅರುಹಿ ಕೊಟ್ಟಂಥ ಗುರುಶರಣ ಅಂತಪ್ಪ ಶ್ರೀಗುರುಮೂರ್ತಿಗೊಂದು ವೇಳೆ ನಮಸ್ಕಾರವು.

**ಮೂಲ** — ಕರಕಮಲವ ಶಿರದೊಳು ಕರುಣದೊಳಿಟ್ಟು ದುರಿತ ದುಷ್ಕೃತ ಲಿಪಿಯನೆ ತೊಡೆದು । ನರಜನ್ಮದ ಪೂರ್ವಾಶ್ರಯ ದೋಷವ ಪರಿಹರಿಸಿದುದೆನ್ನಯ ಗುರುಕರುಣ.

**ಟೀಕು** — ಕರಕಮಲವ ಆ ಶ್ರೀಗುರುಮೂರ್ತಿಯು ತನ್ನ ಹಸ್ತಕಮಲವನು ಶಿರದೊಳು ಆ ಶಿಷ್ಯನ ಮಸ್ತಕದಲ್ಲಿ ಕರುಣದೊಳು ಕೃಪೆಯಿಂದೆ ಇಟ್ಟು ಶಿಷ್ಯನ ಮಸ್ತಕ ಹಸ್ತವಿನ್ಯಸ್ತ ಸದ್ಗುರುವೇ ಎಂದು ಆ ಶಿಷ್ಯನ ಕಾರಣತನು ತಮೋಗುಣ ರುದ್ರನ ಲಯೋಧರ್ಮ ಕಾರ್ಮಿಕ ಮಲ ಸುಷುಪ್ತಾವಸ್ಥೆಯನು ವೇಧಾದೀಕ್ಷೆಯಿಂದೆ ಆತ್ಮನ ವರ್ತನೆಯ ನಷ್ಟವ ಮಾಡಿ ಚಿದಾತ್ಮ ಸ್ವರೂಪವನೆಯ್ದಿಸಿ ಅಲ್ಲಿ ಭಾವಲಿಂಗ ಕಳೆಯ ಪ್ರತಿಷ್ಠೆಯ ಮಾಡಿಕೊಟ್ಟನು. ದುರಿತ ಅಷ್ಟೋತ್ತರ ಶತವ್ಯಾಧಿಗಳ ದುಃಕೃತಪಾಪರೂಪವಾದ ಸುಕೃತವಲ್ಲದಿದ್ದಂಥ ಲಿಪಿಯನೆ ತೊಡೆದು 'ಆಯುಃ ಕರ್ಮಂ ಚ ವಿತ್ತಂ ಚ ವಿದ್ಯಾನಿಧನಮೇವ ಚ ಪಂಚೈತಾನಿ ಲಿಖಿತಾನಿ ಗರ್ಭಸ್ಥಿತಸ್ಯ ದೇಹಿನಾಂ' ಎಂದು ಇಂತಹ ಪಂಚ ಲಿಖಿತಾದಿಗಳನೆ ಪಂಚಾಕ್ಷರಿ ಮಂತ್ರದಿಂದಟ್ಟಿಸಿ ಎಂಬುದು ಅರ್ಥ. ಅಂತುಮಲ್ಲದೆ ಸೂಕ್ಷ್ಮತನು ಸತ್ವಗುಣ ವಿಷ್ಣುವಿನ ದುಭೋಗ ಸ್ಥಿತಿ ಮಾಯಾ ಆ ಸ್ವಪ್ನಾವಸ್ಥೆಯನು ಅನಹತ ಕರ್ಣದ್ವಾರದಲ್ಲಿ ಪಂಚಾಕ್ಷರೀ ಮಂತ್ರವನುಪದೇಶಿಸಿ ಪ್ರಾಣನ ಪ್ರಕೃತಿಯ ನಷ್ಟವ ಮಾಡೆ ಚಿತ್ಪ್ರಾಣ ಸ್ವರೂಪವನೆಯ್ದಿಸಿ ಅಲ್ಲಿ ಚಿಲ್ಲಿಂಗದ ಕಳೆಯನು ಪ್ರತಿಷ್ಠೆಯ ಮಾಡಿಕೊಟ್ಟನು. ನರಜನ್ಮದ ಮಾನವ ಭವದ ಪೂರ್ವಾಶ್ರಯ ದೋಷವ ಮೊದಲ ಜಾತಿ ವರ್ಣ ಕುಲ ಗೋತ್ರ ನಾಮ ಸೀಮೆಗಳಲ್ಲಿದ್ದು ಮಾಡುವ ಪಾಪವನು ಪರಿಹರಿಸಿದುದು ನಿರಹ

ರ್ಮವ ಮಾಡಿದಂಥಾದ್ದು ಎನ್ನಯ ಗುರುಕರುಣ ಎನ್ನ ಸಂಬಂಧವಾದಂಥ ಶ್ರೀಗುರುನಾಥನ ಕೃಪೆ ಎಂಬುದು ಅರ್ಥ. ಅಂತುಮಲ್ಲದೆ ಪೂರ್ವ ಇಂದ್ರಿಯಂಗಳು ಆಶ್ರಯ ವಿಷಯಂಗಳು ದೋಷವ ಪಾಪವನು ಪರಿಹರಿಸಿದುದು ಛೇದನವ ಮಾಡಿದಂತಾದುದು ಎನ್ನಯ ಗುರುಕರುಣ ಎನ್ನ ಸಂಬಂಧವಾದಂಥ ಶ್ರೀಗುರುನಾಥನ ದಯವು.

**ಮೂಲ**— ಅಂಗದೊಳಗೆ ಲಿಂಗವನಿರಸಿ ಸರ್ವಾಂಗವ ಲಿಂಗಸ್ಥಲವೆನಿಸಿ ಮಂಗಳ ಮಯ ಪರಮ ಜ್ಞಾನದ ನಿಜದಂಗವ ತೋರಿದ ಗುರು ಶರಣು.

**ಟೀಕು**:— ಅಂಗದೊಳಗೆ ಆಚಾರಂಗದಲ್ಲಿ ಲಿಂಗದ ಇಷ್ಟಲಿಂಗವನು ಇರಿಸಿ ಸ್ಥಾಪ್ಯವ ಮಾಡಿ ಎಂಬುದು ಅರ್ಥ. ಅಂತುಮಲ್ಲದೆ ಸ್ಥೂಲ ತನು ರಜೋಗುಣ ಬ್ರಹ್ಮನುತ್ಪತ್ತಿ ಆಣವ ಮಲ ಜಾಗ್ರಾವಸ್ಥೆಯನು ನಷ್ಟವ ಮಾಡಿ ಪವಿತ್ರ ಭೂಮಿಯಲ್ಲಿ ಪುರುಷ ಪ್ರಮಾಣವ ಶೋಧಿಸಿ ನವರತ್ನ ಪಂಚಲೋಹ ಮಂತ್ರ ತಗಡನು ನಿಕ್ಷೇಪವಮಾಡಿ ಭೂಶುದ್ಧಿಯಾದ ನಂತರದೊಳ್ ಅಂತದರ ಮೇಲೆ ಆಚಾರ್ಯನ ಗದ್ದುಗೆಯಂ ನಿರ್ಮಿಸಿ ವೃಷಭ ಮಲಗುವನಿತು ಭೂ ಸಮ್ಮಾರ್ಜನಂಗೆಯ್ದು ಪಂಚವರ್ಣಿಗೆಯ ಬಣ್ಣದ ಶುಭ್ರ ವಸ್ತ್ರ ವರ್ಣದ ಪ್ರಭಾವಳಿ ತಳಿರು ಇಕ್ಷುದಂಡ ರಂಭಾಸ್ತಂಭ ಝಲ್ಲರಿ ವಲ್ಲರಿ ಪುಷ್ಪ ರುದ್ರ ನೇತ್ರ ಮಾಲ್ಯಾದಿಗಳಿಂದ ದೀಕ್ಷಾಮಂಟಪವಂ ರಚಿಸಿ ಅಂತದರೊಳ್ ಪುನರಪಿಯಾಗಿ ಷಡುಸಮ್ಮಾರ್ಜನಂಗೆಯ್ದು ರಂಗವಲ್ಲಿಯ ರಚಿಸಿ ಕಲಶಚತುಷ್ಟಯವ ನಾಲ್ಕು ದಿಕ್ಕಿನೊಳಿರಿಸಿ ಬಳಿಕ ಗುರುಕಳಸ ಮಧ್ಯಸ್ಥಾಪನಂ ಮಾಡಿ ವಿಳಸ ವಸ್ತ್ರ ಪಂಚರತ್ನ ಕನಕ ಪಂಚ ಪಲ್ಲವಗಳಿರಿಸಿ ನಾಲ್ವಾಚಾರ್ಯ ಸಹವಾಗಿ ಗಣಸಾಕ್ಷಿಯಾಗಿ ಕ್ರಿಯಾದೀಕ್ಷೆಯಿಂದೆ ಅಂಗದ ವರ್ತನೆಯ ನಷ್ಟವ ಮಾಡಿ ಆಚಾರಂಗ ಸ್ವರೂಪನೆಯ್ದಿಸಿ ಅಲ್ಲಿ ಇಷ್ಟ ಲಿಂಗದ ಕಳೆಯನು ಪ್ರತಿಷ್ಠೆಯ ಮಾಡಿಕೊಟ್ಟನು ಎಂಬುದೀಗ ಸರ್ವಾಂಗವ ತನುತ್ರಯ ಷಡಿಂದ್ರಿಯ ಮೂವತ್ತಾರು ಪ್ರತ್ಯೇಕ ತತ್ವಗಳೆಲ್ಲವು ಲಿಂಗಸ್ಥಲವೆನಿಸಿ ತ್ರಿವಿಧ ಷಡ್ವಿಧ ನವವಿಧ ಮೂವತ್ತಾರು ಇನ್ನೂರು ಹದಿನಾರು ಪರಿಪೂರ್ಣಲಿಂಗಸ್ಥಲವೆಂದೆನಿಸಿ ಅಂತುಮಲ್ಲದೆ ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗಸ್ಥಲ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗಸ್ಥಲ ೩೬ ಅಂಗದಲ್ಲಿ ೩೬ ಲಿಂಗಸ್ಥಲ ಇನ್ನೂರು ಹದಿನಾರಂಗದಲ್ಲಿ ಇನ್ನೂರು ಹದಿನಾರು ಲಿಂಗಸ್ಥಲ ಪರಿಪೂರ್ಣಾಂಗದಲ್ಲಿ ಪರಿ

ಹರನಾ ತ್ರಿಶೂಲದಿಂದಿರಿನೆತ್ತಿ ನೆಗೆಪುತಂ
ಒಳಹೊಕ್ಕು ಬರುತಿರಲು ನಾರಾಯಣಂ ಕಂಡು
ಇಳಿಪುವೇಂ ಪಾತ್ರೆಯನೆನುತ್ತಂ ಮನಂಗೊಂಡು
ತನ್ನ ಶಿರದರುಣಜಲಮಂ ಪಾತ್ರೆಯೊಳ್ಕರೆಯೆ
ತನ್ನಿಂದ ನೂರ್ಮಡಿಸಿ ಪಾತ್ರೆ ಬೆಳದತಿ ಮೆರೆಯೆ
ಅಂಗದೋಳ್ಸುರವರತತಿಗೆರಗೆ ನೋಡುತಂ
ಅಂಗಜಹರಂ ಕರುಣದಿಂದೆ ಪಿಡಿದೆತ್ತುತಂ
ನಡೆದನೆಂದೀ ಪುರಾಣಂ ನೆರೆದು ಸಾರುತಿರೆ
ಒಡೆಯನೀಶ್ವರನೆಂದು ಸೊತರ್ವಿಡಿದು ತೋರುತಿರೆ
ಆದರಿಂದ ಪಂಪಾವಿರೂಪಾಕ್ಷನೇ ಘನಂ
ಮದನಹರನೆಮ್ಮಯ ವಿರೂಪಾಕ್ಷನೇ ಘನಂ

ಮತ್ತಂ ವಿಚಾರಿಪೊಡೆ ಹರಿ ಸಹಸ್ರಾಬ್ಜದಿಂ
ದತ್ತಿತ್ತ ಚಲಿಸದರ್ಚಿಸುತಮಿರೆ ಸತ್ಯದಿಂ
ದೊಂದು ಹೂ ಕುಂದಿದಡೆ ತನ್ನ ನಯನಾಬ್ಜಮಂ
ತಂದಿಕ್ಕಿ ಹೋದ ಹೂವಿಂಗೆ ಹೊಸ ಕಮಳಮಂ
ಚಕ್ರಮಂ ಹರನಿತ್ತನಂದಿಂವ ಮೊದಲಾಗಿ
ಚಕ್ರಧರನಾದನೀ ಭೂತಳಕೆ ಪೆಸರಾಗಿ
ಇಂತೆಮ್ಮ ಪಂಪಾ ವಿರೂಪಾಕ್ಷನೇ ಘನಂ
ಅಂತ್ಯಕಾಲದಿ ರುದ್ರಭೂಮಿಗೊಯ್ಯೆಂದೆಂಬ
ಭ್ರಾಂತೇಕೆ ರುದ್ರಗಣಂಗಳಿಗಿಕ್ಕಿ ಮುನ್ನೆಂಬ
ಪಿತೃಕೃತ್ಯದಲಿ ವಿಶ್ವೇದೇವ ಮೊದಲೆಂತೆಂಬ
ಪಿತೃತೃಪ್ತಿ ರುದ್ರಪಾದದತ್ತಮೆಂತೆಂಬ
ಉಪನಯನ ವೈವಾಹಕಂ ನಂದಿಮುಖವೆಂಬ
ಸುಪಥವದು ಸರ್ವಕ್ಕೆ ಶಾಶ್ವತಂ ಶಿವನೆಂಬ
ಇಂತು ಸರ್ವೋರ್ವಿಯೊಳು ಶಿವ ಸಮಯವೇ ಘನಂ
ಇಂತು ತ್ರಿಪುರಾಂತಕನ ಸಾಮರ್ಥ್ಯವೇ ಘನಂ

ದೇವಾಲಯದೊಳು ಹರಿ ಪರಿವಾರವಾಗಿರ್ಪ
ನಾನಾರ್ಥದಿಂ ಹರನ ಕಿಂಕರಂ ತಾನಪ್ಪ
ಅವನಿಯೋಳ್ದಳೆ ದಿವ್ಯ ಉಳಿದ ದೇವರೊಳಿಲ್ಲ

ಶಿವಸಮಯವೇ ಶರಣು ಪರಸಮಯಿಗಳಿಗೆಲ್ಲ
ಎಲ್ಲ ದೇವರ್ಗೆ ತಂತಮ್ಮ ಶಿರದೊಳು ಪೂಜೆ
ಇಲ್ಲಿ ಮದನಾರಿಗರರೆ ಲಿಂಗದೊಳು ಪೂಜೆ
ಇಂತುಂ ವಿರೂಪಾಕ್ಷನೆ ದೇವರೊಳ್ ಘನಂ
ಎಂತುಂ ಮಹಾದೇವ ವೇದದೋಳ್ ಘನಂ

ಮಾತೆ ಪಾರ್ವತಿ ತಂದೆ ಶಿವನಲ್ಲದಿನ್ನಿಲ್ಲ
ಏತಕ್ಕೆ ಬರಿದೆ ಗಳಹಲ್ಬೇಡ ಮತ್ತಿಲ್ಲ
ಅದಕೆ ಕರುಪೆಲ್ಲರ್ಗೆ ಲಿಂಗಾಂಕಿತಂ ನೋಡ
ಅದಕೆ ಕುರುಹೆಲ್ಲರ್ಗೆ ಶಕ್ತ್ಯಂತಿಕಂ ನೋಡ
ಹಲವು ಮಾತೇಕೆ ವಶವೆ ಶಿವನುನ್ನತಂ
ಎಲೆಲೆ ವೇದಾಗಮಪ್ರತತಿಗತ್ಯೂರ್ಜಿತಂ
ವೇದದೊಳು ಶಾಸ್ತ್ರದೊಳು ನಾದಮಯನೇ ಘನಂ
ವಾದದೊಳು ವಚನದೊಳು ವೇದಮಯನೇ ಘನಂ
ಆಗಮ ಪುರಾಣದೊಳು ನಾಗಕಟಕನೇ ಘನಂ
ಚಾಗದೊಳು ಚರಿತದೊಳು ಚಂದ್ರಧರನೇ ಘನಂ
ಮಂತ್ರದೊಳು ತಂತ್ರದೊಳು ಮಂತ್ರಮಯನೇ ಘನಂ
ಯಂತ್ರದೊಳು ಯಾಗದೊಳು ಸ್ವಾತಂತ್ರನೇ ಘನಂ
ಅಂತಿಂತುವೆಂತುವುಂ ವಿರೂಪಾಕ್ಷನೆ ಘನಂ
ಕಂತುಹರನೆಮ್ಮಯ ವಿರೂಪಾಕ್ಷನೆ ಘನಂ

ಎಂದಿಂತು ಪೇಳ್ದಪೆಂ ಮಹಿಮಾವಲಂಬಮಂ
ಇಂದುಧರ ನಿಮ್ಮ ಘನಸಂದೋಹಸಾಮರ್ಥ್ಯಮಂ
ಹರಿ ಬೊಮ್ಮರರಸಿ ಕಾಣರು ದೇವ ಎನ್ನಳವೆ
ನೆರೆದ ವೇದಪ್ರಕರವರಿಯವೆನಲೆನ್ನಳವೆ
ಸ್ತುತಿಯಿಸುವ ನೆವದಿಂದ ನಿಂದಿಸಿದನೆನಬೇಡ
ಮತಿಯ ಪವಣಿಂಗೆಯಾಂ ಮಹಿಮನೆಂದೆನಬೇಡ
ಆದಡೆನ್ನಯ ತಪ್ಪನೊಪ್ಪವಿಡುವುದು ತಂದೆ
ಆದಿಯ ಪುರಾತನರ ತೊತ್ತೆಂಬುದೆಲೆ ತಂದೆ
ದೇವ ದೇವರ ಗತಿಯೆ ದೇವ ದೇವರ ಮತಿಯೆ
ದೇವ ದೇವರ ಮತಿಯೆ ದೇವ ದೇವರ ಪತಿಯೆ

ರಕ್ಷಿಸು ವಿರೂಪಾಕ್ಷ ಶಿಕ್ಷಿಸು ವಿರೂಪಾಕ್ಷ
ಲಾಲಿಸು ವಿರೂಪಾಕ್ಷ ಪಾಲಿಸು ವಿರೂಪಾಕ್ಷ
ದಯೆಗೆಯ್ ವಿರೂಪಾಕ್ಷ ಭಯಹರ ವಿರೂಪಾಕ್ಷ
ಜಯಜಯ ವಿರೂಪಾಕ್ಷ ಜಯತು ಜಯ ನಮಸ್ತೇಸ್ತುನಮಃ

**ಕಂದಃ—**

ಆವನ ಸತಿ ಜಗ ಪಾವನ ।
ಆವನ ವಾಹನದಿ ಜಗವು ಜೀವಿಸುತಿರ್ಪುದು ।
ಆವನ ಕಣ್ಣಿಂ ಕಾಂಬುದು ।
ದೇವ ವಿರೂಪಾಕ್ಷಗಲ್ಲದಿತರರ್ಗುಂಟೇ ।

---

## ವೀರಭದ್ರ ದೇವರ ರಗಳೆ

**ಕಂದಃ—**

ಪಿರಿದುಂ ಬಗೆಯದೆ ದಕ್ಷಾ
ಧ್ವರಮಂ ನಿರ್ಧೂಮಧಾಮಮಂ ಮಾಡಿ ಸುಧಾ
ಕರಧರನ ವಿರೂಪಾಕ್ಷನ
ಚರಣವನೈತಂದು ವೀರಭದ್ರಂಕಂಡಂ

**ರಗಳೆ**

ಶ್ರೀರಜತಗಿರಿಯೊಳುಪ್ಪುವ ಸಭಾನಿಳಯದೊಳು
ಮಾರಾರಿ ಹಂಪೆಯ ವಿರೂಪಾಕ್ಷನೊಪ್ಪದೊಳು
ಭೂತೇಶನಪ್ರತಿಮರೂಪನೊಪ್ಪುತ್ತಿರ್ದ
ನಾತನೊಡ್ಡೋಲಗವನೇನೆಂಬೆನೆಸೆದಿರ್ದ

ಲಕ್ಷ್ಮೀಸರಸ್ವತಿಗಳಂದೊಸೆದು ಚಾಮರವಿಕ್ಕೆ
ಸುಕರದಿಂದಿಂದ್ರಾಣಿ ನಲಿದು ಸೀಗುರಿಯಿಕ್ಕೆ
ರಂಭೆಯೂರ್ವಶಿತಿಲೋತ್ತಮೆ ಮಂಜುಘೋಷೆಯರು
ಶಂಭುವಿನ ಕೆಲಬಲದೊಳುಪ್ಪುವತಿವೀರೆಯರು
ತರದಿಂದೀ ವಾರವನಿತೆಯರ್ಕುಳ್ಳಿರಲು

ಸುರನಾರಿಯರ್ಸಮುಚಿತಾಸನದೊಳೊಪ್ಪಿರಲು
ಕರಿವದನನುಂ ತಾರಕಾರಿಯುಂ ಬಂದಿರಲು
ಸರಸಿಜಭವಂ ಸರಸಿಜೋದರಂ ಬಂದಿರಲು
ಕೆಲಬಲದೊಳೊಪ್ಪದಿಂ ಅಮರಗಣನಾಯಕರು
ಛಲಿಗಳಪ್ರತಿಮರತಿರಥರುಗ್ರನಾಯಕರು
ಸಚರಾಚರವನಳಿವ ಮಾಡುವಾ ನಾಯಕರು
ಅಚಲರಭವರ್ತಮತಮಗೆ ಮುಖ್ಯರತಿಶಯರು
ಕಂತುಹರನಾಪ್ತಪರಿವಾರವೆಂದೆನಿಸಿರ್ಪ
ಸಂತತಂ ಪರಮಂಗೆ ಪರಮ ಬಂಧುಗಳಪ್ಪ
ನೆನೆವ ಮನವೀವ ಕೈವಿಡಿವ ಕೈದುಗಳೆನಿಪ
ತನಿನೇಹದಿಂ ನೆರೆವ ಕಡು ಬಾಕುಳಿಗಳೆನಿಪ
ಪುರವಂ ಕ್ಷಣಾರ್ಧದೊಳ್ಸುಟ್ಟ ಶರಣರ್ಕೆಲರು
ಶರಭರೂಪಾಗಿ ತಲೆದಂಡ ಶರಣರ್ಕೆಲರು
ಲೀಲೆಯಿಂ ಮನಸಿಜನನುರುಪಿದರ್ಕೆಲರಲ್ಲಿ
ಕಾಲನಂ ಕೋಪದಿಂ ಸುಟ್ಟವರ್ಕೆಲರಲ್ಲಿ
ಸಿಡಿಲ ಬಳಗಮನೊಂದುಗೂಡಿ ಗಡಣಿಸಿದಂತೆ
ಮೃಡನತಿಬಲಂ ಬೇರೆ ಬೇರೆ ರೂಪಾದಂತೆ
ಕೆಲರೆ ಸಾಲೋಕ್ಯದರ್ಕೆಲರೆ ಸಾಮೀಪ್ಯದರ್
ಕೆಲರೆ ಸಾರೂಪ್ಯದರ್ಕೆಲರೆ ಸಾಯುಜ್ಯದರ್
ಹೊಗಳಲೆನ್ನಳವೆ ಗುರು ವಿರುಪಾಕ್ಷನಣುಗರಂ
ಜಗೆಗಗೋಚರವೆನಿಪ ಶಿವಲಿಂಗಸೊಬಗರಂ
ಇಂತೆಸೆವ ನಂದೀಶ್ವರಾದಿ ಗಣತತಿ ಬಂದು
ಕಂತುಹರನಿಕ್ಕೆಲದೊಳೆಸೆಯೆ ನಲವಿಂ ನಿಂದು
ಭೃಗುವು ದೂರ್ವಾಸದಧೀಚಿಕಶ್ಯಪರೆಂಬ
ಮಿಗೆ ಭಗೀರಥ ಜಹ್ನು ಜಮದಗ್ನಿ ಶುಕರೆಂಬ
ಜೈಮಿನಿವಶಿಷ್ಠಮಾರ್ಕಂಡೇಯರೆಂದೆಂಬ
ರೋಮಜನು ಜಾಬಾಲ ಗಾರ್ಗ್ಯ ಗೌತಮರೆಂಬ
ತರದಳೊಪ್ಪುವ ರಾಜರುಷಿ ದೇವರುಷಿಗಳಿಂ
ಪರಮ ಕಾರಣಿಕರೆನಿಪಾ ಬ್ರಹ್ಮರುಷಿಗಳಿಂ

ಸುರಪ ಶಿಖಿಯಮ ನೈಋತಾಪ್ಪತಿಗಳೆಂಬರಿಂ
ನರವಾಹನನೀಶಾನರೆಂಬ ದಿಕ್ಪಾಲರಿಂ
ಇರೆ ಸುರರು ದನುಜ ವಿದ್ಯಾಧರರ ವೀಧಿಗಳು
ನೆರೆದ ಗಂಧರ್ವರ ಫಣೀಶ್ವರರ ಪಂಙ್ತಿಗಳು
ಮೆರೆಯಲಜಕೋಟಿ ಪಂಕಜನಾಭ ಕೋಟಿಗಳು
ತುರುಗಿ ರವಿಕೋಟಿಗಳು ಶೀತಾಂಶುಕೋಟಿಗಳು
ಎಸೆವುತಿರೆ ಸಾಲಿಟ್ಟ ಮಕುಟಂಗಳೊಂದು ದೆಸೆ
ಒಸೆದೊಸೆದು ಕೈಮುಗಿವ ಯಕ್ಷತತಿಯೊಂದು ದೆಸೆ
ಕಿವಿಗುಡುವದೆಮಗೆಂಬ ನಾದಂಗಳೊಂದು ದೆಸೆ
ತವಕದಿಂ ತುತಿಯಿಸುವ ವೇದಂಗಳೊಂದು ದೆಸೆ
ಧರೆ ಜಲಂ ಸಪ್ತಾರ್ಚಿ ವಾಯುವಾಕಾಶದಿಂ
ಖರಕಿರಣ ಹಿಮಕಿರಣ ಆತ್ಮಸಂತಾನದಿಂ
ಬಿಸವೇಳ್ಪುದಂ ಬಯಸುವಣಿಮಾದಿ ನಿಕರದಿಂ
ಬೆಸಸು ಬೆಸಸೆಮಗೆಂದೆಂಬ ಸಾಮರ್ಥ್ಯಮೊತ್ತದಿಂ
ಪವಣಿಸುವಡರಿದೆನುತಿರ್ಪ ಶಾಸ್ತ್ರಂಗಳಿಂ
ತಮ ತಮಗೆ ಹೊಗಳುತೊಪ್ಪುವ ಪುರಾಣಂಗಳಿಂ
ಮೌನದಿಂ ನಿಂದಿರ್ಪ ತರ್ಕಸಂದೋಹದಿಂ
ಧ್ಯಾನಿಸುತ್ತಿರ್ಪ ಸಕಲಾಗಮವ್ಯೂಹದಿಂ
ಹತ್ತೆ ಸಾರ್ದೋಲಗಿಪ ಚೆಲ್ವುಗಳ ಮೊತ್ತದಿಂ
ಮುತ್ತಿ ಬಂದೋಲಗಿಪ ಸಂಪನ್ನಿಕಾಯದಿಂ
ತರತರಂಗೊಂಡಿರ್ಪ ಪುಣ್ಯ ಸಂತಾನದಿಂ
ನೆರೆನೆರೆದು ಬರುತಿರ್ಪ ಬಯಕೆಗಳ ಮೊತ್ತದಿಂ
ನಲಿದು ಬಂದೋಲಗಿಪ ಸಕಲ ಸುಖನಿಕರದಿಂ
ಸಲೆ ಕೈಮುಗಿಯುತಿರ್ಪ ವೀರಗಣನಿವಹದಿಂ
ಕಡೆ ಕಡೆಯೊಳೋಲಗಿಪ ಜಸವೆಣ್ಗಳಿಕ್ಕೆಯಿಂ
ಬಿಡದೆ ತೋಳ್ಗಳನೋಲಗಿರ್ಪ ಜಯತತಿಗಳಿಂ
ಚರಣಮಂ ಪಿಡಿದಿರ್ಪ ಮಂಗಳದ ಪಂಙ್ತಿಯಿಂ
ಹರವರಿಯೊಳುರಿವ ತೇಜಂಗಳಿಕ್ಕೆಯಿಂ
ಕಡೆಗಂಗಳಂ ಬಯಸುತಿರ್ಪ ಕಾರುಣ್ಯದಿಂ

ಮೃಡನ ವರವಂ ಪಾರ್ದು ನಿಂದಿರ್ಪ ಭಾಗ್ಯದಿಂ
ಎನಗೆ ತನಗೆನುತಿರ್ಪ ಭೋಗಂಗಳೊಗ್ಗಿನಿಂ
ತನತನಗೆ ನಲಿವ ಗಣಪದವಿಗಳಗುರ್ವಿನಿಂ
ನಿರ್ವಿಕಾರದೊಳಿರ್ಪ ಶಾಂತಿಗಳ ಕೊರ್ವಿನಿಂ
ಶರ್ವನಂ ಬಯಸುತಿರುತಿರ್ಪ ಮಂಗಳದಗುರ್ವಿನಿಂ
ಬೆಳಗನುಗುಳುತ್ತಿರ್ದ ಕಾಂತಿಗಳ ಬಳಗದಿಂ
ತಿಳಿಯಲೆಂದಿರ್ದಖಿಳ ವಿದ್ಯಾಸಮೂಹದಿಂ
ಸಾರೆ ಬಂದೋಲಗಿಸಲೆಂದಿರ್ದ ನೃತ್ಯದಿಂ
ಕಾರುಣ್ಯಮಂ ಬಯಸಿ ನಿಂದಿರ್ದ ಸತ್ಯದಿಂ
ಇಂತು ಸಕಲೈಶ್ವರ್ಯದುನ್ನತವನೊಳಕೊಂಡ
ನಂತಂತೆ ಹೊಗಳಲಾರದ ಘನವನೊಳಕೊಂಡ
ದೆಂಶೆಂತು ಉಪಮೆಗಗ್ಗಳವಾದುದಾಸ್ಥಾನ
ವಂತಂತೆ ಮೆರೆದುದು ವಿರೂಪಾಕ್ಷನಾಸ್ಥಾನ

ವಾ ಸಮಯದೊಳು ದಂಡಧರರೆಂಬ ಭಟರಲ್ಲಿ
ವಾಸವನೆ ನುಡಿ ಬೇಡ ಸಂತವಿರು ನೀನಿಲ್ಲಿ
ಕಾಯ್ಪುನುಡುಗಗ್ನಿ ಹೆರೆಸಾರ್ಕಾಲ ಕೌಣಪನೆ
ಸೈಪಿನೊಳಿರಬ್ಧಿಪತಿ ಸುಳಿಯದಿರ್ಮಾರುತನೆ
ತೆರಹುಗುಡು ಗಂಧರ್ವರಾಜ ಕಿನ್ನರಪತಿಗೆ
ಬರಿದೆ ಗಳಪದಿರುಎಲವೋ ಬೊಮ್ಮನಿನ್ನತಿಗೆ
ಬಿನ್ನವಿಸು ಮನ್ನಣೆಯ ವನಜಾಕ್ಷ ಕೈಮುಗಿದು
ನಿನ್ನ ಹೆಡೆಗಳನುಡುಗಿ ನಿಲ್ಲಹಿಪ ಹೆರೆ ತೆಗೆದು
ಕಳಕಳವಿದೇಕೆ ಮಾಣ್ಮಾಣು ಹೋ ಹೋ ಎನುತೆ
ಅಳವಲ್ಲ ಸಂತೈಸಬಾರದಾಹಾ ಎನುತೆ
ಇವನಾವ ಬೊಮ್ಮಾಂಡದಬ್ಜಜಂ ಹೇಳೆಂದು
ಇವನಾವ ಬೊಮ್ಮಾಂಡದಬ್ಜೋದರನುಮೆಂದು
ಆವಾವ ಸ್ವರ್ಗಂಗಳಿಂದ್ರರ್ಕಳಿವರೆಂದು
ಆವಾವ ಲೋಕದವರೀ ಮಹಾ ನೃಪರೆಂದು
ಇಂತು ಪಡಿಯರರ್ತಮ್ಮೊಳ್ನುಡಿವ ಸಮಯದೊಳು
ಮುಂತೆ ತುಂಬುರನಾರದರ್ಮಧ್ಯ ರಂಗದೊಳು

ನವವೀಣೆಯಂ ಬಹುಸುಗತಿ ಸುಸ್ವರಂಬಡೆಯೆ
ವಿವಿಧ ರಾಗಂಗಳನ್ನ ಶಕ್ತಿಗಳ್ತಡೆಯೆ
ಕೆಯ್ಯ ಮನವಾದ ತೆರದಿಂ ಬಾರಿಸುತ್ತಮಿರೆ
ಸುಯ್ಗಳಂ ಮರೆದೋಲಗಂ ನಾಡೆ ಕೇಳುತಿರೆ
ಇಂತು ತುಂಬುರನಾರದರ್ವಿರೂಪಾಕ್ಷನಂ
ಸಂತಸದೊಳೋಲಾಡಿಸುತ್ತ ವಿಷಮಾಕ್ಷನಂ
ಕೇಳಿಸಿದ ನಂತರಂ ಕಿನ್ನರರ್ಸವಿಗೂಡಿ
ಮೇಳೈಸುತಾರೈಸಿ ಸಭೆಗೆ ಹರುಷಂ ಮೂಡೆ
ಮನದೊಳಗೆ ಕಾಂತಿಯುಂ ಸರಿಗೆದೆಗವಂದದಿಂ
ಕೊನೆ ಮಿಂಚಿನೋಳ್ಕಾಂತಿಲತೆ ಹುಟ್ಟಿದಂದದಿಂ
ಬೋಳೈಸಿ ರಾಗಂಗಳಂ ಕರೆವ ಮಾಳ್ಕೆಯಿಂ
ಮೇಳೈಸಿ ನೆರೆದ ಸಭೆ ಕರುವಿಟ್ಟ ಮಾಳ್ಕೆಯಿಂ
ಕಿವಿಯೊಡ್ಡಿ ಕೇಳುತಿರೆ ಚಿತ್ತಮಂ ಮಿಗೆ ಸಲಿಸಿ
ಕಿವಿಯ ಬಳಿಸಂದುವಿಂದ್ರಿಯಚಯಂ ತಲ್ಲಣಿಸಿ
ಸಭೆಯೊಂದೆ ಮನವಾದ ಮಾಳ್ಕೆಯಿಂ ಕೇಳುತಿರೆ
ಅಭವನಂ ಸುಖದ ಮರಹಲ್ಲಲ್ಲಿ ನೆರೆವುತಿರೆ
ಅಂತು ಮುನ್ನಿನ ಪರಿಯೊಳಿರ್ದುದಾ ದೇವಸಭೆ
ಅಂತಿರ್ದುದಾಗಳೆವೆ ಮಿಡುಕದಾ ಪರಮ ಸಭೆ
ಇಂತು ಸಭೆಯಂ ಸುಖದ ಸ್ವೈರಗಿನೊಳಗಿಟ್ಟು
ಸಂತಸದಿ ನಾದರಸದೊಳ್ಚಿತ್ತಮಂ ಸಲಿಸಿ
ರಾಗದಿಂ ಕಿನ್ನರರ್ಪಾಡಿ ತಂದುಂ ಮೆರೆಯೆ
ರಾಗಂಗಳಂದಮೃತನಾದಂಗಳಂ ಕರೆಯೆ
ತನತನಗೆಸೆವ ಮಧ್ಯಮಾದಿ ಭೂಪಾಳಂಗ
ಳನು ರಾಗದೋದೆ ದೇಶಾಕ್ಷಿ ಪಲಮಂಜರಿಗ
ಳಾದಿಯಾಗಿರ್ದ ಬಹು ರಾಗಂಗಳಲ್ಲಲ್ಲಿ
ನಾದದಿಂ ಕೇಳಿಸೆ ಹರಂ ಸುಖದೊಳಿರಲಲ್ಲಿ
ನಾದದುನ್ಮತ್ತವಾದುದು ದೇವ ಸಭೆಯೆಲ್ಲ
ನಾದಮೂರ್ತಿ ಎನಿಸಿದನಂದು ಗಿರಿಜೆಯ ನಲ್ಲ
ಏನೆಂಬೆನೋಲಗಂ ಜೊಮ್ಮಿನೊಳಗಿರ್ದಂತೆ

ಜೇನ ಸರಿ ಮಳೆಗೆ ನಾಡೆ ನಾಂದಿರ್ದಂತೆ
ರಾಗರಸದೊಳಗೆ ಮುಳುಗಿರ್ದುದೊಡ್ಡೋಲಗಂ
ರಾಗದಿಂದಿರ್ದನಭವಂ ಸುಖದ ಮೂಲಿಗಂ

ಇರಲಿತ್ತ ಹಂಸೆ ಚಕ್ರಂ ಸುಖದೊಳೊಲಿದಿರ್ಪ
ಸರಸಿಗೆ ಬಕಂ ನೋಡಲೆಂದು ಮೆಲ್ಲನೆ ಬರ್ಪ
ತೆರದಿಂದೆ ಬಂದು ದಕ್ಷಂ ಸಭೆಯ ನಡುವೆ ನಿಲೆ
ಕರೆಗೊರಲನವನನೀಕ್ಷಿಸದೆ ಸುಖದಿಂದೆ ನಿಲೆ
ಮರೆದು ಕೇಳುತ್ತಮಿರೆ ಮನ್ನಿಸನಳಿಯನೆಂದು
ಪೊರಮಟ್ಟನಲ್ಲಿಂದೆ ಮುಳಿದು ನಿಂದಿಸುತಂದು
ಪರಮಾಣು ಮೇರುವಿನ ಹೆಂಪಿಂಗೆ ಮುಳಿವಂತೆ
ಸರಸಿ ಸಾಗರದ ಗಾಂಭೀರ್ಯಕ್ಕೆ ಮುಳಿವಂತೆ
ತರಗೆಲೆ ದವಾನಲನ ಕಾಯ್ಪಿಂಗೆ ಮುಳಿವಂತೆ
ಗರುಕೆ ಕಲ್ಪದ್ರುಮದ ಸಂಪದಕೆ ಮುಳಿವಂತೆ
ಇರದೆ ಮಿಂಚುಂಬುಳು ದಿನೇಶಂಗೆ ಮುಳಿವಂತೆ
ಪುರಹರಂಗಕಟಕಟ ದಕ್ಷ ಮುಳಿಯುತ್ತಿಂತೆ
ಬರುತೆಂದನೆನ್ನನಪಮಾನಂಗೆಡಿಸಿದಂತವನ
ನಿರದೆ ಭಂಗಿಸುವೆ ನಾನೈದೆ ಹೆರೆಸೂಡಿದನ
ನೆಂದು ತನ್ನಾಶ್ರಮಕೆ ಗಳಗಳನೆ ನಡೆತಂದು
ನೊಂದು ನುಡಿದಂ ವಿಶ್ವಕರ್ಮಂಗೆ ನೀನೊಂದು
ಯಾಗಮಂಟಪವನೆತ್ತೆಂದು ಪೇಳ್ವನಿತಕ್ಕೆ

ಬೇಗದಿಂ ನೆಗೆದುದಾಗಳೆ ಭೂಮಿವಳೆಯಕ್ಕೆ
ಭೂಮಿಗೆ ವಿಚಿತ್ರವಾದುದು ಮಂಟಪಂ ನೋಡ
ಹೋಮಕುಂಡಂ ಸುಡುವ ಮುಳ್ಳೆಳ್ಳುಗಳ್ಕೂಡೆ
ನಡುವೆ ಯೂಪಸ್ತಂಭವಿಂಬಿನಿಂ ಮೆರೆವುತಿರೆ
ಕೊಡದಿಂದ ತಮ ತಮಗೆ ನವಘೃತವನಡುಕುತಿರೆ
ಕರೆಸಿದಂ ಪೆಣ್ಮಕ್ಕಳಳಿಯಂದಿರಂ ಕೂಡೆ
ಬರಿಸಿದಂ ಹರಿಯಜಪುರಂದರರುಮಂ ಕೂಡೆ
ಧಿಗಧೀಶರಂ ತ್ರಿದಶರಂ ದಿವ್ಯ ಮುನಿಗಳಂ

# ಸೊಡ್ಡಳ ಬಾಚರಸನ ವಚನಗಳು.

## ೧ ಭಕ್ತಸ್ಥಲ.

(೧) ಒಂದು ಇಂದ್ರಿಯ ಮೊದಲಾದುದಕ್ಕೆ ಕಡೆ ಇಲ್ಲ. ಕುಂಜರನು ಸ್ಪರ್ಶನೇಂದ್ರಿಯದ ಬಳಿಸಂದು, ಫಣಿ ರಾಗರಸದಿಂದ, ಭ್ರಮರ ಸೌರಭ್ಯದಿಂದ, ಮತ್ಸ್ಯ ರುಚಿಯಿಂದ, ಪತಂಗ ರೂಪಿಂದ, ಒಂದೊಂದು ವಿಷಯದಲ್ಲಿ ಒಂದೊಂದು ಪ್ರಾಣಿಗಳು ನೊಂದು ಬಂಧನಕ್ಕೆ ಬಂದುದನರಿಯೆಯಾ ? ಪಂಚೇಂದ್ರಿಯದ ಬೆಂಬಳಿಯಲ್ಲಿ ಹರಿವ ಮನುಜರ ಕೊಂದು ಕೂಗದೇ ಮಾಯೆ ದೇವರಾಯ ಸೊಡ್ಡಳ ನೋಡೆ ?

ಭಾವಃ— ವಚನಕಾರರು ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳಬೇಕೆಂದು ಯಾವಾಗಲೂ ಬೋಧಿಸುವದುಂಟು. ಈ ವಚನದಲ್ಲಿ ವಚನಕಾರನು ಆನೆ, ಸರ್ಪ, ಭ್ರಮರ, ಮೀನು, ಪಾತರಗಿತ್ತಿ ಇವುಗಳ ಉದಾಹರಣೆಗಳನ್ನು ಕೊಟ್ಟು ಅವುಗಳ ಒಂದೊಂದು ಇಂದ್ರಿಯದ ಮೂಲಕ ಹೇಗೆ ನಾಶಕ್ಕೆ ಒಳಗಾಗುತ್ತವೆಂಬದನ್ನು ವಿವರಿಸಿ, ಮನುಷ್ಯನು ಈ ಎಲ್ಲ ಇಂದ್ರಿಯಗಳ ವಿಕಾರಕ್ಕೆ ಒಳಗಾಗುವದರಿಂದ ಅವನು ಕ್ಲೇಶವನ್ನು ಹೊಂದಲು ತೀವ್ರ ಪಾತ್ರನಾಗುತ್ತಾನೆಂದು ಅರುಹಿದ್ದಾನೆ.

(೨) ಬಂಟತನವ ಮಾಡಬೇಕೆಂದು, ಬಟ್ಟೆಯ ಬಡಿಯಬೇಕೆಂದು, ಕೊಟ್ಟುದ ಬೇಡಬೇಕೆಂದು, ಮುಂಜಾವದಲೇಳುವರು ಹಲಬರು. ಕೆಲಬರು ಆಹಾರವನುಣಬೇಕೆಂದು, ವ್ಯವಹಾರವ ಮಾಡಬೇಕೆಂದು, ಆ ಹೆಣ್ಣ ತರಬೇಕೆಂದು, ಈ ಹೆಣ್ಣ ಕೊಡಬೇಕೆಂದು, ಮುಂದು ಜಾವದಲೇಳುವರು ಹಲಬರು ಕೆಲಬರು. ತಂದೆ ಸೊಡ್ಡಳಂಗೆ ತೊತ್ತು ಸೇವೆಯ ಮಾಡಬೇಕೆಂದು ಕಣ್ಣ ತೆರೆವುತ್ತಲೇಳುವರು ಅಲ್ಲಿಗಲ್ಲಿಗೊಬ್ಬರು.

ಭಾವ.— ಮುಂಜಾವಿನಲ್ಲಿ ಏಳುವಾಗ್ಗೆ ಪರಮಾತ್ಮನ ಧ್ಯಾನದಲ್ಲಿರಬೇಕೆಂದು ವಚನಕಾರನು ಹೇಳುತ್ತಾನೆ.

(೩) ಸಂಸಾರ ಹೇಯ, ಸೊಣಗಂಗೆ ಕಂಡವ ಚೆಲ್ಲುವ ತೆರನಂತೆ. ಸಂಸಾರಿಗೆ ಸಂಸಾರವ ಚೆಲ್ಲದೆ ತೋರುವನೇ ಶರಣ ಪಥಂಗಳ? ತೋರುವನೇ ಭಕ್ತಿಪಥಂಗಳ? ॥ಶ್ಲೋಕ॥ ಅಕೃತಂ ಕರ್ಣಪೂರಂ ಚ ಶ್ರುತಂ ಧರ್ಮಮರೋಚಕಂ ಎಂದುದಾಗಿ, ಸೊಡ್ಡಳದೇವ ತಾನೊಲ್ಲದವರ ಭವದುಃಖ ಡೋಗಿಯಲುಣಿಸುವನು.

ಭಾವ.— ಸಂಸಾರದಲ್ಲಿ ಸಿಲ್ಕದೆ ಇರುವದು ಮನುಷ್ಯನ ಇಚ್ಛಾಶಕ್ತಿಯ ಬಲದ ಮೇಲೆ ಅವಲಂಬಿಸಿರುತ್ತದೆ. ಹಾಗೆ ಅವನು ವರ್ತಿಸಬೇಕು. ಇಲ್ಲದೆ ಹೋದರೆ ಪರಮಾತ್ಮನು ಅವನಿಗೆ ಸಹಾಯವಾಗಲಾರನು.

(೪) ಹಂದಿಯಾಗದೆ, ಸೊಣಗನಾಗದೆ, ಮೃಗನಾಗದೆ, ಪಕ್ಷಿಯಾಗದೆ, ಕುರಿಯಾಗದೆ, ಕತ್ತೆಯಾಗದೆ, ಚಂದವಾಯಿತ್ತು, ಚಂದವಾಯಿತ್ತು. ಮಾನವನಾಗಿ ಹುಟ್ಟಿ ಚಂದವಾಯಿತ್ತು, ಚಂದವಾಯಿತ್ತು. ಚಂದವಾದ ದೇಹ ವಿಸ್ಕಂದವಾಗದ ಮುನ್ನ ತಂದೆ ಸೊಡ್ಡಳಂಗೆ ಶರಣೆಂದು ಬದುಕಿದೆನಯ್ಯಾ.

ಭಾವಃ— ಮಾನವ ಜನ್ಮವು ಶ್ರೇಷ್ಠವಾದದ್ದು. ಇದು ನಾಶವಾಗದ ಮುನ್ನ ಪರಮಾತ್ಮನಿಗೆ ಶರಣು ಹೋಗಿ ಬದುಕಬೇಕೆಂದು ವಚನಕಾರನು ಹೇಳುತ್ತಾನೆ.

(೫) ತನುವಿಕಾರ, ಮನವಿಕಾರ, ಜನನ ಸ್ಥಿತಿ ಮರಣ ಕಾರಣ. ಹೊನ್ನ ತೋರಿದೆ ಜಗದ ಕಣ್ಣ ಮೊದಲಿಂಗೆ. ಹೆಣ್ಣ ತೋರಿದೆ ಜಗದ ಕಣ್ಣ ಮೊದಲಿಂಗೆ. ಮಣ್ಣ ತೋರಿದೆ ಜಗದ ಕಣ್ಣ ಮೊದಲಿಂಗೆ. ತನು ತಪ್ಪಿಸಿ ಸಂಸಾರಕ್ಕೊಪ್ಪಿಸಿ, ನುಣ್ಣನೆ ಹೋದನು ದೇವರಾಯ ಸೊಡ್ಡಳಾ.

ಭಾವ.—ಮನುಷ್ಯನಿಗೆ ಬರುವ ತೊಂದರೆಗಳು ಅವನ ಪರೀಕ್ಷಾರ್ಥವಾಗಿರುತ್ತವೆ. ಪರಮಾತ್ಮನು ಅಂಥ ಕಾಲದಲ್ಲಿ ಅವನನ್ನು ಬಿಟ್ಟು ಹೋದಂತೆ ಭಾಸವಾಗುತ್ತದೆ. ಆದರೆ ಇದೆಲ್ಲವೂ ಅವನಲ್ಲಿರುವ ಗುಣಗಳನ್ನು ವಿಕಾಸಗೊಳಿಸಲಿಕ್ಕೆ ಮಾತ್ರ ಇರುತ್ತದೆ.

(೬) ಪಾಪಿ ನಾನೊಂದು ಪಾಪವ ಮಾಡಿದೆ. ಆ ಪಾಪವೆನಗೆ ಸತಿಸುತರಾಗಿ ಕಾಡುತ್ತಿದೆ. ಪಾಪವನೆ ಬಿತ್ತಿ, ಕೋಪವನೆ ಬೆಳೆದು, ಈ ಪರಿಯಲ್ಲಿ ದಿನಂಗಳು ಆದವಲ್ಲಾ! ಎನಗಿನ್ನೇನ ಪರಿ ಹೇಳಾ ದೇವ ರಾಯ ಸೊಡ್ಡಳಾ ?

ಭಾವ.— ಸಂಕಟಗಳು ಬಂದರೂ ಕೂಡ, ಪರಮಾತ್ಮನಲ್ಲಿ ಇಟತಕ್ಕ ಭಕ್ತಿ ಭಾವವನ್ನು ತೊರೆಯತಕ್ಕದ್ದಲ್ಲ. ಅವನನ್ನೇ ಶರಣ ಹೋಗತಕ್ಕದ್ದು.

(೭) ಅಣ್ಣೆನೆಂಬಣ್ಣಗಳ ಅಣ್ಣೆಸುವುದು ಹೊನ್ನು. ಅಣ್ಣೆನೆಂಬಣ್ಣಗಳ ಅಣ್ಣೆಸುವುದು ಹೆಣ್ಣು. ಅಣ್ಣೆನೆಂಬಣ್ಣಗಳ ಅಣ್ಣೆಸುವುದು ಮಣ್ಣು. ಹೊನ್ನ ಕಂಡ ಬಳಿಕ ಅಣ್ಣದಣ್ಣಗಳುಂಟೆ ? ಹೆಣ್ಣ ಕಂಡ ಬಳಿಕ ಅಣ್ಣದಣ್ಣಗಳುಂಟೆ? ಮಣ್ಣ ಕಂಡಬಳಿಕ ಅಣ್ಣದಣ್ಣಗಳುಂಟೆ ? ಹೆಣ್ಣು, ಹಿರಣ್ಯ, ಭೂಮಿ ಎಂಬ ಹುಡಿಯು ಜಗದ ಕಣ್ಣ ಮೇಲೆ ಹೊಯ್ದು ನಿನ್ನ ನೆನೆವುದಕ್ಕೆ ತೆರವುಗುಡದಿದೆಯಲಾ ಸೊಡ್ಡಳಗರಳಗಳಧರಾ.

ಭಾವಃ— ಇಲ್ಲಿ ಹೆಣ್ಣು, ಮಣ್ಣು, ಹೊನ್ನು ಇವುಗಳು ಮನುಷ್ಯನ ಮನಸ್ಸಿನಲ್ಲಿ ಹೇಗೆ ವಿಕಾರ ಮಾಡುತ್ತವೆಂಬದನ್ನು ವಿವರಿಸಿ ಅವುಗಳಿಗೊಳಗಾಗಬಾರದೆಂದು ವಚನಕಾರನು ಬೋಧಿಸುತ್ತಾನೆ.

(೮) ಭಕ್ತ ಭಕ್ತನೆಂದು ಯುಕ್ತಿಗೆಟ್ಟು ನುಡಿವಿರಿ. ಭಕ್ತಸ್ಥಲವೆಲ್ಲರಿಗೆಲ್ಲಿಯದೋ ? ಹಾಗದಾಸೆ, ಹಣವಿನಾಸೆಯುಳ್ಳನ್ನಕ್ಕ ಭಕ್ತನೇ ? ಅರ್ಥ ಪ್ರಾಣ ಅಭಿಮಾನ ವಂಚನೆಯುಳ್ಳನ್ನಕ್ಕ ಭಕ್ತನೇ ? ಹೊನ್ನು ಹೆಣ್ಣು ಮಣ್ಣು ಹಣಿದವಾಡದನ್ನಕ್ಕ ಭಕ್ತನೇ ? ಭಕ್ತರಿಗೆ ನಾವು ಹೇಳಿದರೆ ದುಗುಡ ದುಮ್ಮಾನ. ನೀನೊಮ್ಮೆ ಹೇಳಾ ಪ್ರಳಯಕಾಲ ಸೊಡ್ಡಳಾ.

ಭಾವಃ— ಭಕ್ತನು ಆಶಾರಹಿತನಾಗಿರಬೇಕು.

(೯) ಜವನಿದ್ದಾನೆ. ಜವನ ಪಟ್ಟಣವಿದೆ. ಮಾಮರ ಹೂಮರನಿದೆ. ತೋಮರನಿದೆ ನೋಡಯ್ಯಾ. ಅವ ಕಾರ್ಯವಾದಡೂ ದೇವ ಕಾರ್ಯವ ಮಾಡುವುದು. ಸಾವಕಾರ್ಯ ತಪ್ಪದು. ನೀನು ಕೆಡಬೇಡ ಕಂಡಾ. ಬೇಗ ನಂಬಿ ಪೂಜಿಸು ಸೊಡ್ಡಳ ದೇವನ ಮರುಳೇ.

ಭಾವಃ— ಮರಣಕ್ಕೆ ಭೀತನಾಗಬಾರದು. ದೇವಕಾರ್ಯ ಮಾಡುತ್ತ ಹೋದಲ್ಲಿ ಸುಖಿಯಾಗುವನು. ಸೃಷ್ಟಿಯಲ್ಲಿ ಸುಂದರವಾದ ವಸ್ತುಗಳು ಅನೇಕವಿವೆ. ಅವುಗಳನ್ನು ಉಪಯೋಗಿಸುತ್ತ ಸುಖದಿಂದ ಬಾಳಬೇಕು.

(೧೦) ಅರೆಬಿರುದ ನುಡಿವರು ಕೇಳಿರೇ! ಕೆರಳಿಕೆಯ ನುಡಿವರು. ನೆರೆದ ಮಂದಿಯ ಕಂಡುಬ್ಬುವರು ಕೊಬ್ಬುವರು. ನಿರುತದ ಕಾಳಗವೆಂದಡೆ ಬಿರುದ ಬಿಸಾಡುವರು. ಅರೆಭಕ್ತಿಯ ಮಾಡಿ ನೆರೆ ಭಕ್ತನೆಂದರೆ ಎಂತು ಮೆಚ್ಚುವನಯ್ಯ ನಮ್ಮ ದೇವರಾಯ ಸೊಡ್ಡಳಾ?

ಭಾವಃ— ಜಗತ್ತಿನಲ್ಲಿ ತೋರಿಕೆಯ ಭಕ್ತರೇ ಹೆಚ್ಚಾಗಿದ್ದಾರೆ. ಪ್ರಸಂಗಬಂದಲ್ಲಿ ಅವರು ಗಂಡಾಂತರಗಳನ್ನು ಎದುರಿಸಲಾರರು. ಇವರಿಗೆ ಮೋಕ್ಷವಿಲ್ಲ.

(೧೧) ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ. ರುದ್ರಪದವಿಯನೊಲ್ಲೆ. ಉಳಿದ ದೇವತೆಗಳ ಪದವಿಯನೊಲ್ಲೆ. ಎಲ್ಲಕ್ಕೂ ಒಡೆಯನಾದ ಶಿವನ ಪ್ರಮಥಗಣಂಗಳ ತಿಪ್ಪೆಯ ಮೇಲಣ ಹುಳುವಾಗಿ ಹುಟ್ಟುವ ಪದವಿಯ ಕರುಣಿಸು ಮಹಾಮಹಿಮ ಸೊಡ್ಡಳಾ.

ಭಾವಃ— ಮನುಷ್ಯನು ಶ್ರೇಷ್ಠ ಅಧಿಕಾರಗಳನ್ನು ಹೊಂದಲು ಯಾವಾಗಲೂ ಅಪೇಕ್ಷಿಸುತ್ತಾನೆ. ಆದರೆ ಅವನು ಮೊದಲು ಸೇವಕನಾಗಿ ದುಡಿಯಲು ಸಿದ್ಧನಿರಬೇಕು. ಈ ವೃತ್ತಿಯಿಂದಲೇ ಅವನು ಸುಖವನ್ನು ಪಡೆಯುವನು.

(೧೨) ವಚನದ ರಚನೆಯ ನುಡಿವ ಬರುಬಾಯ ಭುಂಜಕರು ಭಕ್ತರಪ್ಪರೇ? ಮಾಡುವ ದಾಸೋಹ ಕೈಂಕರ್ಯವುಳ್ಳ ಭಕ್ತಂಗೆ ಆವ ಗುಣಂಗಳು ಹೊದ್ದಲಮ್ಮವಯ್ಯಾ! ಕಾಮಸಂಗವಂ ಬಿಟ್ಟು, ಕ್ರೋಧದ ಕೆಚ್ಚ ಮುರಿದು, ಲೋಭಲಂಪಟವಂ ಕೆದರಿ, ಮೋಹದ ಮುಳ್ಳಿನ ಮೊನೆಯ ಮೆಟ್ಟಿ, ಮದದಚ್ಚನಳಿದು, ಮತ್ಸರಸರ್ಪನ ಸಮತೆಯ ಗಾರುಡದಿಂದ ಗಾರುಪಡಿಸಿ, ಕರಣಾದಿ ಗುಣಂಗಳಿಚ್ಛೆಗೆ ಹರಿಯದೆ, ಇಪ್ಪ ಭಕ್ತನ ಕಾಯವೇ ಕೈಲಾಸವಯ್ಯಾ! ಮಾತಿಂಗೆ ಮಾತ ಕೊಟ್ಟು, ಕೆಲವಾಡಿ, ತಾನಾಡಿತ್ತೇ ನಿಜವೆಂಬ ವಾಗ್ಜಾಲರು ಭಕ್ತರಪ್ಪರೇ? ಅವರು ಪಜೀವಿಗಳು. ಹೇಮದಿಚ್ಛೆಗೆ ನುಡಿವ, ಕಾಮರತಿಗೆಳಸುವ, ಮೋಹದ ಬಲೆಯಲ್ಲಿ ಬೀಳುವ, ಕೋಪದುರಿಯ ಹೊದೆವ, ಮತ್ಸರಿಸಿ, ನರಕದಲ್ಲಿ ಳಿವವರು ಭಕ್ತರಪ್ಪರೇ? ಆದಿಯಲ್ಲಿ ನಮ್ಮವರು ಹೊನ್ನು ಹೆಣ್ಣು ಮಣ್ಣು ಬಿಟ್ಟು ನಡೆದರೇ? ಇಲ್ಲವಾಗಿ ಅವ ಬಿಡದೊತ್ತಿ ತಲೆಯೆತ್ತಗುಡದೆ ಅರ್ಥಪ್ರಾಣಾಭಿಮಾನದೊಡ್ಡುವಿಡಿದು, ನುಡಿಯಡಗಿ ಗುರುಲಿಂಗ ಜಂಗಮಕ್ಕೆ

ದಾಸೋಹವಂ ಮಾಡಿ ಡಿಂಗರಿಗರಾದರು. ಹೀಂಗಲ್ಲದೆ ಮಾತಿನ ಭಂಡದ ಹಸರವನಿಕ್ಕಿ ಮತ್ಸರಿಸಿ ಮುಕ್ತರಾದವರುಂಟೇ? ಇದು ಕಾರಣ ದಾಸೋಹ ಕುಳವನರಿಯದ ಕಲಕೇತಗೋಷ್ಠಿಯ ಭಂಡರನು ನಮ್ಮ ಮಹಾಮಹಿಮ ಸೊಡ್ಡಳನಿರಿದಿರಿದು ಸುಟ್ಟು ಕುರಿಯ ಬಸುರಲ್ಲಿಕ್ಕದೆ ಮಾಣ್ಬನೇ?

ಭಾವಃ— ದಾಸೋಹಭಾವದಿಂದಿರಬೇಕೆಂದು ವಚನಕಾರನು ಇಲ್ಲಿ ಬೋಧಿಸುತ್ತಾನೆ. ಮನುಷ್ಯನು ಅರಿಷಡ್ವರ್ಗವನ್ನು ತ್ಯಜಿಸಬೇಕು. ಆದರೆ ಹೊನ್ನು, ಹೆಣ್ಣು, ಮಣ್ಣನ್ನು ಬಿಡಬೇಕೆಂದು ಇದರ ಅರ್ಥವಲ್ಲ. ಯಾಕಂದರೆ ಹಾಗೆ ಹಿಂದಿನ ಶರಣರು ಆಚರಿಸಿಲ್ಲ. ಆದರೆ ಅವುಗಳ ಬಲೆಗೆ ಸಿಲ್ಕದೆ, ದಾಸೋಹಭಾವದಿಂದ ಇದ್ದರೆ, ಮನುಷ್ಯನು ಸುಖ ಹೊಂದುತ್ತಾನೆಂದು ವಚನಕಾರನ ಭಾವವು.

(೧೩) ಶಿವಾ ಎಂದು ಓದದವನ ಓದು ಗಿಳಿಯೋದು. ಶಿವ, ನಿಮ್ಮನಾರಾಧಿಸದವನ ಮನೆ ಕೆಮ್ಮನೆ. ಶಿವ ನಿಮ್ಮ ನೋಡ ದವನ ಕಣ್ಣು ಹೀಲಿಯ ಕಣ್ಣು. ಶಿವ ನಿಮ್ಮ ಹಾಡದವನ ಬಾಯಿ ಕನ್ನದ ಬಾಯಿ. ಶಿವ ನಿಮ್ಮ ಹೊಗಳದವನ ನಾಲಿಗೆ ಭವಿಯ ನಾಲಿಗೆ, ಬಚ್ಚಲ ತಂಪಿನ ಚೌಗಿನಲ್ಲಿ ಹುಟ್ಟಿದ ಜಗುಣೆಯಯ್ಯಾ. ಶಿವ ನಿಮಗೆ ರಗದ ಕರ್ವಿ ಶೂಲದ ಮೇಲಣ ಹೆಣನು. ಶಿವ ನಿಮ್ಮ ನೆನೆಯದವನ ದೇಹ ಸಂದೇಹ. ಶಿವ ನಿಮ್ಮ ಭಕ್ತನಲ್ಲದವನ ಭೋಗವು, ವಿದ್ಯೆಯು, ಕುಲವು, ಶ್ರೀಯು, ಸಾಹಸವು, ಯಶಸ್ಸು, ವಿಮಾನದ ಮೇಲಣ ಶವದ ತೋರಿಕೆಯಯ್ಯಾ. ಅವನೇತಕ್ಕೆ ಬಾತೆ? ಇದು ಕಾರಣ ಭವರೋಗ ನರಕಕ್ಕಾರದೆ ಶರಣು ಹೊಕ್ಕೆನಯ್ಯಾ ಸೊಡ್ಡಳಾ.

ಭಾವ:— ಪರಮಾತ್ಮನಲ್ಲಿ ಭಕ್ತಿಯುಳ್ಳವನಾಗಿರಬೇಕೆಂದು ವಚ ನಕಾರನು ಇಲ್ಲಿ ಬೋಧಿಸುತ್ತಾನೆ.

(೧೪) ಸಮುದ್ರ ಘನವೆಂಬೆನೇ? ಧರೆಯ ಮೇಲಡಗಿತ್ತು. ಆ ಧರೆ ಘನವೆಂಬೆನೇ? ಅನಂತನ ಫಣಾಮಣಿಯ ಮೇಲಡಗಿತ್ತು. ಅನಂತನು ಘನವೆಂಬೆನೇ? ದೇವಿಯರ ಅಂಗುಲಿಯ ಮುದ್ರೆಯಾಯಿತ್ತು. ಅಂತಹ ದೇವಿಯರ ಘನವೆಂಬೆನೇ? ದೇವರ ಅರ್ಧಾಂಗದಲ್ಲಿ ಅಡಗಿದಳು. ಅಂತಹ ದೇವರ ಘನವೆಂಬೆನೇ? ನಮ್ಮ ಪುರಾತನರ ಅಟ್ಟುಗೆಲಸ

ಬಿಟ್ಟಿಗೆಲಸಕ್ಕೆ ನಡೆದನು. ಇದು ಕಾರಣ ಮಹಾಮಹಿಮ ಸೊಡ್ಡಳನ ಸದ್ಭಕ್ತರಿಂದಧಿಕರಾರೂ ಇಲ್ಲ.

ಭಾವಃ— ನಿಜಭಕ್ತನಾದವನಿಗೆ ಭಯವಿಲ್ಲ. ಅವನು ಸ್ವತಂತ್ರನು. ಪರಮಾತ್ಮನು ಸಹ ಅವನನ್ನು ಹಿಮ್ಮೆಟ್ಟಿಸಲಾರನು. ಅವನು ಶ್ರೇಷ್ಠ ನೆಂದು ವಚನಕಾರನು ಹೇಳುತ್ತಾನೆ.

(೧೫) ಅಂಗದ ಮೇಲೆ ಲಿಂಗವ ಬಿಜಯಂಗೈಸಿಕೊಂಡು ಲಿಂಗವಿಲ್ಲದ ಅಂಗನೆಯನಪ್ಪಿದರೆ ಸುರಾಭಾಂಡವನಪ್ಪಿದಂತೆ ಕೇಳಿರಣ್ಣಾ. ಲಿಂಗ ಸಾಹಿತ್ಯವಾಗಿದ್ದು ಲಿಂಗವಿಲ್ಲದ ಸತಿಯರ ಕೂಡಿಕೊಂಡಿಹ ಪರಿ ಎಂತೋ? ಲಿಂಗವುಳ್ಳಾತನು ಲಿಂಗವಿಲ್ಲದ ತನುವಿನೊಡನೆ ಸಂಯೋಗವ ಮಾಡಿದಡೆ ಎಂತಕ್ಕು? ಹಾಲಗಡಿಗೆಯ ಹಂದಿ ಮುಟ್ಟಿದಂತಕ್ಕು. ಅದೆಂತೆಂದಡೆ— "ಲಿಂಗೇನ ಸಹ ದೇಹಶ್ಚ ಲಿಂಗಬಾಹ್ಯ ತು ಯಾ ಸತೀ। ಸಹಶಕ್ತಿಸಂಯೋಗೇ ಚ । ಕಿಂ ಫಲಂ ಕಿಂ ಶ್ರುತಂ ಭವೇತ್॥ ಕಿಂ ಭಾಂಡಂ ಕ್ಷೀರ ಭಾಂಡಾನಾಂ ಸೂಕರೈಸ್ಸಹ ವರ್ತತೇ ॥" ಎಂದುದಾಗಿ ಲಿಂಗವುಳ್ಳ ಲಿಂಗಾರ್ಚಕರು, ಲಿಂಗೈಕ್ಯರು, ಲಿಂಗವಿಲ್ಲದೆ ಭವಿಯಾಗಿದ್ದ ಸತಿಯರ ಆಲಿಂಗನ ಚುಂಬನಾದಿಗಳ ಮಾಡಿದಡೆ ಗುರುಕಾರುಣ್ಯ ಉಂಟೆಂದು ಸಾಧಾರಣ ಪಕ್ಷದಲ್ಲಿ ಮಾಡಿಕೊಂಡಿದ್ದರೆ ಮಾಡಿದ ಲಿಂಗಾರ್ಚನೆ ನಿಷ್ಫಲ. ಶತಜನ್ಮ ಪರಿಯಂತರ ಹೊಲೆಯರ ಬಸುರಲಿಕ್ಕದೆ ಮಾಬನೇ ನಮ್ಮ ದೇವರಾಯ ಸೊಡ್ಡಳಾ?

ಭಾವಃ— ಲಿಂಗವಿಲ್ಲದ ಸತಿಯರೊಡನೆ ಇರಕೂಡದೆಂದು ವಚನಕಾರನು ಇಲ್ಲಿ ಹೇಳುತ್ತಾನೆ.

(೧೬) ಗಂಡನುಳ್ಳ ಹೆಂಡಿರ ಕಂಡು ಅಳುಪದಿರಾ ಮನವೇ. ಬಂದ ಬಸುರನು ಉಂಡಮೊಲೆಯನು ಕಂಡು ಮರುಗದಿರಾ ಮನವೇ. ಉದ್ದಂಡತನದಲಿ ನಡೆದ ಭಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನಮ್ಮ ದೇವರಾಯಸೊಡ್ಡಳಾ?

ಭಾವಃ— ವ್ಯಭಿಚಾರ ಮಾಡಬಾರದೆಂದು ವಚನಕಾರನಿಲ್ಲಿ ಇಲ್ಲಿ ಹೇಳಿದ್ದಾನೆ.

---

ಮೊದಲಾದವುಗಳು ಯಾವುದರಿಂದ ಪ್ರಕಟವಾಗಿರುತ್ತವೆಯೋ ಅವುಗಳಲ್ಲಿ ಲಯವಾಗುವವು. ಲಯವಾಗುವ ಈ ಕ್ರಿಯೆಗೆ ಪ್ರವೃತ್ತಿ ಎಂಬ ಹೆಸರು ಇದೆ. ಮನುಷ್ಯನಲ್ಲಿ ಚಕ್ರಗಳು, ಶಕ್ತಿಗಳು, ತತ್ವಗಳು, ಭಕ್ತಿಗಳು, ಲಿಂಗಗಳು, ಅಂಗಗಳು, ಕಲೆಗಳು, ನಾದಗಳು, ಮಹಾಭೂತಗಳು, ಇವೇ ಮೊದಲಾದವುಗಳು ಇವೆ. ನಿವೃತ್ತಿಯಲ್ಲಿ ಇವೆಲ್ಲವೂ ಅಡಗಿಹೋಗುತ್ತವೆ. ಆಗ ಯಾವವು ಸ್ಥೂಲರೂಪವಾಗಿವೆಯೋ ಅವುಗಳಿಗೆ ಸಂಬಂಧಿಸಿದ ಸೂಕ್ಷ್ಮರೂಪಗಳಲ್ಲಿ ಅಡಗುತ್ತ ಅಡಗುತ್ತ ಕಡೆಗೆ ಪರಮಾತ್ಮನಲ್ಲಿ ಲಯವಾಗಿ ಹೋಗುತ್ತವೆ. ಇದು ನಿವೃತ್ತಿ ಎಂದೆನಿಸಿಕೊಳ್ಳಲ್ಪಡುತ್ತದೆ. ಅಂತ್ಯದಲ್ಲಿ ಲಿಂಗಗಳು, ಅಂಗಗಳು, ಶಕ್ತಿಗಳು, ಕಲೆಗಳು, ಮಹಾ ಭೂತಗಳು, ಪ್ರಣವಗಳು, ಬ್ರಹ್ಮ ವಿಷ್ಣು ರುದ್ರ ಮೊದಲಾದ ಪಂಚ ಬ್ರಹ್ಮರುಗಳು ಇವುಗಳೆಲ್ಲವು ಸಹ ಕ್ರಮೇಣ ಶೂನ್ಯದಲ್ಲಿ ಲಯವಾಗುವವು.

(೯೫) ಸಕೀಲಗಳು:— ಸ್ಥಲಗಳ ಸಂಬಂಧವನ್ನು ಯಾವುದರಿಂದ ತಿಳಿಯತಕ್ಕದೋ ಅದು ಸಕೀಲವೆನಿಸುವದು. ಸಕೀಲಗಳು ಅನೇಕ ವಿವೆ. ಅವುಗಳ ಮೂಲಕ ಸ್ಥಲಗಳ ಸಂಬಂಧವನ್ನು ಅರಿತುಕೊಂಡು ಆಚರಿಸಬೇಕು. ಹೇಗೆ ಎರಡು ವಸ್ತುಗಳನ್ನು ಕೂಡಿಸಲು ಒಂದು ಕೀಲವು ಸಹಾಯಕಾರಿಯೋ ಹಾಗೆ ಈ ಸಕೀಲಗಳು ಸ್ಥಳಗಳ ಸಂಬಂಧವನ್ನು ಅರಿಯಲು ಸಹಾಯಕಾರಿಗಳು. ಸಕೀಲಗಳು ಅನೇಕ ವಿಧವಾಗಿವೆ. ಅವುಗಳಲ್ಲಿ ಷಡ್ವಿಧಸಕೀಲಗಳು, ಅಷ್ಟವಿಧ ಸಕೀಲಗಳು, ೧೦೮ವಿಧ ಸಕೀಲಗಳು. ೨೧೬ ಸಕೀಲಗಳು ಮಹತ್ವವಾದವುಗಳು. ಮನುಷ್ಯನಿಗೆ ಆರಂಭದ ದಿಶೆಯಲ್ಲಿ ಕೆಲವು ವಿಷಯಗಳ ಅವಶ್ಯಕತೆಯು ಇರುತ್ತದೆ. ಆಗ ಅವನಿಗೆ ಆರು ವಿಧ ಸಕೀಲಗಳು ಸಾಕು. ಮುಂದೆ ಅವನಿಗೆ ಎಂಟು ವಿಧ ಸಕೀಲಗಳು ಬೇಕು. ಅವು ಚಕ್ರ, ಅಂಗ, ಲಿಂಗ, ಶಕ್ತಿ, ಹಸ್ತ, ಮುಖ ಪದಾರ್ಥ ಪ್ರಸಾದ ಇವುಗಳು ಬೇಕಾಗುತ್ತವೆ. ಅವುಗಳ ಅರ್ಥವನ್ನು ಅವನು ತಿಳಿದುಕೊಂಡು, ಅವುಗಳಿಗೆ ಯಾವ ಸ್ಥಳಗಳ ಸಂಬಂಧವಿರತಕ್ಕದ್ದೋ ಅವುಗಳನ್ನು ಸಹ ಅರಿತುಕೊಂಡು ಹಾಗೆ ಆಚರಿಸಬೇಕು. ಮುಂದೆ ಅವನಲ್ಲಿ ಪ್ರಗತಿಯುಂಟಾಗಲು ಪ್ರತಿಯೊಂದು ಸ್ಥಲಕ್ಕೆ ೧೮ರಂತೆ ಆರು ಸ್ಥಲಗಳಲ್ಲಿ ಒಟ್ಟು ೧೦೮ ವಿಷಯಗಳು ಬೇಕಾಗುವವು. ಇವುಗಳ ಮರ್ಮವನ್ನು ಅವನು ಅರಿಯಬೇಕು. ಇವು ಆಗ ಆಕೃತಿ, ಪ್ರಣವ,

ಚಕ್ರ, ಅಂಗ, ವರ್ಣ, ತತ್ವ, ಹಸ್ತ, ಲಿಂಗ, ಮುಖ, ಶಕ್ತಿ, ಭಕ್ತಿ, ಪದಾರ್ಥ, ಪ್ರಸಾದ, ಕಲೆ, ಸಾದಾಖ್ಯ, ಲಕ್ಷಣ, ಸಂಜ್ಞೆ ವೇದ ಇವು ಗಳಿರುತ್ತವೆ. ಮುಂದೆ ಇವುಗಳಷ್ಟೇ ಅಲ್ಲ ಹೆಚ್ಚಿನ ವಿಷಯುಗಳ ಜ್ಞಾನವು ಬೇಕಾಗುತ್ತದೆ. ಇವುಗಳು ಪ್ರತಿಯೊಂದು ಸ್ಥಲಕ್ಕೆ ೩೬ರಂತೆ ಒಟ್ಟು ೨೧೬ ಆಗುವವು. ಈ ೨೧೬ರಲ್ಲಿ ಬೇರೆ ಕೆಲವರು ಇನ್ನೊಂದು ವಿಧ ವಿಚಾರಕ್ಕನುಸರಿಸಿ ೯ತರಗತಿಗಳನ್ನು ಮಾಡುತ್ತಾರೆ. ಆಗ ಪ್ರತಿಯೊಂದಕ್ಕೆ ೨೪ ವಿಷಯುಗಳನ್ನು ಸೂಚಿಸಿ, ಒಟ್ಟು ೨೧೬ ವಿಧ ಸಕೀಲಗಳನ್ನು ಮಾಡುವದುಂಟು. ಈ ೨೧೬ ಸಕೀಲಗಳು ಯೌಗಿಕ ಸ್ವರೂಪದವಿರುತ್ತವೆ. ಇವುಗಳ ೯ ಸ್ಥಲಗಳಲ್ಲಿ ೬ ಷಟ್‌ಚಕ್ರಗಳು ಮತ್ತು ಅವುಗಳ ಮೇಲಿನ ೩ ಚಕ್ರಗಳು ಹೀಗೆ ೯ ಚಕ್ರಗಳನ್ನು ಭಾವಿಸಿ ಅವುಗಳಿಗನುಸಾರವಾಗಿ ೯ ಸ್ಥಲಗಳನ್ನು ಮಾಡುತ್ತಾರೆ. ಹೀಗೆ ಸಕೀಲಗಳಿದ್ದು ಅವುಗಳ ಜ್ಞಾನವನ್ನು ಭಕ್ತನು ಮಾಡಿಕೊಂಡು ವರ್ತಿಸತಕ್ಕದ್ದು. ಇದು ಸಕೀಲ ಜ್ಞಾನವು.

(೯೬) ಏಕೋತ್ತರ ಶತಸ್ಥಲಃ— ಇವು ೧೦೧ ಸ್ಥಲಗಳಿರುತ್ತವೆ. ಇವುಗಳಲ್ಲಿ ಅಂಗಸ್ಥಲಗಳು ೪೪ ಮತ್ತು ಲಿಂಗಸ್ಥಲಗಳು ೫೭ ಹೀಗೆ ೧೦೧ ಇವೆ. ಅಂಗಸ್ಥಲಗಳಲ್ಲಿ ಭಕ್ತನು ಯಾವ ರೀತಿ ಆಚರಿಸಬೇಕೆಂಬುದರ ವಿವರಣೆ ಇರುತ್ತದೆ. ಲಿಂಗಸ್ಥಲಗಳಲ್ಲಿ ಈ ಆಚರಣೆಗಳಿಂದ ಮನುಷ್ಯನ ಮೇಲೆ ಯಾವ ಪರಿಣಾಮಗಳಾಗುವವೆಂಬದನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಮಾಡಿದ ವಿವರಣೆಗಳಿರುತ್ತವೆ.

ಅಂಗಸ್ಥಲಗಳಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಎಂದು ಆರು ಮುಖ್ಯ ವಿಭಾಗಗಳಿರುತ್ತವೆ. ಈ ಪ್ರತಿಯೊಂದರಲ್ಲಿಯೂ ಪುನಃ ಬೇರೆ ಬೇರೆ ವಿಭಾಗಗಳಿದ್ದು, ಅವುಗಳಿಗನುಸಾರವಾಗಿ ಸ್ಥಲಗಳು ವಿವೇಚಿಸಲ್ಪಟ್ಟಿರುತ್ತವೆ. ಈ ಪ್ರಕಾರ ಭಕ್ತ ಸ್ಥಲದಲ್ಲಿ ೧೫, ಮಹೇಶ್ವರ ಸ್ಥಲದಲ್ಲಿ ೯, ಪ್ರಸಾದಿ ಸ್ಥಲದಲ್ಲಿ ೭, ಪ್ರಾಣಲಿಂಗಿ ಸ್ಥಲದಲ್ಲಿ ೫, ಶರಣ ಸ್ಥಲದಲ್ಲಿ ೪, ಐಕ್ಯ ಸ್ಥಲದಲ್ಲಿ ೪ ಹೀಗೆ ಒಟ್ಟು ೪೪ ಸ್ಥಲಗಳಿವೆ.

ಲಿಂಗಸ್ಥಲಗಳಲ್ಲಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದು ಮುಖ್ಯ ಆರು ವಿಭಾ

ಗಗಳಿವೆ. ಈ ಪ್ರತಿಯೊಂದರಲ್ಲಿಯೂ ಬೇರೆ ಬೇರೆ ವಿಭಾಗಗಳಿವೆ. ಅವು ಹೇಗಂದರೆ, ಆಚಾರಲಿಂಗದಲ್ಲಿ ೯, ಗುರುಲಿಂಗದಲ್ಲಿ ೯, ಶಿವಲಿಂಗದಲ್ಲಿ ೯, ಜಂಗಮಲಿಂಗದಲ್ಲಿ ೧೨, ಪ್ರಸಾದಲಿಂಗದಲ್ಲಿ ೯, ಮಹಾಲಿಂಗದಲ್ಲಿ ೯ ಹೀಗೆ ೫೭ ಸ್ಥಲಗಳು ಹೇಳಲ್ಪಡುತ್ತವೆ.

ಇವುಗಳ ವ್ಯಾಖ್ಯೆಗಳು ಕೆಳಗೆ ಕೊಡಲ್ಪಟ್ಟಿವೆ. ಆದರೆ ಹಿಂದೆ ವಿವರಿಸಲ್ಪಟ್ಟ ವಿಷಯಗಳ ವ್ಯಾಖ್ಯೆಗಳು ಕೊಡಲ್ಪಟ್ಟಿಲ್ಲ.

(೯೭) ಏಕೋತ್ತರ ಭಕ್ತಸ್ಥಲಃ— ಇವು ೧೫ ಇವೆ. ಅವು ಯಾವವೆಂದರೆಃ- ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹೇಯಸ್ಥಲ, ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿ ಸ್ಥಲ, ರುದ್ರಾಕ್ಷಿಸ್ಥಲ, ಪಂಚಾಕ್ಷರಿಸ್ಥಲ, ಭಕ್ತಿಸ್ಥಲ, ಉಭಯಸ್ಥಲ, ತ್ರಿವಿಧ ಸಂಪತ್ತು ಸ್ಥಲ, ಚತುರ್ವಿಧಸಾರಾಯ ಸ್ಥಲ, ಎಂದಿರುತ್ತವೆ.

(ಅ) ಪಿಂಡಸ್ಥಲಃ— ಬೀಜದೊಳಗಿನ ವೃಕ್ಷದಂತೆ ನಿರಾಕಾರದಲ್ಲಿದ್ದುಕೊಂಡು ಪ್ರಕಟವಾಗದೆ ಇರುವ ಸ್ಥಿತಿಯು ಪಿಂಡಸ್ಥಲವು.

(ಆ) ಪಿಂಡಜ್ಞಾನಸ್ಥಲಃ— ನಿರಾಕಾರದಲ್ಲಿ ಪ್ರಕಟಗೊಳ್ಳದೆ ಇರುವಾಗ್ಗೆ, ಮನುಷ್ಯನಲ್ಲಿ ತಾನು ತೋರಬೇಕೆಂಬ ಜ್ಞಾನವು ಪಿಂಡದಲ್ಲಿ ಉಂಟಾಗಲು ಅದು ಪಿಂಡಜ್ಞಾನಸ್ಥಲವು.

(ಇ) ಉಭಯ ಸ್ಥಲಃ— ಮನುಷ್ಯನಿಗೆ ದೇಹ ಪ್ರಾಣಗಳೆರಡು ಇವೆ. ಈ ಎರಡರಲ್ಲಿ ಅನುಕ್ರಮವಾಗಿ ಲಿಂಗ, ಜಂಗಮಗಳನ್ನು ಸಂಬಂಧಿಸುವದು ಉಭಯಸ್ಥಲ. ಲಿಂಗಸಂಬಂಧವು ಆಚಾರದ ಮೂಲಕ ಮತ್ತು ಜಂಗಮ ಸಂಬಂಧವು ಅನುಭಾವದ ಮೂಲಕ ಉಂಟಾಗುವವು.

(ಈ) ತ್ರಿವಿಧ ಸಂಪತ್ತು ಸ್ಥಲಃ- ತನುವಿನಲ್ಲಿ ಗುರು, ಪ್ರಾಣದಲ್ಲಿ ಲಿಂಗ, ಅರಿವಿನಲ್ಲಿ ಜಂಗಮ, ಹೀಗೆ ಸಂಬಂಧಿಸುವದು ತ್ರಿವಿಧ ಸಂಪತ್ತು ಸ್ಥಲ.

(ಉ) ಚತುರ್ವಿಧ ಸಾರಾಯಸ್ಥಲಃ— ಗುರು, ಲಿಂಗ, ಜಂಗಮ, ಪ್ರಸಾದ ಇವು ನಾಲ್ಕು ಸಂಬಂಧಿಸಿದ್ದೇ ಚತುರ್ವಿಧಸಾರಾಯ ಸ್ಥಲವು. ಅಂಗದಲ್ಲಿ ಗುರುಭಕ್ತಿ, ಮನದಲ್ಲಿ ಲಿಂಗಭಕ್ತಿ, ಅರಿವಿನಲ್ಲಿ ಜಂಗಮಭಕ್ತಿ, ಪರಿಣಾಮದಲ್ಲಿ ಪ್ರಸಾದ ಭಕ್ತಿ ಇವುಗಳು ಇರತಕ್ಕದ್ದು.

(ಊ) ಉಪಾಧಿ ಮಾಟಸ್ಥಲಃ- ಸಕಲರ ಹಿತಕ್ಕಾಗಿ ಮಾಡಿದ್ದೇ ಉಪಾಧಿಮಾಟಸ್ಥಲವು

(ಎ) ನಿರುಪಾಧಿ ಮಾಟಸ್ಥಲಃ— ಯಾವ ಬಗೆಯ ಉದ್ದೇಶವಿರದೆ ಕೇವಲ ದಾಸೋಹಭಾವದಿಂದ ಮಾಡುವದು ನಿರುಪಾಧಿ ಮಾಟಸ್ಥಲವು.

(ಏ) ಸಹಜ ಮಾಟಸ್ಥಲಃ— ಸಾಮರಸ್ಯಭಾವದಿಂದ ಮಾಡುವದು ಸಹಜ ಮಾಟಸ್ಥಲವು. ಇಲ್ಲಿ ತಾನು, ತಾನು ಮಾಡುವ ಕ್ರಿಯೆ, ಮತ್ತು ಮಾಡಿಸಿಕೊಂಬ ವಸ್ತು, ಇವುಗಳಲ್ಲೆಲ್ಲ ಸಾಮರಸ್ಯ ಭಾವವು ಉಂಟಾಗಬೇಕು.

(೯೮) ಏಕೋತ್ತರ ಮಹೇಶಸ್ಥಲಃ— ಇವು ೯ ಇವೆ. ಅವು ಯಾವವೆಂದರೆ, ಮಹೇಶ್ವರ ಸ್ಥಲ, ಲಿಂಗ ನಿಷ್ಠಾಸ್ಥಲ, ಪೂರ್ವಾಶ್ರಯ ನಿರಸನ ಸ್ಥಲ, ವಾಗದ್ವೈತ ನಿರಸನಸ್ಥಲ, ಆಹ್ವಾನ ನಿರಸನಸ್ಥಲ, ಅಷ್ಟ ತನುಮೂರ್ತಿ ನಿರಸನಸ್ಥಲ, ಸರ್ವಗತ ನಿರಸನಸ್ಥಲ, ಶಿವಜಗನ್ಮಯ ಸ್ಥಲ, ಭಕ್ತದೇಹಿಕಲಿಂಗಸ್ಥಲ, ಎಂದಿರುತ್ತವೆ.

(ಅ) ಪೂರ್ವಾಶ್ರಯ ನಿರಸನಸ್ಥಲಃ— ಲಿಂಗಧಾರಣವಾದ ಬಳಿಕ ಲಿಂಗಿಗಳಲ್ಲಿ ಜಾತಿಭೇದವನ್ನು ಎಣಿಸದಿರುವದು ಪೂರ್ವಾಶ್ರಯ ನಿರಸನಸ್ಥಲ.

(ಆ) ವಾಗದ್ವೈತನಿರಸನಸ್ಥಲಃ— ವ್ಯವಹಾರದಲ್ಲಿ ಅದ್ವೈತ ಭಾವದಿಂದ ಆಚರಿಸದೆ ಇರುವದು ವಾಗದ್ವೈತ ನಿರಸನಸ್ಥಲವು. ಕಾರ್ಯಗಳಲ್ಲಿ ದ್ವೈತವಿದೆ. ದ್ವೈತವಿದ್ದರೂ ಕೂಡ ಸಮರಸಾಚರಣೆಯುಳ್ಳದ್ದು.

(ಇ) ಆಹ್ವಾನ ನಿರಸನಸ್ಥಲಃ— ಲಿಂಗಾಂಗಿಗಳು ಸಮರಸಾಚಾರವುಳ್ಳವರು. ಆದ್ದರಿಂದ ಅವರ ಕ್ರಿಯೆಗಳಲ್ಲಿ ಆಹ್ವಾನ ವಿಸರ್ಜನೆಗಳಿಲ್ಲ. ಇದು ಅಹ್ವಾನ ನಿರಸನಸ್ಥಲ.

(ಈ) ಅಷ್ಟತನುಮೂರ್ತಿನಿರಸನಸ್ಥಲಃ— ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಸೂರ್ಯ, ಚಂದ್ರ, ಆತ್ಮ ಇವು ಅಷ್ಟ ತನುಮೂರ್ತಿಗಳು. ಇವುಗಳಲ್ಲಿ ಆರನ್ನೂ ದೇವರೆಂದು ಪೂಜಿಸದೆ ಇರುವದು ಅಷ್ಟತನುಮೂರ್ತಿನಿರಸನಸ್ಥಲ.

(ಉ) ಸರ್ವಗತ ನಿರಸನಸ್ಥಲಃ — ದೃಶ್ಯವಾಗಿರುವ ಜಗತ್ತು ಪರಮಾತ್ಮನಲ್ಲವೆಂದು ತಿಳಿಯುವದು ಸರ್ವಗತ ನಿರಸನಸ್ಥಲ.

(ಊ) ಶಿವಜಗನ್ಮಯಸ್ಥಲಃ — ಪರಮಾತ್ಮನು ವಿಶ್ವವ್ಯಾಪಿಯೆಂದು ತಿಳಿಯುವದು ಶಿವಜಗನ್ಮಯ ಸ್ಥಲ.

(ಎ) ಭಕ್ತದೇಹಿಕ ಲಿಂಗಸ್ಥಲಃ— ಪರಮಾತ್ಮನು ಒಳ್ಳೆಯದರಲ್ಲಿ ಇರುತ್ತಾನೆಂದು ಭಾವಿಸಿ ವರ್ತಿಸುವದು ಭಕ್ತದೇಹಿಕಲಿಂಗಸ್ಥಲ.

(೯೯) ಏಕೋತ್ತರ ಪ್ರಸಾದಿ ಸ್ಥಲಃ— ಇವು ಆರು ಇವೆ. ಅವು ಯಾವವೆಂದರೆ:- ಗುರು ಮಹಾತ್ಮೆಸ್ಥಲ, ಲಿಂಗ ಮಹಾತ್ಮೆಸ್ಥಲ, ಜಂಗಮ ಮಹಾತ್ಮೆಸ್ಥಲ, ಭಕ್ತ ಮಹಾತ್ಮೆಸ್ಥಲ, ಶರಣ ಮಹಾತ್ಮೆಸ್ಥಲ, ಪ್ರಸಾದ ಮಹಾತ್ಮೆಸ್ಥಲ ಎಂದು ಇವೆ. ಆಚರಣೆ, ಮನಸ್ಸು, ಅರಿವು ಇವುಗಳಲ್ಲಿ ಶುದ್ಧತೆಯನ್ನುಂಟುಮಾಡಿಕೊಳ್ಳಬೇಕು. ಮತ್ತು ಸದ್ವರ್ತನೆಯಿಂದ ಪರಮಾನಂದದಲಿದ್ದು ಅರ್ಪಣ ಭಾವಯುಕ್ತನಾಗಿ ಆಚರಿಸುವದು ಈ ಸ್ಥಲದ ಮತ್ತು ಅದರ ಉಪಭಾಗಗಳ ಲಕ್ಷಣವು.

(೧೦೦) ಏಕೋತ್ತರ ಪ್ರಾಣಲಿಂಗಿ ಸ್ಥಲಃ— ಇವು ೫ ಇವೆ. ಅವು ಯಾವವೆಂದರೆ— ಪ್ರಾಣಲಿಂಗಿ ಸ್ಥಲ, ಪ್ರಾಣಲಿಂಗಾರ್ಚನೆಯ ಸ್ಥಲ, ಶಿವಯೋಗ ಸಮಾಧಿ ಸ್ಥಲ, ಲಿಂಗನಿಜ ಸ್ಥಲ ಮತ್ತು ಅಂಗಲಿಂಗಸ್ಥಲಗಳು ಇರುತ್ತವೆ.

(ಅ) ಲಿಂಗನಿಜಸ್ಥಲ— ಮನಸ್ಸಿನಲ್ಲಿ ಲಿಂಗವು ದೃಢಪಡಲು ಅದು ಮನೋಮೂರ್ತಿಯಾಗಿ ನಿಲ್ಲುವದು. ಅದೇ ಲಿಂಗನಿಜಸ್ಥಲ.

(ಆ) ಅಂಗಲಿಂಗಸ್ಥಲ— ಲಿಂಗವು ಮನುಷ್ಯನಲ್ಲಿ ನೆಲೆಗೊಳ್ಳಲು ಅವನ ಸರ್ವಾಂಗವು ಮತ್ತು ಅವನ ಕರಣಗಳು ಲಿಂಗಮಯವಾಗುವವು. ಇದು ಅಂಗಲಿಂಗಸ್ಥಲವು. ಇಲ್ಲಿ ಅತ್ಯಂತವಾದ ಸಾರಮಾರ್ಥಿಕ ಆನಂದವಿದೆ.

(೧೦೧) ಏಕೋತ್ತರ ಶರಣಸ್ಥಲ— ಇವು ನಾಲ್ಕು ಇವೆ. ಅವು ಯಾವವೆಂದರೆ— ಶರಣಸ್ಥಲ, ತಾಮಸನಿರಸನಸ್ಥಲ, ನಿರ್ದೇಶಸ್ಥಲ, ಶೀಲಸಂಪಾದನೆಯ ಸ್ಥಲ.

(ಅ) ತಾಮಸ ನಿರಸನಸ್ಥಲ— ತಾಮಸಭಾವದಿಂದಲೂ ಅಹಂಕಾರದಿಂದಲೂ ವರ್ತಿಸದೆ ಇರುವದು ತಾಮಸನಿರಸನಸ್ಥಲ.

(ಆ) ನಿರ್ದೇಶ ಸ್ಥಲ— ನಿಜವನರಿದು ಸಂಶಯ ರಹಿತನಾಗಿ, ಸುಜ್ಞಾನಿಯಾಗಿ ವರ್ತಿಸುವದು ನಿರ್ದೇಶಸ್ಥಲ.

(ಇ) ಶೀಲಸಂಪಾದನೆಯ ಸ್ಥಲ— ಆಚಾರದ ಅತಿರೇಕಗಳಿಗೆ ಒಳಗಾಗದೆ ಲಿಂಗಾಂಗಿಗಳಿಗೆ ಯೋಗ್ಯವಾದ ಆಚಾರಗಳನ್ನು ಅನುವರ್ತಿಸುವದು ಶೀಲಸಂಪಾದನೆಯ ಸ್ಥಲ.

(೧೦೨) ಏಕೋತ್ತರ ಐಕ್ಯಸ್ಥಲ— ಇವು ನಾಲ್ಕು ಇರುತ್ತವೆ. ಅವು ಐಕ್ಯಸ್ಥಲ, ಸರ್ವಾಚಾರ ಸಂಪತ್ತಿಸ್ಥಲ, ಏಕಭಾಜನಸ್ಥಲ ಮತ್ತು ಸಹಭೋಜನ ಸ್ಥಲ, ಎಂದು ಇವೆ.

(ಅ) ಏಕಭಾಜನಸ್ಥಲ— ಲಿಂಗವೂ ತಾನೂ ಕೂಡಿಕೊಂಡು ಸಾಮರಸ್ಯತ್ವದಿಂದ ಆಚರಿಸುವದು ಏಕಭಾಜನ ಸ್ಥಲವು.

(ಆ) ಸಹಭೋಜನಸ್ಥಲ— ಪರಮಾತ್ಮನಿಗೆ ತಾನು ಭೋಗಿಸುವದನ್ನೆಲ್ಲ ಅರ್ಪಿಸಿ ಸಮಭೋಗಿಯಾಗಿರುವದು ಸಹಭೋಜನಸ್ಥಲ.

(೧೦೩) ಏಕೋತ್ತರ ಆಚಾರಲಿಂಗಸ್ಥಲ— ಇದರಲ್ಲಿ ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಎಂಬ ಮೂರು ವಿಭೇದಗಳಿವೆ. ಗುರುಲಿಂಗದಲ್ಲಿ ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು ಎಂದು, ಶಿವಲಿಂಗದಲ್ಲಿ ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ ಎಂದು, ಮತ್ತು ಜಂಗಮಲಿಂಗದಲ್ಲಿ ಸ್ವಯ, ಚರ, ಪರ ಎಂದು ಹೀಗೆ ಒಟ್ಟು ೯ ವಿಭಾಗಗಳಿವೆ.

(ಅ) ಗುರುಲಿಂಗ ತ್ರಿವಿಧ— ಇವು ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು ಎಂದು ಇವೆ. ದೀಕ್ಷೆಯಿಂದ ಉಪದೇಶವನ್ನು ಹೊಂದಿದಲ್ಲಿ ದೀಕ್ಷಾಗುರುವು. ಉಪದೇಶಕ್ಕೆ ಅನುಗುಣವಾಗಿ ಬೋಧೆಯನ್ನು ಅಭ್ಯಾಸಿಸಲು ಶಿಕ್ಷಾಗುರುವು. ಮುಂದೆ ಅದನ್ನು ಮನನಮಾಡಿಕೊಂಡಲ್ಲಿ ಜ್ಞಾನಗುರುವು.

(ಆ) ಶಿವಲಿಂಗ ತ್ರಿವಿಧ— ಇವು ಕ್ರಿಯಾಲಿಂಗ, ಭಾವಲಿಂಗ, ಜ್ಞಾನಲಿಂಗ ಎಂದು ಇವೆ. ಬಾಹ್ಯದಲ್ಲಿ ಮಾಡುವ ಸತ್‌ಕೃತ್ಯಗಳು ಕ್ರಿಯಾಲಿಂಗ. ಅವು ಮುಂದೆ ಭಾವಭರಿತವಾದಲ್ಲಿ ಭಾವಲಿಂಗ. ಭಾವಭರಿತನಾಗಿ ಜ್ಞಾನವಳವಡಲು ಜ್ಞಾನಲಿಂಗ.

(ಇ) ಜಂಗಮಲಿಂಗ ತ್ರಿವಿಧ— ಇವು ಸ್ವಯ, ಚರ, ಪರ ಎಂದು ಇವೆ. ಕ್ರಿಯೆಗಳ ಪರಿಣಾಮಗಳು ತನ್ನಲ್ಲಿ ನಿಶ್ಚಲವಾಗಿ ಉಳಿದರೆ

ಸ್ವಯವು. ಅವು ಭಕ್ತಿ ಕಾರಣವಾಗಿ ಜಗತ್ತಿನಲ್ಲಿ ಜನಹಿತಕ್ಕೋಸ್ಕರ ಉಪಯೋಗಿಸಲ್ಪಟ್ಟಲ್ಲಿ ಚರವು. ಹೀಗೆ ವ್ಯವಹರಿಸಿ ಚಿದಾತ್ಮನಲ್ಲಿ ಬೆರೆದಲ್ಲಿ ಅದು ಪರವು. ಇದು ಜಂಗಮದ ಉತ್ಕೃಷ್ಟ ಸ್ಥಿತಿಯು.

ಗುರುಲಿಂಗ, ಶಿವಲಿಂಗ, ಜಂಗಮಲಿಂಗಗಳನ್ನು ಹೀಗೆ ಸಾಧಿಸಿದಲ್ಲಿ ಅವೆಲ್ಲವೂ ಆಚಾರಲಿಂಗದಲ್ಲಿ ಅಡಗುವವು. ಇದು ಆಚಾರಲಿಂಗದ ಪೂರ್ಣತೆಯು.

(೧೦೪) ಏಕೋತ್ತರ ಗುರುಲಿಂಗಸ್ಥಲ— ಇದರಲ್ಲಿ ಆಗಮಲಿಂಗ, ಕಾಯಲಿಂಗ, ಆಚಾರಲಿಂಗ ಎಂಬ ಮೂರು ಭಾಗಗಳಿವೆ. ಆಗಮಲಿಂಗದಲ್ಲಿ ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಎಂದು ಮೂರು ವಿಭಾಗಗಳಿವೆ. ಕಾಯಲಿಂಗದಲ್ಲಿ ಸಕಾಯ, ಅಕಾಯ, ಪರಕಾಯ ವೆಂಬ ಮೂರು ವಿಭಾಗಗಳಿವೆ. ಆಚಾರಲಿಂಗದಲ್ಲಿ ಧರ್ಮಾಚಾರ, ಭಾವಾಚಾರ ಜ್ಞಾನಾಚಾರ ಎಂದು ವಿಭೇದಗಳಿವೆ. ಹೀಗೆ ಇಲ್ಲಿ ಒಟ್ಟು ೯ ಮುಖ್ಯ ಭಾಗಗಳಿವೆ.

(ಅ) ಆಗಮಲಿಂಗ ತ್ರಿವಿಧ— ಇವು ಕ್ರಿಯಾಗಮ, ಭಾವಾಗಮ, ಜ್ಞಾನಾಗಮ ಎಂದು ಇವೆ. ಸತ್‌ಕ್ರಿಯೆಯೇ ಕ್ರಿಯಾಗಮವು. ಸತ್‌ಕ್ರಿಯೆಯಲ್ಲಿ ನಿಷ್ಠೆ ನಿಬ್ಬೆರಿಸಿದರೆ, ಅದು ಭಾವಾಗಮವು. ಲಿಂಗದ ಮಹಾಜ್ಞಾನದ ಪ್ರಕಾಶದಲ್ಲಿ ಆಚರಿಸುವದೇ ಜ್ಞಾನಾಗಮವು.

(ಬ) ಕಾಯಲಿಂಗ ತ್ರಿವಿಧ— ಇವು ಸಕಾಯ, ಅಕಾಯ, ಪರಕಾಯವೆಂದು ಇವೆ. ಸ್ಥೂಲಕ್ರಿಯೆಗಳನ್ನು ಲಿಂಗದೊಡನೆ ಬೆರಿಸಿ ವರ್ತಿಸಿದಲ್ಲಿ ಸಕಾಯವು. ಇಂಥ ಲಿಂಗ ಕಾಯದಿಂದ ನಿರ್ದೇಹಸ್ಥಿತಿಯುಂಟಾಗಲು ಅದು ಅಕಾಯವು. ದೇಹದ ನಿರ್ದೇಹ ಸ್ಥಿತಿಯನ್ನು ಸಹ ದಾಟಿದಲ್ಲಿ ಅವನು ಸಕಾಯನೂ ಅಲ್ಲ, ಅಕಾಯನೂ ಅಲ್ಲ. ಅವನು ಪರಕಾಯನು.

(ಕ) ಆಚಾರಲಿಂಗ ತ್ರಿವಿಧ— ಇವು ಧರ್ಮಾಚಾರ, ಭಾವಾಚಾರ, ಜ್ಞಾನಾಚಾರ ಎಂದು ಇವೆ. ನೀತಿಯಂತೆ ನಡೆಯುವದು ಧರ್ಮಾಚಾರವು. ನೀತಿಯು ಮನಸ್ಸಿನಲ್ಲಿ ದೃಢಪಟ್ಟಲ್ಲಿ ಭಾವಾಚಾರವು. ಹೀಗೆ ದೃಢಪಟ್ಟು ಮಹಾಜ್ಞಾನದಲ್ಲಿ ವರ್ತಿಸಿದ್ದಾದರೆ ಜ್ಞಾನಾ

ಚಾರವು. ಇವು ಗುರುಲಿಂಗದ ಆಚಾರಲಿಂಗದಲ್ಲಿಯ ಮೂರು ತರಗಗಳು.

ಹೀಗೆ ಆಗಮಲಿಂಗ, ಕಾಯಲಿಂಗ, ಆಚಾರಲಿಂಗ ಇವುಗಳನ್ನು ಸಾಧಿಸಿದಲ್ಲಿ ಅವೆಲ್ಲವೂ ಗುರುಲಿಂಗದಲ್ಲಿ ಅಡಗುವವು. ಇದು ಗುರುಲಿಂಗದ ಪೂರ್ಣತೆಯು.

(೧೦೫) ಏಕೋತ್ತರ ಶಿವಲಿಂಗಸ್ಥಲಃ— ಇದರಲ್ಲಿ ಅನುಗ್ರಹಲಿಂಗ, ಅರ್ಪಿತಲಿಂಗ, ಮತ್ತು ತನುಗುಣಲಿಂಗ ಎಂದು ಮೂರು ಮುಖ್ಯ ವಿಭಾಗಗಳಿವೆ. ಇವುಗಳಲ್ಲಿ ಅನುಗ್ರಹ ಲಿಂಗದಲ್ಲಿ ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ ಎಂತಲೂ ಅರ್ಪಿತ ಲಿಂಗದಲ್ಲಿ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತಗಳೆಂತಲೂ ತನುಗುಣಲಿಂಗದಲ್ಲಿ ಶಿಷ್ಯ, ಶುಶ್ರೂಷಾ, ಸೇವ್ಯ ಎಂತಲೂ ಹೀಗೆ ಒಟ್ಟು ೯ ಭಾಗಗಳಿವೆ.

(ಅ) ಅನುಗ್ರಹಲಿಂಗ ತ್ರಿವಿಧಃ- ಇವು ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ ಎಂದು ಇವೆ. ಅನುಗ್ರಹವು ಕಾಯವನ್ನು ಲಿಂಗಕ್ಕೆ ಅರ್ಪಿಸುವದು. ಇಲ್ಲಿ ಅಂಗ ವಿಕಾರಗಳು ದೂರಾಗುವವು. ಇಂದ್ರಿಯಗಳನ್ನು ಲಿಂಗಕ್ಕೆ ಅರ್ಪಿಸುವದು ಇಂದ್ರಿಯಾನುಗ್ರಹವು. ಇದರಿಂದ ಲಿಂಗ ಚೈತನ್ಯವು ಒದಗುವದು. ಅಂಗವನ್ನು ಪ್ರಾಣಕ್ಕೆ ಸಂಬಂಧಿಸುವದು ಪ್ರಾಣಾನುಗ್ರಹವು. ಇದರಿಂದ ಬಾಹ್ಯಾಭ್ಯಂತರವೆಲ್ಲ ಲಿಂಗಮಯವಾಗುವದು.

(ಬ) ಅರ್ಪಿತಲಿಂಗ ತ್ರಿವಿಧಃ— ಇವು ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತಗಳಾಗಿರುವವು. ಕಾಯದಲ್ಲಿ ಅರ್ಪಿತವಾದುದು ಕಾಯಾರ್ಪಿತವು. ಅಂತರ್ಮುಖದಲ್ಲಿ ಅಂದರೆ ಕರಣಗಳ ಮೂಲಕ ಅರ್ಪಿತವಾದುದು ಕರಣಾರ್ಪಿತವು. ಭಾವದಲ್ಲಿ ಅರ್ಪಿತವಾದುದು ಭಾವಾರ್ಪಿತವು. ಇದು ಇದ್ದೂ ಇಲ್ಲದಂಥ ಸ್ಥಿತಿಯು.

(ಕ) ತನುಗುಣಲಿಂಗ ತ್ರಿವಿಧಃ— ಇವು ಶಿಷ್ಯ, ಶುಶ್ರೂಷಾ, ಸೇವ್ಯ ಎಂದು ಇವೆ. ಗುರುವಿನಲ್ಲಿ ಶಿಷ್ಯತ್ವವನ್ನು ಅಂಗೀಕರಿಸುವದು ಶಿಷ್ಯವು. ಅವನ ಶುಶ್ರೂಷೆಯಲ್ಲಿದ್ದು ಲಿಂಗತತ್ವವನ್ನು ದೃಢಪಡಿಸುವದು ಶುಶ್ರೂಷೆಯು. ಶಿಷ್ಯ ಮತ್ತು ಗುರು ಇವರ ಏಕರೂಪತೆಯು

# ಪ್ರಸ್ತಾವನೆ.



ಸ್ಪೃಶ್ಯಾಸ್ಪೃಶ್ಯ ಭಾವವು ವೀರಶೈವ ಧರ್ಮದಲ್ಲಿರುವದಿಲ್ಲ. ವೀರ ಶೈವ ಸಮಾಜದಲ್ಲಿ ಆಗಿಹೋಗಿರುವ ತತ್ವಜ್ಞಾನಿಗಳೂ, ಶರಣರೂ, ಸಾಧುಗಳೂ, ವಚನಕಾರರೂ ಅಸ್ಪೃಶ್ಯತೆಯನ್ನು ಎಲ್ಲಿಯೂ ಒಪ್ಪಿರುವದಿಲ್ಲ. ಅವರಲ್ಲಿ ಮುಖ್ಯವಾಗಿ ವಚನಕಾರರು ಬಹು ಸ್ಪಷ್ಟ ಶಬ್ದಗಳಿಂದ ಇದನ್ನು ಖಂಡಿಸಿದ್ದಾರೆ. ಈ ಬಗ್ಗೆ ಅವರ ಉಕ್ತಿಗಳು ಅಸಂಖ್ಯವಾಗಿರುತ್ತವೆ. ವೀರಶೈವ ಧರ್ಮವು ಪಂಚಸೂತಕಗಳನ್ನು ಎಣಿಸುವದಿಲ್ಲ. ಜನನಸೂತಕ, ಪ್ರೇತಸೂತಕ, ಉಚ್ಛಿಷ್ಟಸೂತಕ, ರಜಸೂತಕ, ಜಾತಿ ಸೂತಕ ಇವುಗಳೇ ಈ ಪಂಚಸೂತಕಗಳಾಗಿದ್ದು ಇವುಗಳಲ್ಲಿ ಜಾತಿ ಸೂತಕವಿರುವದರಿಂದ ವೀರಶೈವರು ಇದನ್ನು ಮನ್ನಿಸಿರುವದಿಲ್ಲ. ಯಾರು ವೀರಶೈವ ಧರ್ಮದ ತತ್ವಗಳನ್ನು ಒಪ್ಪಿ ಅವುಗಳಂತೆ ಆಚರಿಸುತ್ತಾರೋ ಅವರು ಯಾವ ಕಾಯಕವನ್ನು ಮಾಡುತ್ತಿದ್ದರೂ ಕೂಡ ಅವರಲ್ಲಿ ಯಾವತೆರದ ಭೇದವನ್ನು ಎಣಿಸಕೂಡದೆಂದು ವೀರಶೈವ ಮತವಿರುವದರಿಂದ ಅಸ್ಪೃಶ್ಯತೆಯನ್ನು ವೀರಶೈವ ಶಿವಶರಣರು ಎಂದಿನಿಂದಲೂ ನಿಷೇಧಿಸುತ್ತ ಬಂದಿರುತ್ತಾರೆ ಮತ್ತು ಅವರು ಹಾಗೆ ಒಂದು ಕಾಲದಲ್ಲಿ ನಡೆದೂ ತೋರಿಸಿರುತ್ತಾರೆ. ಇದು ಮುಂದೆ ಹೇಳಿದ ಸಂಗತಿಗಳಿಂದ ಗೊತ್ತಾಗುವದು.

ಯಾವನು ವೀರಶೈವ ಧರ್ಮದ ತತ್ವಗಳನ್ನು ತಿಳಿದುಕೊಂಡು ಅವುಗಳಂತೆ ಆಚರಿಸುತ್ತಾನೋ ಅವನು ಲಿಂಗಧಾರಣೆಗೆ ಯೋಗ್ಯನಾಗುತ್ತಾನೆ. ಲಿಂಗಧಾರಣೆಯು ವೀರಶೈವಾಚಾರಣೆಯಂತೆ ನಡಿಯಲು ಒಪ್ಪಿಗೆ ಕೊಟ್ಟದ್ದರ ಒಂದು ಕುರುಹೆಂದು ಹೇಳಬಹುದು. ಹೀಗೆ ಒಪ್ಪಿಕೊಂಡು ಷಟ್‌ಸ್ಥಲಶಾಸ್ತ್ರದ ತತ್ವಗಳನ್ನು ಅರಿತು ಆಚರಿಸಿದಲ್ಲಿ ಅಂಥ ಭಕ್ತನ ಅಂಗ ಮನ ಪ್ರಾಣಗಳಲ್ಲಿ ಲಿಂಗದ ಕಳೆಯು ದೃಢಪಡುತ್ತ ಹೋಗುತ್ತದೆ. ಅಂಥವನು ಪರಮಾತ್ಮನ ವಾಸ ಭೂಮಿ ಎಂದು ವಚನಕಾರರ ಅಭಿಪ್ರಾಯವಿದೆ. ಆದ್ದರಿಂದ ಭಕ್ತನ ಶರೀರವು ದೇವಾಲಯದಂತೆ ಪವಿತ್ರವಾದುದೆಂದು ಅವರ ಉಕ್ತಿಗಳಿವೆ. ಇಂಥ ಪವಿತ್ರ ಸ್ಥಾನದಲ್ಲಿ ಯಾವ ತೆರದ ಉಚ್ಚನೀಚ ಭಾವವನ್ನು ಕಲ್ಪಿಸಕೂಡದು. ಅಲ್ಲಿ ಜಾತಿಭೇದದ

ಕಲ್ಪನೆಗಳು ಎಷ್ಟುಮಾತ್ರವೂ ಇರಕೂಡದು. ಈ ತತ್ವಕ್ಕನುಸರಿಸಿ ವೀರ ಶೈವ ಧರ್ಮದಲ್ಲಿ ಅಸ್ಪೃಶ್ಯತ್ವವಿರುವದಿಲ್ಲ.

ವಚನಕಾರರ ಈ ತತ್ವಗಳು ವೀರಶೈವ ಸಮಾಜದಲ್ಲಿ ರೂಢವಿರುವ ವರೆಗೆ ಅದು ದೇಶದಲ್ಲಿ ಪ್ರಸಾರವಾಗುತ್ತಲೇ ನಡಿಯಿತು. ಇದರಿಂದ ಅಸ್ಪೃಶ್ಯ ಮೊದಲ್ಗೊಂಡು ಎಲ್ಲ ಸಮಾಜಗಳು ಅದರಲ್ಲಿ ಸೇರ್ಪಡೆಯಾದವು. ಈ ಸ್ಥಿತಿಯು ಕ್ರಿ. ಶ. ೧೧೦೦ ರಿಂದ ೧೩೦೦ ಇಸ್ವಿಯವರೆಗೆ ಅಂದರೆ ಸುಮಾರು ೨೦೦ ವರ್ಷಗಳ ವರೆಗೆ ನಡೆಯಿತು. ಈ ಕಾಲದಲ್ಲಿ ಅಸಂಖ್ಯ ವಚನಕಾರರು ದೇಶದಲ್ಲಿ ಉದ್ಭವಿಸಿದರು. ಅವರೆಲ್ಲರೂ ಅಸ್ಪೃಶ್ಯತ್ವವನ್ನು ನಿಷೇಧಿಸಿದ್ದಾರೆ. ಅವರು ಹೀಗೆ ನಿಷೇಧಿಸಿದ್ದಲ್ಲದೆ, ಅದರಂತೆ ಅವರು ಆಚರಿಸಿಯೂ ಇದ್ದಾರೆ. ಇದರಿಂದ ಆಗಿನ ಅಸ್ಪೃಶ್ಯ ಸಮಾಜಗಳಲ್ಲಿ ಅನೇಕ ಸಾಧುಗಳೂ ಸತ್ಪುರುಷರೂ ಆಗಿಹೋದರು. ಅಂಥವರಲ್ಲಿ ಕೆಲವರನ್ನು ಮಾತ್ರ ನಾವು ಇಲ್ಲಿ ನಿರ್ದೇಶಿಸುತ್ತೇವೆ.

ಅಸ್ಪೃಶ್ಯ ಸಮಾಜದಲ್ಲಿ ಆಗಿಹೋದ ಮಹಾಪುರುಷರಲ್ಲಿ ಮಾದರ ಚನ್ನಯ್ಯನು ಉಚ್ಚ ಸ್ಥಾನವನ್ನು ಹೊಂದಿರುತ್ತಾನೆ. ಅವನು ಬಸವೇಶ್ವರನಕಿಂತಲೂ ಮೊದಲಿನವನು. ಬಸವೇಶ್ವರನು ತನ್ನ ವಚನಗಳಲ್ಲಿ ಅವನ ವಿಷಯವಾಗಿ ಆಗಿಂದಾಗ್ಗೆ ಉಲ್ಲೇಖಿಸುತ್ತಾನೆ. ಚನ್ನಯ್ಯನ ಕೆಲವು ವಚನಗಳೂ ಇರುತ್ತವೆ. ಅವನು ಮೊದಲು ಕರ್ನಾಟಕದಲ್ಲಿ ವಾಸವಾಗಿದ್ದು ಮುಂದೆ ದಕ್ಷಿಣದಲ್ಲಿ ಚೋಳದೇಶಕ್ಕೆ ಹೋದನೆಂದು ತೋರುತ್ತದೆ. ಅಲ್ಲಿ ಅವನು ಹುಲ್ಲು ಮಾಡಿ ಚೋಳ ರಾಜನಲ್ಲಿ ಅದನ್ನು ಹಾಕಿ ಅದರಿಂದ ಬಂದ ಹಣದಿಂದ ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಅವನು ಗುಪ್ತಭಕ್ತಿಯುಳ್ಳವನಾಗಿ ತಾನು ದುಡಿದದ್ದನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿ ಪ್ರಸಾದರೂಪವಾಗಿ ಅನ್ನಗ್ರಹಣ ಮಾಡುತ್ತಿದ್ದನು. ಪರಮಾತ್ಮನು ಅವನ ಭಕ್ತಿಗೆ ಮೆಚ್ಚಿ ಅವನೊಡನೆಯೇ ಅನ್ನ ಸೇವನೆ ಮಾಡುತ್ತಿದ್ದನು. ಚೋಳರಾಜನಿಗೆ ಈ ಸಂಗತಿಯು ತಿಳಿಯಲು ಅವನು ಚನ್ನಯ್ಯನನ್ನು ಕಂಡು ಅವನನ್ನು ಸತ್ಕರಿಸಿ ಮನ್ನಿಸಿದನೆಂದು ಇವನ ಚರಿತ್ರೆ ಇದೆ. ಮಹಾಕವಿಯಾದ ಹರಿಹರನು ಇವನ ವಿಷಯವಾಗಿ ಒಂದು ಬಹು ಸುಂದರವಾದ ರಗಳೆಯನ್ನು ರಚಿಸಿದ್ದಾನೆ. (ಹರಿಹರನ ರಗಳೆಗಳು ಭಾಗ೧ ನೋಡಿರಿ.)

ಶ್ವಪಚಯ್ಯನೆಂಬವನು ಇನ್ನೊಬ್ಬ ಅಸ್ಪೃಶ್ಯ ಮಹಾಪುರುಷನಿದ್ದಾನೆ. ಅವನಿದ್ದ ಛತ್ತೀಸಪುರ ಎಂಬ ಗ್ರಾಮದಲ್ಲಿ ಸಾಮವೇದಿ ಎಂಬ ಒಬ್ಬ ಪ್ರಸಿದ್ಧ ಬ್ರಾಹ್ಮಣ ಪಂಡಿತನಿದ್ದು ಅವನು ತನ್ನ ಯೋಗಾಭ್ಯಾಸದ ಬಲದಿಂದ ಆಕಾಶ ಗಮನ ಮಾಡುವ ಸಾಮರ್ಥ್ಯವನ್ನು ಹೊಂದಿದವನಾಗಿದ್ದನು. ಅವನು ಒಂದು ದಿವಸ ಆಕಾಶ ಮಾರ್ಗದಿಂದ ಹೋಗುತ್ತಿರಲು ಕೆಳಗೆ ಶ್ವಪಚನು ಒಂದು ತಲೆಬುರುಡೆಯಲ್ಲಿ ತನ್ನ ಆಹಾರವನ್ನಿಟ್ಟುಕೊಂಡು ಭುಂಜಿಸುತ್ತಾ ಇದ್ದನು. ಆಗ ಶ್ವಪಚನು ಆಕಾಶ ಮಾರ್ಗದಿಂದ ಹೋಗುತ್ತಿದ್ದ ಸಾಮವೇದಿಯ ದೃಷ್ಟಿಯು ಪರಮಾತ್ಮನಿಗೆ ಅರ್ಪಣವಾದ ತನ್ನ ಆಹಾರದಲ್ಲಿ ಬೀಳಬಾರದೆಂದು ಅದನ್ನು ಕರಹದಿಂದ ಮುಚ್ಚಿದನು. ಸಾಮವೇದಿಯು ಅದನ್ನು ನೋಡಿ ಬೆರಗಾಗಿ ಗಗನದಿಂದ ಕೆಳಗಿಳಿದು ಹೀಗೇಕೆ ವರ್ತಿಸಿದೆ ಎಂದು ಶ್ವಪಚಯ್ಯನನ್ನು ಕೇಳಲು ಅವನು ಅದಕ್ಕೆ, ಸಾಮವೇದಿಯು ಒಬ್ಬ ಭವಿ ಎಂದು ಭಾವಿಸಿ ಉತ್ತರವನ್ನು ಕೊಡದಿರಲು ಸಾಮವೇದಿಯು ತನ್ನ ಗ್ರಾಮಕ್ಕೆ ಹೊರಟು ಹೋದನು. ಆದರೆ ಪರಮಾತ್ಮನು ಸಾಮವೇದಿಯ ಕನಸಿನಲ್ಲಿ ಬಂದು ಶ್ವಪಚನೆಂದರೆ ಸಾಮಾನ್ಯನಲ್ಲ, ಅವನು ನಾನೆಂದೇ ಭಾವಿಸಿ ಅವನನ್ನು ಪುನಃ ಕಾಣು ಎಂದು ತಿಳಿಸಿ, ಹಾಗೆಯೇ ಅವನು ಶ್ವಪಚನ ಕನಸಿನಲ್ಲಿ ಬಂದು ಸಾಮವೇದಿಗೆ ಉಪದೇಶವನ್ನು ಮಾಡಿ ಅವನ ಭವಿತನವನ್ನು ಕಳೆ ಎಂದು ಹೇಳಿದನು. ಆಗ ಸಾಮವೇದಿಯು ಮರುದಿನ ಶ್ವಪಚಯ್ಯನನ್ನು ಕಂಡು ಅವನಿಂದ ಬೋಧೆಯನ್ನು ಹೊಂದಿ ಶಿವದೀಕ್ಷೆಯನ್ನು ಪಡೆದನು. ಆಗ ಛತ್ತೀಸಪುರದಲ್ಲಿದ್ದ ಸಾಮವೇದಿಯೂ ಅವನ ಶಿಷ್ಯರೂ ದೀಕ್ಷೆಯನ್ನು ಹೊಂದಿದರು. ಈ ಯಾವತ್ತು ವಿಷಯಗಳನ್ನು ಹರಿಹರನು ತನ್ನ ರಗಳೆಯಲ್ಲಿ ಬಹು ಸುಂದರವಾಗಿ ವರ್ಣಿಸಿದ್ದಾನೆ. (ಹರಿಹರನ ರಗಳೆಗಳು ಭಾಗ ೫ ನೋಡಿರಿ.)

ಭೋಗಣ್ಣನೆಂಬ ಇನ್ನೊಬ್ಬ ಶಿವಶರಣನು ಕಲಬುರ್ಗಿ ಜಿಲ್ಲೆಯಲ್ಲಿರುವ ಕೆಂಭಾವಿಯಲ್ಲಿದ್ದನು. ಇವನು ಬ್ರಾಹ್ಮಣ ಕುಲದವನು. ಒಂದು ದಿನ ಒಬ್ಬ ಅಸ್ಪೃಶ್ಯನು ಹೆಗಲ ಮೇಲೆ ಮಿಣಿ, ಕೈಯ್ಯಲ್ಲಿ ಸಂಬಳಿಗೋಲು ಹಿಡಿದುಕೊಂಡು ಅವನ ಗೃಹವನ್ನು ಪ್ರವೇಶಿಸಲು, ಅವನು ಕೇವಲ ಶಿವಭಕ್ತನೆಂಬುದನ್ನು ಭೋಗಯ್ಯನು ತಿಳಿದು ಅವನನ್ನು ಉಪಚರಿಸಿದನು. ಆಗ ಆ ಗ್ರಾಮದ ವಿಪ್ರರು ಅವನ ವಿಷಯವಾಗಿ ತಮ್ಮ

ರಾಜನಲ್ಲಿ ದೂರು ಹೇಳಲು, ರಾಜನು ಗ್ರಾಮವನ್ನು ಬಿಟ್ಟು ಹೊರ ಹೊರಡಲು ಭೋಗಯ್ಯನಿಗೆ ಆಜ್ಞಾಪಿಸಿದನು. ಆಗ ಅವನು ಪುರ ವನ್ನು ಬಿಟ್ಟು ಹೋಗಲು ಅಲ್ಲಿಯ ದೇವಾಲಯಗಳಲ್ಲಿದ್ದ ಎಲ್ಲ ಲಿಂಗ ಗಳು ಅವನ ಬೆನ್ನುಹತ್ತಿ ಹೋದವು. ಮರುದಿನ ಬ್ರಾಹ್ಮಣರು ಪೂಜೆ ಗೋಸ್ಕರ ದೇವಾಲಯಗಳನ್ನು ಪ್ರವೇಶಿಸಲು ಅಲ್ಲಿ ಬರೇ ಪೀಠಗಳಿದ್ದ ದ್ದನ್ನು ಕಂಡು ಬೆರಗಾಗಿ, ಇದು ಭೋಗಯ್ಯನ ಮಹಿಮೆ ಎಂದು ತಿಳಿದು ಅವನನ್ನು ಮನ್ನಿಸಿ ಪಟ್ಟಣಕ್ಕೆ ಬರಮಾಡಿಕೊಂಡು ಅವನನ್ನು ಹೆಚ್ಚಾಗಿ ಮನ್ನಿಸುವವರಾದರು.

ಮೇಲೆ ಹೇಳಿದ ಮೂವರೂ ಅಸ್ಪೃಶ್ಯ ಶಿವಶರಣರು ಬಸವೇಶ್ವರನ ಕಿಂತಲೂ ಹಿಂದಿನವರು. ಆದರೆ ಬಸವೇಶ್ವರನ ಕಾಲಕ್ಕೂ ಅನೇಕ ಅಸ್ಪೃಶ್ಯ ಮಹಿಮರೂ ಉದ್ಭವಿಸಿ ಅವನಿಂದ ಮನ್ನಣೆಯನ್ನು ಹೊಂದಿ ದ್ದಾರೆ. ಅವರಲ್ಲಿ ಕಕ್ಕಯ್ಯ, ಶಿವನಾಗಮಯ್ಯ ಮತ್ತು ಹರಳಯ್ಯ ಇವರು ಮುಖ್ಯರಾಗಿದ್ದಾರೆ. ಕಕ್ಕಯ್ಯನು ಢೋರರವನು. ಅವನು ಶಿವಾನು ಭವ ಮಂಟಪದಲ್ಲಿ ಸೇರ್ಪಡೆಯಾಗಿ ಅಲ್ಲಿಯ ಶಿವಶರಣರಲ್ಲಿ ಅತ್ಯಂತ ಪ್ರಸಿದ್ಧನಾದನು. ಅವರೆಲ್ಲರು ಅವನ ಪ್ರಸಾದವನ್ನು ಸ್ವೀಕರಿಸುವವರಾ ಗಿದ್ದರು. ಆ ಕಾಲದಲ್ಲಿ ಎಲ್ಲರೂ ಶುಚಿರ್ಭೂತರಾಗಿ ಶಿವಶರಣರ ಮತ ದಂತೆ ಆಚರಿಸುವವರಾದ್ದರಿಂದ ಸ್ಪೃಶ್ಯಾಸ್ಪೃಶ್ಯ ಭೇದಗಳು ಅಥವಾ ಜಾತಿ ವಿಷಯಕ ವಿಚಾರಗಳು ಶಿವಾನುಭವ ಮಂಟಪದಲ್ಲಿ ತಲೆದೋರಲಿಲ್ಲ.

ಶಿವನಾಗಮಯ್ಯನೆಂಬ ಇನ್ನೊಬ್ಬ ಅಸ್ಪೃಶ್ಯ ಶಿವಶರಣನು ಬಸ ವೇಶ್ವರನಲ್ಲಿ ಇರುತ್ತಿರಲು, ಅವನ ಮಹತ್ವವನ್ನು ತೋರಿಸುವ ಅಪೇಕ್ಷೆ ಯಿಂದ ಬಸವೇಶ್ವರನು ಅವನ ಕಯ್ಯನ್ನು ಹಿಡಿದು ಮೆಲ್ಲನೆ ಒತ್ತು ತ್ತಿ ರಲು ಅದರೊಳಗಿಂದ ಹಾಲು ಸುರಿಯಹತ್ತಿತು.

ಈ ಯಾವತ್ತೂ ಕಥೆಗಳ ಮುಖ್ಯ ಭಾವವು ಆಚಾರವಂತರಾದ ಅಸ್ಪೃಶ್ಯ ಶಿವಭಕ್ತರು ಉಳಿದ ಯಾವ ಭಕ್ತರಿಗಿಂತಲೂ ಕಡಿಮೆಯವ ರಲ್ಲ, ಅವರಲ್ಲಿ ಯಾವ ತರದ ಭೇದಭಾವವನ್ನು ಕಲ್ಪಿಸಕೂಡದು, ಇಷ್ಟೇ ಅಲ್ಲ, ಅವರೊಡನೆ ಅನ್ನ ಗ್ರಹಣ ಮೊದಲಾದ ಎಲ್ಲ ತರದ ಬಳಿಕೆ ಯನ್ನು ಸಹ ಮಾಡಲು ಸಂಕೋಚಪಿರಕೂಡದು ಎಂಬುದು ವ್ಯಕ್ತ ವಾಗುತ್ತದೆ.

ಈಗಿನ ಪುಸ್ತಕದಲ್ಲಿ ಹರಳಯ್ಯ ಮಧುವರಸರ ಕಥೆಯು ನಿರೂಪಿಸಲ್ಪಟ್ಟಿರುತ್ತದೆ. ಈ ಉಭಯತರಲ್ಲಿ ಮಧುವರಸನು ಜಾತಿಯಿಂದ ಬ್ರಾಹ್ಮಣನಿದ್ದು ಬಿಜ್ಜಳನ ಕಾಲದಲ್ಲಿ ಒಂದು ಶ್ರೇಷ್ಠತರದ ಅಧಿಕಾರ ಸ್ಥಾನವನ್ನು ಪಡೆದಿದ್ದನು. ಹರಳಯ್ಯನು ಮಚ್ಚೆಗಳನ್ನು ಮಾಡುವ ಕಾಯಕವನ್ನು ಮಾಡುತ್ತಿದ್ದು ಬಸವೇಶ್ವರನು ಅವನ ಭಕ್ತಿಗೆ ಮೆಚ್ಚಿದವನಾಗಿದ್ದನು. ಒಂದು ದಿನ ಬಸವೇಶ್ವರನು ರಾಜಮಾರ್ಗದಿಂದ ಹೋಗುತ್ತಿರಲು ಅವನು ತನ್ನ ಇದಿರಿಗೆ ಹರಳಯ್ಯನನ್ನು ಕಂಡು ಅವನಿಗೆ "ಶರಣು" ಎಂದು ನಮಸ್ಕಾರ ಮಾಡಿ ಮುಂದೆಸಾಗಿದನು. ಹರಳಯ್ಯನು ರಾಜನ ಮಂತ್ರಿಯಿಂದ ಹೀಗೆ ಶರಣೆಂದು ಹೇಳಿಸಿಕೊಂಡದ್ದು ತನ್ನ ಮಹತ್ಪಾಪವೆಂದು ಭಾವಿಸಿ ಇದನ್ನು ದೂರ ಮಾಡುವದಕ್ಕೋಸ್ಕರ ಬಹು ಶ್ರಮಪಟ್ಟು ಅವನಿಗೊಂದು ಮಚ್ಚೆಯ ಜೋಡನ್ನು ಸಿದ್ಧಪಡಿಸಿ ಶಿವಾನುಭವ ಮಂಟಪಕ್ಕೆ ಹೋಗಿ ಬಸವೇಶ್ವರನಿಗೆ ಒಪ್ಪಿಸಿದನು. ಆಗ ಬಸವೇಶ್ವರನು ಒಬ್ಬ ಶಿವಾನುಭವಿಯ ಕೈಯಿಂದಾದ ಜೋಡನ್ನು ಹೀಗೆ ತಾನು ಮೆಟ್ಟುವದು ಉಚಿತವಾದುದಲ್ಲವೆಂದು ತಿಳಿದು ಅವುಗಳನ್ನು ತೆಗೆದುಕೊಳ್ಳಲು ಒಪ್ಪಲಿಲ್ಲ. ಮುಂದೆ ಹರಳಯ್ಯನು ಅಲ್ಲಿಂದ ತೆರಳಿ ರಾಜಮಾರ್ಗದಿಂದ ಬರುತ್ತಿರಲು ದಾರಿಯಲ್ಲಿ ಮಧುವರಸನು ಅವನನ್ನು ಕಂಡು ಅವನ ಕೈಯ್ಯಲ್ಲಿದ್ದ ಆ ಸುಂದರವಾದ ಜೋಡನ್ನು ಬಲಾತ್ಕಾರದಿಂದ ಕಸೆದುಕೊಂಡು ಹೋದನು. ಹೀಗೆ ಒಬ್ಬ ಶಿವಶರಣನ ಮನಸ್ಸಿಗೆ ಒಪ್ಪಿಗೆ ಇರದಂಥ ಕಾರ್ಯವನ್ನು ಮಧುವರಸನು ಮಾಡಲಾಗಿ ಅವನಿಗೆ ಕುಷ್ಠರೋಗವು ಉಂಟಾಗಿ ಅದರಿಂದ ಅವನು ಬಹಳ ತಾಪವನ್ನು ಹೊಂದಹತ್ತಿದನು. ಒಂದು ದಿನ ಅವನ ಸ್ನಾನದ ನೀರು ಬಹಳ ಕುದಿಯುತ್ತಿರಲು ಅದರಲ್ಲಿ ಸುರಿಯುವದಕ್ಕೋಸ್ಕರ ಬಾವಿಯಿಂದ ನೀರನ್ನು ಬೇಗನೆ ತರಲು ದಾಸಿಯೊಬ್ಬಳನ್ನು ಮನೆಯವರು ಕಳುಹಿಸಲು ಅವಳು ದಾರಿಯಲ್ಲಿ ಬಿರುಗಾಳಿ ಬಿಟ್ಟು ಮಳೆ ಚಿನ್ಹ ತೋರಿದ್ದರಿಂದ ದೂರದಲ್ಲಿದ್ದ ಬಾವಿಗೆ ಹೋಗದೆ ನೆರೆಯಲ್ಲಿದ್ದ ಹರಳಯ್ಯನ ಬಚ್ಚಲ ಗುಂಡಿಯಲ್ಲಿ ನಿಂತಿದ್ದ ನೀರನ್ನೇ ತಂದು ಆ ಬಿಸಿನೀರಲ್ಲಿ ಹಾಕಿಬಿಟ್ಟಳು. ಆ ನೀರಿನಿಂದ ಮಧುವರಸನು ಸ್ನಾನ ಮಾಡಲು ಅವನ ಮೈಯ್ಯಲ್ಲಿದ್ದ ಬೇಗೆ ಎಲ್ಲವು ಕೊರಟು ಹೋಗಿ ಅವನ ಕುಷ್ಠರೋಗವು ವಾಸಿಯಾಯಿತು. ಹೀಗೇಕಾಯಿತೆಂಬುದು ಮಧುವರಸನಿಗೆ ತಿಳಿಯಲಾಗಿ ಹರಳಯ್ಯನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ಅವನು ವಹಿಸಿದವನಾಗಿ ವೀರ

ಶೈವ ದೀಕ್ಷೆಯನ್ನು ಹೊಂದಿದನು. ಇಷ್ಟೇ ಅಲ್ಲ, ಅವನ ಮಗನಿಗೆ ತನ್ನ ಮಗಳನ್ನು ಸಹ ಕೊಟ್ಟು ಲಗ್ನ ಮಾಡಿದನು. ಹೀಗೆ ಮಧುವರಸನು ಲಗ್ನ ಮಾಡಿದ್ದಕ್ಕೋಸ್ಕರ ಕಲ್ಯಾಣ ಪಟ್ಟಣದಲ್ಲಿಯ ದ್ವಿಜರು ಬಿಜ್ಜಳರಾಯನಲ್ಲಿಗೆ ಹೋಗಿ ದೂರಲಾಗಿ, ಬಿಜ್ಜಳನು ಬಸವೇಶ್ವರನನ್ನು ಕರಿಸಿ ಹೀಗೆ ಶಿವಶರಣರು ನಡೆಯಬಹುದೇ ಎಂದು ಕೇಳಲಾಗಿ ಬಸವೇಶ್ವರನು ಶಿವಶರಣರಲ್ಲಿ ಕುಲಸೂತಕವನ್ನು ಎಣಿಸಕೂಡದೆಂದು ನುಡಿದನು. ಆದರೆ ಬಿಜ್ಜಳನು ಇದನ್ನು ಮನ್ನಿಸದೆ, ಹರಳಯ್ಯ - ಮಧುವರಸರನ್ನು ಕರಿಸಿ ಅವರಿಬ್ಬರನ್ನು ಶೂಲದ ಮೇಲೆ ಕುಳ್ಳಿರಿಸಿ ವಧಿಸಿದನು.

ಬಿಜ್ಜಳನ ಈ ವರ್ತನೆಯನ್ನು ಕಂಡು ಕಲ್ಯಾಣದಲ್ಲಿದ್ದ ಶಿವಶರಣರೆಲ್ಲರೂ ಸಂತಾಪಿಸಿದರು. ಬಸವೇಶ್ವರನು ಇನ್ನು ಮುಂದೆ ಕಲ್ಯಾಣದಲ್ಲಿ ಇರಲಾಗದೆಂದು ಅಲ್ಲಿಂದ ಅವನು ತನ್ನ ಹೆಂಡತಿ ನೀಲಾಂಬಿಕೆಯೊಡನೆ ಕೂಡಿಕೊಂಡು ಕಪ್ಪಡಿ ಸಂಗಮೇಶ್ವರನಲ್ಲಿಗೆ ಬಂದನು. ಮತ್ತು ಆ ಸ್ಥಳದಲ್ಲಿಯೇ ಅವನು ಐಕ್ಯ ಹೊಂದಿದನು.

ಮಧುವರಸ ಹರಳಯ್ಯನವರ ಈ ಕಥೆಯು ತ್ರಿಪದಿಯಲ್ಲಿ ರಚಿಸಲ್ಪಟ್ಟಿದ್ದು ಅದನ್ನು ನಾವು ಇಲ್ಲಿ ಪ್ರಸಿದ್ಧಿಸಿದ್ದೇವೆ. ಅದು ಬಹು ಸುಲಭ ಭಾಷೆಯಲ್ಲಿ ರಚಿಸಲ್ಪಟ್ಟಿರುತ್ತದೆ. ಇದರ ಮೂಲ ಗ್ರಂಥವನ್ನು ಇಂಡೀ ತಾಲೂಕು ಉಮ್ಮರ್ಜಿ ಗ್ರಾಮದಲ್ಲಿರುವ ಶ್ರೀ. ದುಂಡನಗೌಡ ರಾಮನಗೌಡ ಪಾಟೀಲ ಶಾಳಾ ಮಾಸ್ತರ ಇವರು ನಮಗೆ ತಂದು ಕೊಟ್ಟರು. ಇದಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ. ಈಚೆಗೆ ಹರಳಯ್ಯನವರ ಕವಿತಾ ಬದ್ಧ ಚರಿತ್ರೆಯನ್ನು ಬಹಳ ಜನರು ಬೇಡಹತ್ತಿದ್ದಾರೆ. ಆದ್ದರಿಂದ ಇದನ್ನು ಈಗ ಸ್ವತಂತ್ರ ಗ್ರಂಥವಾಗಿ ಮುದ್ರಿಸಿದ್ದೇವೆ. ನಮ್ಮ ಹತ್ತಿರದಲ್ಲಿ ಹರಳಯ್ಯನ ಇನ್ನೊಂದು ಹಸ್ತಲಿಖಿತ ವಿಸ್ತಾರವಾದ ಗ್ರಂಥವೊಂದಿದೆ. ಅದನ್ನು ಮುಂದೆ ನಾವು ಸಮಯಾನುಸಾರ ಸ್ವತಂತ್ರವಾಗಿ ಮುದ್ರಿಸುವೆವು. ಆದರೆ ಎಲ್ಲ ವಿಷಯಗಳನ್ನು ಸ್ವಲ್ಪದರಲ್ಲಿ ಕ್ರೋಡೀಕರಿಸಿ ಈಗಿನ ಈ ಗ್ರಂಥವು ಬರೆಯಲ್ಪಟ್ಟಿದ್ದರಿಂದ ಇದು ಓದುಗರಿಗೆ ಹೆಚ್ಚಿಗೆ ಉಪಯೋಗವಾಗಬಹುದೆಂದು ಎಣಿಸಿ ಇದನ್ನು ಈಗ ಪ್ರಸಿದ್ಧಿಸಿದ್ದೇವೆ. ಮೂಲ ಪ್ರತಿಯು ಅನೇಕ ಹಸ್ತ ದೋಷಗಳುಳ್ಳದ್ದಾಗಿದೆ. ಬೇರೆ ಪ್ರತಿಗಳು ನಮಗೆ ದೊರೆಯದ್ದರಿಂದ ಅವುಗಳನ್ನೆಲ್ಲ ತಿದ್ದಲಿಕ್ಕೆ ನಮಗೆ ಸಾಧ್ಯ

ವಾಗಿರುವದಿಲ್ಲ. ಈ ಕಾವ್ಯವು ಸಾಮಾನ್ಯ ಜನರಿಗೆ ಸಹ ತಿಳಿಯ ಬೇಕೆಂದು ಕವಿಯ ಉದ್ದೇಶವಿರುವದರಿಂದ ಪದಗಳನ್ನು ಅವನು ಜನ ರಾಡುವ ಭಾಷೆಯಲ್ಲಿಯೇ ರಚಿಸಲು ಪ್ರಯತ್ನಿಸಿದ್ದಾನೆ. ಛಂದ ಶ್ಯಾಸ್ತ್ರದ ನಿಯಮಗಳನ್ನು ಅವನು ಅನುಸರಿಸಿರುವದಿಲ್ಲ. ಆದರೂ ಅನ್ನುವವರು ಪದಗಳನ್ನು ಸರಿಯಾಗಿ ಹೊಂದಿಸಿಕೊಂಡು ಅವನ್ನು ಚನ್ನಾಗಿ ಅನ್ನಬಹುದಾಗಿದೆ.

**ವಿಜಾಪುರ.**
ತಾ. ೧೫-೮-೪೧

**ಫ. ಗು. ಹಳಕಟ್ಟಿ**
ಸಂಪಾದಕ.

ಜಂಗಮದ ಪಾದದ-ಉಂಗುಷ್ಠ ತೀರ್ಥವ ।
ಲಿಂಗಜಂಗಮಕೆ ಎಡೆಯಾಗಿ ಕಳೆದುಂಬಿ ।
ಮಂಗಳಾರತಿಯ ಬೆಳಗಿದರು ॥೬೪॥

ಚಂದ್ರಕಾಂತದ ಲಿಂಗ-ತಂದಭಿಷೇಕವ ಮಾಡಿ ।
ಗಂಧಪುಷ್ಪಗಳೆಡೆಯಾಗಿ ಅಕ್ಷತೆಯು ।
ಇಂದುಧರನಿಗೆ ಎಡೆಯಾಗಿ ॥೬೫॥

ಮಿಂದು ಮಡಿಯನುಟ್ಟು-ಹೊಂದಿ ಭಸಿತವಿಟ್ಟು ।
ಬಂದು ಶ್ರೀಗುರುವಿಗೆರಗಿದ ಮಧುವಯ್ಯ ।
ಮುಂದೆ ಕುಳ್ಳಿರ್ದ ಶುಭದಿಂದ ॥೬೬॥

ಧೃಢಭಕ್ತನ ಮನೆಯ ಮಡದಿ ಮಕ್ಕಳು ಸಹ ।
ಒಡೆಯಗೆ ಶರಣೆಂದು ಕುಳಿತು ಗುರುವಿನ ।
ಅಡಿಗೆ ವಂದಿಸಿ ಕರ ಮುಗಿದು ॥೬೭॥

ಗುರುರಾಯ ತನ್ನಯ-ಪರಮ ಸಂತೋಷದಿ ।
ಉರದಲ್ಲಿ ಲಿಂಗವ ಧರಿಸಿದ ಶರಣರ ।
ಹರುಷವೆ ಮೀರೆ ಮಿಗಿಲಾಗಿ ॥೬೮॥

ಲಿಂಗವ ಧರಿಸಿದ-ಮಂಗಳಾತ್ಮಕ ಗುರು ।
ಅಂಗದ ಪಾಪಕ್ಷಯವೆಂದು ಪ್ರಭುರಾಯ ।
ಸಂಗಮೇಶ್ವರನಮಿಗೆ ಕೊಟ್ಟು ॥೬೯॥

ಕರ್ಣ ಮಂತ್ರವ ತುಂಬಿ-ಜೀರ್ಣಿಸಿ ಪೂರ್ವವ ।
ನಿರ್ಣಯ ಕರವ ಶಿರದಲ್ಲಿ ಇಟ್ಟಾಗ ।
ಪರ್ಣದುದಕವ ತಳಿದನು ॥೭೦॥

ನಿತ್ಯನಾಗಯ್ಯ ಮಗನೆ-ಭಕ್ತವತ್ಸಲನಾಗು ।
ಅತ್ಯಂತ ಭಾಗ್ಯ ನಿನಗೆಂದು ನೊಸಲಿಗೆ ।
ಕರ್ತ ಭಸಿತವನಿಟ್ಟು ಹರಿಸಿ ॥೭೧॥

ಗುರುವೆ ದೀಕ್ಷಾ ಗುರುವೆ-ಗುರುವೆ ಮೋಕ್ಷ ಗುರುವೆ ।
ಗುರುವೆ ಎನ್ನಯ ಸುರತರುವೆ ಮಧುವಯ್ಯ ।
ಹರುಷದಿ ಸಾಷ್ಟಾಂಗವೆರಗಿದ ॥೭೨॥

ಗಿಡಿಬಿಡಿ ತಮ್ಮಟ-ಹಾಡುವ ನಿಸ್ಸಾಳ ಭೇರಿ ।
ಪೊಡವಿಯಲ್ಲದುರೆ ನಡುಗುತ ಮಧುವಯ್ಯ ।
ಪೊಡೆವಟ್ಟ ತನ್ನ ಗುರುವಿಗೆ ॥೭೩॥

ಹೆಚ್ಚಾಗೆ ಮಗ ನಿನ-ಗಚ್ಚ ಪದವಾಗಲಿ ।
ಕಿಚ್ಚುಗಣ್ಣನ ಕರುಣದಲಿ ಬಾಳೆಂದು ।
ಜೆಚ್ಚಂತೆ ಹರಸಿ ಕಳುಹಿದ ॥೭೪॥

ಹತ್ತೆರಡು ಸಾವಿರ-ಸತ್ತಿಗೆ ನೆರೆದವು ।
ಮುತ್ತಿನಾರತಿ ತೆರೆಹಾಯಿಸಿ ರಶ್ಮಿಯು ।
ಒತ್ತಿನ ಸಿರಿಯು ಪೊಗಳುವರೆ ॥೭೫॥

ಚಿನ್ನದ ಅಣಸಿನ-ರನ್ನ ರತ್ನಗಳಿಟ್ಟು ।
ಚಿನ್ನ ಮುತ್ತಿನ ಸರವಿಟ್ಟ ದಂಡಿಗೆ ।
ಹನ್ನೆರಡು ಸಾವಿರ ನೆರೆದವು ॥೭೬॥

ಪಟ್ಟೊಳಿ ಸೀರಿಲಿ-ಕಟ್ಟಿ ಗುಡಿ ತೋರಣ ।
ಕಟ್ಟಳೆಯಿಲ್ಲ ಕಡೆಯಿಲ್ಲ ಕಲ್ಯಾಣ ।
ಪಟ್ಟಣವೆಲ್ಲ ಬೆರಗಾಗೆ ॥೭೭॥

ಹೊನ್ನ ಕಳಸವಿಟ್ಟು-ಚಿನ್ನದ ಹರಿವಾಣದಲಿ ।
ಕನ್ನೆ ವೆಣ್ಣುಗಳು ನೆರೆದೆಲ್ಲ ಹೊತ್ತರು ।
ಹನ್ನೆರಡು ನೂರು ಕಳಸವ ॥೭೮॥

ಹೆಂಡಿರು ಮಕ್ಕಳು-ಹಿಂಡು ಹರಿವಾಣದಲಿ ।
ಮಂಡಲ ಪತಿಯು ಭಸಿತವನು ಇಟ್ಟು ನಡೆ ।
ಗೊಂಡನು ಹರಳಯ್ಯನ ಮಠಕಾಗಿ ॥೭೯॥

ಉತ್ತಮಾಂಗದ ಮೇಲೆ-ಹೊತ್ತು ಚಮ್ಮಾವುಗೆಯ ।
ಸತ್ಯ ಹರಳಯ್ಯಗೆ ಶರಣೆಂದು ನಡೆದರು ।
ಈ ತೆರನ ಸಭೆ ಅರಿವಂತೆ ॥೮೦॥

ತರಳನಾತಗೆಮರುಳು-ಗೊಂಡನವನುಯೆಂದು ।
ದುರುಳ ವಿಪ್ರರು ನುಡಿದರು ಮಧುವಯ್ಯ ।
ಕರುಳನೆ ತೆಗೆವೆನೆನುತಿರ್ದ ॥೮೧॥

ಅಂತೆನಬಾರದು-ಇಂತೆನಬಾರದು ।
ಎಂತೆನಬಾರದೆನುತಲಿ ವಿಪ್ರರು ।
ಕೊಂತಗೊಂಡಂತೆ ನಡೆದರು ॥೮೧॥

ಆರೈದೆಲ್ಲಿಯು ರಭಸ-ಘೋರ್ಗರೆವ ಕಹಳೆ ।
ಭೂರಿ ಶಿತ್ತಿರಿ ಮೊರೆದವು ಎತ್ತಣವೆಂದು ।
ಮಾರಾರಿ ಶರಣ ಬೆಸಗೊಂಡ ॥೮೨॥

ಮಧುವರಸಯ್ಯನು-ಮುದದಿ ಲಿಂಗವ ಕಟ್ಟಿ ।
ಸದಮಲದಿಂದೆ ಒರುತಿಹನು ನಿಮ್ಮಯ್ಯ ಪಾದಕೆ ।
ವಂದಿಸಲೆನುತಲಿ ॥೮೩॥

ಆಡಿ ತಪ್ಪುವನಲ್ಲ-ರೂಢಿಯೊಳು ಸಂಗಯ್ಯ ।
ಹೂಡಿದನೊಂದು ಕಥನವ ಕಲ್ಯಾಣಕೆ ।
ಕೇಡಿನ ಬೀಜ ಬರುತಿದೆ ॥೮೪॥

ಭವದೂರ ಹರಳಯ್ಯ-ಭವಕೆ ಚಿಂತಾಮಣಿಯು ।
ಭವ ಭಾರಿಗಳಿಗೆ ಅರಿ ನೀನು ಹರಳೈ ತಂದೆ ।
ಸೆವದಿಂದ ನಿಮಗೆ ನಮಿಸುವೆನು ೮೫

ಅಪರಾಧಿ ನಾನಯ್ಯ-ಅಪರಂಪರನು ನೀನು ।
ತ್ರಿಪುರ ಸಂಹರನ ಕರುಣದಲಿ ಹರಳೈ ತಂದೆ ।
ಕೃಪೆ ಮಾಡು ಮಗನಿಗೆ ದಯದಿ ॥೮೬॥

ಬಂದ ಕಾರಣವೇನು-ಇಂದು ನೀವು ಇಲ್ಲಿಗೆ ।
ಕುಂದು ಕುಲದವರ ಮನೆಗಾಗಿ ವಿಪ್ರರು।
ಹೊಂದರು ಇಲ್ಲಿ ಹೊಲೆಯೆಂದು ॥೮೭॥

ತಪ್ಪ ತಲೆಯಲಿ ಹೊತ್ತು-ಭೊಪ್ಪಸನಾ ಬಂದೆ ।
ತಪ್ಪ ಬೆಣ್ಣೆಗೆ ಅಭಿಸಂದುವಾದಂತೆ ।
ಹೆತ್ತವರ ಹಂಗ ಮೊರೆದೆನು ॥೮೮॥

ಏಳೇಳು ಮಧುವಯ್ಯ-ಭಾಳಲೋಚನ ನಿಮ್ಮ ।
ಕೊಳುಗೊಂಡನೆ ಉರದಲ್ಲಿ ಶಿವಭಕ್ತರ ।
ಆಳು ನಾನಯ್ಯ ಶರಣಾರ್ಥಿ ॥೯೦॥

ಎಂದ ಹರಳೈಯ್ಯಗೆ-ನಿಂದು ಮಧುವರಸಯ್ಯ ।
ಇಂದು ನಾ ನಿಮ್ಮ ಶರಣರ ಶಿಸುವೆಂದು ॥
ಮುಂದೆ ಮೆಯ್ಯಿಕ್ಕಿ ನಮಿಸಿದ ॥೯೧॥

ಸೃಷ್ಟಿಗೆ ಸಂಗಯ್ಯ-ಕಟ್ಟಾಳು ಹರಳಯ್ಯ ।
ಮುಟ್ಟಿ ನಾ ನಿಮ್ಮ ಚರಣಕ್ಕೆ ಮಧುವರಸ ।
ಸಾಷ್ಟಾಂಗವೆರಗಿ ನಮಿಸುವೆ ॥೯೨॥

ತಂದೆನು ಮಗಳನು-ಇಂದು ನಿಮ್ಮಲ್ಲಿಗೆ ।
ಸಂದುದು ಎಂದು ಭಸಿತವನಿಟ್ಟರೆ ।
ಇಂದು ನಿಮ್ಮಡಿಗೆ ಎರಗುವೆ ॥೯೩॥

ಅಸಮಯದ ನಡೆಯಿದು-ಹೊಸ ಪರಿಯು ಲೋಕಕೆ ।
ವಿಸಮಯ ಬಹುದು ನಮಗೆಲ್ಲ ಬಿಜ್ಜಳ ।
ಮಸಗೆ ಕಲ್ಯಾಣ ಕೆಡುವುದು ॥೯೪॥

ಭದ್ರಾವತಾರದ-ರುದ್ರಮೂರ್ತಿ ನೀನು ।
ಚಿದ್ರೂಪ ಶಿವನ ಶರಣನೆ ಹರಳೈ ತಂದೆ ॥
ಇದ್ದಹರು ನಿಮಗೆ ಸರಿಯಹರೆ ॥೯೫॥

ಬೇಡ ಮಧುವರಸಯ್ಯ-ಕಾಡಾದಿರೆಮ್ಮನು ।
ನಾಡು ಬಿಜ್ಜಳನದು ಜಗವೆಲ್ಲ ಮೆಚ್ಚರು ।
ಮಾಡುವ ಕೆಲಸ ನಿನಗಲ್ಲ ॥೯೬॥

ನೇಮಿಸಿ ತಂದೆನು-ನೇಮದಿಂದಲಿ ಮಗಳ ।
ಸ್ವಾಮಿ ಕಪ್ಪಡಿಯ ಪುರದಯ್ಯನಾಣೆಂದು ।
ನೀ ಒಂದು ಮಾತ ನುಡಿದರೆ ॥೯೭॥

ನೆಟ್ಟನೆ ಶಿವಯೆನುತ-ಕಟ್ಟಿದರು ಕಂಕಣವ ।
ಇಟ್ಟರು ಭಸಿತ ನೊಸಲಿಗೆ ಶರಣ ನೀ ।
ಮೆಟ್ಟೆಂದು ಜೋಡು ಚರಣವ ॥೯೮॥

ಹಿಂದಿನ ಪಾಪವು-ಹೊಂದಿದ ಫಲದಿಂದೆ ।
ಅಂದವಳಿಯಿತು ಭಯಗೊಂಡು ತಪ್ಪನು ।
ನಿಮ್ಮಿಂದ ಉದಕದಲಿ ಕಳೆದೆನು. ॥೯೯॥

ಮನ್ನಿಸಿ ತಂದೆನು-ನಿಮ್ಮಪಾದಕೆ ಮಗಳ ।
ಚನ್ನ ಕಪ್ಪಡಿಯ ಪುರದಯ್ಯನಾಣೆಂದು ।
ಇನ್ನೊಂದು ಮಾತ ನುಡಿದರೆ ॥೧೦೦॥

ಸಾಸಿರ ಗಣಂಗಳ-ಲೇಸಿನ ಮಗ ನಾನು ।
ದೇಶದೊಳೊಂದು ಹೊಸ ಪರಿಯಾಗಲಿ ಎಂದು ।
ಬಸವಣ್ಣನಾಣೆಂದು ನುಡಿದರೆ ॥೧೦೧॥

ಇನ್ನೇನು ಶಿವಾ ಎನುತ-ಸನ್ನೆಯ ಮದುವೆ ಇದು ।
ಪನ್ನಗಧರನ ಕಡೆಯಾಟ ಆಗಲಿಯೆಂದು ।
ಚನ್ನಾಗಲೆಂದು ಅರುಹಿದ ॥೧೦೨॥

ಒಂದಡಿಕೆ ಒಂದೆಲೆ-ತಂದು ಹರಿವಾಣದಲಿ ।
ತಂದು ಕನ್ನಿಕೆ ಕರದಲಿ ಇಟ್ಟರು ।
ಇಂದು ಈ ಹೆಣ್ಣು ನಿಮಗೆಂದು ॥೧೦೩॥

ಉಚ್ಚಹ ಕೇಳುತ-ಹೆಚ್ಚಿದ ಮಧುವಯ್ಯ ।
ಅಚ್ಚ ಮಹೇಶರಡಿಗಳಿಗೆ ಮಧುವರಸ ।
ಬೆಚ್ಚಂತೆ ಪಾದಕೆರಗಿದ ॥೧೦೪॥

ನಂದಿ ಕಲ್ಯಾಣಕೆ-ಬಂದ ಪ್ರಮಥರಿಗೆಲ್ಲ ।
ತಂದು ವೀಳೆಯ ನಡಿಸಿದರು ಮಧುವಯ್ಯ ।
ಬಂದುದು ನಮಗೆ ಕಡೆಯಾಟ ॥೧೦೫॥

ಸೇಸೆಯನಿಕ್ಕಿದರು-ಏನೊಂದು ನಾಮವ
ಏನೊಂದು ಪರಿಯ ನೆನೆವುತಲಿ ಮದಮಕ್ಕಳಿಗೆ ।
ಪ್ರಸಾಪವಿತ್ತರು ಕೈಗೂಡಿ ॥೧೦೬॥

ಶರಣಯ್ಯ ಶರಣಾರ್ಥಿ-ಶರಣು ಜಂಗಮಲಿಂಗ
ಶರಣು ನಿಮ್ಮಡಿಗೆ ಶರಣಾರ್ಥಿ ಎಂದೆನುತ ।
ಶರಣನ ಕಥೆ ಇದ ಕೇಳಿ ॥೧೦೭॥

ಸದಮಲ ಶರಣರ-ಪಾದವ ನೆನೆದು ನಾ ।
ಮುದದಿಂದೆ ಪದನ ನಡಿಸುವೆ ಇಲ್ಲಿಗೆ ।
ಪದಿದೆರಡು ಸಂಧಿ ಶರಣಾರ್ಥಿ ॥೧೦೮॥

## ೩ ನೆಯ ಸಂಧಿ.

ಸಂಗನ ಶರಣರ-ಅಂಘ್ರಿಯ ನೆನೆದು ।
ನಾ ಹಿಂಗದೆ ಪದನ ನಡಿಸುವೆ ಶರಣರ ।
ಮಂಗಳೋತ್ಸವ ಹೊಗಳುವೆ . ॥೧॥

ಎಲ್ಲೆಲ್ಲಿ ನೋಡಿದೊ-ಡಲ್ಲಿ ಮದುವೆಯ ಸುದ್ದಿ ।
ಅಲ್ಲದವರೆಡೆಗೆ ಮಗಳನು ಕೊಟ್ಟರು ।
ಕಲ್ಯಾಣ ಕೆಡುವುದೆನುತಲಿ ॥೨॥

ಪಟ್ಟಣದೊಳಗೆಲ್ಲ-ಹುಟ್ಟಿತು ಮದುವೆ ಸುದ್ದಿ ।
ಕೆಟ್ಟ ಕುಲದವರ ಮನೆಗಾಗಿ ವಿಪ್ರರು ।
ಕೊಟ್ಟರು ತಮ್ಮ ಮಗಳನು ॥೩॥

ಅಪರಾಧ ನಡೆಯಿತು-ವಿಪರೀತ ಬಂದಿದೆ ।
ತಪಸಿಗಳ ತಂಡ ಇರುವಲ್ಲಿ ಮಧುವರಸ ।
ಶ್ವಪಚರಿಗೆ ಹೆಣ್ಣ ಕೊಡಬಹುದೆ ॥೪॥

ಪಂಚ ಕಲ್ಯಾಣವು-ಮಿಂಚುಳ್ಳಚ್ಚಿನ ಧರ್ಮ ।
ಕೆಂಚ ಹಾರುವರು ಹೊಲೆಗೂಡಿದರೆಂದು ।
ಮಂಚಿ ಬಿಜ್ಜಳಗರುಹಿದನು ॥೫॥

ನೋಡಿರೆಲೆ ಜೀಯ್ಯ-ಕೇಡು ಪಟ್ಟಣದೊಳು ।
ಖೋಡಿ ಹಾರುವರು ಹೊಲೆಗೂಡಿ ಕೊಡುಕೊಳೆಯ ।
ಮಾಡಿದರಿಲ್ಲಿ ಇದ ಕೇಳಿ ॥೬॥

ಕರೆಯಿರೋ ಬಸವನ-ಅರಿಯ ಕೇಳಿದೆವೆಂದು ।
ಪುರಕೆ ಹೊಸತಹ ನುಡಿಗಳ ನಾವಿಲ್ಲಿ
ಇರಬಹುದೆ ನೇಮಿಮುನಿಗಳೇ ॥೭॥

ಅಣ್ಣಗಳ ಬಾಗಿಲ-ಬಣ್ಣದ ಚಾವಡಿ ।
ಹೆಣ್ಣಿನೋಲಗದ ಒಳಯಿಕೆ ಬಿಜ್ಜಳ ।
ಬಸವಣ್ಣನ ಬೇಗ ಕರಸಿದ ॥೮॥

ಶಿಕುಲಜರ ಮನೆಗೆ-ಉತ್ತಮ ಶೈವರು ।
ಹೆತ್ತ ಹೆಣ್ಣುಗಳ ಕೊಡಬಹುದೆ ನಿಮ್ಮಲ್ಲಿ ।
ಮತ್ತೆ ನಾಸಿಕಕೆ ಕರವಿಟ್ಟ ॥೯॥

ಅವರು ಕೊಡಬಹುದು-ಇವರು ಕೊಳಬಹುದು ।
ಶಿವನಿಪ್ಪನಲ್ಲಿ ನೆಲೆಯಾಗಿ ಭೂಪತಿ ।
ಹವಣಗಾಣದಲೆ ನುಡಿವರೆ ॥೧೦॥

ಇಂತು ನಡೆವರಿಗೆ-ಎಂತು ದೀಕ್ಷೆಗಳೆಂತು ।
ಮಂತ್ರಿಯನರಸು ಬೆಸಗೊಂಡ ಕೋಪದಲಿ ।
ಮಂಥಣಿ ಶೂಲಕೆಳಸುವೆ ॥೧೧॥

ನಡೆ ನಿಮ್ಮ ಮಠಕಾಗಿ-ಹಿಡಿತನ್ನಿವರನು ।
ಕಡುಗಲಿ ಚರರು ಹರಿದರು ಹರಳಯ್ಯಗಳ ।
ಹಿಡಿತಂದರು ಪದ ನಡಿಸುವೆ ॥೧೨॥

ನುಡಿಯ ಮೀರಿದನಿವ-ಕಡೆಗಾಲ ಬಿಜ್ಜಳಗೆ ।
ಕಡು ಬೇಗ ಚನ್ನಣ್ಣಗರು ಹೆಂದ ಕಪ್ಪಡಿಯ ।
ಮೃಡನ ಜಿಹ್ವೆಯಲಿಯಡಗುವೆ ॥೧೩॥

ಲೋಲ ಕರ್ಮದ ಗಂಡ-ಲೋಲ ಬಸವಣ್ಣನು ।
ಸಾಲೋಕ್ಯ ಪದಕೆ ನಡೆವುತಲಿ ಅಪ್ಪಣ್ಣ ।
ಕೇಳು ನೀಲಲೋಚನೆಗರುಹೆಂದ ॥೧೪॥

ಅಮ್ಮಾಜಿ ನೀ ಕೇಳು-ನಮ್ಮ ದಣ್ಣಾಯಕರು ।
ಉಮ್ಮಳದಿಂದ ತೆರಳಿದರು ಕಪ್ಪಡಿಗೆ ।
ನಿಮ್ಮ ಬೇಗದಲಿ ಬರಹೇಳಿ ॥೧೫॥

ರಂಗವೋಲೆಯ ನಿಕ್ಕಿ-ಅಂಗನೆ ನೀಲಮ್ಮ ।
ಗಂಗೆವಾಳುಕರ ನೆನೆವುತ ನಡೆಗೊಂಡು ।
ಶೃಂಗಾರ ರಂಗನೆ ಪತಿವ್ರತೆ ॥೧೬॥

ನಡೆಗೊಂಡು ಬೇಗದಿ ತಡವಿಲ್ಲದಾಕ್ಷಣ ।
ಒಡೆಯ ಕಪ್ಪಡಿಯ ಶಿವನೆಡೆಗೆ ತಾ ಬಂದು ।
ನುಡಿದಳೊಂದು ಮುದದಿಂದ ॥೧೭॥

ಬಂದ ಕಾರಣವೇ-ಇಂದು ದಣ್ಣಾಯಕರು ।
ಎಂದು ಅಪ್ಪಣ್ಣಗೆ ಬೆಸಗೊಳೆ ಕಪ್ಪಡಿಯ ।
ಇಂದುಧರನೊಳು ಪಥವಿದು ॥೧೮॥

ಹರ ಹರ ಎನುತಲಿ-ಬರೆದಳು ಪಂಚಾಕ್ಷರಿ ।
ಪಿರಿದು ಸಂಗಯ್ಯ ನಮಗೀತ ಎನುತಲಿ ।
ಉರದ ಲಿಂಗಯ್ಯಗೆ ನಮಿಸಿದಳು ॥೧೯॥

ಸೋಜಿಗವ ಕಂಡೆನು-ಮೂಜಗದೊಳಗೊಂದು ।
ರಾಜಮಂತ್ರಿ ಬಸವೇಶಗೆ ನೀಲಮ್ಮ ।
ಓಜೆಯಲಿ ಕರವ ಮುಗಿದಳು ॥೨೦॥

ಅಚ್ಚರಿ ಕಂಡೆನು-ಖೇಚರ ಭೂಚರಕೆ ।
ಬಾಚಿರಾಜಯ್ಯ ಮಡಿವಾಳ ಮೋಳಿಗೆ ತಂದೆ ।
ಸಚರಾಚರಕೆಲ್ಲ ಹೊಸಪರಿಯು ॥೨೧॥

ಅರಿದು ನೀಲಮ್ಮನು-ಗರುವ ಗಂಭೀರ ತಾಯಿ ।
ಉರದ ಲಿಂಗವ ಕರದೆಡೆಗೆ ತಾ ಬಂದು ।
ಪುರಕೆ ಕೊಂಡೊಯ್ದು ನಲವಿಂದ ॥೨೨॥

ಉಭಯವ ಕಂಡನು-ಅಭಯವನಿತ್ತನು ।
ಪ್ರಭುದೇವರೆಂಬ ಸ್ವಯಂಜ್ಯೋತಿ ಕಪ್ಪಡಿಯ ।
ಅಭವನಿದ್ದೆಡೆಗೆ ನಡೆತಂದು ॥೨೩॥

ಹನ್ನೊಂದು ವಚನವ-ಚನ್ನಾಗಿ ಹೇಳಿದ ।
ಪನ್ನಗಧರನ ನುಡಿಗಳ ಅಲ್ಲೊಂದು ।
ಇನ್ನಾರಿಗರ್ಥ ತಿಳಿಯದು ॥೨೪॥

ಮೋಳಿಗಯ್ಯಗಳನು-ಹೇಳಲೆನ್ನಳವಲ್ಲ ।
ಭಾಳಲೋಚನನ ಭಜಕನ ಕರುಣವು ।
ಲೀಲೆಯಿಂದೆಮಗೆ ಇರಬೇಕು ॥೨೫॥

ನಮ್ಮ ಚನ್ನಣ್ಣನು-ನಿಮ್ಮ ಕೈಯ್ಯೊಳಗಿರಲಿ ।
ಬ್ರಹ್ಮಾಂಡಗಳಿಗೆ ಬಳಿಬಂದ ಆತನ ಮೇಲೆ ।
ನಿಮ್ಮ ಕರುಣವಿರಲೆಂದ ॥೨೬॥

ಕವುಗಳು ಕನ್ನಡ ವಾಙ್ಮಯದಲ್ಲಿ ಉಚ್ಚ ಸ್ಥಾನವನ್ನು ಹೊಂದಿರುತ್ತವೆ. ಸಿಂಗಿರಾಜನ ಮಲಬಸವ ಚರಿತ್ರೆ, ನಂಜುಂಡನ ಕುಮಾರರಾಮನ ಚರಿತ್ರೆ, ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನ, ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಕುಮಾರ ಚನ್ನಬಸವನ ಸೋಸಲೆ ಭೈರವೇಂದ್ರನ ಚರಿತೆ, ಬಸವಾಂಕನ ಉದ್ಭಟದೇವ ಚರಿತ್ರೆ ಗುರುಲಿಂಗವಿಭುವಿನ ಭಿಕ್ಷಾಟಣ ಚರಿತ್ರೆ, ನಂಜುಂಡನ ಭೈರವೇಶ್ವರ ಕಾವ್ಯ, ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಮತ್ತು ಸೋಮೇಶ್ವರ ಪುರಾಣ, ಅದೃಶ್ಯನ ಪ್ರೌಢರಾಯನ ಕಾವ್ಯ, ವಿರುಪಾಕ್ಷನ ಚನ್ನಬಸವ ಪುರಾಣ, ಸಿದ್ಧಲಿಂಗ ಶಿವಯೋಗಿಯ ಭೈರವೇಶ್ವರ ಪುರಾಣ, ಈ ಪ್ರಸಿದ್ಧ ಗ್ರಂಥಗಳು ೧೬ನೇ ಶತಮಾನದಲ್ಲಿ ಉತ್ಪನ್ನವಾಗಿವೆ. ೧೭ ನೇ ಶತಮಾನದಲ್ಲಿ ಹರೀಶ್ವರನ ಪ್ರಭುದೇವರ ಪುರಾಣ, ಬಸವಲಿಂಗನ ಶಿವಾಧಿಕ್ಯ ಪುರಾಣ, ಸಿದ್ಧನಂಜೇಶನ ರಾಘವಾಂಕ ಪುರಾಣ, ಬಸವಲಿಂಗ ಕವಿಯ ಕೊಟ್ಟೂರು ಬಸವೇಶ್ವರ ಪುರಾಣ, ಮಲ್ಲಿಕಾರ್ಜುನನ ಶಂಕರದಾಸಿಮಯ್ಯ ಪುರಾಣ, ಪರ್ವತೇಶ್ವರನ ಚತುರಾಚಾರ್ಯ ಪುರಾಣ, ಈ ಗ್ರಂಥಗಳು ಉಂಟಾಗಿವೆ. ಇವೆಲ್ಲವೂ ಬಹುತರವಾಗಿ ಚರಿತ್ರಾತ್ಮಕ ಗ್ರಂಥಗಳಾಗಿವೆ. ಅವುಗಳಲ್ಲಿ ಸಿದ್ಧಾಂತದ ವಿಷಯಗಳು ಅಲ್ಲಲ್ಲಿ ನಿರೂಪಿಸಲ್ಪಟ್ಟರೂ ಹಿಂದೆ ಆಗಿಹೋದ ಮಹಾನುಭಾವರ ಚರಿತ್ರೆಗಳನ್ನು ವಿವರಿಸಿ ಭಕ್ತಿಭಾವವನ್ನು ಜನರಲ್ಲಿ ಹೆಚ್ಚಿಸುವದೇ ಇವುಗಳನ್ನು ಬರೆದ ಈ ಗ್ರಂಥಕಾರರ ಉದ್ದೇಶವಾಗಿರುತ್ತದೆ.

**ಸಾಂಗತ್ಯಗಳು:—** ಸಾಂಗತ್ಯಗಳು ಒಂದು ಬಗೆಯ ಹಾಡುಗಳಾಗಿವೆ. ಇವುಗಳ ಮೂಲಕ **ಅನೇಕ ಕವಿಗಳು** ಶರಣರ ಚರಿತ್ರೆಗಳನ್ನೂ ಅಷ್ಟಾವರಣ ಮೊದಲಾದ ತಾತ್ವಿಕ ವಿಷಯಗಳ ಮಹತ್ವವನ್ನೂ ವಿವರಿಸಿದ್ದಾರೆ. ಹರಿಶ್ಚಂದ್ರ ಮತ್ತು ಚೋಳರಾಜರ ಸಾಂಗತ್ಯಗಳು, ಬಸವ ಕವಿಯ ಚಿಕ್ಕಯ್ಯನ ಸಾಂಗತ್ಯ, ರುದ್ರ ಕವಿಯ ಕರಸ್ಥಲದ ನಾಗಲಿಂಗನ ಸಾಂಗತ್ಯ, ಚನ್ನಣ್ಣನ ವೀರಶೈವ ಚರಿತೆ, ಮಹಾದೇವನ ಹೇರೂರು ಹೆಣ್ಣಿನ ಸಾಂಗತ್ಯ, ವೀರಸಂಗಯ್ಯನ ಚೌಪದನಗಳು, ಮಂಚಯ್ಯನ ಭಕ್ತಿರಸ ಸೊನೆ, ಚನ್ನಮಲ್ಲೇಶನ ದೀಪದ ಕಲಿಯರ ಕಾವ್ಯ, ಬಸವ ಕವಿಯ ರೇಣುಕ ಸಾಂಗತ್ಯ ಇವೆಲ್ಲವು ವೀರಶೈವರಲ್ಲಿ

ಬಹು ಪ್ರಿಯವಾದ ಗ್ರಂಥಗಳು. ಇವು ೧೬ನೇ ೧೭ನೇ ಶತಮಾನಗಳಲ್ಲಿ ಹುಟ್ಟಿವೆ.

**ತ್ರಿಪದಿಗಳುಃ—** ಇವಾದರೂ ಲೋಕಪ್ರಿಯವಾದ ಕವನಗಳು. ಬಿಗಿಯಾಗಿ ಅಚ್ಚುಕಟ್ಟಾಗಿ ನುಡಿದ ನುಡಿಗಳು ಇವಾಗಿವೆ. ಇವುಗಳನ್ನೂ ಕೂಡ ಒಂದು ಧಾಟಿಯಲ್ಲಿ ಅನ್ನಬಹುದು. ಈ ಕಾಲದಲ್ಲಿ ಉತ್ಪನ್ನ ವಾದ ಸರ್ವಜ್ಞ ಕವಿಯ ತ್ರಿಪದಿಗಳು ಬಹು ಪ್ರಸಿದ್ಧವಾಗಿವೆ. ನಿಜಗುಣ ಶಿವಯೋಗಿಯ ತ್ರಿಪದಿಗಳು, ಸಂಪಾದನೆಯ ಗುರಲಿಂಗದೇವನ ಶೀಲ ವಂತಯ್ಯನ ತ್ರಿಪದಿ, ಗುರುಕರುಣ ತ್ರಿಪದಿ, ಇವು ಬಹು ಮಹತ್ವದ ಗ್ರಂಥಗಳಾಗಿವೆ. ಇವಲ್ಲದೆ ಷಟ್‌ಸ್ಥಲ ವಿಷಯಗಳನ್ನು ನಿರೂಪಿಸುವ ಅನೇಕ ತ್ರಿಪದಿಗಳು ಇವೆ. ಅವು ಷಟ್‌ಸ್ಥಲ ತ್ರಿವಿಡಿ, ಲಿಂಗತ್ರಿವಿಡಿ, ಇಷ್ಟಲಿಂಗ ತ್ರಿವಿಡಿ, ಯೋಗಾಂಗ ತ್ರಿವಿಡಿ, ವಾಗದ್ವೈತನಿರಸನ ತ್ರಿವಿಡಿ, ಏಕದೇವ ಪ್ರತಿಷ್ಠಾ ತ್ರಿವಿಡಿ, ಅಷ್ಟಾವರಣದ ತ್ರಿವಿಡಿ, ನಿಜಶರಣತ್ರಿವಿಡಿ, ಎಂದಿವೆ. ಕೆಲವು ಸ್ತೋತ್ರರೂಪವಾಗಿಯೂ ಇವೆ. ಅವು ಮಹಾಂತ ನಿಜಲೀಲಾ ತ್ರಿವಿಡಿ, ಚಿಕ್ಕನ ತ್ರಿವಿಡಿ, ಬಸವ ಸ್ತೋತ್ರದ ತ್ರಿವಿಡಿ, ಮಿಶ್ರ ಸ್ತೋತ್ರದ ತ್ರಿವಿಡಿ, ಸಿದ್ಧೇಶ್ವರನ ತ್ರಿವಿಡಿ ಹೀಗೆ ಅನೇಕ ಗ್ರಂಥಗಳಿವೆ.

**ಶತಕಗಳುಃ—** ಇವುಗಳಲ್ಲಿ ಬಹುತರವಾಗಿ ೧೦೮ ಶ್ಲೋಕಗಳಿರು ವದುಂಟು. ಇವುಗಳ ಕರ್ತರು ನೀತಿ, ವೈರಾಗ್ಯ, ಭಕ್ತಿ ಈ ವಿಷಯ ಗಳನ್ನಿಟ್ಟುಕೊಂಡು ಸುಲಭವಾಗಿಯೂ ಸ್ಫುಟವಾಗಿಯೂ ಅವುಗಳ ಮರ್ಮವನ್ನು ಇವುಗಳಲ್ಲಿ ಹೇಳಿದ್ದಾರೆ. ಅವಾದರೂ ವೀರಶೈವ ವಾಙ್ಮ ಯದಲ್ಲಿ ಅನೇಕವಾಗಿವೆ. ಚನ್ನಮಲ್ಲೇಶ್ವರನ ಶತಕ, ಶಿವಮಹಿಮಾ ಶತಕ, ವೈರಾಗ್ಯಷಟ್‌ಪದಿಶತಕ, ಗುರುಶಂಕರಶತಕ, ಪಾರ್ವತೀ ಪ್ರಾಣ ನಾಥಶತಕ, ನಿಜಲಿಂಗಶತಕ, ಅನುಭವಶತಕ, ಸೋಮೇಶ್ವರ ಶತಕ, ಹೀಗೆ ಅನೇಕ ಶತಕಗಳು ಈ ಶತಮಾನದಲ್ಲಿ ಹುಟ್ಟಿರುತ್ತವೆ.

**ನಾಂದ್ಯಗಳುಃ—** ಇವು ಒಂದು ಬಗೆಯ ಸ್ತೋತ್ರಗ್ರಂಥಗಳು. ಭಕ್ತಿಭಾವವನ್ನು ಉಂಟುಮಾಡುವದೇ ಇವುಗಳ ಉದ್ದೇಶವು. ಶಿವ ಲಿಂಗನಾಂದ್ಯ, ನೀಲಾಂಬೆಯ ನಾಂದ್ಯ, ಆದಯ್ಯಗಳ ನಾಂದ್ಯ, ಮಲ್ಲೇ ಶ್ವರನ ನಾಂದ್ಯ, ಮುರುಗಾಸ್ವಾಮಿಗಳ ನಾಂದ್ಯ, ಮುಂತಾದ ನಾಂದ್ಯ ಗಳು ಇವೆ. ಇವಲ್ಲದೆ ಈ ಕಾಲದಲ್ಲಿ ಲೋಕಪ್ರಿಯವಾದ ಗ್ರಂಥಗಳ

ವಿಷಯವಾಗಿಯೂ ಕೆಲವು ನಾಂದ್ಯಗಳು ಉಂಟಾಗಿವೆ. ಅವು ಚನ್ನ ಬಸವ ಪುರಾಣದ ನಾಂದ್ಯ, ಸಿದ್ಧೇಶ್ವರ ಪುರಾಣದ ನಾಂದ್ಯ, ಪ್ರಭು ದೇವರ ಪುರಾಣದ ನಾಂದ್ಯ, ಶಂಕರ ಸಂಹಿತೆಯ ನಾಂದ್ಯ, ಸೋಮ ನಾಥ ಕಾವ್ಯದ ನಾಂದ್ಯ, ಸೌಂದರ ಪುರಾಣದ ನಾಂದ್ಯ, ಭೈರ ವಾಂಕ ಕಾವ್ಯದ ನಾಂದ್ಯ, ಷಟ್‌ಸ್ಥಲ ತಿಲಕದ ನಾಂದ್ಯ ಎಂಬ ನಾಂದ್ಯಗಳು ಉಂಟಾಗಿವೆ.

**ಗದ್ಯಗಳು:**— ಷಟ್‌ಸ್ಥಲ ಶಾಸ್ತ್ರದಲ್ಲಿಯ ವಿಷಯಗಳ ಮಹತ್ವ ವನ್ನು ವಿವರಿಸುವದಕ್ಕೋಸ್ಕರ ಕೆಲವು ಗದ್ಯಗಳು ಉಂಟಾಗಿವೆ. ಅವು ಷಟ್‌ಸ್ಥಲ ಗದ್ಯ, ಅಷ್ಟೋತ್ತರ ಶತನಾಮದ ಗದ್ಯ, ನೂರೊಂದುಸ್ಥಲದ ಗದ್ಯ, ಉದ್ಧರಣೀ ಗದ್ಯವೆಂಬವುಗಳಲ್ಲದೆ ಅಕ್ಷರಾಂಕನ ಗದ್ಯ, ನಮ ಸ್ಕಾರ ಗದ್ಯ ಎಂಬ ಕೆಲವು ಗ್ರಂಥಗಳೂ ಉಂಟು.

**ಕಂದಗಳು:**— ಇವು ಕೂಡ ಭಕ್ತಿಭಾವವನ್ನು ಉಂಟುಮಾಡು ವದಕ್ಕೋಸ್ಕರ ರಚಿತವಾದ ಪುಟ್ಟ ಕವನಗಳು. ಇವುಗಳಲ್ಲಿ ಕೆಲವು ತಾತ್ವಿಕವೂ ಕೆಲವು ಚರಿತ್ರಾತ್ಮಕವೂ ಇರುತ್ತವೆ. ಆಚರಣೆಯ ಕಂದ, ಷಡಕ್ಷರಿಯ ಕಂದ, ಇಷ್ಟಲಿಂಗದ ಕಂದ, ಮಂತ್ರ ಮಹತ್ವದ ಕಂದ, ಇವು ತಾತ್ವಿಕ ಕಂದಗಳು. ಇವಲ್ಲದೆ ಕೊಟ್ಟೂರು ಬಸವೇಶ್ವರ ದೇವರ ಕಂದ, ಕರಸ್ಥಲದ ವೀರಣ್ಣೊಡೆಯರ ಕಂದ, ಪ್ರಭುಲಿಂಗದ ಕಂದ, ಶಂಕರ ದೇವರ ಕಂದ ಇವೇ ಮೊದಲಾದವುಗಳು ಚರಿತ್ರಾತ್ಮಕವಾದ ವುಗಳು. ಕಂದಗಳನ್ನು ಬಹು ಸುಂದರವಾದ ರೀತಿಯಿಂದ ಅನ್ನ ಬಹುದು.

**ವಾರ್ಧಿಕಗಳು:**—ಹೇಗೆ ಕಂದಗಳು ರಚಿತವಾಗಿವೆಯೋ ಹಾಗೆಯೇ ವಾರ್ಧಿಕಗಳೂ ಇರುತ್ತವೆ. ಅವುಗಳಲ್ಲಿ ಕೆಲವು ತಾತ್ವಿಕವಾಗಿವೆ. ಷಟ್ ಸ್ಥಲ ಮಾರ್ಗದ ವಾರ್ಧಿಕ, ಪ್ರಾಣಲಿಂಗ ಜ್ಞಾನದರ್ಪಣ ವಾರ್ಧಿಕ, ಸ್ವಾನುಭವದ ಸಕೀಲದ ವಾರ್ಧಿಕ, ಅಷ್ಟಾವರಣದ ವಾರ್ಧಿಕ, ಮೂರೇಳು ದೀಕ್ಷೆಯ ವಾರ್ಧಿಕ ಎಂದಿವೆ. ಅಲ್ಲದೆ ಕೆಲವುಗಳಲ್ಲಿ ಶರಣರ ಸ್ತೋತ್ರಗಳು ಇವೆ. ಅವು ಗಣನಾಮ ವಾರ್ಧಿಕ, ಕೆಂಭಾವಿ ಭೋಗ ಣ್ಣನ ವಾರ್ಧಿಕ ಹೀಗೆ ಅನೇಕ ವಾರ್ಧಿಕಗಳು ಇವೆ.

ಮಹಿಮ್ನ ಸ್ತೋತ್ರ, ಹಲಾಯುಧ ಸ್ತೋತ್ರ, ಮಲುಹಣ ಸ್ತೋತ್ರ, ಅನಾಮಯಸ್ತೋತ್ರ, ಅಪರಾಧಸ್ತೋತ್ರ, ನಿರಾಳ ಸ್ತೋತ್ರ, ಇವೇ ಮೊದಲಾದವುಗಳು ಇರುತ್ತವೆ. ಇವಲ್ಲದೆ ಇವುಗಳಲ್ಲಿ ಶಿವಶರಣರನ್ನು ದ್ದೇಶಿಸಿ ಬರೆದವುಗಳೂ ಅನೇಕವಿರುತ್ತವೆ. ಅವು ಶಿವಶರಣ ನಾಮಾವಳಿ, ನೀಲಾಂಬಿಕಾ ಸ್ತೋತ್ರ, ಬಸವೇಶ ಸಹಸ್ರನಾಮ, ಅಮರೇಶ್ವರ ಸ್ತೋತ್ರ ಇವೇ ಮೊದಲಾಧವುಗಳು ಇವೆ.

**ಹಾಡುಗಳು:—** ಶಿವಶರಣರನ್ನೂ ಷಟ್‌ಸ್ಥಲ ಮತ್ತು ಅಷ್ಟಾವರಣ ವಿಷಯುಗಳನ್ನೂ ಉದ್ದೇಶಿಸಿ ಬರೆದ ಪದಗಳು ಅಸಂಖ್ಯಾತವಾಗಿವೆ. ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ ಗ್ರಂಥವು ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ನಿಜಗುಣಶಿವಯೋಗಿಯ ಪದಗಳು ಕನ್ನಡ ವಾಙ್ಮಯದಲ್ಲಿ ಉಚ್ಚಸ್ಥಾನವನ್ನು ಹೊಂದಿವೆ. ಅವು ಕರ್ನಾಟಕದಲ್ಲೆಲ್ಲ ಲೋಕಪ್ರಿಯವಾಗಿರುತ್ತವೆ. ನಿಜಗುಣನ ಆರುಶಾಸ್ತ್ರಗಳು ಕರ್ನಾಟಕದ ಧಾರ್ಮಿಕ ಜೀವನದಲ್ಲಿ ತೇಜಸ್ಸನ್ನುಂಟು ಮಾಡಿವೆ. ಅವನು ೧೬ನೇ ಶತಮಾನದ ಆರಂಭದಲ್ಲಿದ್ದು ಅವನ ಅನುಕರಣವನ್ನು ಅವನ ತರುವಾಯ ಬಂದ ಅನೇಕ ವೀರಶೈವ ಮತ್ತು ಬ್ರಾಹ್ಮಣ ಕವಿಗಳು ಮಾಡಿರುತ್ತಾರೆ.

ಆದರೆ ವೀರಶೈವರಲ್ಲಿ ಆಗಿಹೋದ ಇಂಥ ಸಾಧುಗಳು ಪ್ರಪಂಚವು ತ್ಯಾಜ್ಯವಾದದ್ದೆಂದು ತಿಳಿದು ಮನೆಮಾರು ಮಠಗಳನ್ನು ತ್ಯಜಿಸಿ ಭಿಕ್ಷೆಯನ್ನು ಬೇಡುತ್ತ ಹೋಗುವ ಪದ್ಧತಿಯುಳ್ಳವರಲ್ಲ. ಅವರು ನೀತಿ, ಭಕ್ತಿ, ಕ್ರಿಯೆ, ಯೋಗ ಹೀಗೆ ಕೆಲವು ಮುಖ್ಯ ಭಾಗಗಳನ್ನಿಟ್ಟುಕೊಂಡು ಅವುಗಳಲ್ಲಿಯ ವಿಷಯುಗಳನ್ನು ಬಹು ವ್ಯವಸ್ಥೆಯಿಂದ ನಿರೂಪಿಸುತ್ತ ಹೋಗುತ್ತಾರೆ.

**ಚಂಪೂ ಗ್ರಂಥಗಳು:—** ಜೈನ ವಾಙ್ಮಯದಲ್ಲಿ ಚಂಪೂ ಗ್ರಂಥಗಳು ಉಚ್ಚಸ್ಥಾನವನ್ನು ಹೊಂದಿರುತ್ತವೆ. ಆದರೆ ವೀರಶೈವ ವಾಙ್ಮಯದಲ್ಲಿ ಇವು ಮಹತ್ವದ ಸ್ಥಾನವನ್ನು ಹೊಂದಿರುವದಿಲ್ಲ. ಆದರೂ ಈ ಕಾಲದಲ್ಲಿ ಕೆಲವು ವೀರಶೈವ ಗ್ರಂಥಕಾರರು ಉಚ್ಚತರದ ಚಂಪೂ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅವರು ತಮ್ಮ ಕವಿತಾ ಶಕ್ತಿಯನ್ನು ಬಹಳ ಚನ್ನಾಗಿ ತೋರಿಸಿದ್ದಾರೆ. ಈ ಗ್ರಂಥಕಾರರಲ್ಲಿ ಅಗ್ರಸ್ಥಾನವನ್ನು ಪಡೆದವನು ಷಡಕ್ಷರಿದೇವನು. ಸುರಂಗ ಕವಿಯು

ತ್ರಿಷಷ್ಟಿ ಪುರಾತನ ಚರಿತ್ರೆ ವಿಭುಗನ ವೈಭೋಗರಾಜಾಸ್ಥಾನ, ಸದಾಶಿವಯೋಗಿಯ ರಾಮನಾಥ ವಿಲಾಸ, ಮುರಿಗೆದೇಶಿಕೇಂದ್ರನ ರಾಜೇಂದ್ರ ವಿಜಯ, ಮಾದಣ್ಣನ ನನ್ನಯ್ಯನ ಚರಿತ್ರೆ, ಷಡಕ್ಷರಿಯ ರಾಜಶೇಖರ ವಿಳಾಸ ಮತ್ತು ವೃಷಭೇಂದ್ರ ವಿಜಯ ಈ ಗ್ರಂಥಗಳು ಈ ಕಾಲಕ್ಕೆ ಉಂಟಾಗಿದ್ದು ಅವು ಕನ್ನಡ ವಾಙ್ಮಯದಲ್ಲಿ ಶ್ರೇಷ್ಠ ಸ್ಥಾನವನ್ನು ಹೊಂದಿರುತ್ತವೆ.

**ನಿಘಂಟುಗಳು**:— ಗ್ರಂಥಗಳಲ್ಲಿ ಬರುವ ಕಠಿಣ ಶಬ್ದಗಳನ್ನು ತಿಳಿಯಲು ಅನುಕೂಲವಾಗಬೇಕೆಂದು ವಿರಕ್ತ ತೋಂಟದಾರ್ಯನು ಕರ್ನಾಟಕ ಶಬ್ದಮಂಜರಿ ಎಂಬ ಗ್ರಂಥವನ್ನು ವಾರ್ಧಿಕ ಷಟ್ಪದಿಯಲ್ಲಿ ರಚಿಸಿದ್ದಾನೆ.

ಹೀಗೆ ವೀರಶೈವ ವಾಙ್ಮಯವು ೧೬ನೇ ಮತ್ತು ೧೭ನೇ ಶತಮಾನಗಳಲ್ಲಿ ನಾನಾಮುಖವಾಗಿ ಹರಿದಿರುತ್ತದೆ. ಈ ಎರಡು ಶತಮಾನಗಳು ಭಕ್ತಿಪ್ರಾಧಾನ್ಯವಾದವುಗಳು. ಈ ಭಕ್ತಿಗನುಸರಿಸಿ ವೀರಶೈವ ವಾಙ್ಮಯವು ಈ ಕಾಲಪಲ್ಲಿ ಬೆಳೆದಿರುತ್ತದೆ. ಅದು ಸೌಂದರ್ಯಯುಕ್ತವೂ ಕಾವ್ಯಮಯವೂ ಆಗಿದೆ. ೧೨ನೇ ೧೩ನೇ ಶತಮಾನಗಳು ವಚನಕಾರರ ಕಾಲವು. ಅದು ತಾತ್ವಿಕ ಯುಗವಾಗಿದೆ. ಆದರೆ ಈ ೧೬ನೇ ೧೭ನೇ ಶತಮಾನಗಳಲ್ಲಿ ವಚನಗಳ ಸ್ಥಾನದಲ್ಲಿ ಕಾವ್ಯರಚನೆಯು ಮುಂದೆಬಂದಿತು. ಆಗ ಹುಟ್ಟಿದ ಅನೇಕ ತರದ ಕಾವ್ಯಗಳೂ ಪದ್ಯಗಳೂ ಸ್ತೋತ್ರ ಗ್ರಂಥಗಳೂ ಎಲ್ಲ ತರಗತಿಯ ಜನರನ್ನು ಆಕರ್ಷಿಸಿರುತ್ತವೆ. ಮಹಾರಾಷ್ಟ್ರ ದೇಶದಲ್ಲಿ ಕೀರ್ತನೆ ಮತ್ತು ಭಜನೆಗಳು ಜನಸಮುದಾಯವನ್ನು ಪ್ರೇರಣೆ ಮಾಡಿರುತ್ತವೆ. ಅಲ್ಲಿ ಉದಯವಾದ ಸಂತರೂ ಸಾಧುಗಳೂ ಅಭಂಗಗಳನ್ನು ರಚಿಸಿದ್ದಾರೆ. ಹಾಗೆಯೇ ಕರ್ನಾಟಕದಲ್ಲಿ ೧೬ನೇ ಶತಮಾನದಲ್ಲಿ ವೈಷ್ಣವದಾಸರು ಭಕ್ತಿಯ ಪದಗಳಿಂದ ಜನರನ್ನು ಬೋಧಿಸಿದ್ದಾರೆ. ಆದರೆ ಈ ಕಾಲಕ್ಕೆ ಉಂಟಾದ ವೀರಶೈವ ವಾಙ್ಮಯದಲ್ಲಿ ಭಕ್ತಿಭಾವವು ಬರೇ ಪದಗಳಲ್ಲಷ್ಟೇ ಅಲ್ಲ, ನಾನಾವಿಧವಾದ ರೀತಿಯಿಂದ ಹರಡಿರುತ್ತದೆ ಈ ಕಾಲದಲ್ಲಿ ಹೆಣ್ಣುಮಕ್ಕಳು ಹಾಡಲು ಯೋಗ್ಯವಾದ ಸಾಂಗತ್ಯಗಳೂ ಜನಸಾಮಾನ್ಯಕ್ಕೆ ಬೋಧವಾಗುವಂತೆ ರಚಿಸಿದ ವಾರ್ಧಿಕಗಳೂ ತ್ರಿಪದಿಗಳೂ ಚೌಪದಿಗಳೂ ಉಂಟಾಗಿರುತ್ತವೆ. ಅನೇಕ ಕವಿಗಳು ಮತತತ್ವಗಳ ಮತ್ತು

ನೈತಿಕ ವಿಷಯಗಳ ಬೋಧೆಯನ್ನು ಶತಕಗಳ ಮೂಲಕ ಮಾಡಿದ್ದಾರೆ. ಆಗ ವಿದ್ವಾಂಸರಾದವರು ಶರಣರ ಪುರಾಣಗಳನ್ನು ಉಪನ್ಯಾಸ ರೂಪದಿಂದ ಹೇಳುವ ಹೊಸ ಕ್ರಮವನ್ನು ಆರಂಭಿಸಿದರು. ವೀರಶೈವರಲ್ಲಿ ದೇವಾಲಯಗಳಿಗೆ ಮಹತ್ವದ ಸ್ಥಾನವಿಲ್ಲ. ಅವುಗಳ ಬದಲು ಅಷ್ಟಾವರಣ ಕ್ರಿಯೆಗಳು ಅವರಲ್ಲಿ ಉಂಟಾಗಿದ್ದು ಅವುಗಳ ಜ್ಞಾನ ಮಾಡಿಕೊಡುವ ನಾನಾವಿಧ ಪದ್ಯಗಳೂ ಪದಗಳೂ ಸ್ತೋತ್ರಗಳೂ ರಚಿಸಲ್ಪಟ್ಟಿವೆ. ಶಿವಶರಣರ ಉದ್ಬೋಧಕ ಗದ್ಯಪದ್ಯಾತ್ಮಕ ಚರಿತ್ರೆಗಳು ಕೂಡ ಉಂಟಾಗಿವೆ. ಇವುಗಳಲ್ಲೆಲ್ಲ ಭಕ್ತಿರಸಪ್ರವಾಹವು ಅನೇಕ ಸ್ವರೂಪದಿಂದ ಹರಿದಿರುತ್ತದೆ.

ಕರ್ನಾಟಕದಲ್ಲಿಯ ಮಠಾಧೀಶ್ವರರೇ ಈ ಕಾರ್ಯವನ್ನು ಮುಖ್ಯವಾಗಿ ಕೈಕೊಂಡವರು. ಆದ್ದರಿಂದ ಈ ಕಾಲವು ಮಠಾಧಿಕಾರಿಗಳ ಯುಗವೆಂದು ಹೇಳಬಹುದು. ದೇಶದಲ್ಲಿ ಸಾರ್ವತ್ರಿಕ ಧಾರ್ಮಿಕ ಮತ್ತು ವ್ಯವಹಾರಿಕ ಶಿಕ್ಷಣ ಕಾರ್ಯವನ್ನು ಸಹ ಅವರೇ ಕೈಕೊಂಡರು. ಅವರು ಮಠಗಳಲ್ಲಿ ಬಾಲಕರಿಗೆ ಅಕ್ಷರ ಜ್ಞಾನವನ್ನು ಮಾಡಿಕೊಟ್ಟ ಬಳಿಕ, ಅವರಿಗೆ ಸುಲಭವಾದ ತ್ರಿಪದಿ ಚೌಪದಿ ಸಾಂಗತ್ಯಗಳನ್ನು ತಿಳಿಸಿ, ಆಮೇಲೆ ಧಾರ್ಮಿಕ ಪಾಠಗಳನ್ನು ನಾನಾವಿಧ ಕಾವ್ಯಗ್ರಂಥಗಳ ಮೂಲಕ ಹೇಳುತ್ತ, ಕಡೆಗೆ ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ ಇಂಥ ಉಚ್ಚಗ್ರಂಥಗಳ ಜ್ಞಾನ ಮಾಡಿಕೊಡುತ್ತಿದ್ದರು. ಆದ್ದರಿಂದ ಈ ಎರಡು ಶತಮಾನಗಳಲ್ಲಿ ವೀರಶೈವ ವಾಙ್ಮಯವು ಬೆಳೆಯುತ್ತಲೇ ಬಂದಿದೆ. ಆಗ ವಿಜಯನಗರದ ಮತ್ತು ವಿಜಾಪುರದ ರಾಜ್ಯಗಳು ಮುಳುಗಿಹೋಗಿದ್ದವು. ಆದರೂ ಆಗ ಪ್ರಬಲರಾಗಿದ್ದ ಕೆಳದಿ ಮತ್ತು ಸ್ವಾದಿಯ ರಾಜರ ವಶದಲ್ಲಿದ್ದ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿಯ ಬಂದರಗಳ ಮುಖಾಂತರ ಕರ್ನಾಟಕದ ವ್ಯಾಪಾರವು ಪರದೇಶಗಳೊಡನೆ ಅವ್ಯಾಹತವಾಗಿ ಸಾಗಿದ್ದರಿಂದ ಕರ್ನಾಟಕದಲ್ಲಿ ಅನೇಕ ಗ್ರಾಮಗಳು ಮಹತ್ವದ ಪೇಟೆಯ ಸ್ಥಳಗಳಾಗಿದ್ದವು. ಅವುಗಳಲ್ಲಿಯ ವ್ಯಾಪಾರಸ್ಥರ ಮಕ್ಕಳಿಗೆ ಅವಶ್ಯವಿರುವ ವ್ಯವಹಾರಿಕ ಮತ್ತು ಗಣಿತ ಜ್ಞಾನವನ್ನು ಮಾಡಿಕೊಡುವ ಕಾರ್ಯವನ್ನು ಈ ಮಠಾಧಿಕಾರಿಗಳೇ ಕೈಕೊಂಡರು. ಮಠಾಧಿಕಾರಿಗಳಲ್ಲನೇಕರು ತಮ್ಮ ಸದ್ವರ್ತನೆ, ವಿದ್ವತ್ತೆ, ಇವುಗಳ ಮೂಲಕ ಜನತೆಯಲ್ಲಿ ಬಹಳ ವರ್ಚಸ್ಸನ್ನು ಪಡೆ

| | | |
|---|---|---|
| ಶ್ರೀ. ಬಸಪ್ಪನವರು ಮುರಗೋಡ | ,, | ೩ ರೂ. |
| ,, ಸೋಮಣ್ಣಾ ಲಿಗಾಡೆ | ,, | ೨ ರೂ. |
| ,, ಕುಬೇರಪ್ಪನವರು ಅಣ್ಣಿಗೇರಿ | ,, | ೨ ರೂ. |
| ,, ವೀರಪ್ಪನವರು ಭೂಸನೂರ | ,, | ೨ ರೂ. |
| ,, ಮಹಾದೇವಪ್ಪನವರು ಜಾಬಿ | ,, | ೨ ರೂ. |
| ,, ಚನ್ನಬಸಪ್ಪನವರು ಕುದರಿ | ,, | ೨ ರೂ. |

ಇದಲ್ಲದೆ ಶ್ರೀ. ವ್ಹಿ. ಜಿ. ಸಾಲಮನಿ ವಕೀಲರು ಧಾರವಾಡ ಇವರು ಶಿವಾನುಭವಕ್ಕೆ ೨೪ ಜನರನ್ನು ಚಂದಾದಾರರನ್ನು ಮಾಡಿಕೊಟ್ಟು ನಮಗೆ ಬಹಳ ಸಹಾಯ ಮಾಡಿದ್ದಾರೆ. ಇದಕ್ಕೋಸ್ಕರ ನಾವು ಅವರಿಗೂ ಮೇಲಿನ ಯಾವತ್ತು ಸದ್ಗೃಹಸ್ಥರಿಗೂ ಬಹಳ ಆಭಾರಿಯಾಗಿದ್ದೇವೆ.

ಸಂಪಾದಕರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.
ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಮಾರ್ಚ ೧೯೪೩. [ಸಂಚಿಕೆ ೬

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಶಿವಭಕ್ತ ವಕರಿಹರ್ | ...ಬ್ಬಳ್ಳಿಯ ಶ್ರೀ ಸಿದ್ಧವೀರ ದೇವರು | ೨೪೧ |
| ೨ ಶರಣರ ಸಂದೇಶ | ಶ್ರೀ. ಎಸ್. ರಾಚೊಟಿಯ್ಯ ಕಾನಕಾನಹಳ್ಳಿ | ೨೪೫ |
| ೩ ಶಿವಶರಣರ ಸದಾಚಾರ ಸದ್ಭಕ್ತಿಗಳು | ಶ್ರೀ. ಶಿವಮೂರ್ತಿ | ೨೪೭ |
| ೪ ನೀತಿಯ ಮಾತುಗಳು | ಶ್ರೀ. ಜಿ. ಎಸ್. ಕನ್ನೂರ ವಿಜಾಪೂರ | ೨೫೨ |
| ೫ ಮೋಕ್ಷದ ಸ್ವರೂಪ ಅದನ್ನು ಹೊಂದುವ ಸುಲಭೋಪಾಯ | ಶ್ರೀ. ಎಂ. ಎಲ್. ನಾಗಣ್ಣ ಮೈಸೂರ | ೨೫೪ |
| ೬ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೨೫೭ |
| ೭ ಶಿವಾನುಭವ ಶಬ್ದಕೋಶ | ... ... | ೧೭೩–೧೮೦ |
| ೮ ವೀರಶೈವ ರಾಜಮನೆತನಗಳ ಚರಿತ್ರೆ | ... ... | ೪೧-೪೮ |

# ಶಿವಾನುಭವ.

| ವರ್ಷ ೧೭ | ಮಾರ್ಚ ೧೯೪೩. | ಸಂಚಿಕೆ ೬ |
| --- | --- | --- |

## ಶಿವಭಕ್ತ ವಕಲಿಹರ್.

(ಬರಹಗಾರರು:— ಹುಬ್ಬಳ್ಳಿಯ ಶ್ರೀಸಿದ್ಧವೀರದೇವರು.)

ತಮಿಳುನಾಡಿನಲ್ಲಿ 'ಶಿವಭಕ್ತ ವಕ್ಕಲಿಹರ್' ಎಂಬ ಒಂದು ಸಂಗಡವಿದೆ. ಆ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಾವಿರಾರು ಜನರು ಚಿಕ್ಕ ಚಿಕ್ಕ ಗುಂಪುಗಳಾಗಿ ನೆಲಸಿದ್ದಾರೆ. ವ್ಯವಸಾಯವೇ ಅವರ ಉದ್ಯೋಗ. ಸಾಮಾನ್ಯವಾಗಿ ಎಲ್ಲರು ಜಮೀನದಾರರು. ಕೆಲವರು ಹಣಗಾರರಾಗಿಯೂ, ಮತ್ತೆ ಕೆಲವರು ಸಾಮಾನ್ಯ ಜೀವಿಗಳಾಗಿಯೂ ಇದ್ದಾರೆ. ವಿದ್ಯೆಯಲ್ಲಿ ಅಷ್ಟೊಂದು ಮುಂದುವರಿದಿಲ್ಲ. ಸರಕಾರಿಯ ನೌಕರಿಯಲ್ಲಿ ಇಲ್ಲವೆಂದರೂ ಸಲ್ಲುವುದು. ಆದರೂ ಒಳ್ಳೆಯ ನಾಗರಿಕರಾಗಿ ತೋರುತ್ತಾರೆ. ಅವರ ಮನೆಯ ಮಾತು ಕನ್ನಡ. ಹೆಂಗಸರು ಮಕ್ಕಳೆಲ್ಲರು ಕನ್ನಡದ ನುಡಿಯನ್ನೇ ನುಡಿಯುತ್ತಾರೆ. ನಾವು ಅಚ್ಚ ಕನ್ನಡಿಗರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಎತ್ತಿತ್ತ ನೋಡಿವತ್ತ ಕನ್ನಡದ ಶಬ್ದವೇ ಇಲ್ಲದ ನಾಡಿನಲ್ಲಿ ಹುಟ್ಟಿಬೆಳೆದು ಎಲ್ಲ ಬದುಕು ತಮಿಳು ಭಾಷೆಯಲ್ಲಿಯೇ ನಡೆಯುತ್ತಿರುವಾಗ ಕನ್ನಡವನ್ನು ಮರೆಯದೆ ಕನ್ನಡದ ಮಾತನ್ನು ಮನೆಯಲ್ಲಾದರೂ ಉಳಿಸಿಕೊಂಡು ಬಳಸುತ್ತ ಬಂದಿರುವದು ಒಂದು ಬಗೆಯ ಹೆಮ್ಮೆಯ ಮಾತೇ ಸರಿ.

ಇವರೆಲ್ಲರೂ ವೀರಶೈವರೆಂದು ಉತ್ಸಾಹದಿಂದ ಹೇಳಿಕೊಳ್ಳುತ್ತಾರೆ. ಅಂಗದ ಮೇಲೆ ಲಿಂಗ ಮಾತ್ರ ಇರುವದಿಲ್ಲ. ಸಾಮಾನ್ಯವಾಗಿ ಲಿಂಗವಂತರ ಸಾಂಪ್ರದಾಯದ ಆಚಾರವಿಚಾರ ನಡೆನುಡಿಗಳು ಆಚರಣೆಯ

ಲ್ಲಿವೆ. ಇವರು ಕೇವಲ ಶಾಖಾಹಾರಿಗಳು, ವಿಭೂತಿ ರುದ್ರಾಕ್ಷಧಾರಕರು, ಬಸಪ್ಪ, ಚೆನ್ನಬಸಪ್ಪ, ಶಿವಪ್ಪ, ನಂಜಪ್ಪ, ಪಾರ್ವತಮ್ಮ, ಗೌರಮ್ಮ, ಶಿವಮ್ಮ, ಬಸಮ್ಮ, ನೀಲಮ್ಮ ಎಂಬ ಹೆಸರುಗಳಿಂದ ಕರೆದುಕೊಳ್ಳುತ್ತಾರೆ. ತಮಗಿಂತ ಅನ್ಯರನ್ನು ಭವಿಗಳೆಂದು ಸಂಬೋಧಿಸುತ್ತಾರೆ. ತಮ್ಮ ಪಂಗಡದವರು ಅನ್ಯರಲ್ಲಿ ಊಟೋಪಚಾರ ಮಾಡಿದರೆ, ಒಡಗೂಡಿದರೆ ಅವರನ್ನು ಕೊನೆಯವರೆವಿಗೂ ತಮ್ಮ ಪಂಗಡದಲ್ಲಿ ಸೇರಿಸಿಕೊಳ್ಳುವದಿಲ್ಲ. ಎಲ್ಲ ವಿಧದಿಂದಲೂ ಅವರ ಸಂಬಂಧವನ್ನು ಬಿಟ್ಟುಬಿಡುತ್ತಾರೆ. ಆ ಪಂಗಡದವರಿಗೆ ಮನೆಗೊಂದು ಲಿಂಗದಂತ ಎಲ್ಲರ ಮನೆಯಲ್ಲಿಯೂ ಒಂದೊಂದು ಲಿಂಗವಿರುತ್ತದೆ. ಅದೊಂದು ಲಿಂಗವೇ ಎಲ್ಲರಿಗೂ ಲಿಂಗ. ಅದಕ್ಕೆ ಲಿಂಗವಂತರ ಲಿಂಗದಂತೆ ಕಂತೆಯನ್ನು ಧರಿಸಿವೆ. ಲಿಂಗದ ಆಕೃತಿಯನ್ನು ಬೆಳ್ಳಿಯ ಕರಡಿಗೆಯಲ್ಲಿ ಇರಿಸಿರುತ್ತಾರೆ. ಇದನ್ನು ಯಾರೂ ಯಾವಾಗಲೂ ಧರಿಸುವದಿಲ್ಲ. ಮದುವೆಯ ಸಮಯದಲ್ಲಿ ಮಾತ್ರ ವರನ ಕೊರಳಿಗೆ ಹಾಕುತ್ತಾರೆ. ಅದಿಲ್ಲದೆ ಮದುವೆಯು ನಡೆಯುವದೇ ಇಲ್ಲ. ಲಿಂಗ ದೇವನು ಭದ್ರವಾದ ಪೆಟ್ಟಿಗೆಯಲ್ಲಿಯೇ ಉಳಿದ ಸಮಯವನ್ನೆಲ್ಲ ಕಳೆಯಬೇಕು. ಮೇಲಾಗಿ ಭದ್ರವಾದ ಬೀಗ ಪೂಜೆಯ ಸಮಯದಲ್ಲಾದರು ಹೊರಗೆ ಬಂದ ಸ್ವೀಕರಿಸುವ ಭಾಗ್ಯ ಲಿಂಗದೇವನಿಗಿದೆಯೇ? ಇಲ್ಲ. ಪೆಟ್ಟಿಗೆಯ ಮೇಲೆಯೇ ಪೂಜೆ ಪುರಸ್ಕಾರ ನಮಸ್ಕಾರಗಳಾಗಬೇಕು.

ಇವರಿಗೆ ವೀರಶೈವ ಗುರುಗಳೇ ಗುರುಗಳು. ಮದುವೆ ದಾನ ಧರ್ಮ ವಿಶೇಷ ಕಾರ್ಯಗಳಲ್ಲಿ ಗುರುಗಳನ್ನು ಬರಮಾಡಿಕೊಂಡು ವೀರಶೈವ ಸಾಂಪ್ರದಾಯದಂತೆ ಕಾರ್ಯವನ್ನು ನೆರವೇರಿಸಿಕೊಳ್ಳುತ್ತಾರೆ. ಗುರುಗಳನ್ನು ಪೂಜಿಸಿ ಪಾದೋದಕ ಪ್ರಸಾದಗಳನ್ನು ತೆಗೆದುಕೊಳ್ಳುತ್ತಾರೆ. ಕಾಲವಾದ ಸಮಯದಲ್ಲಿ ಇವರೆ ಬಂದು ಅಂತ್ಯ ಕ್ರಿಯೆಯನ್ನು ಪೂರೈಸಬೇಕು. ಅವರ ಲೆಕ್ಕ ಪತ್ರಗಳ ಆರಂಭದಲ್ಲಿ "ಶಿವಾಯ ನಮಃ" ಎಂಬ ಮಂಗಲ ಸೂಚಕ ಮಂತ್ರವನ್ನು ಬರೆದುಕೊಳ್ಳುವ ಪದ್ಧತಿಯಿದೆ. ರಿಕಾರ್ಡುಗಳಲ್ಲಿಯೂ, ಸರಕಾರಿಯ ವ್ಯವಹಾರದಲ್ಲಿಯೂ 'ಶಿವಭಕ್ತವಕ್ಕಲಿಹರ್' ಎಂಬ ಶಬ್ದವನ್ನು ಎಂದಿನಿಂದಲೂ ಬಳಸುತ್ತ ಬಂದಿದ್ದಾರೆ

ತೆಲುಗು, ತಮಿಳು ನಾಡುಗಳಲ್ಲಿ ಲಿಂಗಧಾರಿಗಳಾದ 'ಶಿವಭಕ ವಕ್ಕಲಿಹರ್' ಎಂದು ಹೇಳಿಕೊಳ್ಳುವ ಪಂಗಡವಿದೆ ಎಂದು ಕೇಳುತ್ತೇವೆ.

ಅವರೂ ಶಾಖಾಹಾರಿಗಳಾಗಿ ವೀರಶೈವರ ಆಚಾರದಂತೆ ನಡೆನುಡಿ ಉಳ್ಳವರಾಗಿರುವಂತೆ ಕಾಣುತ್ತದೆ.

ಇವರೆಲ್ಲರು ವಿಶೇಷವಾಗಿ ಮೊದಲು ಮೈಸೂರು ಪ್ರಾಂತವಾಸಿಗಳೆಂದು ಗೊತ್ತಾಗುತ್ತದೆ. ಮೈಸೂರಿನ ಮೇಲೆ ಮಹಮ್ಮದೀಯರು ಪ್ರಬಲದಾಳಿ ಇಟ್ಟಾಗ ರಾಜ್ಯಭಾರ ನಡೆಯಿಸುವಾಗ ಹಿಂದುಗಳು ತಮಗೆ ಬಂದೊದಗಿದ ತೊಡಕು ತೊಂದರೆಗಳಿಂದ ತಾಳಲಾರದೆ ಬಾಳಲಾರದೆ ದಿಕ್ಕೋರಿದತ್ತ ಧಾವಿಸಿದಂತೆ ತೋರುತ್ತದೆ.

ಆ ದಶೆಯು ವೀರಶೈವ ಜನಾಂಗಕ್ಕೆ ತಪ್ಪಲಿಲ್ಲ. ಆಗ ವೀರಶೈವ ಜನಾಂಗವು ವಿಶೇಷ ನೊಂದಂತೆ, ಬೆಂದಂತೆ, ಕಂದಿದಂತೆ ಕುಂದಿದಂತಾಗಿರಬೇಕು. ತಮ್ಮ ಮಾನವನ್ನು, ಮತವನ್ನು, ಪ್ರಾಣವನ್ನು, ಉಳಿಸಿಕೊಳ್ಳಲು ನುಸುಳಿಕೊಂಡು ಕಂಡ ಕಂಡೆಡೆಗೆ ಪಲ್ಲಟವಾಗಿರಬೇಕು. ತಮಿಳುನಾಡು ಶಿವಭಕ್ತಿಯ ಉಗಮಸ್ಥಾನ, ಶಿವಭಕ್ತರಬೀಡು, ನಾಡೆಂದು ಬಗೆದು ಬಹಳ ಶಿವಭಕ್ತರು ತಮಿಳು ನಾಡನ್ನೆ ಹೊಕ್ಕಿರಬೇಕು.

ಕನ್ನಡ ನಾಡನ್ನು ಬಿಟ್ಟು ಪರಪ್ರಾಂತದಲ್ಲಿ ನೆಲೆಯಾಗಿ ನಿಲ್ಲಲು ಆ ಪ್ರಾಂತದ ದೇಶ ಭಾಷೆಗಳನ್ನು ಅನುಸರಿಸಬೇಕಲ್ಲವೆ! ಅನುಕರಿಸಬೇಕಲ್ಲವೆ! ಮೇಲಾಗಿ ಬಹಳ ದಿನಗಳಿಂದ ವೀರಶೈವರ ಸಂಪರ್ಕಯಿಲ್ಲದಿರುವಾಗ, ಗುರುಗಳ ಬೋಧೆ ದೊರೆಯದಿರುವಾಗ, ತಮ್ಮ ತತ್ವ ಸಂಸ್ಕೃತಿಗಳನ್ನು ಮರೆತಿರಲು ಸಾಕು. ‘ಕಾಯಕವೇ ಕೈಲಾಸ’ ಎಂದು ಹೇಳುವ ವೀರಶೈವರು ಯಾವದಾದರೊಂದು ಕಾಯಕವನ್ನೆಸಗಲೇಬೇಕಲ್ಲವೇ? ಅಲ್ಲಲ್ಲಿ ನೆಲೆಯಾಗಿ ನಿಂತವರು ಆ ಪ್ರಾಂತ ಭಾಷೆಯಲ್ಲಿಯೇ ತಮ್ಮ ಕಾಯಕದ ಹೆಸರನ್ನು ಹೆಸರಿಸುವದು ಸಹಜವಾದ ಸಂಗತಿ.

ನಮ್ಮ ನೆರೆ ಹೊರೆಯ ಪ್ರಾಂತಗಳನ್ನು ಹೊಕ್ಕು ಕೊಂಚ ಸಂಶೋಧನ ದೃಷ್ಟಿಯಿಂದ ಕಂಡರೆ ವೀರಶೈವ ಜನಾಂಗವು ಯಾವ ಸ್ಥಿತಿಯಲ್ಲಿದೆ, ಹೇಗೆ ಕಳೆಗುಂದಿದೆ, ಕಳೆಗುಂದುತ್ತಲಿದೆ, ಹೇಗೆ ಕರಗಿದೆ, ಕರಗುತ್ತಲಿದೆ, ಮುಂತಾದ ಸಂಗತಿಗಳು ನಿಚ್ಚಳವಾಗಿ ತಿಳಿಯುತ್ತದೆ, ಹೊಳೆಯುತ್ತದೆ. ಇದೆಲ್ಲವನ್ನು ಕಂಡರೆ ವೀರಶೈವ ಜನಾಂಗವು ಲಂ ಲಕ್ಷವಿತ್ತೆಂದು ಸಂಶೋಧಕರು ಹೇಳುವ ಸಂಖ್ಯೆಯಿಂದ ಇನ್ನೂ ಮಿಗಿಲಾಗಿದ್ದಿರಬೇಕಲ್ಲವೆ? ಎಂದು ಸಂದೇಹವಾಗುತ್ತದೆ.

ವೀರಶೈವ ಜನಾಂಗವು ಅಪಾರವಾದ ಅವನತಿಯ ಅವಸ್ಥೆಗೆ ಇಳಿದಿರಬೇಕಾಗಿದ್ದರೆ, ಇಳಿಯುತ್ತಲೂ ಇರಬೇಕಾಗಿದ್ದರೆ, ವೀರಶೈವ ಗುರು ಜಂಗಮರ ಗುರುತರವಾದ ಕರ್ತವ್ಯಲೋಪದೋಷ, ವೀರಶೈವ ಮಹಾಸಭೆಯವರ ಅನಾದರ, ಆಲಸ್ಯ, ಅನೈಕ್ಯಮತ್ಯ, ಸಮಾಜ ಮುಖಂಡರ ಮರವೆಗಳಿಂದೇ ಹೇಳಬೇಕು.

ಕನ್ನಡನಾಡಿನ ಅಕ್ಕ ಪಕ್ಕದ ತೆಲುಗು, ತಮಿಳು, ಕೊಡಗು, ಮಹಾರಾಷ್ಟ್ರ, ನೈಜಾಮ ಪ್ರಾಂತಗಳನ್ನು ಸುತ್ತಬೇಕು. ಅಲ್ಲಿಯ ವೀರಶೈವರ ಸ್ಥಿತಿಗತಿಯನ್ನು, ರೀತಿ ನೀತಿಯನ್ನು ಲಕ್ಷಿಸಬೇಕು. ಅವರ ಕನ್ನಡದ ಮಾತನ್ನು, ಮತವನ್ನು, ತತ್ವವನ್ನು ಸಂಸ್ಕೃತಿಯನ್ನು ಉಳಿಸುವ, ಬಳಸುವ, ಬೆಳೆಸುವ, ಬೆಳಕಿಗೆ ತರುವ, ಉದಾತ್ತ ಉಪಾಯದತ್ತ ಎಲ್ಲರು ಮನಸ್ಸು ಮಾಡಬೇಕು. ಎಲ್ಲರು ಒಂದಾಗಿ ಒಮ್ಮಯ್ಯಾಗಿ ಒಂದು ಸುವ್ಯವಸ್ಥಿತ ಕಾರ್ಯಕ್ಕೆ ಬರಬೇಕೆಂಬ ನನ್ನ ಕೋರಿಕೆ, ಹಾರೈಕೆ.

ಈಗ ತಮಿಳು ನಾಡಿನ ‘ಶಿವಭಕ್ತ ವಕ್ಕಲಿಹರ್’ ಎಂಬ ಪಂಗಡದವರು ಶಿವದೀಕ್ಷೆಯನ್ನು ಹೊಂದಬೇಕು. ವೀರಶೈವದ ತತ್ವ ಸಂಸ್ಕೃತಿಗಳನ್ನು ತಿಳಿಯಬೇಕು. ನಿಜ ವೀರಶೈವರಾಗಬೇಕೆಂದು ಬಯಸುತ್ತಾರೆ. ಸಮಾಜದ ಗುರುಗಳ ಆಗಮನವನ್ನು ನಿರೀಕ್ಷಿಸುತ್ತಲೂ ಇದ್ದಾರೆ.

# ಶರಣರ ಸಂದೇಶ.

(ಶ್ರೀಯುತ ಎನ್. ರಾಚೋಟಿಯ್ಯ-ಕಾನಕಾನಹಳ್ಳಿ)

ಧಾರುಣಿಯು ಸುಜನರತಿ ವರಪುರಾತನ ಶರಣ
ಸಂದೇಶವನು ಕಾದು ಕಾತರಿಸರು,
ಕಾತರಿಪ ಜನಗಣದ ಮನದುಲಿವ ನಾಲಿಸುತ
ಶರಣಜನಹಿತಬಂಧು ಬೆಳಗುತಿಹನು ॥೧॥

ಕೃತ್ತಿವಾಸನ ಪುಣ್ಯಚರಿತರಾದ ಪ್ರಮಥರತ್ತ
ತಿರುಗಿಪರೇನು ಜಗದ ಜನರು?
ಕತ್ತಲೆಯ ಕಳೆಯುದಲೆ ಕರ್ತೃವನು ಕರದೊ
ಳಗದೆತ್ತ ಪೂಜಿಪರದನು ತಿಳಿಯದಿಹೆನು ॥೨॥

ಅಂಗಗುಣವವರಲ್ಲಿ ತುಂಬಿ ತುಳು
ಕುತಲಿರಲು ಲಿಂಗವವರಂಗದೊಳಗೆಲ್ಲಿರ್ಪುದು?
ಮಂಗಮನುಜರ ನೋಡಿ ಲಿಂಗದೇಹಿ
ಗಳೆಂದು ಸಂಗಸಮರಸಕೆನ್ನ ಮನವೆಳಸದು ॥೩॥

ಆರು ಭ್ರಮೆಗಳಲಳಲಿ ಬಳಲಿ ಬೆಂಡಾ
ಗುತಲಿ ಏಳು ವ್ಯಸನಗಳೊಳಗೆ ಉರುಳುರುಳಿ ತಾವು
ಮೇಲೆನಿಪ ಗುರುರೇವಣಾರಾಧ್ಯ ನೆನಿಪವಗೆ
ಈ ಮಹಿಯ ಹುಲು ಮನುಜರವರು ಸರಿಯೆ? ॥೪॥

ಜಾತಿಸೂತಕವಿರಲು ಆತ ತಾ ಗುರುವಹನೆ
ಮಾತುಮಾತಿಗೆ ನೋಡೆ ತೋರ್ಪುದದು ತಾನೆ
ನೀತಿ ಶೂನ್ಯತೆಯಿಂದ ಪಾತಕವ ಗಳಿಸುತಿಹ
ಪಾಪಾತ್ಮರಿಗದುಂಟೆ ವಿಮಲ ಬಕುತಿ? ॥೫॥

ಮಂಡೆ ಬೋಳಾದವರಪಾರ ವಿರುತಿಹರೆಂದು
ಕಂಡು ನಂಬುವದೆಂತು ಕಡುಕಷ್ಟವಮಮಾ!

ಕಂಡು ನಂಬಲುಬೇಕು ಕಡುವಿರಕ್ತಿಯೊಳಿಪ್ಪ
ಖಂಡ ಮೂರುತಿ ನಮ್ಮ ಪ್ರಭುವರ್ಯನ ॥೬॥

ಶರಣರನುಭಾವವನು ಜಗದಿ ಪಸರಿಸು
ತಿರುವ ವಚನಶಾಸ್ತ್ರಪಿತಾಮಹನು ಎನಿಸಿ
ನಡೆನುಡಿಯೊಳೊಂದಾದ ಹಳಕಟ್ಟಿ ವಿಬುಧ ವರ
ರಚಿಸಿಹರು ಶರಣರನುಭವದ ಮಂಟಪವ ॥೭॥

ಅದನೋಡಿ ನಾವಿನ್ನು ಮುದದಿಂದ ಸಾರಿಹೆವು
ಸದು ಹೃದಯ ಶರಣರಾ ಅನುಭಾವಕೆ
ಎಡರೇನು ಬಂದೊಡೆಯು ಅದ ನೀಗುತಿರ್ಪನು
ಸದುಚನ್ನಸಂಗನಾ ಬಸವಣ್ಣನು. ॥೮॥

ಭಕ್ತನೇ ಮೊದಲಿಗನು ಭಕ್ತನೇ ಗುರುವಹನು
ಭಕ್ತನೇ ಶಕ್ತನಹ ಕಡೆ ಜಂಗಮು,
ಬಳುತಿಯಾ ಖನಿಯಾಗಿ ಬೆಳಕಿನಾ ಮಣಿ
ಯಾಗಿ ಚಿನುಮಯಾತ್ಮಕನೊಡನೆ ಕೂಡಿ ಮೆರೆವ ॥೯॥

ಅಂದಿನ ಶರಣರಂತಿಂದಿನಾ ಭಕ್ತರೂ
ಅನುಭಾವದೊಳು ಕೂಡಿ ಮನವ ನಿಲಿಸಿ,
ಲಿಂಗ ದೇಹಿಯು ಚನ್ನಸಂಗನಾ ಬಸವಣ್ಣ
ನಂಘ್ರಿಕಮಲವ ನಂಬಿ ನೆನೆದು ಬದುಕಿ, ॥೧೦॥

ವರಪುರೀ ರಾಚೂಟಿ ಪ್ರಭುವರ್ಯನೊಳು
ಬೆರಸಿ, ಗುರುಲಿಂಗಜಂಗಮದ ರೂಪು ತಾವಾಗಿ,
ಜಗದ ಜೀವರು ಶರಣ ಮಾರ್ಗದನು
ಸರಿಯುತಲಿ ಪರಮನಾ ನಿರ್ಭಯಲ ಗತಿಪಡೆಯಲಿ ॥೧೧॥

---

# ಶಿವಶರಣರ ಸದಾಚಾರ ಸದ್ಭಕ್ತಿಗಳು.

( ಲೇಖಕ:— ಶಿವಮೂರ್ತಿ )



'ಸದಾಚಾರ ಸದ್ಭಕ್ತಿಯಿಲ್ಲದವರ ನಾನೊಲ್ಲೆನಯ್ಯ. ಅವರ ಆರಾಧನೆ ದಂಡ. ನಿಚ್ಚನಿಚ್ಚ ಪ್ರಾಯಶ್ಚಿತ್ತರ ನಾನೊಲ್ಲೆನಯ್ಯ ಕೂಡಲ ಸಂಗಮದೇವಾ ಭೂವಿಭಾಂಕರ' ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. ಶಿವಶರಣರು ಲೌಕಿಕ ಪಾರಮಾರ್ಥಗಳನ್ನು ಸುಗಮವಾಗಿ ಸಾಗಿಸಿಕೊಂಡು ಹೋಗುವ ಕುಶಲರು. ಲೌಕಿಕ ವ್ಯವಹಾರದಲ್ಲಿ ನೀತಿಯನ್ನೂ ಪಾರಮಾರ್ಥ ಸಾಧನೆಯಲ್ಲಿ ಭಕ್ತಿ ಮಾರ್ಗವನ್ನೂ ಅವಲಂಬಿಸಿ ತಾವು ಸುಖ ಶಾಂತಿಯನ್ನು ಹೊಂದುವುದಲ್ಲದೆ ಜನತೆಯನ್ನೂ ಉದ್ಧಾರ ಮಾಡಿದರು. ಮನುಷ್ಯನು ಲೌಕಿಕದಲ್ಲಿ ಸದಾಚಾರ ಸಂಪನ್ನನಾಗಿದ್ದು ದೇವರಲ್ಲಿ ಭಕ್ತಿ ಇಲ್ಲದಿದ್ದರೆ ನಿಷ್ಪ್ರಯೋಜನ. ಅಂಥವನಲ್ಲಿ ದಿವ್ಯವಾದ ತೇಜಸ್ಸೂ ಅಘಟಿತ ಘಟನಾ ಸಾಮರ್ಥ್ಯವೂ ಉಂಟಾಗಲಾರವು. ಮನುಷ್ಯನು ಒಳ್ಳೇ ಭಕ್ತಿವಂತನಾಗಿದ್ದುಕೊಂಡು ನೀತಿಭ್ರಷ್ಟನಾಗಿ ನಡೆದರೂ ಸಾಗದು. ಜಗತ್ತು ಅನಾಚಾರಿಗಳನ್ನು ದೂಷಿಸುವದು ಮತ್ತು ಹಿಂಸಿಸುವದು. ಲೌಕಿಕವನ್ನು ಬಿಟ್ಟು ಪಾರಮಾರ್ಥವಿಲ್ಲ. ನೀತಿಯನ್ನು ಬಿಟ್ಟು ಭಕ್ತಿಯಿಲ್ಲ. ಆದುದರಿಂದ ಮನುಷ್ಯನಿಗೆ ಲೌಕಿಕ ಪಾರಮಾರ್ಥ ಸಾಧನೆಗಾಗಿ ನೀತಿ ಭಕ್ತಿಗಳು ಅತ್ಯಾವಶ್ಯಕವಾಗಿ ಬೇಕು.

ನೀತಿ ಭಕ್ತಿಗಳು ಒಂದು ನಾಣ್ಯದ ಎರಡು ಮಗ್ಗಲುಗಳಿದ್ದಂತೆ. ಒಂದನ್ನು ಬಿಟ್ಟು ಒಂದು ನಡೆಯುವದಿಲ್ಲ. ನಾಸ್ತಿಕನು ಬೇಕಾದಷ್ಟು ದಾನ ಧರ್ಮ ಪರೋಪಕಾರ ಮುಂತಾದ ಸದಾಚಾರಗಳನ್ನು ಆಚರಿಸಬಹುದು. ಪರಸ್ತ್ರೀ ಪರಧನಗಳ ಆಶೆಯಿಂದ ದೂರವಾಗಿರಬಹುದು. ಒಳ್ಳೆ ಆಚಾರವಂತನೆಂದು ಹೆಸರಾಗಿರಬಹುದು. ಆದರೆ ಜಗನ್ನಿಯಾಮಕನಾದ ಪರಮಾತ್ಮನ ಅಸ್ತಿತ್ವವನ್ನು ಅವನು ಮನ್ನಿಸದಿದ್ದರೆ ಆ ಪರವಸ್ತುವಿನ ಅನಂತ ಉಪಕಾರಗಳನ್ನು ಅವನು ಸ್ಮರಿಸದಿದ್ದರೆ ಅವನ ಜನ್ಮ ವ್ಯರ್ಥ.

ಸರ್ವ ಶಕ್ತಿದಾಯಕನು ಪರಮಾತ್ಮನೆಂದು ಭಾವಿಸದೆ ಯಾರು ಕೇವಲ ತಮ್ಮ ಶಾರೀರಕ ಬೌದ್ಧಿಕ. ನೈತಿಕ ಶಕ್ತಿಗಳ ಮೇಲೆ ಕೈಯ್ಯೂರಿ ನಿಲ್ಲುವರೋ ಅವರು ಒಂದು ವೇಳೆ ಜಯಶಾಲಿಗಳಾದರೂ ಮಹಿಮಾ ಶಾಲಿಗಳಾಗಲಾರರು. ಈ ವಿಷಯದಲ್ಲಿ ಸ್ವಾಮಿ ರಾಮಕೃಷ್ಣರು ಇಬ್ಬರು ಜಟ್ಟಿಗಳ ಒಂದು ಸಣ್ಣ ದೃಷ್ಟಾಂತವನ್ನು ಕೊಟ್ಟಿದ್ದಾರೆ. ಒಬ್ಬನು ದೇವರಲ್ಲಿ ಸ್ವಲ್ಪ ಭಕ್ತಿಯಿಲ್ಲದೆ ಪುಷ್ಟವಾದ ಆಹಾರವನ್ನು ತಿಂದು ಚೆನ್ನಾಗಿ ಅಂಗಸಾಧನೆಮಾಡಿ ಶರೀರವನ್ನು ಕೋಣನಂತೆ ಕೊಬ್ಬಿಸಿದ್ದನು. ಇನ್ನೊಬ್ಬನು ಪರಮಾತ್ಮನಲ್ಲಿ ಭಕ್ತಿಯನ್ನಿರಿಸಿ ಸಾದಾ ಅನ್ನವನ್ನುಂಡು ತಕ್ಕಮಟ್ಟಿಗೆ ಅಂಗಸಾಧನೆ ಮಾಡಿದ್ದನು. ಒಮ್ಮೆ ಇವರಿಬ್ಬರಿಗೂ ಆಖಾಡದಲ್ಲಿ ಕುಸ್ತಿಯಾಗುವ ಪ್ರಸಂಗ ಬರಲು ನೆರೆದ ಜನರು ಮೊದಲನೆಯವನು ಎರಡನೆಯವನನ್ನು ಸಹಜವಾಗಿ ಕೆಡಹುವನೆಂದು ತರ್ಕಿಸಿದರು. ಆದರೆ ಕೆಲವು ನಿಮಿಷಗಳಲ್ಲಿ ದೈವೀ ಶಕ್ತಿಯುಳ್ಳ ೨ನೇ ಜಟ್ಟಿಯು ಮೊದಲನೆಯವನನ್ನು ನೆಲಕ್ಕುರುಳಿಸಲು ಎಲ್ಲರೂ ಆಶ್ಚರ್ಯಚಕಿತರಾದರು. ತಾತ್ಪರ್ಯವಿಷ್ಟೇ. ಯಾವನು ದೇವರಲ್ಲಿ ವಿಶ್ವಾಸವಿಡದೆ ಕೇವಲ ತನ್ನ ಶರೀರದ ಮೇಲಷ್ಟೇ ವಿಶ್ವಾಸವಿಡುವನೋ ಅವನಿಗೆ ಎಂಥ ಶಕ್ತಿಯಿದ್ದರೂ ವ್ಯರ್ಥ. ಸಾಮಾನ್ಯ ಶಕ್ತಿಯುಳ್ಳವರು ಕೂಡ ದೇವರಲ್ಲಿ ಶ್ರದ್ಧೆಯಿಟ್ಟಿದ್ದಾದರೆ ಅವರಲ್ಲಿಯೂ ಹೆಚ್ಚಿನ ಶಕ್ತಿಯುಂಟಾಗುವದೆಂಬದು ನಿಜ.

ಇದೇ ಮೇರೆಗೆ ದೇವಭಕ್ತಿ ಶೂನ್ಯರೂ ವಿದ್ಯಾಗರ್ವಿಷ್ಠರೂ ಆದ ಅನೇಕ ದಿಗ್ವಿಜಯ ಪಂಡಿತರು ತಮ್ಮ ವಿಜಯ ದುಂದುಭಿಯನ್ನು ಮೆರೆಸುತ್ತ ಸಂಚರಿಸಿದರೂ ಅಕಸ್ಮಾತ್ ದೈವಭಕ್ತಿಯುಳ್ಳ ಸಾಮಾನ್ಯ ಜನರಿಂದ ಈ ಗರ್ವಿಷ್ಠ ಪಂಡಿತರು ಸೋಲಿಸಲ್ಪಟ್ಟ ಎಷ್ಟೋ ಉದಾಹರಣೆಗಳು ನಮ್ಮ ನಿದರ್ಶನಕ್ಕೆ ಬರುತ್ತವೆ. ಅದರಂತೆಯೇ ದೇವರ ಬೆಂಬಲವಿಲ್ಲದೆ ಕೇವಲ ತನ್ನ ನೈತಿಕ ಶಕ್ತಿಯಿಂದಲೇ ಹೊಡೆದಾಡುವ ಮನುಷ್ಯನಿಗೆ ವಿಪತ್ತು ಸಂಕಟಗಳೊದಗಿದರೆ ಆತನು ಮುಗ್ಗರಿಸಿ ಬೀಳುವ ಸಂಭವವುಂಟು. ಆದರೆ ದೇವಭಕ್ತನಿಗೆ ಚ್ಯುತಿಯಿಲ್ಲ. ನೈತಿಕ ಬಲಶಾಲಿಗೆ ಭಕ್ತಿಯ ಬೆಂಬಲವುಂಟಾದರೆ ಬಂಗಾರಕ್ಕೆ ಸುಗಂಧವು ಕೂಡಿದಂತಾಗುವದು. ನಮ್ಮ ಶಿವಶರಣ ನೀತಿವಂತರಿದ್ದಷ್ಟೇ ಭಕ್ತಿವಂತರೂ ಆಗಿದ್ದರು.

ಮನುಷ್ಯನು ದೇವರಲ್ಲಿ ಭಕ್ತಿಯುಳ್ಳವನಿದ್ದು ನೀತಿಭ್ರಷ್ಟನಾಗಿದ್ದರೆ ಜನರು ಮೆಚ್ಚರು. ದೇವರೂ ಮೆಚ್ಚನು. "ಲಿಂಗವುಟ್ಟಿದ ಕೈ

ವಿಶಾಲು" ಎಂದು ಶರಣರು ಹೇಳಿರುವದರಿಂದ ಲಿಂಗಾಂಗಿಯ ಆಚಾರವು ಪರಿಶುದ್ಧವಾಗಿರಲೇಬೇಕು. 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ಪ ಲಿಂಗ ಘಟಸರ್ಪ ನೋಡಾ' ಎಂದು ಹೇಳುವುದರಿಂದ ನಡೆನುಡಿ ಶುದ್ಧವಿಲ್ಲದವರು ಎಷ್ಟು ಲಿಂಗಪೂಜೆ ಮಾಡಿದರೂ ವ್ಯರ್ಥವೆಂದು ಸಿದ್ಧವಾಗುತ್ತದೆ. 'ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು ರೋಷ ಬಿಡದು ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ.' ಎಂಬ ನುಡಿಯಿಂದ ಸದಾಚಾರವಿಲ್ಲದ ಲಿಂಗ ಪೂಜೆಯು ನಿರರ್ಥಕವೆಂದು ಸ್ಪಷ್ಟವಾಗುತ್ತದೆ. 'ಅಂತರಂಗ ಶುದ್ಧವಿಲ್ಲದವರು ಬಹಿರಂಗದಲ್ಲಿ ಜನಮೆಚ್ಚು ಲಿಂಗಪೂಜೆ ಮಾಡುತ್ತಿದ್ದರೇನು? ಅದು ಲೋಕರಂಜನೆಯಲ್ಲದೆ ಶಿವಮೆಚ್ಚ. ಶರಣರು ಮೆಚ್ಚರು. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ' ಈ ವಚನದಲ್ಲಿ ಅಂತರಂಗ ಶುದ್ಧವಿಲ್ಲದೆ ಬಹಿರಂಗದಲ್ಲಿ ಜನರಂಜನೆಗಾಗಿ ಲಿಂಗಭಕ್ತಿಯನ್ನು ತೋರಿಸುವವರು ಶಿವಕೃಪೆಗೆ ಪಾತ್ರರಾಗುವದಿಲ್ಲವೆಂದು ಹೇಳಿದೆ. 'ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ. ಪಾಪಿ ಹೂವನೇರಿಸಿದರೆ ಮಸೆದಾಯುಧದ ಘಾಯ' ಎಂಬ ನುಡಿಯಿಂದ ಸದಾಚಾರಿಯಾಗದೆ ಸದ್ಭಕ್ತಿಯಿಂದೇನು ಪ್ರಯೋಜನವಿಲ್ಲೆಂದು ಸಿದ್ಧವಾಗುತ್ತದೆ. 'ಮೊಟ್ಟೆ ಮೊಟ್ಟೆ ಪುಷ್ಪ ಪತ್ರೆಯ ತಂದು ಒಟ್ಟೆ ಒಟ್ಟೆ ಪೂಜಿಸಿದೊಡೇನು? ಹುಸಿ ಕಳವು ಪರದಾರ ವ್ಯಾಪಾರದಲ್ಲಿ ಹಂದಾಡುವ ಮರುಳು ಬುದ್ಧಿಯ ದುರಾಚಾರಿಗಳಿಗೆ ದೂರವಾಗಿಪ್ಪನು ನೋಡಾ ನಮ್ಮ ಅಖಂಡೇಶ್ವರಾ.' ಎಂದು ಷಣ್ಮುಖಸ್ವಾಮಿಗಳು ಅಪ್ಪಣೆಕೊಡಿಸಿದ್ದಾರೆ. ಈ ವಚನದಲ್ಲಿ ಅನಾಚಾರಿಯಾಗಿದ್ದು ಲಿಂಗಪೂಜೆ ಮಾಡಿದರೆ ಶಿವನು ಮೆಚ್ಚಲಾರನೆಂದು ಹೇಳಿದೆ. ಆದುದರಿಂದ ಮನುಷ್ಯನಿಗೆ ನೀತಿಯೂ ಬೇಕು, ಭಕ್ತಿಯೂ ಬೇಕು.

ದೇವರೊಲ್ಮೆಗೆ ಬರೇ ಸದಾಚಾರವಷ್ಟೇ ಸಾಲದು. ಸದ್ಭಕ್ತಿಯೂ ಬೇಕು. 'ನಾದಪ್ರಿಯ ಶಿವನೆಂಬರು. ನಾದಪ್ರಿಯ ಶಿವನಲ್ಲವಯ್ಯಾ. ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯಾ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮನ ಶಿರಹೋಯಿತ್ತು. ನಾದಪ್ರಿಯನೂ ಅಲ್ಲ. ವೇದಪ್ರಿಯನೂ ಅಲ್ಲ.

ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.' ದೇವರನ್ನು ಮೆಚ್ಚಿಸಲು ಅನೇಕರು ಗಾನ, ನೃತ್ಯ, ಬಾಹ್ಯಪೂಜೆ, ತತ್ವನಿಷ್ಠೆ ಮುಂತಾದ ಸಾಧನೆಗಳನ್ನು ಪ್ರಯೋಗಿಸುವದುಂಟು. ಆದರೆ ಭಕ್ತಿಯೊಂದಿಲ್ಲದಿದ್ದರೆ ಅವೆಲ್ಲವೂ ವ್ಯರ್ಥವೇ.

ಭಕ್ತಿಯಲ್ಲಿ ಅಂಧಭಕ್ತಿ, ಡಾಂಭಿಕಭಕ್ತಿ, ಶುದ್ಧಭಕ್ತಿಯೆಂದು ಮೂರು ಪ್ರಕಾರಗಳುಂಟು ತನಗೆ ಏನೂ ತಿಳಿಯದೆ ಎರಡನೆಯವರು ಮಾಡುವ ಭಕ್ತಿಯನ್ನು ನೋಡಿ ತಾನೂ ಮೂಕ ಕುರಿಯಂತೆ ಅನುಕರಣ ಮಾಡುವದು ಅಂಧ ಭಕ್ತಿಯೆನಿಸುವದು. ಜನರ ಮೆಚ್ಚುಗೆಗಾಗಿ ಮಾಡುವ ಭಕ್ತಿಯು ಡಾಂಭಿಕ ಭಕ್ತಿಯು. ಆದರೆ ಪರಮಾತ್ಮನ ಅಸ್ತಿತ್ವದಲ್ಲಿ ಅಪಾರವಾದ ಶ್ರದ್ಧೆಯನ್ನಿಟ್ಟು ಅಂತರಂಗ ವೃತ್ತಿ ಆತನ ಕೃಪೆಗೆ ಹಂಬಲಿಸುವದೇ ಶುದ್ಧ ಭಕ್ತಿಯು. ಶಿವಶರಣರು ಅಂಧ ಭಕ್ತರಲ್ಲ, ಡಾಂಬಿಕ ಭಕ್ತರಲ್ಲ, ಶುದ್ಧಭಕ್ತರು. 'ಅರುಹ ಹಿಡಿದು ಕುರುಹ ಪೂಜಿಸಲೆಂದು ಇಷ್ಟವ ಕೊಟ್ಟರೆ ಆ ಅರುಹನ್ನೇ ಮರೆತು ಕುರುಹನ್ನು ಪೂಜಿಸುವ ಹೆಡ್ಡರ ನೋಡಾ' ಎಂಬ ವಚನವು ಜ್ಞಾನವಿಲ್ಲದೆ ಅಂಧ ಶ್ರದ್ಧೆಯಿಂದ ಮಾಡುವ ಇಷ್ಟಲಿಂಗ ಪೂಜೆಯು ನಿರರ್ಥಕವೆಂದು ಸಾರುತ್ತದೆ.

ಡಾಂಭಿಕ ಭಕ್ತಿಯ ವಿಷಯವಾಗಿ ಸರ್ಪಭೂಷಣ ಶಿವಯೋಗಿಗಳು ತಮ್ಮ ಒಂದು ಪದದಲ್ಲಿ ಹಾಡಿದ ಸಾರಾಂಶವೇನಂದರೆ ' ಬಾಹ್ಯದಲ್ಲಿ ಡಂಭವನ್ನು ಬಿಡು. ಮನಸ್ಸಿನಲ್ಲಿ ಶಂಭುವಿನ ಅಡಿಯನ್ನು ಹಿಡಿ. ಒಳಗೆ ವಂಚಿಸಿ ಹೊರಗೆ ನೀ ಕೀರ್ತಿಪಡೆದರೆ ಮರುಳೇ, ನಿನಗೆ ಶಿವನು ಒಲಿಯುವನೇ ? ಲೋಕದಲ್ಲಿ ಜನಮೆಚ್ಚು ನಡಕೊಂಡರೇನುಂಟು ? ಮನಮೆಚ್ಚು ನಡೆಕೊಂಬುವದೇ ಚಂದವು. ನಾವು ಒಳಗಿಂದೊಳಗೆ ಮಾಡುವ ಪಾಪಗಳನ್ನು ಜನರೇನು ಬಲ್ಲರು ? ನಮ್ಮ ಕಳ್ಳತನವು ನಮ್ಮ ಮನಸಿಗೆ ಅರಿಯದಿರುವುದೇ ? ಜನರು ನಿನ್ನನ್ನು ಮೆಚ್ಚಿದರೆ ನಿನಗೆ ಕೈಲಾಸ ದೊರಕುವದೇ ? ವಂಚನೆಯಿಂದ ಜನರಲ್ಲಿ ನೀನು ದೊಡ್ಡವನೆನಿಸಿಕೊಂಡರೆ ಅದು ಶಿವನಿಗೆ ಗುರುತಾಗಲಿಕ್ಕಿಲ್ಲವೇ ? ನಿನ್ನ ಮನಸ್ಸಿನಲ್ಲಿಯೇ ಶಿವನು ಮನೆಮಾಡಿಕೊಂಡಿರುವನು. ಮನಮೆಚ್ಚಿ ನಡೆದರೆ ಶಿವನು ಮೆಚ್ಚುವನು. ಮನಕಂಜಿ ನಡೆಯದೆ ಜನಕಂಜಿ ನಡೆದರೆ ಮನದೊಡೆಯನಾದ ಪರಮಾತ್ಮನು ದೂರವಾಗಿಪ್ಪನು ' ಇದರಿಂದ ಮನ

ರಂಜನೆಗಲ್ಲದೆ ಜನರಂಜನೆಗಾಗಿ ಮಾಡುವ ಡಾಂಭಿಕ ಭಕ್ತಿಯು ನಿರರ್ಥಕವೆಂದು ಸಿದ್ಧವಾಗುವದಿಲ್ಲವೇ ?

ನಿಜವಾದ ಭಕ್ತಿಯು ಎಂಥಹದಿರಬೇಕೆಂಬ ವಿಷಯವಾಗಿ ಶಿವಶರಣರು ಒಳ್ಳೇ ಸುಗಮವಾಗಿ ಹೇಳಿದ್ದಾರೆ. ಅಂಥ ಸುಂದರವಾದ ಒಂದೆರಡು ವಚನಗಳನ್ನು ಇದರಡಿಯಲ್ಲಿ ಹೇಳಬಯಸುತ್ತೇನೆ:—

ನಿಮ್ಮ ನೋಟವನಂತಸುಖ, ಕೂಟ ಪರಮ ಸುಖವಯ್ಯಾ. ಅಷ್ಟಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗಮದೇವಾ ನಿಮ್ಮ ನೋಡಿ ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಂಗಳು.

ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮದೇವಾ ನಿಮ್ಮ ಚರಣಕಮಲದೊಳು ನಾನು ತುಂಬಿ.

ಅಡಿಗಡಿಗೆ ಲಿಂಗವನಡರಿಯದರಿ ಕಂಗಳು ಕಡೆ ಗೋಡಿವರಿದವಯ್ಯಾ. ಎನ್ನಶ್ರುಜಲಂಗಳು ಆಲಿಗಲ್ಲ ರೂಹಿನಂತೆ. ತನು ಪುಲಕಿತವಾಗೆ ಅರಗಿನ ಪುತ್ಥಳಿಯಂತೆ. ಬೆವರು ಬಿಂದುಗಳೆಲ್ಲ ಭಕ್ತಿರಸದ್ರವವಯ್ಯಾ ಕೂಡಲಸಂಗಮದೇವಯ್ಯಾ ನಿಮ್ಮ ದರ್ಶನ ಸ್ಪರ್ಶನದಿಂದೆ ಮನವೊಲಿದು ನೆರೆವ ಭರವನಾನೆಂಬೆನಯ್ಯಾ.

ಮಜ್ಜನದ ಜರಿಕಿದಲ್ಲಿ ತನು ಕರಗದಿದ್ದೊಡೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದೊಡೆ ಕಂಗಳಶ್ರುಜಲಂಗಳು ಸುರಿಯದಿದ್ದೊಡೆ ನುಡಿವಲ್ಲಿ ಗದ್ಗದಂಗಳು ಹೊರಹೊಣ್ಮದಿದ್ದೊಡೆ ಕೂಡಲಸಂಗಮದೇವರ ಭಕ್ತಿಯ ಚಿಹ್ನವೇ ?

ಈ ವಚನಗಳು ನಿಜವಾದ ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿವೆ. ಶರಣರದು ನಿಜವಾದ ಭಕ್ತಿಯು. ಪತಿವ್ರತಾ ಶಿರೋಮಣಿಯಾದ ಸತಿಯು ಪತಿಯೊಡನೆ ರಮಿಸಿ ತಣಿವಂತೆ ಶರಣಸತಿಯು ಲಿಂಗಪತಿಯಲ್ಲಿ ಗುಪ್ತ ಭಕ್ತಿಯನ್ನಾಚರಿಸಿ ಸುಖಿಸುವಳು. ಶರಣರ ಭಕ್ತಿಯು ವ್ಯಕ್ತಿಗತವಾದುದು. ಸಾಮೂಹಿಕವಲ್ಲ ಶರಣರ ಭಕ್ತಿ ಭಿಕ್ಷೆಯನ್ನುಂಡು ಅನಂತ ಜೀವಿಗಳು ಸುಖಿಸಿದ್ದಾರೆ ಸುಖಿಸುತ್ತಲಿದ್ದಾರೆ. ಅವರ ಭಕ್ತಿ

ಮಾರ್ಗವನ್ನು ಅನೇಕ ಪಂಗಡಗಳು ಅನುಕರಿಸಿ ಈಗಲೂ ಶಾಂತಿಸುಖವನ್ನು ಪಡೆಯುತ್ತಲಿವೆ. ಶರಣರು ನೀತಿಯಲ್ಲಿಯೂ ಬಲ್ಲಿದರು. ಭಕ್ತಿಯಲ್ಲಿಯೂ ಬಲ್ಲಿದರು. ಉದಾತ್ತ ನೀತಿ ಭಕ್ತಿಗಳಿಂದ ಜಗತ್ತಿಗೇ ಮಾರ್ಗದರ್ಶಿಗಳು. ಅಂಥ ಸದಾಚಾರ ಸದ್ಭಕ್ತಿಗಳನ್ನು ಲಿಂಗಾಂಗಿಗಳು ಆಚರಿಸಿದ್ದಾದರೆ ವೀರಶೈವತ್ವದ ಬೆಳಕು ಹೊರಹೊಮ್ಮಲು ವಿಲಂಬವಾಗಬಹುದೇ ?

---

# ನೀತಿಯ ಮಾತುಗಳು.

(ಲೇಖಕ:— ಜಿ. ಎಸ್. ಕನ್ನೂರ ಮು. ವಿಜಾಪುರ.)

೧. ಅನ್ಯರ ದೋಷಗಳನ್ನು ಹುಡುಕಿ ತೆಗೆಯುವದೆಂದರೆ ಆ ದೋಷಗಳಿಗೆ ತನ್ನ ಮನೆಗೆ ಬರಲಿಕ್ಕೆ ನಿಮಂತ್ರಣ ಕೊಟ್ಟಂತೆ ಇರುತ್ತದೆ. ಯಾವ ಹೀನ ಗುಣಕ್ಕಾಗಿ ಅನ್ಯರನ್ನು ನಿಂದಿಸುತ್ತೇವೆಯೋ ಅದೇ ದುರ್ಗುಣವನ್ನು ನಾವು ಸಂಗ್ರಹಿಸುವ ಉಪಾಯ ಮಾಡಹತ್ತಿರುವೆವೆಂಬ ಮಾತು ದುರ್ದೈವದಿಂದ ಯಾರ ಲಕ್ಷಕ್ಕೂ ಬರುವದಿಲ್ಲ.

೨. ಪರರ ದೋಷಗಳನ್ನು ಆಡುವದರಲ್ಲಿ ಮೊದಲು ತಾನು ದೋಷೋಚ್ಚರಣೆ ಮಾಡಬೇಕಾಗುತ್ತದೆ. ದೃಷ್ಟಾಂತಕ್ಕಾಗಿ ಹೆರವನಿಗೆ ಜೋಡಿನಿಂದ ಹೊಡೆಯಬೇಕೆಂದರೆ ಮೊದಲು ತಾನು ಜೋಡನ್ನು ಕೈಯ್ಯಲ್ಲಿ ತಕ್ಕೊಳ್ಳಬೇಕಾಗುವದು.

೩. ಎರಡನೆಯವರು ಆಡಿದ ಹೀನ ಮಾತುಗಳನ್ನು ಅಥವಾ ಅನ್ಯರ ಹೀನ ವರ್ತನೆಯನ್ನು ಇನ್ನೊಬ್ಬರೆದುರಿಗೆ ಹೇಳುವದರಲ್ಲಿ ಹೇಳುವವನ ಪಾಲೂ ಇರುತ್ತದೆ. ದೋಷದ ನಿರೀಕ್ಷಣೆ ಹಾಗೂ ಉಚ್ಚರಣೆಗಳಿಂದ ಸುಖವೆನಿಸದ ಹೊರತು ಅವನು ಅದನ್ನು ಸಾದ್ಯಂತವಾಗಿ ನೋಡುವ ಹಾಗೂ ಹೇಳುವ ಗೊಡವೆಗೇ ಹೋಗುವದಿಲ್ಲ. ಸಾರಾಂಶ ಉಪೇಕ್ಷಿಸಿ ಬಿಡಬೇಕಾದ ಒಂದು ಸಂಗತಿಯ ನೆವವನ್ನು ಮುಂದು ಮಾಡಿ ಸಬಲ ವಿಷಯಗಳ ಆವಾರದಲ್ಲಿ ಸುಳಿದಾಡುವ ತನ್ನ ಹೀನ ಅಪೇಕ್ಷೆಯನ್ನು ತೀರಿಸಿಕೊಳ್ಳುತ್ತಾನೆ.

ಆದ್ದರಿಂದ ಸತ್ಯದ ಹೆಸರಿನಿಂದ ಇಲ್ಲವೆ ಸಭ್ಯತನದ ಸೋಗಿನಿಂದ ಈ ದುರ್ಗುಣಕ್ಕೆ ಆಹುತಿಯಾಗದಿರುವದು ಅವಶ್ಯವಿರುತ್ತದೆ.

೪. ಅನ್ಯರ ಟೀಕೆ ಮಾಡುವದರ ಉದ್ದೇಶವು ಪ್ರಾಮುಖ್ಯವಾಗಿ ತನ್ನಲ್ಲಿಯ ದೋಷಗಳ ಸಮರ್ಥನೆ ಮಾಡಿಕೊಳ್ಳುವದೇ ಇರುತ್ತದೆ. 'ನನ್ನಲ್ಲಿಯೂ ಆ ದೋಷವು ಇಲ್ಲವೆಂದಲ್ಲ' ಎಂದು ಪ್ರಾರಂಭಕ್ಕೆ ಒಪ್ಪಿಕೊಂಡಂತೆ ತೋರಿಸಿದರೂ ಅನ್ಯನಲ್ಲಿ ಅದು ಮಿತಿಮೀರಿದ ಪ್ರಮಾಣದಲ್ಲಿ ಇರುತ್ತದೆಂದೂ ಹಾಗೂ ತನ್ನಲ್ಲಿ ಕ್ಷಮ್ಯವಿರುತ್ತವೆಂದೂ ಹೇಳಿ ತಾನು ಒಳ್ಳೆಯವನೆಂದು ಸಿದ್ಧ ಮಾಡುವದರ ಕಡೆಗೆಯೇ ಅವನ ಮಾತಿನ ಒಲವು ಇರುತ್ತದೆ. ಅಲ್ಲದೆ ತನ್ನ ದೋಷವು ಉಪಕಾರಕವಿರುತ್ತದೆಂದು ಪೋಟಿಸು ಜೋಡಿಸಲಿಕ್ಕೂ ಅವನು ಮರೆಯುವದಿಲ್ಲ.

ನಿಂದೆಯನ್ನು ಕೇಳುವವನಲ್ಲಿ ಕೂಡ ಆ ನಿಂದಾಸ್ಪದ ದೋಷಗಳು ದೋಷ ರೂಪದಿಂದ ಇರುವದಿಲ್ಲವೆಂದು ಅವನು ಅನುವಾದಕ್ಕಾಗಿ ವಿಧಾನ ಮಾಡುತ್ತಾನೆ. ಸಾರಾಂಶ ತನ್ನ ಹಾಗೂ ಎದುರಿನವನ ದೋಷಗಳು ಪ್ರಸಂಗಕ್ಕೆ ತಕ್ಕ ಹಾಗೂ ಬಾಧೆರಹಿತ ದೋಷಗಳೆಂದೂ ಮೂರನೆಯವನವು ಮಾತ್ರ ಅವನ ದುಷ್ಟತನವೆಂದೂ ಇಬ್ಬರು ಮಾತನಾಡಿಕೊಳ್ಳುವದು ತಮ್ಮಲ್ಲಿಯ ದೋಷಗಳನ್ನು ವಜ್ರಲೇಪ ಮಾಡಿದಂತಾಗುವದಿಲ್ಲವೆ ?

೫. 'ನಾನು ಹೇಳುವ ಮಾತುಗಳು ನಿಮಗೆ ನಿಂದೆಯೆನಿಸಬಹುದು. ಆದರೆ ಇದ್ದ ಮಾತು ಇದ್ದಂತೆ ಆಡಿದರೆ ಅದು ನಿಂದೆಯಾಗುವದಿಲ್ಲ.' ಎಂದು ಪ್ರಸಕ್ತಿ ಮಾಡಿ ಅನ್ಯರ ದೋಷಗಳನ್ನು ಯಥೇಚ್ಛವಾಗಿ ಆಡಹತ್ತುವರು. 'ಬೇಕಾದರೆ ಇದನ್ನು ನಾನು ಅವನ ಮೋರೆಯ ಎದುರಿಗೆ ಸಹ ಹೇಳಲಿಕ್ಕೆ ಸಿದ್ಧನಿದ್ದೇನೆ.' ಎಂದು ಕೆಲವರು ನಿಂದೆಗೆ ತಮ್ಮದೇ ಪ್ರಶಸ್ತಿಪತ್ರ ಪಡಕೊಳ್ಳುತ್ತಾರೆ.

ಆದರೆ ನಿಜವಾಗಿ ಅನ್ಯರಲ್ಲಿ ಇದ್ದ ದೋಷಗಳನ್ನು ಆಡುವದೇ ನಿಂದೆ ಇರುತ್ತದೆ. ಇಲ್ಲದ ದೋಷ ಹೊರಿಸಿ ಅವರನ್ನು ಹಳಿಯುವದಂತೂ ಅತ್ಯಂತ ಗರ್ಹ್ಯವಾದ ದೂಷಣೆಯಾಗುತ್ತದೆ. ದೋಷದೃಷ್ಟಿ ಹಾಗೂ ದೋಷೋಚ್ಚಾರಣೆಗಳಿಂದ ತನಗೇ ಹಾನಿಯಿರುತ್ತದೆ.

# ಮೋಕ್ಷದ ಸ್ವರೂಪ ಮತ್ತು ಅದನ್ನು ಹೊಂದುವ ಸುಲಭೋಪಾಯ.

(ಮೈಸೂರು ಡಿವೈನ್ ಲೈಫ್ ಸೊಸೈಟಿ ಪ್ರೆಸಿಡೆಂಟರಾದ ಶ್ರೀ. ಎಂ. ಎಲ್. ನಾಗಣ್ಣನವರಿಂದ.)

---

ಹುಟ್ಟುವುದು ಸಾಯುವುದು ಮುಂತಾದ ಸರ್ವ ದುಃಖಗಳಿಂದಲೂ ಬಿಡುಗಡೆ ಹೊಂದಿ ಶಿವಾನಂದ (ಅಂದರೆ ಬ್ರಹ್ಮಾನಂದ) ವನ್ನು ಹೊಂದುವುದಕ್ಕೆ ಮೋಕ್ಷವೆಂದು ಹೆಸರು. ಶಿವಾನಂದವನ್ನು ಇಷ್ಟೇ ಎಂದು ನಿರ್ಣಯಿಸಿ ತಿಳಿಯಬೇಕಾದರೆ ನಾವು ಮನುಷ್ಯಾನಂದದ ಸ್ವರೂಪವನ್ನು ಮೊದಲು ತಿಳಿಯಬೇಕು. ಒಬ್ಬನು ತಾನೇ ಭೂಮಂಡಲಕ್ಕೆಲ್ಲಾ ಚಕ್ರವರ್ತಿಯಾಗಿಯೂ, ಅವನಿಗೆ ಯಾವ ವಿಧವಾದ ರೋಗವೂ ಇಲ್ಲದೆ ಒಂದು ನೂರು ವರ್ಷಗಳ ವರೆಗೆ ಜೀವಿಸಿಯೂ, ಅವನು ಅಪೇಕ್ಷಿಸತಕ್ಕ ಎಲ್ಲ ವಿಷಯಗಳು ಅವನಿಗೆ ಪ್ರಾಪ್ತವಾಗಿ ಅವನಿಗೆ ಯಾವ ಚಿಂತೆ ಇಲ್ಲದೆಯೂ, ಅವನ ಜೀವಿತ ಕಾಲದಲ್ಲಿ ಅವನಿಗೆ ಪ್ರೀತಿಪಾತ್ರರಾದ ಹೆಂಡತಿ, ಮಕ್ಕಳು ಮುಂತಾದವರ ಮರಣದ ದುಃಖವನ್ನು ಹೊಂದದೆಯೂ ಇದ್ದರೆ ಇದಕ್ಕೆ ಮನುಷ್ಯಾನಂದವೆಂದು ಹೆಸರು. ಈ ಮನುಷ್ಯಾನಂದಕ್ಕಿಂತ ಮನುಷ್ಯಗಂಧರ್ವ, ದೇವಗಂಧರ್ವ, ಅಜಾನುದೇವತೆ, ಪಿತೃದೇವತೆ, ದೇವೇಂದ್ರ, ಬೃಹಸ್ಪತ್ಯಾಚಾರ್ಯ, ಸೃಷ್ಟಿಕರ್ತ ಬ್ರಹ್ಮ, ವಿಷ್ಣು ಮತ್ತು ರುದ್ರ ಇವರುಗಳ ಆನಂದವು ಒಬ್ಬರದಕ್ಕಿಂತ ಒಬ್ಬರದು ನೂರ್ಮಡಿ ಹೆಚ್ಚಾಗಿರುವದು. ಅಂದರೆ ಮನುಷ್ಯಾನಂದಕ್ಕಿಂತ ರುದ್ರನ ಆನಂದವು ಒಂಬೈನೂರು ಪಾಲು ಜಾಸ್ತಿಯಾಗಿರುತ್ತದೆ. ಈ ರುದ್ರನ ಆನಂದಕ್ಕಿಂತಲೂ ಶಿವನ ಆನಂದವು ಅಸಂಖ್ಯಾಕವಾಗಿ ಹೆಚ್ಚಾಗಿರುತ್ತದೆ.

ಇಂಥ ನಿರತಿಶಯವಾದ ಶಿವಾನಂದವು ನಮಗೆ ಲಭ್ಯವಾಗುವ ವಿಷಯದಲ್ಲಿ ನಾವು ಸಂದೇಹಪಡಬೇಕಾದುದಿಲ್ಲ. ಏತಕ್ಕೆಂದರೆ ತಂದೆಯಾದವನು ತನ್ನಲ್ಲಿ ನಿಜವಾದ ಭಕ್ತಿಯನ್ನಿಟ್ಟು ತನ್ನ ಆಜ್ಞಾನುಸಾರವಾಗಿ ನಡೆಯತಕ್ಕ ತನ್ನ ಮಗನಿಗೆ ತನ್ನ ಆಸ್ತಿಯನ್ನು ಸಂತೋಷದಿಂದ ಕೊಡುತ್ತಾನೆ. ಅದರಂತೆ ಸರ್ವ ಪ್ರಾಣಿಗಳಿಗೂ ತಂದೆಯಾಗಿರ

ತಕ್ಕ ಶಿವನು ತನ್ನಲ್ಲಿ ಯಾರು ಸಹಜವಾದ ಭಕ್ತಿಯನ್ನಿಟ್ಟು ತಾನು ಶಾಸ್ತ್ರರೂಪದಿಂದ ಮಾಡಿರತಕ್ಕ ಆಜ್ಞೆಗಳ ಪ್ರಕಾರ ನಡೆಯುತ್ತಾರೋ ಅವರಿಗೆ ತನ್ನ ಶಿವ ಪದವಿಯನ್ನು ಅಂದರೆ ಶಿವಾನಂದವನ್ನು ಬಹಳ ಸಂತೋಷದಿಂದ ಕೊಡುತ್ತಾನೆ ಆದರೆ ನಾವು ಹೆಂಡತಿ, ಮಕ್ಕಳು ಮತ್ತು ಐಶ್ವರ್ಯವನ್ನು ಪಡೆಯುವುದಕ್ಕಾಗಿ ಶಿವನನ್ನು ಪ್ರಾರ್ಥಿಸುವುದು ಭಕ್ತಿಯಲ್ಲ. ಭಕ್ತಿಯೆಂದರೆ ಪ್ರೀತಿ ವಿಶೇಷ. ಹೇಗೆಂದರೆ ನಾವು ನಮ್ಮ ಸಮಾನರಾಗಿರತಕ್ಕ ಸ್ನೇಹಿತರಲ್ಲಿ ಇಡತಕ್ಕ ಪ್ರೀತಿಗೆ ಸ್ನೇಹವೆಂತಲೂ, ಹೆಂಡತಿ ಮಕ್ಕಳಲ್ಲಿ ಇಡತಕ್ಕ ಪ್ರೀತಿಗೆ ಅನುರಾಗವೆಂತಲೂ ನಮ್ಮ ಸೇವಕರಲ್ಲಿ ನಾವು ಇಡತಕ್ಕ ಪ್ರೀತಿಗೆ ದಯೆಯೆಂತಲೂ ಹೆಸರು. ಇದರಂತೆ ಗುರು ಹಿರಿಯರಲ್ಲಿಯೂ, ಶಿವನಲ್ಲಿಯೂ, ಮಾತಾಪಿತೃಗಳಲ್ಲಿಯೂ, ನಾವು ಮಹತ್ವ ಬುದ್ಧಿಯೊಡನೆ (ಅಂದರೆ ನಮಗಿಂತಲೂ ಉತ್ಕೃಷ್ಟರು ಎಂಬ ಭಾವನೆಯಿಂದ) ಇಡತಕ್ಕ ಪ್ರೀತಿಗೆ ಭಕ್ತಿಯೆಂದು ಹೆಸರು.

ಬೇರೊಬ್ಬರಿಂದ ನಮಗೆ ಉಪಕಾರವಾಗಿ ಅದನ್ನು ನಾವು ಸ್ಮರಿಸುತ್ತಿದರೇನೇ ಅವರಲ್ಲಿ ನಮಗೆ ಪ್ರೀತಿಯುಂಟಾಗುತ್ತದೆ. ಏತಕ್ಕೆಂದರೆ ನಮ್ಮ ಸುಖಕ್ಕೆ ಸಾಧಕರಾದ್ದರಿಂದ ನಮ್ಮ ಹೆಂಡರುಮಕ್ಕಳಲ್ಲಿಯೂ, ನಮ್ಮ ಕಷ್ಟಕಾಲದಲ್ಲಿ ಸಹಾಯ ಮಾಡುವುದರಿಂದ ಸ್ನೇಹಿತರಲ್ಲಿಯೂ, ನಂಬಿಕೆಯಾಗಿ ನಮ್ಮ ಸೇವೆಯನ್ನು ಮಾಡುವುದರಿಂದ ಸೇವಕರಲ್ಲಿಯೂ ನಮಗೆ ಪ್ರೀತಿಯಿರುತ್ತದೆ. ಇದೇ ರೀತಿಯಾಗಿ ಒಬ್ಬ ತಾಯಿತಂದೆಗಳಿಗೆ ಅನೇಕ ಮಕ್ಕಳಿದ್ದು ಆ ಮಕ್ಕಳುಗಳ ಪೈಕಿ ಯಾರು ತಾವು ಹುಟ್ಟಿದಲಾಗಾಯಿತು ತಮಗೆ ವಿವೇಕ ಬರುವ ವರೆಗೆ ತಾಯಿ ತಂದೆಗಳು ಬಹಳ ಕಷ್ಟಪಟ್ಟು ತಮ್ಮನ್ನು ಕಾಪಾಡಿದ್ದಾರೆ ಎಂದು ತಿಳಿಯುವರೋ ಅವರೇನೇ ತಾಯಿತಂದೆಗಳಲ್ಲಿ ಭಕ್ತಿಯನ್ನಿಡುವವರಾಗುತ್ತಾರೆ. ಉಳಿದ ಮಕ್ಕಳುಗಳಿಗೆ ಭಕ್ತಿಯಿರುವುದಿಲ್ಲ. ಇದೇ ರೀತಿಯಾಗಿ ಯಾರು ಎಲ್ಲರಿಗೂ ನಿಜವಾದ ತಾಯಿತಂದೆಯಾಗಿ ಎಲ್ಲರನ್ನೂ ಎಲ್ಲ ಜನ್ಮಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಎಲ್ಲ ವಿಧದಿಂದಲೂ ಕಾಪಾಡತಕ್ಕವನು ಶಿವನು. ನಮಗೆ ಆಗಾಗ್ಗೆ ಸುಖವನ್ನು ಕೊಡತಕ್ಕವನು ಶಿವನು, ನಮ್ಮ ಭೋಗಕ್ಕೋಸ್ಕರವೇ ಪ್ರಪಂಚವನ್ನು ಸೃಷ್ಟಿಸಿರುವವನು ಶಿವನು, ನಮ್ಮನ್ನು ಸರ್ವದುಃಖಗಳಿಂದಲೂ ಬಿಡುಗಡೆ ಮಾಡಿ ನಿತ್ಯವಾಗಿರತಕ್ಕ ತನ್ನ ಆನಂದ

ವನ್ನು ಕೊಡತಕ್ಕವನು ಶಿವನು ಎಂಬುದಾಗಿ ತಿಳಿಯುತ್ತಾರೋ ಅವ ರಿಗೆ ಈಶ್ವರನಲ್ಲಿ ಕೃತಜ್ಞತೆಯುಂಟಾಗಿ ಆ ಕೃತಜ್ಞತೆಯೇ ನಿರತಿಶಯ ವಾದ ಭಕ್ತಿಯಾಗಿ ಪರಿಣಮಿಸುತ್ತದೆ.

ಆ ಕಾರಣದಿಂದ ನಮಗೆ ಶಿವನಲ್ಲಿ ಸುಲಭವಾಗಿ ಭಕ್ತಿಯುಂಟಾ ಗಬೇಕಾದರೆ ನಮಗೆ ಪ್ರತಿನಿತ್ಯವೂ ಉಂಟಾಗತಕ್ಕ ವಿಷಯ ಸುಖಗಳು ಮತ್ತು ಲಾಭಗಳು ಅಲ್ಪವಾದರೂ ಅವುಗಳು ಅವನ ಕೃಪೆಯಿಂದ ಬಂದವೆಂದು ತಿಳಿದು ಈ ಉಪಕಾರವನ್ನು ಪುನಃ ಪುನಃ ಸ್ಮರಿಸಿಕೊ ಳ್ಳುತ್ತಿದ್ದರೆ ಶಿವನಲ್ಲಿ ನಮಗೆ ಸಹಜವಾದ ಭಕ್ತಿಯುಂಟಾಗುತ್ತದೆ. ಶಿವ ನಲ್ಲಿ ನಮಗೆ ಸಹಜವಾದ ಕೃತಜ್ಞತೆಯು ಮತ್ತು ಭಕ್ತಿಯು ಹೆಚ್ಚಿದ ಹಾಗೆಲ್ಲ ನಮಗೆ ಸುಖಗಳೂ ಮತ್ತು ಲಾಭಗಳೂ ಹೆಚ್ಚುತ್ತ ಹೋಗುತ್ತವೆ. ಇದರಿಂದ ನಮಗೆ ಶಿವನಲ್ಲಿ ಕೃತಜ್ಞತೆಯೂ ಮತ್ತು ಭಕ್ತಿಯೂ ಹೆಚ್ಚು ತ್ತವೆ. ಹೀಗೆ ಶಿವನಲ್ಲಿ ನಮಗೆ ಪೂರ್ಣ ಭಕ್ತಿಯುಂಟಾಗಿ ನಮಗೆ ಶಿವನು ತನ್ನ ಪೂರ್ಣವಾದ ಆನಂದವನ್ನು ಕೊಡುತ್ತಾನೆ. ಇದರ ಜತೆಗೆ ಶಿವನ ಅತ್ಯದ್ಭುತ ಮಹಿಮೆಗಳನ್ನು ತಿಳಿದವರಿಂದ ಕೇಳುತ್ತ ಬಂದರೆ ಅದರಿಂದ ಶಿವನಲ್ಲಿ ಭಕ್ತಿಯು ಮತ್ತೂ ಹೆಚ್ಚುತ್ತದೆ. ಹಾಗಲ್ಲದೆ ನಮಗೆ ಸುಖಗಳು ಮತ್ತು ಲಾಭಗಳು ಉಂಟಾದಾಗ ಅವೆಲ್ಲವೂ ನಮ್ಮ ಪ್ರಯತ್ನಗಳಿಂದಾ ದವೆಂದೂ, ನಮಗೆ ಕಷ್ಟ ನಷ್ಟಗಳು ಉಂಟಾದಾಗ ಅವುಗಳು ಶಿವ ನಿಂದಾದವೆಂದೂ ತಿಳಿದರೆ ಅದು ಭಕ್ತಿಯೂ ಆಗುವುದಿಲ್ಲ, ಮತ್ತು ಇದ ರಿಂದ ಶಿವನ ಕೃಪೆಯೂ ಉಂಟಾಗುವದಿಲ್ಲ.

ಶಿವನು ಶಾಸ್ತ್ರರೂಪವಾಗಿ ಅನೇಕ ಆಜ್ಞೆಗಳನ್ನು ಮಾಡಿರಬಹುದು. ಅವುಗಳೆಲ್ಲವನ್ನೂ ನಡೆಸುವುದು ನಮ್ಮಿಂದ ಸಾಧ್ಯವಿಲ್ಲವೆಂಬುದಾಗಿ ನಾವು ಯೋಚಿಸಬೇಕಾಗಿಲ್ಲ. ಏತಕ್ಕೆಂದರೆ ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದು ಕ್ತಂ ಗ್ರಂಥಕೋಟಿಭಿಃ । ಪರೋಪಕಾರಃ ಪುಣ್ಯಾಯ ಪಾಪಾಯ ಪರ ಪೀಡನಂ ॥ ಎಂದಿರುವುದರಿಂದ ಇತರರಿಗೆ ಉಪಕಾರವನ್ನು ಮಾಡು ಮತ್ತು ಯಾರಿಗೂ ದುಃಖವನ್ನುಂಟುಮಾಡಬೇಡ ಎಂಬಿವೆರಡನ್ನು ಮಾತ್ರ ಶಾಸ್ತ್ರರೂಪವಾಗಿ ಶಿವನು ಆಜ್ಞೆಯನ್ನು ಮಾಡಿರುತ್ತಾನೆ. ಆದ್ದರಿಂದ ನಾವು ನಮ್ಮ ಕೈಲಾದಮಟ್ಟಿಗೆ ದುಃಖದಲ್ಲಿರುವವರಿಗೆ ಕೇವಲ ಕರುಣೆ ಯಿಂದ ಯಾವ ಪ್ರತಿಫಲದ ಆಶೆಯೂ ಇಲ್ಲದೆ ಸಹಾಯವನ್ನು ಮಾಡುತ್ತಾ

ಮತ್ತು ಯಾರಿಗೂ, ಯಾವಾಗಲೂ, ಯಾವ ವಿಧವಾಗಿಯೂ ತೊಂದರೆಯನ್ನು ಕೊಡದೆ ಇರುತ್ತಾ ಇದ್ದರೆ ಶಿವನ ಆಜ್ಞೆಗಳ ಅನುಸಾರವಾಗಿ ನಾವು ನಡೆದಂತೆ ಆಗುತ್ತದೆ. ಆದ್ದರಿಂದ ಶಿವನಲ್ಲಿ ಭಕ್ತಿಯನ್ನಿಟ್ಟು ಅವನ ಆಜ್ಞೆಯ ಪ್ರಕಾರ ನಡೆಯುವುದು ಸುಲಭವೆಂಬುದು ಮತ್ತು ಶಿವಾನಂದವನ್ನು ಹೊಂದುವುದು ಅಸಾಧ್ಯವಲ್ಲವೆಂಬುದು ಸಿದ್ಧವಾಗುವದು. ಶಿವನಲ್ಲಿ ಭಕ್ತಿ ಇಡುವುದರ ಮತ್ತು ಶಿವನ ಆಜ್ಞಾನುಸಾರ ನಡೆಯುವುದರ ಜತೆಗೆ ಶಿವನ ಸಗುಣಸ್ವರೂಪವನ್ನು ಮೊದಲು, ನಿರ್ಗುಣ ಸ್ವರೂಪವನ್ನು ಅನಂತರ ಮನಸ್ಸಿನಲ್ಲಿ ಭಾವಿಸಿ ಸದಾ ಶಿವನ ಹೆಸರಾದ ಪಂಚಾಕ್ಷರೀ ಮಂತ್ರವನ್ನು ಪ್ರಣವಸಹಿತವಾಗಿ ನಾಲಿಗೆಯಿಂದ ಮೊದಲು, ಮನಸ್ಸಿನಿಂದ ಅನಂತರ ಜಪವನ್ನು ಮಾಡುತ್ತಾ ಬಂದರೆ ಶಿವಾನಂದವು ಬಹಳ ಶೀಘ್ರದಲ್ಲಿಯೇ ಲಭಿಸುವುದು. ಆದ್ದರಿಂದ ಸತ್ಪುರುಷರಾದವರು ಮೇಲ್ಕಂಡಂತೆ ಆಚರಿಸಿ ಪರಮ ಪುರುಷಾರ್ಥವಾದ ಮೋಕ್ಷವನ್ನು ಪಡೆಯಬೇಕೆಂದು ಆಶಿಸುತ್ತೇವೆ.

---

## ಬಸವೇಶ್ವರನ ಚರಿತ್ರೆ.

(ರಾ। ಬಾ। ಪಿ. ಜಿ. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೮]

### ಬಸವೇಶ್ವರನು ಮಂತ್ರಿಯಾದದ್ದು.

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನು ಮೊದಲು ಬಿಜ್ಜಳನಲ್ಲಿ ಗುಮಾಸ್ತನಾಗಿಯೂ ಮುಂದೆ ಕ್ರಮೇಣ ಭಂಡಾರಿಯಾಗಿಯೂ ಆಮೇಲೆ ದಂಡಾಧಿಪತಿಯಾಗಿಯೂ ಅಧಿಕಾರಗಳನ್ನು ಪಡೆಯುತ್ತಾ ಕಡೆಗೆ ಮಂತ್ರಿಪದವನ್ನು ಹೊಂದಿರಬಹುದೆಂದು ವಿವರಿಸಿದ್ದೇವೆ. ಅವನು ಗುಮಾಸ್ತನಾಗಿದ್ದರ ವಿಷಯವಾಗಿ ಅವನ ವಚನಗಳಲ್ಲಿ ಆಧಾರಗಳು ದೊರೆಯದಿದ್ದರೂ ಅವನು ಭಂಡಾರಿಯಾಗಿದ್ದಕ್ಕೆ ಕೆಲವು ವಚನಗಳ ಆಧಾರಗಳು ದೊರೆಯುತ್ತವೆ. ಅವುಗಳನ್ನು ನಾವು ಹಿಂದೆ ಕೊಟ್ಟಿದ್ದೇವೆ. ಅವನು ದಂಡಾಧಿಪ ಅಂದರೆ ಸೇನಾಪತಿಯಾಗಿದ್ದರ ವಿಷಯವಾಗಿ ಅವನ ವಚನಗಳಲ್ಲಿ ಅನೇಕ ಆಧಾರಗಳಿವೆ. ಅವುಗಳನ್ನು ವಿವರಿ

ಸುವ ಪೂರ್ವದಲ್ಲಿ ಅವನು ಮಂತ್ರಿಯಾಗಿದ್ದನೆಂಬ ವಿಷಯದಲ್ಲಿ ಏನಾದರೂ ಆಧಾರಗಳು ಅವನ ವಚನಗಳಲ್ಲಿ ಇವೆಯೋ ಹೇಗೆ ಎಂಬುದನ್ನು ವಿವೇಚಿಸುವೆವು. ನಮಗೆ ಈ ವಿಷಯವಾಗಿ ಖಂಡಿತ ಆಧಾರಗಳು ದೊರೆಯದಿದ್ದರೂ ಕೆಳಗಿನ ವಚನಗಳಿಂದ ಅವನು ಮಂತ್ರಿಯಾಗಿದ್ದನೆಂದು ನಾವು ಊಹಿಸಬಹುದಾಗಿದೆ. ಅವು ಯಾವವೆಂದರೆ:-

" ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ. ' ಆಸನೆ, ಶಯನೆ, ಯಾನೆ, ಸಂಪರ್ಕೆ, ಸಹ ಭೋಜನೆ, ಸಂಚರಂತಿ, ಮಹಾಘೋರೆ ನರಕೆ ಕಾಲಮಕ್ಷಯಂ' ಎಂಬ ಶ್ರುತಿಯ ಬಸವಣ್ಣನೋದುವನು. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ ಕೊಡಲಮ್ಮೆನು. ಕೋಲಹೊಲೆಯರ ಮನೆಯ ಹೊರಕ್ಕಾರ್ಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ" (೬೪೧)

ಈ ವಚನದಲ್ಲಿ 'ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನು' ಎಂಬ ಶಬ್ದಗಳು ಬಹು ಮಹತ್ವವಾದವುಗಳು. ಅವು ಬಿಜ್ಜಳನ ಪ್ರತ್ಯಕ್ಷ ಸಾನ್ನಿಧ್ಯವನ್ನು ಸೂಚಿಸುತ್ತವೆ. ಒಬ್ಬ ಮಂತ್ರಿಯು ಅರಸನ ನೆರೆಯಲ್ಲಿ ಯಾವಾಗಲೂ ಇದ್ದುಕೊಂಡು ಅವನ ಸಲಹೆಯನ್ನು ಹೊಂದಿ ಆಡಳಿತೆಯನ್ನು ನಡಿಸುವದುಂಟು. ಆದರೆ ಒಬ್ಬ ಗುಮಾಸ್ತನು ಅಥವಾ ಖಜೀನದಾರ ಅಥವಾ ಸೇನಾಪತಿಯು ಅರಸನ ಗದ್ದುಗೆಯ ಕೆಳಗೆ ಕುಳಿತು ಕೆಲಸ ಮಾಡುವವನೆಂದು ಹೇಳಲಿಕ್ಕೆ ಬರಲಾರದು. ಅವರು ಅವನಿಗೆ ಅಪ್ರತ್ಯಕ್ಷ ಸಂಬಂಧವುಳ್ಳವರು. ಅಲ್ಲದೆ ಈ ನೌಕರರ ಮೇಲೆ ಅನೇಕ ಅಧಿಕಾರಿಗಳಿರುತ್ತಾರೆ. ಸೇನಾಪತಿಗೂ ಈ ಶಬ್ದಗಳು ಅನ್ವಯಿಸುವದಿಲ್ಲ. ಆದರೆ ಮಂತ್ರಿಸ್ಥಳವು ಹೀಗಿರದೆ ಅವನು ಅರಸನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸುವವನೆಂಬ ಭಾವವು ಹೆಚ್ಚಿಗೆ ಅನ್ವಯಿಸುತ್ತದೆ. ಆದ್ದರಿಂದ ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿದ್ದದ್ದು ನಿಜವೆಂದು ನಮಗೆ ತೋರುತ್ತದೆ. ಅವನು ಮಂತ್ರಿಯಾಗಿದ್ದಾಗ್ಗೆ ಅವನು ಈ ವಚನವನ್ನು ಬರೆದಿರಬೇಕೆಂದು ತೋರುತ್ತದೆ. ಇನ್ನೊಂದು ವಚನವು ಕೆಳಗೆ ಕಾಣಿಸಿದಂತೆ ಇದೆ.

"ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಂಟು. ಹಾಸಿ ದುಡಿವರೆ ತನಗುಂಟು. ಪ್ರಮಥರಿಗುಂಟು. ಮಾರಿತಂದೆಗಳಂತೆ ಎನಗೇಕಹುದಯ್ಯ? ರತ್ನದ ಸಂಕೋಲೆಯನಿಕ್ಕಿ ಕಾಡಿಹ ಕೂಡಲಸಂಗಮದೇವ ಶಿವಧೋ ಶಿವಧೋ" (೬೯೯)

ಈ ವಚನದ ಮೇಲಿಂದ ಬಸವೇಶ್ವರನು ಸಿರಿವಂತನಾಗಿದ್ದನೆಂಬುದು ಸ್ಪಷ್ಟವದೆ. ಅವನಿಗೆ ಬಿಜ್ಜಳನಿಂದ ಹೆಚ್ಚಿನ ತರದ ವೇತನವು ದೊರೆಯುತ್ತಿತ್ತೆಂದು ತೋರುತ್ತದೆ. ಈ ವಚನವು ಸಣ್ಣ ಸಂಬಳವಿದ್ದ ನೌಕರನಿಗೆ ಅನ್ವಯಿಸುವದಿಲ್ಲ. ಬಸವೇಶ್ವರನು ಪ್ರಧಾನಿಯಾಗಿ ಹೆಚ್ಚಿನ ಸಂಬಳವನ್ನು ಪಡೆಯುತ್ತಿದ್ದನೆಂಬುದನ್ನು ಈ ವಚನವು ಸೂಚಿಸುತ್ತದೆ.

ಚಾಲುಕ್ಯ, ರಾಷ್ಟ್ರಕೂಟರ ರಾಜ್ಯಗಳಲ್ಲಿ ಅರಸನಿಗೆ ಅನೇಕ ತರದ ಮಂತ್ರಿಗಳಿದ್ದದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ ಬಸವೇಶ್ವರನು ಇಂಥ ಮಂತ್ರಿಗಳಲ್ಲಿ ಯಾವ ಕಾರ್ಯಗಳನ್ನು ಮಾಡುತ್ತಿದ್ದನೆಂಬದನ್ನು ತಿಳಿಯಲು ನಮಗೆ ಸ್ಪಷ್ಟ ಆಧಾರಗಳು ಅವನ ವಚನಗಳಲ್ಲಿ ದೊರೆಯುವದಿಲ್ಲ.

ಭೀಮ ಕವಿಯು ತನ್ನ ಬಸವ ಪುರಾಣದಲ್ಲಿ ಬಿಜ್ಜಳನಿಗೆ ಬಲದೇವನೆಂಬ ಮಂತ್ರಿಯು ಇದ್ದನೆಂತಲೂ ಅವನು ಬಸವೇಶ್ವರನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ತನ್ನ ಮಗಳನ್ನು ಕೊಟ್ಟು ಲಗ್ನಮಾಡಿದನೆಂತಲೂ ಬಲದೇವನು ತೀರಿಕೊಂಡ ಬಳಿಕ ಬಿಜ್ಜಳನು ಅವನ ಸ್ಥಾನದಲ್ಲಿ ಬಸವೇಶ್ವರನನ್ನು ನೇಮಿಸಿದನೆಂತಲೂ ಹೇಳಿರುತ್ತಾನೆ. ಹರಿಹರನು ತನ್ನ ಬಸವರಾಜ ರಗಳೆಯಲ್ಲಿ ಬಿಜ್ಜಳನಿಗೆ ಸಿದ್ದಣ್ಣ ಮಂತ್ರಿ ಎಂಬ ಮಂತ್ರಿ ಇದ್ದನೆಂತಲೂ ಅವನು ತನ್ನ ಮಗಳನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿದನೆಂತಲೂ ಅವನು ತೀರಿದ ಬಳಿಕ ಬಿಜ್ಜಳನು ಅವನ ಸ್ಥಾನದಲ್ಲಿ ತನ್ನ ಮಂತ್ರಿಯಾಗಿ ನೇಮಿಸಿಕೊಂಡನೆಂತಲೂ ಹೇಳಿದ್ದಾನೆ. ಈ ಉಭಯತರು ತಮ್ಮ ಹೆಣ್ಣು ಮಕ್ಕಳನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿರಬಹುದು. ಆದರೆ ಇಷ್ಟು ಮಾತ್ರದಿಂದಲೇ ಬಿಜ್ಜಳನು ಬಸವೇಶ್ವರನಿಗೆ ಮಂತ್ರಿಪದವನ್ನು ಕೊಟ್ಟನೆಂಬುದು ನಂಬಲರ್ಹವಾದುದಲ್ಲ. ಈ ಸ್ಥಾನವು ಯಾವಾಗಲೂ ಯೋಗ್ಯತೆಯ ಮೇಲೆ ಅವಲಂಬಿಸಿರುತ್ತದೆ. ಬಸವೇಶ್ವರನು ತನ್ನ ಯೋಗ್ಯತೆಯಿಂದಲೇ ಮುಂದೆ ಬಂದಿದ್ದಾನೆಂದು ನಮಗೆ ತೋರುತ್ತದೆ.

ಕಠಿಣ ಪರಿಸ್ಥಿತಿಯಲ್ಲಿ ಬಿಜ್ಜಳನು ಮುಂದೆ ಬಂದಿದ್ದಾನೆ. ಅವನು ಮೊದಲು ರಾಜನಾಗಿದ್ದಿಲ್ಲ. ಇಂಥವನ ಸೇವೆಯಲ್ಲಿ ಬಸವೇಶ್ವರನಿದ್ದು ಅವನಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಇದಾಗಬೇಕಾದರೆ ಬಸವೇಶ್ವರನಲ್ಲಿ ಬಿಜ್ಜಳನಿಗೆ ಸಹಾಯ ಮಾಡುವಷ್ಟು ಹೆಚ್ಚಿನ ಯೋಗ್ಯತೆಯು ಇರಲಿಕ್ಕೆಬೇಕು. ಆದ್ದರಿಂದ ಅವನ ಆಡಳಿತೆಯಲ್ಲಿ ಯಾರು ಯಾರು ಉಚ್ಚ ಸ್ಥಾನದಲ್ಲಿದ್ದರು, ಆಗಿನ ಪರಿಸ್ಥಿತಿಯು ಹೇಗೆ ಇವುಗಳನ್ನು ನಾವು ವಿವೇಚಿಸುವದು ಅವಶ್ಯವಿರುತ್ತದೆ.

ಈ ಕಾಲದಲ್ಲಿ ಚಾಲುಕ್ಯ ರಾಜನಾದ ನೂರ್ಮಡಿ ತೈಲಪನು ಚಕ್ರಾಧಿಪತಿಯಾಗಿದ್ದನೆಂಬುದನ್ನು ನಾವು ಮೊದಲು ಲಕ್ಷಿಸುವದು ಅವಶ್ಯವದೆ. ಅವನ ಕಾಲದಲ್ಲಿ ಬಿಜ್ಜಳನು ಮಂಗಳವಾಡದಲ್ಲಾಗಲಿ ಇಲ್ಲವೆ ಬನವಾಸಿ ನಾಡಿನಲ್ಲಾಗಲಿ ಮಹಾಮಂಡಲೇಶ್ವರ ಅಂದರೆ ಮಾಂಡಲಿಕನಾಗಿದ್ದನೆಂಬುದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಮುಂದೆ ಬಿಜ್ಜಳನು ಈ ಚಾಲುಕ್ಯರಾಜನನ್ನು ೧೧೬೨ ಇಸ್ವಿಯಲ್ಲಿ ತಳ್ಳಿ ೬ ವರ್ಷ ಸ್ವತಂತ್ರನಾಗಿ ರಾಜ್ಯವಾಳಿದನು. ಇದಕ್ಕೂ ಪೂರ್ವದಲ್ಲಿಯೇ ರೇವಣಸಿದ್ಧೇಶ್ವರನೂ ಆಮೇಲೆ ಬಸವೇಶ್ವರನೂ ಬಿಜ್ಜಳನ ಆಸ್ಥಾನದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರು. ಬಸವೇಶ್ವರನೂ ಅವನ ಸೋದರಮಾವಂದಿರೂ ಬಿಜ್ಜಳನಲ್ಲಿ ನೌಕರರಾಗಿದ್ದದರಿಂದ ಬಿಜ್ಜಳನು ಚಾಲುಕ್ಯ ರಾಜನನ್ನು ತಳ್ಳುವ ಕಾರ್ಯದಲ್ಲಿ ಅವರೆಲ್ಲ ಅವನಿಗೆ ಸಹಾಯಕರಾಗಿ ವರ್ತಿಸಿರಲಿಕ್ಕೆಬೇಕು. ಮತ್ತು ಬಸವೇಶ್ವರನಾದರೂ ಅದೇ ಧೋರಣವನ್ನು ಅನುಸರಿಸಿರಲಿಕ್ಕೆಬೇಕು.

ಬಿಜ್ಜಳನು ಮಂಡಳಾಧೀಶ್ವರನಾಗಿದ್ದಾಗ್ಗೆ ಅನೇಕ ಪ್ರಸಿದ್ಧ ದಂಡನಾಯಕರೂ ಬೇರೆ ಮಹಾಮಂಡಲೇಶ್ವರರೂ ಅವನಿಗೆ ಸಮಕಾಲೀನರಾಗಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿದ್ದದ್ದು ಕಂಡುಬರುತ್ತದೆ. ದಂಡನಾಯಕರಲ್ಲಿ ಕೇಶಿರಾಜನೂ ಬರ್ಮದೇವನೂ ಬಹು ಪ್ರಮುಖರಾಗಿದ್ದರು. ಅವರ ಶಿಲಾಶಾಸನಗಳು ಕರ್ನಾಟಕದಲ್ಲಿ ವಿಪುಲವಾಗಿ ದೊರೆಯುತ್ತವೆ. ಅವುಗಳಿಂದ ಇವರಿಬ್ಬರೂ ನಾಡಿನಲ್ಲಿ ಬಹು ಪ್ರಬಲರಾಗಿದ್ದದ್ದು ಸ್ಪಷ್ಟವಾಗುತ್ತದೆ. ಬಿಜ್ಜಳನು ಮರಣಹೊಂದಿದ ಬಳಿಕ ಸಹ ಅವರು ತಮ್ಮ ತಮ್ಮ ಭಾಗಗಳಲ್ಲಿ ರಾಜ್ಯವಾಳುತ್ತಿದ್ದರು. ಇಂಥ ಸಮರ್ಥರನ್ನು ಬಿಟ್ಟುಕೊಟ್ಟು ಬಿಜ್ಜಳನು ಬಸವೇಶ್ವರನನ್ನು

ತನ್ನ ಮಂತ್ರಿಯಾಗಿ ನೇಮಿಸಿಕೊಳ್ಳಬೇಕಾದರೆ ಅವನಲ್ಲಿ ಒಂದು ವಿಶೇಷತರದ ಯೋಗ್ಯತೆ ಇದ್ದದ್ದರಿಂದಲೇ ಅವನಿಗೆ ಈ ಉಚ್ಚ ಪದವಿಯನ್ನು ಕೊಟ್ಟಿರಬೇಕೆಂದು ತಿಳಿಯಲು ಆಸ್ಪದವಿದೆ.

ಬಿಜ್ಜಳನ ಕಾಲದಲ್ಲಿ ಮೇಲೆ ಹೇಳಿದ ಸೇನಾಪತಿಗಳಲ್ಲದೆ ಬಹು ಪ್ರಬಲರಾದ ಮಂಡಲಾಧೀಶ್ವರರು ತಮ್ಮ ತಮ್ಮ ಭಾಗಗಳಲ್ಲಿ ರಾಜ್ಯವಾಳುತ್ತಿದ್ದದ್ದು ಕಂಡುಬರುತ್ತದೆ. ಶಿಲಾಹಾರ ವಂಶದ ರಾಜರು ಕರ್‍ಹಾಡದಲ್ಲಿಯೂ ರಟ್ಟರಾಜರು ಸವದತ್ತಿಯಲ್ಲಿಯೂ ಸಿಂದ ವಂಶದ ರಾಜರು ಎರೆಯಂಬರಾಗೆಯಲ್ಲಿಯೂ ಕದಂಬ ವಂಶದ ಒಂದು ಮನೆತನದವರು ಗೋವೆಯಲ್ಲಿಯೂ ಇನ್ನೊಂದು ಮನೆತನದವರು ಹಾನಗಲ್ಲಿನಲ್ಲಿಯೂ ರಾಜ್ಯವಾಳುತ್ತಿದ್ದರು. ಇವರಲ್ಲಿ ಶಿಲಾಹಾರ ವಂಶದ ವಿಜಯಾದಿತ್ಯನು, ರಟ್ಟ ವಂಶದ ಮೂರನೇ ಕಾರ್ತವೀರ್ಯನು, ಸಿಂದ ವಂಶದ ಮೊದಲನೇ ಪೆರ್ಮಾಡಿಯು ಮತ್ತು ಅವನ ತಮ್ಮ ಚಾವುಂಡನು ಬಹು ಶೂರರೂ ಯೋಗ್ಯತೆಯುಳ್ಳವರೂ ಆಗಿದ್ದರು. ಆದರೆ ಇವರೆಲ್ಲರೂ ಬಿಜ್ಜಳನಿಗೆ ಅಧೀನರಾಗಿ ವರ್ತಿಸುತ್ತಿದ್ದರು. ಇದಕ್ಕೆ ಚಾಲುಕ್ಯ ರಾಜನ ಅಯೋಗ್ಯತೆ ಮತ್ತು ದೌರ್ಬಲ್ಯ ಇವುಗಳೇ ಕಾರಣವಾಗಿರಬೇಕು.

ಬಿಜ್ಜಳನ ರಾಜ್ಯಕ್ಕೆ ಹೊಂದಿ ಹೊಯಿಸಳ ರಾಜ್ಯವಿದ್ದು ಅದನ್ನು ಅತ್ಯಂತ ಪ್ರಸಿದ್ಧನಾದ ವಿಷ್ಣುವರ್ಧನನ ಮಗನಾದ ಮೊದಲನೇ ನರಸಿಂಹನು ಆಳುತ್ತಿದ್ದನು ಈ ರಾಜ್ಯದ ಕೆಳಗೆ ಚೋಳರ ರಾಜ್ಯವಿದ್ದು ಅದನ್ನು ಮೂರನೇ ಕುಲೋತ್ತುಂಗ ಚೋಳನು ಅಥವಾ ವೀರರಾಜೇಂದ್ರ ಚೋಳನು ಆಳುತ್ತಿದ್ದನು. ಈ ಉಭಯ ರಾಜ್ಯಗಳು ಆಗ ಬಹು ಪ್ರಬಲವಾಗಿದ್ದವು. ಮಧ್ಯದಲ್ಲಿ ೧೧೪೪ ರಲ್ಲಿ ಚಾಲುಕ್ಯರಿಗೂ ಹೊಯಿಸಳರಿಗೂ ಯುದ್ಧಗಳುಂಟಾಗಲು ಸಿಂದರಾಜನಾದ ಪೆರ್ಮಾಡಿಯು ಹೊಯಿಸಳರನ್ನು ಗೆದ್ದು ದ್ವಾರ ಸಮುದ್ರಕ್ಕೆ ಮುತ್ತಿಗೆ ಹಾಕಿದ್ದು ಶಿಲಾಶಾಸನದಿಂದ ತಿಳಿದುಬರುತ್ತದೆ. ಇವನು ಗೋವೆಯ ಕದಂಬ ರಾಜನನ್ನು ಸೋಲಿಸಿದ್ದಾನೆ. ಮತ್ತು ಬಿಜ್ಜಳನು ತನ್ನ ಮಗಳಾದ ಸಿರಿಯದೇವಿಯನ್ನು ಅವನ ತಮ್ಮನಾದ ಚಾವುಂಡನಿಗೆ ಕೊಟ್ಟು ಲಗ್ನ ಮಾಡಿದ್ದಾನೆ. ಈ ಎಲ್ಲ ಸಂಗತಿಗಳು ಶಿಲಾಶಾಸನಗಳಿಂದ ಸಿದ್ಧವಾಗಿರುತ್ತವೆ. ಇದರಿಂದ ಬಿಜ್ಜಳನು ಒಬ್ಬ ರಾಜ್ಯಕಾರಣಿಯಾಗಿದ್ದನೆಂಬದು ಗೊತ್ತಾಗುತ್ತದೆ.

ಇಂಥ ರಾಜಕೀಯ ಪರಿಸ್ಥಿತಿಯಲ್ಲಿ ಬಸವೇಶ್ವರನಿಗೆ ಬಿಜ್ಜಳನು ಮಂತ್ರಿಯ ಸ್ಥಾನವನ್ನು ಕೊಡಬೇಕಾದರೆ ಅವನಲ್ಲಿ ಯೋಗ್ಯತೆಯು ಇರದ ಹೊರತು ಅದನ್ನು ಅವನಿಗೆ ಕೊಡುವ ಸಂಭವವಿರುವದಿಲ್ಲ. ಬಿಜ್ಜಳನಾದರೂ ಒಬ್ಬ ಸಾಮಾನ್ಯ ರಾಜನಾಗಿರಲಿಲ್ಲ. ಅವನು ಶೂರನೂ ಅತ್ಯಂತ ಯೋಗ್ಯತೆಯುಳ್ಳವನೂ ಆಗಿದ್ದನೆಂದು ತೋರುತ್ತದೆ. ಅವನ ಶಿಲಾಶಾಸನಗಳು ಉತ್ತರ ಕರ್ನಾಟಕದಲ್ಲಿಯೂ ಮೈಸೂರ ಪ್ರಾಂತದಲ್ಲಿಯೂ ವಿಪುಲವಾಗಿ ದೊರೆಯುತ್ತವೆ. ಅವುಗಳಿಂದ ಅವನು ಧರ್ಮಿಷ್ಠನೂ ಪ್ರಬಲನೂ ಆಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವನು ಪ್ರಬಲರಾದ ದಂಡಾಧಿಕಾರಿಗಳನ್ನೂ ಬೇರೆ ಮಾಂಡಲಿಕರನ್ನೂ ತನ್ನ ಅಂಕಿತದಲ್ಲಿಟ್ಟುಕೊಂಡು ರಾಜ್ಯವಾಳಿದ್ದಾನೆ. ನೆರೆ ರಾಜ್ಯಗಳಾದ ಹೊಯಿಸಳರೂ ಚೋಳರೂ ಅವನ ಮೇಲೆ ದಂಡೆತ್ತಿ ಬಂದಿಲ್ಲ. ಅವನು ಯೋಗ್ಯತೆಯುಳ್ಳವನಾದ್ದರಿಂದ ಆರಂಭದಲ್ಲಿ ಚಾಲುಕ್ಯರಾಜನನ್ನು ಸುಮಾರು ೧೦—೧೨ ವರ್ಷ ಅಂದರೆ ೧೧೫೨ ರಿಂದ ೧೧೬೨ ರ ವರೆಗೆ ಹೆಸರಿಗೆ ಮಾತ್ರ ರಾಜನನ್ನಾಗಿ ಮಾಡಿ ತಾನೇ ರಾಜ್ಯವಾಳಿದನು. ಅವನನ್ನು ಪಟ್ಟದಿಂದ ತಳ್ಳಿ ಮುಂದೆ ೬ ವರ್ಷ ಅಂದರೆ ೧೧೬೨ ರಿಂದ ೧೧೬೮ ರ ವರೆಗೆ ಚಕ್ರಾಧಿಪತ್ಯವನ್ನು ವಹಿಸಿದನು. ಈ ಕಾರ್ಯದಲ್ಲಿ ಅವನು ವೀರಶೈವರಲ್ಲಿ ಆಗ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ರೇವಣಸಿದ್ಧೇಶ್ವರ ಮತ್ತು ಅವನ ತರುವಾಯ ಬಸವೇಶ್ವರ ಇವರ ಸಹಾಯವನ್ನು ಹೊಂದಿರಲಿಕ್ಕೆ ಬೇಕು. ಇವರಲ್ಲಿ ಬಸವೇಶ್ವರನು ವೀರಶೈವ ಧರ್ಮವನ್ನು ಸ್ವೀಕರಿಸಿದ ಬಳಿಕ ಅವನು ಧರ್ಮಬೋಧೆಯನ್ನು ಮಾಡುತ್ತ ದೇಶದಲ್ಲಿ ಸಂಚರಿಸಿದ್ದಾನೆ. ಈ ವಿಷಯವಾಗಿ ನಾವು ಹಿಂದೆ ಅನೇಕ ಆಧಾರಗಳನ್ನು ಕೊಟ್ಟಿದ್ದೇವೆ. ಇದರಿಂದ ಅವನು ಸ್ವಾಭಾವಿಕವಾಗಿ ಜನತೆಯ ಪ್ರೀತಿಯನ್ನು ಹೊಂದಿರಲಿಕ್ಕೆ ಬೇಕು. ಆದರಿಂದ ಬಿಜ್ಜಳನು ತನ್ನ ರಾಜ್ಯಾಧಿಪತ್ಯದ ಕಾರ್ಯದಲ್ಲಿ ಬಸವೇಶ್ವರನ ಸಹಾಯವನ್ನು ಅಪೇಕ್ಷಿಸಿರಬೇಕು ಅವನನ್ನು ತನ್ನ ಸೈನ್ಯಾಧಿಪತಿಯಾಗಿಯೂ ಕೂಡ ಮಾಡಿರಲಿಕ್ಕೆ ಬೇಕು ಆದ್ದರಿಂದ ಬಸವದಂಡಾಧಿಪತಿ ಎಂಬ ಹೆಸರು ಬಸವೇಶ್ವರನಿಗೆ ಪ್ರಾಪ್ತವಾಗಿದೆ. ಮುಂದೆ ಬಿಜ್ಜಳನು ಕಲ್ಯಾಣದಲ್ಲಿ ಪಟ್ಟವೇರಿದ ಬಳಿಕ ಬಸವೇಶ್ವರನು ತನಗೆ ಮಾಡಿದ ಸಹಾಯಕ್ಕೋಸ್ಕರ ಅವನಿಗೆ ಪ್ರಧಾನಿಪಟ್ಟವನ್ನು ಕೊಟ್ಟಿರಲಿಕ್ಕೆ ಬೇಕು ಹೀಗೆ ಘಟನೆಗಳು ನಡೆದಿರಬೇಕೆಂದು ತೋರುತ್ತದೆ. ಅನೇಕರು ಸಿದ್ಧಣ್ಣ ಮಂತ್ರಿ ಅಥವಾ ಬಲದೇವ ಮಂತ್ರಿ

ಇವರು ತೀರಿದ ಬಳಿಕ ಬಲು ಹಗುರಾಗಿ ಬಸವೇಶ್ವರನಿಗೆ ಮಂತ್ರಿಪದ ದೊರೆಯಿತೆಂಬುದು ತಿಳಿದ ಹಾಗೆ ನಮಗೆ ತೋರುತ್ತದೆ. ಆದರೆ ಆಗಿನ ಕರ್ನಾಟಕ ಇತಿಹಾಸವನ್ನು ನಾವು ಚನ್ನಾಗಿ ನಿರೀಕ್ಷಿಸಿದಲ್ಲಿ ಇದು ಶಕ್ಯವಾಗುವ ಪರಿಸ್ಥಿತಿ ಇದ್ದಿಲ್ಲೆಂದು ಮೇಲಿನ ವಿವರಣೆಗಳಿಂದ ಗೊತ್ತಾಗುತ್ತದೆ. ವೀರಶೈವ ಸಮಾಜದವರು ಬಸವೇಶ್ವರನ ನಿಜವಾದ ಯೋಗ್ಯತೆಯನ್ನು ಇನ್ನು ಅರಿತಿಲ್ಲ ಅವನು ಅತ್ಯಂತ ಯೋಗ್ಯತೆಯ ಪುರುಷನಾದ್ದರಿಂದಲೇ ಅವನಿಗೆ ಈ ಶ್ರೇಷ್ಠಸ್ಥಾನವು ಪ್ರಾಪ್ತವಾಗಿರುತ್ತದೆಂಬುದನ್ನು ಅವರು ಲಕ್ಷಿಸತಕ್ಕದ್ದಾಗಿದೆ.

ಬಸವೇಶ್ವರನಿಗೋಸ್ಕರ ಅಂಥ ಶ್ರದ್ಧೆವಹಿಸಿದ ವೀರಶೈವರು ಮತ್ತು ಅವನ ಪುರಾಣಕರ್ತರು ಅವನನ್ನು ಒಬ್ಬ ಪವಾಡ ಪುರುಷನನ್ನಾಗಿ ಮಾಡಿದ್ದಾರೆ. ಆದರೆ ಬಸವೇಶ್ವರನು ಕಾರ್ಯಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿರುವದು ಅವನ ವಚನಗಳ ವೈಶಿಷ್ಟ್ಯವಾಗಿದೆ. ಬಸವನ ಕಾಲದ ಶಿವಶರಣರು ಅನೇಕ ಉದ್ಯೋಗಗಳನ್ನು ಮಾಡುತ್ತಾ ಇದ್ದು ಕಾರ್ಯಕ್ಕೆ ಮಹತ್ವ ಕೊಟ್ಟಿದ್ದಾರೆ. ಈ ದೃಷ್ಟಿಯಿಂದ ನಾವು ವಿಚಾರ ಮಾಡಿದಲ್ಲಿ ಬಸವೇಶ್ವರನು ಬಿಜ್ಜಳನ ಆಡಳಿತೆಯಲ್ಲಿ ಅನೇಕ ಅಧಿಕಾರಗಳನ್ನು ಸಂಪಾದಿಸಿ ತನ್ನ ಯೋಗ್ಯತೆಯಿಂದಲೇ ತಾನು ಮಾಡಿದ ಕಾರ್ಯಗಳಿಂದಲೇ ಮುಂದೆ ಬಂದಿದ್ದಾನೆಂದು ನಮಗೆ ತೋರುತ್ತದೆ.

ಜೈನ ಗ್ರಂಥಕಾರರು ಬಸವೇಶ್ವರನು ತನ್ನ ತಂಗಿಯಾದ ಪದ್ಮಾವತಿಯನ್ನು ಬಿಜ್ಜಳನಿಗೆ ಕೊಟ್ಟು ಅವನನ್ನು ಮೋಹಪರವಶನನ್ನಾಗಿ ಮಾಡಿ ತಾನು ಮಂತ್ರಿಪದಾರೂಢನಾದನೆಂದು ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೆ ಬಸವೇಶ್ವರನು ಸ್ತ್ರೀಯರ ವಿಷಯವಾಗಿ ಅತ್ಯಂತ ಆದರ ಬುದ್ಧಿಯುಳ್ಳವನಾಗಿದ್ದನೆಂಬುದನ್ನು ಅವನ ಅನೇಕ ವಚನಗಳಿಂದ ಸಿದ್ಧಮಾಡಬಹುದು. ಹಾಗೆಯೇ ಅವನು ಜಾರತನವನ್ನು ಬಹಳ ರೀತಿಯಿಂದ ನಿಷೇಧಿಸಿದ್ದಾನೆ. ಆದ್ದರಿಂದ ಇಂಥ ಕಥೆಗಳು ಕೇವಲ ಮಾತ್ಸರ್ಯ ಬುದ್ಧಿಯಿಂದ ಹೊರಟಂಥವೇ ಹೊರ್ತು ನಂಬಲರ್ಹವಾದುವಲ್ಲ. ಬಸವೇಶ್ವರನು ಸಣ್ಣ ಮಗುವು ಇದ್ದಾಗಳೇ ಅವನ ತಂದೆ ತಾಯಿಗಳು ತೀರಿಹೋದರು. ಆದ್ದರಿಂದ ಅವನಿಗೆ ಒಬ್ಬ ತಂಗಿ ಇರುವದು ಸಂಭವವೇ ಇರುವದಿಲ್ಲ. ಪದ್ಮಾವತಿಯು ಜೈನರು ನಿರ್ಮಿಸಿದ

ಒಬ್ಬ ಕಾಲ್ಪನಿಕ ಸ್ತ್ರೀಯಾಳೆಂದು ನಮಗೆ ತೋರುತ್ತದೆ. ಈ ವಿಷಯವಾಗಿ ನಾವು ಹಿಂದೆ ೧೨ನೇ ಲೇಖಾಂಕದಲ್ಲಿ ಸವಿಸ್ತಾರವಾಗಿ ವಿವೇಚಿಸಿದ್ದೇವೆ. (ಶಿವಾನುಭವ ಸಂಪುಟ ೧೬, ಸಂಚಿಕೆ ೧೧, ಪುಟ ೫೬೫ ನೋಡಿರಿ.)

ಇನ್ನು ಮುಂದೆ ಬಸವೇಶ್ವರನು ಸೈನ್ಯಾಧಿಕಾರಿಯಾಗಿದ್ದನೇ ಹೇಗೆ ಮತ್ತು ಅವನು ಆಗ ಹೇಗೆ ವರ್ತಿಸಿದನು ಎಂಬುದನ್ನು ವಿವೇಚಿಸುವೆವು. ಈ ವಿಷಯವಾಗಿ ನಾವು ಅನೇಕ ವಚನಗಳನ್ನು ಕೆಳಗೆ ಉದಹರಿಸುವೆವು. ಅವುಗಳ ಮೇಲಿಂದ ಬಸವೇಶ್ವರನು ಯುದ್ಧಕಲೆಯ ರೀತಿಗಳನ್ನು ಚನ್ನಾಗಿ ಬಲ್ಲವನಾಗಿದ್ದನೆಂತಲೂ ಇಷ್ಟೇ ಅಲ್ಲ, ಅವನು ಯುದ್ಧಗಳಲ್ಲಿ ಸಹ ಭಾಗವಹಿಸಿರಬೇಕೆಂತಲೂ ಊಹಿಸಬಹುದಾಗಿದೆ. ಹೀಗೆ ಅವನು ಸೇನಾಪತಿಯಾಗಿದ್ದರೂ ಕೂಡ ಅವನು ತನ್ನ ಧಾರ್ಮಿಕ ವೃತ್ತಿಯನ್ನು ಬಿಡದೆ ಧರ್ಮಬೋಧೆಯನ್ನು ಹಾಗೆಯೇ ನಡೆಸಿದ್ದನೆಂತಲೂ ನಮಗೆ ತೋರುತ್ತದೆ. ಕೆಳಗೆ ಕಾಣಿಸಿದ ವಚನಗಳಿಂದ ಅವನು ತನ್ನ ಸೈನಿಕರಲ್ಲಿಯೂ ಕೂಡ ಧಾರ್ಮಿಕ ಉಚ್ಚ ವಿಚಾರಗಳನ್ನು ಉಪದೇಶಿಸುತ್ತಿದ್ದನೆಂದು ನಮಗೆ ಭಾಸವಾಗುತ್ತಿದೆ. ಬಸವೇಶ್ವರನು ಒಕ್ಕಲಿಗರಲ್ಲಿ ಬೆರೆದು ಹೇಗೆ ಉಪದೇಶ ಮಾಡುತ್ತಿದ್ದನೆಂಬುದನ್ನು ನಾವು ಅನೇಕ ವಚನಗಳನ್ನು ಉದಹರಿಸಿ ಸಮರ್ಥಿಸಿದ್ದೇವೆ. ಹಾಗೆಯೇ ಅವನು ಸೈನಿಕರಲ್ಲಿಯೂ ವರ್ತಿಸಿದ್ದಾನೆ. ಬಸವೇಶ್ವರನು ತಾನು ಮಂತ್ರಿಯಾದದ್ದರ ಉದ್ದೇಶವನ್ನು ತನ್ನ ವಚನದಲ್ಲಿ ಬಹು ಸ್ಪಷ್ಟವಾಗಿ ಹೇಳಿದ್ದಾನೆ. ಅದು ಏನೆಂದರೆ— "ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ ತಲೆದಂಡ" ಎಂದು ಹೇಳಿದ್ದಾನೆ. ಬಸವೇಶ್ವರನು ದಂಡಾಧಿಪತಿ ಅಥವಾ ಪ್ರಧಾನಿಯಾದಾಗ ಸಹ ತಾನು ಇಟ್ಟುಕೊಂಡ ಈ ಧ್ಯೇಯವನ್ನು ಬಿಟ್ಟಿಲ್ಲ. ಅವನು ಅದನ್ನು ಅಕ್ಷರಶಃ ಪಾಲಿಸಿದ್ದಾನೆ. ಇದಕ್ಕೆ ನಾವು ಮುಂದೆ ಕೊಡುವ ವಚನಗಳೇ ಸಾಕ್ಷಿಯಾಗಿವೆ.

(ಮುಂದುವರಿಯುವದು.)

(೩೦೬) ಪಂಚೀಕರಣ, ಮಿಶ್ರಾರ್ಪಣ, ಷಟ್‌ಸ್ಥಲಾಚರಣೆ, ಅಷ್ಟಾವರಣ, ಲಿಂಗಾಂಗಸಾಮರಸ್ಯ ಇವುಗಳ ಸಂಬಂಧವುಃ— ಪಂಚೀಕರಣದ ತತ್ವಕ್ಕನುಸರಿಸಿ ಮಿಶ್ರಾರ್ಪಣವಿರುತ್ತದೆ. ಮಿಶ್ರಾರ್ಪಣವು ಷಟ್‌ಸ್ಥಲಾಚರಣೆಗಳಿಗೆ ಸಂಬಂಧಿಸಿರುತ್ತದೆ. ಈ ಷಟ್‌ಸ್ಥಲಗಳ ಸಂಬಂಧವು ಹಿಂದೆ ನಂ॥ ೩೦೦ ರಿಂದ ನಂ॥ ೩೦೫ ಇವುಗಳಲ್ಲಿ ಹೇಳಲ್ಪಟ್ಟಿದೆ. ಷಟ್‌ಸ್ಥಲಾಚರಣೆಯು ಅಷ್ಟಾವರಣಗಳಲ್ಲಿ ರೂಪುಗೊಳ್ಳುತ್ತದೆ. ಈ ಅಷ್ಟಾವರಣಗಳ ಆಚರಣೆಯ ಮೂಲಕ ಇಷ್ಟ, ಪ್ರಾಣ ಭಾವಲಿಂಗಗಳು ತನ್ನಲ್ಲಿ ಅಳವಡುತ್ತವೆ. ತನ್ನಲ್ಲಿ ಅವು ಅಳವಟ್ಟಾಗಳೇ ಲಿಂಗಾಂಗಸಾಮರಸ್ಯವು ಒದಗುತ್ತದೆ. ಹೀಗೆ ಇವುಗಳ ಪರಸ್ಪರ ಸಂಬಂಧವಿದೆ. ಆದ್ದರಿಂದ ಪಂಚೀಕರಣವನ್ನು ಅರಿಯುವದು ಅವಶ್ಯವು.

(೩೦೭) ಪಂಚೀಕರಣದ ಜ್ಞಾನಃ— ಪಂಚಮಹಾಭೂತಗಳಿಂದ ಶರೀರದಲ್ಲಿ ೨೫ ತತ್ವಗಳು ಉಂಟಾಗುತ್ತವೆ. ಈ ತತ್ವಗಳ ಮೂಲಕವೇ ಶರೀರದ ಕ್ರಿಯೆಗಳು ನಡೆಯುತ್ತವೆ. ಶರೀರದ ಕ್ರಿಯೆಗಳು ಲಿಂಗಕ್ರಿಯೆಗಳಾಗಬೇಕು. ಇದು ಮಿಶ್ರಾರ್ಪಣದ ಮೂಲಕ ಒದಗುತ್ತದೆ. ಈ ಲಿಂಗಕ್ರಿಯೆಗಳಿಂದ ಲಿಂಗಾಂಗಸಾಮರಸ್ಯವನ್ನು ಮುಂದೆ ಹೊಂದಬೇಕು. ೨೫ ತತ್ವಗಳ ಸಂಬಂಧದ ಜ್ಞಾನವೇ ಪಂಚೀಕರಣದ ಜ್ಞಾನವು. ಇವರ ಜ್ಞಾನದಿಂದ ಲಿಂಗಾಂಗಸಾಮರಸ್ಯದ ರೀತಿಯು ತಿಳಿಯುತ್ತದೆ.

ಟೀಪುಃ— ಹಿಂದೆ ನಂ॥ ೩೦೦ರಿಂದ ೩೦೫ರ ವರೆಗೆ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ ಇವುಗಳ ನೆಲೆಗಳು ಹೇಳಲ್ಪಟ್ಟಿವೆ. ಷಟ್‌ಸ್ಥಲಗಳನ್ನು ಒಳಕೊಳ್ಳುವ ರೀತಿಗಳು ಇವುಗಳಲ್ಲಿ ವಿವರಿಸಲ್ಪಟ್ಟಿವೆ. ಮನುಷ್ಯನ ಕ್ರಿಯೆಗಳು ಹೇಗೆ ಉಂಟಾಗುತ್ತವೆಂಬುದನ್ನು ಅರಿತಲ್ಲಿ ಇವುಗಳ ಜ್ಞಾನವಾಗುವದು. ಇದು ಮಿಶ್ರಾರ್ಪಣಕ್ಕೂ ಅವಶ್ಯವಾದದ್ದು. ಈ ವಿವರವು ಹೇಗೆಂದರೆಃ—

ವಾಯುಗಳ ಮೂಲಕ ಶರೀರದ ಕ್ರಿಯೆಗಳು ನಡೆಯುತ್ತವಷ್ಟೇ. ಇವುಗಳ ಮೂಲಕವೇ ಚಾಲನೆಗಳು ಆಯಾ ಅವಯವಗಳಿಗೆ ಮುಟ್ಟುತ್ತವೆ. ಈ ಚಾಲನೆಗಳು ಮನುಷ್ಯನಲ್ಲಿ ಸರಿಯಾಗಿ ನಡೆಯುವದಕ್ಕೋಸ್ಕರ ಸರಿಯಾದ ಶಕ್ತಿಗಳು ಈ ವಾಯುಗಳ ದ್ವಾರಾ ಸಂಚರಿಸಬೇಕು. ಇದರಿಂದ ಆ ವಾಯುಗಳು ಹರಿದಾಡುವ ತಪ್ಪು ದಾರಿಗಳು ಇಲ್ಲದಾಗು

ತ್ತವೆ. ಕ್ರಿಯಾಶಕ್ತಿಯ ಮಥನ ಅಂದರೆ ಹೊರಬೀಳುವಿಕೆಯಿಂದ ಪ್ರಾಣ ವಾಯುವೂ, ಜ್ಞಾನಶಕ್ತಿಯ ಮಥನದಿಂದ ಅಪಾನವಾಯುವೂ, ಇಚ್ಛಾ ಶಕ್ತಿಯ ಮಥನದಿಂದ ವ್ಯಾನವಾಯುವೂ, ಆದಿಶಕ್ತಿಯ ಮಥನದಿಂದ ಉದಾನವಾಯುವೂ, ಪರಾಶಕ್ತಿಯ ಮಥನದಿಂದ ಸಮಾನವಾಯುವೂ, ಚಿತ್‌ಶಕ್ತಿಯ ಮಥನದಿಂದ ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯ ವಾಯುಗಳೂ ಸರಿಪಡುವವು.

ಹೀಗೆ ಇವುಗಳನ್ನು ಸರಿಪಡಿಸಬೇಕಾದರೆ ನಕಾರಾದಿ ಮಂತ್ರಗಳ ಮೂಲಕವೇ ಶಕ್ಯವು. ಮಂತ್ರದಿಂದ ಜಾಗ್ರದಾದಿ ಅವಸ್ಥೆಗಳೂ ಕೂಡ ಪರಿಣಾಮಕ್ಕೆ ಬರುವವು. ಆಧಾರಚಕ್ರದಲ್ಲಿಯ ಬ್ರಹ್ಮನ ಜಾಗ್ರತಾವಸ್ಥೆ ಯನ್ನು ನಕಾರ ಬೀಜಾಕ್ಷರ ಮಂತ್ರದಿಂದಲೂ ಸ್ವಾಧಿಷ್ಠಾನ ಚಕ್ರದ ಲ್ಲಿಯ ವಿಷ್ಣುವಿನ ಸ್ವಪ್ನಾವಸ್ಥೆಯನ್ನು ಮಕಾರ ಬೀಜಾಕ್ಷರದಿಂದಲೂ ಮಣಿಪೂರಕ ಚಕ್ರದಲ್ಲಿಯ ರುದ್ರನ ಸುಷುಪ್ತಾವಸ್ಥೆಯನ್ನು ಶಿಕಾರ ಬೀಜಾಕ್ಷರದಿಂದಲೂ ಅನಾಹತ ಚಕ್ರದಲ್ಲಿಯ ಈಶ್ವರನ ತೂರ್ಯಾ ವಸ್ಥೆಯನ್ನು ವಕಾರ ಬೀಜಾಕ್ಷರದಿಂದಲೂ ವಿಶುದ್ಧಿ ಚಕ್ರದಲ್ಲಿರುವ ಸದಾಶಿವನ ಅತೀತಾವಸ್ಥೆಯನ್ನು ಯಕಾರ ಬೀಜಾಕ್ಷರದಿಂದಲೂ ಆಜ್ಞಾ ಚಕ್ರದಲ್ಲಿಯ ಮಹಾ ಗುರುವಿನ ನಿರಾವಸ್ಥೆಯನ್ನು ಓಂಕಾರ ಬೀಜಾ ಕ್ಷರದಿಂದಲೂ ತಿಳಿಯಬೇಕು. ಇದರಿಂದ ಆ ಅವಸ್ಥೆಗಳಲ್ಲಿಯ ಪ್ರಾಪಂಚಿಕ ಒಲವುಗಳು ನಷ್ಟವಾಗುವವು. ಆಗ ಅವುಗಳ ವ್ಯಾಪಾರಗಳು ಅವನ ಅಂಕೆಯಲ್ಲಿ ಉಳಿಯುವವು.

ಹೀಗೆ ಅವು ಉಳಿದಲ್ಲಿ ಸದ್ಭಕ್ತಿ, ನೈಷ್ಠಿಕಾ ಭಕ್ತಿ, ಅವಧಾನಭಕ್ತಿ, ಅನುಭಾವ ಭಕ್ತಿ, ಆನಂದ ಭಕ್ತಿ, ಮತ್ತು ಸಮರಸಭಕ್ತಿಗಳು ನೆಲೆಗೊ ಳ್ಳುವವು. ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಆತ್ಮ ಇವು ಗಳ ಮೂಲಕ ಮನುಷ್ಯನಲ್ಲಿ ಅನುಕ್ರಮವಾಗಿ, ಉಂಟಾಗುವ ವ್ಯವಹಾ ರಿಕ ಗುಣಗಳು ಹೊರಟು ಹೋಗುವವು. ಅವು ಸಾಂಸಾರಿಕ ಒಲವು ಗಳು, ಕಾಮ್ಯಗಳು, ನಾನಾ ಬಗೆಯ ಗಮನಾಗಮನಗಳು ಮತ್ತು ಕರ್ಮ ಗಳು ಮತ್ತು ಅಹಂ ಮಮತೆಗಳು ಇದ್ದು ಅವು ದೂರಾಗುತ್ತವೆ.

ಇವುಗಳನ್ನು ದೂರಮಾಡುವಲ್ಲಿ ಮನುಷ್ಯನು ಕಿಂಕುರ್ವಾಣತೆ, ದೃಢವ್ರತ, ಶಿವಯೋಗ ಇವುಗಳನ್ನು ಮೊದಲನೆಯ ಮೂರು ಸ್ಥಲಗ

ಳಲ್ಲಿ ಉಪಯೋಗಿಸಬೇಕು. ಮತ್ತು ಪರಿಪೂರ್ಣತ್ವ, ಪರಿಣಾಮ, ಘನ ಪ್ರಕಾಶ, ಇವುಗಳ ಮೂಲಕ ಅನುಕ್ರಮವಾಗಿ ಕಡೆಯ ಮೂರು ಸ್ಥಲಗಳನ್ನು ಒಳಕೊಳ್ಳಬೇಕು.

ಹೀಗೆ ವರ್ತಿಸಿದಲ್ಲಿ ಭಕ್ತ, ಮಹೇಶ್ವರಾದಿ ಆರು ಸ್ಥಲಗಳು ಮನುಷ್ಯನಲ್ಲಿ ಅಳವಡುತ್ತವೆ. ಅವು ಹೀಗೆ ಅಳವಡಲು ಹಿಂದೆ ನಂ॥ ೨೯೯ ಇದರಲ್ಲಿ ಹೇಳಿದಂತೆ ಆಯಾ ಲಿಂಗಗಳ ಮಿಶ್ರಗಳನ್ನು ತನ್ನಲ್ಲಿ ಉಂಟು ಮಾಡಿಕೊಳ್ಳುವ ಸಾಮರ್ಥ್ಯವು ಒದಗುತ್ತದೆ.

ಈ ರೀತಿಗಳನ್ನು ವೀರಶೈವರ ಪಂಚೀಕರಣದ ಜ್ಞಾನದಿಂದ ಅರಿಯುವದು ಸುಲಭವು. ದೇಹದ ವ್ಯಾಪಾರಗಳನ್ನು ತಿಳಿಸುವದೇ ಈ ಪಂಚೀಕರಣದ ಉದ್ದೇಶವಿರುತ್ತದೆ.

(೩೦೮) ಪಂಚವಿಂಶತಿ ತತ್ವದ ದೇಹವುಃ—ಆಕಾಶ ತತ್ವವು ಜ್ಞಾನ ಮೊದಲಾದ ಅಂತಃಕರಣ ಚತುಷ್ಟಯಗಳಲ್ಲಿರುತ್ತದೆ. ಈ ನಾಲ್ಕು ಮನ ಬುದ್ಧಿ, ಚಿತ್ತ, ಅಹಂಕಾರಗಳಿವೆ. ವಾಯು ತತ್ವವು ಪಂಚಪ್ರಾಣ ವಾಯುಗಳಲ್ಲಿರುತ್ತದೆ. ಅವು ಸಮಾನ ವ್ಯಾನ ಉದಾನ ಅಪಾನ ಪ್ರಾಣ ವಾಯುಗಳಿರುತ್ತವೆ. ಅಗ್ನಿ ತತ್ವವು ಬುದ್ಧೀಂದ್ರಿಯಗಳಲ್ಲಿರುತ್ತದೆ. ಅವು ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣ ಇವುಗಳಿರುತ್ತವೆ. ಅಪ್ಪು ತತ್ವವು ಪಂಚ ವಿಷಯಗಳಲ್ಲಿರುತ್ತದೆ. ಅವು ಶಬ್ದ ಸ್ಪರ್ಶ ರೂಪ ರಸ ಗಂಧಗಳಿರುತ್ತವೆ. ಪೃಥ್ವೀ ತತ್ವವು ಕರ್ಮೇಂದ್ರಿಯಗಳಲ್ಲಿರುತ್ತದೆ. ಅವು ವಾಕ್ ಪಾಣಿ ಪಾದ ಗುಹ್ಯ ವಾಯು ಇವುಗಳಿರುತ್ತವೆ. (ಈ ತತ್ವಗಳ ವ್ಯಾಖ್ಯೆಗಳು ಹಿಂದೆ ನಂ. ೪೫ ರಿಂದ ೪೮ ರಲ್ಲಿ ಹೇಳಿದೆ.)

(೩೦೯) ಜ್ಞಾನ ಮೊದಲ್ಗೊಂಡು ಅಂತಃಕರಣ ಚತುಷ್ಟಯಗಳ ಉತ್ಪತ್ತಿಃ—ಆಕಾಶದ ಮೂಲತತ್ವವೇ ಜ್ಞಾನವು. ಈ ಆಕಾಶದೊಂದಂಶವು ವಾಯುವನ್ನು ಬೆರಿಸಲು ಮನಸ್ಸು, ಆಕಾಶದೊಂದಂಶವು ಅಗ್ನಿಯನ್ನು ಬೆರಿಸಲು ಬುದ್ಧಿಯು, ಆಕಾಶದೊಂದಂಶವು ಅಪ್ಪುವನ್ನು ಬೆರಿಸಲು ಚಿತ್ತು, ಆಕಾಶದೊಂದಂಶವು ಪೃಥ್ವಿಯನ್ನು ಬೆರಿಸಲು ಅಹಂಕಾರವು ಹುಟ್ಟುತ್ತವೆ.

(೩೧೦) ಪ್ರಾಣವಾಯುಗಳುತ್ಪತ್ತಿಃ— ವಾಯುವಿನ ಒಂದಂಶವು ಆಕಾಶವನ್ನು ಬೆರಿಸಲು ಸಮಾನವಾಯುವು, ವಾಯುವಿನ ಮೂಲ

ತತ್ವವೇ ಉದಾನವಾಯುವು, ವಾಯುವಿನೊಂದಂಶವು ಅಗ್ನಿಯನ್ನು ಬೆರಿಸಲು ವ್ಯಾನವಾಯುವು. ವಾಯುವಿನೊಂದಂಶವು ಅಪ್ಪುವನ್ನು ಬೆರಿಸಲು ಅಪಾನವಾಯುವು, ವಾಯುವಿನೊಂದಂಶವು ಪೃಥ್ವಿಯನ್ನು ಬೆರಿಸಲು ಪ್ರಾಣವಾಯುವು ಹುಟ್ಟುತ್ತವೆ.

(೩೧೧) ಬುದ್ಧೀಂದ್ರಿಯಗಳುತ್ಪತ್ತಿಃ ಅಗ್ನಿಯ ಒಂದಂಶವು ಆಕಾಶವನ್ನು ಬೆರಿಸಲು ಶ್ರೋತ್ರೇಂದ್ರಿಯವು, ಅಗ್ನಿಯ ಒಂದಂಶವು ವಾಯುವನ್ನು ಬೆರಿಸಲು ತ್ವಗಿಂದ್ರಿಯವು, ಅಗ್ನಿಯ ಮೂಲ ತತ್ವವೇ ನೇತ್ರೇಂದ್ರಿಯವು, ಅಗ್ನಿಯ ಒಂದಂಶವು ಅಪ್ಪುವನ್ನು ಬೆರಿಸಲು ಜಿಹ್ವೇಂದ್ರಿಯವು, ಅಗ್ನಿಯ ಒಂದಂಶವು ಪೃಥ್ವಿಯನ್ನು ಬೆರಿಸಲು ಘ್ರಾಣೇಂದ್ರಿಯವು ಹುಟ್ಟುತ್ತವೆ.

(೩೧೨) ಪಂಚವಿಷಯಗಳುತ್ಪತ್ತಿಃ— ಅಪ್ಪುವಿನೊಂದಂಶವು ಆಕಾಶವನ್ನು ಬೆರಿಸಲು ಶಬ್ದ ವಿಷಯವು, ಅಪ್ಪುವಿನೊಂದಂಶವು ವಾಯುವನ್ನು ಬೆರಿಸಲು ಸ್ಪರ್ಶನ ವಿಷಯವು, ಅಪ್ಪುವಿನೊಂದಂಶವು ಅಗ್ನಿಯನ್ನು ಬೆರಿಸಲು ರೂಪು ವಿಷಯವು. ಅಪ್ಪುವಿನ ಮೂಲತತ್ವವೇ ರಸ ವಿಷಯವು, ಅಪ್ಪುವಿನೊಂದಂಶವು ಪೃಥ್ವಿಯನ್ನು ಬೆರಿಸಲು ಗಂಧ ವಿಷಯವು ಹುಟ್ಟುತ್ತವೆ

(೩೧೩) ಕರ್ಮೇಂದ್ರಿಯಗಳುತ್ಪತ್ತಿಃ— ಪೃಥ್ವಿಯ ಒಂದಂಶವು ಆಕಾಶವನ್ನು ಬೆರಿಸಲು ವಾಗಿಂದ್ರಿಯವು, ಪೃಥ್ವಿಯ ಒಂದಂಶವು ವಾಯುವನ್ನು ಬೆರಿಸಲು ಪಾಣೀಂದ್ರಿಯವು, ಪೃಥ್ವಿಯ ಒಂದಂಶವು ಅಗ್ನಿಯನ್ನು ಬೆರಿಸಲು ಪಾದೇಂದ್ರಿಯವು, ಪೃಥ್ವಿಯ ಒಂದಂಶವು ಅಪ್ಪುವನ್ನು ಬೆರಿಸಲು ಗುಹ್ಯೇಂದ್ರಿಯವು, ಪೃಥ್ವಿಯ ಮೂಲ ತತ್ವವೇ ಪಾಯುವಿಂದ್ರಿಯವು. ಹೀಗೆ ಇವು ಹುಟ್ಟುತ್ತವೆ.

ಟೀಪು:— ಆಯಾ ಭೂತಗಳ ಮೂಲಕ ಮೇಲೆ ನಂ॥ ೩೦೮ ರಲ್ಲಿ ಹೇಳಿದಂತೆ ತತ್ವಗಳುಂಟಾಗುತ್ತವೆ. ಇದು ಆ ಭೂತಗಳು ಅವುಗಳಲ್ಲಿ ಹೆಚ್ಚಾಗಿ ವಾಸವಾಗಿದ್ದರಚಿನ್ಹವು. ಆದರೆ ಅವುಗಳ ಒಂದೊಂದಂಶದಲ್ಲಿ ಉಳಿದ ಭೂತಗಳು ಹೆಚ್ಚಾಗಿ ಬೆರೆದಲ್ಲಿ ನಂ॥ ೩೦೯ ರಿಂದ ೩೧೩ ರ ವರೆಗೆ ಹೇಳಿದ ತತ್ವಗಳುಂಟಾಗುತ್ತವೆ. ಕೆಲವೊಂದು ಮಹಾಭೂತದ ಅಂಶವು ಮತ್ತೊಂದು ಮಹಾಭೂತದಲ್ಲಿ ಹೆಚ್ಚಾಗಿ ಬೆರೆ

ಯಲು ಅವುಗಳಿಂದ ಉಂಟಾಗುವ ತತ್ವಗಳು ಕೆಳಗೆ ವಿವರವಾಗಿ ಹೇಳಲ್ಪಟ್ಟಿವೆ

(೩೧೪) ಪಂಚವಿಂಶತಿ ತತ್ವಗಳುಃ— ಆಕಾಶ ತತ್ವವು ಉಳಿದ ತತ್ವಗಳಲ್ಲಿ ಹೆಚ್ಚಲು, ಜ್ಞಾನ, ಸಮಾನವಾಯು, ಶ್ರೋತ್ರ, ಶಬ್ದವಿಷಯ, ವಾಕ್ಕು ಇವುಗಳುಂಟಾಗುತ್ತವೆ. ವಾಯು ತತ್ವವು ಹೆಚ್ಚಲು ಮನ, ವ್ಯಾನ, ತ್ವಕ್ಕು, ಸ್ಪರ್ಶನ, ಪಾಣಿ ಇವುಗಳುಂಟಾಗುತ್ತವೆ. ತೇಜ ಅಥವಾ ಅಗ್ನಿ ತತ್ವವು ಹೆಚ್ಚಲು ಬುದ್ಧಿ, ಉದಾನ, ನೇತ್ರ, ರೂಪು, ಪಾದ ಇವುಗಳುಂಟಾಗುತ್ತವೆ. ಅಪ್ಪು ತತ್ವ ಹೆಚ್ಚಲು ಚಿತ್, ಅಪಾನವಾಯು, ಜಿಹ್ವೆ, ರಸ, ಗುಹ್ಯ ಇವುಗಳುಂಟಾಗುತ್ತವೆ. ಪೃಥ್ವಿ ತತ್ವ ಹೆಚ್ಚಲು ಅಹಂಕಾರ, ಪ್ರಾಣ, ಘ್ರಾಣ, ಗಂಧ, ಪಾಯು ಇವುಗಳುಂಟಾಗುತ್ತವೆ.

ಟೀಪುಃ— ಪಂಚಾಕ್ಷರಗಳಿಂದ ಪಂಚಮಹಾಭೂತಗಳಾಗಿರುತ್ತವೆ. ಈ ಪಂಚಾಕ್ಷರಗಳೇ ಲಿಂಗಗಳಿಗೆ ಸ್ಥಾನಗಳಾಗಿವೆ. ಪಂಚಭೂತಗಳ ಗುಣಗಳನ್ನು ಕಳೆಯಲು ಮನುಷ್ಯನು ಲಿಂಗಿಯಾಗುತ್ತಾನೆ. ಪಂಚಾಕ್ಷರಿಯ ಐದು ಅಕ್ಷರಗಳಿಂದಲೇ ಪಂಚ ವಾಯುಗಳು, ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಪಂಚವಿಷಯಗಳು, ಜ್ಞಾನ ಮೊದಲ್ಗೊಂಡು ಅಂತಃಕರಣ ಚತುಷ್ಟಯಗಳು, ಅನುಕ್ರಮವಾಗಿ ಆಯಾ ಲಿಂಗಗಳಿಗೆ ಅರ್ಪಿತವಾಗುತ್ತವೆ. ಅರ್ಪಿತದ ಕಡೆಯಲ್ಲಿ ಪಂಚಾಕ್ಷರಗಳು ಓಂಕಾರದಲ್ಲಿ, ಪಂಚಭೂತಗಳು ಆತ್ಮನಲ್ಲಿ, ಅಡಗುವವು. ಓಂಕಾರವು ಮಹಾಲಿಂಗವಿದ್ದು, ಈ ಲಿಂಗವು ಇವುಗಳನ್ನೆಲ್ಲ ಒಳಕೊಳ್ಳುತ್ತದೆ. ಆಗ ಭಕ್ತನು ಮಹಾಲಿಂಗದಲ್ಲಿ ಅವಿರಳ ಸಂಬಂಧಿಯಾಗಿ ಪ್ರಣವ ಸ್ವರೂಪನಾಗಿ ಐಕ್ಯ ಸ್ಥಿತಿಯನ್ನು ಹೊಂದುತ್ತಾನೆ.

ಆಗ ಪೃಥ್ವಿಯೆಂಬ ಭೂತವು ಭಕ್ತನಂಗವಾಗಿ ಭಕ್ತನಲ್ಲಿಯೇ ಅಡಗಿ, ಅಪ್ಪುವೆಂಬ ಭೂತವು ಮಹೇಶ್ವರನಿಗಂಗವಾಗಿ ಮಹೇಶ್ವರನಲ್ಲಿಯೇ ಅಡಗಿ, ಅಗ್ನಿಯು ಪ್ರಸಾದಿಯಂಗವಾಗಿ ಪ್ರಸಾದಿಯಲ್ಲಿಯೇ ಅಡಗಿ, ವಾಯುವು ಪ್ರಾಣಲಿಂಗಿಯಂಗವಾಗಿ ಪ್ರಾಣಲಿಂಗಿಯಲ್ಲಿಯೇ ಅಡಗಿ, ಆಕಾಶವೇ ಶರಣನಂಗವಾಗಿ ಶರಣನಲ್ಲಿಯೇ ಅಡಗಿ, ಆತ್ಮನೇ ಐಕ್ಯನಂಗವಾಗಿ ಐಕ್ಯನಲ್ಲಿಯೇ ಅಡಗುತ್ತವೆ.

ಹಾಗೆಯೇ ಆಚಾರಲಿಂಗದಂಗ ಭಕ್ತನಾಗಿ ಭಕ್ತನಲ್ಲಿಯೇ ಅಡಗಿ, ಗುರುಲಿಂಗದಂಗ ಮಹೇಶ್ವರನಾಗಿ ಮಹೇಶ್ವರನಲ್ಲಿಯೇ ಅಡಗಿ, ಶಿವಲಿಂಗ

ದಂಗ ಪ್ರಸಾದಿಯಾಗಿ ಪ್ರಸಾದಿಯಲ್ಲಿಯೇ ಅಡಗಿ, ಜಂಗಮಲಿಂಗದಂಗ ಪ್ರಾಣಲಿಂಗಿಯಾಗಿ ಪ್ರಾಣಲಿಂಗಿಯಲ್ಲಿಯೇ ಅಡಗಿ, ಪ್ರಸಾದಲಿಂಗದಂಗ ಶರಣನಾಗಿ ಶರಣನಲ್ಲಿಯೇ ಅಡಗಿ, ಮಹಾಲಿಂಗದಂಗ ಐಕ್ಯನಾಗಿ ಐಕ್ಯನಲ್ಲಿಯೇ ಅಡಗುತ್ತವೆ.

ಈ ಸ್ಥಿತಿಯುಂಟಾಗಲು ಅಂಗವೇ ಕರ್ಪುರವಾಗಿ, ಲಿಂಗವೇ ಜ್ಯೋತಿಯಾಗಿ, ಉರಿಕರ್ಪುರ ಸಂಯೋಗವಾದಂತೆ ಶರಣನ ಅಂಗಕ್ಕೂ ಲಿಂಗಕ್ಕೂ ಅಭಿನ್ನತೆಯುಂಟಾಗಿ ಪರಮಾತ್ಮನಲ್ಲಿ ಭಕ್ತನು ಸಾಮರಸ್ಯವನ್ನು ಹೊಂದುತ್ತಾನೆ.

ಪಂಚೀಕರಣದ ಈ ಜ್ಞಾನದಿಂದ ಅರ್ಪಣದ ರೀತಿಯನ್ನು ತಿಳಿದು ಷಟ್‌ಸ್ಥಲಾಚರಣೆಗಳನ್ನು ಅಷ್ಟಾವರಣಗಳ ಮೂಲಕ ಜರಿಗಿಸುತ್ತ ಲಿಂಗಾಂಗ ಸಾಮರಸ್ಯವನ್ನು ಭಕ್ತನು ಹೊಂದಬೇಕು. ಇದು ಶಿವಶರಣರ ನಡೆಯು, ವಚನಕಾರರು ಸರೂಪುವ ಪದ್ಧತಿಯು.

(೩೧೫) ಕಾಯಾರ್ಪಣದ ರೀತಿ:—(ಹಿಂದೆ ನಂ. ೧೬೦—೧ ಮತ್ತು ನಂ. ೨೮೬ ಇವುಗಳನ್ನು ಸಹ ನೋಡುವುದು.)

(೧) ಭೋಜ್ಯವೆಂಬ ರೂಪನ್ನು ಕಠಿಣವೆಂಬ ದ್ರವ್ಯವನ್ನು ಗಂಧವೆಂಬ ಪದಾರ್ಥವನ್ನು ಕ್ಷೀರಸ್ನಾನವನ್ನು ಓಂ ಹ್ರಾಂ ನಾಂ ನಮಃ ಶಿವಾಯ ಎಂಬ ಮಂತ್ರದಿಂದ ಪೀಠದಲ್ಲಿಯ ಆಚಾರಲಿಂಗಕ್ಕೆ ಅರ್ಪಿಸುವುದು.

(೨) ಪಾನ್ಯವೆಂಬ ರೂಪನ್ನು ಮೃದುವೆಂಬ ದ್ರವ್ಯವನ್ನು ರಸವೆಂಬ ಪದಾರ್ಥವನ್ನು ದಧಿಸ್ನಾನವನ್ನು ಓಂ ಹ್ರೀಂ ಮಾಂ ನಮಃ ಶಿವಾಯ ಎಂಬ ಮಂತ್ರದಿಂದ ಕಟಿಯಲ್ಲಿಯ ಗುರುಲಿಂಗಕ್ಕೆ ಅರ್ಪಿಸುವುದು.

(೩) ಭಕ್ಷ್ಯವೆಂಬ ರೂಪನ್ನು ಉಷ್ಣವೆಂಬ ದ್ರವ್ಯವನ್ನು ರೂಪು ಎಂಬ ಪದಾರ್ಥವನ್ನು ಘೃತಸ್ನಾನವನ್ನು ಓಂ ಹ್ರೂಂ ಶೀಂ ನಮಃ ಶಿವಾಯ ಎಂಬ ಮಂತ್ರದಿಂದ ವರ್ತುಳದಲ್ಲಿಯ ಶಿವಲಿಂಗಕ್ಕೆ ಸಮರ್ಪಿಸುವುದು.

(೪) ಚೋಹ್ಯವೆಂಬ ರೂಪನ್ನು ಶೈತ್ಯವೆಂಬ ದ್ರವ್ಯವನ್ನು ಸ್ಪರ್ಶನವೆಂಬ ಪದಾರ್ಥವನ್ನು ಇಕ್ಷು ಕ್ಷೀರ ಸ್ನಾನವನ್ನು ಓಂ ಹ್ರೈಂ ವಾಂ

ನಮಃ ಶಿವಾಯ ಎಂಬ ಮಂತ್ರದಿಂದ ಗೋಮುಖದಲ್ಲಿಯ ಜಂಗಮಕ್ಕೆ ಸಮರ್ಪಿಸುವುದು.

(೫) ಲೇಹ್ಯವೆಂಬ ರೂಪನ್ನು ಮಿಶ್ರವೆಂಬ ದ್ರವ್ಯವನ್ನು ಶಬ್ದ ವೆಂಬ ಪದಾರ್ಥವನ್ನು ನಾರೀಕೇಳ ಕ್ಷೀರಸ್ನಾನವನ್ನು ಓಂ ಹ್ರಾಂ ಯಾಂ ನಮಃ ಶಿವಾಯ ಎಂಬ ಮಂತ್ರದಿಂದ ನಾಳದಲ್ಲಿಯ ಪ್ರಸಾದ ಲಿಂಗಕ್ಕೆ ಸಮರ್ಪಿಸುವುದು.

(೬) ಇಲ್ಲದಲ್ಲಿಯ ರೂಪನ್ನು ಪರಿಣಾಮವೆಂಬ ದ್ರವ್ಯವನ್ನು ತೃಪ್ತಿ ಎಂಬ ಪದಾರ್ಥವನ್ನು ಸ್ವಾದೋದಕ ಸ್ನಾನವನ್ನು ಓಂ ಹ್ರಃ ಓಂ ನಮಃ ಶಿವಾಯ ಎಂಬ ಮಂತ್ರದಿಂದ ಮಸ್ತಕದಲ್ಲಿಯ ಮಹಾಲಿಂಗಕ್ಕೆ ಸಮರ್ಪಿಸುವುದು.

(೩೧೬) ಕರಣಾರ್ಪಣದ ರೀತಿ:— ಇಲ್ಲಿ ಅಂಗ, ಲಿಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪ್ರಸಾದ, ಪದಾರ್ಥ ಈ ಅಷ್ಟವಿಧ ಸಕೀಲ ಗಳು ಆಯಾ ಆರು ಲಿಂಗಗಳಿಗೆ ಅನುಸರಿಸಿ ಮಿಶ್ರ ೩೬ ಆಗುವವು. ಈ ಮೂವತ್ತಾರುಗಳನ್ನು ಪ್ರಾಣಲಿಂಗದೊಡನೆ ಕೂಡಿದ ೩೬ ಲಿಂಗ ಗಳಿಗೆ ಮನೋಸಂಬಂಧವಾದ ೩೬ ತೆರದ ರುಚಿ ಪದಾರ್ಥಗಳನ್ನು ೩೬ ತೆರದ ಭಕ್ತಿ ಸಕೀಲಗಳಿಂದ ಸಮರ್ಪಿಸುವುದು.

(೩೧೭) ಭಾವಾರ್ಪಣದ ರೀತಿ:— ಕರಣಾರ್ಪಣದ ಮಧ್ಯದಲ್ಲಿ ಭಾವಾರ್ಪಣ ಉಂಟು. ಆತ್ಮ ತತ್ವ ಸಂಬಂಧವಾದ ೨೧೬ ತೆರದ ತೃಪ್ತಿಪದಾರ್ಥಗಳನ್ನು ಭಾವಲಿಂಗದೊಡನೆ ಕೂಡಿದ ೨೧೬ ಲಿಂಗಗಳಿಗೆ ೨೧೬ ತೆರದ ಭಕ್ತಿ ಸಕೀಲಗಳಿಂದ ಸಮರ್ಪಿಸುವುದು. ಕರಣಾರ್ಪಣದ ಮಿಶ್ರವೇ ಭಾವಾರ್ಪಣವು.

(೩೧೮) ಮಾರ್ಗಕ್ರಿಯೆ, ಮೀರಿದಕ್ರಿಯೆ:— ಲಿಂಗಾಂಗ ಸಾಮ ರಸ್ಯದಲ್ಲಿ ಮೊದಲು ಮಾರ್ಗಕ್ರಿಯೆಗಳ ಪ್ರಗತಿಯು ಆ ಮೇಲೆ ಮೀರಿದ ಕ್ರಿಯೆಗಳ ಪ್ರಗತಿಯು ಈ ಮೇರೆಗೆ ಅನುಕ್ರಮವಾಗಿ ಉಂಟಾಗುತ್ತ ಕಡೆಗೆ ಈ ಉಚ್ಚ ಸ್ಥಿತಿಯು ಪ್ರಾಪ್ತನಾಗುತ್ತದೆ. ಮಾರ್ಗಕ್ರಿಯೆಗಳು ಸ್ಥೂಲವಾಗಿಯೂ ಮೀರಿದ ಕ್ರಿಯೆಗಳು ಸೂಕ್ಷ್ಮವಾಗಿಯೂ ಇರುತ್ತವೆ.

(೩೧೯) ಮಾರ್ಗಕ್ರಿಯೆಗಳು:— ಇವುಗಳಲ್ಲಿ ೧೨ ಭಾಗಗಳಿದ್ದು ಪ್ರತಿಯೊಂದರಲ್ಲಿ ೯ ಕ್ರಿಯೆಗಳಿವೆ. ಹೀಗೆ ಅವು ಒಟ್ಟು ೧೦೮ ಆಗುತ್ತವೆ. ಒಂದೊಂದು ಭಾಗದಲ್ಲಿ ಪುನಃ ೯ ಕ್ರಿಯೆಗಳಿದ್ದು ಅವು ಹೆಚ್ಚೆಚ್ಚು ಸೂಕ್ಷ್ಮವಾಗುತ್ತ ಹೋಗುತ್ತವೆ. ಅವು (೧) ಬ್ರಹ್ಮವಿಷ್ಣ್ವಾದಿ ಪೂಜಾರಿಗಳು (೨) ಪೃಥಿವ್ಯಾದಿ ಅಂಗಗಳು (೩) ಸ್ಥೂಲ ಸೂಕ್ಷ್ಮಾದಿ ತನುಗಳು (೪) ಭಕ್ತಮಹೇಶ್ವರಾದಿ ಗಣಗಳು (೫) ಸುಚಿತ್ತ ಸುಬುದ್ಧ್ಯಾದಿ ಹಸ್ತಗಳು (೬) ಶ್ರದ್ಧಾನೈಷ್ಠಿಕಾದಿ ಭಕ್ತಿಗಳು (೭) ಕ್ರಿಯಾಶಕ್ತಿ ಜ್ಞಾನಶಕ್ತ್ಯಾದಿ ಶಕ್ತಿಗಳು (೮) ಆಧಾರ ಸ್ವಾಧಿಷ್ಠಾನಾದಿ ಚಕ್ರಗಳು (೯) ಪೀತ ಶ್ವೇತಾದಿ ವರ್ಣಗಳು (೧೦) ಬ್ರಹ್ಮವಿಷ್ಣ್ವಾದಿ ಅಧಿದೇವತೆಗಳು (೧೧) ಆಚಾರಲಿಂಗ ಗುರುಲಿಂಗಾದಿ ಲಿಂಗಗಳು (೧೨) ಜೀವಾತ್ಮ ಅಂತರಾತ್ಮಾದಿ ಆತ್ಮಾಗಳು ಇದ್ದಾರೆ.

(೩೨೦) ಮೀರಿದ ಕ್ರಿಯೆಗಳು:— ಇವುಗಳಲ್ಲಿ ೧೨ ಭಾಗಗಳಿದ್ದು ಪ್ರತಿಯೊಂದರಲ್ಲಿ ೯ ಕ್ರಿಯೆಗಳವೆ. ಹೀಗೆ ಅವು ಸಹ ಒಟ್ಟು ೧೦೮ ಆಗುತ್ತವೆ. ಒಂದೊಂದು ಭಾಗದಲ್ಲಿ ಪುನಃ ೯ ಕ್ರಿಯೆಗಳಿದ್ದು ಅವು ಹೆಚ್ಚೆಚ್ಚು ಸೂಕ್ಷ್ಮವಾಗುತ್ತ ಹೋಗುತ್ತವೆ. ಅವು (೧) ಕರ್ಮಸಾದಾಖ್ಯ ಕರ್ತೃಸಾದಾಖ್ಯಾದಿ ಸಾದಾಖ್ಯಗಳು, (೨) ನಕಾರ ಮಕಾರಾದಿ ಪ್ರಣಮಗಳು (೩) ತಾರಕಾಕೃತಿ ದಂಡಕಾಕೃತ್ಯಾದಿ ಆಕೃತಿಗಳು, (೪) ಪೂರ್ವಪಶ್ಚಿಮಾದಿ ದಿಕ್ಕುಗಳು (೫) ಋಗ್ವೇದ ಯಜುರ್ವೇದಾದಿ ವೇದಗಳು, (೬) ನಿವೃತ್ತಿಕಲೆ ಪ್ರತಿಷ್ಠಾಕಲೆ ಮೊದಲಾದ ಕಲೆಗಳು, (೭) ಘ್ರಾಣೇಂದ್ರಿಯ ಜಿಹ್ವೇಂದ್ರಿಯಾದಿ ಮುಖಗಳು, (೮) ಗಂಧ ರಸಾದಿ ಪದಾರ್ಥಗಳು, (೯) ಸುಗಂಧ ಸುರಸಾದಿ ಪ್ರಸಾದಗಳು, (೧೦) ಭ್ರಮರ ವೇಣ್ವಾದಿ ನಾದಗಳು, (೧೧) ಸತ್ ಚಿತ್ ಆನಂದಾದಿ ಲಕ್ಷಣಗಳು, (೧೨) ಪರಗೂಢ ಶರೀರಸ್ಥಾದಿ ಸಂಜ್ಞೆಗಳು ಇವೇ ಇರುತ್ತವೆ.

ಟೀಪು:— ಪಂಚೀಕರಣಜ್ಞಾನದಿಂದ ಮಿಶ್ರಾರ್ಪಣದ ರೀತಿಗಳು, ಮಿಶ್ರಾರ್ಪಣದಿಂದ ಲಿಂಗದ ಅನುಭವವು, ಲಿಂಗದ ಅನುಭವದಿಂದ ನಂ॥ ೩೧೯ ಮತ್ತು ೩೨೦ ಇವುಗಳಲ್ಲಿ ಹೇಳಿದ ಕ್ರಿಯೆಗಳ ಉಚ್ಚಸ್ಥಿತಿಗಳು ಪ್ರಾಪ್ತವಾಗುತ್ತದೆ. ಇವುಗಳ ಅಂತ್ಯಸ್ಥಿತಿಯೇ ಲಿಂಗಾಂಗ ಸಾಮರಸ್ಯವಾಗಿರುತ್ತದೆ.

ಹುಕ್ಕಬುಕ್ಕರು ವಿದ್ಯಾರಣ್ಯರು ತಮ್ಮ ಗುರುಗಳೆಂದು ಭಾವಿಸಿ ವರ್ತಿಸಿರುವದಿಲ್ಲ. ಆದರೆ ಕ್ರಿಯಾಶಕ್ತಿ ಆಚಾರ್ಯರೆಂಬವರು ತಮ್ಮ ಗುರುಗಳೆಂದು ಭಾವಿಸಿ ವರ್ತಿಸಿದ್ದಾರೆ. ಅವರು ಶಿಲಾಶಾಸನಗಳಲ್ಲಿ ರಾಜಗುರುಗಳೆಂದು ಕರೆಯಲ್ಪಟ್ಟಿದ್ದಾರೆ. ೧

'ಕಂಪಣರಾಯಚರಿತೆ' ಅಥವಾ 'ಮದುರಾವಿಜಯ' ಎಂಬ ಸಂಸ್ಕೃತ ಕಾವ್ಯವನ್ನು ರಚಿಸಿದ ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ಸಹ ತನ್ನ ಈ ಗ್ರಂಥದ ಆರಂಭದಲ್ಲಿ ಈ ಕ್ರಿಯಾಶಕ್ತಿ ಆಚಾರ್ಯರನ್ನ ತನ್ನ ಗುರುಗಳೆಂದು ಸ್ತುತಿಸಿದ್ದಾಳೆ. ಆದರೆ ಅವಳು ವಿದ್ಯಾರಣ್ಯರ ಹೆಸರನ್ನು ತೆಗೆದುಕೊಂಡಿಲ್ಲ ಮತ್ತು ವಿದ್ಯಾರಣ್ಯರು ಸಾಮ್ರಾಜ್ಯ ಸಂಸ್ಥಾಪಕರೆಂಮ ಅದರಲ್ಲಿ ಆಕೆಯು ಅವರನ್ನು ಎಲ್ಲಿಯೂ ಹೊಗಳಿಲ್ಲ ಅಥವಾ ಉಲ್ಲೇಖಿಸಿಲ್ಲ. ಹುಕ್ಕಬುಕ್ಕರು ವಿದ್ಯಾರಣ್ಯರು ಒಂದು ಮಹತ್ವದ ಪೀಠಕ್ಕೆ ಹೊಂದಿದವರೆಂದು ಮಾತ್ರ ಮನ್ನಿಸುತ್ತಿರಬೇಕೇ ಹೊರತು ಅವರು ರಾಜ ಸಂಸ್ಥಾಪಕರೆಂದಲ್ಲ. ಒಂದು ಕಾಲದಲ್ಲಿ ಹರಿಹರರಾಯನು ಶೃಂಗೇರಿಯಲ್ಲಿ ಅವರನ್ನು ಕಂಡು ದಾನ ಕೊಟ್ಟಿದ್ದಾನೆ. ಆದರೆ ಇಷ್ಟರಿಂದಲೇ ಅವರು ಸ್ವರಾಜ್ಯ ಸಂಸ್ಥಾಪಕರೆಂದು ಹೇಳುವದು ಐತಿಹಾಸಿಕ ದೃಷ್ಟಿಯಿಂದ ಸರಿಯಾಗಲಾರದು. ಈ ಆಖ್ಯಾಯಿಕೆಯು ಮುಂದೆ ಒಂದೆರಡು ಶತಮಾನಗಳ ತರುವಾಯ ಹುಟ್ಟಿದ್ದಿರುತ್ತದೆ. ಈ ವಿಷಯವನ್ನು ಕುರಿತು ಬಹು ವಿಸ್ತೃತವಾಗಿ ರೆವರಂಡ ಫಾದರ್ ಹಿರಾಸ್ ಇವರು ತಮ್ಮ ಗ್ರಂಥದಲ್ಲಿ[೨] ಚರ್ಚಿಸಿದ್ದಾರೆ. ಇದೇ ಅಭಿಪ್ರಾಯವನ್ನು ಡಾ. ಬಿ. ಎ. ಸಾಲೇಟೋರ ಎಮ್. ಎ. ಪಿ. ಎಚ್. ಡಿ. ಇವರು ತಮ್ಮ ಗ್ರಂಥದಲ್ಲಿ (Social and Political life in the Vijayanagar Empire ಸಂಪುಟ ೧ ಇದರಲ್ಲಿ ಪುಟ ೯೯ ರಿಂದ ೧೧೦ ರ ವರೆಗೆ) ಚರ್ಚಿಸಿದ ವಿಷಯಗಳನ್ನು ವಾಚಕರು ಅವಲೋಕಿಸತಕ್ಕದ್ದು. ಆದ್ದರಿಂದ ಮುಸಲ್ಮಾನರನ್ನ ತಡೆದದ್ದರ ಶ್ರೇಯಸ್ಸು ಹೊಯಿಸಳರ ಮೂರನೆಯ ವೀರಬಲ್ಲಾಳರಾಯನಿಗೆ ಮತ್ತು ಅವನಿಗೆ

---

(೧) (ಬುಳುಬಾಲ ಶಾಸನ— ಎಪಿಗ್ರಾಫಿಕಾ ಕರ್ನಾಟಕಾ ಸಂಪುಟ ೮ ಪುಟ ೧೦೦ ನೋಡಿರಿ)

(2) Beginnings of Vijayanagar History

ಸಹಾಯಕರಾಗಿ ವರ್ತಿಸಿದ ಹರಿಹರ ಅಥವಾ ಬುಕ್ಕ ಮತ್ತು ಅವನ ಬಂಧುಗಳಿಗೆ ಮಾತ್ರ ಸಲ್ಲುತ್ತದೆ.

**ವಿಜಯನಗರ**:— ಇತಿಹಾಸ ಸಂಶೋಧಕರಾದ ರೆವರೆಂಡ ಫಾದರ್ ಹಿರಾಸ ಇವರು ೧೪ನೇ ಶತಮಾನದ ಪೂರ್ವದಲ್ಲಿ ತುಂಗಭದ್ರೆಯ ದಕ್ಷಿಣಕ್ಕೆ ವಿಜಯನಗರ ಪಟ್ಟಣವೇ ಇರಲಿಲ್ಲವೆಂತಲೂ ಬಹಳವಾದರೆ ವಿರೂಪಾಕ್ಷನ ಒಂದು ದೇವಾಲಯವು ಮಾತ್ರ ಅಲ್ಲಿ ಇದ್ದಿರಬೇಕೆಂತಲೂ ಅಭಿಪ್ರಾಯಪಟ್ಟಿದ್ದಾರೆ. ಈ ರಾಜಧಾನಿಯನ್ನು ಮೊದಲು ರಚಿಸಿದವರು ಮೂರನೇ ಬಲ್ಲಾಳರಾಯನೆಂದು ಅವರ ಅಭಿಪ್ರಾಯವಿರುತ್ತದೆ. ರಾಬರ್ಟ ಸೆವೆಲರವರು ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕರು ಮಾಧವಾಚಾರ್ಯರು ಅಥವಾ ವಿದ್ಯಾರಣ್ಯರು ಇದ್ದಾರೆಂದು ತಮ್ಮ ಗ್ರಂಥದಲ್ಲಿ (Forgotten Empire) ಅಭಿಪ್ರಾಯ ಪಟ್ಟು ಅವರಿಂದಲೇ ಈ ರಾಜಧಾನಿಯು ಸ್ಥಾಪಿತವಾಯಿತೆಂದು ಹೇಳಿರುತ್ತಾರೆ. ಆದರೆ ವಿಜಯನಗರ ಪಟ್ಟಣವು ಪಂಪಾ ವಿರೂಪಾಕ್ಷ ದೇವಾಲಯದ ಸುತ್ತಲೂ ಹಬ್ಬಿದ್ದಿದ್ದು ಈ ಪಟ್ಟಣವು ೧೩೩೬ರಕಿಂತಲೂ ಮೊದಲು ಅಸ್ತಿತ್ವದಲ್ಲಿತ್ತೆಂಬುದು ಹರಿಹರನು ರಚಿಸಿದ ಪಂಪಾಕ್ಷೇತ್ರದ ರಗಳೆ ಎಂಬ ರಗಳೆಯಿಂದ ತಿಳಿದು ಬರುತ್ತದೆ. (ಹರಿಹರನ ರಗಳೆಗಳು ಭಾಗ ೭ ನೋಡಿರಿ.) ಈ ಕವಿಯು ೧೩ನೇ ಶತಮಾನದ ಆದಿಭಾಗದಲ್ಲಿ ಅಥವಾ ೧೨ನೇ ಶತಮಾನದ ಅಂತ್ಯದಲ್ಲಿದ್ದನೆಂದು ಸದ್ಯದಲ್ಲಿ ಊಹಿಸಲ್ಪಟ್ಟಿದೆ. ಈ ರಗಳೆಯಲ್ಲಿ ಈ ಪಟ್ಟಣದ ವಿಸ್ತಾರವು ಒಂದು ಯೋಜನವಾಗಿತ್ತೆಂತಲೂ ಅದಕ್ಕೆ ನಾಲ್ಕು ಬಾಗಿಲುಗಳಿದ್ದವೆಂತಲೂ ಕವಿಯು ಹೇಳಿ ಅಲ್ಲಿ ಇದ್ದಂಥ ಅನೇಕ ದೇವಾಲಯಗಳನ್ನೂ ತೀರ್ಥಗಳನ್ನೂ ಸವಿಸ್ತಾರವಾಗಿ ವರ್ಣಿಸಿದ್ದಾನೆ. ಇದರಿಂದ ಈ ಪಟ್ಟಣವು ಬಲ್ಲಾಳರಾಯ, ಹರಿಹರದೇವ, ಅಥವಾ ವಿದ್ಯಾರಣ್ಯ ಇವರಿಂದ ಸ್ಥಾಪಿತವಾಗಿರದೆ 'ಅದು ಪುರಾತನ ಕಾಲದ್ದೆಂದು ತೋರಿಬರುತ್ತದೆ. ಇದು ದುರ್ಗಮವಾದ ಪ್ರದೇಶದಲ್ಲಿದ್ದುದರಿಂದ ಬಲ್ಲಾಳರಾಯನು ಅದನ್ನು ಮೊದಲು ಬಹಳವಾಗಿ ಭದ್ರಪಡಿಸಿದನು. ಮುಂದೆ ವಿಜಯನಗರದ ಅರಸರು ಅದನ್ನು ಕ್ರಮೇಣ ಹೆಚ್ಚು ಹೆಚ್ಚು ಬಲಪಡಿಸುತ್ತ ಬಂದಿದ್ದಾರೆ. ಮುಂದೆ ಈ ಪಟ್ಟಣದ ವಸತಿಯು ಬೆಳೆದಂತೆ ಅದು ಬಹು ವಿಸ್ತಾರವಾಗಿ ಪಂಪಾಕ್ಷೇತ್ರದ ಸುತ್ತಲೂ ಹಬ್ಬಿತು.

# ೭ ನೇ ಪ್ರಕರಣ.

## ವಿಜಯನಗರದ ರಾಜ್ಯ.

(೧೪೧೯ರಿಂದ ೧೫೬೫ರ ವರೆಗೆ)

**೨ನೇ ದೇವರಾಯನು**— ಎರಡನೇ ದೇವರಾಯನು ೧೪೧೯ರಿಂದ ೧೪೪೪ರ ವರೆಗೆ ಬಹು ವೈಭವದಿಂದ ರಾಜ್ಯವಾಳಿದನು. ವಿಜಯನಗರದ ಮಹತ್ವದ ರಾಜರುಗಳಲ್ಲಿ ಇವನೊಬ್ಬನಾಗಿದ್ದಾನೆ. ಇವನು ಬಾಮನಿ ಬಾದಶಹರೊಂದಿಗೆ ಅನೇಕ ಬಾರಿ ಯುದ್ಧ ಮಾಡುವ ಪ್ರಸಂಗಗಳು ಬಂದೊದಗಿದವು. ಆದರೆ ಈ ರಾಜನು ಅವರೊಡನೆ ಬಹು ಶೂರತನದಿಂದ ಯುದ್ಧಮಾಡಿ ತನ್ನ ರಾಜ್ಯವನ್ನು ಸಂರಕ್ಷಿಸಿಕೊಂಡನು. ಅವನ ರಾಜ್ಯವು ಕನ್ಯಾಕುಮಾರೀ ಭೂಶಿರದ ವರೆಗೆ ಇಡೀ ದಕ್ಷಿಣ ಹಿಂದುಸ್ತಾನವನ್ನು ವ್ಯಾಪಿಸಿತ್ತು. ಅವನು ಸ್ವತಃ ಗ್ರಂಥಕರ್ತನಾಗಿದ್ದನೆಂಬ ಪ್ರತೀತಿ ಇದೆ. ಮತ್ತು ಅವನು ವಾಙ್ಮಯ ಪ್ರೇಮಿಯೂ ಆಗಿದ್ದನು. ಅವನ ಕಾಲದಲ್ಲಿಯೇ ವೀರಶೈವರ ನೂರೊಂದು ವಿರಕ್ತರು ಪ್ರಸಿದ್ಧಿಗೆ ಬಂದು ಅರಸನ ಓಲಗದಲ್ಲಿ ಅವನಿಂದ ವಿಶೇಷ ಮನ್ನಣೆಯನ್ನು ಹೊಂದಿದರು. ವಿಜಯನಗರ ರಾಜ್ಯವು ಆಗ ವ್ಯಾಪಾರೋದ್ಯೋಗಗಳಲ್ಲಿ ಬಹು ಉನ್ನತ ಸ್ಥಾನವನ್ನು ಹೊಂದಿ ಪರದೇಶದ ರಾಜರಿಂದ ಸಹ ಆದರವನ್ನು ಹೊಂದುವಂತಹ ಸ್ಥಿತಿಯನ್ನು ಪಡೆಯಿತು.

**ಮಲ್ಲಿಕಾರ್ಜುನನು**- ದೇವರಾಜನ ತರುವಾಯ ಅವನ ಮಗನಾದ ಮಲ್ಲಿಕಾರ್ಜುನನು ಪಟ್ಟವೇರಿದನು. ಮೊದಲು ಅವನಿಗೆ ಪಟ್ಟದ ವಿಷಯವಾಗಿ ತೊಂದರೆಗಳುದ್ಭವಿಸಿದವು. ಆದರೆ ಅವನು ಅವುಗಳನ್ನೆಲ್ಲ ದೂರಮಾಡಿ ಸಿಂಹಾಸನಾರೂಢನಾಗಿ ೧೪೪೪ರಿಂದ ೧೪೬೪ರ ವರೆಗೆ ರಾಜ್ಯವಾಳಿದನು. ಇವನ ಕಾಲದಲ್ಲಿ ಬಾಮನೀ ರಾಜ್ಯದಲ್ಲಿ ಕಲಹಗಳಿದ್ದದ್ದರಿಂದ ಆದರಲ್ಲಿ ಐದು ವಿಭಾಗಗಳಾದವು. ಹೀಗೆ ಈ ರಾಜ್ಯದಲ್ಲಿ ತೊಂದರೆಗಳುಂಟಾದ್ದರಿಂದ ಮುಸಲ್ಮಾನರಿಂದ ಇವನ ಕಾಲದಲ್ಲಿ ಯಾವ ಉಪಟಳಗಳು ಉಂಟಾಗಲಿಲ್ಲ. ಮಲ್ಲಿಕಾರ್ಜುನನು ಜನಪ್ರಿಯನಾಗಿ ರಾಜ್ಯವಾಳಿದನು. ಇವನಿಗೆ ಇಮ್ಮಡಿ ಪ್ರೌಢದೇವರಾಯನೆಂದು ಇನ್ನೊಂದು ಹೆಸರಿದೆ. ಇವನು ತನ್ನ ತಂದೆಯಂತೆ ವೀರಶೈವ ವಾಙ್ಮಯವನ್ನು ಪ್ರೋತ್ಸಾಹಪಡಿಸುವವನಾಗಿದ್ದನು.

**ವಿರೂಪಾಕ್ಷರಾಯ**ಃ – ಮಲ್ಲಿಕಾರ್ಜುನನ ತರುವಾಯ ಪಟ್ಟದ ಸಲುವಾಗಿ ರಾಜ್ಯದಲ್ಲಿ ಅಂತಸ್ಥ ಕಲಹಗಳುದ್ಭವಿಸಿದವು. ಆದರೆ ಕಡೆಗೆ ಮಲ್ಲಿಕಾರ್ಜುನನ ತಮ್ಮನಾದ ವಿರೂಪಾಕ್ಷರಾಯನು ಪಟ್ಟವೇರಿದನು. ಇವನು ಆಳುವಾಗ್ಗೆ ೧೪೭೦ರಲ್ಲಿ ಗಜಪತಿರಾಯನೂ ಮುಸಲ್ಮಾನರೂ ಅವನ ರಾಜ್ಯದಲ್ಲಿ ದಾಳಿಯಿಡಲು ಅವನ ಸೇನಾಪತಿಯಾದ ಸಾಳುವ ನರಸಿಂಹನು ಅವರನ್ನು ಹಿಂದಕ್ಕಟ್ಟಿದನು. ವಿರೂಪಾಕ್ಷರಾಜನು ವೀರಶೈವ ಧರ್ಮವನ್ನು ಸ್ವೀಕರಿಸಿದವನಾಗಿದ್ದನು. ಅವನು ೧೪೬೫ರಿಂದ ೧೪೯೦ರ ವರೆಗೆ ಆಳಿದನು.

**ಸಾಳುವ ನರಸಿಂಹ**ಃ – ವಿರೂಪಾಕ್ಷ ರಾಜನು ತೀರಿಕೊಂಡ ಬಳಿಕ ದೇಶದಲ್ಲಿ ಬಹಳ ಅವ್ಯವಸ್ಥೆಯುಂಟಾಯಿತು. ಆಗ ಅವನ ದಳವಾಯಿಯಾದ ಸಾಳುವ ನರಸಿಂಹನು ತಾನೇ ಪಟ್ಟವನ್ನು ಆಕ್ರಮಿಸಿ ರಾಜ್ಯವಾಳಹತ್ತಿದನು. ಅವನು ೧೪೯೦ರಿಂದ ೧೪೯೮(?)ರ ವರೆಗೆ ರಾಜ್ಯವಾಳಿದನು. ಅವನು ಮರಣ ಹೊಂದುವ ಕಾಲದಲ್ಲಿ ಅವನಿಗೆ ಇಮ್ಮಡಿನರಸಿಂಹ ಮತ್ತು ಇನ್ನೊಬ್ಬನು ಹೀಗೆ ಇಬ್ಬರು ಮಕ್ಕಳಿದ್ದರು. ಇವರಲ್ಲಿ ಇಮ್ಮಡಿ ನರಸಿಂಹನು ಪಟ್ಟವೇರಿದನು. ಆದರೆ ಇವರಿಬ್ಬರು ಚಿಕ್ಕವರಾದ್ದರಿಂದ ಅವರನ್ನು ಸಾಳುವ ನರಸಿಂಹನು ತುಳುದೇಶದವನಾದ ನರಸನಾಯಕನೆಂಬ ತನ್ನ ಸೇನಾಪತಿಯ ರಕ್ಷಣೆಯಲ್ಲಿ ಇಟ್ಟು ತೀರಿಕೊಂಡನು. ಆದರೆ ಈ ನರಸನಾಯಕನು ಸ್ವಲ್ಪಕಾಲದಲ್ಲಿಯೇ ಇವರಿಬ್ಬರನ್ನು ಕೊಂದು ಹಾಕಿ ತಾನೇ ರಾಜ್ಯವಾಳಹತ್ತಿದನು.

**ನರಸನಾಯಕನು**ಃ—ನರಸನಾಯಕನು ೧೪೯೮ರಿಂದ ೧೫೦೩(?)ರ ವರೆಗೆ ಆಳಿದನು. ಇವನ ತರುವಾಯ ಅವನ ಮಗನಾದ ವೀರನರಸಿಂಹನು ಪಟ್ಟವೇರಿದನು. ಅವನು ೧೫೦೩ ರಿಂದ ೧೫೦೯ರ ವರೆಗೆ ಆಳಿದ ಬಳಿಕ ನರಸನಾಯಕನ ಇನ್ನೊಬ್ಬ ಮಗನಾದ ಕೃಷ್ಣದೇವರಾಯನು ಪಟ್ಟವೇರಿದನು.

**ಕೃಷ್ಣದೇವರಾಯ**ಃ— ಕೃಷ್ಣದೇವರಾಯನು ವಿಜಯನಗರದ ಪ್ರಸಿದ್ಧ ರಾಜರಲ್ಲಿ ಒಬ್ಬನಾಗಿದ್ದಾನೆ. ಇವನು ೧೫೦೯ ರಿಂದ ೧೫೩೦ರ ವರೆಗೆ ರಾಜ್ಯವಾಳಿದನು. ಇವನ ಕಾಲದಲ್ಲಿ ವಿಜಯನಗರ ರಾಜ್ಯವು ಅತ್ಯಂತ ಘನತೆಯನ್ನು ಹೊಂದಿತು. ಅವನು ಮುಸಲ್ಮಾನ ಬಾದ

ಶಹರನ್ನು ಗೆದ್ದು ಉತ್ತರಕ್ಕೆ ಕೃಷ್ಣಾನದಿಯ ವರೆಗೆ ರಾಜ್ಯವನ್ನು ವಿಸ್ತರಿಸಿದನು. ಗೋವಳಕೊಂಡದ ಕುತುಬಶಹನನ್ನು ಗೆದ್ದು ಓಡಿಸಾ ಪ್ರಾಂತದ ವರೆಗೂ ತನ್ನ ರಾಜ್ಯದ ಮೇರೆಯನ್ನು ಹಬ್ಬಿಸಿದನು. ಅವನು ಕಲಾನಿಪುಣನೂ ವಾಙ್ಮಯ ಪ್ರೇಮಿಯೂ ಅತ್ಯಂತ ಶೂರನೂ ಎಂದು ವಿಜಯನಗರದ ರಾಜರಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ್ದಾನೆ.

**ಅಚ್ಯುತರಾಯ:**— ಕೃಷ್ಣರಾಯನ ತರುವಾಯ ಅವನ ತಮ್ಮನಾದ ಅಚ್ಯುತರಾಯನು ೧೫೩೦ ರಿಂದ ೧೫೪೨ರ ವರೆಗೆ ರಾಜ್ಯವಾಳಿದನು. ಅವನು ಅತ್ಯಂತ ದುರ್ಬಲನಾದ್ದರಿಂದ ಅಂತಸ್ಥಕಲಹಗಳು ದೇಶದಲ್ಲಿ ಬಹಳ ಹೆಚ್ಚಿದವು. ಇದರಿಂದ ಮುಸಲ್ಮಾನರು ಇವನ ರಾಜ್ಯವನ್ನು ಅನೇಕ ಸಾರೆ ಅಭಿಯೋಗಿಸಲು ಅವರಿಗೆ ಆಗಿಂದಾಗ್ಗೆ ಹಣ ಕೊಟ್ಟು ಹಿಂದಿರುಗಿಸಬೇಕಾಗಿತ್ತು. ಇವನ ಕಾಲದಲ್ಲಿ ಕೃಷ್ಣರಾಯನ ಅಳಿಯನಾದ ರಾಮರಾಯನು ಬಹಳ ಪ್ರಬಲನಾದನು.

**ಸದಾಶಿವರಾಯ:**— ಅಚ್ಯುತರಾಯನು ೧೫೪೨ರಲ್ಲಿ ತೀರಿಕೊಳ್ಳಲು ಅವನ ತಮ್ಮನ ಮಗನಾದ ಸದಾಶಿವರಾಯನು ಪಟ್ಟವೇರಿದನು. ಆದರೆ ನಿಜವಾದ ರಾಜ್ಯದಾಡಳಿತೆಯು ರಾಮರಾಯನ ಕೈಯಲ್ಲಿಯೇ ಉಳಿಯಿತು. ಸದಾಶಿವರಾಯನು ಅಚ್ಯುತರಾಯನ ತರುವಾಯ ಕೆಲವು ಕಾಲ ಜೀವಂತ ಇದ್ದರೂ ಎಲ್ಲ ಆಡಳಿತೆಯನ್ನು ರಾಮರಾಜನೇ ನಡಿಸುತ್ತ ಬಂದನು.

**ರಾಮರಾಜ:**— ರಾಮರಾಜನು ೧೫೪೨ ರಿಂದ ೧೫೬೫ರ ವರೆಗೆ ರಾಜ್ಯವಾಳಿದನು. ಇವನು ಶೂರನೂ ಯೋಗ್ಯತೆಯುಳ್ಳವನೂ ಆಗಿದ್ದರಿಂದ ಅವನ ಕಾಲದಲ್ಲಿ ವಿಜಯನಗರದ ರಾಜ್ಯವು ಪುನಃ ಊರ್ಜಿತ ಸ್ಥಿತಿಯನ್ನು ಹೊಂದಿತು. ಮುಸಲ್ಮಾನ ಬಾದಶಹರು ಅವನ ಮೇಲೇರಿ ಹೋಗಲಿಕ್ಕೆ ಭಯಪಡುತ್ತಿದ್ದರು. ಆದರಿಂದ ಕರ್ನಾಟಕ ರಾಜ್ಯವು ಉನ್ನತಾವಸ್ಥೆಗೆ ಬರತೊಡಗಲು ಇದನ್ನು ಸಂಪೂರ್ಣವಾಗಿ ನಾಶ ಮಾಡಬೇಕೆಂಬ ಉದ್ದೇಶದಿಂದ ಐವರು ಮುಸಲ್ಮಾನ ಬಾದಶಹರು ಒಟ್ಟಾಗಿ ಸೇರಿ ಒಂದು ದೊಡ್ಡ ಸೈನ್ಯವನ್ನು ಕೂಡಿಸಿ ವಿಜಯನಗರದ ರಾಜ್ಯವನ್ನು ಅಭಿಯೋಗಿಸಿದರು. ಕೃಷ್ಣೆಯ ದಂಡೆಯ ಮೇಲೆ ವಿಜಾಪುರ ಜಿಲ್ಲೆಯಲ್ಲಿರುವ ತಂಗಡಗಿ ಮತ್ತು ರಕ್ಕಸಗಿ

ಎಂಬ ಗ್ರಾಮಗಳ ಮಧ್ಯದಲ್ಲಿರುವ ಬಯಲಿನಲ್ಲಿ ಉಭಯ ಪಕ್ಷಗಳ ನಡುವೆ ತುಮುಲ ಯುದ್ಧವಾಯಿತು. ಇದಕ್ಕೆ ತಾಳೀಕೋಟೆಯ ಕಾಳಗವೆಂಬ ಹೆಸರು ಬಂದಿರುತ್ತದೆ. ಇದರಲ್ಲಿ ಮುಸಲ್ಮಾನರು ಜಯವನ್ನು ಹೊಂದಿದರು ಮತ್ತು ರಾಮರಾಯನು ಕೊಲ್ಲಲ್ಪಟ್ಟನು. ಮುಂದೆ ಮುಸಲ್ಮಾನ ಬಾದಶಹರ ದಂಡುಗಳು ವಿಜಯನಗರಕ್ಕೆ ಸಾಗಿ ಪಟ್ಟಣವನ್ನು ಹಾಳು ಮಾಡಿದರು. ಈ ಪ್ರಕಾರ ವಿಜಯನಗರದ ರಾಜ್ಯವು ೧೩೩೬ರಲ್ಲಿ ಸ್ಥಾಪಿಸಲ್ಪಟ್ಟು ೨೨೮ ವರ್ಷಗಳ ವರೆಗೆ ಬಾಳಿತು.

---

## ೪ನೇ ಪ್ರಕರಣ.

## ವಿಜಯನಗರದ ಆರಂಭದ ಅರಸರು ಶೈವಸಾಂಪ್ರದಾಯ.

ವಿಜಯನಗರದ ಅರಸರು ರಾಜ್ಯವಾಳಿದ ಕಾಲದಲ್ಲಿ ಕರ್ನಾಟಕದ ಸಂಸ್ಕೃತಿಯ ದೃಷ್ಟಿಯಿಂದ ನಾವು ನಾಲ್ಕು ವಿಭಾಗಗಳನ್ನು ಮಾಡಬಹುದು. (೧) ೧ನೇ ಹರಿಹರರಾಯ (ಹುಕ್ಕ)ನಿಂದ ಎರಡನೇ ದೇವರಾಯನ ವರೆಗಿನ ಕಾಲ (೧೩೩೬--೧೪೧೯). (೨) ಎರಡನೇ ದೇವರಾಯನಿಂದ ನರಸನಾಯಕನ ಆಳಿಕೆಯ ಆರಂಭದ ವರೆಗಿನ ಕಾಲ (೧೪೧೯--೧೪೯೮). (೩) ನರಸನಾಯಕನ ಆಳಿಕೆಯಿಂದ ಕೃಷ್ಣದೇವರಾಯನ ಆಳಿಕೆಯ ಆರಂಭದ ವರೆಗಿನ ಕಾಲ ೧೪೯೮--೧೫೦೯). (೪) ಕೃಷ್ಣದೇವರಾಯನ ಆಳಿಕೆಯಿಂದ ತಾಳೀಕೋಟೆ ಕಾಳಗದ ವರೆಗಿನ ಕಾಲ (೧೫೦೯--೧೫೬೪), ಹೀಗೆ ನಾವು ನಾಲ್ಕು ವಿಭಾಗಗಳನ್ನು ಕಲ್ಪಿಸಬಹುದು. ಮೊದಲನೇ ವಿಭಾಗದಲ್ಲಿ ಆಳಿದ ವಿಜಯನಗರದ ರಾಜರು ಆಗಮಿಕ ಶೈವಪಂಥವನ್ನು ಹೊಂದಿದವರಾಗಿದ್ದರೆಂದು ತಿಳಿಯುತ್ತಿದೆ. ಎರಡನೆಯ ವಿಭಾಗದಲ್ಲಿ ಅವರು ವೀರಶೈವ ಮತಕ್ಕೆ ಒಲಿದವರಾಗಿ ಇವರಲ್ಲಿಯ ವಿದ್ವಾಂಸರಿಗೆ ವಿಶೇಷ ಪ್ರೋತ್ಸಾಹವನ್ನು ಕೊಡುವಂಥವರಾ

ರಿಸಿದವರು ಇವರೇ ಇದ್ದಾರೆ. ೧೫ನೇ ಶತಮಾನವು ಕರ್ನಾಟಕದಲ್ಲಿ ಕತ್ತಲೆಯ ಯುಗವೆಂದು ಹೇಳಬಹುದು. ಈ ಕಾಲದಲ್ಲಿ ಧರ್ಮೋದ್ಧಾರದ ಕಾರ್ಯಗಳನ್ನು ಜರುಗಿಸುವದು ಕಠಿಣವಾದದ್ದರಿಂದ ಬಸವೇಶ್ವರನು ಸ್ಥಿರಪಡಿಸಿದ ವಚನಶಾಸ್ತ್ರದ ತತ್ವಗಳು ಜನರ ಲಕ್ಷದಿಂದ ಹಾರಿಹೋಗಿದ್ದವು. ಈ ಕಾರ್ಯವು ಪುನಃ ಈ ಕಾಲದಲ್ಲಿ ಕೈಕೊಳ್ಳಲಾಯಿತು. ಅಪರಿಚಿತವಾಗಿ ಹೋಗಿದ್ದ ವಚನಗ್ರಂಥಗಳು ಈಗ ಸಂಗ್ರಹಿಸಲ್ಪಟ್ಟವು. ಕುಮಾರ ಬಂಕನಾಥನು ಪ್ರಭುದೇವರ ಅನೇಕ ವಚನಗಳನ್ನು ಸಂಗ್ರಹಿಸಿ ಅವುಗಳಿಗೆ ಟೀಕೆಯನ್ನು ಬರೆದನು. ಈತನು ದಂಡನಾಯಕನಾದ ಜಕ್ಕಣಾರ್ಯನ ಗುರುವು. ಇಷ್ಟರಲ್ಲಿ ಖಿಲವಾಗಿ ಹೋಗಿದ್ದ ಬಸವ, ಚನ್ನಬಸವ, ಸಿದ್ಧರಾಮ ಇವರೇ ಮೊದಲಾದವರ ವಚನಗಳು ಪುನಃ ಸಂಗ್ರಹಿಸಲ್ಪಟ್ಟವು. ಕೆಲವೊಂದು ಪದ್ಧತಿಯಿಂದ ಅವೆಲ್ಲವುಗಳು ಕ್ರಮಗೊಳಿಸಲ್ಪಟ್ಟವು. ಹೀಗೆ ವೀರಶೈವ ಮತತತ್ವಗಳು ವಚನಗ್ರಂಥಗಳ ಮೂಲಕವಲ್ಲದೆ ಇನ್ನೂ ಅನೇಕ ವಿಧವಾಗಿ ನಿರೂಪಿಸಲ್ಪಡಹತ್ತಿದವು. ಜಕ್ಕಣಾರ್ಯ ಮಂತ್ರಿಯು 'ಏಕೋತ್ತರಶತಸ್ಥಲ' ಎಂಬ ಗ್ರಂಥವನ್ನು ಪುರಾತನ ವಚನಗಳ ಮತ್ತು ಆಗಮಾದಿ ಗ್ರಂಥಗಳ ಆಧಾರದಿಂದ ರಚಿಸಿದ್ದಾನೆ. ಕಲ್ಲುಮಠದ ಪ್ರಭುದೇವನು ವಚನಗಳ ಸಹಾಯದಿಂದ 'ಲಿಂಗಲೀಲಾವಿಲಾಸ ಚಾರಿತ್ರ' ಎಂಬ ಹೆಸರಿನ ಗ್ರಂಥವನ್ನು ಸಿದ್ಧಪಡಿಸಿ ೩೨ ಸ್ಥಲಗಳ ಮೂಲಕ ಶಿವಶರಣರ ಮತತತ್ವಗಳನ್ನು ನಿರೂಪಿಸಿದ್ದಾನೆ. ಬೇರೆ ಕೆಲ ಮಹಾನುಭಾವರು ಷಟ್ಪದಿ ಮತ್ತು ತ್ರಿಪದಿಗಳ ಮೂಲಕವೂ ಇವುಗಳನ್ನು ವಿವೇಚಿಸಿದ್ದಾರೆ. ಷಟ್ಪದಿ ಕಾವ್ಯವಾದ ಪ್ರಭುಲಿಂಗಲೀಲೆಯನ್ನು ಬರೆದ ಚಾಮರಸನು ದೇವರಾಯನಿಂದ ಸನ್ಮಾನವನ್ನು ಹೊಂದಿದವನಾಗಿದ್ದಾನೆ. ಅದೇ ಬಗೆಯಾಗಿ ಷಟ್ಪದಿಯಲ್ಲಿ ಮತತತ್ವಗಳನ್ನು ಮೊಗ್ಗೆಯ ಮಾಯಿದೇವನು ನಿರೂಪಿಸಿದ್ದಾನೆ. ಇವನೂ ದೇವರಾಯನಿಂದ ವಿಶೇಷವಾಗಿ ಮನ್ನಣೆಯನ್ನು ಹೊಂದಿರುವನು. ಗುರುಬಸವನೆಂಬ ಕವಿಯು ಸಪ್ತಕಾವ್ಯಗಳೆಂದು ಪ್ರಸಿದ್ಧಿಹೊಂದಿದ ಕಾವ್ಯಗುಚ್ಛವನ್ನು ಬರೆದಿದ್ದಾನೆ. ಇವನು ರಚಿಸಿದ ಶಿವಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ ಮತ್ತು ಮನೋವಿಜಯ ಇವೆಲ್ಲವೂ ಉದ್ಗ್ರಂಥಗಳು. ಈತನು ೨ನೇ ದೇವರಾಯನಲ್ಲಿ ಬಹಳ ಕೀರ್ತಿಯನ್ನು ಹೊಂದಿದನೆಂದು ವಿರುಪಾಕ್ಷ ಪಂಡಿತನು ತನ್ನ ಚನ್ನಬಸವ ಪುರಾಣದಲ್ಲಿ

ಗನಿಶಂ ಸಮಾಧಾನವಿತ್ತು ॥ ವೃಜಿನಹರ ಪಂಪಾವಿರೂಪಾಕ್ಷ ಚರಣಮಂ। ಭಜಿಸುತ್ತ ವಿಜಯ ಕಲ್ಯಾಣಪುರದೊಳು ಮೆರೆವ । ವಿಜಯನೆನೆ ದೇವ ರಾಜೇಂದ್ರನಿರವರಿವವರ ಚರಣಾಂಬುಜಕ್ಕೆ ಶರಣು ॥

ಇದರಲ್ಲಿ ದೇವರಾಜನು ಶಿವಾರ್ಚಕರಿಗೆ ಯಾವಾಗಲೂ ಸಮಾಧಾನವನ್ನು ಕೊಡುವವನು ಎಂದು ಹೇಳಿದ್ದಾನೆ. ಮುಂದೆ ತನ್ನ ವಿಷಯವಾಗಿ ಲಕ್ಕಣ್ಣದಂಡೇಶನು ಹೇಳಿಕೊಂಡಿರುವದೇನಂದರೆ—

ಧರಣೀಶ ದೇವರಾಜೇಂದ್ರನ ಮಹದೈಶ್ವರ್ಯ । ಶರಧಿವರ್ಧನ ಕಳಾಧಾರನೆನಿಸಿ ರಿಪುತಿಮಿರ । ಹರಣಪಟುತರ ಚಂಡಕರನೆನಿಸಿ ಸಕಲ ಸಜ್ಜನ ಕಲ್ಪತರುವೆನ್ನಿಸುತಾ॥ ಹರಶರಣ ಹೃದಯ ಚಿಂತಾರತ್ನವೆನಿಸಿವಿ। ಸ್ತರಿಸಿ ಶಿವಭಕ್ತಿ ಮಹಿಮಾಪ್ರಭಾವವನೊರೆವ । ಕರುಣಾಳು ಲಕ್ಕಣ್ಣ ದಂಡೇಶನೆಂಬವರ ಚರಣಾಂಬುಜಕ್ಕೆ ಶರಣು ॥

ಇದರಲ್ಲಿ ತಾನು ದೇವರಾಯನ ಐಶ್ವರ್ಯಕ್ಕೆ ಕಾರಣನೆಂತಲೂ ಶೂರನೆಂತಲೂ ಹರಶರಣರಿಗೆ ಚಿಂತಾರತ್ನವೆಂತಲೂ ಶಿವಭಕ್ತಿಮಹಿಮೆಯನ್ನು ಹೇಳುವವನೆಂತಲೂ ಲಕ್ಕಣ್ಣದಂಡೇಶನು ಹೇಳಿಕೊಂಡಿದ್ದಾನೆ.

ಈ ಗ್ರಂಥದಲ್ಲಿ ಆವನು ವಿಜಯನಗರದ ವರ್ಣನೆಯನ್ನು ಕೂಡ ಮಾಡಿದ್ದಾನೆ. ಇದಕ್ಕೆ ನಾಲ್ಕು ಹೆಬ್ಬಾಗಿಲುಗಳಿದ್ದವೆಂದು ಹೇಳಿ ಇಲ್ಲಿದ್ದ ಅನೇಕ ದೇವಾಲಯಗಳ ಮತ್ತು ತೀರ್ಥಗಳ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಇವುಗಳ ಸಂಖ್ಯೆಯು ಸುಮಾರು ೪೦—೫೦ ಇದ್ದದರಿಂದ ದೇವರಾಜನ ಕಾಲದಲ್ಲಿ ವಿಜಯನಗರವು ಬಹಳ ವಿಸ್ತಾರವಾದ ಪಟ್ಟಣವಾಗಿತ್ತೆಂದು ತೋರುತ್ತದೆ. ಹೀಗೆ ಪಟ್ಟಣದ ವರ್ಣನೆ ಮಾಡುತ್ತಿರುವಲ್ಲಿ 'ಪಂಪಾಪತಿಯ ರಥಪಥಿಯಲ್ಲಿ ಮುದದಿಂದೊಂದು ಮಂದಿರವ ರಚಿಸಿ ಸೋಹಂಭಾವವಳಿದು' ವಾಸಮಾಡುತ್ತಿದ್ದ 'ಒಂದೆತ್ತಿನಯ್ಯ' ಎಂಬ ಹೆಸರಿನ ಒಬ್ಬ ಶಿವಶರಣನ ಹೆಸರನ್ನು ಹೇಳಿದ್ದಾನೆ. ಮುಂದೆ ಆವನು ವಿಜಯನಗರವನ್ನು ವರ್ಣಿಸಿರುವದು ಹೇಗೆಂದರೆ—

ಪರಹಿತದ ಬೀಡು ಸತ್ಯದ ನುಡಿಯ ನಡುನಾಡು । ಕರುಣಾಬ್ಧಿ ಇಕ್ಕೆ ಕಾಮಿತ ಸುಖದ ತೆಕ್ಕೆ ಸಸಿ । ಧರನ ಸಾಮರ್ಥ್ಯದಾಗರ ಸದಾಚಾರ ಸದ್ಭಕ್ತಿಗಳ ಜನ್ಮಭೂಮಿ ॥ ಪರತರ ಶಿವಾನುಭಾವಿಗಳ ಪರಿಮಿತ ಗೃಹಂ । ಪರಿಕಿಪರಿಗಿದು ವಿಜಯ ಕಲ್ಯಾಣವಾದುದೀ । ಧರೆಯರಿಯೆ ದೇವರಾಜೇಂದ್ರಪುರವೆಂಬುವರ ಚರಣಾಂಬುಜಕ್ಕೆ ಶರಣು ॥

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚ ಸಹಿತ ರೂ ೩—೬—೦

ಸಂಪುಟ ೧೮]  ಜಾನೆವರಿ ೧೯೪೩.  [ಸಂಚಿಕೆ ೪

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಜೀವನದ ಗುರಿ | ಶ್ರೀ. ಮ. ಮಹಾದೇವಸ್ವಾಮಿಗಳು ಬೆಂಗಳೂರ ಇವರ ಭಾಷಣ | ೧೬೫ |
| ೨ ಶಿವಾನುಭವ | ,, ಎಂ ಎಲ್. ನಾಗಣ್ಣ ಮೈಸೂರು ಇವರ ಭಾಷಣ | ೧೮೩ |
| ೩ ದೇವರದಾಸಿಮಾರ್ಯರು ಶೈವ ಸಾಹಸಿಗರೋ ವೀರಶೈವ ಸಾಹಸಿಗರೋ ? | ,, ಸಿ. ಸಾ. ಮಹಾಂತಣ್ಣವರ ಹೂನೂರ | ೧೯೫ |
| ೪ ಶಿವಾನುಭವದ ವಚನಗಳು | ,, ಶಿವಶರಣರ ಶಿಶು | ೨೦೪ |
| ೫ ಗುರುಲಿಂಗಜಂಗಮ | ,, ಬ. ಚೆ. ಪಟ್ಟೇದ ಮಂಟವಾರಿ | ೨೦೫ |

# ಶಿವಾನುಭವ.

| ವರ್ಷ ೧೭ | ಜಾನೇವರಿ ೧೯೪೩. | ಸಂಚಿಕೆ ೪ |
| --- | --- | --- |

## ಜೀವನದ ಗುರಿ.

(ಸಂಗ್ರಾಹಕರು:— ಪ್ರೊ. ಸಿದ್ಧಪ್ಪಾರಾಧ್ಯ ಬಿ. ಎ. (ಆನರ್ಸ್)
ಮಹಾರಾಜಾ ಕಾಲೇಜ ಮೈಸೂರು.)

(ಅ. ಭಾ. ಶಿವಾನುಭವ ಸಂಘದ ಅಂಗವಾಗಿ ಮೈಸೂರಲ್ಲಿ ಸ್ಥಾಪಿಸಲ್ಪಟ್ಟಿರುವ ಶಿವಾನುಭವ ಸಂಘದಲ್ಲಿ ಬೆಂಗಳೂರು ಸರ್ವಭೂಷಣ ಮಠಾಧ್ಯಕ್ಷರಾದ ಶ್ರೀ ಮಹಾದೇವಸ್ವಾಮಿಗಳು ಅಪ್ಪಣೆಕೊಡಿಸಿದ ಭಾಷಣದ ಸಾರಾಂಶ.)

ಸಾಮಾನ್ಯ ಮನುಷ್ಯನ ಜೀವನವು ವಿಷಯೇಂದ್ರಿಯಗಳನ್ನವಲಂಬಿಸಿ ಸುಖದುಃಖಗಳೊಡನೆ ಕೂಡಿರುವುದು. ಕಲಾಮಂದಿರದ ವಿನೋದಗಳೂ ಚಲನಚಿತ್ರಗಳ ನಟಿಯರ ಹಾವಭಾವ ವಿಲಾಸಗಳೂ ಅವನನ್ನು ಸುಖಜೀವನದ ಕಡೆ ಎಳೆಯುತ್ತವೆ. ತನ್ನ ಸುತ್ತಮುತ್ತಣ ಚಿತ್ತಾಕರ್ಷಕವಾದ ಸನ್ನಿವೇಶಗಳು ಅವನನ್ನು ಹೊರಗಿನ ಸುಖದ ಕಡೆಗೇ ಪ್ರೇರಿಸುತ್ತವೆ. ಇಂತಹ ಸುಖವನ್ನು ಮನುಷ್ಯನು ಎಷ್ಟೋ ಅನುಭವಿಸಿದರೂ ಅವನಿಗೆ ಶಾಂತಿ ಸಮಾಧಾನಗಳು ದೊರೆಯವು ಆದುದರಿಂದ ಈ ಪರಿಯ ಸುಖವನ್ನು ತೊಲಗಿಸಿ ಚಿರಂತನವಾದ ನಿತ್ಯಸುಖವನ್ನು ಅವನಿಗೆ ಒದಗಿಸುವುದಕ್ಕಾಗಿ ಶಿವಾನುಭವ ಸಂಘ, ತತ್ವಜ್ಞಾನ ಮಂದಿರ ಮೊದಲಾದ ವಿಶ್ರಾಂತಿ ನಿಲಯಗಳ ಆವಶ್ಯಕತೆಯು ಎಷ್ಟು ಹೇಳಿದರೂ ತೀರದು. ಮನುಷ್ಯನಿಗೆ ಶರೀರ ಪೋಷಣೆಗೆ ಆ

ಹಾರ ಹೇಗೆ ಅತ್ಯವಶ್ಯಕವೋ ಹಾಗೆ ಅವನ ಚಪಲವಾದ ಮನಸ್ಸಿಗೆ ಒಂದು ನಿಲುಗಡೆಯೂ ಅವನ ಬುದ್ಧಿಗೆ ಒಂದು ವಿಚಾರವೂ ಅತ್ಯವಶ್ಯಕವಾದುವು. ಆದುದರಿಂದ ಮನುಷ್ಯನು ಏಕಕಾಲದಲ್ಲಿ ಅನೇಕ ಕಾರ್ಯಗಳನ್ನು ನಿರ್ವಹಿಸಬೇಕಾಗುವುದು. ಶರೀರ, ಮನಸ್ಸು, ಇಂದ್ರಿಯ, ಬುದ್ಧಿ ಇವೆಲ್ಲಕ್ಕೂ ಒಂದೊಂದು ವೃತ್ತಿಯನ್ನು ನೇಮಿಸುವ ಜವಾಬ್ದಾರಿಕೆ ಅವನ ಮೇಲೆ ಬಿದ್ದಿದೆ. ಆದುದರಿಂದ ಮನುಷ್ಯನು ತನ್ನ ಬಾಳಿನ ಗುರಿ ಇಂಥಹುದೆಂದು ನಿಶ್ಚಯಿಸಿಕೊಂಡು ಆ ಗುರಿಯನ್ನು ಮುಟ್ಟಲು ಪ್ರಯತ್ನಪಡಬೇಕು.

ಪಶುಪಕ್ಷಿಗಳಾದರೆ ಇಂದ್ರಿಯ ಸುಖವನ್ನು ಮಾತ್ರ ಅವಲಂಬಿಸುವ ಗುರಿಯುಳ್ಳವುಗಳಾಗಿವೆ. ನಿತ್ಯ ಸುಖವನ್ನು ಪಡೆಯಲು ವಿಚಾರ ಶಕ್ತಿಯನ್ನೂ ವಿವೇಕವನ್ನೂ ದೇವರು ಅವುಗಳಿಗೆ ಅನುಗ್ರಹಿಸಿಲ್ಲ. ಇನ್ನು ದೇವತೆಗಳಿಗೂ ಜೀವನದ ಗುರಿಯ ಆವಶ್ಯಕತೆಯಿಲ್ಲ. ಅವರು ಇಲ್ಲಿ ಮಾಡಿದ ಪುಣ್ಯಕರ್ಮಗಳ ಫಲವನ್ನು ಸ್ವರ್ಗದಲ್ಲಿ ಸುಖವಾಗಿ ಅನುಭವಿಸಿ ಪುಣ್ಯ ತೀರಿದ ಮೇಲೆ ಭೂಮಿಗೆ ಇಳಿಯಬೇಕಾಗುವುದು. ಆದುದರಿಂದ ಜೀವನದ ಗುರಿಯೆಂಬುದು ಮುಖ್ಯವಾಗಿ ಮನುಷ್ಯನಿಗೇ ಸಂಬಂಧಿಸಿದುದು. ಅವನು ರಾಕ್ಷಸನಂತೆ ಹೀನ ಕೃತ್ಯವನ್ನು ಮಾಡಿ ಕೆಳಗೆ ಇಳಿದರೂ ಇಳಿಯಬಹುದು. ಅಮರನಂತೆ ಉತ್ತಮನು ಪವಿತ್ರನೂ ಆಗಬಹುದು. ಕ್ರೂರತನದಿಂದಲೂ ದೌರ್ಜನ್ಯದಿಂದಲೂ ಹಿಂಸೆಯಿಂದಲೂ ವಿಧಿನಿಷೇಧಗಳ ನಿಯಮವಿಲ್ಲದೆ ಸ್ವೇಚ್ಛೆಯಾಗಿ ವರ್ತಿಸುತ್ತ, ಪಶುವಿಗಿಂತ ಕೆಳಗೆ ಇಳಿಯಲೂ ಬಹುದು. ಅನ್ಯರಿಗೆ ತೊಂದರೆಕೊಡದೆ ತನ್ನ ಜೀವನವನ್ನು ಚೆನ್ನಾಗಿ ಸಾಗಿಸಿಕೊಂಡು ಸ್ವಾರ್ಥವನ್ನು ಕಡಿಮೆ ಮಾಡಿ ಪರಹಿತದಲ್ಲಿ ನಿರತನಾಗಿ ಸಹಜವಾಗಿ ಬಾಳುತ್ತಿದ್ದರೆ, ಒಳ್ಳೆಯ ಮನುಷ್ಯನೂ ಆಗಬಹುದು, ಯಾರಗೋಜಿಗೂ ಹೋಗದೆ ಯಾರಿಗೂ ಒಳ್ಳೆಯದನ್ನೂ ಮಾಡದೆ, ಕೆಡಕನ್ನೂ ಮಾಡದೆ ತನ್ನಷ್ಟಕ್ಕೆ ತಾನು ಜೀವಿಸಿಕೊಂಡು ಇರುವವನು ಸಾಮಾನ್ಯ ಜೀವಿ. ತನ್ನ ಜೀವನ ಹೇಗೋ ನಡೆಯುವುದೆಂದು ಅಷ್ಟಾಗಿ ಗಮನಿಸದೆ ಇತರರಿಗಾಗಿ ದುಡಿಯುವವನು ಮಹಾಪುರುಷನೆನಿಸುವನು. ಹೀಗೆ ಅನ್ಯರಿಗಾಗಿ ಬಾಳುವುದನ್ನು ಅಭ್ಯಾಸ ಮಾಡುತ್ತ ಬಂದರೆ ಮಾನವನ ಅಂತಸ್ತು ಮೇಲಕ್ಕೆ ಹೋಗುತ್ತದೆ. ಅದರಿಂದ ಅವನ ಹೃದಯ ವಿಶಾಲವಾಗುತ್ತದೆ. ಅವನ ಮನಸ್ಸಿನಲ್ಲಿ

ಕ್ಷುದ್ರ ವಿಚಾರಗಳಿಗೆ ಎಡೆಯಿರುವುದಿಲ್ಲ. ಅವನನ್ನು ಪ್ರಪಂಚದಲ್ಲಿ ಮಹನೀಯನೆಂದು ಇಂತಹ ದೊಡ್ಡ ಮನೋಭಾವ, ಉತ್ತಮಸ್ಥಿತಿ ಇನ್ನೂ ಹೆಚ್ಚಿದರೆ ಅವನನ್ನು ದೇವನೆಂದೂ ಜನರು ಕರೆಯುವರು. ಹೀಗೆ ಮನುಷ್ಯರಲ್ಲಿಯೇ ಮೂರು ಬಗೆಯುವರು ಇರುವರೆಂದು ಹೇಳಿದ್ದಾಯಿತು. ಇವರಲ್ಲಿ ಸಾಮಾನ್ಯ ಜೀವಿಗಳು ಮಹನೀಯತೆಯನ್ನೂ ದೇವತ್ವವನ್ನೂ ಪಡೆಯಲು ಯತ್ನಿಸಬೇಕು. ಇಂತಹ ಉತ್ತಮ ಸ್ಥಿತಿಯನ್ನು ಪಡೆಯಬೇಕೆಂಬ ಆದರ್ಶವನ್ನು ಗುರಿಯನ್ನಾಗಿ ಇಟ್ಟುಕೊಂಡು ಅವರು ಮುಂದುವರೆಯಬೇಕು. ಇಂತಹ ಜನರೇ ಲೋಕದಲ್ಲಿ ಹೇರಳವಾಗಿರುವುದರಿಂದ ಮುಖ್ಯವಾಗಿ ಅವರೇ ಜೀವನದ ಗುರಿಯನ್ನು ತಿಳಿದುಕೊಳ್ಳಬೇಕು.

ಜೀವನದ ಗುರಿಯನ್ನು ಉಪನಿಷತ್ಕಾರರು ಹೀಗೆ ನಿರ್ದೇಶಿಸಿರುವರು; "ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮಪಲ್ಲಕ್ಷ್ಯಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ ॥" ಬೇಟೆಯುವನು ಒಂದು ಹಣ್ಣನ್ನು ಗುರಿಯಾಗಿಟ್ಟುಕೊಂಡು, ಸ್ಥಿರಚಿತ್ತನಾಗಿ, ದೃಷ್ಟಿ ಚಾಂಚಲ್ಯವಿಲ್ಲದೆ ನಿಂತು, ಅದನ್ನು ಹೊಡೆದರೆ, ತನ್ನ ಬಯಕೆಯನ್ನು ಪಡೆಯುವನು. ಒಂದು ಊರಿಗೆ ಹೊರಟವನು ನೇರವಾಗಿ ಊರ ದಾರಿಯನ್ನು ಹಿಡಿದರೆ, ನಿರ್ದಿಷ್ಟವಾದ ಸ್ಥಳವನ್ನು ಸೇರಿ ಹೇಗೆ ಸುಖಿಯಾಗುವನೋ, ಹಾಗೆ ಮನುಷ್ಯನು ಜೀವನದಲ್ಲಿ ಬ್ರಹ್ಮವೆಂಬ ಗುರಿಯನ್ನು ಇಟ್ಟುಕೊಂಡು, ತನ್ನ ಅನೋಘವಾದ ಆಯುಸ್ಸನ್ನು ವ್ಯರ್ಥಮಾಡದೆ ಬಹಳ ಜಾಗರೂಕತೆಯಿಂದ ದುಡಿಯುತ್ತ, ಜೀವನದ ವ್ಯವಸ್ಥಿತವಾದ ಸ್ಥಾನವನ್ನು ಮುಟ್ಟಬೇಕಾದುದು ಅವನ ಕರ್ತವ್ಯವೆಂದು ಭಾವಿಸಬೇಕು. ಆಹಾರದಂತೆ ಎಲ್ಲರಿಗೂ ಜ್ಞಾನದ ಅವಶ್ಯಕತೆಯುಂಟು. ಆಹಾರವನ್ನು ಅಪೇಕ್ಷಿಸದೆ ಇರುವ ಮನುಷ್ಯನೇ ಇಲ್ಲ. ಹಾಗೆಯೇ ಆತ್ಮದ ಚಿಂತನೆಯನ್ನು ಬೆಳೆಸಿಕೊಂಡು ತನ್ನ ಯೋಗ್ಯತೆಯನ್ನೂ ವಿಚಾರಪರತೆಯನ್ನೂ ಹೆಚ್ಚಿಸಿಕೊಳ್ಳುವುದು ತನ್ನ ಜೀವನಕ್ಕೆ ಸಂಬಂಧಪಟ್ಟದ್ದು. ಇದಕ್ಕೆ ಶುಭಕಾಲ ಮೊದಲಾದುದನ್ನು ನೋಡುವ ಪಂಚಾಂಗ ನಿಯಮ ಬೇಕಿಲ್ಲ. ಜೀವಿತವೆಂಬುದು ಚಂಚಲವಾಗಿರುವಾಗ ಧರ್ಮವನ್ನು ತಿಳಿಯಲು ಅವೇಳೆಯೆಂಬುದು ಉಂಟೇ? ಮೃತ್ಯು ವಿಘ್ನಕಾರಕನಾಗಿ ತನ್ನ ಬಳಿ ಕಾದಿರುವಾಗ ಬಹುಕಾಲ ಬದುಕುವೆನೆಂಬ ನಂಬಿಕೆಯಾದರೂ ಎಲ್ಲಿ ಬಂದೀತು? ತನ್ನ ಶರೀರ ಸ್ಥಿತಿಗನುಸಾರವಾಗಿ ಪುಷ್ಟಿ

ಕರವಾದ ಆಹಾರವನ್ನು ಉಪಯೋಗಿಸಿ ಶಾರೀರಿಕ ಬಲವನ್ನು ಹೆಚ್ಚಿಸಿ ಕೊಳ್ಳುವಂತೆ ತನ್ನ ವಿಚಾರವನ್ನು ತಾನು ಮಾಡಿ ಆತ್ಮನ ಬಲವನ್ನು ಹೆಚ್ಚಿಸಿಕೊಳ್ಳಬೇಕು.

ಮನುಷ್ಯನ ಜೀವನ ಎರಡು ವಿಧವಾಗಿದೆ. ಒಂದು ಹೊರಗಿನದು ಮತ್ತೊಂದು ಒಳಗಿನದು. ನಮ್ಮ ಹೊರಗಿನ ಜೀವನ ಸುಖಮಯವಾಗಿ ಶಾಂತವಾಗಿ ಇರುವಂತೆ ಮಾಡಿಕೊಳ್ಳದಿದ್ದರೆ, ಒಳಗಿನ ಜೀವನ ನಿರ್ಮಲವೂ ಪವಿತ್ರವೂ ಆಗಲಾರದು. ನಮ್ಮ ಬಹಿರ್ಜೀವನ ಸಂತೋಷವಾಗಿ ನಡೆಯಲು ಹಲವು ಸಾಧನಗಳನ್ನು ಏರ್ಪಡಿಸಿಕೊಳ್ಳುತ್ತೇವೆ. ತತ್ವವನ್ನು ಹೇಳಿಕೊಳ್ಳುತ್ತ ಕುಳಿತರೆ, ಸಂಸಾರ ನಿರಾತಂಕವಾಗಿ ಮುಂದುವರಿಯುವುದಿಲ್ಲ. ಶರೀರ ಕಶ್ಮಲವಾದುದೆಂದೂ, ಇಂದ್ರಿಯಗಳು ಅನರ್ಥಕಾರಿಗಳೆಂದೂ, ವಿಷಯಗಳು ದುಷ್ಪ್ರೇರಕಗಳೆಂದೂ ಶಾಸ್ತ್ರ ಹೇಳುತ್ತವೆ. ಇಂದ್ರಿಯಗಳು ನಿಂದ್ಯಗಳೆಂದೂ ಪರಿತ್ಯಾಜ್ಯಗಳೆಂದೂ ಶಾಸ್ತ್ರಜ್ಞರು ಎಲ್ಲರಿಗೂ ಬೋಧಿಸುತ್ತಾರೆ "ಮನುಜ ಶರೀರವಿದೇನು ಸುಖ" "ಸುಡಲೀ ದೇಹವ" ಎಂದು ಬಾಯಲ್ಲಿ ಹೇಳುವುದು ಮತ್ತು ಬೋಧಿಸುವುದು ಸುಲಭ. ಆದರೆ ಹಾಗೆ ಹೇಳಿದವರು ಯಾರಾದರೂ ಒಬ್ಬರು ತಮ್ಮ ದೇಹವನ್ನು ಸುಟ್ಟುಕೊಂಡಿರುವರೆ? ಯಾರೂ ಇಲ್ಲ. ಸುಡಲಿಕ್ಕೆ ನಮ್ಮ ಇಷ್ಟವೆ? ಈ ದೇಹ ಎಲ್ಲಿಯ ವರೆಗೆ ಇರಬೇಕೋ ಅಲ್ಲಿಯ ವರೆಗೆ ಇದ್ದೇ ಇರುತ್ತದೆ. ಅದರ ಆರೈಕೆಯನ್ನು ನಾವು ಮಾಡಲೇ ಬೇಕು. ಈ ಶರೀರಕ್ಕೂ ನಾವು ದ್ರೋಹ ಮಾಡಬಾರದು. ಶರೀರ ಇರುವವರೆಗೆ— ಅದರ ಎಚ್ಚರ ನಮಗಿರುವವರೆಗೆ— ಹೊರಗಣ ಸುಖ ನಮಗೆ ಆವಶ್ಯಕ. ದೇಹವಿಲ್ಲದಿರ್ದೊಡೆ ಪ್ರಾಣಕ್ಕಾಶ್ರಯವುಂಟೆ? ಕನ್ನಡಿ ಇಲ್ಲದಿದ್ದರೆ ತನ್ನ ಮುಖವ ಕಾಣಬಹುದೆ? ಇಂತಹ ದೇಹ ತುಚ್ಛವಾದುದೆಂದು ಭಾವಿಸಬಹುದೆ? ಇಂದ್ರಿಯಗಳು ದುಷ್ಟವೆಂದೂ ಶರೀರವು ಹೇಯವೆಂದೂ ಶಾಸ್ತ್ರದಲ್ಲಿ ಹೇಳಿರಬಹುದು. ಇಂತಹ ಶಾಸ್ತ್ರವನ್ನು ಓದಿದಮೇಲಾದರೂ ದೇಹೇಂದ್ರಿಯಗಳನ್ನು ಆತ್ಮನಿಂದ ಹೊರದೂಡಲು ಸಾಧ್ಯವೆ? ಎಂದಿಗೂ ಇಲ್ಲ. ಶಾಸ್ತ್ರದಲ್ಲಿ ಇಂತಹ ಭಾಗವನ್ನು ಓದಿದವನಿಗೆ ತನ್ನ ಬಾಳಿನಲ್ಲಿ ಆಯಾ ಸುಖಶಾಂತಿಗಳು ದೊರೆಯುವುದಿಲ್ಲ. ಅವನಿಂದ ಇತರರ ಬಾಳಿನಲ್ಲಿಯೂ ಬೆಳಕು ಪ್ರಸಾರವಾಗುವಂತಿಲ್ಲ.

ವಾಗ್ಜಾಲದಿಂದ ಜನರನ್ನು ಮಾತಿನಲ್ಲಿ ಸಿಕ್ಕಿಸಿ ತನ್ನ ಜಾಣ್ಮೆಯನ್ನು ತೋರಿಸಲು ಶಾಸ್ತ್ರ ಅವನಿಗೆ ಸಾಧಕವಾಗುತ್ತದೆ.

ಶಾಸ್ತ್ರ ನಮ್ಮ ಮೇಲೆ ಸವಾರಿ ಮಾಡುವಂತಾಗಬಾರದು. ನಾವು ಅದರ ಮೇಲೆ ಸವಾರಿ ಮಾಡಬೇಕೇ ಹೊರತು ಅದು ನಮ್ಮನ್ನು ಕುದುರೆಯಾಗಿ ಮಾಡಿಕೊಳ್ಳಲು ಅವಕಾಶ ಕೊಡಬಾರದು. ನಾವು ಅದನ್ನು ನಮ್ಮ ಅಧೀನ ಮಾಡಿಕೊಳ್ಳಬೇಕು. ಅದು ನಮಗೆ ಪ್ರಗತಿಪಥವನ್ನು ಹೊಂದಲು ಒಂದು ಮಾರ್ಗದರ್ಶಿಯಾಗಿರಬೇಕು. ಅನೇಕರು ಜೀವನದಲ್ಲಿ ಹತಾಶರಾದುದರಿಂದ, ಇಂದ್ರಿಯಗಳ ಬಲೆಗೆ ಬಿದ್ದು ನರಳುವಂತಾದುದರಿಂದ, ಇಂದ್ರಿಯಗಳು ದುಷ್ಟವೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಅವೇ ಇಂದ್ರಿಯಗಳು ಸನ್ಮಾರ್ಗದಲ್ಲಿ ನಿಯುಕ್ತಗಳಾದರೆ ಅವುಗಳಿಂದಲೇ ನಮ್ಮ ಪ್ರಗತಿಯುಂಟಾಗುವುದು. ಹೀಗೆ ಜನರ ಅನುಭವ ಮೊದಲು; ಆಮೇಲೆ ಶಾಸ್ತ್ರ ಹುಟ್ಟಿತು. ಇದು ತತ್ವಜೀವನದ ಪ್ರಗತಿಗಾಗಿ, ಮೇಲ್ಮೆಗಾಗಿ ಸುಮ್ಮನೆ ಹೇಳಿಕೊಂಡಿರುವ ವಿಚಾರವಲ್ಲ. ಈಗ ನಾವು ಎಷ್ಟು ವಿಚಾರ ಮಾಡಿದರೂ, ಏನೊಂದೂ ಇಲ್ಲದವರಾಗಿ, ಪ್ರಾಪಂಚಿಕವಾಗಿಯೂ ಪಾರಮಾರ್ಥಿಕವಾಗಿಯೂ ದರಿದ್ರರಾಗಿ ಉಳಿದಿದ್ದೇವೆ. ನಮ್ಮಲ್ಲಿ ಹಿಂದೆ ಅನೇಕ ತತ್ವಜ್ಞಾನಿಗಳೂ ಶಿವಾನುಭವಿಗಳೂ ಆಗಿ ಹೋಗಿದ್ದಾರೆ. ಅವರು ಸತ್ತು ಬದುಕಿದ್ದಾರೆ. ತಮ್ಮ ಬಾಳಿನಲ್ಲಿ ಬೆಳಕನ್ನು ಕಂಡು ಅವರು ನಿತ್ಯ ಜೀವಿಗಳಾಗಿದ್ದಾರೆ ಆತ್ಮಜ್ಯೋತಿಯ ಆವಶ್ಯಕತೆಯನ್ನು ಅವರು ಜಗತ್ತಿಗೆ ಸಾರಿದ್ದಾರೆ. ಆದರೂ ಅದನ್ನೆಲ್ಲ ಮರೆತು ನಾವು ಗಾಡಾಂಧಕಾರದಲ್ಲಿ ಅಲೆಯುವಂತಾಗಿದೆ. ನಾವು ಬದುಕಿ ಸತ್ತಿರುವಂತಾಗಿದೆ. ಹಿಂದಿನವರು ತೋರಿಸಿಕೊಟ್ಟ ಸನ್ಮಾರ್ಗ ನಮಗೆ ಮಾಯವಾಗಿದೆ ಅವರು ಹಾಕಿದ ಮೇಲ್ಪಜ್ಞೆ ನಮಗೆ ಈಗ ನಿಷ್ಪ್ರಯೋಜನ ಸ್ಥಿತಿಯಲ್ಲಿ ಉಳಿದಿದೆ. ಹಿಂದಿನವರು ದೇಹವನ್ನು ಅಲ್ಲಗಳೆಯುತ್ತಿರಲಿಲ್ಲ. ವ್ಯಕ್ತಿಯನ್ನು ತುಚ್ಛವೆಂದು ಭಾವಿಸಿರಲಿಲ್ಲ. ಭೋಗವನ್ನು ದುಃಖಪ್ರದವೆಂದು ಜರಿಯುತ್ತಿರಲಿಲ್ಲ. ದೇಹಕ್ಕೆ ತಮ್ಮಿಂದ ಎಷ್ಟು ಸೇವೆ ಸಲ್ಲಬೇಕೋ ಅಷ್ಟನ್ನು ಒಮ್ಮನಸ್ಸಿನಿಂದ ಸಲ್ಲಿಸಿದವರು ಅವರು. ಆದರೆ ಆ ದೇಹ ಪೋಷಣೆಯಲ್ಲಿಯೇ ಮೈಮರೆತವರಲ್ಲ. ಆತ್ಮಶುದ್ಧಿ, ಪರಿಪೂರ್ಣತೆ, ಶಕ್ತಿಗಳನ್ನು ದುಡಿದು ಪಡೆದವರು ಅವರು. ಆದರೆ ನಾವು ಒಳಜೀವನವನ್ನು ಮರೆತು, ಹೊರಗಿನ ಭೋಗ ವಿಲಾ

ಸಗಳಲ್ಲಿಯೇ ಲೀನರಾಗಿದ್ದೇವೆ. ಅವುಗಳನ್ನು ಪಡೆಯುವುದಕ್ಕಾಗಿ ನಮ್ಮ ಸರ್ವಸ್ವವನ್ನು ಅರ್ಪಿಸಿ, ದಾಸರಾಗಿದ್ದೇವೆ. ಅಲ್ಪ ಸುಖಕ್ಕಾಗಿ ಬಡಿದಾಡುತ್ತಿದ್ದೇವೆ. ಹೆಚ್ಚು ಶ್ರಮದಿಂದ ಅಲ್ಪ ಫಲವನ್ನು ಪಡೆಯುತ್ತೇವೆ. ದೊಡ್ಡ ಸುಖಕ್ಕೆ ಹೆಣಗಾಡುವದನ್ನು ಬಿಟ್ಟು, ಶಾರೀರಕ ಭೋಗವೇ ಜೀವನಸರ್ವಸ್ವವೆಂದು ನಂಬಿ ಅದಕ್ಕೆ ಗುಲಾಮರಾಗಿದ್ದೇವೆ. ಭೋಗವೂ ಕೂಡ ನಿಂದ್ಯವಲ್ಲ. ಅದು ಅಪರಿಹಾರ್ಯ. ಅದನ್ನು ಜರಿಯುವ ಕಠಿಣವಾದ ಮಾರ್ಗವೂ ನಮಗೆ ಬೇಕಿಲ್ಲ. ಯಾಕೆಂದರೆ ಶರೀರಕ್ಕೆ ಸಂಬಂಧವಿಲ್ಲದೆ ಅಂತಃಕರಣಕ್ಕೆ ಸೋಂಕಿಲ್ಲದೆ, ನಾವು ಜೀವಿಸುವಂತಿಲ್ಲ. ಈ ಕಶ್ಮಲವಾದ ದೇಹದೊಳಗೆಯೇ ಚೈತನ್ಯವೊಂದು ಸೇರಿಕೊಂಡಿದೆ. ಇಂದ್ರಿಯಗಳೊಡನೆ ನಾವು ವ್ಯವರಿಸಬೇಕಾಗಿದೆ. ಅವನ್ನು ನಾವು ಬಳಸಲೇಬೇಕು. ಆತ್ಮನನ್ನು ಇಂದ್ರಿಯಗಳಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ ಅವು ಕೆಟ್ಟವೆಂದು ತಿಳಿದು ಅವನ್ನು ಕಿತ್ತು ಹಾಕುವದು ಅಸಾಧ್ಯ. ಯಾವದು ನಮ್ಮನ್ನು ದುರ್ಮಾರ್ಗಕ್ಕೆ ಸೆಳೆಯುವುದೆಂದು ಶಾಸ್ತ್ರ ಹೇಳುತ್ತದೆಯೋ, ಯಾವುದು ನಮ್ಮ ಆತ್ಮದ ಉಚ್ಛ್ರಾಯ ಸ್ಥಿತಿಗೆ ದೊಡ್ಡ ಅಡಚಣೆಯಾಗುವುದೋ, ಅಂತಹದನ್ನೇ ನಮ್ಮ ಉತ್ಕರ್ಷತೆಗೆ ಪ್ರಬಲವಾದ ಸಾಧನವಾಗುವಂತೆ ಮಾಡುವ ಭಾವನೆಯನ್ನು ನಾವು ಸಂಪಾದಿಸಿಕೊಳ್ಳದೆ ನಮ್ಮ ಅಶಕ್ತತೆಯನ್ನು ಅವುಗಳ ಮೇಲೆ ಹಾಕುವದು ಯಾವ ನ್ಯಾಯ?

ಮನುಷ್ಯನು ಮನೆಯವರಲ್ಲಿ ವಿರೋಧಭಾವವನ್ನು ಮಾಡಿಕೊಂಡರೆ, ಆ ಮನೆಯಲ್ಲಿ ವಾಸ ಮಾಡುವುದು ಹೇಗೆ ಅವನಿಗೆ ನರಕವಾಗುವುದೋ, ಹಾಗೆ ಇಂದ್ರಿಯಗಳೊಡನೆ ಬಾಳುತ್ತ, ಅವುಗಳನ್ನು ಕೆಟ್ಟವೆಂದು ಭಾವಿಸಿದರೆ ನಾವೇ ಕೆಡುವ ಸ್ಥಿತಿಗೆ ಬರುತ್ತೇವೆ. ಕೆಟ್ಟು ಹೋದರೆ ಅವನ್ನು ಸರಿಪಡಿಸುತ್ತೇವೆ. ಹೀಗಿದ್ದರೂ ಅವು ಅಂಥವು ಇಂಥವು ಎಂದು ಅವನ್ನು ಬಾಯಿಗೆ ಬಂದಂತೆ ಬಯ್ಯುತ್ತ ಕುಳಿತರೆ ವ್ಯವಹಾರ ಹೇಗೆ ಸಾಧ್ಯ? ಶರೀರದಿಂದ ಕೆಲವು ವ್ಯವಹಾರಗಳು ಅತ್ಯವಶ್ಯಕ. ಸಂಸಾರವೇ ದುಃಖವೆಂದು ಹೇಳುವುದು ಮಾತಿನಲ್ಲಿ ಉಳಿಯುತ್ತದೆಯೇ ಹೊರತು ಅನುಭವದಲ್ಲಿ ನಿಲ್ಲುವುದಿಲ್ಲ. ಬಾಯಲ್ಲಿ ಹೇಳುವುದು ವೇದಾಂತ; ಕೈಯಲ್ಲಿ ಮಾಡುವುದು ಅನ್ಯಾಯ. ಹೀಗೆ ನಡೆ-ನುಡಿ ಬೇರೆಯಾದರೆ, ಯಾರಿಂದ ಯಾರಿಗೂ ಯಾವ ಸುಖವೂ ಆಗಲಾರದು. "ಕಾಯವೆಂಬ ವನಿತೆಗೆ ಜೀವನೆಂಬ ಗಂಡ"ನಿರುವಲ್ಲಿ

ಶರೀರಾತ್ಮಗಳು ಎಂತಹ ಪ್ರಣಯ ಸಂಬಂಧದಲ್ಲಿ ಸೇರಿಕೊಂಡಿರುವರು? "ಕಾಮ, ಕ್ರೋಧ, ಲೋಭ. ಮೋಹ, ಮದ, ಮತ್ಸರ, ರಾಗ, ದ್ವೇಷ ಎನಿಪ ಒಡಲಿರೆ ಬ್ರಹ್ಮಸಾನೆಂಬ ಬರಿಯ ವಾಗದ್ವೈತದಲ್ಲಿ ಫಲವಿಲ್ಲ. ನಂಬು ಸುಖಸಾಗರವನರಿ" ಅದ್ವೈತವು ಮಾತಿನ ವಿಷಯವಲ್ಲ ಬರಿಯ ಬುದ್ಧಿಯ ವಿಷಯವಲ್ಲ. ಅದು ಅನುಭವದ ವಿಷಯ. ಅದುದರಿಂದ ಯೋಗ್ಯವಾದ ದಾರಿಯಲ್ಲಿ ಕಾಮಾದಿಗಳನ್ನು ನಿಯೋಗಿಸಿ ಅವುಗಳಿಂದಲೇ ನಮ್ಮ ಶ್ರೇಯಸ್ಸನ್ನು ಸಾಧಿಸಬೇಕು.

ಜೀವನ ಯಾತ್ರೆಯನ್ನು ನಡೆಸುವಾಗ ಹೊರಗಣ ಸುಖಕ್ಕಾಗಿ ನಾವು ಅನೇಕ ಮಾರ್ಗಗಳನ್ನು ಸನ್ನಿವೇಶಗಳನ್ನೂ ಕಲ್ಪಿಸಿಕೊಳ್ಳುತ್ತೇವೆ. ಇದಕ್ಕಾಗಿಯೇ ಯಾವುದಾದರೂ ಒಂದು ಉದ್ಯೋಗದಲ್ಲಿ ನಿರತರಾಗಿ ಇರುತ್ತೇವೆ. ಇಂತಹ ಕಾಯಕ ದುರ್ನಿರೋಧಗಳಾದ ಇಂದ್ರಿಯಗಳನ್ನು ನಿಗ್ರಹಿಸಲು ಅತ್ಯಾವಶ್ಯಕ. ಇದರ ಜತೆಗೆ ಅವನ್ನು ಸನ್ಮಾರ್ಗದ ಕಡೆ ಪ್ರೇರಿಸುವ ಶಕ್ತಿ ಸಾಮರ್ಥ್ಯಗಳನ್ನು ನಾವು ಅಭ್ಯಾಸದಿಂದ ಪಡೆಯಬೇಕು. ಇಂದ್ರಿಯಗಳನ್ನು ಸುವ್ಯವಸ್ಥೆಯಿಂದ ನಡೆಸಿದರೆ ಅವು ಶರೀರವನ್ನು ಮಕ್ಕಳಂತೆ ಪೋಷಿಸುತ್ತವೆ. ಶರೀರ ಪೋಷಣೆಗಾಗಿ ನಾವು ಕಲ್ಪಿಸಿಕೊಂಡ ಆಸ್ತಿಪಾಸ್ತಿಗಳು ಬಲಿಷ್ಠರಾದ ಹಗೆಗಳಿಂದ ನಮ್ಮ ಕೈತಪ್ಪಿ ಹೋಗಬಹುದು. ಅವುಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಹಗೆಗಳೊಡನೆ ಪ್ರತಿಭಟಿಸಲು ನಾವು ಸಮರ್ಥರಿರಬೇಕು. ಹೊರಗೊಂದು ಪ್ರಪಂಚವನ್ನು ನಾವು ಗಳಿಸಿದಂತೆ, ಒಳಗೂ ನೂತನ ಪ್ರಪಂಚ ಒಂದನ್ನು ಕಲ್ಪಿಸಿಕೊಳ್ಳಬೇಕು. ಅಲ್ಲಿಯೂ ಸತ್ಯ, ಸೌಂದರ್ಯ, ನಿರೀಹ, ನಿರಭಿಮಾನತೆ, ಶಾಂತಿ, ನಿಸ್ಪೃಹತೆ ಇವುಗಳನ್ನು ಸಾಧಿಸಿಕೊಳ್ಳಬೇಕು. ಇಂತಹವನ್ನು ಒಳಗೆ ಪಡೆದವರೇ ನಿಜವಾಗಿ ಲೋಕದಲ್ಲಿ ಶ್ರೀಮಂತರು. ಹೊರಗಿನ ಸಂಪತ್ತು ಎಂದಾದರೂ ಹೋಗಬಹುದು. ಒಳಗಿನ ಸೌಂದರ್ಯ ಯಾರಿಂದಲೂ ಅಪಹರಿಸಲ್ಪಡುವವುದಿಲ್ಲ. ಇದು ಎಂತಹ ಕಠಿಣವಾದ ಮನಸ್ಸನ್ನಾದರೂ ತನ್ನ ಕಡೆಗೆ ಸೆಳೆಯದೆ ಇರದು. ಕಾಯದ ಸೌಂದರ್ಯಕ್ಕಾಗಿ ನಾವು ಯಾರನ್ನೂ ಪ್ರೀತಿಸುವುದಿಲ್ಲ. ಶುದ್ಧಾತ್ಮನಾದವನನ್ನು ನೋಡಿದರೆ ನಮ್ಮ ಜೀವನ ಪವಿತ್ರವಾಗುತ್ತದೆ. ಅವನು ಕಾಮನಂತೆ ಸುಂದರನಲ್ಲದಿದ್ದರೂ, ನಾವು ಅವನೊಡನೆ ಮಾತನಾಡಲು, ಸಂಬಂಧ ಬೆಳೆಸಲು ತವಕಪಡುತ್ತೇವೆ. "ಕಾಯ ಕಪ್ಪನೆ ಕಂದಿದರೇನಯ್ಯಾ ಕಾಯ

ಷಗಳಲ್ಲಿಯೇ ಲೀನರಾಗಿದ್ದೇವೆ. ಅವುಗಳನ್ನು ಪಡೆಯುವುದಕ್ಕಾಗಿ ನಮ್ಮ ಸರ್ವಸ್ವವನ್ನು ಅರ್ಪಿಸಿ, ದಾಸರಾಗಿದ್ದೇವೆ. ಅಲ್ಪ ಸುಖಕ್ಕಾಗಿ ಬಡಿದಾಡುತ್ತಿದ್ದೇವೆ. ಹೆಚ್ಚು ಶ್ರಮದಿಂದ ಅಲ್ಪ ಫಲವನ್ನು ಪಡೆಯುತ್ತೇವೆ. ದೊಡ್ಡ ಸುಖಕ್ಕೆ ಹೆಣಗಾಡುವದನ್ನು ಬಿಟ್ಟು, ಶಾರೀರಕ ಭೋಗವೇ ಜೀವನಸರ್ವಸ್ವವೆಂದು ನಂಬಿ ಅದಕ್ಕೆ ಗುಲಾಮರಾಗಿದ್ದೇವೆ. ಭೋಗವೂ ಕೂಡ ನಿಂದ್ಯವಲ್ಲ. ಅದು ಅಪರಿಹಾರ್ಯ. ಅದನ್ನು ಜರಿಯುವ ಕಠಿಣವಾದ ಮಾರ್ಗವೂ ನಮಗೆ ಬೇಕಿಲ್ಲ. ಯಾಕೆಂದರೆ ಶರೀರಕ್ಕೆ ಸಂಬಂಧವಿಲ್ಲದೆ ಅಂತಃಕರಣಕ್ಕೆ ಸೋಂಕಿಲ್ಲದೆ, ನಾವು ಜೀವಿಸುವಂತಿಲ್ಲ. ಈ ಕಶ್ಮಲವಾದ ದೇಹದೊಳಗೆಯೇ ಚೈತನ್ಯವೊಂದು ಸೇರಿಕೊಂಡಿದೆ. ಇಂದ್ರಿಯಗಳೊಡನೆ ನಾವು ವ್ಯವಹರಿಸಬೇಕಾಗಿದೆ. ಅವನ್ನು ನಾವು ಬಳಸಲೇಬೇಕು. ಆತ್ಮನನ್ನು ಇಂದ್ರಿಯಗಳಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ ಅವು ಕೆಟ್ಟವೆಂದು ತಿಳಿದು ಅವನ್ನು ಕಿತ್ತು ಹಾಕುವದು ಅಸಾಧ್ಯ. ಯಾವದು ನಮ್ಮನ್ನು ದುರ್ಮಾರ್ಗಕ್ಕೆ ಸೆಳೆಯುವುದೆಂದು ಶಾಸ್ತ್ರ ಹೇಳುತ್ತದೆಯೋ, ಯಾವುದು ನಮ್ಮ ಆತ್ಮದ ಉಚ್ಛ್ರಾಯ ಸ್ಥಿತಿಗೆ ದೊಡ್ಡ ಅಡಚಣೆಯಾಗುವುದೋ, ಅಂತಹದನ್ನೇ ನಮ್ಮ ಉತ್ಕರ್ಷತೆಗೆ ಪ್ರಬಲವಾದ ಸಾಧನವಾಗುವಂತೆ ಮಾಡುವ ಭಾವನೆಯನ್ನು ನಾವು ಸಂಪಾದಿಸಿಕೊಳ್ಳದೆ ನಮ್ಮ ಅಶಕ್ತತೆಯನ್ನು ಅವುಗಳ ಮೇಲೆ ಹಾಕುವದು ಯಾವ ನ್ಯಾಯ?

ಮನುಷ್ಯನು ಮನೆಯವರಲ್ಲಿ ವಿರೋಧಭಾವವನ್ನು ಮಾಡಿಕೊಂಡರೆ, ಆ ಮನೆಯಲ್ಲಿ ವಾಸ ಮಾಡುವುದು ಹೇಗೆ ಅವನಿಗೆ ನರಕವಾಗುವುದೋ, ಹಾಗೆ ಇಂದ್ರಿಯಗಳೊಡನೆ ಬಾಳುತ್ತ, ಅವುಗಳನ್ನು ಕೆಟ್ಟವೆಂದು ಭಾವಿಸಿದರೆ ನಾವೇ ಕೆಡುವ ಸ್ಥಿತಿಗೆ ಬರುತ್ತೇವೆ. ಕೆಟ್ಟು ಹೋದರೆ ಅವನ್ನು ಸರಿಪಡಿಸುತ್ತೇವೆ. ಹೀಗಿದ್ದರೂ ಅವು ಅಂಥವು ಇಂಥವು ಎಂದು ಅವನ್ನು ಬಾಯಿಗೆ ಬಂದಂತೆ ಬಯ್ಯುತ್ತ ಕುಳಿತರೆ ವ್ಯವಹಾರ ಹೇಗೆ ಸಾಧ್ಯ? ಶರೀರದಿಂದ ಕೆಲವು ವ್ಯವಹಾರಗಳು ಅತ್ಯವಶ್ಯಕ. ಸಂಸಾರವೇ ದುಃಖವೆಂದು ಹೇಳುವುದು ಮಾತಿನಲ್ಲಿ ಉಳಿಯುತ್ತದೆಯೇ ಹೊರತು ಅನುಭವದಲ್ಲಿ ನಿಲ್ಲುವುದಿಲ್ಲ. ಬಾಯಲ್ಲಿ ಹೇಳುವುದು ವೇದಾಂತ; ಕೈಯಲ್ಲಿ ಮಾಡುವುದು ಅನ್ಯಾಯ. ಹೀಗೆ ನಡೆ-ನುಡಿ ಬೇರೆಯಾದರೆ, ಯಾರಿಂದ ಯಾರಿಗೂ ಯಾವ ಸುಖವೂ ಆಗಲಾರದು. "ಕಾಯವೆಂಬ ವನಿತೆಗೆ ಜೀವನೆಂಬ ಗಂಡ"ನಿರುವಲ್ಲಿ

ಶರೀರಾತ್ಮಗಳು ಎಂತಹ ಪ್ರಣಯ ಸಂಬಂಧದಲ್ಲಿ ಸೇರಿಕೊಂಡಿರುವರು? "ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ರಾಗ, ದ್ವೇಷ ಎನಿಪ ಒಡಲಿರೆ ಬ್ರಹ್ಮನಾನೆಂಬ ಬರಿಯ ವಾಗದ್ವೈತದಲ್ಲಿ ಫಲವಿಲ್ಲ. ನಂಬು ಸುಖಸಾಗರವನರಿ" ಅದ್ವೈತವು ಮಾತಿನ ವಿಷಯವಲ್ಲ ಬರಿಯ ಬುದ್ಧಿಯ ವಿಷಯವಲ್ಲ. ಅದು ಅನುಭವದ ವಿಷಯ. ಅದುದರಿಂದ ಯೋಗ್ಯವಾದ ದಾರಿಯಲ್ಲಿ ಕಾಮಾದಿಗಳನ್ನು ನಿಯೋಗಿಸಿ ಅವುಗಳಿಂದಲೇ ನಮ್ಮ ಶ್ರೇಯಸ್ಸನ್ನು ಸಾಧಿಸಬೇಕು.

ಜೀವನ ಯಾತ್ರೆಯನ್ನು ನಡೆಸುವಾಗ ಹೊರಗಣ ಸುಖಕ್ಕಾಗಿ ನಾವು ಅನೇಕ ಮಾರ್ಗಗಳನ್ನು ಸನ್ನಿವೇಶಗಳನ್ನೂ ಕಲ್ಪಿಸಿಕೊಳ್ಳುತ್ತೇವೆ. ಇದಕ್ಕಾಗಿಯೇ ಯಾವುದಾದರೂ ಒಂದು ಉದ್ಯೋಗದಲ್ಲಿ ನಿರತರಾಗಿ ಇರುತ್ತೇವೆ. ಇಂತಹ ಕಾಯಕ ದುರ್ನಿರೋಧಗಳಾದ ಇಂದ್ರಿಯಗಳನ್ನು ನಿಗ್ರಹಿಸಲು ಅತ್ಯಾವಶ್ಯಕ. ಇದರ ಜತೆಗೆ ಅವನ್ನು ಸನ್ಮಾರ್ಗದ ಕಡೆ ಪ್ರೇರಿಸುವ ಶಕ್ತಿ ಸಾಮರ್ಥ್ಯಗಳನ್ನು ನಾವು ಅಭ್ಯಾಸದಿಂದ ಪಡೆಯಬೇಕು. ಇಂದ್ರಿಯಗಳನ್ನು ಸುವ್ಯವಸ್ಥೆಯಿಂದ ನಡೆಸಿದರೆ ಅವು ಶರೀರವನ್ನು ಮಕ್ಕಳಂತೆ ಪೋಷಿಸುತ್ತವೆ. ಶರೀರ ಪೋಷಣೆಗಾಗಿ ನಾವು ಕಲ್ಪಿಸಿಕೊಂಡ ಆಸ್ತಿಪಾಸ್ತಿಗಳು ಬಲಿಷ್ಠರಾದ ಹಗೆಗಳಿಂದ ನಮ್ಮ ಕೈತಪ್ಪಿ ಹೋಗಬಹುದು. ಅವುಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಹಗೆಗಳೊಡನೆ ಪ್ರತಿಭಟಿಸಲು ನಾವು ಸಮರ್ಥರಿರಬೇಕು. ಹೊರಗೊಂದು ಪ್ರಪಂಚವನ್ನು ನಾವು ಗಳಿಸಿದಂತೆ, ಒಳಗೂ ನೂತನ ಪ್ರಪಂಚ ಒಂದನ್ನು ಕಲ್ಪಿಸಿಕೊಳ್ಳಬೇಕು. ಅಲ್ಲಿಯೂ ಸತ್ಯ, ಸೌಂದರ್ಯ, ನಿರೀಹ, ನಿರಭಿಮಾನತೆ, ಶಾಂತಿ, ನಿಸ್ಪೃಹತೆ ಇವುಗಳನ್ನು ಸಾಧಿಸಿಕೊಳ್ಳಬೇಕು. ಇಂತಹವನ್ನು ಒಳಗೆ ಪಡೆದವರೇ ನಿಜವಾಗಿ ಲೋಕದಲ್ಲಿ ಶ್ರೀಮಂತರು. ಹೊರಗಿನ ಸಂಪತ್ತು ಎಂದಾದರೂ ಹೋಗಬಹುದು. ಒಳಗಿನ ಸೌಂದರ್ಯ ಯಾರಿಂದಲೂ ಅಪಹರಿಸಲ್ಪಡುವವುದಿಲ್ಲ. ಇದು ಎಂತಹ ಕಠಿಣವಾದ ಮನಸ್ಸನ್ನಾದರೂ ತನ್ನ ಕಡೆಗೆ ಸೆಳೆಯದೆ ಇರದು. ಕಾಯದ ಸೌಂದರ್ಯಕ್ಕಾಗಿ ನಾವು ಯಾರನ್ನೂ ಪ್ರೀತಿಸುವುದಿಲ್ಲ. ಶುದ್ಧಾತ್ಮನಾದವನನ್ನು ನೋಡಿದರೆ ನಮ್ಮ ಜೀವನ ಪವಿತ್ರವಾಗುತ್ತದೆ. ಅವನು ಕಾಮನಂತೆ ಸುಂದರನಲ್ಲದಿದ್ದರೂ, ನಾವು ಅವನೊಡನೆ ಮಾತನಾಡಲು, ಸಂಬಂಧ ಬೆಳೆಸಲು ತವಕಪಡುತ್ತೇವೆ. "ಕಾಯ ಕರ್ರನೆ ಕಂದಿದರೇನಯ್ಯ ಕಾಯ

ಮಿರ್ರನೆ ಮಿಂಚಿದರೇನಯ್ಯ. ಚನ್ನಮಲ್ಲಿಕಾರ್ಜುನನೊಲಿಸುವ ಕಾಯ ಎಂತಾದರೇನಯ್ಯ." ಹೊರಗಿನ ಸೌಂದರ್ಯಕ್ಕೆ ಮನಸೋತವರು ಮೋಹಿತರು. ಅವರು ತಾವೂ ಕೆಡುವರಲ್ಲದೆ ಇತರರನ್ನು ಕೆಡಿಸುವರು. ಒಳಜೀವನದಲ್ಲಿ ಯಾರು ಬೆಳಕನ್ನು ಕಂಡಿರುವರೋ ಅವರು ಎಲ್ಲರಿಗೂ ಆದರ್ಶನೀಯರು, ವಂದನೀಯರು, ಅವರು ಮುಟ್ಟಿದ ಪದಾರ್ಥ ಪವಿತ್ರವಾಗುವುದು. ಅವರು ನಡೆದ ದಾರಿ ಶುದ್ಧವಾಗುವುದು. ಎಲ್ಲರನ್ನು ಆಕರ್ಷಿಸುವಂತಹ ಉದಾತ್ತವಾದ ಶಕ್ತಿ ಅವರಲ್ಲಿ ಇದೆ. ನಿಶ್ಚಲವಾದ, ಸಹಜವಾದ, ನಿರರ್ಗಳವಾದ ಪ್ರೇಮ ಅವರದು. ಅವರ ಅಮೃತವಾಣಿ ಎಲ್ಲರನ್ನೂ ಆನಂದಸಾಗರದಲ್ಲಿ ಮುಳುಗಿಸುವುದು. ಅವರ ಬೆಳವಣಿಗೆ ಎಲ್ಲರ ಮೇಲೂ ಪ್ರಭಾವವನ್ನು ಬೀರುತ್ತದೆ. ಅವರಲ್ಲಿ ಅಂತಹ ದೊಡ್ಡತನವಿರುವುದರಿಂದಲೇ, ನಾವು ಅವರಿಗೆ ತಲೆಬಾಗಿಸುತ್ತೇವೆ. ಆದುದರಿಂದಲೇ ಮಹಾತ್ಮಾ ಗಾಂಧಿಯವರು ಜಗತ್ಪೂಜ್ಯರಾಗಿದ್ದಾರೆ. ಹೆಚ್ಚು ಬೆಳಕು ಕಡಿಮೆ ಬೆಳಕನ್ನು ತನ್ನ ಒಳಗೆ ಮಾಡಿಕೊಳ್ಳುವುದು ಸ್ವಭಾವ. ಹಾಗೆ ಮಹಾತ್ಮರು ತಮ್ಮೊಳಗೆ ಇತರರನ್ನು ಆಕರ್ಷಿಸುವರು. ಪರಮಾತ್ಮನ ಅನುಗ್ರಹವನ್ನು ಹೆಚ್ಚು ಪಡೆದ ಅವರೇ ಧನ್ಯರು. ಅವರು ಶರೀರವನ್ನು ತೊರೆದು ಬಿಸಾಡಿ, ಬಯಲಿನಲ್ಲಿ ನಿಂತು, ಜೀವನದ ರಹಸ್ಯವನ್ನು ಅರಿತವರಲ್ಲ. ಕಾಯದಲ್ಲಿಯೇ ನಿರ್ಲಿಪ್ತನಾಗಿ ಅಡಗಿರುವ ಪರಮಾತ್ಮನನ್ನು ಕಣ್ಣಾರೆ ನೋಡಿದ ಕೃತಕೃತ್ಯರು ಅವರು. ಇಲ್ಲಿಯೇ ಪರಸುಖವನ್ನು ಅಳವಡಿಸಿಕೊಂಡ ಪುಣ್ಯಾತ್ಮರು ಅವರು.

ಕಾಯನೆಂಬುದು ಹೊಲಸಲ್ಲ. ಅದು ಒಳ್ಳೆಯ ಕೆಲಸ ಮಾಡಲಿಕ್ಕಾಗಿಯೇ ಬಂದಿದೆ. ಅದನ್ನು ಪ್ರಸಾದಕಾಯವನ್ನಾಗಿ ಮಾಡುವ ಶಕ್ತಿಯನ್ನು ಮನುಷ್ಯನು ಪಡೆಯಬೇಕು. ದೇವರನ್ನು ಒಲಿಸಲು ಬಂದಿರುವ ಈ ಕಾರ್ಯವನ್ನು ಭೋಗದ ಕಡೆಗೆ ತಿರುಗಿಸಿದರೆ ಅದನ್ನು ನಾವೇ ಕೆಡಿಸಿದಂತಾಗುತ್ತದೆ. ಅಷ್ಟರಲ್ಲಿಯೇ ತೃಪ್ತರಾಗದೆ, ನಿಜವಾದ ಪರತತ್ವವನ್ನು ತಿಳಿಯಲಿಕ್ಕೆ ಯತ್ನಿಸಬೇಕು. ಹೀಗೆ ಮಾಡದೆ ಹೋದರೆ ನಮ್ಮ ಜೀವನವನ್ನೇ ವ್ಯರ್ಥ ಮಾಡಿಕೊಳ್ಳುತ್ತೇವೆ. ಭೋಗವು ನಮಗೆ ಸ್ವಾಭಾವಿಕವಾಗಿ ಜೀವನ ವ್ಯವಹಾರಕ್ಕೆ ಸಂಬಂಧಿಸಿದ್ದು ಇದು ಅವಶ್ಯವಾಗಿ ಬೇಕು. ಇದೇ ಭೋಗ. ಒಳ್ಳೇ ವ್ಯವಸ್ಥೆಯಿಂದ ನಡೆದರೆ ಯೋಗವೆ

ನಿಸುತ್ತದೆ. ಮಿತಿಮೀರಿದರೆ ನಮ್ಮ ಬಾಳು ನಿರರ್ಥಕವಾಗುತ್ತದೆ. ಉಪಯೋಗಿಸುವ ಕ್ರಮವನ್ನು ನಾವು ಕಲಿಯದೆ, ನಮ್ಮ ತಪ್ಪನ್ನು ಹೊರಗಿನ ವಸ್ತುಗಳ ಮೇಲೆ ಹಾಕುವುದು ತಿಳಿಗೇಡಿತನವೇ ಸರಿ. ಭೋಗವೆಂಬುದು ಜನ್ಮಕ್ಕೆ ಗಂಟುಬಿದ್ದಿರುವ ವಿಷಯದ ತೃಪ್ತಿ. ತಾಯಿಯ ಗರ್ಭದಲ್ಲೇ ಶಿಶುವಿಗೆ ಆಹಾರಬೇಕು. ಅನ್ನದ ರಸಪಿಂಡವಾಗಿ ಬೆಳೆದು, ಎದೆ ಹಾಲು ಹಣ್ಣಿನ ರಸ ತಿಂದು ದೊಡ್ಡವರಾಗಿ ಬೆಳೆದು ಸಾಯುವ ವರೆಗೂ ಆಹಾರವನ್ನು ಅಪೇಕ್ಷಿಸುತ್ತೇವೆ. ತಿನ್ನದೆ ಉಣ್ಣದೆ ದೊಡ್ಡವರಾಗಲು ಯಾರಿಂದಲೂ ಶಕ್ಯವಿಲ್ಲ. ಆಹಾರದ ಅವಶ್ಯಕತೆ ನಿಜವಾಗಿ ಜೀವನಿಗೆ ಕೊನೆಯ ವರೆಗೂ ಇದೆ. ಚೈತನ್ಯ ಹೋದಮೇಲೆ ಆ ದೇಹಕ್ಕೆ ಆಹಾರಬೇಕಿಲ್ಲ. ಆದ್ದರಿಂದ ಆಹಾರ ಅಪರಿಹಾರ್ಯ. ಇದನ್ನು ಬಿಡಲಿಕ್ಕೆ ಆಗುವುದಿಲ್ಲ. ಇದರಂತೆ ವಿಷಯಗಳು. ಇವನ್ನು ನಿಂದಿಸುತ್ತ ಕುಳಿತರೆ, ನಮಗೆ ಈ ಪ್ರಪಂಚದಲ್ಲಿ ವಾದಕ್ಕೆ ಅವಕಾಶವೇ ದೊರೆಯದು. ಪ್ರಸಾದರೂಪವಾಗಿ ಭಾವಿಸಲ್ಪಟ್ಟರೆ, ವಿಷಯಗಳೇ ನಮ್ಮ ಮೇಲ್ಮೆಯನ್ನು ಸಾಧಿಸುತ್ತವೆ. (ಈಶಾವಾಸ್ಯಮಿದಂ ಸರ್ವಂ) ಶರೀರ ಹೊಲಸಾದರೂ ಅದರಲ್ಲಿ ಆನಂದರೂಪನಾದ ಆತ್ಮನಿಲ್ಲವೆ? ಮಣ್ಣಿನಿಂದ ಮಾಡಿದ ಗಣಪತಿ ಪೂಜ್ಯನಾಗುವುದಿಲ್ಲವೆ? ರಕ್ತಮಾಂಸಗಳಲ್ಲಿಯೇ ಶಕ್ತಿಯೊಂದು ಹಾಸುಹೊಕ್ಕಾಗಿ ಸೇರಿಕೊಂಡಿಲ್ಲವೆ? ಕಣ್ಣುಹೊರಗಿನ ಸೌಂದರ್ಯವನ್ನು ನೋಡಿ ಮೋಹಿತವಾಗುವಂತೆ, ಅದಕ್ಕಿಂತ ನೂರ್ಮಡಿ ಮಿಗಿಲಾದ ಆಂತರಿಕ ಸೌಂದರ್ಯವನ್ನು ನೋಡಿ ಆನಂದಪರವಶವಾಗುವಂತೆ ಮಾಡಲು ತನ್ನಿಂದ ಸಾಧ್ಯವಿಲ್ಲವೆ? "ಕಂಗಳು ತಪ್ಪಿ ನೋಡಿದರೆ ಮಾರಿ. ನಾಲಿಗೆ ತಪ್ಪಿ ನುಡಿದರೆ ಮಾರಿ. ದೇವರ ನೆನಹು ಮರೆದರೆ ಮಾರಿ" ಹೀಗೆ ನಿಜವಾದ ಮಾರಿ ನಮ್ಮಲ್ಲಿಯೇ ಇರುವಾಗ ಅದನ್ನು ತಪ್ಪಿಸುವುದಕ್ಕಾಗಿ ಕಣ್ಣು ಒಳಗಿನ ದೇವರನ್ನು ನೋಡುವಂತೆ ಮಾಡುವುದು ನಮ್ಮ ಕರ್ತವ್ಯ. ಕಣ್ಣು ಮನ ನಾಲಿಗೆಗಳಲ್ಲಿ ಒಂದು ವ್ಯವಸ್ಥೆಯನ್ನು ನಾವು ಏರ್ಪಡಿಸಿಕೊಂಡಿಲ್ಲ. ಇವುಗಳನ್ನು ಒಳ್ಳೆಯ ರೀತಿಯಲ್ಲಿ ನಡೆಸುತ್ತಹೋದರೆ, ನಮ್ಮ ಒಳಜೀವನದಲ್ಲಿ ಒಂದು ಬಗೆಯ ಶಾಂತಿ ದೊರೆಯುತ್ತದೆ. ಇವು ಮೂರು ಅಂಗಗಳ ಮೇಲೆ ತನ್ನ ಆಡಳಿತ ನಡೆಸಲಿಕ್ಕೆ ಶಕ್ತಿಯಿಲ್ಲದವನು ಹೊರಗಿನ ವಿಶಾಲವಾದ ಪ್ರಪಂಚವನ್ನು ನಡೆಸಲಿಕ್ಕೆ ಆಗುತ್ತದೆಯೇ? ಎಂದಿಗೂ ಆಗದು. ಸರಿಯಾಗಿ ತಿಳಿದು ಉಪಯೋಗಿಸಿದರೆ ಎಲ್ಲವೂ ರಸವಾಗುತ್ತದೆ. ಸುವ್ಯವಸ್ಥಿತವಾದರೆ ಜೀವ

ನವೇ ಸ್ವರ್ಗ. ಅವ್ಯವಸ್ಥಿತವಾದರೆ ಅದೇ ನರಕವಾಗುತ್ತದೆ. ಏನನ್ನು ನೋಡಬೇಕು, ಏನನ್ನು ಕೇಳಬೇಕು, ಏನನ್ನು ಭಾವಿಸಬೇಕು ಎಂಬುದೇ ತಿಳಿಯದವನು ಜೀವನದ ಗುರಿಯನ್ನು ಸಾಧಿಸುವುದಾದರೂ ಹೇಗೆ?

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣವದೇಕೆ ಭಕ್ತಿಯಿಂ
ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಿಂ ।
ಮಾಡದ ಕೈಗಳೇಕೆ ನೆರೆ ಸೋಂಕದ ದೇಹವದೇಕೆ ಕುಡಿಯ
ಳ್ಕಾಡ ಚಿತ್ತವೇಕೆನಗೆ ಹಂಪೆಯ ಲಿಂಗವೇ ನಿಮ್ಮೊಳಳ್ಕರಿಂ ॥

ಎಂಬ ಹರಿಹರನ ದಿವ್ಯೋಕ್ತಿಯಂತೆ ಕರಣಂಗಳನ್ನು ಇಂತಹ ಉತ್ತಮವಾದ ಕಡೆಗೆ ಪ್ರೇರಿಸುವುದಕ್ಕಿಂತಲೂ ಬೇರೆ ಉಪಾಯವುಂಟೇ? ಇದಕ್ಕಿಂತಲೂ ಬೇರೆ ಭೋಗ ಬೇಕೆ? ಇದಕ್ಕಿಂತಲೂ ಮಿಗಿಲಾದ ಸುಖವುಂಟೇ?

ಭೋಗವನ್ನು ಬಿಡೆಂದು ಯಾರೂ ಹೇಳುವುದಿಲ್ಲ. ಅದನ್ನು ವ್ಯವಸ್ಥೆಯಿಂದ ಅನುಭವಿಸಿದರೆ, ಅದರಿಂದ ವರ್ಚಸ್ಸು, ವೀರ್ಯ, ಆಯುಷ್ಯ ಮೊದಲಾಗಿ ಎಲ್ಲವೂ ಅಭಿವೃದ್ಧಿಯಾಗುತ್ತವೆ. ಯಾವ ಶರೀರದಿಂದ ಭೋಗವನ್ನು ಅನುಭವಿಸುತ್ತೇವೆಯೋ ಆ ಶರೀರದಿಂದಲೇ ಯೋಗವನ್ನು ಪಡೆಯಬಹುದು. ಮನಸ್ಸನ್ನು ಸಮಾಧಿಯಲ್ಲಿ ಇರಿಸಬೇಕಾದರೆ, ಈ ಶರೀರವನ್ನು ಬೇರ್ಪಡಿಸಬೇಕಾಗಿಲ್ಲ. ಈ ಶರೀರದಿಂದಲೇ ಒಳ್ಳೆಯದನ್ನು ಮಾಡಿಸಬೇಕು. ಇದರೊಡನೆ ಚಿತ್ತವನ್ನು ಕಲಿಸಬೇಕು-ಬೆರಸಬೇಕು. ಈ ರೀತಿಯಲ್ಲಿಯೇ ತನ್ನನ್ನು ತಾನು ತಿಳಿಯಬೇಕು. ಇಂತಹದೊಂದು ಯೋಗಾವಸ್ಥೆಯನ್ನು ಪಡೆಯಲು ಕಾಡಿಗೆ ಹೋಗಬೇಕಾಗಿಲ್ಲ. ಇದಕ್ಕೆ ನಿರ್ಜನಪ್ರದೇಶದ ಆವಶ್ಯಕತೆ ಇಲ್ಲ. ಇಲ್ಲಿಯೇ ಇದ್ದು ಭೋಗವನ್ನು ಪಡೆಯುವಂತೆ ಯೋಗವನ್ನು ಪಡೆಯಬೇಕು. ಪ್ರಪಂಚದ ನಡುವೆ ಇದ್ದು, ಅದಕ್ಕೆ ಸಿಲುಕದೆ, ಎಲ್ಲವನ್ನು ಸಾಧಿಸುವ ಶಕ್ತಿಯನ್ನು ಅಭ್ಯಾಸದಿಂದ ಪಡೆಯಬೇಕು. ಪ್ರಪಂಚವನ್ನೆಲ್ಲ ಕಟ್ಟಿಕೊಂಡು ತನ್ನ ಆತ್ಮವನ್ನೇ ಮರೆಯುವುದಾದರೆ, ಮನುಷ್ಯನಿಗೆ ಆಗುವ ಫಲವಾದರೂ ಏನು? ತನ್ನನ್ನು ಉದ್ಧಾರ ಮಾಡಿಕೊಳ್ಳುವುದಕ್ಕಾಗಿ, ತಾನು ಎಲ್ಲರನ್ನೂ ತೊರೆದು ಅಡವಿಗೆ ಹೋಗಿ ತಪಸ್ಸನ್ನಾಚರಿಸಿದರೆ, ಅದರಿಂದ ತನಗೆ ಯೋಗಸಿದ್ಧಿಯಾದರೂ, ಲೋಕದ ಸ್ತುತಿನಿಂದೆಗಳು, ಹಾನಿವೃದ್ಧಿಗಳ

ನಡುವೆ ತಿರುಗಿ ಬಾಳಲೇಬೇಕಾಗುವುದು. ಕಾಡಿನಲ್ಲಿ ಅವನು ಪಡೆದಿದ್ದ ಅಭಾವವಿರಕ್ತಿ ಲೋಕದ ದ್ವಂದ್ವಗಳ ಮಾಯಾ ಜಾಲಕ್ಕೆ ಸಿಕ್ಕಿ ಚೂರು ಚೂರಾಗುವಂತಹ ದುರವಸ್ಥೆಗೆ ಬರುವುದು. ಮಾನವನು ಭೂಮಿಯಲ್ಲಿ ಅವತರಿಸಿರುವುದು ಕಾಡಿನಲ್ಲಿ ವಾಸ ಮಾಡುವುದಕ್ಕಲ್ಲ. ಇಲ್ಲಿಯೆ ಇದ್ದು ಎಲ್ಲವನ್ನೂ ನ್ಯಾಯವಾಗಿ ಧರ್ಮದಿಂದ ಅನುಭವಿಸಿ, ತಾನು ಬದುಕಿರುವಾಗಲೇ ಮುಕ್ತಿ ಸುಖವನ್ನು ಅನುಭವಿಸುತ್ತ, ತನ್ನ ಜೀವನದಲ್ಲಿ ಪರಿಪೂರ್ಣತೆಯನ್ನು ಪಡೆದುಕೊಂಡು, ಹಾಗೆಯೆ ತನ್ನಂತೆ ಕಷ್ಟಪಡುತ್ತಿದ್ದ ಜೀವಿಗಳನ್ನು ಸಂಕಟದಿಂದ ಉದ್ಧಾರ ಮಾಡುವುದಕ್ಕಾಗಿ ಅವನು ಇಲ್ಲಿ ಬಂದಿರುವುದು. ಇದನ್ನು ಮರೆತು ತಾನು ಸರ್ವಸಂಗ ಪರಿತ್ಯಾಗ ಮಾಡಿದರೆ ಅದರಿಂದ ಯಾರಿಗೇನು ಪ್ರಯೋಜನವಾಗುವುದು? ಈ ರೀತಿಯಲ್ಲಿ ಯಾವನು ಮಾಡುವನೊ ಅವನ ಆತ್ಮೋತ್ಕರ್ಷತೆಯ ವಿಷಯದಲ್ಲಿ ಯಾರಿಗೂ ಅಷ್ಟು ನಂಬಿಕೆಯಿರದು. ಪ್ರಪಂಚವೆಂಬ ಕರ್ಮಕ್ಷೇತ್ರದಲ್ಲಿ ಇದ್ದು, ದುಡಿದು "ಈಜಬೇಕು." ಶತ್ರುಗಳನ್ನು ಜಯಿಸಬೇಕು. 'ಭೋಗಿಸಬೇಕು ಯೋಗಿಸಬೇಕು ತ್ಯಾಗಿಸಬೇಕು ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯ ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" ಹೀಗೆ ಇಲ್ಲಿ ಅನರ್ಹರಾದವರು ಮತ್ತೆ ಎಲ್ಲಿ ತಾನೆ ಅರ್ಹರಾಗಬಲ್ಲರು? ಇಲ್ಲಿ ಹುಟ್ಟಿರುವಾಗ ತನ್ನ ಮೇಲ್ಮೆಗೆ ಏನಾದರೂ ಮಾಡಿಕೊಳ್ಳದೆ, ವ್ಯರ್ಥವಾಗಿ ಕಾಲಕಳೆಯುವ ಸೋಮಾರಿಗಳನ್ನು ಉದ್ಧಾರ ಮಾಡಲು ಯಾರಿಗೆ ತಾನೆ ಸಾಧ್ಯವಾದೀತು? ಶರೀರವನ್ನು ದಂಡಿಸದೆ, ಕೃಷಿಮಾಡದೆ, ಲೋಕಾಭಿರಾಮನಾಗಿ, ತಿರುಗುವವನಿಗೆ ಯಾವನು ತಾನೆ ಸಹಾಯ ಮಾಡುವನು? ಹುಟ್ಟಿದ್ದಕ್ಕೆ ಚೆನ್ನಾಗಿ ಬಾಳಬೇಕು. ಬಾಳಬೇಕಾದರೆ ತಪಸ್ಸು ಮಾಡಬೇಕು. ತಪಸ್ಸೆಂದರೆ ಎಲ್ಲರನ್ನೂ ತೊರೆದು ಆಶ್ರಮದಲ್ಲಿ ವಾಸಮಾಡುವುದಲ್ಲ. ಇಂದ್ರಿಯಗಳನ್ನು ವ್ಯವಸ್ಥೆಗೊಳಿಸುವುದೇ ತಪಸ್ಸು. ಮಾತಿನಲ್ಲಿ ಮೌನವನ್ನವಲಂಬಿಸಿ ಬಂದವರೊಡನೆ ಲೇಖನದಲ್ಲಿ ವ್ಯವಹಾರ ನಡೆಸುವುದು ತಪಸ್ಸಲ್ಲ. ಅಸದ ವ್ಯವಹಾರಗಳನ್ನು ತೊರೆದು ಸದ ವ್ಯವಹಾರಗಳಲ್ಲಿಯೇ ನಾಲಿಗೆಯನ್ನೂ ಮನಸ್ಸನ್ನೂ ನಿಯೋಗಿಸುವುದೇ ಪರಮ ತಪಸ್ಸು, ಮನಸ್ಸು ದುಂಬಿಯಂತೆ ಅನೇಕ ಕಡೆ ಹಾರುವುದನ್ನು ತಪ್ಪಿಸಿ ಒಂದು ವ್ಯವಸ್ಥೆಯಿಂದ ಕಾರ್ಯಕ್ಷೇತ್ರದಲ್ಲಿ ಧುಮುಕುವಂತಿರಬೇಕು. ನಾಲಿಗೆಯನ್ನು ತನ್ನ ಅಧೀನದಲ್ಲಿಟ್ಟು

ಕೊಂಡು, ಅವಶ್ಯವಿದ್ದರೆ ತನ್ನ ಅಭಿಪ್ರಾಯವನ್ನು ತಿಳಿಸುವಂತಾಗಬೇಕು. ಹೀಗೆ ಕರಣಗಳನ್ನು ಯುಕ್ತವಾಗಿ ಉಪಯೋಗಿಸಿದರೆ, ಶರೀರ ಲಘುವಾಗಿಯೂ ಅರೋಗ್ಯ ಧೃಢವಾಗಿಯೂ ನಮ್ಮ ಧ್ಯೇಯ ಸಾಧನೆಗೆ ಅನುಕೂಲವಾಗಿಯೂ ಇರುತ್ತದೆ. ಇದರಿಂದ ಮನಸ್ಸು ಸಮಾಧಿಯನ್ನು ಅನಾಯಾಸವಾಗಿ ಪಡೆಯಬಹುದು.

ಇಂತಹ ಯೋಗದಿಂದ ಮನುಷ್ಯನಿಗೆ ಉತ್ತಮವಾದ ಸ್ಥಿತಿ ಬರುತ್ತದೆ. ಅಗ ಅವನು ಕಷ್ಟ ನಿಷ್ಠುರಗಳಿಗೆ ಹೆದರುವುದಿಲ್ಲ. ಹೊಗಳಿದರೆ ಹಿಗ್ಗುವುದಿಲ್ಲ. ತೆಗಳಿದರೆ ಕುಗ್ಗುವುದಿಲ್ಲ. ಅವನಿಗೆ ಯಾರ ಹಂಗೂ ಇರುವುದಿಲ್ಲ. ಅವನು ಬಾಳುತ್ತಿರುವುದು ಇತರರಿಗಾಗಿ. ತನ್ನಲ್ಲಿ ಸ್ವಾರ್ಥ ಲೇಶವೂ ಇರುವುದಿಲ್ಲ. ದೀನಾನಾಥರ ಯಾತನೆಯನ್ನು ತಪ್ಪಿಸಬೇಕೆಂಬ ಇಚ್ಛೆಯಿಂದ, ಲೋಕದಲ್ಲಿ ವ್ಯವಹರಿಸುತ್ತಾನೆ. ಇಂಥವನೇ ಪರಮಯೋಗಿಯೆನಿಸುವನು. ಅವನಲ್ಲಿ ಸಹನೆ, ಶಾಂತಿ, ದಾಂತಿಗಳು ತುಂಬಿ ತುಳುಕುತ್ತವೆ. ಸದ್ಗುಣಗಳು ಭೋರ್ಗರೆಯುತ್ತವೆ. ಸಾಮಾನ್ಯ ಜನರಂತೆ ಅವನು ಪ್ರಾಪಂಚಿಕ ಸುಖವನ್ನು ಅನುಭವಿಸುತ್ತಿದ್ದರೂ, ಅವನ ಮನೋಭಾವವೇ ಬದಲಾವಣೆ ಹೊಂದಿರುವುದರಿಂದ, ಅವನು ಅನುಭವಿಸುವ ಸುಖವೇ ಪ್ರಸಾದ ರೂಪವಾಗಿ ಅವನ ಅವನತಿಗೆ ಕಾರಣವಾಗದೆ, ಆತ್ಮೋನ್ನತಿಗೆ ಸಾಧಕವಾಗುತ್ತದೆ. ಹೀಗೆ ವಿಷಯ ಸುಖವನ್ನನುಭಸುತ್ತಿರುವ ಕಾಲದಲ್ಲಿ ಒಬ್ಬನ ಯೋಗ್ಯತೆಯು ಎಲ್ಲರಿಗೂ ವ್ಯಕ್ತವಾಗುವಂತೆ, ಕಾಡಿನಲ್ಲಿ ವಾಸಮಾಡುವುದರಿಂದ ಅಷ್ಟು ಪ್ರಕಟವಾಗುವುದಿಲ್ಲ. ಒಬ್ಬನ ಮಹತ್ವ ರಂಗಭೂಮಿಯಲ್ಲಿ ಚೆನ್ನಾಗಿ ತೋರುವಂತೆ ತೆರೆಯೊಳಗೆ ತೋರುವುದಿಲ್ಲ. ಸ್ತುತಿ ನಿಂದೆಗಳನ್ನು ಕೇಳಿ ಅವನ ಮನಸ್ಸು ಹೇಗೆ ವರ್ತಿಸುವುದೋ ಅದನ್ನು ತಿಳಿದು ಅವನ ಸತ್ವವನ್ನು ಪರಿಶೀಲಿಸಬೇಕು. ಕೋಪತಾಪಗಳಿಗೆ ರಾಗದ್ವೇಷಗಳಿಗೆ ಅವನ ಮನಸ್ಸು ಯಾವ ಕಡೆ ನಿಲ್ಲುವುದೋ ಅದನ್ನು ನೋಡಿ ಅವನ ಶ್ರೇಷ್ಠತೆಯನ್ನು ಅರಿಯಬೇಕು. ಅಂಥವನೇ ಮಹಾನುಭಾವನೆನಿಸುವನು. ಎಲ್ಲರೂ ಹಾಗೆ ಅಗಲಿಕ್ಕೆ ಯತ್ನಿಸಬೇಕು. ಬಾಹ್ಯವಸ್ತುಗಳಿಂದ ಮನುಷ್ಯನು ದೊಡ್ಡವನಾಗುವುದಿಲ್ಲ. ಅಂತರಂಗದಲ್ಲಿ ಅವನು ಸಂಪಾದಿಸಿದ ವಸ್ತುಗಳಿಂದ ಅವನು ನಮಗೆ ಪೂಜ್ಯನೂ, ಗುರುವೂ, ಜ್ಯೋತಿಯೂ, ವಿಭೂತಿಯೂ, ಆಗುವನು. ಇಂತಹ ಮಹಾಪುರುಷನು ಯಾವ ಜಾತಿ

ಯಲ್ಲಿಯೇ ಅವತರಿಸಲಿ, ಅವನಿಂದಲೇ ಲೋಕಕ್ಕೆ ಕಲ್ಯಾಣವೂ, ಶಾಂತಿಯೂ ಆಗಬೇಕಾಗಿದೆ. ಇಂತಹ ಮಹಾತ್ಮರು ಎಷ್ಟೋ ಜನರು ಈಗಲೂ ಇದ್ದಾರೆ. ಅವರು ಸಾಧಿಸಿ ಪಡೆದ ಮೇಲಿನ ಅಂತಸ್ಥನ್ನು ಸಂಪಾದಿಸುವುದೇ ಜೀವನದ ಗುರಿ. ದುರ್ಗುಣಗಳನ್ನು ಖಂಡಿಸಿ ಸದ್ಗುಣಗಳನ್ನು ಒಳಗೂ ಹೊರಗೂ ತೋರುವಂತಹ ಒಂದು ಉತ್ತಮೋತ್ತಮ ಸ್ಥಿತಿಯನ್ನು ಪಡೆಯುವುದೇ ಜೀವನದ ಧ್ಯೇಯ. ಅಂತಹ ಸದ್ಗುಣಗಳನ್ನು ಆಚರಣೆಯಲ್ಲಿ ತರುವಂತಹ ಆದರ್ಶಸ್ಥಿತಿಯನ್ನು ಪಡೆಯುವುದೇ ಬಾಳಿನ ಗುರಿ. ಇಂತಹ ಗುರಿಯನ್ನು ಸಾಧಿಸಲು ಉತ್ತಮವಾದ ಕಾರ್ಯಕ್ಷೇತ್ರ ಪ್ರಪಂಚ, ತಪೋವನವಲ್ಲ; ಸ್ವರ್ಗವಲ್ಲ. ಜನರೆಲ್ಲರಲ್ಲಿಯೂ ದಿವ್ಯಜ್ಯೋತಿಯ ದರ್ಶನವಾಗಿ, ಧ್ಯೇಯವನ್ನು ಸಾಧಿಸಲು ಅನುಕೂಲ ಮಾಡುವುದೇ ಇಂತಹ ಯೋಗಿಗಳ ಉಚ್ಚ ಧ್ಯೇಯ.

ಇಂತಹ ಯೋಗಿಗೆ ವಿಶ್ವವೇ ಕುಟುಂಬವಾಗುವುದು. ಅವನ ಪ್ರೇಮ ಸರ್ವವ್ಯಾಪಕವೂ ವಿಶಾಲವೂ ಆಗುವುದು. ನೀಚಭಾವನೆ ಅವನಿಂದ ದೂರ ಸರಿಯುವುದು. ತಾನು ಆತ್ಮಜ್ಞಾನವನ್ನು ಪಡೆದು, ಅಷ್ಟಕ್ಕೆ ತೃಪ್ತನಾಗದೆ, ಅಸಂಖ್ಯಾತರಾದ ಅಜ್ಞರಿಗೆ ಕೃಪೆಮಾಡುವನು. ಒಬ್ಬನು ಜ್ಞಾನಿಯಾಗಿ ಅನೇಕರು ಅಜ್ಞಾನಿಗಳಾಗಿ ಉಳಿದರೆ, ಅವನಿಂದ ಫಲವಿಲ್ಲ. ಯಾವನು ದೇಹೇಂದ್ರಿಯಗಳಲ್ಲಿ ಒಂದು ಸದ್ಭಾವನೆಯಿಂದ, ಒಂದು ವ್ಯವಸ್ಥೆಯಿಂದ, ಸಹಕರಿಸಿ ತನ್ನ ಆತ್ಮದ ಪೂರ್ಣ ಉಚ್ಛ್ರಾಯ ಸ್ಥಿತಿಯನ್ನು ಪಡೆಯುವನೋ ಮತ್ತು ಅದನ್ನು ಪಡೆದು ಎಲ್ಲರಿಗೂ ಹಂಚುವನೋ ಅಂಥವನೇ ಲೋಕದಲ್ಲಿ ಸತ್ಪುರುಷನು. ಸಾಮಾನ್ಯ ಜೀವಿಗಳೂ ಇಂತಹ ಸತ್ಪುರುಷರಾಗಲು ಪ್ರಯತ್ನಪಡಬೇಕು. ಪ್ರಯತ್ನಪಟ್ಟರೆ ದಾರಿ ತಾನಾಗಿಯೇ ತೋರುತ್ತದೆ. ಮಾರ್ಗದರ್ಶಕವೂ ಸಾಧನಗಳೂ ತಾವಾಗಿಯೇ ದೊರೆಯುತ್ತವೆ. ದಿವ್ಯ ಸ್ವರೂಪವನ್ನು ತಿಳಿಯಲು ಎಲ್ಲರೂ ಭಾಗಿಗಳಾದುದರಿಂದ ತನ್ನಂತೆ ಇತರರು ಎಂದು ಭಾವಿಸಿ ಅವರ ಮೇಲ್ಮೆಯನ್ನು ಸಾಧಿಸಲು ಬ್ರಹ್ಮಜ್ಞಾನಿಯು "ಕಾಯೇನ ವಾಚಾ ಮನಸಾ'' ಪ್ರಯತ್ನ ಪಡಬೇಕು. ತಾನು ಮುಕ್ತನಾದರೆ ಸಾಲದು. ಎಲ್ಲರಿಗೂ ಆಹಾರದ ಅವಶ್ಯಕತೆ ಹೇಗೆ ಇದೆಯೋ ಹಾಗೆ ಪರಮೋತ್ತಮ ಸ್ಥಿತಿಯನ್ನು ಜೀವಿತ ಕಾಲದಲ್ಲಿಯೇ ಪಡೆಯುವುದು ಎಲ್ಲರ ಆಜನ್ಮಸಿದ್ಧವಾದ ಹಕ್ಕು. ಇಂತಹದೊಂದು ಉತ್ಕರ್ಷ

ತೆಯನ್ನು ಪಡೆಯುವುದಕ್ಕಾಗಿಯೇ ದೇವತೆಗಳು ಭೂಮಿಯಲ್ಲಿ ಅವತರಿಸುತ್ತಾರೆ. ಪುನರ್ಜನ್ಮವನ್ನು ತಪ್ಪಿಸಿಕೊಂಡು ನಿತ್ಯಸುಖವನ್ನನುಭವಿಸುವಂತಹ ಉತ್ತಮೋತ್ತಮವಾದ ಅವಸ್ಥೆ ಸಂಭವಿಸುವುದಾದರೆ ಮನುಷ್ಯನಿಗೆಯೇ ಹೊರತು ಇತರರಿಗೆ ಸಾಧ್ಯವಿಲ್ಲ. ಆದುದರಿಂದಲೇ ಮಾನವ ಜನ್ಮ ದುರ್ಲಭವಾದುದೆಂಬ ಭಾವನೆ ಸರ್ವವಿದಿತವಾಗಿದೆ. ಇಂತಹ ಸದವಕಾಶವನ್ನು ವ್ಯರ್ಥಮಾಡಿಕೊಳ್ಳದೆ ಎಲ್ಲರೂ ಪರಂಜ್ಯೋತಿಯ ಅನುಭವವನ್ನು ಪಡೆದುಕೊಳ್ಳಬೇಕು. ಹಾಗೆ ಪಡೆದವರು ತಟಸ್ಥರಾಗಿರದೆ, ಅರಿಯದವರಿಗೆ ಅದರ ಪರಿಚಯವನ್ನು ಮಾಡಿಕೊಡಲು ಪ್ರಯತ್ನ ಮಾಡಬೇಕು. ತತ್ವವನ್ನು ಸಾಕ್ಷಾತ್ಕರಿಸಿಕೊಂಡವರು ಅಷ್ಟರಲ್ಲಿಯೇ ತೃಪ್ತಿರಾಗಿ ನಿಂತರೆ, ಅವರ ಜೀವನ ಪರಿಪೂರ್ಣವಾಗಲಾರದು.

ಇಂತಹ ದಿವ್ಯಜ್ಯೋತಿಯ ದರ್ಶನವಾಗುವುದು ಈ ಶರೀರದಲ್ಲಿ. ಮನೆಯಲ್ಲಿ ವಾಸಮಾಡುವವನು ತಾನು ಶುದ್ಧನೆಂದೂ, ಪವಿತ್ರನೆಂದೂ, ಚೈತನ್ಯನೆಂದೂ ತಿಳಿದು ತನ್ನ ಸುತ್ತಮುತ್ತಣ ಸನ್ನಿವೇಶವೂ ಮನೆಯೂ ಅಪವಿತ್ರವೆಂದೂ, ಅಶುಭವೆಂದೂ, ಜಡವೆಂದೂ ಜರಿಯುತ್ತ ಕುಳಿತರೆ ಆಗುವುದಿಲ್ಲ ಹಾಗೆ ಈ ಶರೀರದಲ್ಲಿ ಅಪವಿತ್ರ ಭಾವನೆಯನ್ನು ಕಲ್ಪಿಸಬಾರದು. ಈ ಶರೀರದಿಂದಲೇ ಎಲ್ಲ ಧರ್ಮಗಳನ್ನು ಸಾಧಿಸಬೇಕು. ಗಳಿಸಬೇಕು. ಇದರಲ್ಲಿ ಭೋಗವೂ ಬೇಕು. ಯೋಗವೂ ಬೇಕು ತ್ಯಾಗವೂ ಬೇಕು. ಆದುದರಿಂದಲೇ ಈ ದೇಹವನ್ನು ಭೋಗಾಂಗ ಯೋಗಾಂಗ ತ್ಯಾಗಾಂಗ ಎಂದು ಕರೆಯುತ್ತಾರೆ. ಈ ಶರೀರವನ್ನು ಹೊಂದಿರುವವರು ಎಲ್ಲರೂ ಭೋಗಿಗಳೂ ಯೋಗಿಗಳೂ ತ್ಯಾಗಿಗಳೂ ಆಗಬೇಕು. ಹಾಗಾದರೆಯೇ ಜೀವನ ಪರಿಪೂರ್ಣವಾಗುವುದು. ಇಂತಹ ಜೀವಿಗಳಲ್ಲಿ ಯಾರು ಹೆಚ್ಚೂ ಅಲ್ಲ. ಯಾರು ಕೀಳೂ ಅಲ್ಲ. ಯಾರು ಉತ್ಕೃಷ್ಟರೂ ಅಲ್ಲ. ನಿಕೃಷ್ಟರೂ ಅಲ್ಲ. ಎಲ್ಲರಲ್ಲಿಯೂ ಮಹಾತ್ಮರಾಗುವ ದಿವ್ಯಶಕ್ತಿಯಿದೆ. ಕೆಲವರು ಬೇಗನೆ ಅಂತಹ ಉತ್ತಮ ಸ್ಥಿತಿಯನ್ನು ಪಡೆಯಬಹುದು. ಮತ್ತೆ ಕೆಲವರು ಕೊಂಚ ನಿಧಾನವಾಗಿ ಆ ಸ್ಥಿತಿಯನ್ನು ಪಡೆಯುವರು. ಹೀಗೆ ಭೋಗ ಯೋಗ ತ್ಯಾಗಗಳನ್ನು ಸಮನ್ವಯ ಮಾಡಿಕೊಂಡು, ಏರುಪೇರುಗಳಿಗೆಡೆಗೊಡದೆ ಜೀವನವನ್ನು ನಡೆಸುತ್ತ ಬಂದರೆ, ಜೀವ ಬ್ರಹ್ಮೈಕ್ಯ ರೂಪವಾದ ಲಕ್ಷ್ಯವನ್ನು ಎಲ್ಲರೂ ಸಾಧಿಸಬಹುದು.

ಈ ಗುರಿಯನ್ನು ಸಾಧಿಸಲು ಹೆಣ್ಣು ಗಂಡು ಎಲ್ಲರಿಗೂ, ಪ್ರಯತ್ನ ಪಟ್ಟರೆ ಸಾಧ್ಯ. ಕೆಲವು ಸ್ವಾಮಿಗಳಿಗೂ ಶಾಸ್ತ್ರಿಗಳಿಗೂ ಮಾತ್ರವೇ ಇದು ಸಾಧ್ಯವೆಂದು ಯಾರೂ ಭಾವಿಸಕೂಡದು. ಪ್ರತಿಯೊಬ್ಬನಿಗೂ ಹೊರಗೆ ಕಾಣುವಂತೆ ಒಳಗಿನದೂ ಒಂದು ಜೀವನ ಇದೆ. ಹೊರಗಿನದು ಒಳಗಿನದು ಎಲ್ಲವನ್ನು ಹೊಂದಿಸಿಕೊಂಡು ಒಂದಕ್ಕೊಂದು ಸಮನ್ವಯ ವಾಗುವಂತೆ ಪ್ರಗತಿ ಮಾರ್ಗದಲ್ಲಿ ಮುಂದುವರೆದರೆ ನಮ್ಮ ಜೀವನ ಪರಿಪೂರ್ಣವಾಗುವುದು. ಇಂತಹದೊಂದು ಹೆಚ್ಚಿನ ಸ್ಥಿತಿಗೆ ಹೋಗ ಬೇಕಾದರೆ ಹೊಟ್ಟೆಬಟ್ಟೆ ಪ್ರಶ್ನೆಯನ್ನು ಸರಿಪಡಿಸಿಕೊಳ್ಳುವುದು ಮೊದ ಲನೆಯ ಕೆಲಸ. ಹೊರಗೆ ಸ್ವಚ್ಛಮಾಡದೆ, ಕುಂದುಕೊರತೆಗಳನ್ನು ಸರಿಪಡಿಸಿಕೊಳ್ಳದೆ, ರೋಗರುಜಿಗಳನ್ನು ನೆಟ್ಟಗೆ ಮಾಡಿಕೊಳ್ಳದೆ, ಆತ್ಮ ನನ್ನು ಸಮಾಧಿಯಲ್ಲಿರಿಸಲು ಕಷ್ಟವಾಗುತ್ತದೆ. ನಾವು ಒಳಗೆ ಪರೀಕ್ಷೆ ಮಾಡಲು ಹವಣಿಸಿದರೆ ಹೊರಗಿನ ಉಪಟಳಗಳು ನಮ್ಮನ್ನು ತಪ್ಪು ದಾರಿಗೆ ಎಳೆಯುತ್ತವೆ. ಕೆಲವು ಕಠಿಣ ಪ್ರಶ್ನೆಗಳು ಜೀವನವನ್ನು ಚೂರು ಮಾಡುತ್ತವೆ. ಹೊರಗೆ ಕೃತ್ರಿಮತೆ, ಅಸೂಯೆಗಳು. ನಟನನಾಡುತ್ತಿ ರುವಾಗ, ನಿಜವಾದ ಸೌಹಾರ್ದ ಪ್ರೇಮಗಳು ಹೇಗೆ ಬರುತ್ತವೆ? ಹೊರಗೆ ಶುದ್ಧಿಯಿದ್ದರೆ ಒಳಗೆ ಶಾಂತಿ ದೊರೆಯುತ್ತದೆ. ಆಗ ಮಾನವನು ಆತ್ಮಾ ರಾಮನಾಗುವನು. ಈ ರೀತಿಯಾಗಿ, ಹೊರಗೂ ಒಳಗೂ ಒಂದು ವ್ಯವ ಸ್ಥೆಯನ್ನು ಸಮೂಹಿಕತೆಯನ್ನು ಏರ್ಪಡಿಸಿಕೊಂಡು ಉತ್ತಮರೀತಿಯಲ್ಲಿ ಬಾಳುವುದು ಯಾರು ತಾನೇ ಮಾಡಬಾರದ ಕೆಲಸ?

ನಮಗೆ ಭೋಗವಿಲಾಸಗಳು ಹೆಚ್ಚಿದ ಹಾಗೆಲ್ಲ ಸಾವಿನ ದುಃಖ ಹೆಚ್ಚುತ್ತದೆ. ಅದು ಎಲ್ಲರಿಗೂ ನಿಷ್ಪಕ್ಷಪಾತವಾಗಿ ಸಂಬಂಧಿಸಿದ್ದು. ಹುಟ್ಟು ಬಾಳು ಸಾವುಗಳು ಬಹಳ ಕಠಿಣವಾದ ಪ್ರಶ್ನೆಗಳು. ಇವು ಯಾರ ಹಿಡಿತಕ್ಕೂ ಸಿಕ್ಕಿಲ್ಲ. ಅದರಲ್ಲಿಯೂ ಸಾವು ಎಂತಹುದೆಂದು ಅರಿಯು ವುದು ಬಹಳ ಕಷ್ಟ. ಕೊನೆಯ ದಿವಸ ಹೇಗೆ ಬರುತ್ತದೆ, ಅದಕ್ಕೆ ಹೇಗೆ ತಯಾರಿರಬೇಕು ಎಂಬುದು ಬಹಳ ಕ್ಲೇಶಕರವಾದ ಸಮಸ್ಯೆ. ಇದನ್ನು ಯಾರೂ ಬಗೆಹರಿಸಿಲ್ಲ. ಆದರೂ ಸಾವು ಯಾರಿಗೂ ತಪ್ಪಿದ್ದಲ್ಲ. ಅದು ಎಂದಾದರೂ ಒಂದು ದಿನ ನಮ್ಮ ಬಳಿ ಬಂದೇ ಬರುತ್ತದೆ. ನಾವು ಸಿದ್ಧವಾಗಿದ್ದರೂ ಅದು ನಮ್ಮನ್ನು ಒಯ್ದೇ ಒಯ್ಯುತ್ತದೆ. ಬೇಡ ವೆಂದರೂ ಅದು ನಮ್ಮನ್ನು ಬಿಡುವುದಿಲ್ಲ. ಆ ಸಾವನ್ನು ಸಂತೋಷ

ದಿಂದ ಅಪ್ಪಿಕೊಳ್ಳುವುದು ಎಲ್ಲರಿಗೂ ಸಾಧ್ಯವಿಲ್ಲ. ಅದರಿಂದ ಆಗುವ ವ್ಯಥೆ ಅಷ್ಟಿಷ್ಟೆಂದು ಹೇಳತೀರದು. ಮರಣಕಾಲದಲ್ಲಿ ಸಾಮಾನ್ಯರಿಗೆ ಇಷ್ಟು ಯಾತನೆ ಸಂಭವಿಸಿದರೂ, ತಿಳಿದಂತಹ ಯೋಗಿಗಳಿಗೆ ಅದರ ನೋವು ತೋರುವುದಿಲ್ಲ. ಆದುದರಿಂದಲೇ ಶರಣರ ಮಹತ್ವ ಮರಣ ದಲ್ಲಿ ತಿಳಿಯುವುದೆಂದು ವಿಶ್ರುತವಾಗಿದೆ. ಮರಣವೆಂಬುದು ಭೀತಿಯ ವಸ್ತುವೆಂದು ಜನರ ಮನಸ್ಸಿನ ಮೇಲೆ ಒಂದು ಭಾವನೆ ಬಂದು ಹೋಗಿದೆ. ಅದಕ್ಕೆ ಸಿದ್ಧರಾಗಲು ಪ್ರತಿಯೊಬ್ಬನು ತನ್ನ ಬಾಳುವೆ ಯನ್ನು ಮೊದಲಿನಿಂದಲೂ ಹಸನಮಾಡಿಕೊಳ್ಳಬೇಕು. ಜೀವನವನ್ನು ಹದಗೊಳಿಸಿ ಸ್ವಚ್ಛಮಾಡಿಕೊಂಡಿದ್ದರೆ, ಮರಣವನ್ನು ಸಂತೋಷದಿಂದ ಆಲಿಂಗಿಸಿಕೊಳ್ಳುವ ಧೈರ್ಯ ಮಾನವನಿಗೆ ಬರುತ್ತದೆ. ಅಹಂ ಬ್ರಹ್ಮಾಸ್ಮಿ ಎಂದು ಕುಳಿತರೆ ಸಾವಿನ ಸಮಸ್ಯೆ ಬಗೆಹರಿಯುವುದಿಲ್ಲ. ಕೆಳಗಿನವ ರನ್ನು ತುಳಿದು ನಾವು ಮುಂದೆ ಹೋಗಬೇಕೆಂಬ ಮಹತ್ವಾಕಾಂಕ್ಷೆ ಯಿಂದ ಕೆಲವು ಕಾಲ ಮಾತ್ರ ನೂಕಬಹುದು. ಹೀಗೆ ಹೇಳುವ ಮಾತು ಬಹುಕಾಲ ನಿಲ್ಲುವುದಿಲ್ಲ. ಸಾವನ್ನು ಹರ್ಷದಿಂದ ಅಪ್ಪಿಕೊಳ್ಳುವಂತಹ ಎದೆಗಾರಿಕೆಯನ್ನು ಪಡೆಯಬೇಕು. ಒಂದು ತತ್ವದ ಸಾಕ್ಷಾತ್ಕಾರಕ್ಕಾಗಿ, ಅಖಂಡಾನಂದಕ್ಕಾಗಿ, ಅನುಪಮ ಶಾಂತಿಗಾಗಿ ಹೋರಾಡುವದು ಎಲ್ಲ ರಿಗೂ ಸಂಬಂಧಿಸಿದ ವಿಚಾರ. ಇಂತಹ ಹೋರಾಟದಲ್ಲಿಯೇ, ತ್ಯಾಗ ಭೋಗ ಯೋಗ ಸಮನ್ವಯದಿಂದ ಬಾಳುತ್ತ ಯಾರು ತನ್ನ ಜೀವನ ದಲ್ಲಿ ಒಳಗೂ ಹೊರಗೂ ಶಾಂತಿ ಆನಂದ ಸೌಖ್ಯಗಳನ್ನು ಅನುಭವಿ ಸುತ್ತಿರುವನೋ ಅವನಿಗೆ ಸಾವು ಬಂದರೆ ಸಂತೋಷವಲ್ಲವೆ? ಅಂಥ ವನು ಸಾವನ್ನು ತಪ್ಪಿಸಿಕೊಳ್ಳಲು ಬಯಸುವನೆ? ಎಂದಿಗೂ ಇಲ್ಲ.

ತನ್ನ ಶರೀರದಲ್ಲಿ ಅವಯವಗಳನ್ನು ವ್ಯವಸ್ಥೆಯಿಂದ ಇಟ್ಟದ್ದರೆ ತನಗೆ ಹೇಗೆ ಒಂದು ಬಗೆಯ ಸುಖವುಂಟೋ ಹಾಗೆ ಒಂದು ಮನೆ ಯಲ್ಲಿ ಹೆಂಡತಿ ಮಕ್ಕಳು ಎಲ್ಲರನ್ನೂ ಒಂದು ವ್ಯವಸ್ಥೆಯಿಂದ ಇರಿಸಿ ದರೆ ಅದರಿಂದ ಎಲ್ಲರಿಗೂ ನೆಮ್ಮದಿಯುಂಟಾಗುತ್ತದೆ. ಹೆಂಗಸು ರಾಕ್ಷಸಿ ಯೆಂದು ಹೇಳುತ್ತ ಹೋದರೆ, ಅದರಿಂದ ತನಗೆ ಶಾಂತಿ, ಸೈರಣೆಗಳು ದೊರೆಯುತ್ತವೆಯೋ? ಎಲ್ಲರನ್ನೂ ನಿಂದಿಸುತ್ತ, ಎಲ್ಲದರಲ್ಲಿಯೂ ದೋಷ ಗಳನ್ನು ಕಂಡು ಹಿಡಿಯುತ್ತ ಹೋದರೆ, ತನಗಾಗಿ ಉಳಿಯುವ ಗುಣಾಂಶ ವಾದರೂ ಯಾವುದು? ಇನ್ನು ಕುಟುಂಬ ಜೀವನದಲ್ಲಿಯೂ, ಜನಾಂಗ

ಜೀವನದಲ್ಲಿಯೂ, ಒಂದು ವ್ಯವಸ್ಥೆಯನ್ನು ಏರ್ಪಡಿಸುವುದಾದರೂ ಹೇಗೆ? ಹೀಗೆ ಜೀವಿತ ಕಾಲದಲ್ಲಿ ತನ್ನ ಮೇಲ್ಮೆಗೆ ಏನೂ ಮಾಡಿಕೊಳ್ಳದೆ. ಏನನ್ನೂ ಸಾಧಿಸಿಕೊಳ್ಳದೆ, ವಾಗದ್ವೈತದಲ್ಲಿ ಕುಳಿತವನು ಮುಕ್ತನಾಗುವುದಾದರೂ ಹೇಗೆ? ಹಿಂದೆ ಎಷ್ಟೋ ಜನ್ಮಗಳಲ್ಲಿ ಹುಟ್ಟಿ, ನರಕ ಯಾತನೆಗಳನ್ನು ಅನುಭವಿಸಿದಂತೆ ಮುಂದೆಯೂ ಅನೇಕ 'ಬಾರದ ಭವಂಗಳಲ್ಲಿ' ಹುಟ್ಟಿ ವಿಷಕ್ರಿಮಿಯಂತೆ ಅಲ್ಪ ಸುಖಕ್ಕೆ ಹಾತೊರೆಯುವ ನಾಯಿಯಂತಾಗುವುದಲ್ಲ, ಅವನ ಬಾಳು! ಇಂತಹ ವಿಷಾದಕ್ಕೆ ಅವಕಾಶ ಕೊಡದೆ, ಮಾನವನು ತನ್ನ ಬಾಳನ್ನು ನಿರ್ಮಲ ಮಾಡಿಕೊಂಡು, ಸಾಯುವ ಮುಂದೆ ನಗುವಂತಾಗಬಾರದೆ? ಅಳುತ್ತಲೂ ಸಾಯಬೇಕು; ನಗುತ್ತಲೂ ಸಾಯಬೇಕು. ಸಾವು ನಮ್ಮ ಹಕ್ಕು, ಎಷ್ಟು ಕಾಲ ಬದುಕಿದರೂ ಮರಣ ನಮ್ಮನ್ನು ಬಿಡುವುದಿಲ್ಲ. ಎಂತಹ ಚಕ್ರವರ್ತಿಯಾದರೂ ಒಂದು ದಿನ ಮೃತ್ಯುಪಾಶಕ್ಕೆ ಸಿಕ್ಕಲೇಬೇಕು. ಕಾಲಚಕ್ರದಿಂದ ಪಾರಾಗಲು ಯಾರಿಂದಲೂ ಸಾಧ್ಯವಿಲ್ಲ. ಮರಣದ ಮುಂದೆ ನಮ್ಮ ಹೊಣೆಗಾರಿಕೆ ಏನೂ ನಡೆಯುವುದಿಲ್ಲ. ಇಂದ್ರಿಯಗಳನ್ನು ನಿಂದಿಸಿದಂತೆ ಮರಣವನ್ನು ನಿಂದಿಸಿದರೆ, ಅದು ನಮಗೆ ಕನಿಕರವನ್ನು ತೋರಿಸುತ್ತದೆಯೆ? ಎಂದಿಗೂ ಇಲ್ಲ. ಪ್ರಪಂಚದ ಆಶ್ರಯಕ್ಕೆ ಬಂದುನಿಂತು ಬಡಿದಾಡುತ್ತ ಇರುವಾಗ್ಗೆ ನಾವು ಜ್ಞಾನಿಗಳೆಂದು ಅಹಂಕಾರಪಡುತ್ತ, ಕೆಳಗಿನವರು ಆತ್ಮಜ್ಞಾನಕ್ಕೆ ಅನರ್ಹರೆಂದು ಅವರನ್ನು ಹಿಂದಕ್ಕೆ ,ಒತ್ತಿದರೆ ನಮಗೆ ಬರುವ ಪುಣ್ಯವಾದರೂ ಏನು? ಪುರುಷಾರ್ಥವಾದರೂ ಯಾವುದು? ಈ ಹೊಣೆಗಾರಿಕೆಯನ್ನು ಬಿಟ್ಟು, ನಿಶ್ಚಲರಾಗಿ ಹೊರಗಿನ ಮತ್ತು ಒಳಗಿನ ಜೀವನವನ್ನು ಹೊಂದಿಸಿಕೊಂಡು ಬಾಳುವುದನ್ನು ಕಲಿಯಬಾರದೆ?

ಸೃಷ್ಟಿಯ ಕಾರ್ಯದಂತೆ ಪ್ರಳಯವೂ ಆಗಲಿಕ್ಕೇ ಬೇಕು. ನಾವು ಹುಟ್ಟಿಬಂದಂತೆ ಸಾಯಲೂ ಬೇಕು. ಇದಕ್ಕೆ ಏತಕ್ಕೆ ಚಿಂತಿಸಬೇಕು? ನಾವು ಹುಟ್ಟಿರುವುದು ಒಳ್ಳೆಯದಕ್ಕೆಂದು ಭಾವಿಸುತ್ತೇವೆ. ಹಾಗೆಯೇ ಸಾಯುವುದು ಒಳ್ಳೆಯದಕ್ಕೆಂದು ಭಾವಿಸಬೇಡವೆ? ಚೆನ್ನಾಗಿ ಬಾಳುತ್ತ, ಚೆನ್ನಾಗಿ ಸತ್ತರೆ ಪುನಃ ತಾಯಿಯ ಗರ್ಭಕ್ಕೆ ಬಂದು ಯಾತನೆಯನ್ನನುಭವಿಸುವ ದುರ್ಯೋಗವೇ ಇರುವುದಿಲ್ಲ. ಜೀವನು ನಿರಾಕಾರವಾದ ಪರಬ್ರಹ್ಮನಲ್ಲಿ ಬಯಲಾಗುವ ಸುಯೋಗವನ್ನು ಮರಣವು ದೊರಕಿಸು

ವಾಗ ಇದಕ್ಕೇತಕ್ಕೆ ವ್ಯಸನಪಡಬೇಕು? ಬೇರೆ ಜನ್ಮದಲ್ಲಿ ಪಡೆಯಲಿ ಕ್ಕಾಗದ ಉತ್ತಮವಾದ ಆದರ್ಶವನ್ನು ಸಾಧಿಸುವುದಕ್ಕಾಗಿಯೇ ಈ ಮಾನವ ಜನ್ಮವನ್ನು ಪಡೆದಿದ್ದೇವೆ. ಇದರಲ್ಲಿ ಹೊಂದಬೇಕಾದ ಫಲವನ್ನು ಹೊಂದಿ, ನಗುತ್ತ ಹೊರಡಲಿಕ್ಕೂ ಸಿದ್ಧವಾಗಿರಬೇಡವೆ? ಹುಟ್ಟಿದ್ದು ಸಾರ್ಥಕ ವಾದ ಮೇಲೆ, ಸಾಧಿಸುವ ಕೆಲಸವಾದರೂ ಏನಿರುತ್ತೆ? ಆಗ ಹೊರ ಡುವುದನ್ನು ಎದುರುನೋಡುತ್ತಿರಬೇಡವೆ? ಯಾರು ಜೀವನವನ್ನು ದುರುಪಯೋಗ ಪಡಿಸಿಕೊಳ್ಳುತ್ತಾರೋ, ಹುಟ್ಟಿದ ಮೇಲೆ ಏನನ್ನು ಪಡೆ ಯಬೇಕೋ ಅದನ್ನು ಪಡೆಯದೆ ವ್ಯರ್ಥವಾಗಿ ಕಾಲಕಳೆಯುವರೋ; ಅಂತಹ ಹೇಡಿಗಳೂ, ದುರಹಂಕಾರಿಗಳೂ ಸಾವಿಗೆ ಗುಲಾಮರಾಗಿ ನರಳಬೇಕಾಗುವುದು. 'ಇಲ್ಲಿ ಹುಟ್ಟಲು ಒಂದು ಘನವಾದ ಉದ್ದೇಶ ವಿದೆ; ಅದನ್ನು ಪಡೆದುಕೋ; ನೀನು ಪಡೆದು, ಇತರರಿಗೆ ಅದನ್ನು ಸಾಧಿಸಲು ಸಹಾಯ ಮಾಡು. ಇದಕ್ಕಾಗಿಯೇ ನಿನಗೆ ಈ ಜನ್ಮ ದೊರೆ ತಿರುವುದು. ಈ ರೀತಿಯ ನಿಸ್ವಾರ್ಥ ಜೀವನದಿಂದ ಸಂತೋಷವಾಗಿ, ಇರುವಾಗ ಮರಣಬಂದರೆ, ಅದನ್ನು ನಗುಮೊಗದಿಂದ ಅಪ್ಪಿಕೋ. ಇದಕ್ಕೇತಕ್ಕೆ ಯೋಚನೆ ಮಾಡಬೇಕು?' ಎಂಬ ಮಹಾತ್ಮರ ಉಪದೇ ಶವಾಕ್ಯಗಳು ನಮ್ಮ ಜೀವನದ ಉತ್ತಮ ಸ್ಥಿತಿಯ ಸಾಧನೆಗೆ ಎಷ್ಟು ಸಹಾಯಕಗಳಾಗಿವೆ! ವಸ್ತುಸ್ಥಿತಿ ಹೀಗಿರುವಲ್ಲಿ, ಸಾವು ಅಂತಹದು ಇಂತಹದು ಎಂದು ಏಕೆ ವರ್ಣಿಸಬೇಕು? ಯಾರು ನಿರಹಂಕಾರವೃತ್ತಿ ಯಿಂದ ಉತ್ತಮ ರೀತಿಯಲ್ಲಿ ಬಾಳಲಿಕ್ಕೆ ಕಲಿತಿರುವರೋ, ಅವರು ನಗುತ್ತ ಸತ್ತರೆ, ಮುಕ್ತರಾದರೆಂದು ಹೇಳಲಿಕ್ಕೆ ಏನು ಅನುಮಾನ? ಯಾರಿಗೆ ಭಾವದಲ್ಲಿ ವೈರಾಗ್ಯ ಹುಟ್ಟಿದೆಯೋ ಅಂತವರು ಭೋಗೋಪಭೋಗ ಗಳ ಮಧ್ಯದಲ್ಲಿ ಸೇರಿದ್ದರೂ, ಶರೀರದ ವ್ಯಾಮೋಹವಿಲ್ಲದವರಾಗಿ, ಇಂತಹ ಉತ್ಕರ್ಷಾವಸ್ಥೆಯನ್ನು ಪಡೆದು ಧನ್ಯರಾಗುವರೆಂಬಲ್ಲಿ ಸಂದೇ ಹವೇನು? ಚಕ್ರವರ್ತಿಯಾಗಲೀ ಭಿಕ್ಷುವಾಗಲಿ ಯಾರನ್ನೂ ನಾವು ಉಳಿಸಿಕೊಳ್ಳುವಂತಿಲ್ಲ. ಎಂತಹ ಗೋಪ್ಯ ಸ್ಥಳದಲ್ಲಿ ಅವರನ್ನು ಬಚ್ಚಿ ಟ್ಟರೂ ಅವರಿಗೆ ಸಾವು ತಪ್ಪದು. ಇದನ್ನು ಅರಿತು, ಧೀರರೂ ಪವಿ ತ್ರರೂ ಆಗಿ ಬಾಳುತ್ತ, ನಮಗಾಗಿ ಕಾದಿರುವ ನಿತ್ಯ ಸುಖದೆಡೆಗೆ ಕರೆ ದೊಯ್ಯುವ ಸಾವಿನ ಬರವನ್ನು ನಿರೀಕ್ಷಿಸುವಂತಹ ಈ ಸುಯೋಗ ಎಲ್ಲ ರಿಗೂ ಲಭಿಸಿತೆಂದು ಯಾರು ತಾನೆ ಅಪೇಕ್ಷಿಸುವುದಿಲ್ಲ? ಇದನ್ನು ನಮ್ಮ ದೃಢತೆಯ ಕಾಲದಲ್ಲಿಯೇ ಸಂಪಾದಿಸಿಕೊಳ್ಳಬೇಕು.

ನಮ್ಮ ಜೀವನವೇ ಒಂದು ತತ್ತ್ವ. ಇದರಲ್ಲಿ ಯಾವುದೂ ಬೇಕಿಲ್ಲದ ಭಾಗವಿಲ್ಲ. ಪ್ರತಿಯೊಂದೂ ಒಳ್ಳೆಯದಕ್ಕೂ ಬರುತ್ತದೆ; ಕೆಟ್ಟದಕ್ಕೂ ಬರುತ್ತದೆ. ಯಾವುದು ಕೆಟ್ಟದೆಂದು ನಮಗೆ ತೋರುತ್ತದೆಯೋ, ಅದರೊಳಗೆಯೇ ನವಚೈತನ್ಯವು ಹಾಸುಹೊಕ್ಕಾಗಿ ಸೇರಿಕೊಂಡಿದೆ. ಕಟ್ಟಿಗೆಯಲ್ಲಿ ಬೆಂಕಿ ಹೇಗೆ ಸುಡದ ಹಾಗೆ ಸೇರಿಕೊಂಡಿದೆಯೋ, ಹಾಲಿನಲ್ಲಿ ತುಪ್ಪ ವಾಸನೆಯಿಲ್ಲದೆ ಹೇಗೆ ಸೇರಿದೆಯೋ, ಬೀಜದೊಳಗೆ ವೃಕ್ಷ ಹೇಗೆ ಅಂತರ್ಭಾವವಾಗಿದೆಯೋ, ಕಬ್ಬಿನೊಳಗೆ ಬೆಲ್ಲ ಹೇಗೆ ಸೇರಿಕೊಂಡಿದೆಯೋ, ಹಾಗೆ ನಮ್ಮ ಶರೀರದಲ್ಲಿ ನಿಗೂಢವಾಗಿ ಇರುವ ಪರಮಾತ್ಮನನ್ನು ' ಭಾವಿಸಿ, ತಿಳಿದು ಮಥಿಸಿ, ಪ್ರಯೋಗಾಂತರದಿಂ ಪ್ರಸನ್ನತೆಯಂ ಮಾಡಿಕೊಂಡು'' ತದನುಭಾವಿಯಾಗಿ ಇರುವುದೇ ಪರಮ ಕಾರ್ಯವು. ಹೀಗೆ ತನ್ನ ಜೀವನವನ್ನು ಉತ್ತಮಗೊಳಿಸಿಕೊಳ್ಳುವುದೇ ಸಂಸಾರವೆನಿಸುವುದು. ಕರಣಾದಿಗಳನ್ನು ಸನ್ಮಾರ್ಗದಲ್ಲಿ ಉಪಯೋಗಿಸಿದರೆ ಅವುಗಳೇ ನಮ್ಮ ಉತ್ತಮವಾದ ಪ್ರಗತಿಗೆ ಸಾಧನವಾಗುವುವು. ಆಗ ಪ್ರಪಂಚವೇ ಸಾರವುಳ್ಳದ್ದಾಗುವುದು. ''ಸಮ್ಯಕ್ ಸಾರೋ ವಿದ್ಯತೆ ಯಸ್ಮಿನ್ ಸಹ ಸಂಸಾರ" ಹೀಗೆ ಸುವ್ಯವಸ್ಥಿತವಾದ ಸಂಸಾರದಲ್ಲಿಯೇ ಮಾನವನು ಮುಕ್ತಿ ಸುಖವನ್ನು ಅನುಭವಿಸುವನು. ಅವ್ಯವಸ್ಥಿತವಾದ ಸಂಸಾರದಲ್ಲಿಯೇ ನರಕಯಾತನೆಯನ್ನನುಭವಿಸುವನು. ಅರಿದರೆ ಜ್ಞಾನಿಯಾಗಿ ಮುಕ್ತನಾಗುವನು. ಅರಿಯದಿದ್ದೊಡೆ ಮಲಾವೃತನಾಗಿ ವಿಕಾರಿಯಾಗುವನು. ಚಂಚಲವಾದ ಮನಸ್ಸನ್ನು ಸರಿಯಾದ ಕಡೆ ನಿಯೋಗಿಸಿದರೆ ಮುಕ್ತನಾಗುವನು. ಅದರಿಚ್ಛೆಯಂತೆ ತಾನು ಹೋದರೆ ತಾನೇ ಹಾಳಾಗುವನು. ಆದರ ಮೇಲೆ ಅಧಿಕಾರ ನಡೆಸಲು ಶಕ್ತಿಯನ್ನು ಪಡೆದರೆ ಧನ್ಯನಾಗುವನು. ಅದಕ್ಕೆ ತಾನು ಗುಲಾಮನಾಗುವ ಬದಲು ತನಗೇ ಅದು ದಾಸವಾಗುವುದು.

ಹೀಗೆ ಈ ಕಾಯದಲ್ಲಿಯೇ ಬ್ರಹ್ಮಾನಂದ ಸುಖವನ್ನನುಭವಿಸುವ ಶಕ್ತಿಯನ್ನು ಮನುಷ್ಯನು ಪಡೆಯಬೇಕು. ಇದೇ ನಮ್ಮ ಧ್ಯೇಯ. ಇದಕ್ಕಾಗಿ ಪ್ರತ್ಯೇಕ ಸಾಧನೆಯ ಆವಶ್ಯಕತೆಯೂ ಇಲ್ಲ. ನಾವು ಹೋಗುವ ದಾರಿಯಲ್ಲಿಯೇ, ನಾವು ಜೀವಿಸುವ ಕ್ರಮದಲ್ಲಿಯೇ ನಿಜತತ್ತ್ವವನ್ನು ತಿಳಿದು ಒಕ್ಕಲಿಗನು ಹೊಲವನ್ನು ಹಸನ ಮಾಡುವಂತೆ ನಮ್ಮ ಕಾಯವನ್ನು ಶುದ್ಧ ಮಾಡಿಕೊಂಡು ಪವಿತ್ರಭಾವನೆಯಿಂದ ಜೀವನ

ವನ್ನು ಸಾಗಿಸಬೇಕು. ಇದೇ ಯೋಗವೆನಿಸುವುದು. "ಸಮತ್ವಂ ಯೋಗ ಮುಚ್ಯತೆ" ಭೂಮಿಯಲ್ಲಿ ಬೀಜ ಬಿತ್ತುವಾಗ, ಕಸ ಸ್ವಭಾವವಾಗಿ ಬರುತ್ತದೆ ಕಸವಿದೆಯೆಂದು ಫಲವನ್ನು ಬಿಸಾಡುತ್ತೇವೆಯೆ? ಎಂದಿಗೂ ಇಲ್ಲ. ಹಾಗೆ ಆತ್ಮನ ವಿಶಾಲತೆಯನ್ನು ಉತ್ಕರ್ಷತೆಯನ್ನು ಪಡೆಯುತ್ತ ಹೋದ ಹಾಗೆಲ್ಲ ದೋಷಗಳೇ ಗುಣಗಳಾಗಿ ಮಾರ್ಪಡುತ್ತವೆ. ಕೆಟ್ಟದ್ದೇ ಒಳ್ಳೆಯದಾಗುತ್ತದೆ. ನೀಚವಾದ ವಸ್ತುವೇ ಉಚ್ಚವಾಗುತ್ತದೆ. ಇಂದ್ರಿಯಗಳೇ ಸತ್ಪ್ರಜೆಗಳಾಗುತ್ತಾರೆ ಇಂತಹ ಆತ್ಮರಾಜ್ಯವನ್ನು ಪಡೆದುಕೊಂಡವನೇ ಧನ್ಯನು. ಶಾಂತಿ ಸಮೃದ್ಧಿಗಳಿಂದ ಕೂಡಿದ ಇಂತಹ ರಾಜ್ಯದಲ್ಲಿ ಬಾಳುವುದೆಂದರೆ ಎಷ್ಟು ಆನಂದ! ಇತರರನ್ನು ತನ್ನಂತೆ ಪ್ರೀತಿಸುವ ದೊಡ್ಡತನ ಎಷ್ಟು ಹೆಚ್ಚುವುದು! ಮಾನವನ ದೊಡ್ಡಸ್ತಿಕೆ ಇರುವುದು ಇಂತಹ ಶುದ್ಧವಾದ ಅಂತರಂಗ ಜೀವನದಲ್ಲಿ. ಹೊರಗಿನ ಆಕಾರದಲ್ಲಲ್ಲ. ಅವನ ಮಹತ್ವ ಸತ್ವದಲ್ಲಿ ಇರುವುದೇ ಹೊರತು ಬಾಹ್ಯೋಪಕರಣಗಳಲ್ಲಿಲ್ಲ. ಉಡಿಗೆ-ತೊಡಿಗೆಗಳಲ್ಲಿಲ್ಲ. ಹೊರಗಿನ ಸೌಂದರ್ಯದಲ್ಲಿಲ್ಲ. ಇಂತಹ ಒಳಸೌಂದರ್ಯವನ್ನು ನೋಡುವ ಮತ್ತು ಪಡೆಯುವ ಶಕ್ತಿಯನ್ನು ಎಲ್ಲರೂ ಸಂಪಾದಿಸಿಕೊಳ್ಳಬೇಕು. ಒಳಸೌಂದರ್ಯವನ್ನು ನೋಡಲು ದುರ್ಬಲರಿಂದಾಗುವುದಿಲ್ಲ. ಹೊರಗಣ್ಣಿಗೆ ಕಾಣದೆ ಇರುವ ಒಂದು ಮಹಾನುಭಾವತೆ ದೊಡ್ಡವರಲ್ಲಿ ಇದೆ. ಅದು ಎಲ್ಲಿಂದಲೋ ಬಂದು ಅವರಲ್ಲಿ ಸೇರಿಕೊಳ್ಳುವುದಿಲ್ಲ. ಅವರೂ ನಮ್ಮ ಹಾಗೆಯೇ ದುಡಿದು ಅದನ್ನು ಸಂಪಾದಿಸಿಕೊಳ್ಳುತ್ತಾರೆ. ಅದನ್ನು ಎಲ್ಲರೂ ಪಡೆದುಕೊಂಡರೆ, ಒಬ್ಬರಿಗೊಬ್ಬರಿಗೆ ಪ್ರೀತಿ-ಅನುರಾಗ-ಸದ್ಭಾವನೆಗಳು ಹುಟ್ಟುವುವು. ದುಷ್ಟವಾದ ಅಸುರೀ ಭಾವನೆಗಳು ಮಾಯವಾಗುವುವು. ಮಾನವನ ಅಂತಸ್ತು ದೇವತ್ವಕ್ಕೆ ಏರುವುದು. ಆಗ ಭೂಮಿಯೇ ಸ್ವರ್ಗವಾಗುವುದರಲ್ಲಿ ಸಂದೇಹವೇನು? ಪ್ರಜೆಗಳೆಲ್ಲರೂ ಹೀಗೆ ಶುದ್ಧಜೀವಿಗಳಾದರೆ, ದೇಶದಲ್ಲಿ ಶಾಂತಿಸಮಾಧಾನಗಳು ನೆಲಿಸುವುವು. ಮಣ್ಣಿನಲ್ಲಿ ಒರಟು ಕೆಲಸ ಮಾಡುವವನ ಮೊದಲ್ಗೊಂಡು ಬುದ್ಧಿಯ ಚುರುಕಿನ ಕೆಲಸ ಮಾಡುವವನ ವರೆಗೂ ಎಲ್ಲರಿಗೂ ಈ ಪ್ರಪಂಚದಲ್ಲಿ ಸ್ಥಳವುಂಟು. ಆದರೆ ಒಬ್ಬನು ಅರ್ಹನೆಂದೂ ಮತ್ತೊಬ್ಬನು ಅನರ್ಹನೆಂದೂ ಭಾವಿಸಬಾರದು. ಎಲ್ಲರಲ್ಲಿಯೂ ಆತ್ಮವಿಕಾಸವನ್ನು ಪಡೆಯುವ ನವ ಶಕ್ತಿ ಇದೆ. ಅದನ್ನು ಪಡೆಯಲು ಒಬ್ಬನಿಗೆ ಅನುಕೂಲಗಳು ಹೆಚ್ಚು ಇರಬಹುದು. ಇನ್ನೊಬ್ಬನಿಗೆ ಕಡಿಮೆ ಇರಬಹುದು. ಅವನಿಗೂ ಇವನಿಗೂ ವ್ಯತ್ಯಾಸ

ಇಷ್ಟೆ? ಈ ಕಾರಣದಿಂದಲೇ ಯಾರನ್ನೂ ಅನರ್ಹರೆಂದು ಜರಿಯಲಾಗುವುದಿಲ್ಲ. ಒಳ್ಳೆಯ ಸನ್ನಿವೇಶವನ್ನು ಕಲ್ಪಿಸಿದರೆ, ಎಲ್ಲರೂ ಯೋಗ್ಯತೆಯನ್ನು ಪಡೆಯುವರು. ಎಲ್ಲರೂ ಹುಟ್ಟಿ ಬಂದಿರುವುದು ತಾಯಿಯ ಗರ್ಭದಿಂದಲೇ. ಎಲ್ಲರೂ ಒಂದು ಘನವಾದ ಉದ್ದೇಶವನ್ನು ಸಾಧಿಸಲೋಸುಗವೇ ಇಲ್ಲಿಗೆ ಬಂದಿರುವುದು. ಅದನ್ನು ಸಾಧಿಸಿಕೊಂಡು ಎಲ್ಲರೂ ದೇಹವನ್ನು ಬಿಟ್ಟು ಹೋಗಲೇಬೇಕು. ಹೀಗಿರುವಲ್ಲಿ ಒಬ್ಬರಿಗೊಬ್ಬರಿಗೆ ದ್ವೇಷಾಸೂಯೆಗಳು, ಕ್ರೋಧಾವೇಶಗಳೇಕೆ? ತಾನು ಮಾಡಬೇಕಾದ ಕೆಲಸವನ್ನು ತಾನು ಮಾಡದೆ, ಅದನ್ನು ಮರೆತು ತನ್ನ ತಪ್ಪನ್ನು ಇತರರ ಮೇಲೆ ಹೊರಿಸುವುದು ಯಾವ ನ್ಯಾಯ? ಎಳೆಯಲಾರದ ಎತ್ತು ಮೇಳೆಯ ಮೇಲೆ ಬೀಳುವ ಹಾಗೆ, ತನ್ನ ಪ್ರಗತಿ ಸಾಧನೆಯನ್ನು ಮರೆತು, ಕುಹಕಗಳಲ್ಲಿ ಕಾಲಕಳೆದರೆ, ಅವನಿಗೆ ಸದ್ಗತಿಯುಂಟೆ? ಎಂದಿಗೂ ಇಲ್ಲ. ಎಲ್ಲರೂ ವಿಷಯಗಳಲ್ಲಿ ಸಹಕರಿಸಿ ಬಾಳುತ್ತಿರುವಾಗ, ಇವರಲ್ಲಿ ಉಚ್ಚನೀಚಭಾವಗಳೆಲ್ಲಿ ಬಂದೀತು? ಹೆಣ್ಣು ಹೊನ್ನುಗಳು ಮಾಯೆಯೆಂದೂ ಅವುಗಳೇ ನಮ್ಮ ಅವನತಿಗೆ ಮೂಲವೆಂದೂ ಹೇಳುವವರು ಯಾರಾದರೂ ಅವುಗಳನ್ನು ಬಿಟ್ಟಿರುವರೆ? ಯಾರೂ ಇಲ್ಲ. ಹಾಗೆ ಹೇಳುತ್ತ, ಅವುಗಳನ್ನು ಬಯಸುವುದು ನಮ್ಮ ತಪ್ಪಲ್ಲವೆ? ಅವುಗಳ ಮೇಲಣ ನಮ್ಮ ಆಶೆ ಮಾಯೆಯೆಂದು ತಿಳಿಯಬೇಡವೆ? ಅವುಗಳನ್ನೇ ಸನ್ಮಾರ್ಗದಲ್ಲಿ ಉಪಯೋಗಿಸಿದರೆ ಅವಕ್ಕಿಂತ ಹಿತಚಿಂತರು ನಮಗೆ ಮತ್ತೆ ಯಾರಿರುವರು? ಹೆಣ್ಣು ಕೆಟ್ಟದ್ದು, ಹೊನ್ನು ಕೆಟ್ಟದ್ದು ಎಂಬ ಅಪವಾದವನ್ನು ಅವುಗಳ ಮೇಲೆ ನಾವು ಹೊರಿಸಿದರೆ, ನಾವು ಸುಖವಾಗಿ ಬದುಕಬಹುದೆ? ಹೆಣ್ಣಿನಲ್ಲಿ ಹುಟ್ಟಿ ಬೆಳೆದು ಹೆಣ್ಣು ಕೆಟ್ಟದ್ದು ಹೇಗೆ? ಹೊನ್ನನ್ನಾದರೂ ಬೇಡವೆನ್ನುವವರು ಯಾರು? ಇವುಗಳಿಗೆಲ್ಲ ನಾವು ಸೋತು ಹೋಗಿ ಅವನ್ನೇ ಕೆಟ್ಟವೆಂದು ಹೇಳುವ ಧಾರ್ಷ್ಟ್ಯ ಎಷ್ಟು ನಿಂದ್ಯವೋ ಯೋಚಿಸಿ ನೋಡಿ. ಇವೆಲ್ಲವನ್ನೂ ಜಾಣತನದಿಂದ ವ್ಯವಸ್ಥಿತ ಮಾರ್ಗದಲ್ಲಿ ಉಪಯೋಗಿಸುತ್ತ, ತನ್ನನ್ನು ಉದ್ಧಾರ ಮಾಡಿಕೊಂಡು, ಸಾಮಾನ್ಯ ಜೀವಿಗಳ ಉದ್ಧಾರಕ್ಕಾಗಿ ತ್ಯಾಗ ಮಾಡುವುದನ್ನು ಕಲಿತರೆ ಅವರೇ ಮಹಾಪುರುಷರು. ಎಲ್ಲರೂ ಹೀಗೆ ಆಗಲೆಂದು ನಮ್ಮ ಬಯಕೆ.

---

# ಶಿವಾನುಭವ.

(ಮೈಸೂರಿನಲ್ಲಿರುವ ಡಿವೈನ್ ಲೈಫ್ ಸೊಸೈಟಿಯ ಪ್ರೆಸಿಡೆಂಟರಾದ, ಶ್ರೀಮಾನ್ ಎಂ. ಎಲ್. ನಾಗಣ್ಣನವರು, ಮಾಡಿದ ಭಾಷಣ.)

---

"ಶಿವಾನುಭವ" ಎಂಬ ಶಬ್ದಕ್ಕೆ "ಶಿವನ ಅನುಭವ" ಮತ್ತು "ಶಿವನನ್ನು ಅನುಭವಿಸುವ" ಎಂಬುದಾಗಿ ಎರಡು ಅರ್ಥಗಳಾಗುತ್ತವೆ. "ಆನಂದಂ ಬ್ರಹ್ಮೇತಿ ವ್ಯಜಾನಾತ್" ಎಂಬ ಶ್ರುತಿವಾಕ್ಯದಂತೆ ಶಿವನು ಆನಂದಸ್ವರೂಪನಾದುದರಿಂದ ಅವನು ಅನುಭವಿಸುವದು, ಮತ್ತು ಅವನನ್ನು ಅನುಭವಿಸತಕ್ಕವರು ಅನುಭವಿಸುವುದು ಆನಂದವೇ! ಈ ಶಿವಾನಂದವನ್ನು ಅನುಭವಿಸುವವರು ಶಿವಾನುಭಾವಿಗಳು. ಶಿವಾನಂದವನ್ನು ಇಷ್ಟೇ ಎಂಬುದಾಗಿ ನಿರ್ಣಯಿಸಿ ತಿಳಿಯಬೇಕಾದರೆ ನಾವು ಮನುಷ್ಯಾನಂದದ ಸ್ವರೂಪವನ್ನು ಮೊದಲು ತಿಳಿಯಬೇಕು. ಒಬ್ಬನು ಭೂಮಂಡಲಕ್ಕೆಲ್ಲ ತಾನೇ ಚಕ್ರವರ್ತಿಯಾಗಿ ತನಗೆ ಸಮಾನವಾಗಿಯಾಗಲಿ ಅಥವಾ ತನಗಿಂತ ಹೆಚ್ಚಾಗಿಯಾಗಲಿ ಯಾರೂ ಇಲ್ಲದೆಯೂ, ಯಾವ ವಿಧವಾದ ರೋಗವೂ ಇಲ್ಲದೆ ಒಂದು ನೂರು ವರ್ಷಗಳ ವರೆಗೆ ಜೀವಿಸಿಯೂ, ಅವನು ಅಪೇಕ್ಷಿಸತಕ್ಕ ಎಲ್ಲ ವಿಷಯಗಳು ಪ್ರಾಪ್ತವಾಗಿ ಅವನಿಗೆ ಯಾವ ವಿಧವಾದ ಚಿಂತೆಯಿಲ್ಲದೆಯೂ ಮತ್ತು ಅವನ ಜೀವಿತ ಕಾಲದಲ್ಲಿ ಅವನಿಗೆ ಪ್ರೀತಿಪಾತ್ರರಾದ ಹೆಂಡತಿ, ಮಕ್ಕಳು, ಬಂಧುಗಳು ಮತ್ತು ಮಿತ್ರರ ಮರಣವನ್ನು ನೋಡಿ ದುಃಖ ಪಡದೆಯೂ ಇದ್ದರೆ ಇದಕ್ಕೆ ಮನುಷ್ಯಾನಂದವೆಂದು ಹೆಸರು. ಈ ಮನುಷ್ಯಾನಂದಕ್ಕಿಂತ ಮನುಷ್ಯಗಂಧರ್ವಾನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ದೇವಗಂಧರ್ವಾನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ಅಜಾನುದೇವತೆಗಳ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ಪಿತೃದೇವತೆಗಳ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ದೇವೇಂದ್ರನ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ದೇವಗುರು ಬೃಹಸ್ಪತ್ಯಾಚಾರ್ಯರ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ಸೃಷ್ಟಿಕರ್ತ ಬ್ರಹ್ಮನ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ವಿಷ್ಣುವಿನ ಆನಂದವು ನೂರ್ಮಡಿ ಹೆಚ್ಚಾಗಿಯೂ, ಇದಕ್ಕಿಂತ ರುದ್ರನ

ಆನಂದವು ನೂರ್ಮಡಿ ಹೆಚ್ಚಾಗಿಯೂ ಇರುತ್ತದೆ. ಈ ರುದ್ರನ ಆನಂದಕ್ಕಿಂತಲೂ ಶಿವನ ಆನಂದವು ಅಸಂಖ್ಯವಾಗಿ ಹೆಚ್ಚಾಗಿರುತ್ತದೆ.

ಈಗ ನಾವು ಎಷ್ಟರವುಟ್ಟಿಗೆ ಆನಂದಿಗಳಾಗಿದ್ದೇವೆ ಎಂಬುದನ್ನು ವಿಚಾರ ಮಾಡೋಣ! ಆನಂದ ಅಂದರೆ ಸುಖ. ಭಿಕ್ಷುಕನಿಂದ ಚಕ್ರವರ್ತಿಯ ವರೆಗೆ ಯಾರೂ ಈಗ ತಾವು ಇರುವ ಸ್ಥಿತಿಯಲ್ಲಿ ಸುಖವಾಗಿಲ್ಲ. ಆದರೆ ಮುಂದೆ ನಾವು ಸುಖವಾಗಿರುತ್ತೇವೆಂಬ ನಂಬಿಕೆಯಿಂದ ಪ್ರತಿಯೊಬ್ಬರೂ ಜೀವಿಸಿದ್ದಾರೆ. ಏತಕ್ಕೆಂದರೆ ಒಬ್ಬನು ಐಶ್ವರ್ಯವಂತನಾಗಿದ್ದು ಅವನು ಬೇಕಾದುದನ್ನು ತಿನ್ನುವುದಕ್ಕೆ ಅನುಕೂಲವಿದ್ದರೂ ಅವನಿಗೆ ತಿಂದದ್ದು ಅರಗುವುದೇ ಇಲ್ಲ. ಇನ್ನೊಬ್ಬನಿಗೆ ಕಲ್ಲನ್ನು ತಿಂದು ಅರಗಿಸುವ ಶಕ್ತಿಯು ಇರುತ್ತದೆ; ಆದರೆ ತಿನ್ನುವುದಕ್ಕೆ ಅನ್ನವೇ ಇರುವುದಿಲ್ಲ. ಒಬ್ಬನು ಐಶ್ವರ್ಯವಂತನಾಗಿದ್ದರೆ ಅವನಿಗೆ ಮಕ್ಕಳೇ ಇರುವುದಿಲ್ಲ. ಒಬ್ಬನು ತಿನ್ನುವುದಕ್ಕಿಲ್ಲದೆ ಬಡವನಾಗಿದ್ದರೆ ಅವನಿಗೆ ಡಜನ್ ಗಟ್ಟಲೆ ಮಕ್ಕಳಿದ್ದು ಅವುಗಳನ್ನು ಸಾಕುವುದೇ ಅವನಿಗೆ ಕಷ್ಟವಾಗಿರುತ್ತದೆ. ಗಂಡನು ಆರೋಗ್ಯವಾಗಿದ್ದರೆ ಹೆಂಡತಿಯು ರೋಗಿಯಾಗಿರುತ್ತಾಳೆ. ಹೆಂಡತಿಯು ಆರೋಗ್ಯವಾಗಿದ್ದರೆ ಗಂಡನು ರೋಗಿಯಾಗಿರುತ್ತಾನೆ. ಇಬ್ಬರೂ ಆರೋಗ್ಯವಾಗಿದ್ದರೆ ತಿನ್ನುವುದಕ್ಕೆ ಇರುವುದಿಲ್ಲ ಅಥವಾ ಇನ್ನಾವುದಾದರೂ ದುಃಖವಿರುತ್ತದೆ. ಅಂದರೆ ಈ ಪ್ರಪಂಚದಲ್ಲಿ ಪ್ರತಿಯೊಬ್ಬರೂ ನಿಜವಾಗಿಯೂ ಸುಖವಾಗಿಲ್ಲವೆ ದುಃಖದಲ್ಲಿದ್ದರೂ ತಾವು ದುಃಖದಲ್ಲಿದ್ದೇವೆಂಬುದಾಗಿ ತಿಳಿಯದೆ ಅದಕ್ಕೆ ಬದಲಾಗಿ ದುಃಖವನ್ನೇ ಸುಖವನ್ನಾಗಿ ತಿಳಿದುಕೊಂಡಿರುತ್ತಾರೆ. ಏತಕ್ಕೆಂದರೆ ಪ್ರತಿಯೊಬ್ಬನೂ ಸಂಸಾರವೆಂಬ ದುಃಖಚಕ್ರದಲ್ಲಿ ಸಿಕ್ಕಿಕೊಂಡಿರುತ್ತಾನೆ. ಸಂಸಾರವೆಂದರೆ ರೂಢಿಯಲ್ಲಿರುವಂತೆ ಹೆಂಡತಿ, ಮಕ್ಕಳು ಅಲ್ಲ. "ಸಂಸರತೀತಿ ಸಂಸಾರಃ" ಅಂದರೆ ಹುಟ್ಟುವುದು ಮತ್ತು ಸಾಯುವುದು ಎಂಬ ಚಕ್ರದಲ್ಲಿ ಸುತ್ತುವುದು. ಪ್ರತಿಯೊಬ್ಬನಿಗೂ ಹುಟ್ಟುವಾಗ ದುಃಖ ಮತ್ತು ಸಾಯುವಾಗ ದುಃಖವುಂಟಾಗುತ್ತದೆ. ಸಾಮಾನ್ಯವಾಗಿ ನಾವು ಹುಡುಗರನ್ನು ಹೆದರಿಸುವಾಗ "ನಿನಗೆ ಹುಟ್ಟಿದ ದಿವಸವನ್ನು ಕಾಣಿಸುತ್ತೇನೆ" ಎಂದು ಹೇಳುವುದು ರೂಢಿಯುಂಟು. ಇದಕ್ಕೆ ಅರ್ಥವೇನೆಂದರೆ ಹುಟ್ಟಿದ ದಿವಸ ತಾಯಿಯ ಗರ್ಭದಿಂದ ಹೊರಕ್ಕೆ ಬರುವಾಗ ಮಗುವಿಗೆ ನಿರತಿಶಯವಾದ ದುಃಖವುಂಟಾಗುತ್ತದೆ. ಇಂಥ ದುಃಖಕ್ಕೆ ಸಮಾನವಾದ ದುಃಖ

ವನ್ನುಂಟು ಮಾಡತಕ್ಕ ಶಿಕ್ಷೆಯನ್ನು ಮಾಡುತ್ತೇನೆಂದು ಭಾವವು. ಹುಟ್ಟು ವಾಗ ಉಂಟಾದ ದುಃಖಕ್ಕಿಂತಲೂ ಹೆಚ್ಚಾದ ದುಃಖವಿಲ್ಲ. ಇದರಂತೆಯೇ ಮರಣವಾಗುವ ಕಾಲದಲ್ಲಿಯೂ ನಿರತಿಶಯವಾದ ದುಃಖವುಂಟಾಗುತ್ತದೆ. ಏತಕ್ಕೆಂದರೆ ಯಾರಿಗಾದರೂ ದೇಹದಲ್ಲಿ ತುಂಬ ಸಂಕಟವಾದರೆ "ನನಗೆ ಮರಣ ಸಂಕಟವು ಬಂದಿತ್ತು" ಎಂದು ಹೇಳುವುದು ರೂಢಿಯಲ್ಲುಂಟು. ಆದ್ದರಿಂದ ಎಲ್ಲ ಸಂಕಟಗಳಿಗಿಂತಲೂ ಮರಣ ಸಂಕಟವು ದೊಡ್ಡದು ಎಂಬುದು ಸಿದ್ಧವಾಗುವುದು. ಆದ್ದರಿಂದ ನಮ್ಮಗಳಿಗೆ ಜನನ ಮತ್ತು ಮರಣ ಎಂಬವುಗಳು ದೊಡ್ಡ ದುಃಖಗಳಾಗಿರುತ್ತವೆ. ಈ ದುಃಖಗಳನ್ನು ಪ್ರತಿಜನ್ಮದಲ್ಲಿಯೂ ನಾವುಗಳು ಅನುಭವಿಸಬೇಕಾಗಿರುತ್ತದೆ. ಮೇಲ್ಕಂಡ ಜನನ ಮರಣ ದುಃಖಗಳಲ್ಲದೆ ನಾವು ಹುಟ್ಟಿದಂದಿನಿಂದ ಮರಣವಾಗುವ ವರೆಗೆ ಅಧ್ಯಾತ್ಮಿಕ, ಆದಿಭೌತಿಕ ಮತ್ತು ಆಧಿದೈವಿಕ ಎಂಬ ಮೂರು ವಿಧವಾದ ದುಃಖಗಳನ್ನು ಅನುಭವಿಸುತ್ತಿರುತ್ತೇವೆ. ಹೇಗೆಂದರೆ ಪ್ರತಿಯೊಬ್ಬನಿಗೂ ಯಾವಾಗಲೂ ಒಳಗೆ ಅಂದರೆ ಮನಸ್ಸಿನಲ್ಲಿ ಏನಾದರೂ ಚಿಂತೆಯು ಇರುತ್ತದೆ. ಹೊರಗೆ ಅಂದರೆ ದೇಹದಲ್ಲಿ ಏನಾದರೂ ಒಂದು ರೋಗವಿರುತ್ತದೆ. ಇವೆರಡೂ ದುಃಖವೇ! ಈ ದುಃಖಕ್ಕೆ ಅಧ್ಯಾತ್ಮಿಕ ದುಃಖವೆಂದು ಹೆಸರು. ಸೊಳ್ಳೆ, ತಿಗಣೆ, ಚೇಳು, ಹಾವು, ಹುಲಿ, ಕರಡಿ, ಕಳ್ಳರು, ದುಷ್ಟರು, ಶತ್ರುಗಳು ಇವರುಗಳಿಂದ ನಮಗೆ ಆಗಾಗ್ಗೆ ದುಃಖವುಂಟಾಗುತ್ತಿರುತ್ತದೆ. ಈ ದುಃಖಕ್ಕೆ ಆಧಿಭೌತಿಕ ದುಃಖವೆಂದು ಹೆಸರು. ಇದಲ್ಲದೆ ದೈವಿಕವಾಗಿ ಸಿಡಿಲು, ಬಿರುಗಾಳಿ, ಪ್ರವಾಹ, ಭೂಕಂಪವೇ ಮುಂತಾದವುಗಳಿಂದ ನಮಗೆ ಆಗಾಗ್ಗೆ ದುಃಖವುಂಟಾಗುತ್ತದೆ. ಈ ದುಃಖಕ್ಕೆ ಆಧಿದೈವಿಕ ದುಃಖವೆಂದು ಹೆಸರು. ಈ ರೀತಿಯಾಗಿ ಗರ್ಭದಲ್ಲಿರುವಾಗ, ಹುಟ್ಟುವಾಗ, ಹುಟ್ಟಿದಂದಿನಿಂದ ಸಾಯುವ ವರೆಗೆ ನಾವುಗಳು ದುಃಖಗಳನ್ನೇ ಬಿಡುವಿಲ್ಲದೆ ಅನುಭವಿಸುತ್ತಿರುತ್ತೇವೆ. ಹೀಗಿದ್ದರೂ ನಾವು ದುಃಖವನ್ನು ಅನುಭವಿಸುತ್ತಿದ್ದೇವೆಂಬುದಾಗಿ ತಿಳಿಯುವುದಿಲ್ಲ. ಇಷ್ಟೇ ಅಲ್ಲ. ಒಬ್ಬ ಹೆಂಗಸಿಗೆ ಮಗುವಾಗಬೇಕಾದರೆ ಅವಳು ಮೊದಲು ಗರ್ಭವನ್ನು ಧರಿಸಿದಂದಿನಿಂದ ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಮಗುವನ್ನು ಹೊತ್ತಿರಬೇಕು. ಮಗುವು ಹುಟ್ಟುವಾಗ ಸಹಿಸಲಶಕ್ಯವಾದ ಪ್ರಸವ ವೇದನೆಯನ್ನು ಅನುಭವಿಸಬೇಕು. ಅದು ಹುಟ್ಟಿದಂದಿನಿಂದ ತಾಯಿಯ ಹಾಲನ್ನು ಕುಡಿಯುವ ವರೆಗೆ ಅವಳು ತನಗೆ ಇಷ್ಟವಾದುದನ್ನು ತಿನ್ನದೆ ಬಹಳ

ಪಥ್ಯವಾಗಿರಬೇಕು. ಮಕ್ಕಳುಗಳು ರಾತ್ರಿ ಕಾಲದಲ್ಲೇ ಅಳುವದರಿಂದ ರಾತ್ರಿಯಲ್ಲಿ ನಿದ್ರೆಯಿಲ್ಲದೆ ಎಚ್ಚರವಾಗಿರಬೇಕು. ಮಗುವಿಗೆ ಕಾಯಿಲೆಯು ಪ್ರಾಪ್ತವಾದರೆ ಅದಕ್ಕೆ ಏನಾಗುವುದೋ ಎಂಬ ದುಃಖದಿಂದ ಹಗಲು ರಾತ್ರಿಯೂ ಎಚ್ಚರಿಕೆಯಾಗಿರಬೇಕು. ಹಾಲು ಕುಡಿಯುವುದನ್ನು ಬಿಟ್ಟ ನಂತರವೂ ಮಗುವಿಗೆ ಸರಿಯಾಗಿ ಬುದ್ಧಿ ಬರುವ ವರೆಗೆ ಅದಕ್ಕೆ ಅಪಾಯವಾಗದ ರೀತಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಬೇಕು. ಮಗುವು ಹೆಣ್ಣಾಗಿದ್ದು ಅದಕ್ಕೆ ವಯಸ್ಸು ಬಂದರೆ ಸರಿಯಾದ ವರನು ಸಿಕ್ಕಲಿಲ್ಲವೆಂಬ ದುಃಖ! ಅಯೋಗ್ಯನಾದ ಅಳಿಯನು ಸಿಕ್ಕಿದ ಮಗಳಿಗೆ ಕಷ್ಟ ಬಂತಲ್ಲ, ಎಂಬ ದುಃಖ! ಮಗುವು ಗಂಡಾಗಿದ್ದು ವಿದ್ಯಾವಂತನಾಗದೆ ಅಥವಾ ಸಂಪಾದನೆ ಮಾಡದವನಾಗಿ ಹೋದರೆ ದುಃಖ! ಅವನು ಒಂದು ವೇಳೆ ವಿದ್ಯಾವಂತನಾಗಿ ಸಂಪಾದನೆ ಮಾಡುತ್ತಿದ್ದು ತನ್ನ ಹೆಂಡತಿಯ ಮಾತನ್ನು ಕೇಳಿ ಬೇರೆ ಹೊರಟುಹೋದರೆ ಅದಕ್ಕಾಗಿ ಮತ್ತೂ ದುಃಖ! ಮಧ್ಯಕಾಲದಲ್ಲಿ ಮಗುವು ಗತಿಸಿದರೆ ಮಹತ್ತರವಾದ ದುಃಖ! ಈ ರೀತಿಯಾಗಿ ಮಕ್ಕಳನ್ನು ಹೆತ್ತವರೆಲ್ಲರೂ ದುಃಖಪಡುತ್ತಿರುವದನ್ನು ನೋಡಿಯೂ ಮಕ್ಕಳನ್ನು ಪಡೆಯಬೇಕೆಂದು ಇಚ್ಛಿಸುತ್ತಾರೆ. ಏತಕ್ಕೆಂದರೆ ಮಕ್ಕಳು ಹುಟ್ಟುವುದರಿಂದ ಮೇಲ್ಕಂಡಂತೆ ಅನೇಕ ದುಃಖಗಳಿದ್ದರೂ ಅಜ್ಞಾನದಿಂದ ಅದನ್ನು ತಿಳಿಯದೆ ಮಕ್ಕಳು ಹುಟ್ಟುವುದು ಸುಖವನ್ನಾಗಿ ತಿಳಿದುಕೊಂಡಿರುತ್ತಾರೆ.

ಅರ್ಥಾನಾಮರ್ಜನೇ ದುಃಖಂ ತಥೈವ ಪರಿಪಾಲನೇ ।
ನಾಶೇ ದುಃಖಂ ವ್ಯಯೇ ದುಃಖಂ ಧಿಗರ್ಥಾನ್ ಕ್ಲೇಶಕಾರಿಣಃ ॥

ದ್ರವ್ಯವನ್ನು ಸಂಪಾದನೆ ಮಾಡುವಾಗ ತನ್ನ ದೇಹ ಮತ್ತು ಮನಸ್ಸಿಗೆ ಶ್ರಮವಾಗುವುದರಿಂದ ದುಃಖ. ಆದರೆ ದ್ರವ್ಯವನ್ನು ಸಂಪಾದನೆ ಮಾಡಿದ ಮೇಲೆ ನಾವು ಸುಖವಾಗಿರಬಹುದು ಎಂಬ ದೃಷ್ಟಿಯ ಮೇಲೆ ಸಂಪಾದನೆಯನ್ನು ಮಾಡುವ ಕಾಲದಲ್ಲಿ ಆಗುವ ದುಃಖವನ್ನು ಜನಗಳು ಸಹಿಸುತ್ತಾರೆ. ಅವರ ನಿರೀಕ್ಷಣೆಗೆ ವಿರೋಧವಾಗಿ ಅವರು ದ್ರವ್ಯವನ್ನು ಸಂಪಾದನೆ ಮಾಡಿದ ನಂತರ ಅದನ್ನು ಕಾಪಾಡತಕ್ಕ ದು:ಖಕ್ಕೆ ಭಾಗಿಗಳಾಗುತ್ತಾರೆ. ಏಕೆಂದರೆ ದ್ರವ್ಯವನ್ನು ಮನೆಯಲ್ಲಿಟ್ಟರೆ ಹೆಂಡತಿ ಮಕ್ಕಳಾಗಲೀ ಅಥವಾ ಇತರರಾಗಲಿ ತೆಗೆದುಕೊಂಡು ಬಿಡುತ್ತಾರೇನೋ ಎಂಬ ಭಯ! ಬ್ಯಾಂಕಿನಲ್ಲಿಟ್ಟರೆ ಬ್ಯಾಂಕು ಎಲ್ಲಿ ಮುಳು

ಗಿಹೋಗುವುದೋ ಎಂಬ ಭಯ! ಇತರರಿಗೆ ಸಾಲವನ್ನು ಕೊಟ್ಟರೆ ಅವರು ಎಲ್ಲಿ ಕೊಡದೇ ಹೋಗುತ್ತಾರೋ ಎಂಬ ಭಯ! ಇದಲ್ಲದೆ ದ್ರವ್ಯವು ನಷ್ಟವಾದರೆ ಅಥವಾ ಖರ್ಚಾದರೆ ತಮಗೆ ದುಃಖ. ಈ ರೀತಿಯಾಗಿ ಮೊದಲಿನಿಂದಲೂ ಕೊನೆಯವರೆಗೂ ದ್ರವ್ಯವು ದುಃಖಗಳಿಗೆ ಕಾರಣವಾದುದರಿಂದ ಅದು ತಿರಸ್ಕರಿಸಲ್ಪಡುವುದಕ್ಕೆ ಯೋಗ್ಯವಾಗಿದೆ ಎಂದು ಜ್ಞಾನಿಗಳು ಹೇಳಿದ್ದಾರೆ. ಆದರೂ ಅಜ್ಞಾನದಿಂದ ದ್ರವ್ಯವು ದುಃಖಕ್ಕೆ ಕಾರಣವೆಂದು ತಿಳಿಯದೆ ಅದರಿಂದ ಸುಖವುಂಟಾಗುತ್ತದೆಂದು ತಿಳಿದು ದ್ರವ್ಯವನ್ನು ಅಪೇಕ್ಷಿಸುತ್ತೇವೆ. ಇದಲ್ಲದೆ ನಮ್ಮ ದೇಹ ನಮ್ಮ ಹೆಂಡತಿ ಮಕ್ಕಳ ದೇಹಗಳು ಅಪವಿತ್ರ ಪದಾರ್ಥಗಳಾದ ಮಲ, ಮೂತ್ರ, ರಕ್ತ, ಮಾಂಸ ಮೊದಲಾದುವುಗಳಿಂದ ಕೂಡಿದ್ದರೂ ಅಜ್ಞಾನದಿಂದ ಅವುಗಳಲ್ಲಿ ನಾವು ಮೋಹವನ್ನು ಇಟ್ಟಿರುತ್ತೇವೆ.

ಯದಿ ನಾಮಾಸ್ಯ ಕಾಯಸ್ಯ ಯದಂತಸ್ತದ್ಬಹಿರ್ಭವೇತ್ ।
ದಂಡಮಾದಾಯ ಲೋಕೋಽಯಂ ಶುನಃ ಕಾಕಾಂಶ್ಚ ವಾರಯೇತ್ ॥
ಸ್ತ್ರಿಯಂ ಪುಮಾ೯ ಪುಮಾಂಸಂ ಸ್ತ್ರೀ ನೈವೇಚ್ಛೇತ್ ನ ಸ್ಪೃಶೇಕ್ವಚಿತ್॥

ಎಂಬುದಾಗಿ ದೊಡ್ಡವರು ಹೇಳಿರುವಂತೆ ನಮ್ಮ ದೇಹಗಳೊಳಗಿರತಕ್ಕ ಮಾಂಸಖಂಡ ಮೊದಲಾದವುಗಳು ಹೊರಗಿದ್ದ ಪಕ್ಷದಲ್ಲಿ ಅದನ್ನು ತಿನ್ನುವುದಕ್ಕೆ ಬರತಕ್ಕ ನಾಯಿಗಳನ್ನೂ ಮತ್ತು ಕಾಗೆಗಳನ್ನೂ ಅಟ್ಟುವುದಕ್ಕೋಸ್ಕರ ನಾವುಗಳು ದೊಣ್ಣೆಗಳನ್ನು ಯಾವಾಗಲೂ ಹಿಡಿದು ಕೊಂಡಿರಬೇಕಾಗುತ್ತಿತ್ತು. ಅಲ್ಲದೆ ಸ್ತ್ರೀಯು ಪುರುಷನನ್ನಾಗಲಿ, ಪುರುಷನು ಸ್ತ್ರೀಯನ್ನಾಗಲೀ ಮೋಹಿಸುತ್ತಿರಲಿಲ್ಲ ನಮ್ಮ ದೇಹಗಳು ಸದಾ ಅಪವಿತ್ರಗಳಾಗಿರುವುದಲ್ಲದೆ ಅವುಗಳಲ್ಲಿ ಶೋಕ, ಮೋಹ, ಹಸಿವು. ಬಾಯಾರಿಕೆ, ಮುಪ್ಪು ಮತ್ತು ಮರಣವೆಂಬ ಷಡೂರ್ಮಿಗಳು ಇರುವವು, ಮತ್ತು ಅವುಗಳು ಹುಟ್ಟುವುದು, ಬೆಳೆಯುವುದು, ಪರಿಣಾಮವನ್ನು ಹೊಂದುವುದು, ಕ್ಷಯವಾಗುವುದು ಮತ್ತು ನಾಶವಾಗುವುದು ಎಂಬ ಷಡ್ಭಾವ ವಿಕಾರಗಳನ್ನು ಹೊಂದಿರುತ್ತವೆ. ಶ್ರೀ ರಾಮಕೃಷ್ಣ ಪರಮಹಂಸರು ಹೇಳಿರುವಂತೆ ಇಬ್ಬರು ಸ್ತ್ರೀಯರು ಮೀನುಗಳನ್ನು ಮಾರಿಕೊಂಡು ತಿರುಗಿ ಬರುವಾಗ ಸಂಜೆಯಾಗಿ ಮಧ್ಯದಲ್ಲಿದ್ದ ಇನ್ನೊಂದು ಊರಿನಲ್ಲಿ ಒಬ್ಬ ಹೂವಾಡಿಗರವನ ಮನೆಯಲ್ಲಿ ನಿಲ್ಲಬೇಕಾಯಿತು. ಅವನ ಮನೆಯು ಚಿಕ್ಕದಾದುದರಿಂದ ಅವನು ಹೂವುಗಳನ್ನು ಇಟ್ಟಿದ್ದ

ಕೊಠಡಿಯಲ್ಲಿ ಅವರುಗಳಿಗೆ ಮಲಗಿಕೊಳ್ಳುವುದಕ್ಕೆ ಸ್ಥಳವನ್ನು ಕೊಟ್ಟನು. ಆ ಸ್ತ್ರೀಯರಿಗೆ ಎಷ್ಟು ಹೊತ್ತಾದರೂ ನಿದ್ರೆಬಾರದೇ ಇದ್ದುದರಿಂದ ಒಬ್ಬಳು ಇನ್ನೊಬ್ಬಳಿಗೆ ಹಾಳು ಹೂವಿನ ವಾಸನೆಯಿಂದ ನಿದ್ರೆ ಬಾರದೇ ಇದೆ ಎಂದು ಹೇಳಿದಳು. ಅದಕ್ಕೆ ಇನ್ನೊಬ್ಬಳು ಮೀನಿನ ಬುಟ್ಟಿಗಳನ್ನು ಮೂಗಿನ ಹತ್ತಿರ ಇಟ್ಟುಕೊಳ್ಳೋಣ ಅಂದಳು. ಆಮೇಲೆ ಇಬ್ಬರೂ ಮೀನಿನ ಬುಟ್ಟಿಗಳನ್ನು ಮೂಗಿನ ಹತ್ತರ ಇಟ್ಟುಕೊಂಡರು. ತತ್‌ಕ್ಷಣವೇ ಅವರಿಗೆ ನಿದ್ರೆ ಬಂದಿತು. ಮೀನುಗಳ ಬುಟ್ಟಿಯು ದುರ್ವಾಸನೆಯಾಗಿದ್ದರೂ, ಹೂವುಗಳು ಸುವಾಸನೆಯಾಗಿದ್ದರೂ ಬಹು ಕಾಲದಿಂದಲೂ ದುರ್ವಾಸನೆಯಲ್ಲೇ ಇದ್ದುದರಿಂದ ಆ ಸ್ತ್ರೀಯರಿಗೆ ಸುವಾಸನೆಯಲ್ಲಿ ಹಿತವು ತೋರದೆ ದುರ್ವಾಸನೆಯಲ್ಲೇ ಹಿತವು ತೋರಿತು. ಅದರಂತೆ ನಮ್ಮಗಳಿಗೂ ಬಹು ಕಾಲದ ಅಭ್ಯಾಸದಿಂದ ದುಃಖವು ಮತ್ತು ಅಪವಿತ್ರವಾದ ದೇಹಗಳು ಹಿತವಾಗಿ ತೋರುತ್ತವೆ.

ಅಲ್ಲದೆ ನಾವುಗಳು ಪ್ರತಿಕ್ಷಣದಲ್ಲಿಯೂ ತ್ರಿಕರಣದಲ್ಲಿ ಅಂದರೆ, ದೇಹದಿಂದಲೂ, ವಾಕ್ಕಿನಿಂದಲೂ ಮತ್ತು ಮನಸ್ಸಿನಿಂದಲೂ ಒಳ್ಳೇ ಅಥವಾ ಕೆಟ್ಟ ಕರ್ಮಗಳನ್ನು (ಅಂದರೆ ದೇಹದಿಂದ ಇನ್ನೊಬ್ಬರಿಗೆ ಹಿಂಸಿಸುವುದು ಅಥವಾ ಉಪಚರಿಸುವುದು, ವಾಕ್ಕಿನಿಂದ ಇನ್ನೊಬ್ಬರ ಮನಸ್ಸು ನೋಯುವ ಹಾಗೆ ಅಥವಾ ಮನಸ್ಸು ಸಂತೋಷ ಪಡುವ ಹಾಗೆ ಮಾತನಾಡುವುದು ಮತ್ತು ಮನಸ್ಸಿನಿಂದ ಇನ್ನೊಬ್ಬರಿಗೆ ಕೆಟ್ಟದ್ದನ್ನು ಅಥವಾ ಒಳ್ಳೆಯದನ್ನು ಮಾಡಬೇಕೆಂದು ಸಂಕಲ್ಪ ಮಾಡುವುದು) ಮಾಡುತ್ತೇವೆ. ನಾವು ಮಾಡತಕ್ಕ ಪ್ರತಿಯೊಂದು ಕರ್ಮವೂ ಬೀಜಪ್ರಾಯವಾಗಿರುತ್ತದೆ. ಅಂದರೆ, ನಾವು ಒಂದು ಮಾವಿನ ಬೀಜವನ್ನು ಹಾಕಿದರೆ ಅದು ಒಂದು ವೃಕ್ಷವಾಗಿ ಅನೇಕ ವರ್ಷಗಳು ನಮಗೆ ಫಲಗಳನ್ನು ಕೊಡುವಂತೆ ನಾವು ಒಂದು ನಿಮಿಷದಲ್ಲಿ ಮಾಡುವ ಕರ್ಮವು ಅನೇಕ ವರ್ಷ ಅಲ್ಲವೆ ಅನೇಕ ಜನ್ಮಗಳಲ್ಲಿ ಫಲಗಳನ್ನು ಕೊಡುವುದು. ಅಂದಮೇಲೆ ನಾವು ಬೆಳಗಿನಿಂದ ರಾತ್ರಿ ಮಲಗುವವರೆಗೆ ಸಾವಿರಾರು ಜನ್ಮಗಳನ್ನು ಕೊಡುವಷ್ಟು ಕರ್ಮಗಳನ್ನು ಮಾಡುತ್ತೇವೆ. ನಾವು ಹುಟ್ಟಿದ ಮೇಲೆ ಸಾಯುವ ವರೆಗೆ ಲಕ್ಷಾಂತರ ಜನ್ಮಗಳಲ್ಲಿ ಫಲವನ್ನು ಕೊಡುವಷ್ಟು ಕರ್ಮಗಳನ್ನು ಮಾಡುತ್ತೇವೆ. ಒಬ್ಬನು ವರ್ಷ ಒಂದಕ್ಕೆ ೧೦,೦೦೦ ಖಂಡಗ ದವಸವನ್ನು ಬೆಳೆದು ಹತ್ತು ಖಂಡಗ

ದವಸವನ್ನು ಮಾತ್ರ ವೆಚ್ಚ ಮಾಡಿದರೆ ಉಳಿದ ೯೯೯೦ ಖಂಡಗ ದವಸವು ಪ್ರತಿ ವರ್ಷದಲ್ಲಿಯೂ ಶೇಖರವಾಗುತ್ತ ಹೋಗುತ್ತದೆ. ಇದರಂತೆ ನಾವು ಒಂದು ಜನ್ಮದಲ್ಲಿ ಲಕ್ಷಾಂತರ ಜನ್ಮಗಳಲ್ಲಿ ಫಲವನ್ನು ಕೊಡುವಷ್ಟು ಕರ್ಮಗಳನ್ನು ಮಾಡುವುದರಿಂದಲೂ ಮುಂದಿನ ಜನ್ಮದಲ್ಲಿ ಅನುಭವಿಸತಕ್ಕ ಫಲಕ್ಕೆ ತಕ್ಕಷ್ಟು ಕರ್ಮಗಳು ತೀರುವುದರಿಂದಲೂ ಉಳಿದ ಕರ್ಮಗಳು ನಮ್ಮ ಮೇಲೆ ಬಾಕಿ ನಿಲ್ಲುತ್ತ ಹೋಗುತ್ತವೆ. ಈ ರೀತಿಯಾಗಿ ನಮ್ಮ ಜನ್ಮಗಳು ಪ್ರಾರಂಭವಾದಂದಿನಿಂದ ಅಂದರೆ ಅನಾದ್ಯನಂತ ಕೋಟಿ ಜನ್ಮಗಳಿಂದಲೂ ಈ ಜನ್ಮ ಬರುವ ವರೆಗೆ ನಾವು ಮಾಡಿರತಕ್ಕ ಕರ್ಮಗಳ ಪೈಕಿ ನಾವು ಇದುವರೆಗೆ ಅನುಭವಿಸಿರತಕ್ಕ ಜನ್ಮಗಳಲ್ಲಿ ಎಷ್ಟು ಕರ್ಮಗಳು ಫಲಗಳನ್ನು ಕೊಟ್ಟಿವೆಯೋ ಅವು ವಜಾ ಹೋಗುತ್ತ ಉಳಿದಿರುವ ಕರ್ಮಗಳಿಗೆ ಸಂಚಿತಕರ್ಮವೆಂಬ ಹೆಸರು. ಸಂಚಿತ ಕರ್ಮಗಳ ಪೈಕಿ ಎಷ್ಟು ಕರ್ಮಗಳು ಈ ಜನ್ಮದಲ್ಲಿ ಈಶ್ವರನ ಆಜ್ಞಾ ಪ್ರಕಾರ ಫಲವನ್ನು ಕೊಡುವುದಕ್ಕೆ ಪ್ರಾರಂಭಿಸಿವೆಯೋ ಅವಕ್ಕೆ 'ಪ್ರಾರಬ್ಧ' ಎಂದರೆ ಪ್ರಾರಂಭಿಸಿದ ಕರ್ಮವೆಂದು ಹೆಸರು. ಅಂದಮೇಲೆ ಈಗ ನಮ್ಮಲ್ಲಿ ಕೋಟ್ಯಂತರ ಜನ್ಮಗಳಿಗೆ ಫಲವನ್ನು ಕೊಡತಕ್ಕ ಸಂಚಿತ ಕರ್ಮಗಳಿರುತ್ತವೆ. ಈ ಕರ್ಮಗಳ ಪೈಕಿ ಹೆಚ್ಚು ಭಾಗವು ದುಷ್ಕರ್ಮಗಳೇ ಇರುವುದರಿಂದ ನಮಗೆ ಮುಂದೆ ಮನುಷ್ಯ ಜನ್ಮವೇ ಬರುತ್ತದೆಂಬ ನಂಬಿಕೆಯಿಲ್ಲ. ಇದಕ್ಕೆ ಬದಲಾಗಿ ಶ್ವಾನ ಸೂಕರ ಜನ್ಮಗಳ ಪೈಕಿ ಯಾವುದಾದರೂ ಒಂದು ಹೀನ ಜನ್ಮವು ಬರಬಹುದು. ಆದ್ದರಿಂದ ಈಗ ನಮಗೆ ಮನುಷ್ಯ ಜನ್ಮವು ಬಂದಿರುವುದರಿಂದ ಜನನ ಮರಣವೇ ಮುಂತಾದ ದುಃಖಗಳನ್ನು ಕಳೆದುಕೊಂಡು ಮೇಲೆ ಹೇಳಿದ ಶಿವಾನಂದವನ್ನು ಪಡೆಯುವುದಕ್ಕೆ ಪ್ರಯತ್ನವನ್ನು ಮಾಡತಕ್ಕದ್ದು ಆವಶ್ಯಕ. ಈ ವಿಷಯದಲ್ಲಿ ಒಬ್ಬ ಮಹಾತ್ಮರು ಹೇಳಿರುವುದೇನೆಂದರೆ, ಬಹುಜನಗಳ ಪುಣ್ಯದಿಂದ ನರಜನ್ಮವು ಬಂದಮೇಲೆ ಈ ಕೆಳಗೆ ಹೇಳಿರತಕ್ಕ ಐದು ವಿಧವಾದ ಕೇಡುಗಳು ಬರಬಾರದು.

(೧) ಉತ್ತಮರ ಮಗಳನ್ನು ಬಂಧುಗಳು ಒಪ್ಪಿ ತನಗೆ ಮದುವೆ ಮಾಡಿ ಅವಳು ಸಂಸಾರದಲ್ಲಿ ತನಗೆ ಅನುಕೂಲಳಾಗಿದ್ದು ಮಧ್ಯದಲ್ಲಿ ಗತಿಸಿಹೋದರೆ ಅದಕ್ಕೆ ಅಳಬಾರದು. ಏತಕ್ಕೆಂದರೆ ಇದು ಕೇಡಲ್ಲ. ತಾನು ಸದ್ಗುರುವಿನ ಸಮೀಪಕ್ಕೆ ಹೋಗದೆ ಇರತಕ್ಕದ್ದೇ ಮೊದಲನೆಯ ಕೇಡು ಎಂಬುದಾಗಿ ತಿಳಿದುಕೊಳ್ಳಬೇಕು.

(೨) ಸುಂದರ ಶರೀರವುಳ್ಳವನೂ, ವಿವೇಕಿಯೂ, ಮಹಾತ್ಮರ ಸಂಗದಲ್ಲೇ ಇರುವವನೂ, ಪಿತೃಭಕ್ತಿಯುಳ್ಳವನೂ ಆದ ಪುತ್ರನು ಎದುರಿಗೆ ಗತಿಸಿಹೋದರೆ ಅಳಬಾರದು. ಏಕೆಂದರೆ ಇದು ತನಗೆ ಕೇಡಲ್ಲ. ತಾನು ಚಂದ್ರಶೇಖರನಾದ ಪರಮೇಶ್ವರನನ್ನು ತನ್ನ ಹೃದಯಕಮಲದಲ್ಲಿ ಧ್ಯಾನಿಸದೆ ಇರುವುದೇ ತನಗೆ ಎರಡನೆಯ ಕೇಡು ಎಂಬುದಾಗಿ ತಿಳಿದುಕೊಳ್ಳಬೇಕು.

(೩) ಹೊಸದಾಗಿ ಕಟ್ಟಿಸಿರತಕ್ಕ ಮನೆಯಲ್ಲಿ ಬಹಳ ಬೆಲೆಯುಳ್ಳ ಜವಳಿ ಮೂಟೆಗಳು ಹಾಕಿರುವಾಗ ಬೆಂಕಿಬಿದ್ದು ಸುಟ್ಟುಹೋದರೆ ತಾನು ಅಳಬಾರದು. ಇದು ತನಗೆ ಕೇಡಲ್ಲ. ಕಾಮವು ತನ್ನ ಮನಸ್ಸನ್ನು ದುರ್ವಿಷಯಗಳ ಕಡೆಗೆ ಎಳೆಯುತಕ್ಕದ್ದು ತನಗೆ ಮೂರನೆಯ ಕೇಡು, ಎಂಬುದಾಗಿ ತಿಳಿದುಕೊಳ್ಳಬೇಕು.

(೪) ಒಂದೇ ಕಾಲದಲ್ಲಿ ತನಗೆ ಹೊಟ್ಟೆನೋವು, ತಲೆನೋವು, ಕಣ್ಣಿನೋವು ಮತ್ತು ದಂತವ್ರಣ ಇವೆಲ್ಲವೂ ಬಂದರೆ ನಾನು ತಡೆಯಲಾರೆನೆಂದು ಅಳಬಾರದು. ಇದು ತನಗೆ ಕೇಡಲ್ಲ. ಈ ಜನ್ಮದಲ್ಲಿ ತಪ್ಪುದಾರಿಯನ್ನು ತೋರಿಸಿ ದುರ್ಗತಿಯನ್ನುಂಟು ಮಾಡುವ ಅವಿವೇಕಿಗಳ ಮಾತನ್ನು ತಾನು ಕೇಳುವುದು ತನಗೆ ನಾಲ್ಕನೆಯ ಕೇಡು ಎಂಬುದಾಗಿ ತಿಳಿದುಕೊಳ್ಳಬೇಕು.

(೫) ತನ್ನ ಹಿರಿಯರು ತನಗೋಸ್ಕರ ಸಂಪಾದಿಸಿಟ್ಟ ಆಸ್ತಿಯನ್ನೆಲ್ಲ ರಾಜನು ತೆಗೆದುಕೊಂಡರೆ ಅಯ್ಯೋ ಎಂಬುದಾಗಿ ಹಂಬಲಿಸಬಾರದು. ಇದು ತನಗೆ ಕೇಡಲ್ಲ. ತನ್ನ ಮನಸ್ಸು ಗೌರೀನಾಥನಾದ ಪರಮೇಶ್ವರನ ಆಕಾರವನ್ನು ಹೊಂದದೆ ಯಾವಾಗಲೂ ವಿಷಯಗಳ ಆಕಾರವನ್ನು ಹೊಂದುತ್ತಿರುವುದೇ ತನಗೆ ಐದನೆಯ ಕೇಡು.

ಮೂತ್ರರೋಗವಿರತಕ್ಕವರಿಗೆ ತಮ್ಮ ಮೂತ್ರದಲ್ಲಿ ಸಕ್ಕರೆಯು ಹೋಗುತ್ತಿದ್ದರೂ ಪ್ರಾರಂಭದಲ್ಲಿ ತಮಗೆ ಗೊತ್ತಾಗುವುದಿಲ್ಲ. ಇನ್ನಾವುದಾದರೂ ಕಾಯಿಲೆ ಅವರಿಗೆ ಪ್ರಾಪ್ತವಾಗಿ ವೈದ್ಯರು ಅವರ ಮೂತ್ರವನ್ನು ಪರೀಕ್ಷಿಸಿ ಅದರಲ್ಲಿ ಸಕ್ಕರೆ ಇದೆ ಎಂಬುದಾಗಿ ಹೇಳಿದರೆ ಆಗ ಅವರಿಗೆ ಭಯ ಬಂದು ವೈದ್ಯರ ಸಮೀಪಕ್ಕೆ ಹೋಗಿ ಅವರು ಕೊಡುವ ಔಷಧವನ್ನು ತೆಗೆದುಕೊಂಡು ಅವರು ಹೇಳಿದ ಪಥ್ಯದಲ್ಲಿದ್ದು ಆರೋ

ಗ್ಯವನ್ನು ಹೊಂದುತ್ತಾರೆ. ಅದರಂತೆಯೇ ನಮ್ಮಲ್ಲಿ ದುಃಖವಿರುವುದನ್ನು ನಾವು ತಿಳಿಯದೇ ಇರುವುದರಿಂದ ನಮಗೆ ದುಃಖದ ಭಯವಿಲ್ಲದೆ ಅದನ್ನು ಪರಿಹಾರ ಮಾಡಿಕೊಳ್ಳುವುದಕ್ಕೆ ನಾವು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. 'ಸಂಸಾರೋ ದುಃಖಸಾಗರಃ' ಎಂಬಂತೆ ಯಾರು ಮೇಲೆ ಹೇಳಿದ ಪ್ರಕಾರ ಸಂಚಿತ ಕರ್ಮಗಳಿಗನುಸಾರವಾಗಿ ಇನ್ನು ಮುಂದೆ ಕೋಟ್ಯಂತರ ಜನ್ಮಗಳಲ್ಲಿ ಜನನ ಮರಣಾದಿ ದುಃಖಗಳನ್ನು ತಾವು ಅನುಭವಿಸಬೇಕಾಗುವುದಲ್ಲದೆ ತಮ್ಮ ದುಷ್ಕರ್ಮಗಳಿಗನುಸಾರವಾಗಿ ಮನುಷ್ಯೇತರವಾಗಿರುವ ಹೀನ ಜನ್ಮಗಳಲ್ಲಿಯೂ ಬರಬೇಕಾಗುವುದೆಂದು ತಿಳಿಯುತ್ತಾರೋ ಅಂಥವರು ದುಃಖಕ್ಕೆ ಭಯಪಟ್ಟು ದುಃಖವಿಲ್ಲದೆ ಇರತಕ್ಕ ಸುಖವನ್ನು ಅಂದರೆ ಮೋಕ್ಷವನ್ನು ಪಡೆಯಲು ಅತ್ಯುತ್ಕಟವಾದ ಇಚ್ಛೆಯುಳ್ಳವರಾಗುತ್ತಾರೆ. ಇಂಥವರಿಗೆ ಮುಮುಕ್ಷುಗಳೆಂದು ಹೆಸರು. ಇವರೇ ವೇದಾಂತ ಮತದ ಪ್ರಕಾರ ಸಪ್ತ ಭೂಮಿಕೆಗಳಲ್ಲಿ ಮೊದಲನೆಯದಾದ ಸುಭೇಚ್ಛಾ ಭೂಮಿಕೆಯವರಾಗಿಯೂ ವೀರಶೈವ ಮತದ ಪ್ರಕಾರ ಷಟ್‌ಸ್ಥಲಗಳಲ್ಲಿ ಮೊದಲನೆಯದಾದ ಭಕ್ತಸ್ಥಲದವರಾಗಿಯೂ ಕರೆಯಲ್ಪಡುತ್ತಾರೆ. ಈ ಮುಮುಕ್ಷುಗಳು ತಾವು ದುಃಖದಿಂದ ಬಿಡುಗಡೆಯಾಗಿ ನಿತ್ಯ ಸುಖವನ್ನು ಹೊಂದುವುದಕ್ಕಾಗಿ ಶಿವನಲ್ಲಿ ನಿರತಿಶಯವಾದ ಭಕ್ತಿಯನ್ನಿಟ್ಟು ಮೊರೆಯಿಡುತ್ತಾರೆ. ಕರಣಾಸಮುದ್ರನಾಗಿರತಕ್ಕ ಶಿವನು ತಾನೇ ಗುರುರೂಪವಾಗಿ ಬಂದು ಅವರ ಅಜ್ಞಾನವನ್ನು ನಾಶಮಾಡಿ ಅವರಿಗೆ ಮೋಕ್ಷವನ್ನು ಕೊಡುತ್ತಾನೆ. ಶಿವನು ಕರುಣಾ ಸಮುದ್ರನಾದ ಮೇಲೆ ತಾವು ಮೊರೆಯನ್ನಿಡದಿದ್ದರೂ ದುಃಖದಲ್ಲಿರುವವರೆಲ್ಲರಿಗೂ ಮೋಕ್ಷವನ್ನು ಕೊಡಬೇಕಲ್ಲವೇ? ಎಂಬುದಾಗಿ ಸಂದೇಹವು ಕೆಲವರಿಗೆ ಹುಟ್ಟಬಹುದು. ಅಗ್ನಿಯು ಶೀತವನ್ನು ನಿವಾರಣೆ ಮಾಡುವುದಕ್ಕೂ, ಸರೋವರವು ಬಾಯಾರಿಕೆಯನ್ನು ಹೋಗಲಾಡಿಸುವುದಕ್ಕೂ, ವೃಕ್ಷಗಳು ನೆರಳಿನಿಂದ ಮಾರ್ಗಸ್ಥರ ಆಯಾಸವನ್ನು ಪರಿಹಾರ ಮಾಡುವುದಕ್ಕೂ ಸಿದ್ಧವಾಗಿದ್ದರೂ ಅವುಗಳ ಸಮೀಪಕ್ಕೆ ಹೋದವರಿಗೆ ಮಾತ್ರ ದುಃಖಪರಿಹಾರವಾಗುತ್ತದೆ. ಅದರಂತೆಯೇ ಶಿವನು ಸರ್ವರಿಗೂ ದುಃಖವನ್ನು ಹೋಗಲಾಡಿಸಿ ಸುಖವನ್ನು ಕೊಡಲು ಸಿದ್ಧನಾಗಿದ್ದಾನೆ. ಆದರೆ ಯಾರು ಅವನ ಸಮೀಪಕ್ಕೆ ಹೋಗುತ್ತಾರೋ ಅವರ ದುಃಖವನ್ನು ಮಾತ್ರ ಹೋಗಲಾಡಿಸಿ ಅವರಿಗೆ ಸುಖವನ್ನು ಕೊಡು

ತ್ತಾನೆ. ಆದುದರಿಂದ ಸರ್ವರೂ ಶಿವನಲ್ಲಿ ಅಚಲವಾದ ಭಕ್ತಿಯನ್ನಿಟ್ಟು ಶ್ರೀಗುರುವಿನಿಂದ ಜ್ಞಾನವನ್ನು ಸಂಪಾದಿಸಿ ಮೋಕ್ಷವನ್ನು ಪಡೆದು ಸುಖಿಗಳಾಗಬೇಕು.

---

# ದೇವರದಾಸಿಮಾರ್ಯರು ಶೈವ ಸಾಹಸಿಗರೋ ವೀರಶೈವ ಸಾಹಸಿಗರೋ ?

(ಲೇಖಕರು—ಶ್ರೀ ಸಿ. ನಾ. ಮಹಾಂತಣ್ಣವರ ಹೂನೂರ)

---

ಲಿಂಗದೇಹೀ ಸದಾ ಶುಚಿಃ ಎಂಬ ಉಕ್ತಿಯಂತೆ, ಶಿವಶರಣರ ನಡೆ ಶುದ್ಧ, ನುಡಿ ಶುದ್ಧ, ಭಾವ ಶುದ್ಧ, ಮನ ಶುದ್ಧ, ತನು ಶುದ್ಧ, ಕರ ಶುದ್ಧಗಳೆಂಬುದು ಸ್ಪಷ್ಟವು. ಹೀಗೆ ಕರ ಮನ ಭಾವ ನೋಟ ಶುದ್ಧಿಗಳಿಂದ ಶಿವಶರಣರಿಗೆ ಪಂಚಪರುಷಗಳು ಸಾಧ್ಯವಾದದ್ದು ಎಲ್ಲರಿಗೂ ವೇದ್ಯವದೆ. ಇಂಥ ಮಹಾನುಭಾವಿಗಳ ವಿಮರ್ಶೆಯನ್ನು ಮಾಡುವ ಯೋಗ್ಯತೆಯು ಮಹಾನುಭಾವಿಗಳಿಗೇನೇ ಸಾಧ್ಯವಲ್ಲದೆ ಇತರರಿಗೆ ಅಸಾಧ್ಯವು. ಶಿವಮಂದಿರದ ಮಹಾದ್ವಾರವನ್ನೇ ನೋಡದವರು ಶಿವಮಂದಿರದೊಳಗಿನ ಶಿವಾನುಭವ ಮಂಟಪದ ಶರಣಗಣಂಗಳ ಶಿವಾನುಭಾವವು ಗೋಚರಿಸುವ ಬಗೆಯೆಂತು? "ತಾಯಿಯು ಗರ್ಭದಲ್ಲಿರುವ ಶಿಶುವು ತಾಯಿಯ ಕುರುಹನರಿಯದು. ತಾಯಿಯು ಆ ಶಿಶುವಿನ ಕುರುಹನೆಂದೂ ಅರಿಯಳು. ಮಾಯಾ ಮೋಹದಲ್ಲಿರುವ ಭಕ್ತರು ದೇವರನರಿಯರು. ದೇವರು ಆ ಭಕ್ತರನೆಂದೂ ಅರಿಯನು ಎಂದು ಭಕ್ತಿಸ್ಥಳದಲ್ಲಿ ಮಹಾಶರಣರಾದ ದೇವರದಾಸಿಮಾರ್ಯರು ಅರುಹಿರುವರು. ಸೊಬಗು ಸೌಂದರ್ಯವುಳ್ಳ ವಚನ ವಾಙ್ಮಯಗಳ ಮೂಲಿಗನೂ ವೀರಶೈವ ಷಟ್‌ಸ್ಥಲಾನುಭವಿಯೂ ನೂರೊಂದು ಸ್ಥಳಕುಳಗಳ ಜ್ಞಾನಿಯೂ ಅಷ್ಟಾವರಣಾಂಗಿಯೂ ಪಂಚಾಚಾರ ಪ್ರಾಣಿಯೂ ಏಕಲಿಂಗ ನಿಷ್ಠಾಂಗಿಯೂ ವೀರಶೈವ ಧರ್ಮಪ್ರಸಾದಿಯೂ ಉದ್ಧಾರಿಯೂ ಆದ ದೇವರ

ದಾಸಿಮಯ್ಯಾರ್ಯರು "ಶೈವಸಾಹಸಿಗರೋ ವೀರಶೈವ ಸಾಹಸಿಗರೋ?" ಎಂಬುದನ್ನು ವಿಚಾರಿಸುವಾ.

ರಾವಬಹಾದ್ದೂರ ಹಳಕಟ್ಟಿಯವರು ವಚನಗಳನ್ನು ಶೋಧಿಸುವಾಗ ದೇವರದಾಸಿಮಯ್ಯಾರ್ಯರ ವಚನಗಳನ್ನು ತಮಗೆ ದೊರೆತಷ್ಟು ಬೇರೆಯಾಗಿ ಸಂಗ್ರಹಿಸಿ ಅವುಗಳನ್ನು ಮುದ್ರಿಸಿರುವರು. ಇನ್ನೂ ಸಂಶೋಧಿಸಿದರೆ ಹೊಸ ವಚನಗಳು ಹೊರಡಬಹುದು. ಈಗ್ಗೆ ತೋರಿಬರುವ ದೇವರದಾಸಿಮಯ್ಯಾರ್ಯರ ವಚನಗಳನ್ನು ಪರಿಶೀಲಿಸಿದರೆ ಅವುಗಳ ದಿವ್ಯವಾದ ಸೌಂದರ್ಯ, ಭವ್ಯವಾದ ಗಾಂಭೀರ್ಯ, ನವ್ಯವಾದ ಚಾತುರ್ಯ, ಲೇಪ್ಯವಾದ ಸಹಚರ್ಯ, ದೀಪ್ಯವಾದ ಮಾಧುರ್ಯ, ಗೌಪ್ಯವಾದ ಆಂತರ್ಯಗಳನ್ನು ಕಂಡುಹಿಡಿದು ಆವ ಭಕ್ತನು ಭಜಿಸಲಿಕ್ಕಿಲ್ಲ? ಆವ ಮಹೇಶ್ವರನು ಮನ್ನಿಸಲಿಕ್ಕಿಲ್ಲ? ಆವ ಪ್ರಸಾದಿಯು ತೃಪ್ತಿಸಲಿಕ್ಕಿಲ್ಲ? ಆವ ಪ್ರಾಣಲಿಂಗಿಯು ಪಠಿಸಲಿಕ್ಕಿಲ್ಲ? ಆವ ಶರಣನು ಸ್ತುತಿಸಲಿಕ್ಕಿಲ್ಲ? ಆವ ಲಿಂಗಾಂಗ ಸಾಮರಸ್ಯಜ್ಞಾನಿಯು ಅಪ್ಪಿಕೊಳ್ಳಲಿಕ್ಕಿಲ್ಲ? ಅಷ್ಟೇಕೆ, ದ್ವಿತೀಯ ಶಂಭುವಾದ ಶ್ರೀ ಬಸವಣ್ಣನವರು ತಮ್ಮ ಹೃದಯದಲ್ಲಿ ಒಡಮೂಡಿದ ಅಚ್ಚಗನ್ನಡದ ನಿಚ್ಚಳವಾದ ಉಚ್ಚತಮವಾದ ದೇವರ ದಾಸಿಮಯ್ಯಾರ್ಯರ ವಚನಗಳು ಅಚ್ಚೊತ್ತಿದಂತಾಗಿ ಅಡಿಗಡಿಗೆ ದಾಸಿಮಯ್ಯಾರ್ಯರನ್ನು ತಮ್ಮ ಸರಳ ವಚನಗಳಿಂದ ಕೊಂಡಾಡಿದುದು ಆರಿಗೆ ಗೊತ್ತಿರಲಿಕ್ಕಿಲ್ಲ? "ದಾಸದುಗ್ಗಳೆಯಂತೆ ನೆರೆ ನಂಬೋ" "ದಾಸನ ವಸ್ತ್ರವ ಸೀಳಿದಂದಿಂದೆ ಭಯಕಾಣಿರಣ್ಣಾ" "ತನುಮನಧನದಲ್ಲಿ ವಂಚನೆಯನರಿಯರಯ್ಯಾ ದಾಸ ಸಿರಿಯಾಳರು." "ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿ ಪ್ರಸಾದವ ಪಡೆದ, ದಾಸನ ವಸ್ತ್ರವ ಬೇಡಿದಾತ ನೀನೆ ದೇವ." "ದಾಸನ ವಸ್ತ್ರವ ಬೇಡದ ಮುನ್ನ ತವಸಿಧಿಯನಿತ್ತರೆ ನಿಮ್ಮ ದೇವರೆಂಬೆ, ದಾಸನಂತೆ ತವನಿಧಿಯ ಪಡೆವನಲ್ಲ."

ಹೀಗೆ ದಾಸನನ್ನು ಕೊಂಡಾಡಿದ್ದಲ್ಲದೆ "ದಾಸನಕುಲ ದೆಸೆಯುಡರಿತ್ತು" ಎಂದು ದಾಸಿಮಯ್ಯಾರ್ಯರ ವಂಶದವರನ್ನು ಸಹ ಕೊಂಡಾಡಿದ್ದಾರೆ. ನಮ್ಮಂಥ ಪಾಮರರು ಶಿವಶರಣರನ್ನು ಕೊಂಡಾಡುವದರಲ್ಲಿ ಆಶ್ಚರ್ಯವೇನು? ಶ್ರೀ ಬಸವಣ್ಣನವರು ದೇವರದಾಸಿಮಯ್ಯಾರ್ಯರ ವಚನಗಳ ಆಚರಣೆಗಳ ಅಷ್ಟಾವರಣಗಳ ಸ್ಥಳಕುಳಗಳ ಅನುಕರಣ

ವನ್ನು ಎಷ್ಟರಮಟ್ಟಿಗೆ ಮಾಡಿರುವರೆಂಬದನ್ನು ವಾಚಕರ ದಿಗ್ದರ್ಶನಕ್ಕೆ ತಂದುಕೊಡುವಾ.

ಪಿಂಡಸ್ಥಲದ ವಚನಗಳಲ್ಲಿ ದೇವರದಾಸಿಮಾರ್ಯರು ''ಒಡಲೊಳಗಿನ ಕಿಚ್ಚು ಒಡಲ ಸುಡದ ಭೇದವ" ಎಂದು ಉದಹರಿಸಿದರೆ ಬಸವಣ್ಣನವರು ''ಹೃದಯದೊಳಗೆ ಬಯಸಿದ ಬಯಕೆಯು ಕಿಚ್ಚಿನಂತಿದ್ದೀತು" ಎಂದೂ ದಾಸಿಮಾರ್ಯರು ''ಸಸಿಯೊಳಗಿನ ಫಲಪುಷ್ಪರುಚಿಯ ಪರಿಮಳದಂತೆ" ಎಂದು ಹೇಳಿದರೆ ಬಸವಣ್ಣನವರು "ಸಸಿಯೊಳಗಣ ರಸದ ರುಚಿಯಂತೆ, ನನೆಯೊಳಗಣ ಪರಿಮಳದಂತೆ" ಎಂದೂ ಹೇಳಿದ್ದಾರೆ. ದಾಸಿಮಾರ್ಯರು "ಕನ್ನೆಯನನುಭವಿಸದ ಭೇದವ" ಎಂದು ಅರುಹಿದರೆ ಬಸವಣ್ಣನವರು ''ಕನ್ಯೆಯ ಸ್ನೇಹದಂತಿದ್ದೀತು" ಎಂದು ಅರುಹಿರುವರು.

ದೇವರದಾಸಿಮಾರ್ಯರು ಜಗತ್ತು ಶಿವಮಯವಿರುವದೆಂದು ಅನೇಕ ದೃಷ್ಟಾಂತಗಳಿಂದ ಪಿಂಡಜ್ಞಾನಸ್ಥಳವನ್ನು ವಿವರಿಸುತ್ತ ಘಟದಲ್ಲಿ ತೋರುವ ಸೂರ್ಯನಂತೆ ಸರ್ವರಲ್ಲಿ ಅವನ ಚೈತನ್ಯವಿಪ್ಪುದು ಎಂದು ಸಿದ್ಧಿಸಿದರೆ ಬಸವಣ್ಣನವರು ಪಿಂಡಜ್ಞಾನಸ್ಥಳದಲ್ಲಿ ''ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನವಾಗಿದ್ದೆ ಕಾಣಾ" ಎಂದು ಉಸಿರಿರುವರು.

ಸಂಸಾರಹೇಯ ಸ್ಥಳದಲ್ಲಿ ದೇವರದಾಸಿಮಾರ್ಯರು ''ನಡೆನೋಟ ಸೊಲ್ಲೆಡೆಯಲ್ಲಿ ಒಂದು ಕಿಚ್ಚು, ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು, ತಡೆದುಂಬದೆಡೆಯಲ್ಲಿ ಒಂದು ಕಿಚ್ಚು, ಪಡೆದರ್ಥ ಕೆಟ್ಟೆಡೆಯಲ್ಲಿ ಒಂದು ಕಿಚ್ಚು, ಕೂಡಿದ ದ್ರವ್ಯದ ಮೋಹದೆಡೆಯಲ್ಲಿ ಒಂದು ಕಿಚ್ಚು ಇಂತೀ ಐದ ಕಿಚ್ಚನಿಕ್ಕಿ ಬಾಯಲ್ಲಿ ಮಣ್ಣ ಹೊಯಿದು ಕೆಡಿಸಿದಿಯಯ್ಯಾ." ಎಂದು ವಿವೇಚಿಸಿದರೆ ಬಸವಣ್ಣನವರು ಸಂಸಾರದಲ್ಲಿ ಆಗುವ ತಾಪತಾಮಸಾದಿಗಳನ್ನು ತೋಡಿಕೊಳ್ಳುತ್ತ "ಹೊನ್ನು ಹೆಣ್ಣು ಮಣ್ಣು ದೋರಿ ಟೇವ ಟೆಂಬಕನಾಡಿಸುತ್ತಿದ್ದೀತಯ್ಯ ನಿನ್ನ ಮಾಯೆ." ಎಂದು ಸಂಸಾರಾರ್ಣವವನ್ನು ಅತಿ ವಿಶದವಾಗಿ ವರ್ಣಿಸಿದ್ದಾರೆ.

ಗುರುಕಾರುಣ್ಯ ಸ್ಥಲದಲ್ಲಿ ದೇವರದಾಸಿಮಾರ್ಯರು ಒಂದು ವಚನದಲ್ಲಿ "ಮಾಡಿದಲ್ಲದೆ ಮನೆಯೊಳಗಾಗದು ಬಯಲು, ಕಣ್ಣು ಕಂಡ

ಲ್ಲದೆ ರೂಪೆಂದು ನಿಶ್ಚಯಿಸಡು ಮನ, ಪಥದಿಂದಲ್ಲದೆ ಪರವಾಗದು" ಎಂದೂ ಮತ್ತೊಂದು ವಚನದಲ್ಲಿ "ಅದು ಕೂಡುವರೆ ಗುರುವಿನಿಂದಲ್ಲದಾಗದು" ಎಂದೂ ನಿರೂಪಿಸಿದರೆ ಬಸವಣ್ಣನವರು "ಮಡಿಕೆಯ ಮಾಡುವರೆ ಮಣ್ಣೇ ಮೊದಲು, ತೊಡಿಗೆಯ ಮಾಡುವರೆ ಹೊನ್ನೇ ಮೊದಲು, ಶಿವಪಥವ ನೋಡುವರೆ ಗುರುಪಥವೆ ಮೊದಲು" ಎಂದು ನಿರೂಪಿಸಿದ್ದಾರೆ.

ಲಿಂಗಧಾರಣೆಯ ಸ್ಥಳದಲ್ಲಿ ದೇವರದಾಸಿಮಾರ್ಯರು "ಗುರುಕಾರುಣ್ಯವಾದ ಬಳಿಕ ಅಂಗದ ಮೇಲೆ ಲಿಂಗವಿರಬೇಕು. ಲಿಂಗವಿಲ್ಲದ ಗುರುಕಾರುಣ್ಯವು ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ" ಎಂದು ಬೆಸಸಿದರೆ ಬಸವಣ್ಣನವರು "ಲಿಂಗದೇವನಿಲ್ಲದ ಠಾವ ಹೊಗಲಾಗದು ದೇವಭಕ್ತನಿಲ್ಲದ ಊರು ಹಾಳು" ಎಂದು ಬೆಸಸಿರುವರು.

ಇದೇ ಲಿಂಗಧಾರಣದ ಸ್ಥಳದಲ್ಲಿ ಗಂಡನು ಭಕ್ತನಾಗಿ ಹೆಂಡತಿಯು ಭವಿಯಾಗಿ ಇರಬಾರದೆಂಬದಾಗಿ ದಾಸಿಮಾರ್ಯರು "ಗಂಡ ಭಕ್ತನಾಗಿ ಹೆಂಡತಿ ಭವಿಯಾದರೆ ಉಂಡ ಊಟ ಇಬ್ಬರಿಗೂ ಸರಿಭಾಗ; ಸತ್ತ ನಾಯಿ ತಂದಟ್ಟದ ಮೇಲೆ ಇಳುಹಿ ಒಬ್ಬರೊಪ್ಪಚ್ಚಿಯ ಹಂಚಿಕೊಂಡು ತಿಂಬಂತೆ ಕಾಣಾ" ಎಂದು ಹೀಯಾಳಿಸಿದರೆ ಬಸವಣ್ಣನವರು "ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಕೊಂಬುವದು ಸುರೆಯ ಮಾಂಸ; ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ, ಹೆಂಡದ ಮಡಿಕೆಯ ಹೊರಗೆ ತೊಳೆದಂತೆ" ಎಂದು ಹೀಯಾಳಿಸಿರುವರು.

ಇದೇ ಸ್ಥಳದಲ್ಲಿ ದೇವರದಾಸಿಮಾರ್ಯರು ತನ್ನ ಲಿಂಗಪೂಜೆಯನ್ನು ತಾನೇ ಮಾಡಬೇಕಲ್ಲದೆ ಹೆರವರ ಕೈಯಿಂದ ಮಾಡಿಸಬಾರದಾಗಿ "ಸತಿಯರ ಸಂಗವನು ಅತಿಶಯದ ಗ್ರಾಸವನು ಪೃಥ್ವಿಗೀಶ್ವರನ ಪೂಜೆಯನು ಅರಿವುಳ್ಳೊಡೆ ಹೆರರ ಕೈಯಿಂದ ಮಾಡಿಸುವರೆ" ಎಂದು ತಿಳಿಸಿದರೆ ಬಸವಣ್ಣನವರು "ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಲಿ ಮಾಡಿಸಬಹುದೆ? ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತ ಬಲ್ಲರು? ಎಂದು ತಿಳಿಸಿರುವರು.

ಇದರಂತೆ ವಿಭೂತಿ ರುದ್ರಾಕ್ಷಿ ಮಂತ್ರಸ್ಥಳಗಳ ವಿಷಯವಾಗಿ ಈರ್ವರೂ ಹೇಳಿದ ವಚನಗಳ ಸಾರವು ಸಾಮಾನ್ಯವಾಗಿ ಒಂದೇ ಇರು

ವದು. ಮನುಷ್ಯನಿಗೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ಇರುವವಷ್ಟೇ! ಸ್ಥೂಲಕ್ಕೆ ವಿಧಾನೋಕ್ತ ಸಂಬಂಧಿಸಿದ ಲಿಂಗವು (ಇಷ್ಟ) ಇಟ್ಟಲಿಂಗವು. ಸೂಕ್ಷ್ಮಕ್ಕೆ ಸೂಕ್ಷ್ಮವಾದ ಪಂಚಾಕ್ಷರಗಳಿಂದ ಕೂಡಿದ ಮಂತ್ರಮೂರ್ತಿಯನ್ನು ವಿಧಾನಪೂರ್ವಕ ಅನುಗ್ರಹಿಸುವದು (ಪ್ರಾಣ) ಕೊಟ್ಟಲಿಂಗವು. ಕಾರಣ ಶರೀರಕ್ಕೆ ಸುಜ್ಞಾನರೂಪವಾದ ಆನಂದರೂಪವಾದ ಲಿಂಗವನ್ನು ೨೧ ದೀಕ್ಷಾಪೂರ್ವಕ ಅಳವಡಿಸುವ ಲಿಂಗವೇ (ಭಾವ) ನೆಟ್ಟಲಿಂಗವು. ಹುಟ್ಟಲಿಂಗವನ್ನು ಧರಿಸಿದ ವೀರಶೈವ ಬಾಲಕರು ಲಿಂಗಧರಿಸಿದ್ದು (ಲಿಂಗ+ಆಯುತ) ಲಿಂಗಾಯುತವು. ಆ ಬಾಲಕನಿಗೆ ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಕರಣೇಂದ್ರಿಯಗಳೂ ಸ್ಮರಣಶಕ್ತಿಯೂ ಅನುಕರಣಶಕ್ತಿಯೂ ಹುಟ್ಟಿದಂದಿನಿಂದ ೭ ವರ್ಷಗಳವರೆಗೆ ಬೆಳೆಯುತಲಿದ್ದು ಅವುಗಳಿಂದ ಅವನು ತನ್ನ ಸುತ್ತಲಿನ ಪದಾರ್ಥಗಳ ಜ್ಞಾನವನ್ನು ಸ್ಥೂಲಮಾನದಿಂದ ಮಾಡಿಕೊಳ್ಳುವನು. ಮತ್ತು ಮನೆಯಲ್ಲಿಯು ಹಿರಿಯರ ಆಚರಣೆಯಂತೆ ಕೆಲಮಟ್ಟಿಗೆ ಗೃಹಶಿಕ್ಷಣವನ್ನು ಪಡೆಯುವನು. ಆ ಬಳಿಕ ತಂದೆತಾಯಿಗಳು ಲೌಕಿಕ ಪಾರಮಾರ್ಥಿಕ ಸಂಸ್ಕೃತಿಗೋಸುಗ ಪ್ರಾಥಮಿಕ ಶಾಲೆಗೂ ಮತ್ತು ಸಜ್ಞಾಯದೊಳಗಿನ ಲಿಂಗವನ್ನು ಹೊರಹೊಮ್ಮಿಸಿ ಕರದಲ್ಲಿ ಕೊಡುವ ವಿಧಾನವನ್ನು ಮಾಡಿಸಿ ಪಾರಮಾರ್ಥಿಕ ಶಾಲೆಗೂ ಕಳಿಸುವ ಪರಿಪಾಠವು ಈಗಿನ ಪ್ರಾಥಮಿಕ ಶಾಲೆಗಳಗಿಂತ ಮೊದಲಿದ್ದ ಸಾಲೀಮಠಗಳಿಗೆ ಕಳಿಸುವದಿತ್ತು. ಆಗ್ಗೆ ಸಾಲೆಯ ಅಯ್ಯನವರು ಮತಿಹಿಡಿಸುವ ಗತಿಗಾಣುವ ಈ ಎರಡು ವಿಧಾನಗಳನ್ನು ಸರಿಯಾಗಿ ಸಾಗಿಸಿ ಲೌಕಿಕ ಪಾರಮಾರ್ಥಿಕ ಶಿಕ್ಷಣವನ್ನು ಸಮವಾಗಿ ನಡೆಯಿಸುತ್ತಿದ್ದರು. ಆದರೆ ನೂರೊಂದು ಸ್ಥಳಗಳೊಳಗೆ ಹೇಳಿರುವ ಅಂಗಲಿಂಗಜ್ಞಾನವು ಲಿಂಗಸ್ವಾಯುತಜ್ಞಾನವು. ಇದನ್ನು ಗುರುವು ಶಿಷ್ಯನ ಶಕ್ತಿಪಾತವನ್ನರಿತು ೨೧ ದೀಕ್ಷೆಗಳ ಸಂಸ್ಕೃತಿಯೊಂದಿಗೆ ಅಳವಡಿಸುವನು. ಇದರಲ್ಲಿ ಅರಿತು ಆಚರಿಸುವ ವಿಷಯವೇ ಅದೆ. ಈ ದೀಕ್ಷೆಹೊಂದಿದ ಲಿಂಗಾಯುತನು ಭಕ್ತ ಕುಲದಲ್ಲಿ ಹುಟ್ಟಿರಲಿ ಮಹೇಶನ ವಂಶದಲ್ಲಿ ಹುಟ್ಟಿರಲಿ ಅವರಿಗೆ ಆಚಾರಸ್ಥರೆಂದು ಕರೆಯುವ ರೂಢಿಯದೆ. ಇವರೇ ವಿಶೇಷ ವೀರಶೈವರು. (ಲಿಂಗಸ್ವಾಯುತರು.) ಈ ೨೧ ದೀಕ್ಷೆಗಳಿಗೆ ಹೊರಗಿದ್ದವರು ಸಾಮಾನ್ಯ ವೀರಶೈವರು. (ಲಿಂಗಾಯುತರು.) ಯಾವದೇ ಮತದವನಿರಲಿ ತನ್ನ ಅರಿಷಡ್ವರ್ಗಗ

ಳನ್ನೂ, ಅಷ್ಟಮದಗಳನ್ನೂ, ಸಪ್ತವ್ಯಸನಗಳನ್ನೂ, ತಾಮಸ ವೃತ್ತಿಯನ್ನೂ ಕಳೆದವನು ಭಕ್ತನು. ಕಳೆಯದವನು ಭವಿಯು. ವೀರಶೈವರಲ್ಲಿ ಲಿಂಗಧರಿಸಿದವರೂ ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದರೂ ಶಿವಪೂಜೆಯನ್ನು ಮಾಡಿದರೂ ಶಿವಲಿಂಗದಲ್ಲಿ (ಅತಿ ಪ್ರೇಮ) ಸದ್ಭಕ್ತಿ ಇರದಿದ್ದರೆ ಮತ್ತು ಪರಧನ ಪರದೈವ ಪರಸತಿ ಪರನಿಂದೆಗಳಿಂದ ಕೂಡಿದ್ದರೆ ಇಂಥವರಿಗೆ ಕೆಟ್ಟ ಭವಿಯೆಂದೂ ಮೇಲೆ ಹೇಳಿದಂತೆ ಇತರ ಮತದವರಿಗೆ ಹುಟ್ಟ ಭವಿಗಳೆಂದೂ ಕರೆಯುವ ವಾಡಿಕೆಯದೆ. ಶಿವಶರಣರು ಹುಟ್ಟ ಭವಿಗಳನ್ನು ತಿದ್ದಬಹುದು. ಕೆಟ್ಟ ಭವಿಗಳನ್ನು ತಿದ್ದುವದು ಅಸಾಧ್ಯವೆಂದು ತಮ್ಮ ವಚನಗಳಲ್ಲಿ ಹಾಡಿಕೊಂಡಿದ್ದಾರೆ.

ಈ ವಿಷಯವಾಗಿ ದೇವರದಾಸಿಮಾರ್ಯರು "ಹಂದಿ ಶ್ರೀಗಂಧವ ಹೂಸಿದೊಡೇನು? ಗಂಧ ರಾಜನಾಗಬಲ್ಲದೆ? ನವಿಲು ನಲಿಯಿತ್ತೆಂದಡೆ ಕಾಡಕೋಳಿ ಪುಚ್ಛವ ತೆರಕೊಂಡಂತೆ ಕರ್ಮಿಗಳ ಭಕ್ತಿ; ಹೊರವೇಷದಲ್ಲಿ ವಿಭೂತಿ ರುದ್ರಾಕ್ಷಿಯ ಹೂಸಿದೊಡೇನು? ತೆರನರಿದು ಮರವೆಯ ಕಳೆದು ಮಾತಿನಂತೆ ನೀತಿಯುಳ್ಳೊಡೆ ಅವರನಜಾತರೆಂಬೆ." ಎಂದು ಉಪದೇಶಿಸಿದ್ದಾರೆ.

ಇದೇ ವಿಷಯವಾಗಿ ಬಸವಣ್ಣನವರು "ಅರಿಸಿನವನೇ ಮಿಂದು ಹೊಂದೊಡಿಗೆಯನೇ ತೊಟ್ಟು ಪುರುಷನ ಒಲ್ಲದ ಲಲನೆಯಂತೆ ಆಗಿದ್ದೆನಯ್ಯ. ವಿಭೂತಿಯನೇ ಧರಿಸಿ ರುದ್ರಾಕ್ಷಿಯನೇ ಕಟ್ಟಿ ಶಿವ ನಿಮ್ಮ ಒಲ್ಲದಂತೆ ಆಗಿದ್ದೆನಯ್ಯ" ಎಂದು ಅತಿ ಸೂಕ್ಷ್ಮವಾಗಿ ಅನಾಚಾರಿಗಳಿಗೆ ತಾಕುವಂತೆ ಉಪದೇಶಿಸಿದ್ದಾರೆ.

ದೇವರದಾಸಿಮಾರ್ಯರು "ತನು-ಮನ-ಧನಗಳನ್ನು ಕಾಯದ ಮಾಯದ ಕಷ್ಟ ಸಂಸಾರದಲ್ಲಿ ತೊಡಕಿಸಬಾರದೆಂದೂ ಮತ್ತೊಂದು ವಚನದಲ್ಲಿ "ಮೆಳೆಯ ಮೇಲಣ ಕಲ್ಲು ಜಗದೆರೆಯನಾಗಬಹುದೆ? ಮೆಳೆ ಶಿವಭಕ್ತನಾಗಬಲ್ಲದೆ? ನಿಮ್ಮ ತನುಮನಧನವನರಿಯದಿರ್ದೊಡೆ ಸದುಭಕ್ತರಹರೆ? ಎಂದು ಗೂಢವಾಗಿ ವರ್ಣಿಸಿದರೆ ಬಸವಣ್ಣನವರು "ತನುವ ಕೊಟ್ಟು ಗುರುವನೊಲೈಸಬೇಕು, ಮನವ ಕೊಟ್ಟು ಲಿಂಗವನೊಲೈಸಬೇಕು. ಧನವಕೊಟ್ಟು ಜಂಗಮನ ಓಲೈಸಬೇಕು. ಎಂದು ಪಂಡಿತರಿಗೂ ಪಾಮರರಿಗೂ ತಿಳಿಯುವಂತೆ ಸ್ಪಷ್ಟವಾಗಿ ವಿವರಿಸಿದ್ದಾರೆ.

ಒಟ್ಟಿನಲ್ಲಿ ದೇವರದಾಸಿಮಾರ್ಯರು "ಒಂದರೊಳಡಗಿದ ನೂರೊಂದರ ಪರಿ." "ಆದಿ ಅರ್ಗ ಭೇದ ತನುಗುಣವ ಮೂವತ್ತಾರು ವಿಾರಿ" ಇತ್ಯಾದಿ ವಚನಗಳಲ್ಲಿ ಹಾಡಿದಂತೆ ಅವರು ನಿಜವಾಗಿ ವೀರಶೈವ ಶರಣರೂ ನೂರೊಂದು ಸ್ಥಳಗಳನೊಳಕೊಂಡ ಷಟ್‌ಸ್ಥಲಾನುಭವಿಗಳೂ ಇದ್ದರೆಂಬದು ಬಸವಾದಿ ಪ್ರಮಥಾಚರಣೆಯುಳ್ಳ ಆಚಾರಸ್ಥರಿಗೆ ಅಳವಡದೆ ಇರದು.

ರಾವಬಹಾದ್ದೂರ ಹಳಕಟ್ಟಿಯವರು ಪಾರಮಾರ್ಥಿಕ ಶಾಲೆಯು ಪ್ರವೇಶಿಸುವ ಆಬಾಲವೃದ್ಧರಿಗೆ (ಶಿವಾನುಭವದ ಶಿಶುಗಳಿಗೆ) ವಚನಗಳ ಮಹತ್ವವೂ, ದೇವರ ಅಸ್ತಿತ್ವವೂ, ದೇವರ ಮಹಿಮೆಯೂ, ದೇವರಿದ್ದ ಸ್ಥಳವೂ, ಗೊತ್ತಾಗಲೆಂದು ವಚನಗಳನ್ನು ವಿಭಾಗಿಸಿದ್ದಾರೆ. ಆದರೆ ನಿಜವಾಗಿ ಷಟ್‌ಸ್ಥಲಾನುಭವಿಗಳು ವಿಚಾರಿಸಿದರೆ ದೇವರ ಸಂಬಂಧದ ವಚನಗಳು ಅಂಗಲಿಂಗಸ್ಥಳಗಳೊಳಗಿನ ಒಂದೊಂದು ಸ್ಥಳಕ್ಕೆ ಸಲ್ಲುತ್ತವೆ. ಉದಾಹರಣಾರ್ಥವಾಗಿ "ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ" ಇದು ಪಿಂಡಾಕಾಶ ಸ್ಥಲದೊಳಗಿನ ವಚನವು. "ಆಡಬಾರದ ಬಯಲು..........ಬೈಲೊಳಗೆ ಅಡಗಿಪ್ಪ ಭೇದವ ಈ ಲೋಕದ ಜಡರೆತ್ತ ಬಲ್ಲರೈ" ಇದು ಬಿಂದ್ವಾಕಾಶ, ಮಹದಾಕಾಶ ಸ್ಥಲಗಳ ಸಮ್ಮಿಶ್ರ ವಚನವು.

"ನಾನೊಂದು ಸುರಗಿಯನೇನೆಂದು ಹಿಡಿಯುವೆ ಏನಕಿತ್ತೇನನಿರಿಯುವೆ ಜಗವೆಲ್ಲ ನೀನೇಯಾಗಿಪ್ಪೆಯಯ್ಯಾ."

"ಬಯಲ ಬಣ್ಣವ ಮಾಡಿ ಸ್ವಯವ ನಿಲವ ಮಾಡಿ ಸುಳಿವಾತನ ಬೆಡಗ ಬಲ್ಲವರಾರೈ."

"ಬಿಂದುವಿನೊಳಗೆ ನಾದ ಸಂದಿರ್ದ ಭೇದವನು ಹೊಂದಿಯೂ ಹೊಂದದಿರ್ದ ಭೇದವನು ಲಿಂಗದೊಳಗೆ ಶರಣ ಸಂದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರೈ."

ಈ ಸೂತ್ರರೂಪವಾದ ವಚನಗಳಿಗೆ ಬೆಲೆಯೇ ಇಲ್ಲ. ಇಂಥ ವಚನಗಳ ಅಳವು ಶಿವಶರಣರ ಅಥವಾ ಬಸವಾದಿ ಪ್ರಮಥರ ಆಚರಣೆಯನ್ನು ಅನುಭವಿಸುವ ಅನುಭಾವಿಗಳಿಗಲ್ಲದೆ ಇತರರಿಗೆ ಸಾಧ್ಯವೇ ?

ಇದನ್ನು ತಾನೇ ಬಲ್ಲೆನೆಂದು ತೋರಿಸುವ ಗೌಪ್ಯವಾದ ವಚನಗಳು ಶಿವಶರಣರ ಮಾರ್ಗಾನುಯಾಯಿಗಳಿಗೆ ಗೋಚರಿಸದೆ ಇರವು.

ಕ್ರಿಯಾಲಿಂಗಧಾರಣ ಸ್ಥಳದಲ್ಲಿ "ಕರಸ್ಥಲವೆಂಬ ದಿವ್ಯ ವಿಭೂತಿಯೊಳಗೆ ಮಹಾಘನಲಿಂಗ ನಿಕ್ಷೇಪವಾಗಿದೆ....... ..ನಮ್ಮ ಹೆತ್ತಯ್ಯನ ಹೊಳವ ಕಂಡು ತಳವೆಳಗಾದೆನು."

"ಉಂಕೆಯು ನಿಗುಚಿ ಸರಿಗೆಯು ಸಮಗೊಳಿಸಿ.......ಈ ಸೀರೆಯ ನೈದವ ನಾನೋ ನೀನೋ?"

"ನಿಡಿದೊಂದು ಕೋಲವನು ಕಡಿದು ಎರಡು ಮಾಡಿ ಅಡಿಯ ಹೆಣ್ಣು ಮಾಡಿ ಒಡತನವ ಗಂಡು ಮಾಡಿ ನಡುವೆ ಹೊಸೆದೊಡೆ ಹುಟ್ಟಿದ ಕಿಚ್ಚು ಹೆಣ್ಣೋ ಗಂಡೋ."

"ಒಡಲುಗೊಂಡವ ನಾನು ಪ್ರಾಣವಿಡಿದವ ನೀನು......ನಿನ್ನ ಪ್ರಾಣ ಎನ್ನಲ್ಲಡಗಿದ ಭೇದವ ನೀ ಬಲ್ಲೆ ನಾಬಲ್ಲೆನೈ"

ಈ ತರದ ಸೂತ್ರರೂಪವಾದ ದೇವರದಾಸಿಮಾರ್ಯರ ವಚನಗಳನ್ನು ಅಳವಡಿಸಿಕೊಂಡ ಬಸವಣ್ಣನವರು ಕಲ್ಲಿಲ್ಲದ ಒಲೆಯು ಹೂಡಿ ಅವಕಾಶವಿಲ್ಲದ ಪಾತ್ರೆಯು ತಂದು ಉರಿ ನೀರು ಕಾಳುಗಳಿಲ್ಲದೆ ಅಡಿಗೆಯ ಮಾಡಿದ ಅನುಭವ ಪ್ರಸಾದವನ್ನು ಭಾಷ್ಯರೂಪದಿಂದ ಶಿವಾನುಭವಿಗಳಿಗೆಲ್ಲ ಮನವರಿಕೆಯಾಗುವಂತೆ ತಮ್ಮ ವಚನಗಳಲ್ಲಿ ಹಾಡಿದ್ದನ್ನು ಇಂದು ವೀರಶೈವ ಸಮಾಜವೆಲ್ಲ ಬದುಕಿ ಬಾಳಿ ಉಳಿದುದೇ ಸಾಕ್ಷಿಯಲ್ಲವೇ?

ಲಿಂಗಾಂಗ ಸಾಮರಸ್ಯ ಜ್ಞಾನಿಗಳಾದ ದೇವರದಾಸಿಮಾರ್ಯರು ತಮ್ಮ ಸತ್ಕಾಯಕದಿಂದ ಅಂಗರೂಪೀ ನಿಡಿದಾದ ನೂಲ ಎಳೆಗಳನ್ನು ಹಾಸುಮಾಡಿ ಲಿಂಗರೂಪೀ ನೂಲ ಎಳೆಗಳನ್ನು ಹೊಕ್ಕುಮಾಡಿ ಕುಶಲತನದಿಂದ ನೆಯ್ದು ಕ್ರಿಯಾಜ್ಞಾನರೂಪೀ ವಸ್ತ್ರವನ್ನು ತಯಾರಿಸಿ ಗುರುವು ಹುಟ್ಟಲಿಂಗವನ್ನು ತನ್ನ ಮಂತ್ರಶಕ್ತಿಯಿಂದ ಶಿಲೆಯಲ್ಲಿ ಲಿಂಗಕಳೆಯನ್ನು ತುಂಬಿದ ಬಳಿಕ, ಆ ಲಿಂಗವನ್ನು ವಸ್ತ್ರ (ಹುದುಗ)ದಲ್ಲಿ ಹುದುಗಿಸಿ ತಾಯಿಯ ಗರ್ಭಕ್ಕಾಗಲಿ, ಅಥವಾ ಅದೇ ಹುಟ್ಟಿದ ಶಿಶುವಿಗಾಗಲಿ ಲಿಂಗಸೂತ್ರವಿಡಿದು ವಿಧಾನಪೂರ್ವಕ ಲಿಂಗಧಾರಣ ಮಾಡುವ ಪರಿ

ಪಾಠವು ೬೩ ಪುರಾತನರ ಕಾಲದಿಂದಲೂ ಬಂದಿರಲಿಕ್ಕೆ ಬೇಕು. ಈ ಸಂಗತಿಯನ್ನರಿತು ದೇವರದಾಸಿಮಯ್ಯರು ವೀರಶೈವ ಶಿಶುಗಳಿಗೂ ವಟುಗಳಿಗೂ ಗೃಹಸ್ಥರಿಗೂ ಭಕ್ತರಿಗೂ ಮಾಹೇಶ್ವರರಿಗೂ ವಸ್ತ್ರದಾನ ಮಾಡುವದರಲ್ಲಿಯೇ ತಮ್ಮ ಆಯುಷ್ಯವನ್ನು ಕಳೆದರು. ಇವರ ಸಂತತಿ ಯವರಾದರೂ ನೇಗಿಯ ಕಾಯಕವನ್ನು ಮಾಡುತ್ತ ವೀರಶೈವ ಸಮಾಜ ಕ್ಕೇನೇ ಲಿಂಗದ ವಸ್ತ್ರವನ್ನು ಪೂರೈಸುತ್ತ ಬಂದಿರುವರು. ದೇವರದಾ ಸಿಮಯ್ಯರು ಲಿಂಗಾಂಗಿಗಳಿಗೆ ವಸ್ತ್ರರೂಪೀ ಲಿಂಗವನೇ ಹಾಸಿ ಲಿಂಗ ವನೇ ಹೊದ್ದು ಶಿವಯೋಗ ನಿದ್ರೆಯೊಳು ಲೋಲುಪರಾಗಲು ಅನು ಕೂಲ ಮಾಡಿಕೊಟ್ಟದ್ದು ಐಹಿಕ ಪಾರಮಾರ್ಥಿಕಗಳೆರಡಕ್ಕೂ ಸಾಧನೀ ಭೂತವಾಗಿದೆ.

ಇತ್ತ ಮುಸಲ್ಮಾನರ ಕಾಲದಿಂದ ಬೆಳ್ಳಿಯ ಚೌಕುಗಳೂ ಗುಂಡು ಗಡಿಗೆಗಳೂ ಬಳಿಕೆಯಲ್ಲಿ ಬರಹತ್ತಿದವು. ಲಿಂಗರೂಪೀ ಒಂದೆಳೆಯಿಂದ ಗುರುಲಿಂಗಜಂಗಮ ರೂಪೀ ಮುಪ್ಪುರಿಯಗೂಡಿಸಿ ಮುಪ್ಪುರಿಯ ಮೂರು ಪಟ್ಟಿನಿಂದ (ನವಲಿಂಗಿಯ) ಹುರಿ ಮಾಡಿದನಂತರ ೭ ಮಡಿ ಗೂಡಿಸಿ ೬೩ ಪುರಾತನರ ಸೂತ್ರವಿಡಿದು ಶಿವದಾರ ಮಾಡಿದ ಸಂಗತಿಯು ಅರಿಗೆ ಗೊತ್ತಿಲ್ಲ?

---

# ಶಿವಾನುಭವದ ವಚನಗಳು.

ತನುವು ಕರಗದೆ, ಮನವು ಬೆರೆಯದೆ, ಧನವು ಕೊರಗದೆ, ಬುದ್ಧಿ ಒರೆಯದೆ, ಅರಿವು ವೈದೋರದೆ, ಜ್ಞಾನವು ತುಂಬಿ ತುಳುಕದೆ, ಭಾವವು ಬಲಿಯದೆ, ಮೂಲವು ಕಣ್ದೆರೆಯದೆ, ವಚನಗಳ ಓದಿ ಒದರದಿರೆಂದ ನಮ್ಮ ಸಿದ್ಧೇಶ್ವರಾ ॥೧॥

ಲಿಂಗದ ಇರವು ಶಿರದೊಳು ಸೇರದೆ, ಲಿಂಗದ ಬರವು ಭಾವದೊಳು ಬಿಂಬಿಸದೆ, ಲಿಂಗದ ತೆರವು ಮನದೊಳು ಮೂಡದೆ, ಲಿಂಗದ ಅರಿವು ಹೃದಯ-ದೊಳು ಅಚ್ಚೊತ್ತಿದಂತೆ ಆಗದೆ, ಲಿಂಗದ ಕುರುಹು ಕರದೊಳು ಕಾಣದೆ, ಬರಿವಾತುಗಳ ಬಳಸದಿರೆಂದ ನಮ್ಮ ಸಿದ್ಧೇಶ್ವರಾ ॥೨॥

ಮಾತಿನ ಮಾಲೆ, ನೀತಿಯ ಶಾಲೆ, ರೀತಿಯ ಓಲೆ, ಗೀತೆಯ ಲೀಲೆಗಳಿಗೆ ಮನಸೋಲದೆ, ಮಾತಿನಂತೆ ನೀತಿ, ನೀತಿಯಂತೆ ರೀತಿಯುಳ್ಳವರ ಗೀತೆಯ ಪಾಡಿ ಆಡೆಂದ ನಮ್ಮ ಸಿದ್ಧೇಶ್ವರಾ ॥೩॥

ಶಿವಶರಣರ ಉಲಿವು ಭಕ್ತಿಯ ತಳವು, ಅಷ್ಟಾವರಣದ ನಿಲವು ಅನುಭಾವದ ಅಳವು, ಪಂಚಾಚಾರದ ಬಲವು ವೀರಶೈವದ ಕೊಳವು; ಇವುಗಳ ಬೆಳಗಿನೊಳು ಇಳುಹಿ ಉಳಿಸಯ್ಯ ಎನ್ನ ಸಿದ್ಧೇಶ್ವರಾ ॥೪॥

ತನು ವಿಕಾರ ತಡೆಯುದು, ಮನವಿಕಾರ ಮಡಿಯುದು, ಧನವಿಕಾರ ದಣಿಯುದು, ತನುಮನಧನಗಳನು ಗುರುಲಿಂಗ ಜಂಗಮಕ್ಕೆ ಕೊಟ್ಟು ಕೊಂಬ ಅನುವನು ಅಳವಡಿಸಿ ಬಳಸಿದ ಬ್ರಹ್ಮಚಾರಿಗಳ ಉಂಡ ಉಪವಾಸಿಗಳ ತೋರಿ ಬದುಕಿಸಯ್ಯ ಎನ್ನ ಸಿದ್ಧೇಶ್ವರಾ ॥೫॥

— ಶಿವಶರಣರ ಶಿಶು.

# ಗುರು ಲಿಂಗ ಜಂಗಮ.

(ಲೇ.— ಬಸವಪ್ಪ ಚನ್ನಪ್ಪ ಪಟ್ಟೇದ—ವಂಟಮುರಿ)



[ಹಿಂದಿನ ಸಂಚಿಕೆಯಿಂದ ಮುಂದೊರೆದದ್ದು]

## ಸಾಂಪ್ರತ ಸ್ಥಿತಿಯೂ ತತ್ಪರಿಹಾರೋಪಾಯವೂ

ವೀರಶೈವರಿಗೆ ಲಿಂಗವೇ ಮುಖ್ಯಾಧಾರವು. ಅದು ಗುರುವಿನಿಂದ ದೊರೆಯುತ್ತದೆ. ಜಂಗಮನಿಂದ ಸಮೀಚೀನವಾಗಿ ಅರಿಯಲಾಗುತ್ತದೆ. ಕೂಸಿಗೆ ಅದು ಜನ್ಮದೊಡನೆಯೇ ಪ್ರಾಪ್ತವಾಗುವದು. ಆದರೆ ಅದರ ಸಂಬಂಧವಾದ ಯಾವ ತಿಳುವಳಿಕೆಯೂ ಅದಕ್ಕೆ ಇರುವದಿಲ್ಲ. ಮುಂದೆ ದೊಡ್ಡದಾಗಿ ತಕ್ಕಮಟ್ಟಿಗೆ ಬುದ್ಧಿ ತಿಳಿಯಹತ್ತಿತೆಂದರೆ, ಗುರುವು ಆ ಬಾಲಕನಿಗೆ ಶಿವದೀಕ್ಷೆ ಮಾಡಿ, ಅದರ ಮುಖಾಂತರ ಲಿಂಗದ ನಿಜ ಸ್ವರೂಪವನ್ನು ತಿಳಿಸಿಕೊಟ್ಟು, ಅವನಲ್ಲಿ ಲಿಂಗ ಭಕ್ತಿಯನ್ನು ಹುಟ್ಟಿಸಿ, ಸ್ಥೂಲಮಾನದ ತೀರ ಸಾದಾ ರೀತಿಯಿಂದ, ಲಿಂಗವನ್ನು ಪೂಜಿಸಲಿಕ್ಕೆ ಹಚ್ಚುವನು. ಹಾಗು ಅವನು ಸದಾಚಾರ ಸದ್ಗುಣಗಳುಳ್ಳವನಾಗುವಂತೆ ಯತ್ನಿಸುವನು. ಮನೆಯ ಹಿರಿಯರಾದರೂ ಲಕ್ಷಿಸುವರು. ಹೀಗಾಗಿ ಅದು ಹೆಚ್ಚೆಚ್ಚು ವೃದ್ಧಿಗೊಳ್ಳುತ್ತ ಕ್ರಮವಾಗಿ ಬಲಿಯುವಂತೆ ಮಾಡಿ, ಕಡೆಗೆ ಕ್ರಿಯೆಯನ್ನು ಹಿಡಿಸಿ (ನಿಷ್ಠಾ ಪೂರ್ವಕವಾಗಿ ಲಿಂಗ ಪೂಜೆಯನ್ನು ಅಷ್ಟವಿಧಾರ್ಚನೆ ಶೋಡಷೋಪಚಾರಗಳಿಂದ ಮಾಡುವಂತೆ ಆಣಿಗೊಳಿಸಿ ) ಶಿವ ಮಾರ್ಗದ ಬಾಹ್ಯ-ಸ್ಥೂಲ- ಜ್ಞಾನವನ್ನು ಮಾಡಿಕೊಡುವನು, ಅಂದರೆ ಮಾರ್ಗ ಕ್ರಿಯೆಯಲ್ಲಿ ಶಿಷ್ಯನನ್ನು ನುರಿಸುವನು. ಈ ಕಾಲದಲ್ಲೆಲ್ಲ ಭಕ್ತನು ಬರುಬರುತ್ತ ಸದಾಚಾರ ಸತ್ ಕ್ರಿಯಾವಂತನಾಗುತ್ತ ಮುಂಬರಿದಿರುವನು. ಇಲ್ಲಿಗೆ ಗುರುವಿನ ಕರ್ತವ್ಯ ತೀರಿತು. ಮುಂದೆ ಜಂಗಮನ ಕಾರ್ಯಕ್ಕೆ ಆರಂಭವಾಗುವದು. ಭಕ್ತನ ಈ ವಿಧದ ಯೋಗ್ಯತೆಯನ್ನು ಕಂಡು ಅವನ ಒಲವಿಗನುಸರಿಸಿ ಜಂಗಮನು ಜ್ಞಾನೋಪದೇಶ ಮಾಡಿ, ಮೀರಿದ ಕ್ರಿಯೆಯನ್ನು ಹಿಡಿಸಿ, ಷಟ್‌ಸ್ಥಲ ಜ್ಞಾನ ಮಾರ್ಗದಲ್ಲಿ ಹೆಚ್ಚಾಗಿ ಪ್ರಗತಿಪಡಿ

ಸುತ್ತ ಹೋಗಿ, ಕೊನೆಗೆ ಶಿವ ಸಾನ್ನಿಧ್ಯವನ್ನು (ಲಿಂಗಾಂಗ ಸಾಮರಸ್ಯವನ್ನು) ಒದಗಿಸುವನು. ಈ ರೀತಿ ಶಿವಭಕ್ತನು ಗುರು ಜಂಗಮರ ಕೃಪೆಯಿಂದ ತನ್ನ ಧ್ಯೇಯವನ್ನು ಸಾಧಿಸಿ ಮುಕ್ತನಾಗುವನು. ಆದುದರಿಂದಲೇ ಲಿಂಗಾಯತರಲ್ಲಿ ಅವರಿಗೆ ಇಷ್ಟೊಂದು ಪ್ರಾಶಸ್ತ್ಯವುಂಟಾಗಿದೆ. ಅದನ್ನು ಕಾಯ್ದುಕೊಂಡು ಹೋಗಬೇಕಾದರೆ, ಅವರು ಮಹಾಜ್ಞಾನಿಗಳೂ, ಸದಾಚಾರ ಸಂಪನ್ನರೂ, ಕರ್ತವ್ಯಕ್ಷಮರೂ, ಕಾರ್ಯದಕ್ಷರೂ ಆಗಿರಬೇಕೆಂಬುದು ಸ್ಪಷ್ಟವೇ ಅದೆ. ಆದರೆ ಈಗ ಹಾಗಿರುವರೇ? ಪಟ್ಟಚರಮೂರ್ತಿಗಳಾಗಲಿ, ವಿರಕ್ತರಾಗಲಿ ಇಂತಹ ಯೋಗ್ಯತೆಯನ್ನು ಹೊಂದಿ ಕರ್ತವ್ಯ ನಿಷ್ಠೆಯನ್ನು ತೋರಿಸುತ್ತಿರುವರೇ? ಬರೇ ಸೋಗು ಮಾಡಿಕೊಂಡು, ವಿಷಯಗಳಲ್ಲಿಯೇ ಮನಸ್ಸು ಸಿಕ್ಕಿಸಿ ವಿಷಯಾಪೇಕ್ಷಿಗಳೂ ವಿಷಯ ಭೋಗಿಗಳೂ ಆಗಿರುವರು. ತಾವು ಬ್ರಹ್ಮಚಾರಿಗಳೂ ವಿರಕ್ತರೂ ಎಂಬ ಎಚ್ಚರವಿನಿತಿನಿತಾದರೂ ಇಟ್ಟುಕೊಳ್ಳದೆ, ಎಲ್ಲಿ ನೋಡಿದಡಲ್ಲಿ ತೊಟ್ಟಿಲುಗಳೇ ನೇತಾಡುವಂತೆ ಮಾಡುತ್ತಿರುವರು. ಕರ್ತವ್ಯದ ಸ್ಮರಣೆಯಂತೂ ಉಳಿದೇ ಇಲ್ಲ. ಸ್ವಂತದ ಪ್ರಪಂಚಕ್ಕೆ ಕೊರತೆಯಾದಾಗ ಮಾತ್ರ ಶಿಷ್ಯರ ಮನೆಗಳಿಗೆ ಎಡತಾಕಿ ಬರೇ ಕಾಣಿಕೆಗಾಗಿ ಕಾಡುವರು. ಇವರೆಂತಹ ಗುರು ಜಂಗಮರು? ಎಲ್ಲಿಯೋ ಅಪ್ಪಿತಪ್ಪಿ ಅಲ್ಪಸ್ವಲ್ಪ ಜನರು ತಮ್ಮ ಧರ್ಮವನ್ನು (ಕರ್ತವ್ಯವನ್ನು) ನೆನೆಸುತ್ತಿರಬಹುದು. ಆದರೆ ಒಟ್ಟಿನಲ್ಲಿ ನೋಡಿದರೆ, ಅತಿಶಯ ನಿರಾಶಾಜನಕ ಶೋಚನೀಯ ಸ್ಥಿತಿ ಇರುವದೇನೋ ಸುಳ್ಳಲ್ಲ. ಇವರಿಂದ ನಾವು (ವೀರಶೈವ ಸಮಾಜವು) ಆದಾವ ಪ್ರಸಾದವನ್ನು ಪಡೆಯಬೇಕು? ಪ್ರಸಾದವಿಲ್ಲದಿದ್ದರೆ ಪಾದೋದಕ ಸ್ವೀಕರಿಸುವದೆಂತು? ಇಷ್ಟಾಗಿಯೂ ಇವರ ಮೇಲ್ವಿಚಾರಕರಾದ ಗುರು ಪೀಠಸ್ಥರೂ ಸಿಂಹಾಸನಾಧೀಶ್ವರರೂ ಎಲ್ಲಿರುವರೋ?! ಅವರು ಜಗದ್ಗುರುಗಳೆಂದು ಹೇಳಿಕೊಳ್ಳುತ್ತ, ಸಂಸ್ಥಾನಿಕರಂತೆ ಐಶ್ವರ್ಯ ನಿಮಗ್ನರಾಗಿ ಡಂಭಾಚಾರಕ್ಕೆ ಭವಿಗಳೋಪಾದಿ ಮೆಚ್ಚಿ, ಒಂದಿಲ್ಲೊಂದು ರೀತಿಯಿಂದ ವಿಷಯಭೋಗ ನಿರತರಾಗಿ ಮೆರೆಯುತ್ತಿರುವುದರಲ್ಲೇ ದಂಗಾಗಿರುವರು. ಅದರಲ್ಲಿ ಸಮಾಜದ ಕಡೆಗಾಗಲೀ ತಮ್ಮ ಶಾಖಾ ಮಠಗಳ ಕಡೆಗಾಗಲೀ ಇಣಿಕಿಕ್ಕಿ ನೋಡಲಿಕ್ಕೆ ಅವರಿಗೆ ಅವಸರವೆಲ್ಲಿದೆ? ಒಟ್ಟಿನಲ್ಲಿ ಹೇಳುವದೇನಂದರೆ ಎಲ್ಲರೂ ಒಂದೇ ಮಾಲೆಯ ಮಣಿಗಳು! ಹೀಗೆ ಬರೇ ಹೆಸ

ರಿಗೆ ಮಾತ್ರ ಗುರುಗಳಾಗಿ ಉಳಿದು, ಸಮಾಜದಲ್ಲಿ ತಮಗೆ ನಿಜವಾದ ಗುರು ಜಂಗಮರಂತೆ ಮೇಲ್ಮೆಯನ್ನು ಬಯಸಿದರೆ ಅದು ಕೇವಲ ವ್ಯರ್ಥ. "ಕಷ್ಟಕ್ಕೆ ಕರೆಯಬೇಡಿರಿ, ಊಟಕ್ಕೆ ಮರೆಯಬೇಡಿರಿ" ಎಂಬಂತೆ ಅವರ ಸ್ಥಿತಿಯಾಗುವದು. ಅಯ್ಯಗಳೂ ಗುರುವಿರಕ್ತರೂ ಎಲ್ಲರೂ ತಾವು ಹೊಂದುವ ಬೇರೆ ಬೇರೆ ಧಾರ್ಮಿಕ ಸಂಸ್ಕಾರ (ದೀಕ್ಷೆ) ಮಾತ್ರ ದಿಂದಲೇ, ತತ್‌ಕ್ಷಣದಲ್ಲಿ ಆ ಯೋಗ್ಯತೆಯು ತಮ್ಮಲ್ಲಿ ಒಡಮೂಡು ತ್ತದೆಂದು ತಿಳಿದು ಬಿಟ್ಟದ್ದಾರೆ. ಅಷ್ಟರಿಂದಲೇ ಸಮಾಜವು ತಮ್ಮನ್ನು ವಂದನ ಪೂಜನಾದಿಗಳಿಂದ ಸತ್ಕರಿಸಬೇಕೆಂದು ಬಯಸುತ್ತಾರೆ. ಇದು ಶುದ್ಧ ತಪ್ಪು. "ಗುಣಾಃ ಪೂಜಾಸ್ಥಾನಂ..." ಎಂಬಂತೆ ತಮ್ಮಲ್ಲಿ ಆಯಾ ಪದವಿಗೆ ತಕ್ಕಂತೆ ಅವಶ್ಯವಾದ ಗುಣಕರ್ಮಗಳೂ ಆಚಾರವೂ ನೆಲಿಸುವ ಹಾಗೆ ಮಾಡಿಕೊಳ್ಳದಿದ್ದರೆ ಎಷ್ಟು ಮಾತ್ರವೂ ಉಪಯೋ ಗವಾಗದು. ಇಂತಹ ನಾಮಮಾತ್ರ ಗುರುಜಂಗಮರಿಂದಲೇ ಸಮಾ ಜವು ಈಗಿನ ದುರವಸ್ಥೆಗೆ ಇಳಿದಿದೆ.

## ಜನ್ಮತಃ ಶ್ರೇಷ್ಠತ್ವ

ಜನ್ಮದಿಂದಲೇ ಶ್ರೇಷ್ಠತ್ವವು ಯಾರಿಗೂ ಬರಲಾರದು. ಆದರೂ ಅಯ್ಯಗಳೂ ಗುರುಜಂಗಮರೂ ತಾವು ಮಿಕ್ಕ ಲಿಂಗಾಯತರಿಗಿಂತ ಹುಟ್ಟಾ ಹೆಚ್ಚಿನವರೆಂದೂ ಪೂಜ್ಯರೆಂದೂ ತಿಳಿಕೊಂಡಿದ್ದಾರೆ. ಆದರೆ ಇಂತಹ ಯಾವ ಜಾತಿಗೂ ವೀರಶೈವರಲ್ಲಿ ಎಡೆಯಿಲ್ಲೆಂಬದನ್ನು ಅವರು ನೆನೆಯಬೇಕು. ಶ್ರೀ ಬಸವೇಶ್ವರರು---

೧. "ದೇವ ದೇವ ಬಿನ್ನಪವ ಅವಧಾರು, ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಭಕ್ತರಾದವರನೆಲ್ಲರನೊಂದೇ ಎಂಬೆ, ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರ ಒಂದೇ ಎಂಬೆ; ಹೀಗೆಂದು ನಂಬುವದೆನ್ನ ಮನವು, ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯಷ್ಟು ಸಂದೇಹವು ಳ್ಳರೆ ಹಲು ದೋರಿ ಮೂಗು ಕೊಯ್ಯು ಕೂಡಲಸಂಗಮ ದೇವಾ"

೨. "ಆವ ಕುಲವಾದಡೇನು? ಶಿವಲಿಂಗವಿದ್ದವನೇ ಕುಲ ಜನು, ಕುಲವನರಸುವರೇ ಜಾತಿ ಶಂಕರರಾದ ಮೇಲೆ?

ಒಕ್ಕುದ ಕೊಂಬೆನವರಲ್ಲಿ, ಕೂಸ ಕೊಡುವೆ, ಕೂಡಲಸಂಗ
ಮದೇವಾ! ನಂಬುವೆ ನಿಮ್ಮ ಶರಣರು"

ಎಂದು ಹೇಳಿದ್ದಾರೆ. ಆದುದರಿಂದ ಅಯ್ಯತನವಾಗಲಿ ಗುರುತ್ವವಾಗಲಿ ಜಂಗಮತ್ವವಾಗಲಿ, ಮೇಲೆ ಉಲ್ಲೇಖಿಸಿದಂತೆ ಗುಣವಿಶಿಷ್ಟವಾಗಿಯೇ ಇರುತ್ತವೆ. ಯಾವ ವೀರಶೈವರು ಅವುಗಳನ್ನು ಪಡೆಯುವರೋ ಅವರು ಆಯಾ ಪದವಿಗೆ ತಕ್ಕವರಾಗುತ್ತಾರೆ. ಅವರ ಕಾಯಕವು ಯಾವದಿದ್ದರೂ ಅದರಿಂದ ಕುಂದು ಬರಲಾರದು. ಅಂತೇ ಹಿಂದಿನ ಕಾಲದಲ್ಲಿ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮೇದಾರ ಕೇತಯ್ಯ, ಗಾಣದ ಕನ್ನಪ್ಪಯ್ಯ, ಜೇಡರ ದಾಸಿಮಯ್ಯ, ಡೋಹರ ಕಕ್ಕಯ್ಯ, ಕುಂಬಾರ ಗುಂಡಯ್ಯ, ಮಾದರ ಚನ್ನಯ್ಯ, ನುಲಿಯ ಚಂದಯ್ಯ, ಸಮಗಾರ ಹರಳಯ್ಯ, ಮೋಳಿಗೆಯ ಮಾರಯ್ಯ, ಇವರೇ ಮೊದಲಾದವರು ಅಯ್ಯಗಳೆಂದು ಪ್ರಸಿದ್ಧರಾಗಿ, ಗುರು ಜಂಗಮರಿಗಿಂತಲೂ ಮೇಲಾಗಿಯೇ ಪ್ರಕಾಶಿಸಿದರು. ಅವರ ಯೋಗ್ಯತೆ ಯೆತ್ತ! ಈಗಿನ ಹೆಸರಿಟ್ಟುಕೊಂಡ ಗುರು ಜಂಗಮರ ಯೋಗ್ಯತೆ ಯೆತ್ತ? ಅಷ್ಟೈಶ್ವರ್ಯ ಸಂಪನ್ನನಾದ ಶ್ರೀಮಂತನಿಗೂ, ಶ್ರೀಮಂತನೆಂಬ ಹೆಸರಿಟ್ಟುಕೊಂಡ ಅಷ್ಟದರಿದ್ರನಿಗೂ ಏನು ಸಂಬಂಧ? ಬರೀ ಶ್ರೀಮಂತನೆಂಬ ಶಬ್ದ ಮಾತ್ರ ಸಂಬಂಧವೇ ವಿನಾ, ಅವನಾ ಇವನಾ ಸುಖಭೋಗಾದಿಗಳಲ್ಲಿ ಭೂಮ್ಯಾಕಾಶದಷ್ಟು ಅಂತರವು! ಇಲ್ಲಿಯೂ ಅದೇ ನ್ಯಾಯ. ಈ ವರ್ಗವು ಇಂತಹ ದುರವಸ್ಥೆಗೆ ಒಳಗಾಗುವದು ಯಾರಿಗೆ ತಾನೇ ಶ್ರೇಯಸ್ಕರ! ಅದನ್ನು ಹೋಗಲಾಡಿಸಲಿಕ್ಕೆ ಎಲ್ಲರೂ ಪ್ರಯತ್ನಿಸಬೇಕು.

ಈಗ ಸಮಾಜದಲ್ಲಿ ಅಯ್ಯಗಳು ಭಕ್ತರು ಎಂಬೆರಡು ಜಾತಿಗಳಂತೆಯೇ ಪರಿಣಮಿಸಿ ನಡೆದವೆ. ಭಕ್ತರೆನಿಸುವವರು ಅಯ್ಯಗಳ ಯಾವ ಯೋಗ್ಯತೆಯನ್ನೂ ನೋಡದೆ ಐಯ್ಯನವರೆಂದರೆ ಸಾಕು, ಬಿದ್ದು ಸಾಯುತ್ತಾರೆ. ಅವನು ಹುಡುಗನಿರಲಿ ದೊಡ್ಡವನಿರಲಿ, ಅಕ್ಷರಸ್ಥನಿರಲಿ ಅಕ್ಷರ ಶತ್ರುವಿರಲಿ, ಓದುಕೊಂಡವನಿರಲಿ ಓದು ಅರಿಯದವನಿರಲಿ, ಆಚಾರವಂತನಿರಲಿ ಅನಾಚಾರಿ ಇರಲಿ, ಮಠಪತ್ತಿ ಇರಲಿ, ಪೂಜಾರಿ ಇರಲಿ, ಕಾಯಕದವನಿರಲಿ, ಕಾಂತಿ ಧರಿಸುವವನಿರಲಿ; ಅವರಿಗೆ ಬಾಗುವದೇನು! ನಮಸ್ಕರಿಸುವದೇನು! ಉಣಿಸುವದೇನು! ತಿನಿಸುವದೇನು!

ಗದ್ದಿಗೆಯ ಮೇಲೆ ಕುಳ್ಳಿರಿಸುವದೇನು! ಪಾದೋದಕ ಸ್ವೀಕರಿಸುವದೇನು! ಅದನ್ನೆಷ್ಟು ವರ್ಣಿಸಿದರೂ ತೀರದು. ಅದರೊಳಗೇ ಪಡದಪ್ಪ ಚರಂತೆಪ್ಪ ವಿರಕ್ತರು ಎಂದು ತಿಳಿದರೆ ತೀರೇ ಹೋಯಿತು, ಅವರ ಭಕ್ತಿಗೆ ಮಿತಿಯೇ ಉಳಿಯುವುದಿಲ್ಲ!! ಗದ್ದಿಗೆಯಲ್ಲಿ ಕುಳಿತು ತೀರ್ಥಪ್ರಸಾದ (ಕರುಣಾಮೃತ) ಕೊಡುವ ಯೋಗ್ಯತೆಯು, ಬರೇ ಅಯ್ಯಾಚಾರ ಹೊಂದಿದ ಕೂಡಲೇ ಹಸುಗೂಸಿಗಾದರೂ ಅದು ಬಂದೇ ಬಿಡುತ್ತದೆ. ಹೀಗೆ ಬಹುಜನ ಸಮಾಜವೇ (ಇದರಲ್ಲಿ ಸ್ತ್ರೀ ಸಮಾಜವೇ ವಿಶೇಷ) ಅಜ್ಞಾನವಶರಾಗಿ ಮನಬಂದಂತೆ ಕುಣಿದಾಡಹತ್ತಿದರೆ, ಆ ಅಯ್ಯ ಗುರುಜಂಗಮರಿಗೆ, ತಾವು ಸುಧಾರಿಸಬೇಕು ಎಂಬ ಅಪೇಕ್ಷೆಯಾದರು ಏಕೆ ಹುಟ್ಟಬೇಕು? ಹೇಗೂ ನಿದ್ದೆ ಬಂದರಾಯಿತು, ಆ ಮಗ್ಗಲೇನು ಈ ಮಗ್ಗಲೇನು! ಅಯ್ಯಗಳ ಬಹುಭಾಗವು ಬರೇ ಲೌಕಿಕ ಸ್ವಾರ್ಥವೊಂದನ್ನೇ ಈಗ ನೋಡುತ್ತಿರುವದು. ಅದು ಬಿಸಿಹತ್ತದೆ ಸಾಧ್ಯವಾದ ಮೇಲೆ, ವಿನಾಕಾರಣ ಅದೇಕೆ ಜ್ಞಾನಾಚಾರ ಸಂಪನ್ನರಾಗುವ ಕಷ್ಟದ ಮಾರ್ಗಕ್ಕೆ ಹೋಗುವರು? ಆತ್ಮೋನ್ನತಿಯ ಪರಿವೆ ಇದ್ದರಲ್ಲವೇ ಅದು! ಅವರನ್ನು ಹೀಗೆ ಅಸಾಧ್ಯರನ್ನು ಮಾಡಿದ ಬಹುಭಾಗಕ್ಕೆ, ಈ ಕಣ್ಮುಚ್ಚಕ ಭಕ್ತರೇ ಕಾರಣರೆಂದು ಧಾರಾಳವಾಗಿ ಹೇಳಬಹುದು. ಇದರಿಂದ ಇವರು ತಮ್ಮ ಕಾಲಮೇಲೆ ಕಲ್ಲು ಹಾಕಿಕೊಂಡು, ಅಯ್ಯಗಳ ಲಿಂಗಮಾರ್ಗ ಪ್ರಗತಿಯನ್ನು ಹಾಳುಮಾಡಿ ಬಿಟ್ಟಿರುವರು. ಇನ್ನು ಮೇಲೆ ಪೂರಾ ಎಚ್ಚರಾಗಿ ತಮ್ಮ ಹೊಣೆಗಾರಿಕೆಯನ್ನು ಎಲ್ಲರೂ ಮುಖ್ಯವಾಗಿ ಭಕ್ತಗಣವು ಅರಿತು ವರ್ತಿಸಬೇಕು. ಅಯೋಗ್ಯರನ್ನೆಂದೂ ಪುರಸ್ಕರಿಸಬಾರದು. ಅವರಿಗೆ ಭೋಜನ ಭಿಕ್ಷೆಗಳಂತೂ ಒತ್ತಟ್ಟಿಗಿರಲಿ! ಕಂಡಕೂಡಲೆ ನಮಸ್ಕಾರಾದಿ ಒಣ ಉಪಚಾರ ಮಾಡುವದನ್ನು ಸಹ ಬಿಟ್ಟುಬಿಡಬೇಕು. ಅಯ್ಯಗಳ ನಿಜವಾದ ಯೋಗ್ಯತೆಯನ್ನು ಕಂಡೇ, ಅದಕ್ಕೆ ಸರಿಯಾಗಿ ವರ್ತಿಸುತ್ತ ಹೋಗಬೇಕು. ಅನಾಚಾರಿಗಳನ್ನೂ ಡಾಂಭರನ್ನೂ ಮಾತಾಡಿಸಲೇ ಬಾರದು. ಸಾರಾಂಶಃ- ಅಯ್ಯತನ ಪಡೆದಿರುವರೆಂಬದಿಷ್ಟೇ ಕಾರಣದಿಂದ ಯಾರನ್ನೂ ಮನ್ನಿಸಕೂಡದು. ಗುಣಕ್ಕೆ ಪ್ರಾಧಾನ್ಯವಿತ್ತು ನಡೆಯುವದೇ ನ್ಯಾಯ!

ಪೂರ್ವಕಾಲದ ಅಯ್ಯಗಳು ಹಿಂದೆ ಹೇಳಿದಂತೆ ಶಿವಭಕ್ತಿ ಶಿವಮಾರ್ಗದಲ್ಲಿ ಒಳಿತಾಗಿ ಮುಂದರಿದು ಸುಜ್ಞಾನಿಗಳೂ ತಕ್ಕ ಗುಣ

ಕ್ರಿಯಾಚಾರ ಸಂಪನ್ನರೂ ಆಗಿರುತ್ತಿದ್ದರು. ಇಂತಹ ದೊಡ್ಡವರ ಹಸ್ತದಿಂದ ವೀರಶೈವರ ಧಾರ್ಮಿಕ ಸಂಸ್ಕಾರಗಳು (ಲಿಂಗಧಾರಣ ವಿವಾಹಾದಿಗಳು) ಜರಗಿದರೆ, ಅವು ಫಲಕಾರಿಯಾಗುವವೆಂದು ಭಾವಿಸಿ, ಅವರ (ಅಯ್ಯಗಳ) ಹಸ್ತದಿಂದಲೇ ಅವನ್ನು ಮಾಡಿಸುವ ಸಾಂಪ್ರದಾಯ ನಡೆದು ಬಂದದೆ. ಆದರೆ ಈಗ ಅಂತಹ ಯಾವ ಗುಣವೂ ತಮ್ಮಲ್ಲಿಲ್ಲದೆ, ಅಯ್ಯಾಚಾರ ಸಂಸ್ಕಾರ ಹೊಂದಿದಮಾತ್ರದಿಂದಲೇ ತಮ್ಮದೊಂದು ಜಾತಿಯನ್ನು ನಿರ್ಮಿಸಿಕೊಂಡು, ತಾವೇ ಅಯ್ಯಗಳೆಂದೂ ವೀರಮಾಹೇಶ್ವರರೆಂದೂ ಗುರುಜಂಗಮರೆಂದೂ ಅಹಂಕರಿಸಿ, ಮುಂದೆ ಬಂದು ಸಮಾಜದಲ್ಲಿ ಕುಣಿದಾಡುವದನ್ನೂ, ಅವರ ಕುಣಿತಕ್ಕೇ ಮೋಹಿಸಿ, ಅದರಂತೆಯೇ ತಾಳಹಾಕುವ ಅಜ್ಞ ಸಮಾಜವನ್ನೂ ನೋಡಿ. ಆದಾವ ವಿಚಾರಿ ಮನುಷ್ಯನಿಗೆ ನಗು ಬರಲಾರದು? ಇದೆಂತಹ ಸಖೇದಾಶ್ಚರ್ಯವು! ಆದುದರಿಂದ ಸಂಸ್ಕಾರ ಹೊಂದತಕ್ಕವರು, ಬರೇ 'ಅಯ್ಯ' ಎಂಬ ಹೆಸರಿಗೆ ಮರುಳಾಗದೆ, ಅವರದೊಂದು ಜನ್ಮಸಿದ್ಧ ಜಾತಿಯಿರುವದೆಂದು ಭಾವಿಸದೆ ವಿಷಯವನ್ನು ಗಣಿಸದೆ ಯೋಗ್ಯ ಗುಣಕ್ರಿಯಾಚಾರ ವಿಶಿಷ್ಟರೇ ಅಯ್ಯಗಳೆಂದು ಸಶಾಸ್ತ್ರ ದೃಢನಂಬಿಗೆಯುಳ್ಳವರಾಗಿ, ಅವರಿಂದಲೇ ಸಂಸ್ಕಾರ ಪಡೆಯುವದು ವಿಹಿತವಲ್ಲವೇ? ಇಂತಹರೇ ಗುರುವೆನಿಸಲು ಯೋಗ್ಯರೆಂಬದು ಸ್ಪಷ್ಟವು. ಸಮಾಜವು ಇನ್ನು ಮೇಲಾದರೂ ಚೆನ್ನಾಗಿ ಕಣ್ತೆರೆಯಲಿ.

## ಅಹಂಕಾರ.

ಅಹಂಕಾರ (ನಾನು ಎಂಬ ಭಾವನೆಯು) ಸಕಲ ದುಃಖದ ಬೇರು. ಇಡಿ ಜಗತ್ತಿನಿಂದ ತನ್ನನ್ನು ಪ್ರತ್ಯೇಕಿಸಿಕೊಂಡು, ಮನುಷ್ಯನು ತನಗೆ "ನಾನು" ಎಂದು ಕರೆದುಕೊಳ್ಳುವನು. "ಲಿಂಗರೂಪಂ ಜಗತ್ ಸರ್ವಂ" ಇದ್ದು, ತಾನು ಆ ಲಿಂಗದಿಂದ ಭಿನ್ನನಾಗಿ ವ್ಯಕ್ತಿತ್ವವನ್ನು ಧರಿಸುವನು. ಇಲ್ಲೇ ಅವನು ಅಜ್ಞಾನಕ್ಕೆ ಒಳಗಾದನು. ನಾನು ಬೇರೆ, ಎಂದು ತಿಳಿದುಕೊಂಡೊಡನೆಯೇ, ಸೃಷ್ಟಿಯೊಳಗಿನ ವಿವಿಧ ವಸ್ತುಗಳು ಸಹ ಲಿಂಗದಿಂದ ಭಿನ್ನವಾಗಿ ತೋರಿ, ತನ್ನ ಸುಖಕ್ಕೆ ಅವು ಬೇಕೆಂದು ಭ್ರಾಂತಿಪಟ್ಟು ಅವನ್ನು ಸಂಗ್ರಹಿಸಿ, ಅವುಗಳಲ್ಲಿ "ನನ್ನವು" ಎಂಬ ಭಾವನೆ (ಮಮಕಾರ) ತಳೆಯುವನು. ಈ ಮೇರೆಗೆ ಅಹಂಕಾರವನ್ನು ಬೆಂಬಳಿಸಿ, ಆಶೆ ಮಮಕಾರಗಳು ಬರುತ್ತವೆ. ಒಮ್ಮೆ ಜೀವನು ಇಂತು ಅಹಂಕಾರ

ಮಮಕಾರ ಆಶೆ ಆಕಾಂಕ್ಷೆಗಳಿಗೆ ಬಲಿಯಾದನೆಂದರೆ, ಬರುಬರುತ್ತ ಅಜ್ಞಾನಾಂಧಃಕಾರದಲ್ಲಿ ಆಳವಾಗಿ ಮುಳುಗೇ ಬಿಡುವನು. ಇದು ಭವಿ ಮಾನವನ ರೀತಿಯು. ಗುರುಜಂಗಮರು ತಾವು ಶಿವಜ್ಞಾನ ಮಾರ್ಗ ದಲ್ಲಿ ಮುಂದಾದವರಾಗಿಯೂ ಕೂಡ, ಈ ಅಹಂಕಾರವನ್ನು ತ್ಯಜಿಸುವ ಬದಲು, "ನಾವು ಹೆಚ್ಚಿನವರು" ಎಂಬ ಒಣ ಅಭಿಮಾನಕ್ಕೆ ಬಿದ್ದು, ಭಕ್ತರನ್ನು ಸಾಮಾನ್ಯರೆಂದೂ ಪ್ರಾಪಂಚಿಕರೆಂದೂ ಕೀಳಾಗಿ ಕಾಣು ತ್ತಲೂ, ತಾವು ಪರಸ್ಪರರು "ಒಂದು ವರ್ಗದವರು ಇನ್ನೊಂದು ವರ್ಗ ದವರಿಗಿಂತ ಮೇಲಾದವರು" ಎಂದು ದ್ವೇಷಾಸೂಯೆಯಿಂದ ಬೆಂಕಿ ಕಾರುತ್ತಲೂ, ಸಮಾಜದಲ್ಲಿ ಕಲಹವನ್ನು ಹಬ್ಬಿಸಿ, ಅಶಾಂತತೆಯನ್ನು ಪಸರಿಸುತ್ತಿರುವದು ಅದಾವ ನ್ಯಾಯ! ಅದೆಂತಹ ಜಾಣತನ!! ಅದಾವ ಆತ್ಮೋನ್ನತಿ!!! ಅದೆತ್ತಣ ಶಿವಮಾರ್ಗ!!!! ಇರಲಿ.

ತುಸು ದಿವಸಗಳ ಹಿಂದೆ, ಒಂದು ಪ್ರಸಿದ್ಧ ನಗರದಲ್ಲಿ ಕೂಡಿದ ಇತ್ತಿತ್ತ, ಬಳಿಕೆಯಲ್ಲಿ ಬಂದಿರುವ ಒಂದು ಹೊಸತರದ ಮಹೋತ್ಸ ವದ ಕಾಲದಲ್ಲಿ, ನಾಮಾಂಕಿತರಾದ ಅನೇಕ ಪ್ರಪಂಚಗೃಹಸ್ಥರು ಆಗ ಮಿಸಿದ್ದರು. ಅವರು ಆಂಗ್ಲವಿದ್ಯಾವಿಭೂಷಿತರೂ, ಇಮ್ಮಡಿ ಪದವಿಗ ಳನ್ನು ಪಡೆದವರೂ, ಅಪ್ರತಿಮ ಸಮಾಜ ಸೇವೆ ಮಾಡಿದವರೂ ಮಾಡು ವವರೂ, ವಯೋವೃದ್ಧರೂ, ಸುಶೀಲರೂ, ದೊಡ್ಡ ದೊಡ್ಡ ಸರಕಾರಿ ಅಧಿಕಾರಸ್ಥರೂ, ಹೀಗೆ ಬಹು ವಿಧದಿಂದ ಪ್ರತಿಷ್ಠಿತರೂ ಆದರಕ್ಕೆ ಪಾತ್ರರೂ ಇದ್ದರು. ಇಂತಹರು ತಮ್ಮ ಸಭಾಕಾರ್ಯಾರಂಭಕ್ಕೆ ಇನ್ನೂ ತುಸು ಅವಕಾಶವಿದ್ದುದರಿಂದ, ಗುರುಜಂಗಮರು (ವಿಶೇಷವಾಗಿ ವಿರಕ್ತರು) ಮೂರ್ತಗೊಂಡ ಸ್ಥಳದಲ್ಲಿ ಬಂದು, ಅವರಿಗೂ ಅವರ ಹಿರಿಯ ಮುಖಂಡ ರಿಗೂ ಅತ್ಯಾದರದಿಂದ ನಮಸ್ಕರಿಸಿ, ಕೊಂಚಹೊತ್ತು ಕುಳಿತುಕೊಳ್ಳುವ ಅಪೇಕ್ಷೆ ತೋರಿಸಿದರು. ಆದರೆ ಆಗ ಆ ಗುರು ಜಂಗಮರಲ್ಲಿ ಯಾರೂ ಅವರನ್ನು "ಮೇಲಕ್ಕೆ ಬರ್ರಿ ಇಲ್ಲಿ ಕುಳ್ರಿರಿ" ಎಂದು ಕರೆಯಲಿಲ್ಲ ಸಹ! ಧೋರಣವನ್ನು ಕಂಡು ಅವರೇ, ತಾವು ನಿಂತಿದ್ದ ಕೆಳಗಿನ ಸ್ಥಳದ ಲ್ಲಿಯೇ—ಪಾತಾಳ ಅಂಕಣದಲ್ಲಿಯೆ—ವಿಷಾದಪೂರ್ವಕವಾಗಿ ಕುಳಿತು ಕೊಂಡರು. ಅಲ್ಲಿಯೇ ಆಗಲೊಲ್ಲದೇಕೆ, ಅವರಿಗೆ ಖುರ್ಚಿ ತರಿಸಿಯಾ ದರೂ ಇಡಿಸಬೇಕಾಗಿತ್ತು. ಅವರು ಪಾಟಲೋನ ಹಾಕಿದ್ದರು. ಕಡೆಗೆ ತಾವು ಕುಳಿತ ಸ್ಥಳದ ಕಟ್ಟೆಯ ತುದಿಯನ್ನಾದರೂ ತೋರಿಸಬೇಕಾ

ಗಿತ್ತು. ಆದರೆ ಹಾಗೇನೂ ಆಗಲಿಲ್ಲ. ಆ ಮಹಾಮುಖಂಡರು ಯಾರಿಗಾದರೂ ತುಸು ಸೂಚಿಸಿದ್ದರೆ, ಈ ಅಸಹ್ಯ ಪ್ರಸಂಗವೇ ಒದಗುತ್ತಿರಲಿಲ್ಲ. ಆದರೆ ಹಾಗೆ ಮಾಡುವದು ತಮ್ಮ ಗೌರವಕ್ಕೆ ಕೊರತೆಯೆಂದು ಭಾವಿಸಿದರೋ ಏನೋ ತಿಳಿಯದು. ಇವರು ಔದಾಸೀನ್ಯವಿಡಿದುದರಿಂದ ಉಳಿದವರೂ ಸುಮ್ಮನಾದರು. ಇದು ಎಷ್ಟು ಮಾತ್ರವೂ ಸರಿಯಲ್ಲ! ಇದರಂತೆ ಇನ್ನೂ ಅನೇಕರಿಗೆ ಆಯಿತು. ಪ್ರಾಪಂಚಿಕರಾದರೇನಾಯಿತು? ಅವರಲ್ಲಿ ವಿರಕ್ತರ ಮನ್ನಣೆಗೆ ಪಾತ್ರರಾದವರು ಅನೇಕ ಗೃಹಸ್ಥರಿರುವರೆಂಬುದನ್ನು ಇವರು ಗಮನಿಸಬೇಕು. ಅವರ ಗುಣಗಳಿಗೆ ಮರ್ಯಾದೆಯೂ ಉತ್ತೇಜನವೂ ಬೇಡವೇ? ವಿರಕ್ತರು ಮಾತ್ರ ಎಂತಹರಿದ್ದರೂ ಅವರೆಲ್ಲರೂ ಪೂಜ್ಯರೇ? ಹೀಗೆ ಶಠಂಭಾವಿಗಳೂ ದುರಭಿಮಾನಿಗಳೂ ದುರಹಂಕಾರಿಗಳೂ ಆಗುವದು ಒಳಿತೇ? ತಮ್ಮಲ್ಲಿ ಗುಣವಿಲ್ಲದೆ ಬರೇ ವೇಷದಿಂದಲೇ ಪೂಜ್ಯರೆಂದು ಸೆಟೆದು ಕುಳಿತರೆ ಶೋಭಿಸುವದೇ? ಕೆಳಗಿನ ವಚನಗಳನ್ನು ಲಕ್ಷಿಸಿರಿ:—

೧. "ಏನಿಬಂದಿರಿ? ಹದುಳವಿದ್ದಿರಿ? ಎಂದರೆ ನಿಮ್ಮ ಸೈಸಿರಿ ಹಾರಿ ಹೋಹುದೇ? ಕುಳ್ಳಿರೆಂದರೆ ನೆಲ ಒಡೆದು ಹೋಹುದೇ? ಒಡನೆ ನುಡಿದರೆ ಶಿರಹೊಟ್ಟೆ ಒಡೆವುದೇ? ಕೊಡಲಿಲ್ಲದಿದ್ದರೊಂದು, ಗುಣವಿಲ್ಲದಿದ್ದರೆ ಮೂಗು ಕೊಯ್ಯದೆ ಮಾಣ್ಬನೇ ಕೂಡಲಸಂಗಮದೇವ."

೨. "ಇತ್ತಬಾರಯ್ಯಾ ಇತ್ತಬಾರ್ಯಯ್ಯಾ, ಎಂದು ಭಕ್ತರೆಲ್ಲರು ಕೊರ್ತುಹತ್ತಿ ಕರೆವುತ್ತಿರೆ, ಮತ್ತೆ ಕೆಲಕ್ಕೆ ಹೋಗಿ, ಶರಣೆಂದು, ಹಸ್ತ ಬಾಯನೆ ಮುಚ್ಚಿ, ಕಿರಿದಾಗಿ ಭೃತ್ಯಾಚಾರವ ನುಡಿದು, ವಿನಯ ತದ್ಧ್ಯಾನವುಳ್ಳವರ, ಎತ್ತಿಕೊಂಬನಯ್ಯಾ ಕೂಡಲಸಂಗಮದೇವ ಪ್ರಮಥರ ಮುಂದೆ."

ಇವುಗಳಲ್ಲಿ ಮೊದಲನೆಯದು, ಮುಂಚೆ ಬಂದು ಕುಳಿತವರನ್ನು, ಎರಡನೆಯದು ಹಿಂದಿನಿಂದ ಬಂದವರನ್ನು, ಅನುಲಕ್ಷಿಸಿ ಹೇಳಿದವುಗಳಾಗಿವೆ. ಈ ವಚನಗಳು ಗುರುವಿರಕ್ತರಿಗೂ ಅಯ್ಯಗಳಿಗೂ ಸಂಬಂಧಿಸುವದಿಲ್ಲವೇ? ಅವರು ಶಿವಭಕ್ತರ ಸಮಾಜಕ್ಕೆ ಹೊಂದಿದವರಲ್ಲವೇ?

(ಮುಂದೊರೆದಿದೆ.)

---



*From,*
**Shivanubhava**
**Office**
**Bijapur**

**BOOK-POST.**

Stn. Kudachi
(M. S. M. Ry)

**R. N. B. 2554**




**ಈ ಪತ್ರಿಕೆಯನ್ನು** ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೮]　　ಡಿಸೆಂಬರ ೧೯೪೨.　　[ಸಂಚಿಕೆ ೩

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಬಸವೇಶ್ವರನ ಚರಿತ್ರೆ | ರಾ. ಬ. ಫ. ಗು. ಹಳಕಟ್ಟಿ ವಿಜಾಪುರ | ೧೦೯ |
| ೨ ದೀಕ್ಷಾವಾದ | ಶ್ರೀ ಮ. ನಂ. ನಂಜಪ್ಪನವರು ಬೆಂಗಳೂರನಗರ | ೧೨೧ |
| ೩ ಕಾಯಕವೆಂದರೇನು? | ,, ಶಿವಮೂರ್ತಿ | ೧೩೬ |
| ೪ ಇಂದಿನ ವೀರಶೈವ ಸ್ತ್ರೀಸಮಾಜ | ,, ಎನ್. ಎಸ್. ಟೆಂಗಿನಕಾಯಿ ಹುಬ್ಬಳ್ಳಿ | ೧೪೩ |
| ೫ ವಚನಶಾಸ್ತ್ರವು ಸಾಹಿತ್ಯವಲ್ಲವೇ? | ,, ಬಿ. ಬಿ. ಪಾಟೀಲ ಬಿ. ಎ. ಬಾಗಲಕೋಟೆ | ೧೫೩ |
| ೬ ಗುರುಲಿಂಗಜಂಗಮ | ,, ಬಿ. ಜಿ. ಪಟ್ಟೇದ ವಂಟಮುರಿ | ೧೫೬ |
| ೭ ವೀರಶೈವ ರಾಜಮನೆತನಗಳ ಚರಿತ್ರೆಗಳು | ಸಂಪಾದಕರು | ೨೫–೨೮ |

# ಶಿವಾನುಭವ.

ವರ್ಷ ೧೭ | ಡಿಶಂಬರ ೧೯೪೨. | ಸಂಚಿಕೆ ೩

## ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೬.]

ನಾವು ನಮ್ಮ ಹಿಂದಿನ ಲೇಖದಲ್ಲಿ ಬಸವೇಶ್ವರನು ಸಾಮಾನ್ಯ ಜನತೆಯು ಕೂಡ ಹೇಗೆ ವರ್ತಿಸಿದನೆಂಬುದನ್ನು ಕುರಿತು ವಿವರಿಸಿದೆವು. ಒಕ್ಕಲಿಗರೇ ಮುಖ್ಯವಾಗಿ ಸಾಮಾನ್ಯ ಜನತೆಯಾಗಿರುವದರಿಂದ ಅವರನ್ನುದ್ದೇಶಿಸಿಯೇ ಅವನು ವಿಶೇಷವಾಗಿ ಬೋಧ ಮಾಡಿದ್ದಾನೆಂದು ಅದರಲ್ಲಿ ನಿರೂಪಿಸಿದ್ದೇವೆ. ನಾವು ಕೊಟ್ಟ ವಚನಗಳ ಆಧಾರದ ಮೇಲಿಂದ ಇದನ್ನು ನಾವು ಕಂಡುಹಿಡಿಯಬಹುದಾಗಿದೆ ಬಸವೇಶ್ವರನ ಕಾಲದಲ್ಲಿ ಬ್ರಾಹ್ಮಣರು, ಜೈನರು, ಮತ್ತು ಬಣಜಿಗರು ಇವರೇ ಉಚ್ಚ ಸಮಾಜದವರಾಗಿದ್ದರೆಂದು ಹೇಳಬಹುದು. ಅವರ ವಿಷಯವಾಗಿ ಬಸವೇಶ್ವರನು ಯಾವ ಅಭಿಪ್ರಾಯವುಳ್ಳವನಾಗಿದ್ದನೆಂಬುದನ್ನು ನಾವು ಇಲ್ಲಿ ವಿವೇಚಿಸಲೆಣಿಸಿದ್ದೇವೆ.

ಬಸವೇಶ್ವರನು ಸಮಾಜ ಸುಧಾರಕನಾಗಿದ್ದಾನೆ. ಕೆಳಗೆ ಬಿದ್ದವರನ್ನು ಮೇಲಕ್ಕೆ ಎತ್ತರಿಸುವ ಕಾರ್ಯವೇ ಸಮಾಜಸುಧಾರಣೆ ಎಂದು ಹೇಳಬಹುದು. ಇದು ಅತ್ಯಂತ ಕಠಿಣವಾದ ಕಾರ್ಯವು. ಇಂಥ ಕಾರ್ಯದಲ್ಲಿ ತೊಡಗಿದವರು ತನ್ನ ಬಂಧುಬಳಗದವರ, ತನ್ನ ಸಮಾಜದವರ ಮತ್ತು ತನ್ನ ಜಾತಿಯವರ ರೋಷಕ್ಕೆ ಪಾತ್ರನಾಗಬೇಕಾಗುವ ಪ್ರಸಂಗಗಳು ಬರುತ್ತವೆ. ಇಂಥ ಕಾರ್ಯದಲ್ಲಿ ಅತ್ಯುಚ್ಚತರದ ಮನೋ

ಧೈರ್ಯವೂ ಸ್ಥಿರತೆಯೂ ಬೇಕಾಗುತ್ತದೆ. ಈ ಗುಣಗಳು ಬಸವೇಶ್ವರನಲ್ಲಿದ್ದುದು ಅವನ ವಚನಗಳಿಂದಲೇ ಗೊತ್ತಾಗುತ್ತದೆ. ಅವನು ತನ್ನ ಕಾರ್ಯದಲ್ಲಿ ಬಂಧುಬಳಗದವರನ್ನು ಲಕ್ಷಿಸಿಲ್ಲ. ಸ್ವಜಾತಿಯವರ ಹಿಂಸೆಗೆ ಧೈರ್ಯಗೆಟ್ಟಿಲ್ಲ. ಶ್ರೀಮಂತರ ಬಲುಮೆಗೆ ಒಳಪಟ್ಟಿಲ್ಲ. ಅವನು ತನ್ನ ಸುಧಾರಣೆಯ ಕಾರ್ಯದಲ್ಲಿ ಇವರೆಲ್ಲರನ್ನು ಎದುರಿಸಿದ್ದಾನೆ. ಬಹು ಸ್ಪಷ್ಟ ಶಬ್ದಗಳಿಂದ ಅವರ ಮಾರ್ಗಗಳನ್ನು ಅವನು ಖಂಡಿಸಿದ್ದಾನೆ.

## ಬಸವೇಶ್ವರನು ಮತ್ತು ಬ್ರಾಹ್ಮಣರು.

ಬ್ರಾಹ್ಮಣರಿಗೆ ಸಂಬಂಧಿಸಿದ ಬಸವೇಶ್ವರನ ವಚನಗಳಲ್ಲಿ ತನ್ನ ಬಂಧುಬಳಗದವರನ್ನುದ್ದೇಶಿಸಿ ನುಡಿದವುಗಳು ಮತ್ತು ಬ್ರಾಹ್ಮಣ ಧರ್ಮವನ್ನುದ್ದೇಶಿಸಿ ನುಡಿದವುಗಳು ಹೀಗೆ ಎರಡು ವಿಭಾಗಗಳನ್ನು ನಾವು ಮಾಡಬಹುದಾಗಿದೆ.

ಬಂಧುಗಳನ್ನುದ್ದೇಶಿಸಿ ನುಡಿದ ವಚನಗಳುಃ— ಬಸವೇಶ್ವರನು ಯಜ್ಞೋಪವೀತವನ್ನು ತಿರಸ್ಕರಿಸಿ ಲಿಂಗಧಾರಿಯಾದ ಬಳಿಕ ಅವನ ಬಂಧುಬಳಗದವರು ಅವನನ್ನು ಬಹಳ ಪೀಡಿಸಿರಬೇಕೆಂದು ತೋರುತ್ತದೆ. ಈ ವಿಷಯವಾಗಿ ಶಿವಾನುಭವ ಸಂಪುಟ ೧೬ ಸಂಚಿಕೆ ೨ ಪುಟ ೪೫-೫೬ ಇದರಲ್ಲಿಯ ಲೇಖವನ್ನು ವಾಚಕರು ಲಕ್ಷಿಸಬೇಕೆಂದು ನಮ್ಮ ವಿನಂತಿ ಇದೆ. ಆದ್ದರಿಂದ ಅವರ ಉಲ್ಲೇಖವನ್ನು ಮಾಡುವ ಕಾಲದಲ್ಲಿ ಬಸವೇಶ್ವರನು ಅತ್ಯಂತ ಕೋಪಾವಿಷ್ಟನಾಗಿ ಅವರ ವಿಷಯವಾಗಿ ನುಡಿದಿದ್ದು ಕಂಡುಬರುತ್ತದೆ. ಒಮ್ಮೊಮ್ಮೆ ಅವನು ಅನಾವಶ್ಯಕವಾಗಿ ಅವರ ಬಗ್ಗೆ ಬಹು ಕಠೋರ ಭಾಷೆಯನ್ನಾಡುತ್ತಾನೆ. ಆದರೆ ಬಸವೇಶ್ವರನು ಸ್ವಾಭಾವಿಕವಾಗಿ ಬಹು ಮೃದುಸ್ವಭಾವದವನು. ಇಂಥವನು ಹೀಗೆ ಕೆರಳಿದ್ದನ್ನು ನೋಡಲಾಗಿ ಅವನ ಬಂಧುಬಳಗದವರು ಅವನನ್ನು ಬಹಳ ಪೀಡಿಸಿರಬೇಕೆಂದು ನಮಗೆ ಎನಿಸುತ್ತದೆ. ಈ ವಿಷಯದಲ್ಲಿ ವಾಚಕರು ಕೆಳಗಿನ ವಚನಗಳನ್ನು ಲಕ್ಷಿಸಬೇಕೆಂದು ನಮ್ಮ ವಿನಂತಿ ಇದೆ.

"ಅಣ್ಣ ತಮ್ಮ ಹೆತ್ತಪ್ಪ ಗೋತ್ರವಾದಡೇನು ? ಲಿಂಗ ಸಾಹಿತ್ಯವಿಲ್ಲದವರ ಎನ್ನವರೆನ್ನನಯ್ಯ, ನಂಟು ಭಕ್ತಿ ನಾಯಕನರಕ ಕೂಡಲಸಂಗಮದೇವಾ ?" (೨೧೨)

ತನ್ನಾಪ್ತರಂತೆ ಆಚರಿಸಲು ಬದ್ಧನಲ್ಲೆಂದು ಇಲ್ಲಿ ಹೇಳುತ್ತಾನೆ.

ಬಸವೇಶ್ವರನನ್ನು ಅವನ ಬಂಧುಗಳು ಆರಂಭದಲ್ಲಿ ಹಿಂಸೆ ಮಾಡಿದರೂ ಅವನು ಮುಂದೆ ಉಚ್ಚ ಸ್ಥಾನವನ್ನು ಹೊಂದಿದ ಬಳಿಕ ಅವರು ಅವನ ಪ್ರೀತಿಯನ್ನು ಸಂಪಾದಿಸಲು ಪ್ರಯತ್ನ ಮಾಡಿರಬೇಕೆಂದು ಕೆಳಗಿನ ವಚನದಿಂದ ತೋರುತ್ತದೆ. ಆದರೆ ಅವನು ಅವರಿಗೆ ಒಳಗಾಗಿ ನಡೆದಿರುವದಿಲ್ಲ.

"ಒಡೆಯರು ಬಂದರೆ ಗುಡಿ ತೋರಣವ ಕಟ್ಟಿ, ನೆಂಟರು ಬಂದರೆ ಸಮಯವಿಲ್ಲೆನ್ನಿ. ಅಂದೇಕೆ ಬಾರರು ನೀರಿಂಗೆ ನೇಣಿಂಗೆ ಹೊರಗಾದಂದು. ಸಮಯಾಚಾರಕ್ಕೆ ಒಳಗಾದಂದು? ಪರುಷ ಮುಟ್ಟಲ್ಕು ಕಬ್ಬಿನ ಸುವರ್ಣವಾಯಿತ್ತು ಬಳಿಕ ಬಂಧುಗಳುಂಟೇ ಕೂಡಲಸಂಗಮದೇವಾ" (೨೨೨)

ಬಸವೇಶ್ವರನು ಕೆಳಗೆ ಕಾಣಿಸಿದ ವಚನಗಳನ್ನು ತನ್ನ ವಂಶದವರನ್ನು ಮತ್ತು ತನ್ನ ಮಾತಾಪಿತೃಗಳನ್ನುದ್ದೇಶಿಸಿ ನುಡಿದಿದ್ದಾನೆ. ಇವರು ತನ್ನ ಬಾಂಧವರಲ್ಲವೆಂದು ಇಲ್ಲಿ ಅತ್ಯಂತ ಕುಪಿತನಾಗಿ ಅವರ ಬಗ್ಗೆ ನುಡಿದಂತೆ ನಮಗೆ ಭಾಸವಾಗುತ್ತದೆ.

೧. ಹರನು ಮೂಲಿಗನಾಗಿ, ಪುರಾತರೊಳಗಾಗಿ, ಬಳಿ ಒಳಿಯುಲು ಬಂದ ಮಾದರನ ಮಗ ನಾನಯ್ಯ. ಕಳೆದ ಹೊಲೆಯು ನಮ್ಮಯ್ಯ ಜಾತಿ ಸೂತಕ. ಮಾದರನ ಮಗ ನಾನಯ್ಯ. ಪನ್ನಗ ಭೂಷಣ ಕೂಡಲಸಂಗಯ್ಯ, ಚೆನ್ನಯ್ಯನೆನ್ನ ಮುತ್ತಯ್ಯ ನಜ್ಜನಪ್ಪನಯ್ಯ. (೫೮೫)

೨. ಸೂಳೆಗೆ ಹುಟ್ಟಿದ ಕೂಸಿನಂತೆ, ಆರನಾದಡೆಯೂ ಅಯ್ಯ, ಅಯ್ಯ ಎನಲಾರೆನಯ್ಯ. ಚೆನ್ನಯ್ಯನೆಮ್ಮಯ್ಯನು. ಚೆನ್ನಯ್ಯನ ಮಗ ನಾನು. ಕೂಡಲಸಂಗನ ಮಹಾ ಮನೆಯಲ್ಲಿ ಧರ್ಮಸಂತಾನ ಭಂಡಾರಿ ಬಸವಣ್ಣನು. (೫೮೮)

೩. ಅಪ್ಪನು ನಮ್ಮ ಮಾದರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ. ಚಿಕ್ಕಯ್ಯ ನೆಮ್ಮಯ್ಯ ಕಾಣಿರಣ್ಣಾ. ಅಣ್ಣನು ನಮ್ಮ ಕಿನ್ನರಿ ಬೊಮ್ಮಯ್ಯ. ಎನ್ನನೇತಕ್ಕರಿಯಿರಿ ಕೂಡಲಸಂಗಯ್ಯ (೫೮೯)

೪. ಹಿರಿಯಯ್ಯ ಶ್ವಪಚಯ್ಯ. ಕಿರಿಯಯ್ಯ ಡೋಹರ ಕಕ್ಕಯ್ಯ. ಅಯ್ಯಗಳಯ್ಯ ನಮ್ಮ ಮಾದರ ಚನ್ನಯ್ಯ. ಕೂಡಲಸಂಗಮದೇವ ನಿಮ್ಮ ಶರಣರು ಎನ್ನ ಸಲಹುವರಾಗಿ (೫೯೦)

೫. ಗೋತ್ರ ನಾಮವ ಬೆಸಗೊಂಡರೆ, ಮಾತ ನೂಂಕದೆ ಸುಮ್ಮನೇಕಿದ್ದಿರಯ್ಯ? ತಲೆಯ ಕುತ್ತಿ ನೆಲನ ಬರೆವುತಿದ್ದಿರದೇನಯ್ಯ? ಗೋತ್ರ ಮಾದರ ಚನ್ನಯ್ಯ. ಡೋಹರ ಕಕ್ಕಯ್ಯನೆಂಬುದೇನು ಕೂಡಲ ಸಂಗ ಮದೇವಾ. (೫೯೧)

೬. ಚನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರೂ ಹೊಲದಲು ಬೆರಣಿಯ ನಾಯ ಹೋಗಿ, ಸಂಗವ ಮಾಡಿದರು. ಅವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲಸಂಗಮದೇವ ಸಾಕ್ಷಿಯಾಗಿ. (೫೯೨)

ಮೇಲಿನ ವಚನಗಳಲ್ಲಿ ಕೇವಲ ಜಾತಿಭೇದ ನಿರಾಕರಣೆಯಷ್ಟೇ ಇರದೆ ತನ್ನ ಬಂಧುಗಳ ಬಗ್ಗೆ ಬಸವೇಶ್ವರನ ಮನಸ್ಸಿನಲ್ಲುಂಟಾದ ತ್ವೇಷವು ಹೊರಹೊಮ್ಮಿರುತ್ತದೆಂದು ನಮಗೆ ಭಾಸವಾಗುತ್ತದೆ. ಮೇಲಿನ ೬ನೆಯ ವಚನದಲ್ಲಿಯಂತೆ ಬಸವೇಶ್ವರನು ತನ್ನನ್ನು ವರ್ಣಿಸಿಕೊಳ್ಳುವದು ಅನಾವಶ್ಯಕವಾಗಿತ್ತು. ಅವನು ಉಚ್ಚ ಮನೆತನದವನು ಆದರೂ ಅವನು ಹೀಗೆ ವಿವರಿಸುವಲ್ಲಿ ತನ್ನ ಬಾಂಧವರ ವಿಷಯವಾಗಿ ತ್ವೇಷ ವನ್ನು ತೋರಿಸುವದೇ ಅವನ ಉದ್ದೇಶವಾಗಿತ್ತೆಂದು ತೋರುತ್ತದೆ.

ಬಸವೇಶ್ವರನು ಬ್ರಾಹ್ಮಣರ ವಿಷಯವಾಗಿ ತನ್ನ ವಚನಗಳಲ್ಲಿ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದು ಅವೆಲ್ಲವೂ ತತ್ವ ಸಮರ್ಥನೆಯಾಗಿವೆ. ಅವು ಬ್ರಾಹ್ಮಣರನ್ನು ಕುರಿತು ವೈರಭಾವದಿಂದ ನುಡಿದವುಗಳಲ್ಲ. ಅವುಗಳ ಭಾವವನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ವಿವರಿಸುತ್ತೇವೆ.

(೧) ಯಜ್ಞಯಾಗಾದಿಗಳು:— ಬಸವೇಶ್ವರನ ಕಾಲದಲ್ಲಿ ಹಿಂಸಾ ಕರ್ಮಯುಕ್ತ ಯಜ್ಞ ಯಾಗಾದಿಗಳು ಹೆಚ್ಚಾಗಿ ನಡೆಯುತ್ತಿದ್ದ ಹಾಗೆ ತೋರುತ್ತದೆ. ಇವುಗಳನ್ನು ಬಸವೇಶ್ವರನು ಬಹು ಶೀಘ್ರ ಭಾಷೆಯಲ್ಲಿ ನಿಷೇಧಿಸಿದ್ದಾನೆ. ಹಿಂಸೆ ಮತ್ತು ಮಾಂಸಭಕ್ಷಣವು ಆಗಿನ ಶೈವರಲ್ಲಿ ಸಹ ನಡೆಯುತ್ತಿದ್ದ ಹಾಗೆ ತೋರುತ್ತದೆ. ಕಣ್ಣಪ್ಪ, ಶಿರಿಯಾಳ, ಶ್ವಪ

ಚಯ್ಯ, ಅತಿಭಕ್ತ, ತೆಲುಗು ಜೊಮ್ಮಯ್ಯ ಇವರ ಚರಿತ್ರೆಗಳಿಂದ ಇದು ಕಂಡು ಬರುತ್ತದೆ. ಇವರು ಮಾಂಸ ಭಕ್ಷಕರಾದರೂ ವೀರಶೈವರು ಇವರನ್ನು ಈಗಲೂ ಆದರಿಸುತ್ತಾರೆ. ತೆಲುಗು ಮತ್ತು ದ್ರಾವಿಡ ದೇಶಗಳಲ್ಲಿ ಅನೇಕ ಶೈವ ಪಂಗಡಗಳಲ್ಲಿ ಈಗಲೂ ಮಾಂಸಾಹಾರವಿದೆ. ಇಷ್ಟೇ ಅಲ್ಲ, ಅಲ್ಲಿ ಜಂಗಮರೆಂಬ ಹೆಸರುಳ್ಳ ಒಂದು ಪಂಗಡವಿದ್ದು ಅವರಲ್ಲಿ ಸಹ ಮಾಂಸಾಹಾರವಿದೆಂದು ನಾವು ಕೇಳುತ್ತೇವೆ. ಆದರೆ ಬಸವೇಶ್ವರನ ಕಾಲದಲ್ಲಿ ದಯವೇ ಧರ್ಮದ ಮೂಲವೆಂದು ಸಾರಲ್ಪಟ್ಟಿತು. ಮತ್ತು ಮಾಂಸಾಹಾರವು ನಿಷಿದ್ಧವಾಯಿತು. ಇದಕ್ಕೆ ಬಹುಶಃ ಜೈನರ ಪ್ರಭಾವವೇ ಕಾರಣವಾಗಿರಬಹುದು. ಮುಂದೆ ಮಾಧ್ವರು ಇದನ್ನು ಪೂರ್ಣ ನಿರಾಕರಿಸಿದ್ದರಿಂದ ಮೊದಲಿನ ಯಜ್ಞಾದಿ ಕಾರ್ಯಗಳು ಕರ್ನಾಟಕದಲ್ಲಿ ನಿಂತು ಹೋಗಿರಬಹುದು ಆದರೆ ಬಸವೇಶ್ವರನ ಕಾಲದಲ್ಲಿ ಯಜ್ಞ ಕಾರ್ಯಗಳು ದೇಶದಲ್ಲಿ ಹೆಚ್ಚಾಗಿ ನಡೆಯುತ್ತಿದ್ದದರಿಂದ ಅವನು ಅವುಗಳನ್ನು ಬಹು ಬಲವಾದ ರೀತಿಯಿಂದ ತನ್ನ ವಚನಗಳಲ್ಲಿ ಖಂಡಿಸಿದ್ದಾನೆ. ಈ ವಿಷಯವಾಗಿ ವಾಚಕರು ಹೊಸ ಪದ್ಧತಿಯ ಬಸವೇಶ್ವರರ್ ವಚನ ಗ್ರಂಥದಲ್ಲಿಯ ನಂ. ೫೧೯ ರಿಂದ ೫೨೬ ರ ವರೆಗಿನ ವಚನಗಳನ್ನು ನೋಡಬೇಕು. ಅವುಗಳಲ್ಲಿ ಅನೇಕ ಸುಂದರವಾದ ವಚನಗಳಿವೆ. ಅವು ಬಹು ಜನರಿಂದ ಉದಹರಿಸಲ್ಪಟ್ಟು ಸರ್ವಶ್ರುತವಾಗಿರುವದರಿಂದ ಅವುಗಳನ್ನು ನಾವು ಇಲ್ಲಿ ಪುನಃ ವಿವರಿಸುವದು ಅನಾವಶ್ಯಕವಾಗಿದೆ. ಬ್ರಾಹ್ಮಣರು ಮಾಡುತ್ತಿದ್ದ ಯಜ್ಞಗಳ ನಿಷೇಧವು ಒಂದು ತಾತ್ವಿಕ ಭೇದವೇ ಹೊರತು ಅವರ ಬಗ್ಗೆ ದ್ವೇಷಭಾವವನ್ನು ಅದು ತೋರಿಸುವದಿಲ್ಲೆಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವದೆ.

(೨) ತೀರ್ಥಯಾತ್ರೆಗಳುಃ— ವೀರಶೈವರು ಅನೇಕ ದೇವರುಗಳನ್ನು ಮನ್ನಿಸಕೂಡದೆಂದು ಅವರ ಅಭಿಪ್ರಾಯವಿರುತ್ತದೆ. ಈ ದೃಷ್ಟಿಯನ್ನಿಟ್ಟುಕೊಂಡು ಬಸವೇಶ್ವರನು ಬ್ರಾಹ್ಮಣರನ್ನು ತನ್ನ ವಚನಗಳಲ್ಲಿ ಆಕ್ಷೇಪಿಸಿದ್ದಾನೆ. ಈ ಸಂಗತಿಯು ತಾತ್ವಿಕ ಮತಭೇದವೇ ಹೊರತು ಮತ್ತೊಂದಲ್ಲ. ಈ ವಚನಗಳು ೫೩೮ ರಿಂದ ೫೪೩ ರ ವರೆಗೆ ಇರುತ್ತವೆ. ಇವುಗಳಲ್ಲಿ ಮನುಷ್ಯನು ಸದ್ಗುಣಿಯಾಗಿರಬೇಕೆಂದು ಹೇಳಿ ಬರೀ ತೊರೆ

ಯಲ್ಲಿ ಸ್ನಾನ ಮಾಡಿ ಜಪವನೆಣಿಸುತ್ತ ಕುಳಿತರೆ ಏನೂ ಪ್ರಯೋಜನ ವಿಲ್ಲವೆಂದು ಅವನು ನುಡಿದಿದ್ದಾನೆ.

(೩) ಪ್ರಾಯಶ್ಚಿತ್ತಗಳುಃ— ಪಾಪಕರ್ಮ ಮಾಡಿದವರು ಪ್ರಾಯಶ್ಚಿತ್ತಗಳನ್ನು ಮಾಡಿದರೆ ಅವು ದೂರಾಗುವವೆಂದು ಬ್ರಾಹ್ಮಣ ಧರ್ಮ ಗ್ರಂಥಗಳು ಹೇಳುತ್ತವೆ. ಆದರೆ ಬಸವೇಶ್ವರನು ಇದನ್ನು ನಿರಾಕರಿಸಿದ್ದಾನೆ ಈ ಬಗ್ಗೆ ೫೪೪ ರಿಂದ ೫೪೬ ರ ವರೆಗಿನ ವಚನಗಳನ್ನು ವಾಚಕರು ನೋಡಬೇಕು.

(೪) ಜಾತಿಭೇದಃ— ಹಿಂದುಸ್ಥಾನದಲ್ಲಿ ಜಾತಿಭೇದಗಳು ಉಂಟಾಗಲಿಕ್ಕೆ ಬ್ರಾಹ್ಮಣರು ನಿರೂಪಿಸಿದ ವರ್ಣಾಶ್ರಮ ಧರ್ಮಗಳೇ ಮುಖ್ಯ ಕಾರಣಗಳಾಗಿವೆ. ಬಸವೇಶ್ವರನು ಅವುಗಳನ್ನು ಬಹು ಖಂಡಿತವಾದ ರೀತಿಯಲ್ಲಿ ನಿಷೇಧಿಸಿದ್ದಾನೆ. ಈ ವಿಷಯದಲ್ಲಿ ಹೊಲೆ ಮೊದಲ್ಗೊಂಡು ಎಲ್ಲ ಜಾತಿಯವರು ಸಮಾನರಂತೆ ಅವನು ಪ್ರತಿಪಾದಿಸಿದ್ದಾನೆ. ಈಗಿನ ೨೦ನೇ ಶತಮಾನದಲ್ಲಿ ಸಹ ಅವನಷ್ಟು ಸ್ಪಷ್ಟ ಶಬ್ದಗಳಿಂದ ಜಾತಿಭೇದದ ಪದ್ಧತಿಯನ್ನು ಯಾರೂ ನಿರಾಕರಿಸಿರಲಿಕ್ಕಿಲ್ಲ. ಅವನಂಥ ವಿಚಾರಗಳು ೮ ನೂರು ವರ್ಷಗಳ ಹಿಂದೆ ಹೊರಪಟ್ಟಿದ್ದು ಯಾರಿಗಾದರೂ ಆಶ್ಚರ್ಯವನ್ನುಂಟು ಮಾಡುವಂತೆ ಇದೆ. ಈ ವಿಷಯಕ್ಕೆ ಸಂಬಂಧಿಸಿದ ವಚನಗಳು ನಂಬರು ೫೫೬ ರಿಂದ ೫೯೪ ರ ವರೆಗೆ ಬಂದಿರುತ್ತವೆ. ಇವುಗಳನ್ನು ನಾವು ಲೇಖ ವಿಸ್ತಾರದ ಭಯಕ್ಕಾಗಿ ಇಲ್ಲಿ ಉದಹರಿಸಿಲ್ಲ. ವಾಚಕರು ಅವುಗಳನ್ನು ಮೂಲ ಗ್ರಂಥದಲ್ಲಿಯೇ ನೋಡಬೇಕು.

(೫) ಕರ್ಮಮಾರ್ಗಃ— ಬಸವೇಶ್ವರನು ತನ್ನ ವಚನಗಳಲ್ಲಿ ಮನುಷ್ಯನು ಭಕ್ತಿಯುಳ್ಳವನಾಗಿರಬೇಕು, ಕೇವಲ ಕರ್ಮಮಾರ್ಗದಲ್ಲಿರ ಕೂಡದೆಂದು ಬೋಧಿಸುವಲ್ಲಿ ಬ್ರಾಹ್ಮಣರನ್ನು ಟೀಕಿಸಿದ್ದುಂಟು. ಇದು ನಂಬರು ೬೩೭, ೭೦೬, ೭೦೭, ೨೨೧, ಈ ವಚನಗಳಲ್ಲಿ ಕಾಣಬಹುದು.

(೬) ಅನೇಕ ದೇವತೆಗಳ ಆರಾಧನೆಃ— ಬಸವೇಶ್ವರನು ದೇವರು ಒಬ್ಬನೇ ಇದ್ದಾನೆಂದು ಭಾವಿಸಿ ಅವನೊಬ್ಬನನ್ನು ಮಾತ್ರ ನಂಬಬೇಕೆಂದು ಹೇಳುತ್ತಾನೆ. ಈ ವಿಷಯವಾಗಿ ಅವನು ಬ್ರಾಹ್ಮಣರನ್ನು ಟೀಕಿಸಿದ್ದುಂಟು. ಇದು ನಂ॥ ೪೭೬, ೫೦೨, ೫೧೬, ೫೧೭, ಇವುಗಳಲ್ಲಿ ತೋರಿಬರುತ್ತದೆ.

(೭) ದಾನಧರ್ಮಃ— ವಚನ ನಂ॥ ೩೧೭ ಇದರಲ್ಲಿ ದಾನಧರ್ಮ ಮಾಡುವಲ್ಲಿ ದಾನವನ್ನು ಮಾಡಿದ್ದರ ಪ್ರತಿಫಲವಾಗಿ ಉಪಕಾರ ಮಾಡ ಬೇಕೇ ಹೊರತು ಅಪಕಾರ ಮಾಡಬಾರದೆಂದು ಹೇಳುವಲ್ಲಿ ಅನೇಕ ಪೌರಾಣಿಕ ಉದಾಹರಣೆಗಳನ್ನು ಕೊಟ್ಟು ಈ ರೀತಿಯನ್ನು ಖಂಡಿಸಿ ದ್ದಾನೆ. ನಾರಾಯಣನು ಬ್ರಾಹ್ಮಣನಾಗಿ ಬಂದು ಬಲಿಯ ಭೂಮಿಯ ಬೇಡಿದ್ದೂ ಕರ್ಣನ ಕವಚ ಬೇಡಿದ್ದೂ ನಾಗಾರ್ಜುನನ ಶಿರವ ಬೇಡಿದ್ದೂ ಇವುಗಳನ್ನುಲ್ಲೇಖಿಸಿ ಇವರಿಗೆ ಕಡೆಗೆ ಹಾನಿ ಮಾಡಿದ್ದನ್ನು ಬಸವೇಶ್ವ ರನು ನಿಷೇಧಿಸಿದ್ದಾನೆ. ಹೀಗೆ ಅವನು ಹೇಳುವಲ್ಲಿ ಕೆಡಕು ಮಾಡ ಬಾರದೆಂಬ ಉದ್ದೇಶವು ಅವನದಿರುತ್ತದೇ ಹೊರತು ಬೇರೊಂದಿಲ್ಲ.

(೮) ವೇದಾಧ್ಯಯನಃ— ಈ ವಿಷಯವಾಗಿ ಬಸವೇಶ್ವರನು ೫೫೫ನೇ ವಚನದಲ್ಲಿ ಹೇಳಿರುವದೇನಂದರೆಃ— "ವೇದಶಾಸ್ತ್ರದವರ ಹಿರಿ ಯರೆಂಬೆನೇ? ಮಾಯಾ ಭ್ರಾಂತಿ ಕವಿತೆ ಗೀತಜ್ಞರ ಹಿರಿಯ ರೆಂಬೆನೇ? ಇವರು ಹಿರಿಯರುಗಳೇ ಯಾಗ ನಟ್ಟುವಿಗೆ ಪಾಣ್ಬರು? ಇವರಿಂದಧಿಕವ ಸಾಧಿಸುವರೇನು ಕಿರಿಯರೇ? ಇಂತು ವಿದ್ಯಾಗುಣ ಜ್ಞಾನ ಧರ್ಮಾಚಾರ ಶೀಲಂಗಳ ನಮ್ಮ ಕೂಡಲಸಂಗನ ಶರಣರು ಸಾಧಿಸಿದ ಸಾಧನೆಯನೆ ಸಾಧಿಸು" ಇದರಲ್ಲಿ ಅವನು ನೀತಿನಡತೆಗೆ ಬಹಳ ಮಹತ್ವ ಕೊಟ್ಟಿದ್ದಾನೆ.

(೯) ಜಪತಪಾನುಷ್ಠಾನಗಳುಃ— ಇವುಗಳಿಗೆ ಬ್ರಾಹ್ಮಣರು ಬಹಳ ಮಹತ್ವ ಕೊಟ್ಟಿದ್ದನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಬಹಳ ಹೀಯಾಳಿಸಿದ್ದಾನೆ. ಈ ಬಗ್ಗೆ ನಂಬರು ೫೪೭ರಿಂದ ೫೫೫ರವರೆಗಿನ ವಚನಗಳನ್ನು ವಾಚಕರು ನೋಡಬೇಕು.

ನಾವು ಮೇಲೆ ವಿವರಿಸಿದ ಭೇದಗಳು ಕೇವಲ ತಾತ್ವಿಕವಾಗಿವೆ. ವೀರಶೈವ ಧರ್ಮಕ್ಕನುಸರಿಸಿ ವರ್ತಿಸುವವರಿಗೆ ಮೇಲ್ಕಂಡ ಬ್ರಾಹ್ಮ ಣರ ಆಚರಣೆಗಳು ಹೊಂದಿಕೆಯಾಗುವದಿಲ್ಲಾದ್ದರಿಂದ ಅವನು ಅವು ಗಳನ್ನು ಬಹು ಮಾರ್ಮಿಕ ಶಬ್ದಗಳಿಂದ ಖಂಡಿಸಿದ್ದಾನೇ ಹೊರತು ಅದು ಕೇವಲ ಬ್ರಾಹ್ಮಣ ದ್ವೇಷವಲ್ಲ, ಬಸವೇಶ್ವರನಂತೆ ಅಭಿಪ್ರಾಯ ವುಳ್ಳವರು ಈಗ ದೇಶದಲ್ಲಿ ಹೆಚ್ಚಾಗುತ್ತಲಿದ್ದಾರೆ. ಇಂಥ ವರ್ತನೆಗಳು ಅವನ ಉಜ್ವಲವಾದ ಧಾರ್ಮಿಕ ವೃತ್ತಿಯನ್ನೂ ಸಮತಾ ಭಾವವನ್ನೂ

ತೋರಿಸುತ್ತವೆ. ಇದಕ್ಕೋಸ್ಕರ ಬಸವೇಶ್ವರನು ನಮ್ಮೆಲ್ಲರ ಶ್ಲಾಘನೆಗೆ ಪಾತ್ರನಾಗಿದ್ದಾನೆ.

## ಬಸವೇಶ್ವರನು ಮತ್ತು ಜೈನರು

ಬಸವೇಶ್ವರನಿದ್ದ ೧೨ನೇ ಶತಮಾನದಲ್ಲಿ ಜೈನ ಸಮಾಜವು ಕರ್ನಾಟಕದಲ್ಲಿ ಮಹತ್ವದ್ದಾಗಿತ್ತೆಂಬುದರಲ್ಲಿ ಏನೂ ಸಂದೇಹವಿಲ್ಲ. ಇದಕ್ಕೆ ಆಗ ಉಂಟಾದ ಅನೇಕ ಜೈನ ಗ್ರಂಥಕಾರರೇ ನಿದರ್ಶನವಾಗಿದೆ. ಇಂಥ ಜೈನ ಸಮಾಜದ ವಿಷಯವಾಗಿ ಬಸವೇಶ್ವರನು ಹೇಗೆ ನಡೆದನೆಂಬುದು ಬಹು ಬೋಧಪ್ರದವಾಗಿದೆ. ಬಸವೇಶ್ವರನನ್ನುಲ್ಲೇಖಿಸುವ ಅನೇಕ ಪುರಾಣಗಳಿದ್ದು ಅವುಗಳಲ್ಲೆಲ್ಲ ಅವನ ಕಾಲದಲ್ಲಿ ಎಲ್ಲ ಕಡೆಗೂ ಜೈನರ ಸಂಖ್ಯೆಯು ಬಹಳ ದೊಡ್ಡದಾಗಿತ್ತೆಂತಲೂ ಅಸಂಖ್ಯಾತ ಜೈನ ಚೈತನ್ಯಾಲಯಗಳು ದೇಶದಲ್ಲಿ ಅಸ್ತಿತ್ವದಲ್ಲಿದ್ದವೆಂತಲೂ ಇದರಿಂದ ಶಿವಮತವು ಅವನತ ಸ್ಥಿತಿಯನ್ನು ಹೊಂದಿತ್ತೆಂತಲೂ ಈ ಸ್ಥಿತಿಯನ್ನು ದೂರ ಮಾಡುವದಕ್ಕೋಸ್ಕರ ಪರಮೇಶ್ವರನ ಅಪ್ಪಣೆಯ ಪ್ರಕಾರ ನಂದಿಯು ಬಸವನಲ್ಲಿ ಅವತಾರ ಹೊಂದಿದನೆಂತಲೂ ಹೇಳಲ್ಪಡುತ್ತಿವೆ. ಆದರೆ ಈ ವರ್ಣನೆಗಳಲ್ಲಿ ಅತಿಶಯೋಕ್ತಿಯಿದೆ ಎಂದು ನಮಗೆ ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಈ ಪುರಾಣಗಳಲ್ಲಿ ಹೇಳುವಂತೆ ಜೈನರ ಪ್ರಾಬಲ್ಯವು ಕೆಲವು ಮಟ್ಟಿಗೆ ಮಾತ್ರ ಇದ್ದು ಅದು ಅಷ್ಟು ಹೆಚ್ಚಾಗಿರಲಿಲ್ಲ. ಅವರಕಿಂತಲೂ ಹೆಚ್ಚು ಹಿಂದು ಧರ್ಮಾನುಯಾಯಿಗಳೇ ಪ್ರಬಲರಾಗಿದ್ದರು. ಆಗ ಇಲ್ಲಿ ಶೈವ ಪಂಗಡಗಳೂ ಬ್ರಾಹ್ಮಣರೂ ಇವರೇ ಪ್ರಬಲರಾಗಿದ್ದರು. ಈ ಸಂಗತಿಯನ್ನು ಬಸವೇಶ್ವರ ವಚನಗಳಿಂದ ನಾವು ಊಹಿಸಬಹುದು. ಅವುಗಳಲ್ಲಿ ಜೈನರನ್ನು ಟೀಕಿಸುವ ಅಥವಾ ಉಲ್ಲೇಖಿಸುವ ವಚನಗಳ ಸಂಖ್ಯೆಯು ಅತ್ಯಲ್ಪವಾಗಿದೆ. ಒಂದು ವೇಳೆ ಜೈನರ ಕೂಡ ಬಸವೇಶ್ವರನ ಹೋರಾಟಗಳಿದ್ದರೆ ಅವು ಅವನ ವಚನಗಳಲ್ಲಿ ತೋರಿಬರತ್ತಿತ್ತು. ಆದರೆ ಅಂಥದೇನೂ ಅವುಗಳಲ್ಲಿ ಕಂಡುಬರುವುದಿಲ್ಲ. ಜೈನರನ್ನು ಉಲ್ಲೇಖಿಸಿದ ವಚನಗಳು ಮೂರು ಮಾತ್ರ ಇವೆ. ಅವು ಯಾವವೆಂದರೆ:—

(೧) ವಿಷ್ಣುವ ಪೂಜಿಸಿ ಮುಡುಹ ಸುಡಿಸಿಕೊಂಬುದ ಕಂಡೆ. ಜಿನ್ನನ ಪೂಜಿಸಿ ಬತ್ತಲೆ ಇಪ್ಪುದ ಕಂಡೆ. ಮೈಲಾರನ ಪೂಜಿಸಿ

ನಾಯಾಗಿ ಬೊಗಳುವುದ ಕಂಡೆ. ನಮ್ಮ ಕೂಡಲ ಸಂಗನ ಶರಣರ ಪೂಜಿಸಿ ದೇವಭಕ್ತನೆನಿಸಿಕೊಂಬುದ ಕಂಡೆ.

(೨) ಭಕ್ತರ ಕಂಡರೆ ಬೋಳರಪ್ಪಿರಯ್ಯ? **ಸವಣರ ಕಂಡರೆ, ಬತ್ತಲೆಯಪ್ಪಿರಯ್ಯ!** ಹಾರುವರ ಕಂಡರೆ, ಹರಿನಾಮವೆಂಬಿರಯ್ಯ! ಅವರವರ ಕಂಡರೆ, ಅವರವರಂತೆ. ಸೂಳೆಗೆ ಹುಟ್ಟಿದವರ ತೋರದಿರಯ್ಯ! ಕೂಡಲಸಂಗಮದೇವರ ಪೂಜಿಸಿ ಅನ್ಯ ದೈವಂಗಳಿಗೆರಗಿ ಭಕ್ತರೆನಿಸಿಕೊಂಬ ಅಜ್ಞಾನಿಗಳನೇನೆಂಬೆನಯ್ಯ?

ಈ ವಚನಗಳಲ್ಲಿ ಬಸವೇಶ್ವರನು ದಿಗಂಬರಿಗಳಾದ ಜೈನರನ್ನು ಉಲ್ಲೇಖಿಸಿದ್ದಾನೆ. ಮೂರನೇ ವಚನವು ಯಾವದೆಂದರೆ:—

(೩) ಹರನ ಕೊರಳಲ್ಲಿಹ ಕರೋಟಿಮಾಲೆಯ ಶಿರದ ಲಿಖಿತವ ಕಂಡು ಮರುಳು ತಾಂಡಗಳೋದಿ ನೋಡಲು, ಇವನಜ ಇವ ಹರಿ ಇವ ಸುರಪತಿ ಇವ **ಧರಣೇಂದ್ರ**ನಿವನಂತಕನೆಂದು ಹರುಷದಿಂದ ಸರಸವಾಡಿತ್ತ ಕಂಡು ಹರ ಮುಕುಳಿತನಾಗಿ ನಕ್ಕ ನಮ್ಮ ಕೂಡಲಸಂಗಮದೇವ.

ಇದರಲ್ಲಿ ಧರಣೇಂದ್ರನು ಪರಮಾತ್ಮನಿಗೆ ಸರಿಯಲ್ಲವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ.

ಈ ಮೂರು ವಚನಗಳ ಹೊರತು ಜೈನರ ಉಲ್ಲೇಖಗಳು ಅವನ ಬೇರೆ ಯಾವ ವಚನದಲ್ಲಿಯೂ ಕಂಡುಬರುವದಿಲ್ಲ. ಬಸವೇಶ್ವರನು ಜೈನರಿಂದ ಪೀಡಿಸಲ್ಪಟ್ಟವನಾಗಿದ್ದರೆ ಅವನು ಬ್ರಾಹ್ಮಣರ ಬಗ್ಗೆ ನುಡಿದಂತೆ ಅವರ ತತ್ವಗಳನ್ನೂ ಅವರನ್ನೂ ಅನೇಕ ರೀತಿಯಿಂದ ಹಳಿಯಬಹುದಾಗಿತ್ತು. ಆದರೆ ಅವರ ಬಗ್ಗೆ ದ್ವೇಷಪೂರಿತ ಯಾವ ವಚನಗಳೂ ನಮಗೆ ದೊರೆಯುವದಿಲ್ಲ. ಆದ್ದರಿಂದ ಜೈನರ ವಿಷಯವಾಗಿ ವೀರಶೈವ ಪುರಾಣಗಳಲ್ಲಿ ಕಂಡುಬರುವ ಸಂಗತಿಗಳಲ್ಲಿ ಅತಿಶಯೋಕ್ತಿ ಇದೆ ಎಂದು ನಮಗೆ ತೋರುತ್ತದೆ. ಜೈನರಿಂದ ಬಸವೇಶ್ವರನಿಗೆ ಯಾವ ತಡೆಗಳು ಆಗಿಲ್ಲ. ಅಥವಾ ಅವರಿಂದ ಅವನಿಗೆ ಯಾವ ಸಹಾಯವೂ ಆಗಿಲ್ಲ. ಈ ಸ್ಥಿತಿಯು ಇದ್ದಹಾಗೆ ನಮಗೆ ತೋರುತ್ತದೆ.

## ಬಸವೇಶ್ವರನು ಮತ್ತು ಬಣಜಿಗರು.

೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ವ್ಯಾಪಾರೋದ್ಯೋಗಗಳು ದೊಡ್ಡ ಪ್ರಮಾಣದಿಂದ ನಡೆಯುತ್ತಿದ್ದದರಿಂದ ಅಲ್ಲಿಯ ವ್ಯಾಪಾರಿ ವರ್ಗಗಳು ಅಂದರೆ ಮುಖ್ಯವಾಗಿ ಬಣಜಿಗರು ಬಹು ಶ್ರೀಮಂತರಿರಬೇಕೆಂಬುದು ನಿರ್ವಿವಾದವು. ಆದರೆ ಬಸವೇಶ್ವರನಿಗೆ ಇವರಿಂದ ಅವ ಸಹಾಯವಾಗಿಲ್ಲೆಂದು ನಮಗೆ ತೋರುತ್ತದೆ. ಬಸವೇಶ್ವರನು ತನ್ನ ವಚನಗಳಲ್ಲಿ ಅವರನ್ನು ನುತಿಸುವದರ ಬದಲು ಅವರು ಲೋಭಿಗಳೆಂದು ಅವರನ್ನು ಪಳಿದಿದ್ದು ಮಾತ್ರ ತೋರಿಬರುತ್ತದೆ. ಈ ಬಗ್ಗೆ ಕೆಳಗಿನ ವಚನಗಳನ್ನು ವಾಚಕರು ಲಕ್ಷಿಸತಕ್ಕದ್ದು.

(೧) ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹಾದೇವಸೆಟ್ಟಿ. ಒಮ್ಮನವಾದಡೆ ಒಡನೆ ನುಡಿವನು. ಇಮ್ಮನವಾದಡೆ ನುಡಿಯನು. ಕಾಣಿಯ ಸೋಲ. ಅರ್ಧಗಾಣಿಯಗೆಲ್ಲ. ಜಾಣ ನೋಡವ್ವಾ ನಮ್ಮ ಕೂಡಲಸಂಗಮದೇವ.

(೨) ಭಿತ್ತಿ ಇಲ್ಲದ ಚಿತ್ತಾರದಂತೆ, ಭಕ್ತಿ ಇಲ್ಲದ ಪ್ರಮಥನಾಗಿ ಎಂದಿಪ್ಪೆನಯ್ಯಾ? ಸತ್ಯವಿಲ್ಲದ ಶರಣನಾಗಿ ಎಂದಿಪ್ಪೆನಯ್ಯಾ? ಗೆರೆ ಇಲ್ಲದ ಕೋಲಲ್ಲಿ ಉದ್ದರೆಯನಿಕ್ಕಿದ ಭಂಡದ ಹರದನಂತಾದೆನಯ್ಯಾ ಕೂಡಲಸಂಗಮದೇವಾ.

ಈ ಎರಡು ವಚನಗಳಲ್ಲಿ ಬಸವೇಶ್ವರನು ಬಣಜಿಗರನ್ನು ಹಳಿದಿದ್ದಾನೆ. ವಾಚಕರು ಕೆಳಗಿನ ವಚನವನ್ನು ಸಹ ನೋಡತಕ್ಕದ್ದು.

(೩) ಬಡ ಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬಿಡ. ಮಾಲೆಗಾರನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ. ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗ ಬಿಡ. ನಾನಾವ ಹಂಗಿನವನಲ್ಲ. ನಿಮ್ಮ ಶರಣರ ಹಂಗಿನವನಯ್ಯಾ ಕೂಡಲಸಂಗಮದೇವಾ.

ವೀರಶೈವರು ದೇವಭಕ್ತಿಯುಳ್ಳವರಾಗಿದ್ದರೆ ಅವರು ಒಬ್ಬ ಪರಮಾತ್ಮನನ್ನು ಬಿಟ್ಟು ಬೇರೆ ಯಾವ ಕಿರುಕುಳ ದೈವಗಳನ್ನು ನಂಬಕೂಡದೆಂದು ಅವರ ತತ್ವವಿದೆ. ಆದರೆ ಬಣಜಿಗರು ಇದನ್ನು ಬಿಟ್ಟು

ಗಣಪತಿ ಪೂಜೆಯನ್ನು ಮಾಡುತ್ತಾರೆಂದು ಅವರನ್ನು ಬಸವೇಶ್ವರನು ಇಲ್ಲಿ ಹಳಿದಿದ್ದಾನೆ.

ಬಸವೇಶ್ವರನಿಗೆ ಶ್ರೀಮಂತರಾದ ಬಣಜಿಗರು ಸಹಾಯಕರಾಗಿ ವರ್ತಿಸಿಲ್ಲವೆಂದು ನಮಗೆ ತೋರುತ್ತದೆ ಅವನು ಬಡ ಜನರಲ್ಲಿಯೇ ಇದ್ದುಕೊಂಡು ಅವರಲ್ಲಿ ಉಚ್ಚ ತತ್ವಗಳನ್ನು ಪ್ರಸಾರ ಮಾಡಲು ಪ್ರಯತ್ನಿಸಿದ್ದಾನೆ. ವಚನಕಾರರು ಅಥವಾ ಶಿವಶರಣರು ವರ್ತಕರಿದ್ದದ್ದು ಬಹಳ ಕಡಿಮೆ. ಅಥವಾ ಅವರು ಇಲ್ಲವೆಂತಲೇ ಹೇಳಬಹುದು. ಅವರಲ್ಲಿ ಬಹು ಜನರು ವೀರ ಬಣಂಜುಗಳೆಂದು ಕಾಳಾಮುಖ ಪಂಥವನ್ನು ಸೇರಿದವರಾಗಿದ್ದರೆಂದು ಶಿಲಾ ಲೇಖಗಳಿಂದ ಕಂಡುಬರುತ್ತದೆ. ಆದರೆ ಬಸವೇಶ್ವರನ ತರುವಾಯ ವೀರಶೈವ ಸಮಾಜವು ಪ್ರಬಲವಾಗುತ್ತ ಹೋದ ಹಾಗೆ ಬಣಜಿಗರು ಲಿಂಗಧಾರಿಗಳಾಗಿರಬೇಕೆಂದು ನಮಗೆ ತೋರುತ್ತದೆ.

## ಬಸವೇಶ್ವರನು ಮತ್ತು ಕೈಗಾರಿಕೆಯುವರು.

ಕೈಗಾರಿಕೆಯುವರ ವಿಷಯವಾಗಿ ಬಸವೇಶ್ವರನು ಕೆಳಗೆ ಕಾಣಿಸಿದ ವಚನದಲ್ಲಿ ಹೇಳಿರುವದೇನಂದರೆ:—

ದೇವ ಸಹಿತ ಭಕ್ತಮನೆಗೆ ಬಂದರೆ, ಕಾಯಕವಾವುದೆಂದು ಬೆಸಗೊಂಡೆನಾದರೆ, ನಿಮ್ಮಾಣೆ ನಿಮ್ಮ ಪುರಾತರಾಣೆ. ತಲೆ ದಂಡ, ತಲೆ ದಂಡ. ಕೂಡಲಸಂಗಮದೇವಾ, ಭಕ್ತನಲ್ಲಿ ಕುಲವನರಸಿದಡೆ, ನಿಮ್ಮ ರಾಣಿವಾಸದಾಣೆ.

ಬಸವೇಶ್ವರನು ಯಾವಾಗಲೂ ಒಕ್ಕಲಿಗರಿಗೆ ಮತ್ತು ಕೈಕಸಬು ಮಾಡುವವರಿಗೆ ಬಹಳ ಮಹತ್ವವನ್ನು ಕೊಟ್ಟಿದ್ದಾನೆ. ಅವರು ಮಾಡುವ ಉದ್ಯೋಗಗಳು ಕಾಯಕಗಳೆಂದು ಅವುಗಳಿಗೆ ಉನ್ನತಸ್ಥಾನವನ್ನು ಕೊಟ್ಟಿದ್ದಾನೆ. ಆದ್ದರಿಂದ ಕಾಯಕಗಳನ್ನು ಮಾಡುವವರಲ್ಲಿ ಬಹು ಜನರು ವೀರಶೈವ ಧರ್ಮಾನುಯಾಯಿಗಳಾದರು. ಆದ್ದರಿಂದ ಅವರಲ್ಲಿ ಬಹು ಜನರು ವಚನಕಾರರೂ ಶಿವಶರಣರೂ ಆಗಿಹೋಗಿದ್ದಾರೆ. ಅವರ ಮೂಲಕವೇ ವೀರಶೈವ ಸಮಾಜವು ೧೨ನೇ ಶತಮಾನದಲ್ಲಿ ಬಹು ಪ್ರಾಬಲ್ಯವನ್ನು ಹೊಂದಿತು. ಈ ಸಮಾಜಗಳ ತರುವಾಯ ಬಣಜಿಗ ಮೊದ

ಲಾದ ಶ್ರೀಮಂತ ಸಮಾಜಗಳು ವೀರಶೈವ ಧರ್ಮವನ್ನು ಸ್ವೀಕರಿಸಿರ ಬೇಕೆಂದು ನಮಗೆ ತೋರುತ್ತದೆ.

## ಬಸವೇಶ್ವರನು ಮತ್ತು ಅಸ್ಪೃಶ್ಯರು.

ಬಸವೇಶ್ವರನು ಅಸ್ಪೃಶ್ಯರಿಗೋಸ್ಕರ ಕಟುವಾದ ಶಬ್ದಗಳನ್ನು ಎಂದೂ ಆಡಿಲ್ಲ ಚೆನ್ನಯ್ಯ, ಕಕ್ಕಯ್ಯ, ಚಿಕ್ಕಯ್ಯ, ಶ್ವಪಚಯ್ಯ, ಇವರು ಅಸ್ಪೃಶ್ಯರು. ಆದರೆ ಅವರಿಗೋಸ್ಕರ ಅವನು ಅತ್ಯಂತ ಆದರ ಭಾವ ವನ್ನು ತಾಳಿ ಅನೇಕ ವಚನಗಳಲ್ಲಿ ಅವರನ್ನು ಬಹಳವಾಗಿ ಸ್ತುತಿಸಿ ದ್ದಾನೆ. ಅವುಗಳೆಲ್ಲವನ್ನು ಈ ಲೇಖದಲ್ಲಿ ಉದಹರಿಸುವದು ಅನಾವಶ್ಯ ಕವು.

ನಮ್ಮ ಹಿಂದಿನ ಲೇಖಗಳನ್ನೂ ಮತ್ತು ಈಗಿನ ಲೇಖವನ್ನೂ ವಾಚಕರು ವಿಚಾರ ಮಾಡಿದಲ್ಲಿ ಬಸವೇಶ್ವರನು ಬಹು ಜನ ಸಮಾ ಜದ ಉದ್ಧಾರಕ್ಕೋಸ್ಕರ ದುಡಿದನೆಂದು ಕಂಡುಬರದೆ ಇರಲಾರದು. ಅವನು ಮೇಲಿನ ತರಗತಿಯ ಸಮಾಜಗಳಿಗೆ ಒಳಗಾಗಿ ನಡೆಯದೆ ಕೆಳಗಿನ ಸಮಾಜಗಳನ್ನು ಎತ್ತರಿಸಲು ಪ್ರಯತ್ನಿಸಿದ್ದಾನೆ. ಮೇಲಿನ ಸಮಾಜಗಳು ಬಸವೇಶ್ವರನನ್ನು ಆರಂಭದಲ್ಲಿ ಬಹಳ ಪೀಡಿಸಿರಲಿಕ್ಕೆ ಬೇಕು. ಆದರೆ ಅದಕ್ಕೆ ಅವನು ಹಿಂದೆಗೆಯದೆ ತನ್ನ ಉದಾರ ಮತ ಗಳನ್ನು ದೇಶದಲ್ಲಿ ಪ್ರಸಾರ ಮಾಡಿದ್ದಾನೆ. ಅನೇಕರು ತಿಳಿದಿರುವಂತೆ ಅವನು ಎಲ್ಲಿಯೋ ಒಂದು ಏಕಾಂತ ಸ್ಥಳದಲ್ಲಿದ್ದುಕೊಂಡು ದೇವರ ಭಜನೆಯನ್ನು ಮಾಡುತ್ತ ಅಥವಾ ಧ್ಯಾನಿಸುತ್ತ ಕುಳಿತಿಲ್ಲ. ಅವನು ನಿಜವಾದ ಕರ್ಮಯೋಗಿಯಾಗಿ ಅಜ್ಞಸಮಾಜಗಳಲ್ಲಿ ಬೆರೆದು ಅವ ರನ್ನು ಉದ್ಧರಿಸಲು ಪ್ರಯತ್ನಿಸಿದ ಮಹಾಪುರುಷನಾಗಿದ್ದಾನೆ.

(ಮುಂದುವರಿದುದು.)

# ದೀಕ್ಷಾವಾದ.

(ಲೇಖಕರು.— ಶ್ರೀ. ಮಾ. ನಂ. ನಂಜಪ್ಪನವರು, ಬೆಂಗಳೂರು ನಗರ)

## (ಐದು ಜನರಿಗೆ ಉತ್ತರ)

ಪುನಃ ಲೇಖಾಂಕ ೧

ವಾಚಕರಲ್ಲಿ ಬಿನ್ನಹ.

ಆಯುಷ್ಯದ ಪ್ರಾರಂಭದಲ್ಲಿ ಒಮ್ಮೆ ನೆರವೇರುವ ವೀರಶೈವ ದೀಕ್ಷಾ ಸಂಸ್ಕಾರವೇ ಶಾಸ್ತ್ರೀಯ ಮತ್ತು ಆದ್ಯರಾಚರಣೆಯ ರೀತಿಯಿಂದೂ ಈಗ ಪ್ರಚಾರಕ್ಕೆ ಬರುತ್ತಿರುವ ಎಂಟನೆಯ ಅಥವಾ ಇನ್ನೂ ಹೆಚ್ಚು ವಯಸ್ಸಿನ "ಶಿವದೀಕ್ಷಾ" ಪದ್ಧತಿಯು ಹಿಂದೆ ಮಠಗಳಲ್ಲಿ ಭವಿಗಳನ್ನು ಭಕ್ತರನ್ನಾಗಿಸುತ್ತಿದ್ದುದರ ಸ್ಮಾರಕ ಮತ್ತು ಅನ್ಯ ಧರ್ಮೀಯರ ಉಪನಯನ ಕರ್ಮದ ಅನುಕರಣವೆಂಬುದನ್ನೂ ಸಪ್ರಮಾಣವಾಗಿ ಸಿದ್ಧಪಡಿಸಿದ ಅನೇಕ ಲೇಖನಗಳು 'ಶಿವಾನುಭವ' ದಲ್ಲಿ ವಿದ್ವಾಂಸರಿಂದಲೂ ಅನುಭವಿಗಳಿಂದಲೂ ಬರೆಯಲ್ಪಟ್ಟು ವರ್ಷಗಟ್ಟಳೆಯಾಗಿ ಪ್ರಕಟವಾಗಿವೆ. ಇನ್ನೂ ಆಗುತ್ತಿವೆ.

ಹೀಗಿದ್ದರೂ ಅವುಗಳನ್ನು ಖಂಡಿಸುವದಕ್ಕಾಗಿ ಪ್ರಕಟವಾಗುತ್ತಿರುವ ಲೇಖನಗಳಲ್ಲಿ ಸಮಂಜಸವಾದ ಶಾಸ್ತ್ರೀಯತೆಯಾಗಲಿ ಅನುಭವಪೂರ್ಣ ವಿಚಾರಗಳಾಗಲಿ ಇರದೆ, ಕೇವಲ ತೆಗಳಿಕೆ ಅಲ್ಪೋಕ್ತಿ ಒಮ್ಮೆ ಬರೆದ ಸಲ್ಲದ ವಿಚಾರಗಳನ್ನೇ ಪುನಃ ಪುನಃ ರೂಪಾಂತರಗೊಳಿಸಿ ಬರೆಯುವಿಕೆ ಮುಂತಾದುದು ಕಂಡುಬರುತ್ತದೆಯೇ ಹೊರ್ತು ಸಪ್ರಮಾಣವಾಗಿ ಸಮಂಜಸವಾಗಿ ವೀರಶೈವ ಶಾಸ್ತ್ರ ಮತ್ತು ವೀರಶೈವಾಚರಣೆಯ ಪ್ರಕಾರ ಸಿದ್ಧಗೊಳಿಸಿದ ವಿಚಾರಗಳು ಕಾಣುವುದೇ ಇಲ್ಲ.

ಈ ಸಂದರ್ಭದಲ್ಲಿ ಒಂದು ವಿಚಾರವನ್ನು ವಾಚಕರ ಗಮನಕ್ಕೆ ತರಬೇಕಾಗಿದೆ. ಅದಾವುದೆಂದರೆ.— ವೀರಶೈವರು ಗುರುವನ್ನು ಆಶ್ರಯಿಸಬಾರದೆಂದಾಗಲಿ ಗುರುವಿಂದ ಯಾವುದನ್ನೂ ತಿಳಿದುಕೊಳ್ಳಬಾರ

ದೆಂದಾಗಲಿ ಗುರುವಿನ ಅವಶ್ಯಕತೆಯಿಲ್ಲವೆಂದಾಗಲೀ ಯಾರೂ ಹೇಳು ವುದಿಲ್ಲ.

ಶಿಷ್ಯಂಗೆ ಗುರುವಿನ ದರುಶನವೇ ಪರುಷ! ಆಪತ್ತನಳಿದು ಪೊರಮಡಲು ಗುರುಪಾದವೇ ಸೋಪಾನ! ಗುರುಚರಣ ಸೋಂಕಿದರೆ ತನುಶುದ್ಧ! ಗುರುಪಾದಕೆರಗಿದರೆ ಶಿರಸುತಾ ಮಣಿಯುಕ್ಕು! ನೆಟ್ಟನೆ ಗುರುವಿಗೆರಗಿದರೆ ಕರ್ಮತಾ ಸುಟ್ಟು ಹೋಗುವುದು! ಜಗಕೆಲ್ಲ ಗುರು ವಿಂದ ಮುಕ್ತಿ !!!

ಆದರೆ ಶಕ್ತಿಯೆಷ್ಟಿದೆಯೋ ಸಮಯವಾವುದಿದೆಯೋ ಸಮಯಕ್ಕೆ ತಕ್ಕ ಅವಶ್ಯಕವೆಷ್ಟಿದೆಯೋ ಅಷ್ಟಕ್ಕಿಂತ ಹೆಚ್ಚಾಗಿ ಗುರು ಕೃಪೆಯನ್ನು ಬಳಿಸಿಕೊಳ್ಳಲು ಪ್ರಯತ್ನಿಸಿದರೆ ಮಾತ್ರ ಚಿನ್ನದ ಮೊಟ್ಟೆಗಳನ್ನು ಇಡು ತ್ತಿದ್ದ ಪಕ್ಷಿಯನ್ನು ಕಂಡು ಅದರ ಹೊಟ್ಟೆಯಲ್ಲಿರುವ ಚಿನ್ನದ ಉಂಡೆಗ ಳನ್ನೆಲ್ಲಾ ಒಮ್ಮೆಯೇ ಪಡೆಯಲೆಳಸಿ ಹೆಚ್ಚಾಗಿ ತಿನ್ನಿಸಿ ಅದಕ್ಕೂ ಅಜೀ ರ್ಣವನ್ನುಂಟು ಮಾಡಿ ಅದರ ಹೊಟ್ಟೆಯನ್ನು ಸೀಳಿ ತಾನೂ ಅಸ ಲಿಗೇ ಮೋಸವನ್ನು ತಂದುಕೊಂಡ ದುರದೃಷ್ಟಶಾಲಿಯ ಗತಿಯೇ ಪ್ರಾಪ್ತ ವಾಗುತ್ತದೆ. ಎಂದು ಎಚ್ಚರಿಕೆಯನ್ನು ಕೊಡುವುದು ಮಾತ್ರ ಸತ್ಯಾ ನ್ವೇಷಕರೆಲ್ಲರ ಕರ್ತವ್ಯವೇ ಆಗಿದೆ.

ಮತ್ತೊಂದು ಸ್ಪಷ್ಟೀಕರಣವೇನೆಂದರೆ:-- ವೀರಶೈವರಿಗೆ ಈ ಎರ ಡನೇಬಾರಿ ಪುನಃ ಶಿವದೀಕ್ಷೆಯಾಗಬೇಕೆಂಬುದು ಆದ್ಯರ ಆಚರಣೆಗೆ ಸಲ್ಲದು. ಅದು ಕೇವಲ "ಶೈವ" ಪದ್ಧತಿ. ಅನ್ಯಧರ್ಮದವರ ಉಪನ ಯನ "ಕರ್ಮ"ದ ಬಾಹ್ಯಾಡಂಬರಕ್ಕೆ ಮರುಳಾಗಿ ಆ ಬಂಗಾರದ ನೇಣನ್ನು ಭ್ರಮೆಯಿಂದ ಕೊರಳಿಗೆ ಸುತ್ತಿಕೊಂಡು ಅನುಕರಿಸಿದುದರ ಫಲವಾಗಿ ಈಗ ಮೇಲುಸಿರು ಕೀಳುಸಿರು ಬಿಡುತ್ತಿರುವುದೇ ಇದರ ನಿದರ್ಶನ. ಯಾವ ಪುರಾತನ ಶರಣರ ಚರಿತ್ರೆಗಳಲ್ಲಿಯೂ ವೀರಶೈ ವರು ಪುನಃ ಶಿವದೀಕ್ಷೆಯನ್ನು ಪಡೆದುದಕ್ಕೆ ಆಧಾರಗಳಿಲ್ಲ! ಹಾಗೇನಾ ದರೂ ಇದ್ದು ಅದನ್ನು ಯಾರಾದರೂ ಶೋಧಿಸಿ ಪ್ರಕಟಿಸಿದರೆ ಆಗ ಅದನ್ನು ಸರ್ವರೂ ಒಪ್ಪಲೇಬೇಕಾಗುತ್ತದೆಯೆಂದು ಮುಂತಾಗಿ ಈ ಹಿಂದಿನ ಲೇಖನಗಳಲ್ಲಿ ಅನೇಕ ಸಾರಿ ಸೂಚಿಸಿದ್ದರೂ ಸಹ ಈ ವರೆಗೂ ಅಂತಹ ಯಾವುದನ್ನೂ ಯಾರೂ ಪರಿಶೋಧಿಸಿ ಪ್ರಕಟಿಸಲು. ಮುಂದೆ

ಬಂದಿಲ್ಲ. ಮತ್ತು "ದೀಕ್ಷಾವಾದ"ದ ಮೊದಲನೇ ಲೇಖನದಲ್ಲಿಯೇ ಪ್ರಕಟಿಸಿದ ಪ್ರಶ್ನೆಗಳಿಗೆ ಈ ವರೆಗೂ ಒಬ್ಬರೂ ಉತ್ತರಗಳನ್ನೂ ಬರೆಯ ಲಿಲ್ಲ! ಸಂಶಯಗಳನ್ನೂ ನಿರಸನಗೊಳಿಸಿಲ್ಲ! ಆದರೆ ಒಬ್ಬರ ಒಂದೇ ಬಗೆಯ ಅಭಿಪ್ರಾಯಗಳೇ ಬೇರೆ ಬೇರೆ ಹೆಸರುಗಳಿಂದ ಪ್ರಕಟವಾಗು ವಿಕೆಯು ಮಾತ್ರ ನಿಂತಿಲ್ಲ! ಇದಕ್ಕಿಂತ ಆಭಾಸವಿನ್ನಿಲ್ಲ!

ಆದುದರಿಂದ ಈ ಪುನರ್ದೀಕ್ಷೆಯಾಗಬೇಕೆಂಬುದು ಅನ್ಯರ "ಉಪ ನಯನ" ಕರ್ಮದ ಅನುಕರಣ ಅಹುದೆ? ಅಲ್ಲವೆ? ವೀರಶೈವರು ಶಿವಾನುಭಾವದ ಸದುಪದೇಶಕ್ಕಾಗಿ ಗುರುವನ್ನು ಆಶ್ರಯಿಸಬೇಕೆ ಅಥವ ಭವಿಗಳು ಭಕ್ತರಾಗಲು ಹೊಂದಬೇಕಾದ "ವೀರಶೈವದೀಕ್ಷೆ"ಯನ್ನು ಪುನಃ ವೀರಶೈವರೇ ಹೊಂದುವುದಕ್ಕಾಗಿ ಗುರುವನ್ನು ಆಶ್ರಯಿಸಬೇಕೆ? ಮುಂತಾದ ವಿಚಾರಗಳನ್ನು ಜಿಜ್ಞಾಸುಗಳೆಲ್ಲರೂ ಅಂಧಾನುಕರಣಕ್ಕಾ ಗಲಿ ದಾಕ್ಷಿಣ್ಯಕ್ಕಾಗಲಿ ಬಲಿಬೀಳದೆ ನಿಷ್ಪಕ್ಷಪಾತ ಬುದ್ಧಿಯಿಂದ ವಿಮ ರ್ಶಿಸುವವರಾಗಬೇಕು

## ಶ್ರೀ ಶಿವಮೂರ್ತಿಶಾಸ್ತ್ರಿಗಳಿಗೆ ಉತ್ತರ.

ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಕಳೆದ ವರ್ಷ ಈ ಲಿಂಗಧಾರ ಣವೇ ಬೇರೆ ಶಿವದೀಕ್ಷೆಯೇ ಬೇರೆ ಎಂಬುದಾಗಿ ಬರೆದ ಮೊದಲನೇ ಲೇಖವನ್ನೇ ಸಪ್ರಮಾಣಗಳಿಂದ ಖಂಡಿಸಿ, ಅವರು ಉದಹರಿಸಿದ್ದ:—

"ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ........."
"ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೇನಯ್ಯ?..."
"ಜನ್ಮನಾಜಾಯತೇ ಶೂದ್ರಃ ಕರ್ಮಣಾದ್ವಿಜಉಚ್ಯತೇ..."
"ಕಾಷ್ಠೇಷು ವಹ್ನಿ ದಗ್ಧೇಷು..... ಯಥಾರೂಪಂನವಿದ್ಯತೇ..."

ಮುಂತಾದ ವಾಕ್ಯಗಳೆಲ್ಲವೂ ವಯಸ್ಕರಾದ ಭವಿಗಳನ್ನು ಭಕ್ತರ ನ್ನಾಗಿಸುವ "ದೀಕ್ಷಾ" ಕಾರ್ಯವನ್ನು ಹೇಳುತ್ತವೆಯೇ ಹೊರ್ತು ವೀರ ಶೈವ ಬಾಲರಿಗಾಗಲಿ ವೃದ್ಧರಿಗಾಗಲಿ ಎರಡನೆಯ ಬಾರಿ ವೀರಶೈವ ದೀಕ್ಷೆಯನ್ನು ಮಾಡಬೇಕೆಂದು ಆ ವಾಕ್ಯಗಳಿಂದ ಅರ್ಥವಾಗುವುದಿಲ್ಲ ಎಂಬುದನ್ನು ಸಪ್ರಮಾಣವಾಗಿ ನಿರೂಪಿಸಲಾಗಿದ್ದಿತು.

ಅದಾದ ಎರಡು ವರ್ಷಕ್ಕೆ ಮೇಲ್ಪಟ್ಟಷ್ಟು ಕಾಲದವರೆಗೂ ಶ್ರೀ ಶಾಸ್ತ್ರಿಗಳು ಅದಕ್ಕೆ ಉತ್ತರವನ್ನೇ ಕೊಡದೆ ಯೋಚಿಸಿ ಸಂಶೋಧನೆ

ಗಳನ್ನು ನಡೆಸಿ ನಡೆಸಿ ಎರಡು ವರ್ಷಗಳ ನಂತರ ತಮ್ಮ ಶರಣಸಾಹಿತ್ಯದ ೫ನೇ ಸಂಪುಟದ ೩ನೇ ಸಂಚಿಕೆಯಲ್ಲಿ ಲೇಖಾಂಕ ೨ ಎಂದು ಹಿಂದಿನ ಹೆಸರಿನಲ್ಲಿಯೇ ಮತ್ತೊಂದು ಲೇಖವನ್ನು ಬರೆದಿದ್ದಾರೆ!

ಶ್ರೀ ಶಾಸ್ತ್ರಿಗಳು ನಡೆಸಿದ ಈ ಎರಡು ವರ್ಷದ ಸಂಶೋಧನೆಯ ನಂತರವೂ ಹಿಂದೆ ಅವರ ತಪ್ಪು ತಿಳವಳಿಕೆಯನ್ನು ಖಂಡಿಸಿದ್ದ 'ದೀಕ್ಷಾವಾದ' ಎಂಬ ಲೇಖನಕ್ಕೆ ಈ ವರೆಗೂ ಅವರಿಂದ ಯಾವ ಬಗೆಯ ಉತ್ತರವೂ ಪ್ರಕಟವಾಗಿಲ್ಲ. ಮತ್ತು ಇಷ್ಟು ಕಾಲದ ಪರ್ಯಾಲೋಚನಾ ನಂತರ ಈಗ ಅವರು ಪ್ರಕಟಿಸಿರುವ ಲೇಖದಲ್ಲಿಯೂ ಪುನಃ ತಮ್ಮ ಮೊದಲಿನ ಹಾದಿಯಲ್ಲಿಯೇ ಇದ್ದಾರೆ.

ಶ್ರೀ ಶಾಸ್ತ್ರಿಗಳು ಈ ತಮ್ಮ ೨ನೇ ಲೇಖಾಂಕದಲ್ಲಿ ತಮ್ಮ ಹಾದಿಯ ಸಮರ್ಥನೆಗಾಗಿ ಉಪಕ್ರಮ—ಉಪಸಂಹಾರಗಳಲ್ಲದೆ ೨೮ ಕಲಮುಗಳನ್ನಾಗಿ ತಮ್ಮ ವಿಚಾರಗಳನ್ನು ಪ್ರಕಟಿಸಿದ್ದಾರೆ. ಇವುಗಳಲ್ಲಿ ಒಂದೆರಡು ಕಲಮುಗಳನ್ನು ಖಂಡಿಸಿದರೆ ಎಲ್ಲವನ್ನೂ ಖಂಡಿಸಿದಂತೆಯೇ ಆಗುತ್ತದೆಯಾದುದರಿಂದ ಅವರ ವಾದವನ್ನೀ ಕೆಳಗೆ ಸಂಕ್ಷಿಪ್ತವಾಗಿ ಪರಿಶೀಲಿಸೋಣ.

## ವಚನಶಾಸ್ತ್ರ–ದಶ'ಕರ್ಮ'

"ದಶಕರ್ಮ" ಈ ಶಬ್ದವನ್ನುಚ್ಚರಿಸುವಾಗಲೇ ವೀರಶೈವಾಚಾರ ನಿರತರಿಗೆ ಏನೋ ಒಂದು ಬಗೆಯ ಆಶ್ಚರ್ಯಯುಕ್ತವಾದ ಅಗೋಚರ ಪ್ರಶ್ನಾರ್ಥಕ ಚಿಹ್ನೆಯು ಮನಸ್ಸಿನಲ್ಲಿ ಮೂಡುತ್ತದೆ. ಯಾಕಂದರೆ ಆದ್ಯರಿಂದುಕ್ತವಾದ ಎಲ್ಲ ವೀರಶೈವ ಗ್ರಂಥಗಳಲ್ಲಿಯೂ ಈ 'ಕರ್ಮ' ಎಂಬ ವಾಕ್ಯಕ್ಕೆ ಬದಲಾಗಿ 'ಕ್ರಿ' 'ಕ್ರಿಯೆ' 'ಕ್ರಿಯಾ' ಮುಂತಾಗಿ ಬಳೆಸಿದ್ದಾರೆಯೇ ಹೊರ್ತು 'ಕರ್ಮ' ಎಂದು ಪ್ರಯೋಗಿಸಿರುವುದು ಬಹಳ ಅಪರೂಪ. ವೀರಶೈವ ಸಂಸ್ಕೃತ ಗ್ರಂಥಗಳಲ್ಲಿಯೂ ಸಹ 'ಕ್ರಿಯಾ' ಎಂದೇ ಹೆಚ್ಚಾಗಿ ಬಳೆಸಿದ್ದಾರೆ.

ಈ 'ದಶಕರ್ಮ' ವೆಂಬ ಶಬ್ದವು ವರ್ಣ ವ್ಯವಸ್ಥೆಯ ಪ್ರಕಾರ ಅಗ್ರವರ್ಣದವರೆಂಬುವವರಿಗೆ ಅವರ ಧರ್ಮ ಶಾಸನಗಳಲ್ಲಿ ವಿಧಾಯಕವೆಂದು ಉಕ್ತವಾಗಿರುವ 'ಷೋಡಶಕರ್ಮ' ಗಳನ್ನು— ಶ್ರೀಮದ್ವ್ಯಾಸ

ವಾದಿ ಪ್ರಮಥರ ಲಿಂಗವಂತಿಕೆಯ ಅಂಗವಣೆಯನ್ನರಿಯದ ಅಂಧಾನುಕರಣಪಟುಗಳಾದ ಇತ್ತೀಚಿನ ಕೆಲ ಪಂಡಿತರೆನ್ನಿಸಿಕೊಂಡವರು—ದುರಾಶೆಯಿಂದ ಪರಿಗ್ರಹಿಸಿ ಆ ಹದಿನಾರರಲ್ಲಿ ತಮಗೆ ಬೇಡವಾದ ಆರು ಕರ್ಮಗಳನ್ನು ಬಿಟ್ಟು ಉಳಿದ ಹತ್ತು 'ಕರ್ಮ' ಗಳನ್ನು ಕಟ್ಟಿಕೊಂಡು ಅದಕ್ಕೆ "ದಶಕರ್ಮವಿಧಿ" ಎಂದು ಹೆಸರಿಟ್ಟಿದ್ದಾರೆ! ಪುಣ್ಯವಶಾತ್ ಈ ಪಂಡಿತ ಪುಣ್ಯಾತ್ಮರು ಶ್ರಾದ್ಧವೇ ಮೊದಲಾದ ಆರು ಕರ್ಮಗಳನ್ನೂ ಪರಿಗ್ರಹಿಸದೆ ತ್ಯಜಿಸಿ ಲಿಂಗವಂತಿಕೆಗೆಸಗಿರುವ ಉಪಕಾರವು ಸ್ಮರಣಾರ್ಹವಾಗಿದೆ ಆದರೆ ಉಳಿದ ಹತ್ತನ್ನೂ "ಕರ್ಮ" ಎಂಬ ಹೆಸರಿನಿಂದ ಕಟ್ಟಿಕೊಂಡುದೂ ಅಷ್ಟೇ ಅಕ್ಷಮ್ಯವಾಗಿದೆ!

ಷೋಡಶ"ಕರ್ಮ"ಗಳಲ್ಲಿಯ ಉಪನಯನ ಕರ್ಮದ ಸ್ಥಾನದಲ್ಲಿ "ದೀಕ್ಷೆ" ಎಂದು ಸೇರಿಸಿಬಿಟ್ಟಿದ್ದಾರೆ. ಇಂದಿಗೂ ದಶಕರ್ಮಗಳ ಹೆಸರುಗಳನ್ನು ಅನುಕ್ರಮವಾಗಿ ಬರೆಯುವಾಗ ದೀಕ್ಷಾ ಎಂದು ಬರೆದು ( ) ಹೀಗೆ ಕಂಸವನ್ನು ಹಾಕಿ ಅದರೊಳಗೆ ಉಪನಯನ ಎಂದು ಬರೆಯುವ ರೂಢಿಯು ಇದ್ದೇ ಇದೆ. ಇದು ವರ್ಣ ವ್ಯವಸ್ಥೆಯ ಷೋಡಶ ಕರ್ಮಗಳಿಂದ ಆಯ್ದುಕೊಂಡವುಗಳೇ 'ದಶಕರ್ಮಗಳು' ಎಂಬುದಕ್ಕೆ ನಿದರ್ಶನ.

ಈ ಉಪನಯನ ಕರ್ಮವನ್ನೇ ಮತ್ತಷ್ಟು ಅನುಕರಿಸಿ 'ದೀಕ್ಷೋಪನಯನ' ಎಂಬ ಹೆಸರಿನಿಂದ ವ್ಯವಹರಿಸುವ ಅಡ್ಡಾದಿಡ್ಡಿಯ ಸಂಸ್ಕೃತಿ ಸಂಪನ್ನರೂ ಈಗ ನಮ್ಮಲ್ಲಿ ಇದ್ದಾರೆ. ಆದರೆ ತಿಳಿಯದೆ ಹೀಗೆ ವ್ಯವಹರಿಸುವವರನ್ನು ಸುಲಭವಾಗಿ ತಿದ್ದಬಹುದು. ತಿಳಿದೂ ತಿಳಿಯದವರಂತೆ ಎರಡನೇ ಬಾರಿ ಈ ದೀಕ್ಷೋಪನಯನ ಮಾಡಲಿಳಸುವವರನ್ನು ತಿದ್ದಲು ಮಾತ್ರ ಕೊಂಚ ಕಾಲಾವಕಾಶ ಬೇಕೆಂದು ಕಾಣುತ್ತದೆ.

ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ದಶ'ಕರ್ಮ'ಗಳನ್ನು ಪ್ರಸ್ತಾಪಿಸುವ ಪ್ರಾರಂಭದಲ್ಲಿ 'ಒಂದು ಮತದ ಸಂಪ್ರದಾಯವನ್ನು ನಿರ್ಣಯಿಸುವಾಗ ಆ ಧರ್ಮದಲ್ಲಿ ಹುಟ್ಟಿದ ವ್ಯಕ್ತಿಯು ಜನನ ಕಾಲದಿಂದ ಮರಣ ಪರ್ಯಂತವಾಗಿ ಹೇಗೆ ವರ್ತಿಸಬೇಕು? ಯಾವ ಸಂಸ್ಕಾರಗಳನ್ನು ಪಡೆದುಕೊಳ್ಳಬೇಕು? ಎನ್ನುವುದನ್ನು ತಿಳಿಸುವುದೇ ಶಾಸ್ತ್ರಜ್ಞರ

ಸಂಪ್ರದಾಯ. ನಾವು ವೀರಶೈವ ಮತ ವಿಷಯವನ್ನು ಕೂಡ ಈ ದೃಷ್ಟಿಯಿಂದಲೇ ವಿಚಾರ ಮಾಡಬೇಕು, ಎಂದಿದ್ದಾರೆ.

ಈ ಇವರ ಹೇಳಿಕೆಯಂತೆಯೇ ಪರಿಶೀಲಿಸಿದರೂ ಕೂಡ ಈ ಧರ್ಮದಲ್ಲಿ ಹುಟ್ಟಿದ ವ್ಯಕ್ತಿಯ ವಿವಾಹದ ಜೊತೆಗೇ ಈ ಹತ್ತು ಕರ್ಮಗಳೂ ಮುಗಿದು ಹೋಗುತ್ತವೆ. ಅಲ್ಲಿಂದ ಮುಂದಿನ ಮರಣ ಪರ್ಯಂತದ ಯಾವ ಸಂಸ್ಕಾರವೂ ಈ 'ದಶಕರ್ಮ'ಗಳಲ್ಲಿ ಉಕ್ತವಾಗಿಲ್ಲ. ಈ ದೃಷ್ಟಿಯಿಂದಲೂ ಸಹ 'ದಶ'ಕರ್ಮಗಳು ನಮ್ಮ ಆದ್ಯರ ನಿರ್ಮಾಣವಲ್ಲವೆಂಬುದೂ ಇತ್ತೀಚಿಗೆ ನಿರ್ಮಿತವಾಗಿದ್ದರೂ ಅವು ಆದ್ಯರ ಸ್ವತಂತ್ರ ಧರ್ಮದ ತಳಹದಿಯ ಮೇಲೆ ನಿರ್ಮಿತವಾದವುಗಳಲ್ಲವೆಂಬುದೂ ಇತ್ತೀಚಿನ ಯಾರೋ ಅಂಧಾನುಕರಣ ಪಟುಗಳಿಂದ ಅನ್ಯ ಧರ್ಮದಲ್ಲಿದ್ದ 'ಷೋಡಶ ಕರ್ಮ'ಗಳಿಂದ ಆಯ್ದುಕೊಂಡು ಆಧಾರವಿಲ್ಲದ ಅಂತರದಲ್ಲಿ ನಿಲ್ಲಿಸಲ್ಪಟ್ಟಿರುವುದೇ ಈ ದಶ'ಕರ್ಮ'ಗಳೆಂಬುದೂ ಸ್ಪಷ್ಟವಾಗಿ ಕಾಣುತ್ತದೆ.

ಆದುದರಿಂದ ಲಿಂಗವಂತ ಧರ್ಮದ ವ್ಯಕ್ತಿಯು ರವಿಯ ಕಂಡು ಭುವಿಯ ಹೋಗುವ ವರೆಗಿನ ಲಿಂಗಧಾರಣ ಮೊದಲ್ಗೊಂಡು ಅಂತ್ಯೇಷ್ಟಿವಿಧಾನ ಕಾರ್ಯಗಳೆಲ್ಲವೂ ಸ್ವತಂತ್ರವಾಗಿ ಆದ್ಯರಿಂದ ನಿಯಾಮಕವಾದವುಗಳೆಂಬುದೂ ಈ 'ದಶಕರ್ಮ'ಗಳೆಂಬುವ ಹೆಸರು ಯಾರೋ ಕೆಲವರಿಂದ ಇತ್ತೀಚಿಗೆ ಅನಾವಶ್ಯಕವಾಗಿ ಅನುಕರಣ ಮಾಡಲ್ಪಟ್ಟು ಈಗಲೂ ಬಹು ಕಡಿಮೆ ಜನರಿಂದ ಮಾತ್ರ ಆ ಹೆಸರಿನಿಂದ ಆಚರಿಸಲ್ಪಡುತ್ತಿದೆಯೆಂಬುದೂ ಪ್ರತ್ಯಕ್ಷ ಪ್ರಮಾಣವೇ ಆಗಿದೆ.

ವಚನಶಾಸ್ತ್ರ ಕರ್ತರಾದ ನಮ್ಮ ಯಾವ ಪುರಾತನರ ಸಮೀಪಕ್ಕೂ ಈ ದಶ'ಕರ್ಮ'ಗಳ ಗಾಳಿಯೂ ಸಹ ಸುಳಿದಿಲ್ಲ! ರೇಣುಕಾಚಾರ್ಯರದೆಂದು ಹೇಳಲ್ಪಡುತ್ತಿರುವ ಸಿದ್ಧಾಂತ ಶಿಖಾಮಣಿಯಲ್ಲಿಯೂ ಸಹ ಈ ದಶ'ಕರ್ಮ'ಗಳ ಸುಳಿವಿಲ್ಲ.

## ದೀಕ್ಷೆ-ಉಪನಯನ-ಆಗಮ.

ವರ್ಣ ವ್ಯವಸ್ಥಾಧರ್ಮದ ಷೋಡಶ ಕರ್ಮಗಳಲ್ಲೊಂದಾದ ಈ ಉಪನಯನ "ಕರ್ಮ"ವನ್ನು ಷೋಡಶಕರ್ಮಗಳಿಂದ ಆಯ್ದುಕೊಳ್ಳಲ್ಪಟ್ಟ

ದಶಕರ್ಮಗಳ ಮೂಲಕ 'ದೀಕ್ಷೆ' ಎಂದು ರೂಪಾಂತರಗೊಳಿಸಿ ಈ ಹಲವರೇಕೆ ಬಳಸುತ್ತಿದ್ದಾರೆಂಬುದೊಂದಚ್ಚರಿಯಾಗಿದೆ!

ಏಕೆಂದರೆಃ— ವರ್ಣಧರ್ಮದ ಅಗ್ರವರ್ಣದವರ ಧರ್ಮಶಾಸ್ತ್ರಗಳಲ್ಲಿ "ಉಪನಯನ"ವೆಂದರೆ, ವಿದ್ಯಾರ್ಥಿಗೆ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಸಂಸ್ಕಾರ ಶುದ್ಧಿ. ವಂಶಪಾರಂಪರ್ಯವಾಗಿ ಯಾವ ವೇದದಲ್ಲಿ ಯಾವ ಶಾಖೆಯನ್ನು ಅಧ್ಯಯನ ಮಾಡುತ್ತಿದ್ದರೋ ಅವರವರು ಆಯಾ ಶಾಖೆಯನ್ನು ಮೊದಲು ಅಧ್ಯಯನ ಮಾಡಿ ಅವಕಾಶವಿದ್ದರೆ ಇತರ ಶಾಖೆಗಳನ್ನು ಕಲಿಯಬಹುದೆಂದೂ ಪ್ರತಿವೇದಕ್ಕೂ ಬೇರೆ ಬೇರೆ ಗುರುಗಳಲ್ಲಿ "ಉಪನಯನ"ವಾಗಬೇಕೆಂದೂ ಒಂದು ಸಿದ್ಧಾಂತವಿದೆ!

ಅಲ್ಲದೆ ಅವರ ಧರ್ಮಶಾಸ್ತ್ರಗಳಲ್ಲಿಃ— ಉಪನಯನವನ್ನು ಮಾಡಲು ಕಾಲಾತೀತವಾದರೆ ಪ್ರಾಯಶ್ಚಿತ್ತವನ್ನೂ ತಂದೆಗೆ ಉಪನಯನವಿಲ್ಲದೆ ಮಗನಿಗೆ ಉಪನಯನ ಮಾಡಬೇಕಾಗಿದ್ದರೆ ಪ್ರಾಯಶ್ಚಿತ್ತಪೂರ್ವಕ ಉಪನಯನವನ್ನೂ ಹಾಗೆಯೇ ತಂದೆಯ ತಂದೆಗೂ ಉಪನಯನವಾಗದಿದ್ದರೆ ಅಧಿಕ ಪ್ರಾಯಶ್ಚಿತ್ತವನ್ನೂ ನಿರೂಪಿಸಲಾಗಿದೆ!

ಈ ದೃಷ್ಟಿಯಿಂದ ನೋಡಿದರೂ ಕೂಡ "ದೀಕ್ಷೆ"ಯನ್ನು ಉಪನಯನ "ಕರ್ಮ"ವೆನ್ನುವುದಾಗಲಿ, ಅದಕ್ಕೆ ಹೋಲಿಸುವುದಾಗಲಿ, ಅವರ ಉಪನಯನಕ್ಕಾಗಿ ಹೇಳಲಾಗಿರುವ ಕಾಲಕ್ಕೆ ವೀರಶೈವರೂ ಆ ಉಪನಯನವನ್ನು ಹೋಲುವ 'ಕರ್ಮ'ವನ್ನು ಹೊಂದಬೇಕೆನ್ನುವುದಾಗಲಿ, ಹಾಗೆ ಹೊಂದುವ ಆ ಕರ್ಮವೇ "ವೀರಶೈವ ದೀಕ್ಷೆ" ಎಂದು ಹೇಳುವುದಾಗಲೀ ಹಾಸ್ಯಾಸ್ಪದವಾದೀತು!!

ಮೇಲೆ ಕಂಡ ವರ್ಣಧರ್ಮಶಾಸ್ತ್ರಗಳಲ್ಲುಕ್ತವಾಗಿರುವಂತೆ ಪ್ರತಿವೇದಕ್ಕೂ, ಬೇರೆ ಬೇರೆ ಗುರುಗಳಲ್ಲಿ ಉಪನಯನವಾಗಬೇಕೆಂಬ ಸಿದ್ಧಾಂತವನ್ನು ನೋಡುವುದಾದರೆ ವೀರಶೈವರಲ್ಲೇನಾದರೂ ಬೇರೆ ಬೇರೆ ವೇದಾಧ್ಯಾಯಿಗಳಿಗೆ ಬೇರೆ ಬೇರೆ ಗುರುಗಳಿಂದ ದೀಕ್ಷೆ ಮಾಡಿಸುವ ರೂಢಿಯಿದೆಯೆ?

ವೇದಕರ್ಮವು ವೀರಶೈವರಿಗೆ ಪ್ರಾಮುಖ್ಯವೆ? ಅಥವ ವೀರಶೈವರಿಗೆ ಪ್ರಾಮುಖ್ಯ ವಿಧಿಯಾದ ವಚನಧರ್ಮ ಶಾಸ್ತ್ರಧ್ಯಯನಕ್ಕಾದರೂ

ಒಬ್ಬೊಬ್ಬ ಶರಣರ ವಚನಶಾಸ್ತ್ರಾಧ್ಯಯನಕ್ಕೂ ಬೇರೆ ಬೇರೆ ಗುರುಗಳಿಂದ ದೀಕ್ಷೆ ಮಾಡಿಸುವ ಪದ್ಧತಿಯಾದರೂ ಇದೆಯೆ?

ತಂದೆಗೆ ದೀಕ್ಷೆಯಾಗಲಿಲ್ಲವೆಂದು ಮಗನಿಗೆ ಪ್ರಾಯಶ್ಚಿತ್ತಸಮೇತವಾದ ದೀಕ್ಷೆಯನ್ನು ಮಾಡುವ ಪದ್ಧತಿಯೇನಾದರೂ ಇದೆಯೆ? ಹೀಗೆ ಯಾವುದರಲ್ಲಿಯೂ ಹೊಂದಾಣಿಕೆಯಿಲ್ಲದ ಈ ಅನುಕರಣ "ಕರ್ಮ"ವನ್ನೇಕೆ ಕಟ್ಟಿಕೊಳ್ಳಲು ಹವಣಿಸಬೇಕು? ವೀರಶೈವರು ಎರಡನೇ ಸಾರಿ ವೀರಶೈವ ದೀಕ್ಷೆಯನ್ನು ಪಡೆಯಬೇಕೆಂಬ ಆಚರಣೆಯು ವರ್ಣವ್ಯವಸ್ಥಾ ಶಾಸ್ತ್ರಗಳಿಂದ ಇತ್ತೀಚೆಗೆ ಆಯ್ದುಕೊಂಡ "ಅನುಕರಣಕರ್ಮ"ವೆಂಬುದು ಇನ್ನಾದರೂ ನಿರ್ಧರವಾದ ಹಾಗಾಯಿತಲ್ಲವೆ?

ಇನ್ನು ಆಗಮಶ್ಲೋಕಗಳ ವಿಷಯಃ— ಈ ಆಗಮಗ್ರಂಥಗಳಲ್ಲಿ ವೀರಶೈವಾಚಾರ ವಿಚಾರಗಳ ನಿರೂಪಣೆಯಿದೆಯೆಂಬುದನ್ನು ತೋರಿಸಲೋಸುಗ ಹಲವರು ಪಂಡಿತ ಮಹಾಶಯರು ತಿಣಿಕಿ ತಿಣಿಕಿ ಬಹು ಕಷ್ಟಪಟ್ಟು ತಾವು ಬರೆದ ವೀರಶೈವ ಮತಗ್ರಂಥಗಳಲ್ಲಿ ಆಗಮಗಳಿಂದ ಉದಹರಿಸಿದಂತೆ ಹಲವು ಶ್ಲೋಕಗಳನ್ನು ಸೇರಿಸಿ ಪ್ರಕಟಿಸಿದ್ದಾರೆ!

ಹೀಗೆ ಈಚಿನ ವೀರಶೈವ ಸಂಸ್ಕೃತ ಗ್ರಂಥಗಳಲ್ಲಿ ಆಗಮ ಶ್ಲೋಕಗಳು ಕಾಣುವುದಕ್ಕಾಗಿ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಅದೊಂದು ಕಾಲವಿದ್ದಿತು! ಆ ಕಾಲದಲ್ಲಿ ವೀರಶೈವ ಪಂಡಿತರು ಸ್ವಧರ್ಮದ ವೈಶಿಷ್ಟ್ಯವನ್ನೂ ಸ್ವಾತಂತ್ರ್ಯವನ್ನೂ ಮರೆತು ಅಥವ ಕಡೆಗಣಿಸಿ ವರ್ಣವ್ಯವಸ್ಥೆಯ ವೇದಮಾರ್ಗಾನುವರ್ತಿಗಳ ಕುಹಕದ ಅಣಕಕ್ಕೆ ಬೆದರಿ ಅವರಿಂದ "ಸೈ" ಅನ್ನಿಸಿಕೊಳ್ಳಬೇಕೆಂಬ ದುರ್ಮೋಹಕ್ಕೆ ಬಲಿಬಿದ್ದು ಗ್ರಂಥರಚನೆಗೆ ಪ್ರಾರಂಭಿಸಿದುದರ ಫಲವಾಗಿಯೇ ಈಗ ಈ ಆಗಮ ಶ್ಲೋಕಗಳು ಕಾಣುತ್ತಿರುವುದು!

ಹಿಂದೆಯೂ ಇಂದಿಗೂ ಮುಂದೆಯೂ ಎಂದೆಂದಿಗೂ ಯಾವಾಗಲೂ ಹೊಸ ಹೊಸ ಸಾಲುಗಳು ಈ ಆಗಮಗಳ ಹಾಳೆಗಳಿಗೆ ಆಗಮಿಸುತ್ತಲೇ ಇರುತ್ತವೆಯೆಂಬುದನ್ನು ಈಗ ಎಲ್ಲರೂ ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾಗಿದೆ. ಹೀಗೆ ಹೊಸ ಸಾಲುಗಳು ಇಂದಿಗೂ ಆಗಮಗಳಿಗೆ ಆಗಮಿಸುತ್ತಿರುವುದರಿಂದಲೇ ಹಲವು ಆಗಮಗಳಲ್ಲಿ ವಿನೂತನ ವಿಚಾರಗಳು ಕಾಣುತ್ತಿರುವುದು!

ಒಂದೇ ಸುಪ್ರಭೋದಾಗಮದಲ್ಲಿ ಶಂಕರನು ಗಿರಿಜೆಗೆ:— "ತಸ್ಮಾತ್ತಸ್ಮಾಚ್ಚಗಿರಿಜೇ ಪಂಚಾನನ ಸಮುದ್ಭವಃ। ಮದಾದಿ ಸರ್ವಲೋಕಾನಾಂ ಜಗದ್ಗುರುವರೋತ್ತಮಾಃ।" ಎಂಬುದಾಗಿ ಹೇಳಿದನೆಂದೂ ಅದೇ ಆಗಮದಲ್ಲಿ ಅದೇ ಶಂಕರನು ಅದೇ ಗಿರಿಜೆಗೆ:— "ಮದೂರ್ಧ್ವ ಮುಖ ಸಂಜಾತೋ ನಿರಂಜನ ಗಣೇಶ್ವರಃ। ಶೂನ್ಯಪೀಠಾಧಿಕಾರೀಚ ಪಂಚಾಚಾರ್ಯ ಗುರುರ್ವರಃ।" ಎಂಬುದಾಗಿ ಹೇಳಿದನೆಂದೂ, ಉತ್ತರ ವಾತುಲಾಗಮದಲ್ಲಿ:—

ಕಲೌತತ್ಪ್ರಭುದೇವಸ್ಯ ಪೀಠಂ ಕಲ್ಯಾಣ ಪತ್ತನೇ।
ಬಸವೇಶಾದಿ ಪ್ರಮಥ ಸಂದೋಹ ಪರಿಕಲ್ಪಿತಂ॥

ಎಂಬುದಾಗಿಯೂ, ಪಾರಮೇಶ್ವರಾಗಮದಲ್ಲಿ:—

ಬೌದ್ಧಸೌಗತ ಚಾರ್ವಾಕ ಜೈನಾರ್ಹತ ವಿಭಾಗತಃ।

ಎಂದೂ ಬರೆಯಲಾಗಿದೆ. ಜಗದಾದಿ ಕಾಲದಲ್ಲಿ ರಚಿಸಲ್ಪಟ್ಟವುಗಳೆಂದು ತಿಳಿಯಲ್ಪಟ್ಟಿರುವ ಈ ಆಗಮಗಳಲ್ಲಿ ಶಂಕರನು ಗಿರಿಜೆಗೆ ಬೋಧಿಸಿದನೆಂದು ವಿದ್ವಾಂಸರಿಂದ ಇತ್ತೀಚೆಗೆ ಬರೆಯಲ್ಪಟ್ಟಿರುವ ಮೇಲೆ ಕಂಡ ಆಗಮಶ್ಲೋಕಗಳ ಅವಲೋಕನ ಮಾತ್ರದಿಂದಲೇ ಬೇಕಾದಾಗ ಬೇಕಾದವರು ಬೇಕಾದ ಶ್ಲೋಕಗಳನ್ನು ರಚಿಸಿ ಈ ಆಗಮಗಳಿಗೆ ಸೇರಿಸುತ್ತಾ ಬಂದಿರುವರೆಂಬುದನ್ನು ನಿರ್ಧರವಾಗಿ ತಿಳಿದುಕೊಳ್ಳಬಹುದಾಗಿದೆ.

ವೀರಶೈವ ಪರವಾದ ಶ್ಲೋಕಗಳೂ ಈ ಆಗಮಗಳಲ್ಲಿ ಕಾಣುವುದೂ ಈ ಬಗೆಯ ಪ್ರಯತ್ನದ ಫಲವಾಗಿಯೇ! ಅದರಲ್ಲೂ ಒಂದಕ್ಕೊಂದು ವಿರುದ್ಧಾಭಿಪ್ರಾಯವುಳ್ಳ ವೀರಶೈವಪರ ಶ್ಲೋಕಗಳೂ ಸಹ ಶಂಕರನು ಗಿರಿಜೆಗೆ ಹೇಳಿದಂತೆ ಈ ಆಗಮಗಳಲ್ಲಿ ದೊರೆಯುತ್ತವೆ. ಉದಾಹರಣೆಗೆ:— ಈಗ ಸಮಾಜದಲ್ಲಿ ಉಂಟಾಗಿರುವ ಗುರು—ವಿರಕ್ತರ ಕಲಹದಲ್ಲಿ ಎರಡು ಪಕ್ಷದವರೂ ತಮ್ಮ ತಮ್ಮ ಪಕ್ಷಗಳ ಸಮರ್ಥನೆಗಾಗಿ ಈ ಆಗಮ ಶ್ಲೋಕಗಳನ್ನು ಉದಾಹರಿಸಿ ಸಮರ್ಥಿಸಿಕೊಳ್ಳುತ್ತಿರುವುದನ್ನು ಕಾಣಬಹುದು.

ಆಗಮಗಳ ಸ್ಥಿತಿಯು ಇಂತಿರಲು ಇವುಗಳವೆಂದು ಉದಹರಿಸಿ ತೋರಿಸುವ ಶ್ಲೋಕಗಳನ್ನು ಪ್ರಾಮಾಣ್ಯವೆಂದು ಅಂಗೀಕರಿಸುವುದು ಎಷ್ಟು ಮಾತ್ರದ ಸಮಂಜಸವಾದೀತೆಂಬುದನ್ನು ಪ್ರಾಜ್ಞರಾದ ವಾಚಕರೇ ನಿರ್ಣಯಿಸಬೇಕಾಗಿದೆ.

ಇಷ್ಟಕ್ಕೂ ಈಗ ಉದಹರಿಸುತ್ತಿರುವ ಈ ಆಗಮ ಶ್ಲೋಕಗಳಾದರೂ ಉದಹರಿಸುವವರ ವಾದವನ್ನು ಪುಷ್ಟೀಕರಿಸುತ್ತವೆಯೇನು ? ಅದು ಮೊದಲೇ ಇಲ್ಲ. ಬದಲಾಗಿ ಅವು ಅವರ ವಾದಕ್ಕೆ ವಿರುದ್ಧವಾದ ಅಭಿಪ್ರಾಯವನ್ನೇ ಸೂಚಿಸುತ್ತಿವೆ. ಆದರೂ ಪಾಂಡಿತ್ಯ ಪ್ರದರ್ಶನ ಮಾಡಿಕೊಳ್ಳಬೇಕೆಂಬ ಅಭಿಲಾಷೆಯಿಂದ ಕೂಡಿದ ಕೆಲವರು ಅರ್ಥವು ತಿಳಿಯದೆಯೋ ಏನೋ ಅವುಗಳನ್ನೇ ಆಧಾರವಾಗಿ ಉದಹರಿಸುತ್ತಿರುತ್ತಾರೆ. ಇದೊಂದು ವೆಪೌಢ್ಯದ ನಿದರ್ಶನ.

## ದೀ ಕ್ಷಾ ವಿ ಧಿ.

ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಕ್ರಿ. ಶ. ೧೭೯೬ ರಲ್ಲಿ ಕೈ. ವೀರಸಂಗಪ್ಪನವರಿಂದಲೂ ಕ್ರಿ. ಶ. ೧೯೩೧ ರಲ್ಲಿ ಕೈ. ಎನ್. ಆರ್ ಕರಿಬಸವಶಾಸ್ತ್ರಿಗಳಿಂದಲೂ ಪ್ರಕಾಶಿತವಾಗಿರುವ 'ದೀಕ್ಷಾವಿಧಿ'ಯನ್ನೂ ಇತ್ತೀಚೆಗೆ ಹಲವರಿಂದ ಪ್ರಕಟವಾಗಿರುವ ದೀಕ್ಷಾವಿಧಿಗಳನ್ನೂ ಈ ವಿಷಯದಲ್ಲಿ ಆಸಕ್ತಿಯುಳ್ಳವರು ಓದಿ ಶಿವಧರ್ಮದ ನಿಜಸ್ವರೂಪವನ್ನು ತಿಳಿಯಬಹುದು ಎಂದು ಬರೆದಿದ್ದಾರೆ.

ಶ್ರೀ ಶಾಸ್ತ್ರಿಗಳ ಈ ಸೂಚನೆಯು ಸಾವಿರ ಪಾಲಿಗೂ ಸತ್ಯವಾದುದು. ಆದರೆ ಅವರು ತಿಳಿದುಕೊಂಡಿರುವ ರೀತಿಯಲ್ಲಿ ಮಾತ್ರ ಅಲ್ಲ! ಏಕೆಂದರೆ:— ಈ ಎಲ್ಲ 'ದೀಕ್ಷಾವಿಧಿ' ಗ್ರಂಥಗಳಲ್ಲಿಯೂ ಭವಿಗಳನ್ನು ಭಕ್ತರನ್ನಾಗಿಸುವ 'ದೀಕ್ಷಾ' ವಿಧಾನವೇ ಹೇಳಲ್ಪಟ್ಟಿದೆ!

ಹೇಗೆಂದರೆ:— ಈ ಗ್ರಂಥಗಳಲ್ಲಿ ವೀರಶೈವ ದೀಕ್ಷೆಯನ್ನು ಪಡೆದುಕೊಳ್ಳತಕ್ಕವನಿಗೆ ಮೀಸೆ ಗಡ್ಡಗಳನ್ನೂ ಕಂಕುಳಲ್ಲಿಯ ಕೂದಲನ್ನೂ ತೆಗೆಯಿಸಬೇಕು ಎಂದಿದೆ! ಪುನರ್ದೀಕ್ಷಾವಾದಿಗಳು ಹೇಳುವ ಎಂಟು ವರ್ಷದ ಬಾಲಕನಿಗೆ ಕಂಕುಳಲ್ಲಿ ಕೂದಲರಾಶಿಯು ಬೆಳೆದಿರುತ್ತದೆಯೆ? ಗಡ್ಡಮೀಸೆಗಳು ಬೆಳೆದಿರುತ್ತವೆಯೆ? ಇಲ್ಲವಾದುದರಿಂದ ಹಾಗೆ ಕೂದಲು

ಬೆಳೆದಿರುವ ವಯಸ್ಕರಾದ ಭವಿಗಳ ಪ್ರಾರ್ಥನೆಯನ್ನಂಗೀಕರಿಸಿ ಅವರಿಗೆ ದೀಕ್ಷೆಯನ್ನೆಸಗಬೇಕೆಂಬುದೇ ಆ ವಾಕ್ಯಗಳ ಅಭಿಪ್ರಾಯವಲ್ಲವೆ?

ದೀಕ್ಷಾಪೇಕ್ಷಿಯು ಗುರುವಿನ ಗುರುವಿನ ಬಳಿಗೆ ಬಂದು ಪ್ರಾರ್ಥಿಸಿದನಂತರ ಗುರುವು ಆಗ ತಾನೇ ಆರಿಸಿದ ಸ್ಫಟಿಕ, ಶ್ರೀಶೈಲ ಮುಂತಾದ ಮುಂತಾದ ಯಾವುದಾದರೊಂದು ಜಾತಿಯ ಶಿಲೆಯ ಹೊಸ ಲಿಂಗವನ್ನು ತೆಗೆದುಕೊಂಡು ಹೊಸದಾಗಿ ಸಂಸ್ಕರಿಸಿ ಶಿಷ್ಯನಿಗೆ ಧಾರಣ ಮಾಡಬೇಕೆಂದೂ ಈ ವಿಧಿಗಳಲ್ಲಿ ಹೇಳಿದೆ!

ಇದೂ ಸಹ "ಭವಿಗಳನ್ನು ಭಕ್ತರನ್ನಾಗಿಸುವ" ದೀಕ್ಷಾವಿಧಾನವೇ ಆಗಿದೆ! ಯಾಕಂದರೆ ವೀರಶೈವ ಬಾಲಕರಿಗೆ ಹುಟ್ಟಿದಾಗ ಶ್ರೀಗುರುವು ದೀಕ್ಷಾಪೂರ್ವಕ ಅನುಗ್ರಹಿಸಿದ ಇಷ್ಟಲಿಂಗವು ಇದ್ದೇ ಇರುತ್ತದೆ. ಆದುದರಿಂದ ಗುರುವು ಅವನಿಗಾಗಿ ಹೊಸ ಲಿಂಗವನ್ನೇನೂ ಆರಿಸಿಕೊಳ್ಳಬೇಕಾಗಿಲ್ಲ! ಈ ಕಾರಣದಿಂದಲೂ ಈ ದೀಕ್ಷಾವಿಧಿಗಳು ಭವಿಗಳನ್ನು ಭಕ್ತರನ್ನಾಗಿಸುವ "ದೀಕ್ಷಾವಿಧಿ" ಗಳೇ ಆಗಿವೆ.

ಇನ್ನು ಶ್ರೀ ಶಿವಮೂರ್ತಿಶಾಸ್ತ್ರಿಗಳು "ಲಿಂಗಧಾರಣವಿಧಿ" 'ದೀಕ್ಷಾವಿಧಿ' ಗಳೆರಡೂ ಭಿನ್ನವಾಗಿರುವುದೇ ಈ ಸಂಸ್ಕಾರಗಳೆರಡೂ ಭಿನ್ನವೆಂದೂ ಭಿನ್ನಂಲೀನವೆಂದೂ ತಿಳಿಸುತ್ತೇವೆ ಎಂದಿದ್ದಾರೆ.

ಇವರ ಈ ಮಾತು ಸಹ ನಿಜವೇ. ಆದರೆ ಅವರು ತಿಳಿದುಕೊಂಡಿರುವಂತೆ ಮಾತ್ರ ಅಲ್ಲ! ಯಾಕೆಂದರೆ ಲಿಂಗಧಾರಣ ವಿಧಿಯ ವಿಧಾನಗಳು ವೀರಶೈವರಾಗಿರುವವರ ಮನೆಗಳಲ್ಲಿ ಬಳಿಕೆಯಲ್ಲಿವೆ. ದೀಕ್ಷಾವಿಧಿಯ ವಿಧಾನಗಳು ಭವಿಗಳನ್ನು ಭಕ್ತರನ್ನಾಗಿಸುವುದಕ್ಕಾಗಿ ನಿರೂಪಿಸಲ್ಪಟ್ಟಿವೆ! ಶ್ರೀ ಶಾಸ್ತ್ರಿಗಳು ಈ ಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿದರೆ ಸತ್ಯಾಂಶವು ಅವರಿಗೇ ಗೋಚರವಾಗುತ್ತದೆ.

ಶ್ರೀ ಶಾಸ್ತ್ರಿಗಳು "ಹಲವು ವೀರಶೈವರಲ್ಲದ ಲಿಂಗಧಾರಿಗಳಲ್ಲಿ ಮಾಂಸಾಹಾರ ಸುರಾಪಾನಾದಿ ಪದ್ಧತಿಗಳಿರುವುದಕ್ಕೆ ಸಮಾಧಾನವೇನು? ವೀರಶೈವ ಧರ್ಮವು ಇದನ್ನೊಪ್ಪುತ್ತದೆಯೋ?" ಎಂದು ಕೇಳಿದ್ದಾರೆ.

ಮದ್ಯಪಾನ ಮಾಂಸಾಹಾರವನ್ನು ವೀರಶೈವ ಧರ್ಮವು ಒಪ್ಪುತ್ತದೆಯೆಂದು ಇವರಿಗೆ ಯಾರು ಹೇಳಿದರೋ? ಕಾಣೆವು! ಈ ದುರಾ

ಚರಣೆಗಳಿರುವುದು "ವೀರಶೈವರಲ್ಲದ ಲಿಂಗಧಾರಿಗಳಲ್ಲಿ" ಎಂದು ಇವರೇ ಹೇಳುತ್ತಾರೆ! ಆದರೆ ಅಂತಹ ದುರಾಚರಣೆಗಳನ್ನು ಬಿಡಿಸಿ ಅವರನ್ನು ದ್ಧರಿಸುವುದಕ್ಕಾಗಿಯೇ ಈ 'ವೀರಶೈವ ದೀಕ್ಷಾವಿಧಿ' ಗಳಿರುವುದು ಎಂಬು ದನ್ನೂ ಸದಾಚಾರನಿರತರಾದ ವೀರಶೈವರಿಗೆ ಪುನಃ ದೀಕ್ಷೆಮಾಡುವುದ ಕ್ಕಲ್ಲವೆಂಬುದನ್ನೂ ಮಾತ್ರ ಇವರೇಕೆ ಮರೆತರೋ?

ಹಾಗಲ್ಲದೆ ಪ್ರತಿಯೊಬ್ಬ ವೀರಶೈವನೂ ಪುನರ್ದೀಕ್ಷೆಯನ್ನು ಪಡೆ ಯಲೇಬೇಕೆಂದು ಹೇಳಹೊರಡುವುದು ಪ್ರತಿಯೊಬ್ಬ ಹೊಟ್ಟೆತುಂಬಿದ ವನಿಗೂ ಪುನಃ ಅಜೀರ್ಣವಾಗುವಂತೆ ಊಟಮಾಡಲೇಬೇಕು! ಎಂದು ಹೇಳಲು ಹೊರಟಂತಾಗುತ್ತದೆ.

## ಚನ್ನಬಸವೇಶ್ವರ ವಚನ.

ಶ್ರೀ ಶಾಸ್ತ್ರಿಗಳವರು "ಆಣವಮಲ ಮಾಯಾಮಲ ಕಾರ್ಮಿಕಮಲ ಎಂಬ ಮಲತ್ರಯಂಗಳ ಕಳೆದು ...................... ಈ ಕ್ರಮವ ನರಿತು ಮಾಡುವುದು ಕೂಡಲಚನ್ನಸಂಗಯ್ಯನಲ್ಲಿ 'ಸಹಜ ದೀಕ್ಷೆಯಯ್ಯ' ಎಂಬ ವಚನವನ್ನುದಾಹರಿಸಿ ಈ "ವಚನಕಾರನ ಅಭಿಪ್ರಾಯವು ಆಗಮಸಮ್ಮತ ದೀಕ್ಷಾವಿಧಿಯಂತೆಯೇ ಇದೆ." ಎಂದು ಹೇಳಿ ವೀರ ಶೈವರಿಗೆ ಪುನರ್ದೀಕ್ಷೆಯನ್ನು ಮಾಡಬೇಕೆಂಬ ತಮ್ಮ ವಾದವನ್ನು ಈ ವಚನವು ಪುಷ್ಟೀಕರಿಸುವುದೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ್ದಾರೆ!

ಶಾಸ್ತ್ರಿಗಳ ಈ ಅಭಿಪ್ರಾಯವು ನಿಜಾಂಶವಲ್ಲ. ಇವರು ಚನ್ನಬಸ ವೇಶ್ವರ ವಚನವನ್ನು ಕೊಂಚ ಶ್ರಮವಹಿಸಿ ಸಂಪೂರ್ಣವಾಗಿ ಓದಿ ನೋಡಿದ್ದರೆ ಅವರು ಈ ತಪ್ಪು ಅಭಿಪ್ರಾಯವನ್ನು ಪ್ರಕಟಿಸುತ್ತಿರಲಿಲ್ಲ.

ಈಗಲಾದರೂ ಶಾಸ್ತ್ರಿಗಳು ಚನ್ನಬಸವೇಶ್ವರ ವಚನಗಳನ್ನು ಸಂಪೂ ರ್ಣವಾಗಿ ಓದಲಿ ಆಗ ಅವರು ಉದಹರಿಸಿರುವ ವಚನವು ವೀರಶೈವ ಬಾಲಕರಿಗೆ ಪುನರ್ದೀಕ್ಷೆ ಹೊಂದುವುದಕ್ಕಾಗಿ ಹೇಳಿದುದಲ್ಲವೆಂಬುದೂ- ಭವಿಗಳನ್ನು ಭಕ್ತರನ್ನಾಗಿಸುವ ದೀಕ್ಷಾ ವಿಧಾನವನ್ನು ಆ ವಚನದಲ್ಲಿ ನಿರೂಪಿಸಲಾಗಿದೆಯೆಂಬುದೂ ಸ್ಪಷ್ಟವಾಗಿ ತಿಳಿದು ಶಾಸ್ತ್ರಿಗಳ ಸಂದೇ ಹವು ಬಯಲಾಗಿ ಹೋಗುತ್ತದೆ.

'ವಚನಶಾಸ್ತ್ರಸಾರ' ಗ್ರಂಥದ ಮೂರನೇ ಭಾಗದ ತೊಂಭತ್ತ ಮೂರನೇ ಪುಟದಲ್ಲಿ "ದೀಕ್ಷೆಯ ತತ್ವಗಳು" ಎಂಬ ಶೀರ್ಷಿಕೆಯಡಿ ಯಲ್ಲಿ ಶ್ರೀ ಚನ್ನಬಸವೇಶ್ವರರ ಒಂದು ವಚನವು ಹೀಗಿದೆ:—

"ಭವಿತನಕ್ಕೆ ಹೇಸಿ ಭಕ್ತನಾದೆನೆಂಬಾತನನು
ಪೂರ್ವಾಶ್ರಯವಂ ಕಳೆದು ಭಕ್ತನ ಮಾಡುವ
ಪರಿಯಂತೆಂದೊಡೆ .. ... ...
ಸರ್ವಶುದ್ಧಿಯಂ ಮಾಡಿ ಪುನರ್ಜಾತನಂ ಮಾಡುವುದು
ಇದು 'ಸಹಜ ದೀಕ್ಷೆಯಯ್ಯ' ಕೂಡಲಚನ್ನಸಂಗಯ್ಯ"

ಈ ವಚನವನ್ನು ಅವಲೋಕಿಸುವವರಿಗೆ ಶ್ರೀ ಚನ್ನಬಸವೇಶ್ವರ ದೇವರು ನಿರೂಪಿಸಿರುವ ಈ "ಸಹಜದೀಕ್ಷೆ" ಯ ವಚನವು ವೀರಶೈವ ರಿಗೆ ಪುನರ್ದೀಕ್ಷೆಯಾಗಬೇಕೆಂದು ನಿರೂಪಿಸಿಲ್ಲವೆಂಬುದೂ ಆ ವಚನದ ಪ್ರಾರಂಭದಲ್ಲಿಯೇ ಹೇಳಿರುವಂತೆ 'ಭವಿತನಕ್ಕೆ ಹೇಸಿ ಭಕ್ತನಾದೆ' ನೆಂಬುವ ವರಿಗಾಗಿ ನಿರೂಪಿಸಲಾಗಿದೆಯೆಂಬುದೂ ಸ್ಪಷ್ಟವಾಗಿ ಕಾಣುತ್ತದೆ.

## ಗರ್ಭಾಷ್ಟಮೇ

'ಗರ್ಭಾಷ್ಟಮೇ' ಎಂದರೆ ಎಂಟನೆಯ ವರ್ಷ ಎಂಬುದಾಗಿ ಹಲವರು ಮಹಾಮತಿಗಳು ಅರ್ಥ ಮಾಡುತ್ತಿದ್ದಾರೆ. ಶ್ರೀ ಶಾಸ್ತ್ರಿ ಗಳೂ ಸಹ ಅದೇ ಅರ್ಥವನ್ನು ಅಭಿಪ್ರಾಯಪಡುವ ಗುಂಪಿನ ಲ್ಲಿಯೇ ಬರುತ್ತಾರೆ. ಆದರೂ ಶ್ರೀ ಶಿವಮೂರ್ತಿ ಶಾಸ್ತ್ರಿಗಳೇ ತಮ್ಮ ಲೇಖನದಲ್ಲಿ 'ವೀರಶೈವಾಚಾರ ಪ್ರದೀಪಿಕೆ' ಯಲ್ಲಿ 'ಗರ್ಭಾಷ್ಟಮೇ' ಅಂದರೆ 'ಗರ್ಭದ ಎಂಟನೇ ತಿಂಗಳೆಂದು ಅರ್ಥವಿದೆ' ಎಂಬುದಾಗಿ ಒಪ್ಪಿಕೊಂಡಿದ್ದಾರೆ. ಆದರೂ ತಮ್ಮ ಗರ್ಭಾಷ್ಟಮೇ ಎಂದರೆ ಎಂಟು ವರ್ಷ ಎಂಬ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳಲು ಮಾತ್ರ ಇವ ರಿಗೆ ಇಷ್ಟವಿಲ್ಲ.

## ದೀಕ್ಷಾಬೋಧೆ

"ಬಾಲರಜ್ಞರಿಗೆ ಸ್ತ್ರೀ ಲೋಲ ದ್ಯೂತಾಳಿಗಂ।
ಕೇಳು ಸುರೆ ಮಾಂಸ ಭಕ್ಷಗೆ ವ್ಯಸನ ದೋಷಿಗಂ।
ದೀಕ್ಷೆಯಿಂದೆಮಗೆ ಶಿವಶಿಕ್ಷೆಗಳಹವು ಮಗನೆ।
... ... ... ... ... ...

ಸಾಕ್ಷಿ ಬಾಲಿಕಾಜ್ಞಾಶ್ಚ ಬುದ್ಧೀಶ್ಚ ವ್ಯಸನೇಶ್ಚಾತುರಸ್ಯಚ ।
ಪ್ರಾಣಲಿಂಗಂ ಪರಂ ದದ್ಯಾತ್ತದ್ಗುರುರ್ನರಕಂ ವ್ರಜೇತ್ ।

ಇಂತೆಂಬುದಾಗಿ ಕೆರೆಯ ಪದ್ಮರಸರ ದೀಕ್ಷಾ ಬೋಧೆಯಲ್ಲಿ ನಿರೂಪಿತವಾಗಿದೆಯೆಂದು ಶ್ರೀ ಶಿವಮೂರ್ತಿ ಶಾಸ್ತ್ರಿಗಳವರೇ ಉದಹರಿಸಿದ್ದಾರೆ.

ದೀಕ್ಷಾಬೋಧೆಯ ಈ ಮೇಲಣ ಪದ್ಯವೂ ಸಹ ಉತ್ತಮ ಗುಣಶೀಲಗಳಿಂದ ಭಕ್ತನಾಗಬೇಕೆಂದಪೇಕ್ಷಿಸುವ ಭವಿಯುನ್ನು ಭಕ್ತನನ್ನಾಗಿಸಲು ಮಾತ್ರ ದೀಕ್ಷೆಯನ್ನು ಮಾಡಬೇಕೇ ಹೊರ್ತು ಬಾಲಕರಿಗೆ ಬುದ್ಧಿಯಿಲ್ಲದವರಿಗೆ ವೇಶ್ಯಾಲಂಪಟರಿಗೆ ಜೂಜುಗಾರರಿಗೆ ಮದ್ಯ ಮಾಂಸ ಭಕ್ಷಕರಿಗೆ ವ್ಯಸನಿಗಳಿಗೆ ಆತುರಗಾರರಿಗೆ ದೀಕ್ಷೆಯನ್ನು ಮಾಡಿದರೆ ಪಾಪ ಬರುತ್ತದೆ ಎಂದೇ ಹೇಳುತ್ತದೆ.

ಆದುದರಿಂದ ದೀಕ್ಷಾಬೋಧೆಯೂ ಸಹ ಭವಿಗಳನ್ನು ಭಕ್ತರನ್ನಾಗಿಸಲು ದೀಕ್ಷೆಯನ್ನು ವಿಧಿಸುತ್ತಿದೆಯೇ? ಹೊರ್ತು ಶ್ರೀ ಶಾಸ್ತ್ರಿಗಳು ತಿಳಿದಿರುವಂತೆ ವೀರಶೈವರಿಗೆ ಪುನರ್ದೀಕ್ಷೆಯನ್ನೇನೂ ಬೋಧಿಸಿಲ್ಲ. ಅದೂ ಆ ಪದ್ಯದ ಪ್ರಾರಂಭದಲ್ಲಿಯೇ ಬಾಲರಿಗೆ ದೀಕ್ಷೆಮಾಡಕೂಡದೆಂದು ಸ್ಪಷ್ಟವಾಗಿದೆ. ಶಾಸ್ತ್ರಿಗಳು ಹೇಳುತ್ತಿರುವ ಎಂಟನೆಯ ವರ್ಷವು ಬಾಲ್ಯವಲ್ಲವೆ? ಈ ಕಾರಣದಿಂದ ದೀಕ್ಷಾಬೋಧೆಯೊಳಗಣ ಈ ಪದವೂ ಲಿಂಗಪ್ರಾಣಿಯ ಲಿಂಗವಂತನ ಉದರದಲ್ಲಿ ನಿಂದು ಉದಿಸುವ ಮಂತ್ರಪಿಂಡದ ಅಥವ ಲಿಂಗಗುಣಿಗಳಾದ ಬಾಲಕರಿಗಾಗಿ ಹೇಳಿದುದಲ್ಲವೆಂಬುದೂ ಭವಿಗಳನ್ನು ಭಕ್ತರನ್ನಾಗಿಸುವ ದಿಕ್ಷಾವಿಧಾನವನ್ನು ಅದು ಬೋಧಿಸಿದೆಯಂಬುದೂ ನಿರ್ಧರವಾದಹಾಗಾಯಿತು.

## ತಿಥಿ, ವಾರ, ಕಾಲ, ದೇಶ.

ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ಶಿವದೀಕ್ಷೆಗೆ ತಿಥಿ ವಾರ ಕಾಲ ದೇಶಗಳನ್ನು ಶಾಸ್ತ್ರಗಳಲ್ಲಿ ಹೇಳಿದೆ! ಮುಂತಾಗಿ ಬರೆದಿದ್ದಾರೆ. ಇವರು ಬರೆದಿರುವ "ಶಾಸ್ತ್ರಗಳಲ್ಲಿ ಹೇಳಿದೆ" ಎಂಬ ಮಾತು ಯಾವ ಶಾಸ್ತ್ರಗಳನ್ನು ಕುರಿತುದೋ ತಿಳಿಯದು. ಆದರೆ ಆದ್ಯರಾದ ನಮ್ಮ ವೀರಶೈವಾಚಾರ್ಯರು ನಮ್ಮ ಶಾಸ್ತ್ರವಾವುದೆಂಬುದನ್ನು ಹೀಗೆ ನಿರ್ಣಯಿಸಿದ್ದಾರೆ.

"ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೇ ಇಷ್ಟವಯ್ಯ
ಸ್ಮೃತಿಗಳು ಸಮುದ್ರವಾಗಲಿ ಶೃತಿಗಳು ವೈಕುಂಠ ಸೇರಲಿ

ಪುರಾಣಗಳು ಅಗ್ನಿಯಸೇರಲಿ. ಆಗಮಗಳು ವಾಯುವಹೊಂದಲಿ.
ಎಮ್ಮ ನುಡಿ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗದ
ಹೃದಯದೊಳು ಗ್ರಂಥಿಯಾಗಿರಲಿ."

ಪ್ರಮಥಾಚಾರ್ಯರ ಈ ನಿರ್ಣಯದ ಪ್ರಕಾರ ಲಿಂಗಾಯತರಿಗೆ ಪುರಾತನರ ನುಡಿಯೇ—ಆದ್ಯರ ವಚನಗಳೇ— "ಧರ್ಮಶಾಸ್ತ್ರ" ಈ ನಮ್ಮ "ವಚನಧರ್ಮಶಾಸ್ತ್ರ" ದಲ್ಲಿಲ್ಲದ ಧರ್ಮವಿನ್ನಿಲ್ಲ. ಅಂತೆಯೇ ಇದರಲ್ಲಿ ಖಂಡಿಸಲ್ಪಡದ ಅಧರ್ಮವೂ ಇನ್ನಿಲ್ಲ! ಇಂತೊಪ್ಪುವ ನಮ್ಮ ವಚನ ಧರ್ಮಶಾಸ್ತ್ರನಲ್ಲಿಯಂತೂ ಈ ತಿಥಿ ವಾರ ಕಾಲ ದೇಶಗಳನ್ನು ಗಣನೆಗೇ ತೆಗೆದುಕೊಂಡಿಲ್ಲ!

ಉದಾಹರಣೆಗಾಗಿ 'ವಚನಧರ್ಮಶಾಸ್ತ್ರ' ದೊಳಗಣ ಈ ಒಂದೆರಡು ಸೂಕ್ತಿಗಳನ್ನು ಅವಲೋಕಿಸಬಹುದು.

ಅಂದು ಇಂದು ಮತ್ತೊಂದೆನಬೇಡ
ದಿನ ಒಂದೇ ಶಿವ ಶರಣೆಂಬುವಂಗೆ
ದಿನ ಒಂದೇ ಹರ ಶರಣೆಂಬುವಂಗೆ
ದಿನ ಒಂದೇ ನಮ್ಮ ಕೂಡಲಸಂಗನ ಮಾಣದೆ ನೆನೆವಂಗೆ

ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ
ಸಂಗಯ್ಯ. ದೋಷವೆಲ್ಲಿಯದೋ ದುರಿತವೆಲ್ಲಿ
ಯದೋ ಸಂಗಯ್ಯ. ನಿಮ್ಮ ಮಾಣದೆ ನೆನೆವಂಗೆ
ಭವ ಕರ್ಮವೆಲ್ಲಿಯದೋ ಕೂಡಲಸಂಗಮದೇವಯ್ಯ.

ಇಪ್ಪತ್ತು ನಾಲ್ಕು ತಿಥಿಯಿಂದ ವೆಗ್ಗಳ
ಗ್ರಹಣಸಂಕ್ರಾಂತಿಯಿಂದ ವೆಗ್ಗಳ
ಏಕಾದಶಿ ವ್ಯತೀಪಾತದಿಂದ ವೆಗ್ಗಳ
ಸೂಕ್ಷ್ಮ ಶಿವಪಥವ ನರಿದಂಗೆ
ಹೋಮನೇಮ ಜಪತಪದಿಂದ ವೆಗ್ಗಳ
ಕೂಡಲಸಂಗಮದೇವ ನಿಮ್ಮ ಮಾಣದೆನೆನೆವಂಗೆ

ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ.
ರಾಶಿಕೂಟ ಋಣಸಂಬಂಧ ಉಂಟೆಂದು ಹೇಳಿರಯ್ಯ.
ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ.

ನಾಳಿನದಿನಕಿಂದಿನದಿನ ಲೇಸೆಂದು ಹೇಳಿರಯ್ಯ.
"ಕೂಡಲ ಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ."

ವಚನ ಧರ್ಮಶಾಸ್ತ್ರದ ಈ ಮೇಲಣ ಸೂತ್ರಗಳು ಏನನ್ನು ನಿರೂಪಿಸುತ್ತಿವೆ? 'ಆಕಾಶವನ್ನು ನೋಡಲು ನೂಕುನುಗ್ಗಲು ಏಕೆ?' ಶಿವನನ್ನು ಪೂಜಿಸಿ ಪಾಪವನ್ನು ಕಳೆದುಕೊಳ್ಳುವೆನೆಂಬವನನ್ನು ನೀನು ಶಿವನನ್ನು ಇಂದು ಪೂಜಿಸಬೇಡ. ಮತ್ತೊಂದು ಶುಭದಿನ ಬರುತ್ತದೆ! ಅಂದು ಪೂಜಿಸುವೆಯಂತೆ! ಎಂದು ಹೇಳುವುದು ನ್ಯಾಯವೆ? ಹಾಗೆ ಹೇಳಬಾರದು. ಬೆಸಗೊಂಡಾಗಲೇ ಶುಭಲಗ್ನವೆನ್ನಬೇಕು. ಮಾಣದೆ ನೆನೆವಂಗೆ ಲಗ್ನವೆಲ್ಲಿಯದು? ವಿಘ್ನವೆಲ್ಲಿಯದು? ಶಿವನನ್ನು ಪೂಜಿಸಲು ನಾಳಿನದಿನಕಿಂತ ಇಂದಿನ ದಿನವೇ ಲೇಸು. ಇಂದು ಶಿವದೀಕ್ಷೆಕೊಂದುವೆನೆಂಬವರನ್ನು ಇಂದುಬೇಡ ಮತ್ತೊಂದು ಶುಭದಿನ ಬರಲಿ ಎಂದು ತಡೆಯಬೇಡ. ಎಂದೇ ಅಲ್ಲವೆ ನಮ್ಮ ಧರ್ಮಶಾಸ್ತ್ರವು ನಿರೂಪಿಸುವುದು?

ಇಂದು ಎಲ್ಲ ಲಿಂಗಾಯತರ ಮನೆಗಳಲ್ಲಿಯೂ ನಡೆಯುತ್ತಿರುವುದೂ ಈ ಸಿದ್ಧಾಂತವನ್ನನುಸರಿಸಿಯೇ ಅಲ್ಲವೆ? ಗುರುವನ್ನು ಮನೆಗೆ ಕರೆದುಕೊಂಡು ಬರುವುದಕ್ಕಾಗಲಿ, ಅವರಿಂದ ಮಕ್ಕಳಿಗೆ ದೀಕ್ಷಾ ಸಂಸ್ಕಾರವನ್ನು ನೆರವೇರಿಸುವುದಕ್ಕಾಗಲಿ ತಿಥಿ, ವಾರ, ನಕ್ಷತ್ರಾದಿಗಳನ್ನು ಯಾರಾದರೂ ನೋಡುತ್ತಿದ್ದಾರೆಯೆ?

ಜನನ ಕಾಲದ ಲೆಕ್ಕದ ಮೇಲೆ ಅಂದು ಅಮಾವಾಸ್ಯೆಯಾಗಿರಲಿ ಪೌರ್ಣಿಮೆಯಾಗಿರಲಿ ಯಾವುದನ್ನೂ ಲೆಕ್ಕಿಸದೆ ಆ ದೀಕ್ಷಾಕಾರ್ಯವನ್ನು ನೆರವೇರಿಸುತ್ತಿಲ್ಲವೆ? ಮಠಗಳಲ್ಲಿ ನೆರವೇರುವ ದೀಕ್ಷಾಕಾರ್ಯವೂ ಸಹ ತಿಥಿ ವಾರಗಳಾವುವನ್ನೂ ಲೆಕ್ಕಿಸದೆ ಆಯಾ ಮಠಗಳ—ಊರುಗಳ ಜಾತ್ರೆ ರಥೋತ್ಸವ ಗಣಪರ್ವ ಮುಂತಾದ ದಿನಗಳಲ್ಲಿ ನೆರವೇರುತ್ತಿಲ್ಲವೆ? ಇಷ್ಟಲ್ಲದೆ ಶ್ರೀ ಶಾಸ್ತ್ರಿಗಳವರು— "......ಇಷ್ಟಲಿಂಗ ಧಾರಣಮಾತ್ರವಾಗುತ್ತದೆ. ಮುಂದೆ ದೀಕ್ಷಾಕಾಲದಲ್ಲಿ ಭಾವಲಿಂಗ ಪ್ರಾಣಲಿಂಗಗಳ ಬೋಧೆಯಾಗಿ ತ್ರಿವಿಧಲಿಂಗ ಸಂಪತ್ತಿನ ಅನುಭವವಾಗಲು ಸಾಧ್ಯವಾಗುತ್ತದೆ." ಎಂದು ಬೇರೆ ಬರೆದಿದ್ದಾರೆ. ಇವರ ಈ ಬರೆಹವು ಲಿಂಗಾಯತ ಧರ್ಮದ ತತ್ವಕ್ಕೆ ಸರಿ ಇದೆಯೋ ಹೇಗೆ ಎಂಬುದನ್ನು ಬಲ್ಲವರೇ ನಿರ್ಣಯಿಸಬೇಕು.

---

# ಕಾಯಕವೆಂದರೇನು?

(ಲೇಖಕ:— ಶಿವಮೂರ್ತಿ.)

---

ಕಾಯಕವೆಂದರೆ ಹೊಟ್ಟೆಯ ಉದ್ಯೋಗವೆಂದು ಕೆಲವರು ತಿಳಿದಿದ್ದಾರೆ. ಆದರೆ ಶಿವಶರಣರು ಇಷ್ಟು ಸಂಕುಚಿತಾರ್ಥದಲ್ಲಿ ಆ ಶಬ್ದವನ್ನು ಪ್ರಯೋಗಿಸಿದಂತೆ ಕಂಡುಬರುವದಿಲ್ಲ. ಪ್ರತಿಯೊಬ್ಬ ಮನುಷ್ಯನು ತನ್ನ ಸಲುವಾಗಿಯೂ ತನ್ನ ಹೆಂಡಿರುಮಕ್ಕಳ ಸಲುವಾಗಿಯೂ ಅಹೋರಾತ್ರಿ ದುಡಿದು ದುಡ್ಡುಗಳಿಸಿ ಪ್ರಪಂಚಸಾಗಿಸುತ್ತಿದ್ದಾನೆ. ಅದೆಲ್ಲ ಕಾಯಕವೇ ಹೇಗೆ? ಅಲ್ಲ. ತನಗಾಗಿ ಇಲ್ಲವೆ ತನ್ನ ಕುಟುಂಬ ರಕ್ಷಣೆಗಾಗಿ ಮಾಡುವ ಉದ್ಯೋಗವು ಕಾಯಕವೆನಿಸಲಾರದು. ಆದರೆ ಗುರುಲಿಂಗ ಜಂಗಮ ತೃಪ್ತ್ಯರ್ಥವಾಗಿ ಮಾಡುವ ಪ್ರತಿಯೊಂದು ಪವಿತ್ರ ಕಾರ್ಯವು ಕಾಯಕವೆನಿಸುತ್ತದೆ. ಶಿವಶರಣರು ತಮ್ಮ ಹೊಟ್ಟೆಗಾಗಿ ದುಡಿಯಲಿಲ್ಲ. ತಮ್ಮ ಹೆಂಡಿರುಮಕ್ಕಳುಗಳ ಪಾಲನೆ ಪೋಷಣೆಗಳಿಗಾಗಿ ದುಡ್ಡು ಕೂಡಿಡಲಿಲ್ಲ. ಅವರು ಕಷ್ಟಬಟ್ಟು ದುಡಿದದ್ದನ್ನೆಲ್ಲ ಗುರುಲಿಂಗ ಜಂಗಮ ಸೇವೆಗೆಂದೇ ಮಾಡಿದರು. ಮೊದಲು ಅವರಿಗೆ ಸಲ್ಲಿಸಿ ಮಿಕ್ಕುಳಿದ ಪ್ರಸಾದವನ್ನು ತಾವು ಸೇವಿಸುತ್ತಿದ್ದರು. ಇವತ್ತು ಕೊಟ್ಟ ಶಿವನು ನಾಳೆ ಕೊಟ್ಟೇಕೊಡುವನೆಂಬ ಅಚಲವಾದ ಶ್ರದ್ಧೆಯಿಂದ ತಮ್ಮ ಆತ್ಮಬಲವನ್ನೂ ಬೆಳಸಿಕೊಂಡು ಇವತ್ತು ದುಡಿದದ್ದನ್ನು ಇವತ್ತೇ ಸತ್ಕಾರ್ಯಕ್ಕೊಪ್ಪಿಸಿಬಿಡುತ್ತಿದ್ದರೇವಿನಾ ನಾಳೆಗೆ ಬಂದೀತೆಂದು ಕೂಡಿಡುತ್ತಿದ್ದಿಲ್ಲ. ಆದ್ದರಿಂದ ಅವರ ಕಾಯಕದಲ್ಲಿ ಸ್ವಾರ್ಥದ ಲವಲೇಶವೂ ಕೂಡ ಕಂಡು ಬರುವದಿಲ್ಲ; ಆದರಲ್ಲಿ ಪರಮಾರ್ಥದ ರಹಸ್ಯವುಂಟು. ಭಗವದ್ಗೀತೆಯಲ್ಲಿ ಪ್ರತಿಪಾದಿಸಿದ ಲೋಕಸಂಗ್ರಹ ಕಾರ್ಯವೇ ಶಿವಶರಣರ ಕಾಯಕವು. "ಭುಂಜತೇ ತೇ ತ್ವಘಂ ಪಾಪಾಯೇ ಪಚಂತ್ಯಾತ್ಮ ಕಾರಣಾತ್" ಅಂದರೆ ಯಾರು ತಮಗಾಗಿಯೇ ಆಹಾರವನ್ನು ಬೇಯಿಸಿಕೊಳ್ಳುವರೋ ಅವರು ಪಾಪವನ್ನೇ ಭುಂಜಿಸುತ್ತಾರೆಂದು ಗೀತೆಯು ಸಾರುತ್ತದೆ. ಆದುದರಿಂದ ತಮ್ಮ ಹೊಟ್ಟೆಗಾಗಿಯೇ ಕೆಲಸ ಮಾಡದೆ ಗುರುಲಿಂಗ ಜಂಗಮದ ತೃಪ್ತಿಗಾಗಿ ಅರ್ಥಾತ್ ಪರಮಾತ್ಮನ

ಸೇವೆಗಾಗಿ ಕರ್ಮ ಮಾಡುವದೇ ಕಾಯಕದ ರಹಸ್ಯವು. ನಮ್ಮ ಶಿವ ಶರಣರು ಇದನ್ನು ಅರಿತು ಆಚರಿಸಿದ್ದಾರೆ.

ತಾನು ಉಂಡುಟ್ಟು ಹೆಚ್ಚಾದದ್ದನ್ನು ಸತ್ಪಾತ್ರಕ್ಕೆ ಸಲ್ಲಿಸುವದು ಕಾಯಕವಲ್ಲ. ಮೊದಲು ತಾನು ಗಳಿಸಿದ್ದರಲ್ಲಿ ಬಹುಭಾಗವನ್ನು ಸತ್ಪಾತ್ರಕ್ಕೆ ಸಲ್ಲಿಸಿ ಉಳಿದುದನ್ನು ತಾನು ಸೇವಿಸುವದೇ ಕಾಯಕವು. ಮೊದಲು ತಾನೇ ಭೋಗಿಸಬೇಕೆಂಬ ಇಚ್ಛೆಯುಳ್ಳ ಮನುಷ್ಯನು ಪ್ರಸಂಗವಶಾತ್ ಸ್ವಾರ್ಥಕ್ಕೆ ಶಿಲುಕಿ ಇಲ್ಲವೆ ಆಶೆಗೆ ಬಿದ್ದು ಯಥೇಚ್ಛವಾಗಿ ಉಂಡುಟ್ಟು ಏನಾದರೂ ಅಲ್ಪ ಉಳಿದರೆ ಅದನ್ನು ಸತ್ಪಾತ್ರಕ್ಕೆ ಸಮರ್ಪಿಸಬಹುದು, ಇಲ್ಲವೇ ತಾನೇ ಏನೂ ಉಳಿಯದಂತೆ ನುಂಗಿ ನೀರು ಕುಡಿಯಬಹುದು. ಇದರಿಂದ ಮನುಷ್ಯನ ಸ್ವಾರ್ಥಪರವಾದ ಪಶುವೃತ್ತಿಯು ಹೆಚ್ಚಾದೀತೆಂಬ ಶಂಕೆಯಿಂದಲೋ ಏನೋ ಶಿವಶರಣರು ತಾವು ದುಡಿದದ್ದೆಲ್ಲವನ್ನೂ ಮೊದಲು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ಅವರು ಕರುಣಿಸಿಕೊಟ್ಟ ಆಶೀರ್ವಾದವನ್ನು ಮಹಾಪ್ರಸಾದವೆಂದು ಸೇವಿಸುತ್ತಿದ್ದರು. ಅವರ ಆಶೀರ್ವಾದವೇನೂ ದೊರೆಯದಿದ್ದರೆ ಶಿವನಾಜ್ಞೆಯೆಂದು ಸಹನಮಾಡಿಕೊಳ್ಳುತ್ತಿದ್ದರು. ಇದರಿಂದ ಕಾಯಕದಲ್ಲಿ ಎಂಥ ಉದಾತ್ತವಾದ ಮತ್ತು ಉದಾರ ಗುಣವು ಹುದುಗಿಕೊಂಡಿರುತ್ತದೆಂಬದು ಕಂಡುಬರುತ್ತದೆ. ಜಗತ್ತಿನಲ್ಲಿ ಪರೋಪಕಾರಿಗಳೆಂದೆನಿಸಿಕೊಳ್ಳುವವರು ತಮ್ಮಲ್ಲಿ ಹೆಚ್ಚಾಗಿದ್ದುದನ್ನು ಸತ್ಪಾತ್ರಕ್ಕೆ ದಾನ ಮಾಡುವದುಂಟು. ಆದರೆ ಶಿವಶರಣರು ತಮ್ಮಲ್ಲಿದ್ದುದೆಲ್ಲವನ್ನು ಗುರುಲಿಂಗಜಂಗಮಕ್ಕೆ ಸಲ್ಲಿಸಿ ಅವರು ತಿರುಗಿ ನೀಡಿದ್ದನ್ನು ಮಹಾಪ್ರಸಾದವೆಂದು ಸೇವಿಸುವರು. ಶಿವಶರಣರದು ಪರೋಪಕಾರವಲ್ಲ. ಅದು ಸೇವೆಯು ಅಥವಾ ದಾಸೋಹವು. ಪರೋಪಕಾರಕ್ಕಿಂತ ದಾಸೋಹವು ಎಷ್ಟೋ ಪಟ್ಟು ಮಿಗಿಲಾಗಿರುತ್ತದೆ.

ಕಾಯಕದಲ್ಲಿ ಬಡಿಗತನ, ಕಮ್ಮಾರಿಕೆ, ನೇಕಾರಿಕೆ, ಶಿಂಪಿಗತನ, ಉಪ್ಪಾರಿಕೆ ಮೊದಲಾದ ವ್ಯವಹಾರೋದ್ಯೋಗಗಳಷ್ಟೇ ಸಮಾವೇಶವಾಗುತ್ತವೆಂದು ಯಾರೂ ತಿಳಿಯಲಾಗದು. ಉಪದೇಶ, ತತ್ವಬೋಧೆ, ಸಮಾಜ ಸೇವೆ ಮೊದಲಾದವುಗಳು ಕೂಡ ಕಾಯಕಗಳೆಂದೇ ಹೇಳಲ್ಪಡುತ್ತವೆ. ಪ್ರಭುದೇವ, ಅಕ್ಕಮಹಾದೇವಿಯರು ಯಾವ ವ್ಯವಹಾರೋದ್ಯೋಗವನ್ನು ಮಾಡದಿದ್ದರೂ ತತ್ವವಿವೇಚನೆ, ಸದುಪದೇಶ ಮುಂತಾದ ಪವಿತ್ರ ಕೆಲಸ

ಗಳನ್ನು ಮಾಡಿದ್ದಾರೆ. ಅಂದಬಳಿಕ ಅವು ಕಾಯಕಗಳೇ ಅಹುದು. ಎಷ್ಟೋ ಜನ ಯೋಗಿಗಳು ಅನೇಕ ವರ್ಷ ಲಿಂಗಾನುಸಂಧಾನದಲ್ಲಿಯೇ ಕಾಲಕಳೆದು ಸಮಾಜದಲ್ಲಿ ಬೆರೆತು ತಮ್ಮ ನೇತ್ರ ಸ್ಪರ್ಶಗಳಿಂದ ಜನರಲ್ಲಿ ಭಕ್ತಿ-ಪ್ರೇಮಗಳನ್ನು ಹೆಚ್ಚಿಸುವರು. ಇದಾದರೂ ಕಾಯಕವೇ. ಬಸವಚೆನ್ನಬಸವಾದಿಗಳು ರಾಜಾಧಿಕಾರಿಗಳಾಗಿ ಕೆಲಸಮಾಡಿ ತಮಗೆ ಬಂದ ಸಂಪತ್ತನ್ನು ಸಮಾಜ ಸೇವೆಗೆ ಸಲ್ಲಿಸುತ್ತಿದ್ದರು. ಇದೂ ಕಾಯಕವೇ. ಹಿಂದಕ್ಕೆ ಎಷ್ಟೋ ಗಣಂಗಳು ಮುಳ್ಳುಗಾವಿಗೆ, ಉಪವಾಸ, ತೆಕ್ಕೆ ಕಾಯಕ ಮುಂತಾದ ಕಾಯಕಷ್ಟಗಳನ್ನು ಅರ್ಥಾತ್ ಸತ್ಯಾಗ್ರಹವನ್ನು ಮಾಡಿ ಜನರ ಉದ್ದಂಡವೃತ್ತಿಯನ್ನು ಪರಿವರ್ತನಗೊಳಿಸುತ್ತಿದ್ದರು. ಇವಾದರೂ ಕಾಯಕಗಳೇ ಸರಿ. ಒಟ್ಟಿನ ಮೇಲೆ ಮನುಷ್ಯನು ತನ್ನ ಶಾರೀರಿಕ, ಮಾನಸಿಕ, ನೈತಿಕಶಕ್ತಿಗಳಿಂದ ಲೋಕಹಿತಾರ್ಥವಾಗಿ ಈಶ್ವರಾರ್ಪಣ ಬುದ್ಧಿಯಿಂದ ಯಾವ ಯಾವ ಕಾರ್ಯಗಳನ್ನು ಮಾಡುವನೋ ಅದೆಲ್ಲವೂ ಕಾಯಕವೆಂದೇ ತಿಳಿಯಬೇಕು.

ಕಾಯಕವೆಂದರೆ ನಿಷ್ಕಾಮಕರ್ಮ ಅಥವಾ ಅನಾಸಕ್ತಿಯೋಗ. ಫಲಾಪೇಕ್ಷೆಯಿಲ್ಲದೆ ಮಾಡುವ ಲೋಕಸಂಗ್ರಹ ಕಾರ್ಯ. ಕಾಯಕ ಮಾಡುವವನು ತನಗೇನಾದರೂ ಲಾಭವಾಗಲೆಂಬ ಉದ್ದೇಶದಿಂದ ಮಾಡುವದಿಲ್ಲ. ಹಾಗೆ ಮಾಡುವದು ತನ್ನ ಕರ್ತವ್ಯವೆಂದೇ ತಿಳಿದುಮಾಡುತ್ತಾನೆ. ಭಗವದ್ಗೀತೆಯಲ್ಲಿ ಇದೇ ಮಾತನ್ನೇ ಹೇಳಿದೆ. “ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ” ಅಂದರೆ ಕರ್ಮಮಾಡಲಿಕ್ಕೆ ಮಾತ್ರ ನಿನಗೆ ಅಧಿಕಾರವುಂಟು. ಆದರೆ ಅದರ ಫಲವನ್ನು ಮಾತ್ರ ನೀನು ಆಶೆಮಾಡಬಾರದು. ಶಿವಶರಣರು ಯಾವ ಕೆಲಸ ಮಾಡಿದರೂ ಶಿವಾರ್ಪಣ ಬುದ್ಧಿಯಿಂದಲೇ ಮಾಡುವರು. ಇದೇ ಮಾತನ್ನು ಭಗವದ್ಗಿತೆಯಲ್ಲಿ ಈ ರೀತಿಯಾಗಿ ಹೇಳಿದ್ದಾಗಿದೆ. “ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ । ಯತ್ತಪಶ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ” ॥ ಅದರಂತೆ ಶ್ರೀ ಶಂಕರಾಚಾರ್ಯರು “ಯದ್‌ಯತ್ಕರ್ಮ ಕರೋಮಿತತ್ತದಖಿಲಂ ಶಂಭೋತವಾರಾಧನಂ” ಎಂದು ಉಸುರಿದ್ದಾರೆ. ಕಾಯಕವು ಗುರುಲಿಂಗಜಂಗಮ ಸೇವಾರ್ಥವಾಗಿ ಮಾಡುವ ಕೆಲಸವಾದ್ದರಿಂದ ಅದರಲ್ಲಿ ಸ್ವಾರ್ಥಕ್ಕೆ

ಸೇವೆಗಾಗಿ ಕರ್ಮ ಮಾಡುವದೇ ಕಾಯಕದ ರಹಸ್ಯವು. ನಮ್ಮ ಶಿವ ಶರಣರು ಇದನ್ನು ಅರಿತು ಆಚರಿಸಿದ್ದಾರೆ.

ತಾನು ಉಂಡುಟ್ಟು ಹೆಚ್ಚಾದದ್ದನ್ನು ಸತ್ಪಾತ್ರಕ್ಕೆ ಸಲ್ಲಿಸುವದು ಕಾಯಕವಲ್ಲ. ಮೊದಲು ತಾನು ಗಳಿಸಿದ್ದರಲ್ಲಿ ಬಹುಭಾಗವನ್ನು ಸತ್ಪಾತ್ರಕ್ಕೆ ಸಲ್ಲಿಸಿ ಉಳಿದುದನ್ನು ತಾನು ಸೇವಿಸುವದೇ ಕಾಯಕವು. ಮೊದಲು ತಾನೇ ಭೋಗಿಸಬೇಕೆಂಬ ಇಚ್ಛೆಯುಳ್ಳ ಮನುಷ್ಯನು ಪ್ರಸಂಗವಶಾತ್ ಸ್ವಾರ್ಥಕ್ಕೆ ಶಿಲುಕಿ ಇಲ್ಲವೆ ಆಶೆಗೆ ಬಿದ್ದು ಯಥೇಚ್ಛವಾಗಿ ಉಂಡುಟ್ಟು ಏನಾದರೂ ಅಲ್ಪ ಉಳಿದರೆ ಅದನ್ನು ಸತ್ಪಾತ್ರಕ್ಕೆ ಸಮರ್ಪಿಸಬಹುದು. ಇಲ್ಲವೇ ತಾನೇ ಏನೂ ಉಳಿಯದಂತೆ ನುಂಗಿ ನೀರು ಕುಡಿಯಬಹುದು. ಇದರಿಂದ ಮನುಷ್ಯನ ಸ್ವಾರ್ಥಪರವಾದ ಪಶುವೃತ್ತಿಯು ಹೆಚ್ಚಾದೀತೆಂಬ ಶಂಕೆಯಿಂದಲೋ ಏನೋ ಶಿವಶರಣರು ತಾವು ದುಡಿದದ್ದೆಲ್ಲವನ್ನೂ ಮೊದಲು ಗುರುಲಿಂಗ ಜಂಗಮಕ್ಕೆ ಸಮರ್ಪಿಸಿ ಅವರು ಕರುಣಿಸಿಕೊಟ್ಟ ಆಶೀರ್ವಾದವನ್ನು ಮಹಾಪ್ರಸಾದವೆಂದು ಸೇವಿಸುತ್ತಿದ್ದರು. ಅವರ ಆಶೀರ್ವಾದವೇನೂ ದೊರೆಯದಿದ್ದರೆ ಶಿವನಾಜ್ಞೆಯೆಂದು ಸಹನಮಾಡಿಕೊಳ್ಳುತ್ತಿದ್ದರು. ಇದರಿಂದ ಕಾಯಕದಲ್ಲಿ ಎಂಥ ಉದಾತ್ತವಾದ ಮತ್ತು ಉದಾರ ಗುಣವು ಹುದುಗಿಕೊಂಡಿರುತ್ತದೆಂಬದು ಕಂಡುಬರುತ್ತದೆ. ಜಗತ್ತಿನಲ್ಲಿ ಪರೋಪಕಾರಿಗಳೆಂದೆನಿಸಿಕೊಳ್ಳುವವರು ತಮ್ಮಲ್ಲಿ ಹೆಚ್ಚಾಗಿದ್ದುದನ್ನು ಸತ್ಪಾತ್ರಕ್ಕೆ ದಾನ ಮಾಡುವದುಂಟು. ಆದರೆ ಶಿವಶರಣರು ತಮ್ಮಲ್ಲಿದ್ದುದೆಲ್ಲವನ್ನು ಗುರುಲಿಂಗಜಂಗಮಕ್ಕೆ ಸಲ್ಲಿಸಿ ಅವರು ತಿರುಗಿ ನೀಡಿದ್ದನ್ನು ಮಹಾಪ್ರಸಾದವೆಂದು ಸೇವಿಸುವರು. ಶಿವಶರಣರದು ಪರೋಪಕಾರವಲ್ಲ. ಅದು ಸೇವೆಯು ಅಥವಾ ದಾಸೋಹವು. ಪರೋಪಕಾರಕ್ಕಿಂತ ದಾಸೋಹವು ಎಷ್ಟೋ ಪಟ್ಟು ಮಿಗಿಲಾಗಿರುತ್ತದೆ.

ಕಾಯಕದಲ್ಲಿ ಬಡಿಗತನ, ಕಮ್ಮಾರಿಕೆ, ನೇಕಾರಿಕೆ, ಶಿಂಪಿಗತನ, ಉಪ್ಪಾರಿಕೆ ಮೊದಲಾದ ವ್ಯವಹಾರೋದ್ಯೋಗಗಳಷ್ಟೇ ಸಮಾವೇಶವಾಗುತ್ತವೆಂದು ಯಾರೂ ತಿಳಿಯಲಾಗದು. ಉಪದೇಶ, ತತ್ವಬೋಧೆ, ಸಮಾಜ ಸೇವೆ ಮೊದಲಾದವುಗಳು ಕೂಡ ಕಾಯಕಗಳೆಂದೇ ಹೇಳಲ್ಪಡುತ್ತವೆ. ಪ್ರಭುದೇವ, ಅಕ್ಕಮಹಾದೇವಿಯರು ಯಾವ ವ್ಯವಹಾರೋದ್ಯೋಗವನ್ನು ಮಾಡದಿದ್ದರೂ ತತ್ವವಿವೇಚನೆ, ಸದುಪದೇಶ ಮುಂತಾದ ಪವಿತ್ರ ಕೆಲಸ

ಗಳನ್ನು ಮಾಡಿದ್ದಾರೆ. ಅಂದಬಳಿಕ ಅವು ಕಾಯಕಗಳೇ ಅಹುದು. ಎಷ್ಟೋ ಜನ ಯೋಗಿಗಳು ಅನೇಕ ವರ್ಷ ಲಿಂಗಾನುಸಂಧಾನದಲ್ಲಿಯೇ ಕಾಲಕಳೆದು ಸಮಾಜದಲ್ಲಿ ಬೆರೆತು ತಮ್ಮ ನೇತ್ರ ಸ್ಪರ್ಶಗಳಿಂದ ಜನರಲ್ಲಿ ಭಕ್ತಿ-ಪ್ರೇಮಗಳನ್ನು ಹೆಚ್ಚಿಸುವರು. ಇದಾದರೂ ಕಾಯಕವೇ. ಬಸವಚೆನ್ನಬಸವಾದಿಗಳು ರಾಜಾಧಿಕಾರಿಗಳಾಗಿ ಕೆಲಸಮಾಡಿ ತಮಗೆ ಬಂದ ಸಂಪತ್ತನ್ನು ಸಮಾಜ ಸೇವೆಗೆ ಸಲ್ಲಿಸುತ್ತಿದ್ದರು. ಇದೂ ಕಾಯಕವೇ. ಹಿಂದಕ್ಕೆ ಎಷ್ಟೋ ಗಣಂಗಳು ಮುಳ್ಳುಆವಿಗೆ, ಉಪವಾಸ, ತೆಕ್ಕೆ ಕಾಯಕ ಮುಂತಾದ ಕಾಯಕಷ್ಟಗಳನ್ನು ಅರ್ಥಾತ್ ಸತ್ಯಾಗ್ರಹವನ್ನು ಮಾಡಿ ಜನರ ಉದ್ದಂಡವೃತ್ತಿಯನ್ನು ಪರಿವರ್ತನಗೊಳಿಸುತ್ತಿದ್ದರು. ಇವಾದರೂ ಕಾಯಕಗಳೇ ಸರಿ. ಒಟ್ಟಿನ ಮೇಲೆ ಮನುಷ್ಯನು ತನ್ನ ಶಾರೀರಿಕ, ಮಾನಸಿಕ, ನೈತಿಕಶಕ್ತಿಗಳಿಂದ ಲೋಕಹಿತಾರ್ಥವಾಗಿ ಈಶ್ವರಾರ್ಪಣ ಬುದ್ಧಿಯಿಂದ ಯಾವ ಯಾವ ಕಾರ್ಯಗಳನ್ನು ಮಾಡುವನೋ ಅದೆಲ್ಲವೂ ಕಾಯಕವೆಂದೇ ತಿಳಿಯಬೇಕು.

ಕಾಯಕವೆಂದರೆ ನಿಷ್ಕಾಮಕರ್ಮ ಅಥವಾ ಅನಾಸಕ್ತಿಯೋಗ. ಫಲಾಪೇಕ್ಷೆಯಿಲ್ಲದೆ ಮಾಡುವ ಲೋಕಸಂಗ್ರಹ ಕಾರ್ಯ. ಕಾಯಕ ಮಾಡುವವನು ತನಗೇನಾದರೂ ಲಾಭವಾಗಲೆಂಬ ಉದ್ದೇಶದಿಂದ ಮಾಡುವದಿಲ್ಲ. ಹಾಗೆ ಮಾಡುವದು ತನ್ನ ಕರ್ತವ್ಯವೆಂದೇ ತಿಳಿದುಮಾಡುತ್ತಾನೆ. ಭಗವದ್ಗೀತೆಯಲ್ಲಿ ಇದೇ ಮಾತನ್ನೇ ಹೇಳಿದೆ. "ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ಅಂದರೆ ಕರ್ಮಮಾಡಲಿಕ್ಕೆ ಮಾತ್ರ ನಿನಗೆ ಅಧಿಕಾರವುಂಟು. ಆದರೆ ಅದರ ಫಲವನ್ನು ಮಾತ್ರ ನೀನು ಆಶೆಮಾಡಬಾರದು. ಶಿವಶರಣರು ಯಾವ ಕೆಲಸ ಮಾಡಿದರೂ ಶಿವಾರ್ಪಣ ಬುದ್ಧಿಯಿಂದಲೇ ಮಾಡುವರು. ಇದೇ ಮಾತನ್ನು ಭಗವದ್ಗೀತೆಯಲ್ಲಿ ಈ ರೀತಿಯಾಗಿ ಹೇಳಿದ್ದಾಗಿದೆ. "ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ । ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ" ॥ ಅದರಂತೆ ಶ್ರೀ ಶಂಕರಾಚಾರ್ಯರು "ಯದ್ಯತ್ಕರ್ಮ ಕರೋಮಿತತ್ತದಖಿಲಂ ಶಂಭೋತವಾರಾಧನಂ" ಎಂದು ಉಸುರಿದ್ದಾರೆ. ಕಾಯಕವು ಗುರುಲಿಂಗಜಂಗಮ ಸೇವಾರ್ಥವಾಗಿ ಮಾಡುವ ಕೆಲಸವಾದ್ದರಿಂದ ಅದರಲ್ಲಿ ಸ್ವಾರ್ಥಕ್ಕೆ

ಇಂಬಿಲ್ಲ. ಫಲದ ಆಶೆಯಿಲ್ಲ. ನಿರಾಶೆ ಉದಾಶೀನತೆಗಳಿಗೆ ಆಸ್ಪದವಿಲ್ಲ. ಅಂತೆಯೇ ಕಾಯಕವೇ ಕೈಲಾಸವೆಂದು ಹೇಳಿದ್ದು.

ಕಾಯಕವೆಂದರೆ ಕರ್ತವ್ಯ, ಅರ್ಥಾತ ಮನುಷ್ಯನು ಅವಶ್ಯವಾಗಿ ಮಾಡಲೇಬೇಕಾದ ಕೆಲಸ. ಅವನು ಅದನ್ನು ಮಾಡದಿದ್ದರೆ ಪತಿತನಾಗುತ್ತಾನೆ. ಎಂಥ ವಿಘ್ನಗಳು ಬಂದರೂ ಅವನು ಅದನ್ನು ಬಿಡಬಾರದು. ಮನುಷ್ಯನು ಸಮಾಜ ಪ್ರಾಣಿಯಾದುದರಿಂದ ಅದರ ಏಳ್ಗೆಗಾಗಿ ಅವನು ಒಂದಿಲ್ಲೊಂದು ಕಾರ್ಯವನ್ನು ಅವಶ್ಯವಾಗಿ ಮಾಡಬೇಕಾಗುತ್ತದೆ. ಕಾಯಕದಲ್ಲಿ ಕೀಳು ಮೇಲೆಂಬುದಿಲ್ಲ. ಮನುಷ್ಯನು ಕಾಯಕದಲ್ಲಿ ನಿರತನಾದರೆ ಗುರುದರ್ಶನವನ್ನಾದರೂ ಮರೆಯಬೇಕು. ಲಿಂಗಪೂಜೆಯನ್ನಾದರೂ ಬಿಡಬೇಕು. ಜಂಗಮವು ಮುಂದಿದ್ದರೂ ಹಂಗು ಹರಿಯಬೇಕು. ಎಂದು ಒಬ್ಬ ಶರಣರು ಹೇಳಿದ್ದಾರೆ ಕಾಯಕದಲ್ಲಿ ಕುಲವನರಸಬಾರದು. ಅರಸಿದರೆ ನಿಮ್ಮ ರಾಣಿವಾಸದಾಣೆ ಎಂದು ಬಸವಣ್ಣನವರು ಶಪಥ ತೊಟ್ಟಿದ್ದಾರೆ. ಸಮಾಜದಲ್ಲ ತನ್ನ ಪಾಲಿನ ಕೆಲಸವು ಸಣ್ಣದೇ ಇರಲಿ, ದೊಡ್ಡದೇ ಇರಲಿ ಅದು ಅತ್ಯಂತ ಪವಿತ್ರವಾದುದೆಂದೇ ತಿಳಿದು ಮಾಡಬೇಕು. ಯಾಕೆಂದರೆ ಆ ಕಾರ್ಯವು ತನ್ನ ಸಲುವಾಗಿ ಅಲ್ಲ. ಆದರೆ ಸಮಾಜದ ಸಲುವಾಗಿ ಇರುತ್ತದೆಂಬದನ್ನು ಸರ್ವಥಾ ಮರೆಯಲಾಗದು. ಕಾಯಕವು ಒಳ್ಳೆ ನಾಗರಿಕತೆಯ ಲಕ್ಷಣವು. ಮನುಷ್ಯನು ಆ ಕರ್ತವ್ಯ ಪರಾಙ್ಮುಖನಾದರೆ ಸಮಾಜವು ಅವನನ್ನು ದೂಷಿಸುತ್ತದೆ. ಸಮಾಜ ಹಿತಕಾರ್ಯವೇ ಕಾಯಕವು. ಮೊದಲು ಸಮಾಜ ಹಿತ ಬಳಿಕ ತನ್ನ ಹಿತ. ತನುಮನಧನಗಳನ್ನು ಸಮಾಜಕ್ಕೆ ಧಾರೆ ಎರೆಯುವದೇ ಕಾಯಕವು. ಸ್ವಾರ್ಥತ್ಯಾಗ ಸೇವೆಗಳಲ್ಲಿಯೇ ನಿಜವಾದ ಸಮಾಜೋದ್ಧಾರವಿರುತ್ತದೆ. ಅಂಥ ಕಾಯಕವೇ ಕೈಲಾಸವು.

ಕಾಯಕವು ಭೋಗದ ಲಕ್ಷಣವಲ್ಲ, ತ್ಯಾಗದ ದ್ಯೋತಕವು. ಶಿವಶರಣರು ಸುಖೋಪಭೋಗಿಗಳಲ್ಲ, ಲಿಂಗೋಪಭೋಗಿಗಳು. ಅಂದರೆ ತಾವು ಕಾಯಕ ಮಾಡುವದು ಲಿಂಗಾರ್ಪಿತವೇ ಹೊರತು ಸ್ವಾರ್ಪಿತವಲ್ಲ. ಎಲ್ಲಿಯ ವರೆಗೆ ಇಂಥ ನಿಸ್ಸೀಮವಾದ ಸ್ವಾರ್ಥತ್ಯಾಗವು ನಮ್ಮ ಸಮಾಜದಲ್ಲಿ ಅಳವಡುವದಿಲ್ಲವೋ ಅಲ್ಲಿಯ ವರೆಗೆ ನಮ್ಮ ಪ್ರಗತಿಯಾಗಲಾರದು. ಈಗಂತೂ ಎಲ್ಲರಲ್ಲಿಯೂ ಸ್ವಾರ್ಥವು ಮಿತಿಮೀರಿ ಬೆಳೆದು

ಹೋಗಿದೆ. ಜನರಿಗೆ ತತ್ವವನ್ನು ಬೋಧಿಸತಕ್ಕ ಮಠಮಾನ್ಯಗಳೇ ಸ್ವಾರ್ಥಾಡಂಬರದಲ್ಲಿ ನಲಿದಾಡುತ್ತಿರಲು ಮಿಕ್ಕವರ ಪಾಡೇನು? ನಮಗೆ ಸುಖ ಶಾಂತಿ ದೊರೆತರೆ ಸಾಕು. ಉಳಿದವರ ಗತಿಯೇನಾದರೇನು?— ಎಂಬ ಮಟ್ಟಿಗೆ ನಮ್ಮ ಜನರು ಸ್ವಾರ್ಥಪರಾಯಣರಾಗಿ ಬಿಟ್ಟಿದ್ದಾರೆ

''ಕಾಗೆಯೊಂದಗಳು ಕಂಡರೆ ಕರೆಯದೇ ತನ್ನ।
ಬಳಗವನೆಲ್ಲವನು? ಕೋಳಿಯೊಂದು ಗುಟುಕು।
ಕಂಡರೆ, ಕರೆಯದೇ ತನ್ನ ಕುಲವನೆಲ್ಲವನು?।
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗಿ।
ಕೋಳಿಗಳಿಂದ ಕರಕಷ್ಟ ಕಾಣಾ।
ಕೂಡಲಸಂಗಮದೇವಾ''

ಎಂಬೀ ತತ್ವವು ಈಗ ನಮ್ಮ ಸಮಾದಲ್ಲಿ ಲೋಪವಾಗಿದೆ. ತಾನು ಹೊಟ್ಟೆ ತುಂಬ ಉಂಡು ತೇಗುವದಷ್ಟೇ ಕಾಯಕದ ಉದ್ದೇಶವಲ್ಲ. ಹೊಟ್ಟೆಗಿಲ್ಲದೆ ಬಾಳುವ ತನ್ನ ಸಮಾಜ ಬಾಂಧವರಿಗೆ ಹೊಟ್ಟೆಯ ಉದ್ಯೋಗ ಹಚ್ಚಿಕೊಡುವದೂ ಕಾಯಕದ ಮುಖ್ಯ ಉದ್ದೇಶವಾಗಿದೆ.

ನಮ್ಮ ಸಮಾಜದಲ್ಲಿ ಯಾರೂ ನಿರುದ್ಯೋಗಿಗಳಾಗಬಾರದು. ಎಲ್ಲರೂ ಉದ್ಯೋಗಶಾಲಿಗಳಾಗಿ ಸದಾ ಸುಖಶಾಂತಿಯಿಂದ ಬಾಳಬೇಕು. ಈಗ ನಮ್ಮ ಸಮಾಜದಲ್ಲಿ ನಿರುದ್ಯೋಗಿಗಳ ಸಂಖ್ಯೆಯು ಮಿತಿಮೀರಿ ಬೆಳೆಯಲಾರಂಭಿದೆ. ಅದಕ್ಕೆ ಗಿರಣಿ, ಭೂವಿಭಾಗ, ಬರಗಾಲ, ಯುದ್ಧ ಜನಸಂಖ್ಯೆಯ ಬೆಳವಣಿಗೆ, ಅಜ್ಞಾನ ಮುಂತಾದ ಅನೇಕ ಕಾರಣಗಳಿರಬಹುದು. ಆದರೆ ಈ ದುಸ್ಥಿತಿಯನ್ನು ಕಣ್ಣಾರೆ ಕಂಡು ಮನ ಮರುಗದಿರುವದು. ವೀರಶೈವರ ಲಕ್ಷಣವಲ್ಲ. ನಮ್ಮ ಸಮಾಜದಲ್ಲಿ ಎಷ್ಟೋ ವೀರಶೈವ ಸದ್ಗೃಹಸ್ಥರು ವ್ಯವಹಾರೋದ್ಯೋಗದಿಂದ ಒಳ್ಳೇ ಸಿರಿವಂತರಾಗಿದ್ದಾರೆ. ನಮ್ಮಲ್ಲಿ ವತನದಾರ ಮನೆತನಗಳೂ ಅನೇಕವಾಗಿವೆ. ಅಂಥವರು ಹಣವನ್ನು ಶೇಖರಿಸಿ ನಾನಾವಿಧವಾದ ಕೈಗಾರಿಕೆಗಳಿಗೆ ಪ್ರೋತ್ಸಾಹವನ್ನಿತ್ತರೆ ಆದರಿಂದ ನಮ್ಮ ಬಡಬಾಂಧವರಿಗೆ ಎಷ್ಟೋ ಸಹಾಯವಾದೀತು. ತನ್ನ ಸಮಾಜಬಾಂಧವರ ಹೊಟ್ಟೆ ಬಟ್ಟೆಗಳು ಸರಿಯಾಗಿ ಸಾಗಿವೆಯೋ ಇಲ್ಲವೋ ನೋಡುವದು ಮೊದಲನೇ ಕಾಯಕವು. ತನ್ನ ಸಮಾಜದವರು ಸದ್ಭಕ್ತಿ ಸದಾಚಾರಗಳಿಂದ ನಡೆಯು

ವರೋ ಹೇಗೆಂಬದನ್ನು ವಿಚಾರಿಸುವದು ಎರಡನೆಯ ಕಾಯಕವು. ಈ ಎರಡೂ ಕಾಯಕಗಳಲ್ಲಿ ನಮ್ಮ ಸಂಸ್ಕೃತಿ ಸುಧಾರಣೆಗಳು ಹುದುಗಿಕೊಂಡಿವೆ.

ತಾನೊಬ್ಬ ಉದ್ಯೋಗಶೀಲನಾಗಿ ತನ್ನ ಹೆಂಡರು ಮಕ್ಕಳೊಡನೆ ಸುಖದಿಂದ ಬಾಳಿದರೆ ಅದು ಕಾಯಕವಲ್ಲ. ನಿರುದ್ಯೋಗಿಗಳಾದ ತನ್ನ ಸಮಾಜದ ಬಂಧುಗಳಿಗೂ ಕಾಯಕಗಳನ್ನು ಕಲ್ಪಿಸಿಕೊಡುವದೂ ಕಾಯಕದ ಉದ್ದೇಶವಾಗಿವೆ. ನಿರುದ್ಯೋಗಿಗಳಿಗೆ ಅನ್ನ ಛತ್ರವನ್ನಿಟ್ಟು ಆಲಸಿಗಳನ್ನಾಗಿ ಮಾಡಬೇಕೆಂದು ಕಾಯಕವು ಹೇಳುವದಿಲ್ಲ. ದುಡಿಮೆಯಿಲ್ಲದವರಿಗೆ ದುಡಿತವನ್ನು ಹಚ್ಚಿಕೊಡೆಂದೇ ಕಾಯಕವು ಸಾರುತ್ತದೆ. ಈಗಿನ ಬರಗಾಲ ಮತ್ತು ಯುದ್ಧದ ಅನಿಷ್ಟ ಪ್ರಸಂಗದಲ್ಲಿ ಪ್ರತಿಯೊಂದು ತಾಲೂಕ ಜಿಲ್ಲೆಯಲ್ಲಿ ವೀರಶೈವರು ನಿರುದ್ಯೋಗನಿವಾರಕ ಸಂಘಗಳನ್ನು ಸ್ಥಾಪಿಸಿ ಆಮೂಲಕ ಸಮಾಜದ ಬಡಜನರ ಹೊಟ್ಟೆಬಟ್ಟೆಯ ಪ್ರಶ್ನೆಯನ್ನು ಬಿಡಿಸುವದು ಸಮಾಜದ ಮೇಲೆ ಬಿದ್ದ ದೊಡ್ಡ ಭಾರವಾಗಿದೆ. ನಮ್ಮಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳು ಸ್ಥಾಪಿತವಾದುದೇನೋ ನಿಜ. ಆದರೆ ಈ ವರೆಗೆ ಒಂದಾದರೂ ನಮ್ಮಲ್ಲಿ ಕೈಗಾರಿಕೆಯ ಸಂಸ್ಥೆಯಿಲ್ಲದಿರುವದೊಂದು ದೊಡ್ಡ ಕುಂದು. ಕೈಗಾರಿಕೆಯ ಸಂಸ್ಥೆಗಳಿಗೆ ಸರಕಾರದಿಂದ ಹೆಚ್ಚು ಗ್ರ್ಯಾಂಟು ಮತ್ತು ಸವಲತ್ತುಗಳು ದೊರಕುವದುಂಟು. ಅದರ ಸದುಪಯೋಗವನ್ನು ನಮ್ಮ ಸಮಾಜಬಾಂಧವರು ಹೊಂದಲಿಕ್ಕೆ ಮುಂದುವರಿಯಬೇಕು. ನಮ್ಮ ಸಮಾಜದಲ್ಲಿ ಎತ್ತ ನೋಡಿದತ್ತ ಕೈಗಾರಿಕೆ ಕಲಾಕೌಶಲ್ಯಗಳು ಬೆಳೆದು ಎಲ್ಲರ ಕೈಯಲ್ಲಿಯೂ ರೊಕ್ಕವು ಓಡಾಡಿ ಅವರು ಸುಖಶಾಂತಿಯಿಂದ ನಲಿದಾಡಿದರೆ ಮಾತ್ರ ಕಾಯಕವೇ ಕೈಲಾಸವೆಂಬ ಮಾತು ಸಾರ್ಥಕವಾಗುವದು.

---

# ಇಂದಿನ ವೀರಶೈವ ಸ್ತ್ರೀ ಸಮಾಜ.

(ಲೇಖಕ.— ಎನ್. ಎಸ್. ಟೆಂಗಿನಕಾಯಿ ಮು. ಹುಬ್ಬಳ್ಳಿ.)

ಇಂದು ನಮ್ಮ ಸ್ತ್ರೀ ಸಮಾಜವು ಯಾವ ಪರಿಸ್ಥಿತಿಯಲ್ಲಿದೆ, ಸಂಸಾರದಲ್ಲಿ ಸ್ತ್ರೀಯರ ಮೇಲಿದ್ದ ಹೊಣೆ ಯಾವುದು, ಆ ಹೊಣೆಯನ್ನು ಹೊತ್ತುಕೊಳ್ಳಲು ಅವರು ಸಮರ್ಥರಿರುವರೋ ಹ್ಯಾಗೆ? ಎಂಬ ಇನ್ನೂ ಅನೇಕ ಪ್ರಶ್ನೆಗಳು ನಮ್ಮ ಮುಂದೆ ಬಂದು ನಿಲ್ಲುವವು. ಇದರ ಬಗ್ಗೆ ನಾವೆಲ್ಲರೂ ವಿಚಾರ ಮಾಡುವದು ಅತ್ಯಾವಶ್ಯವಾಗಿದೆ. ಯಾಕಂದರೆ ಸ್ತ್ರೀಯರಿಂದಲೇ ಜನರ ಜೀವನವು ಸುಧಾರಿಸಲು ಸಾಧ್ಯವಿದೆ. ಆದ್ದರಿಂದ ಇದರ ಬಗ್ಗೆ ನನ್ನ ಅಲ್ಪ ಮತಿಗೆ ತಿಳಿದಷ್ಟು ಹೇಳಬೇಕೆಂಬುದೇ ನನ್ನ ಈ ಲೇಖನದ ಮುಖ್ಯ ಉದ್ದೇಶವಾಗಿದೆ.

ಈಗ ವೀರಶೈವ ಸ್ತ್ರೀಯರು ಯಾವ ಪರಿಸ್ಥಿತಿಯಲ್ಲಿದ್ದಾರೆಂಬುದನ್ನು ನೋಡುವ ಮೊದಲು ಹಿಂದೆ ಯಾವ ಪರಿಸ್ಥಿತಿಯಲ್ಲಿತ್ತೆಂಬುದನ್ನು ನೋಡಿದರೆ ಹೆಚ್ಚು ಸ್ಪಷ್ಟವಾಗುವದು. ನಮ್ಮ ಉದ್ಧಾರವಾಗಬೇಕಾದರೆ, ನಮಗೆ ನಿಜವಾದ ಧರ್ಮಮಾರ್ಗ ಸಿಗಬೇಕಾದರೆ, ನಮ್ಮ ಶಿವಶರಣ, ಶರಣೆಯರು ತೋರಿಸಿದ ಮಾರ್ಗದಿಂದಲೇ ಎಂಬುದು. ಅವರು ಸಮಾಜದಲ್ಲಿ ಮಾಡಿದ ಸುಧಾರಣೆ, ನಿಸ್ವಾರ್ಥ ಬುದ್ಧಿಯಿಂದ ಜನಜೀವನದ ಕಲ್ಯಾಣಕ್ಕಾಗಿ ಹೆಣಗಾಡಿದ ಅವರ ಜೀವನವೇ ಸಾಕ್ಷಿಗಳಾಗಿವೆ. ನಮ್ಮ ಸಮಾಜದ ವೀರ ವೈರಾಗಿಣಿಯಾದ ಅಕ್ಕಮಹಾದೇವಿಯು ಬರೆದ ವಚನಗಳು ಇಂಗ್ಲೀಷಿನಲ್ಲಿ ಭಾಷಾಂತರಿಸಿ ಇವತ್ತು ಜಗತ್ತಿನಲ್ಲಿಯೇ ದೊಡ್ಡದಾದ ಲಂಡನ್ ವಾಚನಾಲಯದಲ್ಲಿರಿಸಲ್ಪಟ್ಟಿದ್ದು ಪ್ರತಿ ವೀರಶೈವ ತಾಯಿಯೂ ಅಭಿಮಾನಪಡತಕ್ಕ ಮಾತಾಗಿದೆ. ಸಮಾಜದ ಕಟ್ಟಡವನ್ನು ಸರ್ವಾಂಗ ಸುಂದರವಾಗಿ ಕಟ್ಟಿ ಪರರು ಅನುಕರಣ ಮಾಡುವಂತೆ ಮಾಡಿ ಹೋದ ಆ ಬಸವ ಮಹಾತ್ಮನ ಮಹಾತ್ಮೆ ಎಷ್ಟು! ಬಸವೇಶ್ವರನ ಧರ್ಮಪತ್ನಿಯಾದ ನೀಲಲೋಚನೆಯು ಪತಿಯನ್ನು ನೆಳಲಿನಂತೆ ಅನುಸರಿಸಿ ಧರ್ಮ ಕಾರ್ಯದಲ್ಲಿ, ಬಂಧುಬಾಂಧವರ ಸೇವೆಯಲ್ಲಿ, ಪತಿಯ ಕೂಡ ಸಹಭಾಗಿಣಿಯಾಗಿ, ನಿಷ್ಕಾಮ ಪ್ರೇಮ

ದಿಂದ ಜನಸೇವೆಯನ್ನು ಮಾಡಿದ ಆ ಆದರ್ಶ ರಮಣೀಮಣಿಯು ಇವತ್ತಿನ ಸ್ತ್ರೀ ಸಮಾಜಕ್ಕೆ ಆದರ್ಶ ಮೂರ್ತಿಯಲ್ಲವೇ! ಅನುಕರಣ ಮಾಡಲು ಯೋಗ್ಯಳಾದ ಪತಿವ್ರತಾ ಶಿರೋಮಣಿಯಲ್ಲವೇ !! ಇಂಥ ಆದರ್ಶ ಶಿವಶರಣೆಯರು ಬಾಳಿ, ಬದುಕಿದ ಕಾಲವನ್ನು ಸ್ವಲ್ಪ ಅವಲೋಕಿಸಿ ಆಗಿನದಕ್ಕೂ ಈಗಿನ ಪರಿಸ್ಥಿತಿಗೂ ಇದ್ದ ಭೇದವನ್ನು ತಿಳಿದುಕೊಳ್ಳೋಣ.

ಬಸವನ ಕಾಲದ ಮುಂಚೆ ಸ್ತ್ರೀಯರ ಗೋಳನ್ನು ಕೇಳುವವರೇ ಇದ್ದಿಲ್ಲ. ಸ್ತ್ರೀಯರೆಂದರೆ ಗುಲಾಮರೆಂದೆಣಿಸಿ ಯಾವ ಸ್ವಾತಂತ್ರ್ಯವನ್ನೂ ಕೊಟ್ಟದ್ದಿಲ್ಲ. ಮಾಡತಕ್ಕ ಕಾರ್ಯವು ಎಷ್ಟೇ ಅಧರ್ಮವಿದ್ದರೂ ಅದರಿಂದ ಸಮಾಜಕ್ಕೆ ಎಷ್ಟೇ ನಷ್ಟವಾಗುತ್ತಿದ್ದರೂ, ಮನೆತನಕ್ಕೆ ಎಷ್ಟೇ ಧಕ್ಕೆ ಬರುತ್ತಿದ್ದರೂ, ಅದರ ಸಲುವಾಗಿ ಸ್ವಲ್ಪವೂ ಮಾತೆತ್ತಲಿಕ್ಕೆ ಅಧಿಕಾರವಿದ್ದಿಲ್ಲ. ತಾವು ಸ್ವತಃ ಧರ್ಮದಂತೆ ನಡೆದು ಮುಕ್ತಿಯನ್ನು ಹೊಂದಬೇಕೆಂದರೆ, ಆ ಮುಕ್ತಿ ಮಾರ್ಗವು ಕೇವಲ ಪುರುಷರಿಗಾಗಿಯೇ. ಅದರಲ್ಲಿಯೇ ಮೇಲಿನ ಜಾತಿಯರಿಗೆ ಇದೆ ಎಂದು, ದೇವದತ್ತವಾದ ಅಧಿಕಾರವನ್ನು ಸಹ ಕಸಿದುಕೊಂಡು ಅಜ್ಞಾನದಲ್ಲಿಟ್ಟಿದ್ದರು. ಹೀಗೆ ಅಜ್ಞಾನದ ಅಂಧಃಕಾರದಲ್ಲಿ ಮುಳುಗಿದ ಸ್ತ್ರೀಯರು ತಮ್ಮ ಕಲ್ಯಾಣದ ದಾರಿಯನ್ನೇ ಕಾಣದೆ, ಪುರುಷರ ಸ್ವಾರ್ಥದ ಬಲೆಗೆ ಬಿದ್ದು, ತಮ್ಮಲ್ಲಿಯೇ ಅಡಕವಾಗಿರುವ ದೈವೀ ಶಕ್ತಿಯನ್ನು ಕಾಣದೆ, ಹುಟ್ಟಿಬಂದ ಈ ಪವಿತ್ರ ಜೀವನದ ಬೆಲೆಯನ್ನು ತಿಳಿಯದೆ ಹೇಗಾದರೂ ಮಾಡಿ ಜೀವನದ ಯಾತ್ರೆಯನ್ನು ಮುಗಿಸುತ್ತಿದ್ದರು. ಈ ಸ್ತ್ರೀಯರ ಅಧೋಗತಿಯನ್ನು ಕಣ್ದೆರೆದು ನೋಡುವವರಾರು ?

ಆಗ ಪುರುಷರ ಸ್ವಾರ್ಥದಲ್ಲಿ ಸಿಲುಕಿಕೊಂಡ ಈ ಸ್ತ್ರೀ ಸಮಾಜವನ್ನು ಕಂಡು ಮನಕರಗಿ, ದೇವರಿಂದ ನಿರ್ಮಾಣವಾದ ಪವಿತ್ರ ಜೀವನವು ಸ್ವಾರ್ಥಿಗಳ ಕೈಯಲ್ಲಿ ಸಿಕ್ಕು ವೃಥಾ ಹೋಗುವದನ್ನು ಕಂಡು, ನೆಲಕ್ಕೆ ಬಿದ್ದವರನ್ನು ತನ್ನ ಅಂತಃಕರುಣ ಕೈಗಳಿಂದ ಮೇಲಕ್ಕೆಬ್ಬಿಸಿದ ಆ ದ್ವಿತೀಯ ಶಂಭುವಾದ ಬಸವಣ್ಣನಿಗೆ ಇಡೀ ವೀರಶೈವ ಸ್ತ್ರೀ ಸಮಾಜವು ಋಣಿಯಾಗಿಲ್ಲವೇ! ಸ್ತ್ರೀಯರಿಗೆ ವೇದಾಧಿಕಾರವಿಲ್ಲೆಂದು ಬ್ರಾಹ್ಮಣ ಧರ್ಮವು ಹೇಳಿತು. ಸ್ತ್ರೀಯರಿಗೆ ಮೋಕ್ಷವೇ ಇಲ್ಲವೆಂದು

ಬ್ರಾಹ್ಮಣ ಧರ್ಮವು ನಿಷೇಧಿಸಿತು. ಸ್ತ್ರೀಯರಿಗೆ ಮೋಕ್ಷವೇ ಇಲ್ಲೆಂದು ಜೈನ ಧರ್ಮವು ಸಾರಿತು. ಆದರೆ ವೀರಶೈವ ಧರ್ಮವು ಸ್ತ್ರೀಯರಲ್ಲೇ ಗುಪ್ತವಾಗಿ ಅಡಗಿಕೊಂಡು ಯುಗಯುಗಾಂತರಗಳಲ್ಲಿಯೂ ನಶಿಸಿ ಹೋಗುತ್ತಿರುವ ಅಂತರಿಕ ಶಕ್ತಿಯನ್ನು ಪ್ರಪಂಚಕ್ಕೆ ತೋರಿ, ಅದು ಮನುಷ್ಯನ ಭೋಗೇಚ್ಛೆಗೆ ಮಾತ್ರ ಹಾಳಾಗುತ್ತಿರುವದನ್ನು ತೋರಿಸಿ ಕೊಟ್ಟು ಸ್ತ್ರೀಗೂ ಪುರುಷರಂತೆ ಧಾರ್ಮಿಕ ಕಾರ್ಯಗಳಲ್ಲಿ ಸಮಾನ ಹಕ್ಕಿದೆ ಎಂದು ಹೇಳಿತು. ಹೀಗೆ ಧರ್ಮ ಮಾರ್ಗದಿಂದ ನಡೆದು ಮೋಕ್ಷವನ್ನು ಹೊಂದಲು ಮಾರ್ಗ ತೋರಿಸಿ ಕೊಟ್ಟ ಆ ಮಹಾತ್ಮಾ ಬಸವಣ್ಣನು ನಮ್ಮ ನಿಜವಾದ ಗುರು ಆದಂತಾಗಲಿಲ್ಲವೆ? ಹೀಗೆ ಅಧೋಗತಿಗಿಳಿದ ಸ್ತ್ರೀ ಜೀವನಕ್ಕೆ ಜ್ಞಾನ ಪ್ರಕಾಶದಿಂದ ಕಳೆಯನ್ನು ತುಂಬಿದ ಅವರ ಅಸಹ್ಯವಾದ ಜೀವನವನ್ನು ಸುಖಮಯವಾಗಿ ಮಾಡಿದ ಯಾವ ಸ್ತ್ರೀಯನ್ನು ಕೀಳು ದೃಷ್ಟಿಯಿಂದ ನೋಡುತ್ತಿದ್ದರೋ ಅದೇ ಸ್ತ್ರೀಯನ್ನು ನಮ್ಮ ಶಿವಶರಣರು ಸೃಷ್ಟಿಕರ್ತನ ಕಲಾ ಶಾಲೆಯಲ್ಲಿ ದೊರಕಬಹುದಾದ ಒಂದು ಜೀವರತ್ನವೆಂದು ಭಾವಿಸಹತ್ತಿದರು. ಹೀಗೆ ಧರ್ಮ ಕಾರ್ಯದಲ್ಲಿ ಅವರಿಗೂ ಸ್ವಾತಂತ್ರ್ಯ ಕೊಟ್ಟದ್ದರಿಂದ ಅಕ್ಕಮಹಾದೇವಿ, ನೀಲಾಂಬಿಕೆ ಮುಂತಾದವರು ತಮ್ಮಲ್ಲಿರುವ ಜ್ಞಾನ ಶಕ್ತಿಯನ್ನು ಪ್ರಕಟ ಮಾಡಿದರು. ಹೀಗೆ ಧೀರರಾಗಿ, ಸತ್ಯವೀರರಾಗಿ ನಿಂತು, ಮನಸ್ಮೃತಿಯ ಕಟ್ಟಳೆಗಳನ್ನು ಮುರಿದು ಧರ್ಮದ ಆವರಣದಲ್ಲಿ ನಡೆಯುತ್ತಿದ್ದ ಅನ್ಯಾಯಗಳನ್ನು ಬಯಲಿಗೆಳೆದು ನಿಜವಾದ ಧರ್ಮವನ್ನು ತೋರಿಸಿದ ಆ ಸತ್ಯವಾದಿಗಳ ಮಾರ್ಗವನ್ನು ಅನುಸರಿಸಿ ನಮ್ಮ ಜೀವನವನ್ನೂ ಸುಧಾರಿಸಿಕೊಳ್ಳಬೇಕು.

ಹೀಗೆ ಹಿಂದಿನದನ್ನೇ ನೋಡುತ್ತ ಕೂಡ್ರುವಾಗ ನಮ್ಮ ಈಗಿನ ಪರಿಸ್ಥಿತಿಯನ್ನು ಮರೆಯಬಾರದು. ಈಗಿನ ಸ್ತ್ರೀ ಸಮಾಜದ ಕಡೆಗೆ ನಮ್ಮ ದೃಷ್ಟಿಯನ್ನು ತಿರುವಿದರೆ ಸ್ವಲ್ಪ ಶೋಚನೀಯ ಸ್ಥಿತಿಯು ಕಂಡು ಬರುವದು. ಈ ಸ್ತ್ರೀ ಸಮಾಜವನ್ನು ಸುಧಾರಿಸಿದರೆ ಇಡೀ ಸಮಾಜದ ಸುಧಾರಣೆಯೇ ಆದಂತಾಗುವದೆಂಬುದು ಮುಂದಿನದನ್ನು ಓದಿದರೆ ತಮ್ಮೆಲ್ಲರಿಗೆ ತಿಳಿಯಲಾರದು.

ನಮ್ಮ ಸ್ತ್ರೀ ಸಮಾಜದಲ್ಲಿ ಅನಾಕ್ಷರತೆಯು ಒಡೆದುಕಾಣುವ ಒಂದು ದೊಡ್ಡ ಕಲಂಕವಾಗಿದೆ. ಯಾವ ಸಮಾಜವಾದರೂ ಉತ್ಕರ್ಷೆಯನ್ನು

ಹೊಂದಬೇಕಾದರೆ ಅದಕ್ಕೆ ವಿದ್ಯೆದ ಬಲವೊಂದು ಹೆಚ್ಚಿಗೆ ಬೇಕಾಗು ವದು. ವಿದ್ಯೆಯಿಲ್ಲದೆ ಜ್ಞಾನ ಪ್ರಸಾರವಾಗಲಾರದು, ಜ್ಞಾನವಿಲ್ಲದೆ ವಿಚಾರವೂ, ಸದಾಚಾರವೂ ಉಂಟಾಗಲಾರವು. ಸದಾಚಾರವು ಇಲ್ಲದೆ ಇಹಪರ ಸುಖವು ದೊರೆಯುಲಾರದು. ಸಮಾಜದಲ್ಲಿ ಪುರುಷರಿಗಿಂತ ಸ್ತ್ರೀಯರ ಮೇಲೆ ಹೊಣೆಯು ಹೆಚ್ಚು ಇರುವದು. 'ಭಾವೀ ಜಗತ್ತು ಮಾತೆಯರ ಉದರದಲ್ಲಿ ಅಡಗಿದೆ' ಇದನ್ನು ಪ್ರತಿಯೊಬ್ಬ ತಾಯಿಯೂ ನೆನಪಿನಲ್ಲಿಡಬೇಕಾದ ಸಂಗತಿಯಾಗಿದೆ. ಇದು ಸ್ತ್ರೀಯರ ಮೇಲಿದ್ದ ಬಹು ದೊಡ್ಡ ಹೊಣೆಯು. ಸ್ತ್ರೀಯರ ಉದರದಲ್ಲಿ ಹುಟ್ಟಿದ ಮಕ್ಕಳೇ ಮುಂದಿನ ಸಮಾಜದ, ಜನಾಂಗದ, ರಾಷ್ಟ್ರದ ವೀರಪುರುಷರೂ, ಕಲ್ಯಾಣಕರ್ತರೂ, ಮಹಾತ್ಮರೂ ಆಗುವರು. ಕುಟುಂಬದ ಉದ್ಧಾರವಾಗ ಬೇಕಾದರೆ ಹೇಗೆ ಒಳ್ಳೇ ಮಗನು ಬೇಕೋ, ಹಾಗೆ ಸಮಾಜದ ಕಲ್ಯಾಣವಾಗಬೇಕಾದರೆ, ದೇಶದ ಉದ್ಧಾರವಾಗಬೇಕಾದರೆ, ಭಾವೀ ಪೀಳಿಗೆಯು ಉತ್ತಮವಾದದ್ದಿರಬೇಕಾಗುವದು. ಇವತ್ತಿನ ಮಕ್ಕಳು ಮುಂದಿನ ನಾಗರೀಕರು. ಅಂದಮೇಲೆ ಯಾವ ಮಾತೆಯರಲ್ಲಿ ಭಾವೀಜಗತ್ತಿನ ಕಲ್ಯಾಣವು ಅಡಗಿದೆಯೋ; ದೇಶದಲ್ಲಿಯ ಅಜ್ಞಾನವನ್ನು ಹೋಗಲಾಡಿಸುವ ಶಕ್ತಿಯು ಇರುವದೋ, ಅಂಥಾ ಮಾತೆಯರು ಇವತ್ತು ವಿದ್ಯಾಹೀನರಾಗಿ, ತಮ್ಮ ಮೇಲಿದ್ದ ಬಹು ದೊಡ್ಡ ಹೊಣೆಯನ್ನು ಮರೆತು ಕೂತಿರುವದೆಂದರೆ ಎಂಥಾ ವಿಷಾದದ ಸಂಗತಿ ಎಂಬುದನ್ನು ಎಲ್ಲರೂ ವಿಚಾರ ಮಾಡತಕ್ಕ ವಿಷಯವಾಗಿದೆ. ಯಾವಳ ಕೈಯ್ಯಲ್ಲಿ ತೊಟ್ಟಿಲ ಸೂತ್ರವಿರುವದೋ, ಅವಳ ಕೈಯಲ್ಲಿಯೇ ಸೃಷ್ಟಿಸೂತ್ರವಿರುವದೆಂಬ ಆಯೋಕ್ತಿಯನ್ನು ಸ್ಮರಿಸಿಕೊಂಡರೆ ಸ್ತ್ರೀಯರಿಗೆ ವಿದ್ಯದ ಅವಶ್ಯಕತೆಯು ಎಷ್ಟಿದೆ ಎಂಬುದು ಗೊತ್ತಾಗುವದು. ವಂಶೋದ್ಧಾರಕವಾದ ಕೂಸು ಒಂಭತ್ತು ತಿಂಗಳು ತಾಯಿಯ ಉದರದಲ್ಲಿದ್ದುಕೊಂಡು, ಆಕೆಯ ರಕ್ತದಿಂದ ಪೋಷಿತವಾಗಿ, ಮುಂದೆ ಐದಾರು ವರ್ಷಗಳ ವರೆಗೆ ತಾಯಿಯ ತೊಡೆಯ ಮೇಲೆ ದೊಡ್ಡದಾಗುವದು. ಈ ಕಾಲದಲ್ಲಿ ಮಕ್ಕಳ ಮನಸ್ಸು ಮೇಣದಂತೆ ಮೃದುವಾಗಿರುತ್ತದೆ. ಯಾವುದನ್ನು ಒತ್ತುವೆವೋ ಅದು ಮೂಡುವದು; ಯಾವುದನ್ನು ಬಿತ್ತುವೆವೋ ಅದು ಬೆಳೆಯುವದು. 'ಮೂರು ವರ್ಷದ ಬುದ್ಧಿ ನೂರು ವರ್ಷಗಳ ವರೆಗೆ' ಎಂಬ ಗಾದೆಯು ಎಲ್ಲರಿಗೂ ಗೊತ್ತೇ ಅದೆ. ಅಂದಮೇಲೆ ಇಂಥಾಕಾಲದಲ್ಲಿ ಗುಣಗಳನ್ನು

ಬಿತ್ತುವ ತಾಯಿಯು ಎಷ್ಟು ಗುಣವಂತೆಯೂ, ಜಾಣಳೂ ಇರಬೇಕಾಗುವದೆಂಬುದನ್ನು ಪ್ರತಿಯೊಬ್ಬ ತಾಯಿಯೂ ಲಕ್ಷದಲ್ಲಿಡಬೇಕಾಗಿದೆ. ಮಾತೆಯರೇ! ಇದೇನು ಸಣ್ಣ ಹೊರೆಯಲ್ಲಿ ಭಾವೀಜಗತ್ತಿನ ನಿರ್ಮಾಣಕರು ನೀವು! ಭಾವೀ ಜನಾಂಗದ ಉದ್ಧಾರಕರು ನೀವು!! ನೂರು ಶಿಕ್ಷಕರ ಬೆಲೆ ಒಬ್ಬ ತಾಯಿಗೆ ಇದೆ ಎಂಬ ವಾಕ್ಯವು ಸ್ತ್ರೀಯರ ಮೇಲಿದ್ದ ಹೊಣೆಯನ್ನು ವ್ಯಕ್ತಮಾಡುವದು.

ಅಂದಮೇಲೆ ಆ ಮಕ್ಕಳನ್ನು ಸನ್ಮಾರ್ಗಿಗಳನ್ನೂ, ಸಚ್ಚರಿತ್ರರನ್ನೂ, ವೀರರನ್ನೂ ಮಾಡಬೇಕಾದರೆ, ಆ ಸದ್ಗುಣಗಳು ಮೊದಲು ತಾಯಂದಿರಲ್ಲಿರಬೇಕಲ್ಲವೇ! ಅಂಥ ಸದ್ಗುಣಗಳನ್ನು ತಂದುಕೊಳ್ಳಲು ಯತ್ನ ಮಾಡಿದರೆ, ನಿಮ್ಮಿಂದ ಪೋಷಿತರಾದ ಮಕ್ಕಳೂ ಹಾಗೇ ಆಗುವದರಲ್ಲಿ ಯಾವ ಸಂದೇಹವದೆ? ಯಾವನಾದರೂ ಸದ್ಗುಣಿಯನ್ನು ಕಂಡ ಕೂಡಲೇ, ಯಾವ ಪುಣ್ಯಾತ್ಮಳು ಹಡೆದಿರುವಳು, ಎಂಬ ಉದ್ಗಾರವು ನಮ್ಮ ಬಾಯಿಂದಲೇ ಹೊರಡುವದಿಲ್ಲವೇ? ವೀರ ಅಭಿಮನ್ಯುವಿನ ತಾಯಿಯಾದ ಸುಭದ್ರೆಯು, ಚನ್ನಬಸವಣ್ಣನ ತಾಯಿಯಾದ ಅಕ್ಕನಾಗಮ್ಮನು, ಲವ, ಕುಶರ ತಾಯಿಯಾದ ಸೀತಾದೇವಿಯು ಸಾಮಾನ್ಯರಿದ್ದರೇ! ಶ್ರೇಷ್ಠಪುತ್ರರನ್ನು ಹಡೆದು ತಮ್ಮ ಕೀರ್ತಿಯನ್ನು ಅಮರವಾಗಿರಿಸಿದರು. ನನ್ನ ಸಹೋದರಿಯರೇ, ನಿಮ್ಮ ಕೀರ್ತಿಯು ನಿಮ್ಮ ಮಕ್ಕಳನ್ನು ಯೋಗ್ಯ ರೀತಿಯಿಂದ ಜೋಪಾನ ಮಾಡುವದರಲ್ಲಿದೆ.

ನಮ್ಮ ಸಮಾಜದಲ್ಲಿ ಅಶಿಕ್ಷಿತರು ಬಹಳ. ಬಾಹ್ಯಜಗತ್ತಿನ ಕಲ್ಪನೆಯೇ ಅವರಿಗಿಲ್ಲ. ಅವರು ದಾಸ್ಯವೃತ್ತಿಯವರಾಗಿದ್ದಾರೆ. ನಿಜವಾದ ಧರ್ಮದ ಅರಿವು ಅವರಿಗಿಲ್ಲ. ಮಹಾತ್ಮರ ಚರಿತ್ರಗಳನ್ನು ಓದಿ ತಮ್ಮಲ್ಲಿಯ ಅಜ್ಞಾನವನ್ನು ಹೋಗಲಾಡಿಸಿಕೊಳ್ಳಬೇಕೆಂದರೆ ಅಕ್ಷರ ಜ್ಞಾನವಿಲ್ಲ. ಹೇಳಿದ್ದನ್ನು ಕೇಳಬೇಕಂದರೆ ನಿಜವಾದದ್ದನ್ನು ಹೇಳುವ ಸದ್ಗುರುಗಳಿಲ್ಲ. ಎಷ್ಟು ಅಸಹಾಯರಾಗಿದ್ದಾರೆ ನಮ್ಮ ತಾಯಂದಿರು! ತಮ್ಮ ಕರ್ತವ್ಯವೆಂದರೆ ಗಡಿಗೆ ಮುಕಳಿ ತೊಳೆಯುವದು, ಮಕ್ಕಳನ್ನು ಹಡೆಯುವದು ಎಂದು ತಿಳಿದಿದ್ದಾರೆ. ಆದರೆ ತಾಯಂದಿರೇ, ಬರೇಮಕ್ಕಳನ್ನು ಹಡೆಯುವದರಲ್ಲಿ ಮಾತೃತ್ವವಿಲ್ಲ; ಹಡೆದ ಮಕ್ಕಳನ್ನು ಭಾವೀ ನಾಗರೀಕರನ್ನಾಗಿ ಮಾಡುವದರಲ್ಲಿದೆ ನಿಮ್ಮ ಮಾತೃತ್ವ. ಸೂರ್ಯ, ಚಂದ್ರಮರಿಂದ ಜಗತ್ತು ಬೆಳಗುವಂತೆ, ಸತ್ಸಂತಾನದಿಂದ ಸಮಾಜವು

ಬೆಳಗುತ್ತದೆ. ಆದ್ದರಿಂದ ಮಾತೆಯರೇ, ಯೋಗ್ಯ ಶಿಕ್ಷಣವನ್ನು ಪಡೆಯಿರಿ; ಧರ್ಮ ಕಾರ್ಯದಲ್ಲಿ ಮುಂದೊರೆಯಿರಿ. ಮಹಾತ್ಮರ ಜೀವನವನ್ನೂ, ವೀರಪುರುಷರ ಚರಿತ್ರೆಗಳನ್ನೂ, ಶಿವಶರಣರ ವಚನಗಳನ್ನೂ ಓದಿ ನಿಮ್ಮ ಜೀವನವನ್ನು ಉದಾತ್ತಗೊಳಿಸಿರಿ. ಪ್ರತಿಯೊಂದು ರಕ್ತನಾಳದಲ್ಲಿಯೂ ಧರ್ಮಾಭಿಮಾನವೂ, ರಾಷ್ಟ್ರಾಭಿಮಾನವೂ ಹರಿಯಲಿ. ಹಿಂದಿನ ಶಿವಶರಣೆಯರಂತೆ ಪತಿವ್ರತಾ ಶಿರೋಮಣಿಯರಾಗಿ ಬೆಳಗಬೇಕೆಂಬ ಇಚ್ಛೆಯು ನಿಮ್ಮಲ್ಲಿ ಒಡಮೂಡಲಿ; ವೀರಪುತ್ರರನ್ನು ಹಡೆಯಬೇಕೆಂಬ ಆಕಾಂಕ್ಷೆಯು ನಿಮ್ಮ ಮನಸ್ಸಿನಲ್ಲಿ ಬೇರೂರಲಿ. ಅಂದರೆ ನಿಜವಾಗಿಯೂ ಅಂಥವರನ್ನು ಪಡೆಯುವಿರಿ. ಮನುಷ್ಯನು ಯಾವ ಭಾವನೆಯುಳ್ಳವನಿರುವನೋ ಅದರಂತೆ ಆಗುವನು.

ಇದಲ್ಲದೆ ಸಂಸಾರವನ್ನು ಸುಖಮಯವಾಗಿ ಸಾಗಿಸಿಕೊಂಡು ಹೋಗುವ ಹೊಣೆಯೂ ಸ್ತ್ರೀಯರ ಮೇಲಿದೆ. ಹಾಡುವವನಿಗೂ, ಬಾರಿಸುವವನಿಗೂ ಮೇಳ ಇದ್ದರೆ ಗಾಯನವು, ಕರ್ಣಾನಂದ ಚಿತ್ತಾನಂದವಾಗುವಂತೆ, ಸಂಸಾರದಲ್ಲಿ ಗಂಡ ಹೆಂಡಿರ ತಾಳ ಇದ್ದರೆ ಆ ಸಂಸಾರವಾದರೂ ಆನಂದಕರವಾಗಿ ಪರಿಣಮಿಸುವದು. ಪಕ್ಷಿಗಳಿಗೆ ಆಕಾಶದಲ್ಲಿ ತಿರುಗಾಡಲಿಕ್ಕೆ ಎರಡು ರೆಕ್ಕೆಗಳು ಸಾಧನವಾಗುವಂತೆ ಸಂಸಾರವೆಂಬ ಚಕ್ರವನ್ನು ತಿರುಗಲಿಕ್ಕೆ ಗಂಡ ಹೆಂಡಿರಿಬ್ಬರೂ ಸಾಧನರಾಗಿರುತ್ತಾರೆ. ಸ್ತ್ರೀಯರ ವರ್ತನವು ಚಲೋದು, ಕೆಟ್ಟದ್ದು ಇದ್ದಂತೆ ಸಂಸಾರವು ಸುಖಮಯವೂ ಅಥವಾ ದುಃಖಮಯವೂ ಆಗುವದು. ಸುಖವಾಗಿ ಬಾಳಬೇಕೆಂಬ ಆಶೆ ಎಲ್ಲರಿಗೂ ಇರುವದು. ಆದರೆ ನಿಜವಾಗಿ ಸುಖದಿಂದಿರುವವರು ಬಹಳ ಸ್ವಲ್ಪ ಮಂದಿ. ಇದಕ್ಕೆ ನಾವೇ ಕಾರಣರಲ್ಲದೆ ಬೇರೆಯವರಲ್ಲ. ಮನೆಯನ್ನು ಸುಖಮಯವಾಗಿ ಮಾಡುವದೂ ಸ್ತ್ರೀಯರ ಕೈಯಲ್ಲಿದೆ. ಮೊದಲಿನಂತೆ ಪರಸ್ಪರರು ಕೂಡಿ ಇರಲಾರರು. ಯಾಕಂದರೆ ಅಸೂಯೆ ದುರ್ಬುದ್ಧಿಗಳು ಬಹಳ ಅವೆ. ಸ್ವಾರ್ಥದ ಪರದೆಯಲ್ಲಿ ಧರ್ಮವು ಮುಚ್ಚಿ ಹೋಗಿದೆ. ಪತಿಭಕ್ತಿಯು ಮಾಯವಾಗಿದೆ. ಗುರುಹಿರಿಯರಲ್ಲಿಯ ಭಕ್ತಿಯಂತೂ ಇಲ್ಲವೇ ಇಲ್ಲ. ಹೀಗಾಗಿ ಕುಟುಂಬದಲ್ಲಿ ಅವ್ಯವಸ್ಥೆಯುಂಟಾಗಿ ಶಾಂತತೆಯು ಉಳಿಯುವ ಬಗೆಹೇಗೆ? ಹೀಗಾಗಿ ದೂರದಿಂದ ಚಂದಕಾಣುವ ಸಂಸಾರವು ಒಳಗೆ ಹೊಕ್ಕಂತೆ ದುಃಖಮಯವಾಗಿ ಕಾಣಹತ್ತುವದು. ಕಡೆಗೆ

ಸಂಸಾರವು ಕಷ್ಟಮಯವೆಂದು ಉದ್ಗಾರ ತೆಗೆಯಹತ್ತುವರು. ಆದರೆ ಚಾಣಾಕ್ಷಳೂ, ಪತಿಭಕ್ತಿಯುಳ್ಳವಳೂ, ಸರ್ವಪ್ರೇಮಿಯೂ ಆದ ಸ್ತ್ರೀಯು ಸದಾವಕಾಲ ಮನೆಯನ್ನು ಸ್ವರ್ಗಮಯವಾಗಿಡುವಳು. ಉಭಯ ಕುಲದ ಉದ್ಧಾರಕಳಾದ ಸ್ತ್ರೀಯು, ಯಾವಾಗಲೂ ಕುಟುಂಬದ ಏಳ್ಗೆಯನ್ನೇ ತನ್ನ ಗುರಿಯನ್ನಾಗಿ ಇಟ್ಟುಕೊಳ್ಳಬೇಕಲ್ಲದೆ, ಒಂದೆರಡು ಮಕ್ಕಳನ್ನು ಹಡೆದರೆ ತನ್ನ ಕರ್ತವ್ಯವಾಯಿತೆಂದು ಕೂಡ್ರಬಾರದು. ಈಗಿನ ನಮ್ಮ ಸ್ತ್ರೀಯರ ವಿಚಾರವು ಸ್ವಾತಂತ್ರದಿಂದಿರಬೇಕೆಂಬುದು. ಆದರೆ ಸ್ವಾತಂತ್ರ್ಯವು ನಿಜವಾಗಿಯೂ ಈಗ ದೊರಕಿದೆ. ಆದರೆ ಸ್ವಾತಂತ್ರ್ಯದ ಅರ್ಥವನ್ನು ವಿಪರೀತಮಾಡಿಕೊಂಡು ಸ್ವೇಚ್ಛಾಚಾರದಲ್ಲಿ ಬಿದ್ದಿದ್ದಾರೆ. ಸ್ವಾತಂತ್ರ್ಯವೆಂದರೆ ಧರ್ಮದಂತೆ ನಡೆಯುವದು. ಸ್ವಾತಂತ್ರದಲ್ಲಿ ಧರ್ಮವು ಅಡಕವಾಗಿದೆ; ಸ್ವೇಚ್ಛಾಚಾರದಲ್ಲಿ ಅಧರ್ಮವು ಅಡಗಿಕೊಂಡಿದೆ. ಈಗ ಯಾರ ಮಾತನ್ನು ಕೇಳದೆ ಮನಸ್ಸಿಗೆ ಬಂದಂತೆ ನಡೆಯುವದೇ ಸ್ವಾತಂತ್ರವಾಗಿದೆ. ಆದರೆ ಅದು ಸ್ವಾತಂತ್ರವಲ್ಲ; ಸ್ವೇಚ್ಛಾಚಾರ. ಯಾವ ಸ್ವಾತಂತ್ರದಿಂದ ನಮ್ಮ ಶಿವಶರಣ, ಶರಣೆಯರು ಸುಖವನ್ನು ದೊರಕಿಸಿದ್ದರೋ, ಅದೇ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಂಡು ಇವತ್ತು ಸಂಸಾರವನ್ನು ದುಃಖಮಯವಾಗಿ ಮಾಡಿಕೊಂಡಿದ್ದೇವೆ. ಸ್ವಾತಂತ್ರದ ಅರ್ಥವನ್ನು ನಿಜವಾಗಿ ತಿಳಿದುಕೊಂಡು ನಡೆಯಿರಿ. ಒಂಭತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ಹಡೆದ ತಾಯಿಯನ್ನೂ, ಎಷ್ಟು ತ್ರಾಸವಾದರೂ ಲೆಕ್ಕಿಸದೆ ವಿದ್ಯೆಯನ್ನು ಕಲಿಸಿ ದೊಡ್ಡವನನ್ನಾಗಿ ಮಾಡಿದ ತಂದೆಯನ್ನೂ, ಮನೆಬಿಟ್ಟು ಹೊರಗೆ ಹಾಕಿಸಿ ತಾವೇ ಆನಂದದಿಂದ ಇದ್ದರೆ ಸಾಕು ಎಂಬ ನಿಕೃಷ್ಟರೂಪವಾದ ವಿಚಾರವು ಕೋಮಲ ಹೃದಯರಾದ ಸ್ತ್ರೀಯರಲ್ಲಿ ಹುಟ್ಟಬೇಕಾದರೆ, ಅವರಿಗೆ ಕೊಟ್ಟ ಶಿಕ್ಷಣವು ಎಷ್ಟು ಕಠೋರವಾಗಿರಬಹುದು. ಇದಲ್ಲದೆ ಶ್ರೀಮಂತನೆಂದು ತಿಳಿದು ತನ್ನ ಪತಿಯನ್ನಾಗಿ ಮಾಡಿಕೊಂಡ ಸ್ತ್ರೀಯಳು ಯಾವದಾದರೊಂದು ದುರ್ದೈವದಿಂದ ಬಡವನಾದರೆ ಅವನ ಮೇಲೆ ಬೇಸರ ಮಾಡಹತ್ತುವಳು. ಅತ್ತಿ, ಮಾವ, ಅಕ್ಕ, ತಂಗಿಯರು ದೂರಾಗುವರು. ಯಾವಳನ್ನು ನಂಬಿ ಕೈ ಹಿಡಿದಿದ್ದನೋ ಅವಳೇ ಕೈ ಬಿಡಹತ್ತಿದರೆ ಅವನ ಜೀವನವು ಎಷ್ಟು ಅಸಹ್ಯವಾಗುವದು! ಸ್ತ್ರೀಯರೇ, ನೋಡಿರಿ, ಪತಿವ್ರತಾ ಶಿರೋಮಣಿಯರಾದ ನಿಲಾಂಬಿಕೆ, ಹೇಮರೆಡ್ಡಿಮಲ್ಲಮ್ಮ, ಸೀತಾ,

ತಾರಾ, ಸಾವಿತ್ರಿ ಮುಂತಾದವರ ಜೀವನ ಚರಿತ್ರೆಗಳನ್ನು! ಹೇಗೆ ತಮ್ಮ ಜೀವನದಲ್ಲಿ ಬಂದ ಕಷ್ಟಗಳಿಗೆ ಸತಿಪತಿಗಳು ಕೂಡಿ ಎದೆಗೊಟ್ಟು ನಿಂತಿದ್ದಾರೆ! 'ಕೆಟ್ಟಿದ್ದನ್ನು ಅಟ್ಟುವನೇ ಜಾಣ' ಎಂಬ ಗಾದೆಯಂತೆ, ಎಷ್ಟೇ ಕಷ್ಟಗಳಿದ್ದರೂ, ಎಷ್ಟೇ ಬಡತನವಿದ್ದರೂ, ಅದರಲ್ಲಿಯೇ ಸುಖವನ್ನು ತೋರಿಸಿಕೊಡುವ ಚತುರತನವು ನಮ್ಮ ಸ್ತ್ರೀಯರಲ್ಲಿ ಬರಬೇಕು. ಸತಿಗೆ ಪತಿಯು, ಪತಿಗೆ ಸತಿಯು ಎಂಥ ಸಂಕಟಗಳು ಬಂದರೂ ಎದೆಗೆಡದೆ ಒಬ್ಬರಿಗೊಬ್ಬರು ಧೈರ್ಯವನ್ನು ಕೊಡುತ್ತ, ಎಂಥ ಪ್ರಸಂಗಬಂದರೂ ನನ್ನ ಪತಿಯನ್ನು ಅನುಸರಿಸದೆ ಬಿಡಲಾರೆನೆಂಬ ಧೃಢಪ್ರತಿಜ್ಞೆಯು ಸ್ತ್ರೀಯರಲ್ಲಿ ಬಂತೆಂದರೆ ಸಂಕಟಗಳು ತಾವಾಗಿಯೇ ದೂರವಾಗುವವು.

ಇದಲ್ಲದೆ ಯೋಗ್ಯಾಯೋಗ್ಯ ವಿಚಾರಮಾಡುವ ಶಕ್ತಿಯೂ ಇಲ್ಲ. ಹಿಂದಿನಿಂದ ನಡೆದುಬಂದಿದೆ ಎಂಬ ಮೂಢ ನಂಬಿಕೆಯಿಂದ ಕಾರ್ಯವು ಎಷ್ಟೇ ಅನಿಷ್ಟವಿದ್ದರೂ ಮಾಡುವರು. ಇದೂ ಸಮಾಜದ ಅಧೋಗತಿಗೆ ಒಂದು ಕಾರಣವಾಗಿದೆ. ಯಾವ ಸಮಾಜದಲ್ಲಿ ಪಂಗಡಗಳಿಲ್ಲದೇ ಕೇವಲ ಶ್ರಮವಿಭಾಗದ ಸಲುವಾಗಿ ಮೇಲು ಕೀಳೆನ್ನದೆ, ಸಕಲ ಉದ್ಯೋಗಗಳು ನಡೆಯುತ್ತಿದ್ದವೋ, ಅದೇ ಸಮಾಜದಲ್ಲಿ, ಅವೇ ಉದ್ಯೋಗಗಳು ಸ್ವಾರ್ಥಿಗಳ ಕೈಯಲ್ಲಿ ಸಿಕ್ಕು ಪಂಗಡಗಳ ಮನೆಗಳಾಗಿವೆ. ಯಾವು ಸಮಾಜದ ಅಭಿವೃದ್ಧಿಗೆ ಕಾರಣವಾಗಿದ್ದವೋ ಅವೇ ಇವತ್ತು ಅಧೋಗತಿಗೆ ಕಾರಣವಾಗಿವೆ. ಇದರಿಂದ ಸಮಾಜದಲ್ಲಿ ಏಕಭಾವವಿಲ್ಲ, ಐಕ್ಯಮತವಿಲ್ಲ. ಹೀಗಾಗಿ ಸಮಾಜವು ನಿರಭಿಮಾನದಿಂದ ಹಾಳಾಗಿ ಹೋಗುತ್ತಿದೆ. ಈ ಕಾರ್ಯದಲ್ಲಿ ಸ್ತ್ರೀಯರದು ಹೆಚ್ಚು ಕೆಲಸವಿದ್ದರೂ ಮಾಡದೆ ಸ್ವಾರ್ಥಿಗಳ ಉಪದೇಶದಿಂದ ಅದಕ್ಕೆ ವಿರೋಧವಾಗಿ ನಿಂತಿದ್ದಾರೆ. ನಿಮ್ಮಲ್ಲಿಯೇ ಇಂಥ ಸಂಕುಚಿತ ದೃಷ್ಟಿ ಇದ್ದ ಮೇಲೆ, ನಿಮ್ಮ ಮಕ್ಕಳಿಗೆ ಬುದ್ಧಿ ಹೇಳುವ ಬಗೆ ಹೇಗೆ? ಇದು ಯೋಗ್ಯವೋ, ಅಯೋಗ್ಯವೋ ಎಂಬುದನ್ನು ವಿಚಾರಿಸಿರಿ. ಯೋಗ್ಯವಾದದ್ದನ್ನು ಮಾಡಿರಿ. ಇದರ ಸಲುವಾಗಿ ತಾಯಂದಿರು ಟೊಂಕಕಟ್ಟಿ ನಿಂತರೆ, ಸಮಾಜದಲ್ಲಿ ಐಕ್ಯತೆ ಬೆಳೆದು ಶೀವ್ರದಲ್ಲಿ ಅಭಿವೃದ್ಧಿಯಾಗೇ ತೀರುವದು.

ಒಟ್ಟಿನ ಮೇಲೆ ನಮ್ಮ ಸ್ತ್ರೀ ಸಮಾಜಕ್ಕೆ ಬಿನ್ನಹಮಾಡಿಕೊಳ್ಳುವದೇನಂದರೆ, ನೀವು ಸದ್ಗುರುವಿನುಪದೇಶದಿಂದ ನಿಜವಾದ ಧರ್ಮವನ್ನು

ತಿಳಿದುಕೊಳ್ಳಿರಿ. ಅದರಂತೆ ಪಾಲನೆ ಮಾಡಿರಿ. ಧರ್ಮವೆಂದರೆ ಮನುಷ್ಯನ ಸುಖಕ್ಕಾಗಿ ಅದೆ. ನಾವು ಧರ್ಮದಂತೆ ನಡೆದರೆ ನಮಗೆ ಸುಖವು ಸಿಕ್ಕೇ ಸಿಗುವದು. ಅಂದಮೇಲೆ ನಾವು ಅಧೋಗತಿಗಿಳಿದದ್ದು ಅಧರ್ಮದಿಂದ ನಡೆದದ್ದಕ್ಕಲ್ಲವೇ! ಶಿವಶರಣರು ತೋರಿಸಿದ ಮಾರ್ಗವನ್ನು ಮರೆಯಬೇಡಿರಿ. ವೀರಶೈವ ಧರ್ಮದ ಸಾರವು ಅದರಲ್ಲಿದೆ. ಸಾಗರವನ್ನು ದಾಟುವವರಿಗೆ ಸಹಾಯವಾಗುವ ಧ್ರುವ ತಾರೆಯಂತೆ, ಸಂಸಾರ ಸಾಗರವನ್ನು ದಾಟುವವರಿಗೆ ಕೈಹಿಡಿದು ಕರಕೊಂಡು ಹೋಗುವವು. ಮನೆಯನ್ನು ಸ್ವರ್ಗಮಯವಾಗಿ ಮಾಡಿ, ಮನೆತನದ ಏಳ್ಗೆಗಾಗಿ, ಪರಸ್ಪರರು ಪ್ರೇಮದಿಂದಿದ್ದುಕೊಂಡು, ಸರ್ವಪ್ರಿಯರಾಗಿ, ಎರಡನೇಯವರಿಗೆ ಕೇಡು ಬಗೆಯದಂತೆ ಇರುವದೇ ಧರ್ಮ. 'ದಯವೇ ಧರ್ಮದ ಮೂಲವಯ್ಯ' ಎಂಬ ಬಸವನ ಉಕ್ತಿಯಂತೆ ಭೂತದಯೆಯು ನಿಮ್ಮಲ್ಲಿ ನೆಲೆಗೊಳ್ಳಲಿ. ಸತ್ಪುರುಷರ ಕಥೆಗಳನ್ನೂ, ಶಿವಶರಣರ ಕಥೆಗಳನ್ನೂ, ಅವರ ಜೀವನವನ್ನೂ, ಕಥೆಯರೂಪವಾಗಿ ಮಕ್ಕಳಿಗೆ ಮನರಂಜನವಾಗುವಂತೆ ಹೇಳಿ ಅವರ ಭಾವನೆಯನ್ನು ಉದಾತ್ತಗೊಳಿಸಿರಿ. ಭೂಮಿಯು ಹದವಿದ್ದಾಗಲೇ ಬಿತ್ತಿದರೆ ಉತ್ಕೃಷ್ಟ ಫಲವು ದೊರಕುವದು. ಇಪ್ಪತ್ತು ವರ್ಷಗಳ ಹಿಂದೆ ದಾಸ್ಯತ್ವದಲ್ಲಿ ತೊಳಲಾಡುತ್ತಿದ್ದ ಜರ್ಮನ್ ಜನಾಂಗವು ಇವತ್ತು ಜಗತ್ತಿಗೆ ಮಿಗಿಲಾಗಿ ನಿಂತದ್ದು ಆ ಜನಾಂಗದ ಮಾತೆಯರಿಂದೆಂಬುದು ಪ್ರತಿಯೊಬ್ಬ ಸ್ತ್ರೀಯೂ ನೆನಪಿನಲ್ಲಿಡಬೇಕಾದ ಸಂಗತಿಯಾಗಿದೆ. 'ಜರ್ಮನ್ ಸ್ತ್ರೀಯರು ಪುರುಷರ ಬಣ್ಣದ ಬೀಸಣಿಕೆಗಳಾಗಬಾರದು, ವೀರಪುತ್ರರನ್ನು ಹಡೆದು ಜಗದ್ವಿಖ್ಯಾತಿಯಾಗಬೇಕು' ಎಂಬ ಜರ್ಮನ್‌ರ ಉಪದೇಶವು ಸರ್ವಶ್ರುತವಾಗಿದೆ. ಸ್ತ್ರೀಯರ ಧರ್ಮವು ಇದರಲ್ಲಿಯೇ ಅಡಕವಾಗಿದೆ. ಶಿವಶರಣರು ಸ್ತ್ರೀಯರನ್ನು ಮಾತೆಯರೆಂಬ ಪವಿತ್ರ ಹೆಸರಿನಿಂದ ಸಂಭೋದಿಸಿದ್ದಾರೆ. ಸಂಸ್ಕೃತದಲ್ಲಿ 'ಜನನೀ ಜನ್ಮಭೂಮಿ ಶ್ಚ' ಎಂದು ಕರೆದಿದ್ದಾರೆ. ಇಂಥಾ ಪವಿತ್ರ ಹೆಸರಿಗೆ ಕಲಂಕತರುವಂಥವರಾಗಬೇಡಿರಿ. ಧರ್ಮಾಭಿಮಾನಿಗಳಾಗಿರಿ. ಕುಟುಂಬ ಪೋಷಣೆಗೆ ಬೇಕಾಗುವ ಧನಸಂಪಾದನೆಯ ಹೊರೆಯು ಹೇಗೆ ಗಂಡಸರ ಮೇಲೆ ಇರುವದೋ ಹಾಗೆ ಮನೆಗೆಲಸಗಳನ್ನು ವಿವೇಕದಿಂದಲೂ ನಿರ್ವಹಿಸುವ ಭಾರವು ಹೆಂಗಸರ ಮೇಲಿದೆ. ಸಂಸಾರವನ್ನು ಸುಖಮಯವಾಗಿ ಸಾಗಿಸಿಕೊಂಡು ಹೋಗಲಿಕ್ಕೆ ಅವ

ಶ್ಯವಾಗಿ ಬೇಕಾಗುವ ಪಾಕಶಾಸ್ತ್ರ, ಆರೋಗ್ಯಶಾಸ್ತ್ರ, ಶಿಸುಸಂಗೋಪನ, ಶರೀರಸಂಗೋಪನ ಮುಂತಾದ ಉತ್ತಮವಾದ ವಿದ್ಯೆಯು ನಮ್ಮ ತಾಯಂದಿರಿಗೆ ಇಲ್ಲ. ಸಾಲೆಯನ್ನು ಕಲಿತವರು ಇಂಥ ಪುಸ್ತಕಗಳನ್ನು ಓದುವದರಿಂದ ತಮಗೂ ಕಲ್ಯಾಣವಾಗುವದು, ಪರರಿಗೂ ಕಲ್ಯಾಣ ಬರುವದು. ಹೀಗೆ ಅವಶ್ಯವಾದ ವಿದ್ಯೆಯನ್ನು ಕಲಿಯದೆ ಇದ್ದುದು ನಮ್ಮ ದುಃಖಕ್ಕೆ ಒಂದು ಕಾರಣವಾಗಿದೆ. ಮನೆಯನ್ನು ಸ್ವಚ್ಛವಿಟ್ಟು, ಅಡಿಗೆಯನ್ನು ಸ್ವಚ್ಛತೆಯಿಂದಲೂ, ಆರೋಗ್ಯದೃಷ್ಟಿಯಿಂದಲೂ ಮಾಡಿದರೆ ದವಾಖಾನೆಗೆ ಹೋಗುವ ದುಡ್ಡನ್ನು ಉಳಿಸಿದಂತಾಗುವದಲ್ಲದೆ, ಆರೋಗ್ಯ ಸಂಪತ್ತು ಬೆಳೆಯುವದು. ಇವನ್ನೆಲ್ಲ ನಮ್ಮ ಹಿರಿಯರು ಕಲಿಸಿಲ್ಲವೆಂದು ಅವರ ಮೇಲೆ ತಪ್ಪು ಹೊರಿಸುವಂತೆ, ಮುಂದಿನವರು ನಮ್ಮ ಮೇಲೆ ತಪ್ಪು ಹೊರಿಸದಂತೆ ನೋಡಿಕೊಳ್ಳುವದು ನಮ್ಮ ಕರ್ತವ್ಯವಾಗಿದೆ.

ಹೀಗೆ ಧರ್ಮವತಿಯರೂ, ಸಮಾಜಾಭಿಮಾನಿಗಳೂ, ಬಂಧುಪ್ರೇಮಿಗಳೂ ಆಗಿ, ಶ್ರೇಷ್ಠ ಮಕ್ಕಳನ್ನು ಹಡೆದು, ಭಾವೀ ಜನಾಂಗವನ್ನು ಉತ್ತಮಗೊಳಿಸಿ, ನಿಮ್ಮ ಕೀರ್ತಿಯನ್ನೂ, ಸಮಾಜದ ಕೀರ್ತಿಯನ್ನೂ ಸುತ್ತಲೆಲ್ಲ ಬೆಳಗುವಂತೆ ಮಾಡುತ್ತೀರೆಂದು ನಾನು ನಂಬುವೆನು. ಈ ತರದ ಬುದ್ಧಿಯನ್ನು ಆ ದಯಾಸಾಗರನು ತಮ್ಮೆಲ್ಲರಲ್ಲಿ ತುಂಬಲೆಂದು ನಾನು ಬೇಡಿಕೊಳ್ಳುವೆನು.

---

# ವಚನಶಾಸ್ತ್ರವು ಸಾಹಿತ್ಯವಲ್ಲವೇ ?

ಲೇಖಕರು.— ಬಿ. ಬಿ. ಪಾಟೀಲ ಟಿ. ಡಿ. ಸುಪರವಾಯಿಜರ
ಬಿ. ವಿ. ವ. ಸಂಘ ಬಾಗಲಕೋಟೆ.



ಗ್ರಂಥಕರ್ತರೂ ಕವಿಗಳೂ ಹೊಸ ಮಾದರಿಯಾಗಿ ಬರೆದೊಡನೆ ಓದುಗರಿಗೆ ಹೊಸ ಸಂಶಯುಗಳು ಉಂಟಾಗುತ್ತವೆ. ಕೂಡಲೇ ವಿಮ ರ್ಶಕರು ಹೊಸ ರೀತಿಯಲ್ಲಿ ಸಂಶಯ ನಿವಾರಣೆ ಮಾಡಬೇಕಾಗು ತ್ತದೆ. ಪ್ರತಿ ದಿನವೂ ನೂತನ ಸೃಷ್ಟಿ, ನೂತನ ಜಿಜ್ಞಾಸೆ, ನೂತನ ವಿವೇಕ ಈ ಚಕ್ರವು ನಿರರ್ಗಳವಾಗಿ ಸಾಗಿದೆ. ಇದು ಸಾಹಿತ್ಯ ಜೀವ ನದ ದಿನದಾರೋಗಣೆಯಿದ್ದಂತೆ. ಆದರೆ ನೂತನ ಸಾಹಿತ್ಯದ ಉದಯ ದೊಡನೆ "ಸಾಹಿತ್ಯವೆಂದರೇನು ?" ಎಂಬ ಪ್ರಶ್ನೆಯೂ ನೂತನವಾಗಿಯೇ ಉದಯವಾಗುತ್ತಿದೆ. ಆದರೆ ಈ ಪ್ರಶ್ನೆಯು ಬಗೆಹರಿಯದಷ್ಟೇನೂ ಕ್ಲಿಷ್ಟ ವಾಗಿಲ್ಲ. ಸ್ವಲ್ಪ ಆಳವಾಗಿ ವಿಚಾರಿಸಬೇಕು ಇಷ್ಟೆ.

ಶ್ರೀ ಎಸ್. ಶಿವಯೋಗಿ, ಶಿವಯೋಗಮಂದಿರ ಬದಾಮಿ, ಇವರು ಒಂದೆಡೆಯಲ್ಲಿ ಸಾಹಿತ್ಯದ ನಿರೂಪಣೆಯನ್ನು ಹೀಗೆ ಮಾಡಿದ್ದಾರೆ:— ಜೀವ ಪ್ರಪಂಚವನ್ನು ಚೆನ್ನಾಗಿ ಕಂಡು ಮಹಾನುಭಾವನು ತಾನು ಯಾವ ದೊಂದು ಭಾಷೆಯ ಮೂಲಕ ಉಸುರಿದ ಉದ್ಗಾರವು ಯಾವದೋ ಅದೇ ಸೊಗಸಾದ ಸಾಹಿತ್ಯ. ಈ ನಿರೂಪಣೆಯೇನೋ ನಿಜ. ಆದರೆ ಇದರ ವಿವರಣೆಯಾಗದ ವಿನಹ ಸಾಹಿತ್ಯದ ತೊಡಕು ಬಿಡಲಾರದು. ಈ ನಿರೂಪಣೆಯನ್ನೇ ನಾವು ಮುಂದಿಟ್ಟುಕೊಂಡು ಸಾಗಿದರೆ ವೇದ ಗಳೂ ಕೂಡ ಸಾಹಿತ್ಯದಲ್ಲಿ ಸೇರಬೇಕಾಗುತ್ತವೆ. ಆದರೆ ವಸ್ತುಸ್ಥಿತಿಯು ಹಾಗಿರುವದಿಲ್ಲ. "ಶಾಸ್ತ್ರವು ಸಾಹಿತ್ಯ, ವೇದವು ಸಾಹಿತ್ಯವಲ್ಲ" ಎಂದು ಸಮಸ್ಯೆ ಹಾಕುವ ಮಹನೀಯರೂ ಇದ್ದಾರೆ. ಯಾರನ್ನು ನಂಬು ವದು ? ಯಾರನ್ನು ಬಿಡುವದು ? ನಮ್ಮ ಜೀವನ ಪ್ರಪಂಚವನ್ನು ಕಾಣುವ ಬಗೆಯಾದರೂ ಹೇಗೆ ? ಇವೆಲ್ಲವು ತೊಡಕಿನಲ್ಲಿ ಸಿಕ್ಕಿಸಿ ಚಡ ಪಡಿಸಹಚ್ಚುತ್ತವೆ.

ನಮ್ಮ ಕಣ್ಣು, ಕಿವಿ ಮೊದಲಾದ ಜ್ಞಾನೇಂದ್ರಿಯಗಳಿಗೆ ತೋರುವ ಹಾಗು ನಮ್ಮ ಜ್ಞಾನಕ್ಕೆ ತೋಚುವ ವಿಷಯಗಳಿಗೆ "ಅರ್ಥ" ಅನ್ನುವದುಂಟು. ಹಾಗೆ ತೋರಿದ, ತೋಚಿದ ಅರ್ಥವನ್ನು ತಿಳಿಸಲು ಯೋಚಿಸಿದ ಯೋಜಿಸಿದ ರೂಪವಾಕ್ಸಂಕೇತಕ್ಕೆ 'ಶಬ್ದ' ಅನ್ನುವರು. ವೇದಗಳೊಳಗಿನ ಶಬ್ದಗಳು ಈ ನಿಯಮವನ್ನು ಬಿಟ್ಟಿವೆ ಎಂದು ನಮ್ಮ ಪೂರ್ವಿಕರ ತಿಳುವಳಿಕೆ. ಶಬ್ದಗಳಿಂದಲೇ ಅರ್ಥ ಸೃಷ್ಟಿಯಾಯಿತು. ಅರ್ಥ ಸೃಷ್ಟಿಯಲ್ಲಿ ಹುರುಳು ಇದೆ. ಹುರುಳಿಗೆ ಹೊಂದಿಕೆಯಾಗಿ ನುಡಿಯು ಬರಬೇಕು. ವೇದವು ಅಪೌರುಷೇಯ. ಅಲ್ಲಿ ಶಬ್ದವು ಪ್ರಧಾನವಾದುದು. ಅಂತೇ ವೇದವು ಸಾಹಿತ್ಯವಲ್ಲ. ಶಬ್ದಾರ್ಥಗಳ ದಾಂಪತ್ಯವು ಅಲ್ಲಿಲ್ಲ. ಶಬ್ದವು ಪ್ರಭುವು, ಅರ್ಥವು ಅದರ ದಾಸಾನುದಾಸ. ಶಾಸ್ತ್ರದ ರೀತಿ ಇದಕ್ಕೆ ವಿಪರೀತವಾಗಿದೆ. ಶಾಸ್ತ್ರದಲ್ಲಿ ಅರ್ಥವು ಪ್ರಧಾನ; ಶಬ್ದವು ಗೌಣ. ವೇದದ ಶಬ್ದಗಳ ಒಂದು ಸ್ವರ, ಒಂದು ಮಾತ್ರೆಯನ್ನು ಬದಲಾಯಿಸುವಂತಿಲ್ಲ. ಭಾಷ್ಯ ಮಾಡಿ ಅರ್ಥವನ್ನು ಬದಲಾಯಿಸಬಹುದು. ಶಾಸ್ತ್ರದ ಮಾತು ಬೇರೆ. ಇಲ್ಲಿ ಶಬ್ದಗಳನ್ನು ಅರ್ಥಕ್ಕೆ ಅನರ್ಥವಾಗದಂತೆ ಬೇಕಾದ ಹಾಗೆ ಬದಲಾಯಿಸಬಹುದು. ಶಾಸ್ತ್ರದಲ್ಲಿ ಶಬ್ದವು ಸಂಕೇತ ಮಾತ್ರ, ಅರ್ಥವೇ ಪ್ರಾಣ. ಇಲ್ಲಿಯೂ ಶಬ್ದಾರ್ಥಗಳ ಮಿಥುನದ ಸಂಸಾರವಿಲ್ಲ. ಸಾಹಿತ್ಯದಲ್ಲಿ ಶಬ್ದಾರ್ಥಗಳು ಸಹಿತವಾಗಿವೆ. ಆ ಅರ್ಥಕ್ಕೆ ಅದೇ ಶಬ್ದ. ಆ ಅರ್ಥಕ್ಕೆ ಅದೇ ಅರ್ಥವೆಂಬುವಂತೆ ಒಂದನ್ನೊಂದು ಕೂಡಿಕೊಂಡಿವೆ. ಶಬ್ದ ಮತ್ತು ಅರ್ಥ "ವಾಗಾರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೆ" ಎಂದು ಕಾಳಿದಾಸನು ನಮನಪೂರ್ವಕವಾಗಿ ಸಾಹಿತ್ಯ ಲಕ್ಷಣವನ್ನೇ ಹೇಳಿ ಬಿಟ್ಟಿದ್ದಾನೆ. ಭಾಮಹ ದಂಡಿ ಮೊದಲಾದ ಲಾಕ್ಷಣಿಕರು ಇದನ್ನೇ ಸಾಹಿತ್ಯವೆಂದು ಕರೆದರು. ಇಂಗ್ಲಿಷದಲ್ಲಿ ಲಿಟರೇಚರ (*Literature*) ಎನ್ನುವದೂ ಇದಕ್ಕೇ; ಇರಲಿ.

ಇನ್ನು ಹುಟ್ಟಿದ ಸಾಹಿತ್ಯವು ಓದುಗರ ಮನಮುಟ್ಟುವದರಲ್ಲಿಯೇ ಸಾರ್ಥಕತೆಯಿದೆ. ಅದೇ ನಿಜವಾದ ಸಾಹಿತ್ಯ. ಹಾಗೆ ಮುಟ್ಟಲು ಉಂಟಾದ ಪ್ರತಿಕೂಲವೇ ದೋಷ. ಇದು ಕಾವ್ಯದಲ್ಲಿಯೇ ಇದ್ದರೆ ಅದನ್ನಾರೂ ತಿದ್ದಲಾರರು. ತಿಳಿದುಕೊಳ್ಳುವವರ ಬುದ್ಧಿಯಲ್ಲಿದ್ದರೆ, ರಸಿಕರು, ಸಹೃದಯರು, ವಿಮರ್ಶಕರು ಅದನ್ನು ತಿದ್ದಬಹುದು. ಒಮ್ಮೆ

ಜನ್ಮ ತಾಳಿದ ಸಾಹಿತ್ಯವು ಸಾಮಾನ್ಯರ ಹೃದಯವನ್ನು ತಟ್ಟಿದಾಗ ಅದರ ಬೆಳವಣಿಗೆಯು. ಅದೇ ಸಾಹಿತ್ಯದ ಕುರುಹು. ಮಹಾ ಮಹಾ ಕಾವ್ಯಗಳೂ ಸಾಹಿತ್ಯದಲ್ಲಿ ಬರಬಹುದು. ಆದರೆ ನಾವು ಸಾಹಿತ್ಯದ ಉದ್ದೇಶವನ್ನು ಮುಂದಿಟ್ಟುಕೊಂಡು ಮಾತನಾಡಬೇಕಾಗಿದೆ. ಶಾಸ್ತ್ರವು ಸಾಹಿತ್ಯವಾದರೂ ಅದು ಬಿತ್ತರಿಸಲ್ಪಡುವ ಸಾಧನವಾದ ಭಾಷೆಯ ಅಧೀಯವಾಗಿದೆ. ಉದಾಹರಣಾರ್ಥವಾಗಿಃ— ಬಸವಣ್ಣನವರ ಕಾಲ ದಲ್ಲಿ ಕಾಶಿಯಿಂದ ಪದವೀಧರರಾಗಿ ಬಂದ ಪಂಡಿತರನೇಕರಿದ್ದರು. ಆದರೆ ಅವರ ಭಾಷೆಯು (ಸಂಸ್ಕೃತ) ಆಗಿನ ಸಾಮಾನ್ಯ ಜನರಿಗೆ ತಿಳಿ ಯುವಂತಿರಲಿಲ್ಲ. ಅವರು ದೇಶ, ಕಾಲ, ಪರಿಸ್ಥಿತಿಗಳಿಗೆ ದೂರವಾಗಿ ದ್ದರೆನ್ನಬಹುದು. ಅಂತೆಯೇ ಅವರ ಸ್ಥಿತಿಯು ಉಷ್ಣವಲಯದವರು. ಶೀತವಲಯದವರ ಪೋಷಾಕು ಹಾಕಿಕೊಂಡಂತಾಗಿತ್ತು. ಗಿಡ್ಡ ಜಪಾ ನರು ಗಿರಿಜಾ ಮೀಸೆ ಬಿಟ್ಟಂತಾಗಿತ್ತು. ಬೋರೇಗೌಡನು ಬೂಟ, ಸೂಟ ಹ್ಯಾಟ ಧರಿಸಿದಂತಾಗಿತ್ತು. ಇಂತಹ ಪ್ರಸಂಗದಲ್ಲಿ ಶಾಸ್ತ್ರವು ಸಾಹಿತ್ಯವೆಂದು ಎಣಿಸಲ್ಪಡುವದು ಹೇಗೆ? ಬಸವಣ್ಣನವರು ಪಾತ್ರ ವನ್ನರಿತು ಜನ ಸಾಮಾನ್ಯರಿಗೂ ತಿಳಿಯುವಂತೆ ವ್ಯವಹಾರಿಕ ಶಬ್ದಗ ಳೊಂದಿಗೆ ಕಿರಿನುಡಿಯಲ್ಲಿ ಹಿರಿಯರ್ಥವನ್ನು ಹೇಳುವ ವಚನಗಳಿಂದ ಬೋಧಿಸಿದರು. ಅದು ಜನತೆಯ ಮನಮುಟ್ಟಿ, ಎದೆತಟ್ಟಿ ಜಯಶೀ ಲವಾಯಿತು. ಅಂತೆಯೇ ವಚನ ಶಾಸ್ತ್ರವು ಸಾಹಿತ್ಯವೆಂದೆಣಿಸಲ್ಪಟ್ಟಿತು, ಪಡುತ್ತಲಿದೆ. ಅವರ ಸಾಹಿತ್ಯವು ಸರಸವಾದುದು. ಸರಳವಾದುದು. ಪಾಶ್ಚಾತ್ಯ ಸಾಹಿತಿಗಳನ್ನೂ ಕೂಡ ಸಂಮೋಹಿಸುವಂತಹದು. ಕಲ್ಪನಾ ಸಾಮರ್ಥ್ಯವು ಬಾನಿನ ಮಟ್ಟಕ್ಕೆ ತಟ್ಟುವಷ್ಟು ಉನ್ನತವಾದುದು. ವರ್ಣನಾ ವೈಖರಿಯಲ್ಲಿಯಾದರೋ ಅವರು ಅಪ್ರತಿಮ ವೀರರು. 'ನೀರ ಕಂಡಲ್ಲಿ ಮುಳುಗುವರಯ್ಯ. ಮರನ ಕಂಡಲ್ಲಿ ಸುತ್ತುವರಯ್ಯ...' "ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ..." ಈ ಬಗೆಯ ಕೆಲವು ವಚನಗಳನ್ನು ವಿಚಾರಿಸಿದಲ್ಲಿ ಆ ಕಾಲದಲ್ಲಿಯ ಸಮಾಜದ ಸ್ಥಿತಿಗತಿಗಳು ಕಣ್ಣಿಗೆ ಕಟ್ಟಿದಂತಾಗುವವು. ಇದರಂತೆಯೇ ಇನ್ನುಳಿದ ನಮ್ಮ ವಚನಕಾರರು ತಮ್ಮ ವಚನಗಳಿಂದ ಕೃಶಳಾಗಿದ್ದ ಕನ್ನಡಮ್ಮನ ಸೇವೆ ಮಾಡಿ ಅವಳು ಮೊಗವೆತ್ತುವಂತೆ ಮಾಡಿದ್ದಾರೆ. ಅವರ ವಚನಗಳು ಕಾವ್ಯಮಯ ಗದ್ಯದಲ್ಲಿವೆ. (*Poetic Prose*) ಅವುಗ

ಳಲ್ಲಿ ಇಂಪು ಇದೆ, ಸೊಂಪು ಇದೆ, ಕಂಪು ಇದೆ, ಹೃದಯಕ್ಕೆ ತಂಪು ಇದೆ. ಹಿಂದಕ್ಕೆ ವಾಲ್ಮೀಕಿ ಮಹರ್ಷಿಗಳು ನೀತಿ ನಿಷ್ಠೆಗೆ ಪ್ರಾಧಾನ್ಯತೆಯಿರುವ ಭವ್ಯವಾದ ನಾಗರಿಕತೆಯನ್ನೂ, ವ್ಯಾಸರು ಧೀಶಕ್ತಿಗೆ ಮೇಲ್ಮೆಯಿರುವ ರಮ್ಯವಾದ ನಾಗರೀಕತೆಯನ್ನೂ ಚಿತ್ರಿಸಿರುವಂತೆ, ನಮ್ಮ ವಚನಕಾರರು ನಿವೃತ್ತಿ ಮಾರ್ಗಕ್ಕೆ ವೈಶಿಷ್ಟ್ಯವಿರುವ ಸೊಬಗಿನ ಸುಗ್ಗಿಯನ್ನೇ ಚಿತ್ರಿಸಿದ್ದಾರೆ. ವಚನಗಳ ರಚನೆಯು ಬಹು ವಿಚಿತ್ರವಾಗಿದೆ. ರಾಮಣೀಯಕವಾಗಿದೆ. ಕರ್ಮ-ಭಕ್ತಿ ಯೋಗಗಳು ಬಂದಿವೆ. ಸಮಾಜಶಾಸ್ತ್ರ-ನೀತಿಶಾಸ್ತ್ರಗಳು ಬಂದಿವೆ. ಈ ಅನರ್ಘ್ಯ ವಚನಗಳನ್ನು ಆಮೂಲಾಗ್ರವಾಗಿ ವಿಚಾರಿಸಿದಲ್ಲಿ ನಮಗೆ ನೂರೆಂಟು ಬಗೆಯ ತತ್ವಗಳು ಗೋಚರವಾಗುತ್ತವೆ. ಅವುಗಳನ್ನೊರೆಯುವ ಭಂಗಿಯಾದರೂ ವಿವಿಧವಾಗಿದೆ. ಅಂದವಾಗಿದೆ. ಅನುಪಮವಾದುದು. ಎಲ್ಲೆಲ್ಲಿಯೂ ನಯವಾದ ಸಿದ್ಧಾಂತಗಳೂ ಆಲ್ಹಾದಕರವಾದ ಆಲಾಪಗಳೂ ಅಡಗಿರುವದರಿಂದ ಪ್ರಬಂಧವು ಸರಿಯಾಗಿದೆ. ಸಾರಯುತವಾಗಿದೆ. ಸಾಹಿತ್ಯಕ್ಕೆ ಇನ್ನೂ ಏನು ಬೇಕು? ನಿಜವಾದ ಸಾಹಿತ್ಯವು ವಚನಶಾಸ್ತ್ರದಲ್ಲಿಲ್ಲವೇ?

---

# ಗುರು ಲಿಂಗ ಜಂಗಮ.

[ಸಂಪುಟ ೧೭, ಸಂಚಿಕೆ ೧ ರಿಂದ ಮುಂದುವರಿದದ್ದು.]

(ಲೇಖಕ:— ಬಸವಪ್ಪ ಚನ್ನಪ್ಪ ಪಟ್ಟೇದ-ವಂಟಮುರಿ.)

## ಲಿಂಗ.

ದೇಹದ ಮೇಲೆ ಧರಿಸಿದ ದೃಶ್ಯಲಿಂಗವೇ ಬಹಿರ್ಗತ ಲಿಂಗವು. ಜನ್ಮಕಾಲದಲ್ಲಿ ಇಲ್ಲವೆ ಗರ್ಭಾಷ್ಟಮವಾಸದಲ್ಲಿ ಧರಿಸಿದ ಲಿಂಗವನ್ನೇ ಅದರ ನೆಲೆ ಕಲೆ ನಿಜಸ್ವರೂಪಾದಿಗಳನ್ನೇನೂ ಅರಿಯದೆ—ಕಡೆತನಕ ಇಟ್ಟುಕೊಂಡು, ಬರೇ ಭವಿಜನರಂತೆ ಅದನ್ನು ದೇವರೆಂದು, ಭೇದ ಭಾವನೆಯಿಂದ ( ತಾನು ಬೇರೆ, ಅದು ಬೇರೆ. ಎಂಬ ಪೂಜ್ಯ ಪೂಜಕ-ಬುದ್ಧಿಯಿಂದ ) ಪೂಜಿಸುತ್ತ ಹೋದರೆ, ಅದು ಸಾಮರಸ್ಯಕ್ಕೆಂತು ಅನುಕೂಲಿಸುವದು? ಈ ಲಿಂಗವೂ ದೇವಾಲಯುಗಳಲ್ಲಿ ನೆಟ್ಟ ಲಿಂಗವೂ ಒಂದೇ ತರಹದವಾದವು. ಇದು ವೀರಶೈವಕ್ಕೆ ಸರಿಹೋಗುವ ಲಿಂಗವಲ್ಲ. ಗುರುವಿನಿಂದ ಶಿವದೀಕ್ಷೆಯನ್ನು ಪಡೆದು, ಲಿಂಗದ ಮರ್ಮವನರಿತು, ಆ ಭೇದ ಭಾವನೆಯಿಂದಲೇ ಅದನ್ನು ಒಳಗೂ ಹೊರಗೂ ಪೂಜಿಸಿ, ಕೃತಾರ್ಥರಾಗಬೇಕಾಗುತ್ತದೆ. ಹೆಸರಿಗೆ ಮಾತ್ರ ಧರಿಸಿದ ಲಿಂಗವನ್ನು, ವಚನಕಾರರು ಅದು ಹೇಗೆ ಕಾಂಬುವರೆಂಬುದನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

(೧) "ಸಂತೆಯೊಳಗಿದ್ದ ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ? ಪರ್ವತವಾರಣಾಸಿ ಬದರಿಕಾ ಕ್ಷೇತ್ರಗಳಲ್ಲಿದ್ದ ಕಲ್ಲುಗಳೆಲ್ಲ ಲಿಂಗವೇನೋ ಅಯ್ಯಾ? ಅಂತಕಾಂತಕ ಶ್ರೀಗುರುಮೂರ್ತಿಯು "ತನ್ನ ಅರುಹಿನ ಕುರುಹು" ಇಂತೆಂದು ತೋರಿದ ಕಲ್ಲೇ ನಿಜಲಿಂಗ ನೋಡಾ ಕಪಿಲಸಿದ್ಧಿಮಲ್ಲಿಕಾರ್ಜುನಾ".

ಸಂತೆಯೊಳಗಿಂದ ದುಡ್ಡು ಕೊಟ್ಟು ತಂದು ಅನೇಕರು ಲಿಂಗವೆಂದು ಅಜ್ಞಾನದಿಂದ ಧರಿಸಿಕೊಳ್ಳುವರು. ಅವು ಕಲ್ಲುಗಳೇ ಹೊರತು ಲಿಂಗಗಳಲ್ಲ. ಶಿಷ್ಯನಿಗೆ ಶ್ರೀಗುರುವು "ನಿನ್ನ ಅರುಹಿನ ಕುರುಹು ಇದು"

ಎಂದು ತೋರಿಸಿಕೊಟ್ಟ ಕಲ್ಲು ಮಾತ್ರ. ನಿಜ (ಪರವಸ್ತುವಿನ ಸ್ವರೂಪವಾದ ನಿತ್ಯ ಸತ್ಯ) ಲಿಂಗವು; ಎಂದು ಈ ವಚನದಲ್ಲಿ ಉಕ್ತವಾಗಿದೆ. ಶಿವದೀಕ್ಷೆಯಲ್ಲಿಯೇ ಹೀಗೆ ಗುರುವು ಶಿಷ್ಯನ ಅನುಭವಕ್ಕೆ ತರುತ್ತಾನೆ. ಶಿಷ್ಯನ ಪ್ರಾಣಕಲೆಯನ್ನು ಪುಸ್ತಕಗತ ಶಿವಕಲೆಯುನ್ನೂ ಆಹ್ವಯಿಸಿ, ಲಿಂಗದಲ್ಲಿ ಮಂತ್ರಾದಿ ವಿಧಾನಪೂರ್ವಕ ಪ್ರತಿಷ್ಠಾಪಿಸುತ್ತಾನೆ. ಇದೆಲ್ಲ ಆ ಶಿಷ್ಯನು ಪ್ರತ್ಯಕ್ಷ ಕಂಡುಹಾಗೆ ಭಾವಿಸುತ್ತಾನೆ ದೇವಾಲಯಗಳಲ್ಲಿಯೂ ಕ್ಷೇತ್ರಸ್ಥ ಲಿಂಗಗಳಲ್ಲಿಯೂ ಇದು ಇಲ್ಲದಿರುವದರಿಂದ, ಅವು ವೀರಶೈವರಿಗೆ ತ್ಯಾಜ್ಯವು, ಅವು ಭವಿ ಜನರು ಮಾತ್ರ ಪೂಜಿಸುವ ಲಿಂಗಗಳು. ಇಂತಹ ಲಿಂಗಗಳನ್ನು ಪೂಜಿಸುವ ಅಜ್ಞಾನಿ ವೀರಶೈವರನ್ನು ಶಿವಶರಣ ಚೌಡಯ್ಯನವರು ಅದು ಹೇಗೆ ಸಂಭಾವಿಸುವರೆಂಬದನ್ನು ಕೆಳಗಿನ ವಚನದಲ್ಲಿ ಕಾಣಬಹುದು:—

"ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ, ಮುಟ್ಟಿ ಮುಟ್ಟಿ ಪತ್ರಿಯನಿಕ್ಕಿ, ಹೊಟ್ಟೆಡಿಯಾಗಿ ಬೀಳುವ ಲೊಟ್ಟೆ ಮೂಳರ ಕಂಡಡೆ ಮೆಟ್ಟಿದೆಡ ಪಾದರಕ್ಷೆಯ ತಕ್ಕೊಂಡು, ಲಟಲಟನೆ ಹೊಡೆಯೆಂದ ಅಂಬಿಗರ ಚೌಡಯ್ಯ."

ಲಿಂಗವಂತರಾಗಿ ಇಷ್ಟಲಿಂಗವನ್ನು ಧರಿಸಿಯೂ ಕೂಡ, ಮತ್ತೆ ಅಜ್ಞಾನ ವಶರಾಗಿ ವರ್ತಿಸುವದನ್ನು ಕಂಡು ಸಂತಪ್ತರಾಗಿ ಅವರು ಹೊರಡಿಸಿದ ಉದ್ಗಾರಗಳಿವು. ಹೊಟ್ಟೆಡಿಯಾಗಿ ಬೀಳುವದೆಂದರೆ ತಮ್ಮ ಲಿಂಗವನ್ನು ಹೊಟ್ಟೆಯ ಬುಡದಲ್ಲಿ ಸೇರಿಸಿ, ಆ ನೆಟ್ಟಲಿಂಗಕ್ಕೆ ಸಾಷ್ಟಾಂಗವೆರಗುವದು.

(೨) "ಕಲ್ಲು ಹಿಡಿದು ಅಲ್ಲಮನ ನೋಡುವೆಂಬುವವರ ಖುಲ್ಲ ಮನುಜರೆಂಬೆ. ಕಲ್ಲು ಹಿಡಿದವರೆಲ್ಲರು ಅಲ್ಲಮನಾಗಲು, ಭವಬೀಜವೆಲ್ಲಿಯದಯ್ಯಾ? ಕಪಿಲಸಿದ್ಧಮಲ್ಲಿಕಾರ್ಜುನಾ"

ಕಲ್ಲು ಪೂಜಿಸಿ ಅಲ್ಲಮನ (ಶಿವನನ್ನು)ಕಾಣುವೆನೆಂಬ ಮೂರ್ಖ ನರರಿಗೆ ಏನೆನ್ನಲಿ! ಎಂದು ಸಿದ್ಧರಾಮೇಶ್ವರರು ಕನಿಕರ ಪಡುತ್ತಾರೆ. ಹಾಗೆ ಶಿವನನ್ನು ಕಾಣುವದು ಶಕ್ಯವಾದರೆ ಭವಿಗಳುತ್ಪತ್ತಿಗೆ ಬೀಜವೇ ಇರುತ್ತಿರಲಿಲ್ಲ! ಎಂದು ಉದ್ಗರಿಸಿದ್ದಾರೆ. ಯಾಕಂದರೆ ಭವಿಗಳಾದರೂ ತಮ್ಮ ಗುಡಿಗಳಲ್ಲಿ ಅಂತಹ ಕಲ್ಲು ಪೂಜಿಸುವರು.

(೨) "ಗಟ್ಟಿವಿಡಿದು ಗೊತ್ತುಮುಟ್ಟಬಾರದಯ್ಯಾ. ನೀರಲ್ಲಿಯ ಕ್ರೀಡೆ ಈಸಗುಂಬಳಕಾಯಿಗಲ್ಲದೆ ದೊಡ್ಡ ಬಂಡೆಗುಂಟೇನಯ್ಯಾ? ಚರಿಸುವ ಜೀವಿಗೆ ನಿರ್ಮಯಲ ಪರವಸ್ತು ಲಿಂಗವಲ್ಲದೆ, ಪಾಷಾಣಮಯ ಲಿಂಗವೇ ಅಯ್ಯಾ? ಕಪಿಲಸಿದ್ಧಮಲ್ಲಿಕಾರ್ಜುನಾ"

ಗಟ್ಟಿವಿಡಿದು (ಬರೀ ಕಲ್ಲನ್ನು ಧರಿಸಿ ಪೂಜಿಸಿ) ಗೊತ್ತು ಮುಟ್ಟಬಾರದಯ್ಯ (ನಿಜವಾದ ಪರಮಾತ್ಮನನ್ನು ಅರಿಯುವದು ಅಶಕ್ಯ!) ನೀರಲ್ಲಿ ತೇಲಿ ದಂಡೆಯನ್ನು ಮುಟ್ಟಬೇಕಾದರೆ, ಬಂಡೆಗಲ್ಲುಗಳೇನು ಸಾಧನವಲ್ಲ. ಅದಕ್ಕೆ ಪೊಳ್ಳಾದ ಈಸಗುಂಬಳಕಾಯಿಯೇ ಹೇಗೆ ಬೇಕಾಗುವದೋ ಹಾಗೆ, ಆಕಾರ ನಿರಾಕಾರವೆರಡರಿಂದಲೂ ಕೂಡಿದ ಇಷ್ಟಲಿಂಗವೇ, ಸಂಸಾರ ಸಾಗರವನ್ನು ದಾಟಲಿಕ್ಕೆ ಯೋಗ್ಯವಾದುದು. ಚರಿಸುವ ಮಾನವನಿಗೆ ಆ ನಿರ್ಮಯಲು ಸ್ವರೂಪವೇ ಲಿಂಗವಲ್ಲದೆ ಅಚರ ಪಾಷಾಣವು ಎಂದೆಂದೂ ಲಿಂಗವಾಗದು. ಇಷ್ಟಲಿಂಗದಲ್ಲಿ ನಿರ್ಮಯಲನ್ನು ಭಾವನೆಯಿಂದಲೇ ಊಹಿಸುವದಿದೆ. ಪ್ರಾಣ ಭಾವಲಿಂಗಗಳನ್ನು ಕಲ್ಪಿಸುವದೇ ಆ ನಿರ್ಮಯಲು.

ಈ ವಚನಗಳಿಂದ, ಗುರುಗಳು ಅಯೋಗ್ಯರಾದರೆ ಅವರು, ಆದು ಹೇಗೆ ಲಿಂಗಕ್ಕೆ ಕುಂದು ಹಚ್ಚುವರೆಂಬದು, ಸರಿಸಾಗಿ ವ್ಯಕ್ತವಾಗುತ್ತದೆ.

## ಜಂಗಮರು.

ಅತಿಶಯವಾದ ಮಾರ್ಗದಿಂದ ವರ್ತಿಸತಕ್ಕವರು, ಇಲ್ಲವೆ ಅತಿಶಯ ಜ್ಞಾನವಂತರಾದವರು, ಜಂಗಮರು ಎಂದು ಆ ಶಬ್ದದಿಂದ ತಿಳಿಯುತ್ತದೆ. ಸಾಧಾರಣವಾಗಿ ಅಯ್ಯಗಳೆಲ್ಲರು ತಮ್ಮನ್ನು ಜಂಗಮರೆಂದು[೧]

೧ ಒಂದು ರೀತಿಯಿಂದ ನೋಡಿದರೆ ಸಕಲಚರವಸ್ತುಗಳು (ಪ್ರಾಣಿಗಳು) ಜಂಗಮವೇ! ಹಾಗೆ ತಿಳಿಯುವದಾದರೆ ಅಯ್ಯಗಳು ಸಹ ಜಂಗಮರೇ ಅಹುದು. ಇಂತು ಭಾವಿಸುವದಾದರೆ ಅವರಷ್ಟೇಯೇಕೆ? ಎಲ್ಲರೂ ಜಂಗಮವರ್ಗದಲ್ಲಿಯೇ ಬರುವರು. ಆದುದರಿಂದ ಅವರನ್ನಾದರೂ ಈ ಅಯ್ಯಗಳು ತಮ್ಮಷ್ಟೇ ಆದರದಿಂದ ತಿಳಿದು ವರ್ತಿಸಬೇಕಾದೀತು. ಇದು ಅವರಿಗೆ ಮಾನ್ಯವಿದೆಯೇ? ಇದೇ ಮೇರೆಗೆ ತಾವು ಲಿಂಗೋದ್ಭವರೆಂದು ಅಭಿಮಾನ ತಾಳುವವರು, "ಲಿಂಗರೂಪಂ ಜಗತ್ ಸರ್ವಂ" ಎಂಬ ವಾಕ್ಯದಂತೆ ಬರೇ ಲಿಂಗೋದ್ಭವರಷ್ಟೇ ಏಕೆ, ಪ್ರತ್ಯಕ್ಷ ಲಿಂಗರೂಪವೇ ಸಕಲರಿರುವರು; ಎಂದು ಭಾವಿಸ

ಎಂದು ತೋರಿಸಿಕೊಟ್ಟ ಕಲ್ಲು ಮಾತ್ರ, ನಿಜ (ಪರವಸ್ತುವಿನ ಸ್ವರೂಪ ವಾದ ನಿತ್ಯ ಸತ್ಯ) ಲಿಂಗವು; ಎಂದು ಈ ವಚನದಲ್ಲಿ ಉಕ್ತವಾಗಿದೆ. ಶಿವದೀಕ್ಷೆಯಲ್ಲಿಯೇ ಹೀಗೆ ಗುರುವು ಶಿಷ್ಯನ ಅನುಭವಕ್ಕೆ ತರುತ್ತಾನೆ. ಶಿಷ್ಯನ ಪ್ರಾಣಕಲೆಯನ್ನು ಪುಸ್ತಕಗತ ಶಿವಕಲೆಯನ್ನೂ ಆಹ್ವಯಿಸಿ, ಲಿಂಗದಲ್ಲಿ ಮಂತ್ರಾದಿ ವಿಧಾನಪೂರ್ವಕ ಪ್ರತಿಷ್ಠಾಪಿಸುತ್ತಾನೆ. ಇದೆಲ್ಲ ಆ ಶಿಷ್ಯನು ಪ್ರತ್ಯಕ್ಷ ಕಂಡುಹಾಗೆ ಭಾವಿಸುತ್ತಾನೆ ದೇವಾಲಯಗಳಲ್ಲಿಯೂ ಕ್ಷೇತ್ರಸ್ಥ ಲಿಂಗಗಳಲ್ಲಿಯೂ ಇದು ಇಲ್ಲದಿರುವದರಿಂದ, ಅವು ವೀರಶೈವರಿಗೆ ತ್ಯಾಜ್ಯವು, ಅವು ಭವಿ ಜನರು ಮಾತ್ರ ಪೂಜಿಸುವ ಲಿಂಗಗಳು. ಇಂತಹ ಲಿಂಗಗಳನ್ನು ಪೂಜಿಸುವ ಅಜ್ಞಾನಿ ವೀರಶೈವರನ್ನು ಶಿವಶರಣ ಚೌಡಯ್ಯನವರು ಅದು ಹೇಗೆ ಸಂಭಾವಿಸುವರೆಂಬದನ್ನು ಕೆಳಗಿನ ವಚನದಲ್ಲಿ ಕಾಣಬಹುದುಃ—

"ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ, ಮುಟ್ಟಿ ಮುಟ್ಟಿ ಪತ್ರಿಯನಿಕ್ಕಿ, ಹೊಟ್ಟಡಿಯಾಗಿ ಬೀಳುವ ಲೊಟ್ಟಿ ಮೂಳರ ಕಂಡಡೆ ಮೆಟ್ಟಿದೆಡ ಪಾದರಕ್ಷೆಯು ತಕ್ಕೊಂಡು, ಲಟಲಟನೆ ಹೊಡೆಯೆಂದ ಅಂಬಿಗರ ಚೌಡಯ್ಯ."

ಲಿಂಗವಂತರಾಗಿ ಇಷ್ಟಲಿಂಗವನ್ನು ಧರಿಸಿಯೂ ಕೂಡ, ಮತ್ತೆ ಅಜ್ಞಾನ ವಶರಾಗಿ ವರ್ತಿಸುವದನ್ನು ಕಂಡು ಸಂತಪ್ತರಾಗಿ ಅವರು ಹೊರಡಿಸಿದ ಉದ್ಗಾರಗಳಿವು. ಹೊಟ್ಟಡಿಯಾಗಿ ಬೀಳುವದೆಂದರೆ ತಮ್ಮ ಲಿಂಗವನ್ನು ಹೊಟ್ಟೆಯ ಬುಡದಲ್ಲಿ ಸೇರಿಸಿ, ಆ ನೆಟ್ಟಲಿಂಗಕ್ಕೆ ಸಾಷ್ಟಾಂಗವೆರಗುವದು.

(೨) "ಕಲ್ಲು ಹಿಡಿದು ಅಲ್ಲಮನ ನೋಡುವೆಂಬುವವರ ಖುಲ್ಲ ಮನುಜರೆಂಬೆ. ಕಲ್ಲು ಹಿಡಿದವರೆಲ್ಲರು ಅಲ್ಲಮನಾಗಲು, ಭವಬೀಜವೆಲ್ಲಿಯದಯ್ಯಾ? ಕಪಿಲಸಿದ್ಧಮಲ್ಲಿಕಾರ್ಜುನಾ"

ಕಲ್ಲು ಪೂಜಿಸಿ ಅಲ್ಲಮನ (ಶಿವನನ್ನು)ಕಾಣುವೆನೆಂಬ ಮೂರ್ಖ ನರರಿಗೆ ಏನೆನ್ನಲಿ! ಎಂದು ಸಿದ್ಧರಾಮೇಶ್ವರರು ಕನಿಕರ ಪಡುತ್ತಾರೆ. ಹಾಗೆ ಶಿವನನ್ನು ಕಾಣುವದು ಶಕ್ಯವಾದರೆ ಭವಿಗಳುತ್ಪತ್ತಿಗೆ ಬೀಜವೇ ಇರುತ್ತಿರಲಿಲ್ಲ! ಎಂದು ಉದ್ಗರಿಸಿದ್ದಾರೆ. ಯಾಕಂದರೆ ಭವಿಗಳಾದರೂ ತಮ್ಮ ಗುಡಿಗಳಲ್ಲಿ ಅಂತಹ ಕಲ್ಲು ಪೂಜಿಸುವರು.

(೨) “ಗಟ್ಟಿ ಪಿಡಿದು ಗೊತ್ತು ಮುಟ್ಟಬಾರದಯ್ಯಾ. ನೀರಲ್ಲಿಯ ಕ್ರೀಡೆ ಈಸುಗುಂಬಳಕಾಯಿಗಲ್ಲದೆ ದೊಡ್ಡ ಬಂಡೆಗುಂಟೇನಯ್ಯಾ? ಚರಿಸುವ ಜೀವಿಗೆ ನಿರ್ಮಲ ಪರವಸ್ತು ಲಿಂಗವಲ್ಲದೆ, ಪಾಷಾಣಮಯ ಲಿಂಗವೇ ಅಯ್ಯಾ? ಕಪಿಲಸಿದ್ಧಮಲ್ಲಿಕಾರ್ಜುನಾ”

ಗಟ್ಟಿಪಿಡಿದು (ಬರೀ ಕಲ್ಲನ್ನು ಧರಿಸಿ ಪೂಜಿಸಿ) ಗೊತ್ತು ಮುಟ್ಟಬಾರದಯ್ಯಾ (ನಿಜವಾದ ಪರಮಾತ್ಮನನ್ನು ಅರಿಯುವದು ಅಶಕ್ಯ!) ನೀರಲ್ಲಿ ತೇಲಿ ದಂಡೆಯನ್ನು ಮುಟ್ಟಬೇಕಾದರೆ, ಬಂಡೆಗಲ್ಲುಗಳೇನು ಸಾಧನವಲ್ಲ. ಅದಕ್ಕೆ ಪೊಳ್ಳಾದ ಈಸುಗುಂಬಳಕಾಯಿಯೇ ಹೇಗೆ ಬೇಕಾಗುವದೋ ಹಾಗೆ, ಆಕಾರ ನಿರಾಕಾರವೆರಡರಿಂದಲೂ ಕೂಡಿದ ಇಷ್ಟಲಿಂಗವೇ, ಸಂಸಾರ ಸಾಗರವನ್ನು ದಾಟಲಿಕ್ಕೆ ಯೋಗ್ಯವಾದುದು. ಚರಿಸುವ ಮಾನವನಿಗೆ ಆ ನಿರ್ಮಲು ಸ್ವರೂಪವೇ ಲಿಂಗವಲ್ಲದೆ ಅಚರ ಪಾಷಾಣವು ಎಂದೆಂದೂ ಲಿಂಗವಾಗದು. ಇಷ್ಟಲಿಂಗದಲ್ಲಿ ನಿರ್ಮಲುವನ್ನು ಭಾವನೆಯಿಂದಲೇ ಊಹಿಸುವದಿದೆ. ಪ್ರಾಣ ಭಾವಲಿಂಗಗಳನ್ನು ಕಲ್ಪಿಸುವದೇ ಆ ನಿರ್ಮಲು.

ಈ ವಚನಗಳಿಂದ, ಗುರುಗಳು ಅಯೋಗ್ಯರಾದರೆ ಅವರು, ಅದು ಹೇಗೆ ಲಿಂಗಕ್ಕೆ ಕುಂದು ಹಚ್ಚುವರೆಂಬದು, ಸರಸಾಗಿ ವ್ಯಕ್ತವಾಗುತ್ತದೆ.

## ಜಂಗಮರು.

ಅತಿಶಯವಾದ ಮಾರ್ಗದಿಂದ ವರ್ತಿಸತಕ್ಕವರು, ಇಲ್ಲವೆ ಅತಿಶಯ ಜ್ಞಾನವಂತರಾದವರು, ಜಂಗಮರು ಎಂದು ಆ ಶಬ್ದದಿಂದ ತಿಳಿಯುತ್ತದೆ. ಸಾಧಾರಣವಾಗಿ ಅಯ್ಯಗಳೆಲ್ಲರು ತಮ್ಮನ್ನು ಜಂಗಮರೆಂದು[೧]

೧ ಒಂದು ರೀತಿಯಿಂದ ನೋಡಿದರೆ ಸಕಲಚರವಸ್ತುಗಳು (ಪ್ರಾಣಿಗಳು) ಜಂಗಮವೇ! ಹಾಗೆ ತಿಳಿಯುವದಾದರೆ ಅಯ್ಯಗಳು ಸಹ ಜಂಗಮರೇ ಅಹುದು. ಇಂತು ಭಾವಿಸುವದಾದರೆ ಅವರಷ್ಟೇಯೇಕೆ? ಎಲ್ಲರೂ ಜಂಗಮವರ್ಗದಲ್ಲಿಯೇ ಬರುವರು. ಆದುದರಿಂದ ಅವರನ್ನಾದರೂ ಈ ಅಯ್ಯಗಳು ತಮ್ಮಷ್ಟೇ ಆದರದಿಂದ ತಿಳಿದು ವರ್ತಿಸಬೇಕಾದೀತು. ಇದು ಅವರಿಗೆ ಮಾನ್ಯವಿದೆಯೇ? ಇದೇ ಮೇರೆಗೆ ತಾವು ಲಿಂಗೋದ್ಭವರೆಂದು ಅಭಿಮಾನ ತಾಳುವವರು, “ಲಿಂಗರೂಪಂ ಜಗತ್ ಸರ್ವಂ” ಎಂಬ ವಾಕ್ಯದಂತೆ ಬರೇ ಲಿಂಗೋದ್ಭವರಷ್ಟೇ ಏಕೆ, ಪ್ರತ್ಯಕ್ಷ ಲಿಂಗರೂಪವೇ ಸಕಲರಿರುವರು; ಎಂದು ಭಾವಿಸ

ತಿಳಿದುಕೊಂಡಿದ್ದಾರೆ. ಆದರೆ ನಿಜವಾದ ಜಂಗಮತ್ವಕ್ಕೂ ಇವರ ತಿಳಿವಳಿಕೆಗೂ ಆಕಾಶ ಪಾತಾಳದಷ್ಟು ಅಂತರ. ಈಗ ಅಯ್ಯಾಚಾರ ಪಡೆದು ಅಯ್ಯಗಳೆನಿಸುವ ಗೃಹಸ್ಥರು, ನಿಜವಾದ ಅಯ್ಯತನದಿಂದ ಬಹು ದೂರವರ್ತಿಗಳಾಗಿರುವರೆಂಬದು ಹಿಂದಿನ "ಅಷ್ಟವಿಧಾರ್ಚನೆ......" ಇತ್ಯಾದಿ ವಚನದಿಂದ ಕಂಡುಬರುತ್ತದೆ. ಒಂದು ಪಕ್ಷಕ್ಕೆ ಅದರಲ್ಲಿ ಹೇಳಿದಂತೆ ನಿಜವಾದ ಅಯ್ಯಗಳಾಗಿದ್ದರೆ, ತಮ್ಮನ್ನು ಜಂಗಮರೆಂದು ಹೇಳಿಕೊಳ್ಳುವದು ಶೋಭಿಸಬಹುದಾಗಿತ್ತು. ಇರಲಿ, ಜಂಗಮರೆಂದರೆ ಯಾರು? ಎಂಬದನ್ನು ಇನ್ನು ನೋಡುವಾ:—

"ಸರ್ವ ಲೋಕೋಪಕಾರಾಯ ಯೋದೇವಃ ಪರಮೇಶ್ವರಃ ।
ಚರತ್ಯತಿಥಿರೂಪೇಣ ತಸ್ಮೈ ಜಂಗಮಾತ್ಮನೇನಮಃ ॥"

ಎಲ್ಲ ಜನರನ್ನು ಉದ್ಧರಿಸುವದಕ್ಕೆ (ಷಟ್‌ಸ್ಥಲಜ್ಞಾನವನ್ನು ದಯಪಾಲಿಸಿ ಶಿವಕೈವಲ್ಯವನ್ನು ಕರುಣಿಸುವದಕ್ಕೆ) ಯಾವ ದೇವರಾದ ಪರಮೇಶ್ವರನು, ಮನುಷ್ಯರೂಪದಿಂದ ಚರಿಸುವನೋ ಅವನೇ ಜಂಗಮನು! ಅವನಿಗೆ ನಮಸ್ಕಾರವು. ಇದರಿಂದ ಜಂಗಮನು ನರರೂಪಿಯಾಗಿದ್ದರೂ ಆತನ ವ್ಯಾಪಾರಗಳೆಲ್ಲ ಶಿವನಂತೆಯೇ ನಡೆಯುತ್ತಿರುವದೆಂಬುದು ಸ್ಪಷ್ಟವಾಗುತ್ತದೆ.

ಸಿದ್ಧಾಂತ ಶಿಖಾಮಣಿಯಲ್ಲಿ ಜಂಗಮನ ಲಕ್ಷಣವನ್ನು ಹೀಗೆ ಹೇಳಿದ್ದಾರೆ:— ೧ ಆಣವಾದಿಮಲ ಸಂಬಂಧರಹಿತನು ೨ ದೃಶ್ಯಚರಾಚರ ಜಗತ್ತನ್ನು ಚಿತ್ಕ್ರಿಯಾಸ್ವರೂಪದಿಂದ ಕಾಣುವವನು. ೩ ಘೋರ ಸಂಸಾರವನ್ನು ನಾಶಮಾಡುವ ಶಿವಜ್ಞಾನವೆಂಬ ಮಹಾಪ್ರಕಾಶಪಡೆದವನು. ೪ ಕಾಮಕ್ರೋಧಾದಿ ಅರಿ ನಿಕರವನ್ನು ಜಯಿಸಿದವನು. ೫ ಕನಕವನ್ನು ಕಲ್ಲು-ಮಣ್ಣುಹೆಂಟೆಗಳಂತೆ ಭಾವಿಸುವವನು. ೬ ಸತ್ಪುರುಷನು. ೭ ಶತ್ರುಮಿತ್ರರನ್ನು ಸರಿಯಾಗಿ ಕಾಣುವವನು. ೮ ಆಶಾಅಹಂಕಾರಗಳಿಲ್ಲದವನು. ೯ ಅಸಾಮಾನ್ಯ ಶಿವಜ್ಞಾನ ಶಿವಚಿಂತನ ತತ್ಪರನು. ೧೦ ತನ್ನ

---

ಲಿಕ್ಕೆ ಈ ವರ್ಗವು ಸಿದ್ಧವಿರುವದೇ? ಇದೆಲ್ಲ ಛವಿಗಳ ಗೌಡಬಂಗಾಲ! ಅರಿಯದ ಲೌಕಿಕರನ್ನು ಮೋಸಗೊಳಿಸುವ ಕೌಶಲ್ಯ! ಇನ್ನು ಇದನ್ನು ಸಾಕು ಮಾಡಬೇಕು. ವಿಷಮಾತನದಲ್ಲಿ ಮುಣುಮುಣಿಗಿ ಏಳುವ ಅಯ್ಯಗಳಿಗೆ ಹೀಗೆ ಹೇಳಿಕೊಳ್ಳುವದು ಶೋಭಿಸುವದೇ?

ಪಾದಧೂಳಿ ಸೋಂಕಿದ ಸ್ಥಾನವನ್ನು ಪುಣ್ಯಕ್ಷೇತ್ರವಾಗಿ ಮಾಡುವವನು. ೧೧ ಭಕ್ತರಿಗೆ ತನ್ನ ದರ್ಶನದಿಂದ ಸಕಲಸಿದ್ಧಿಗಳನ್ನು ಸ್ಪರ್ಶನದಿಂದ ಪಾಪ ವಿಮೋಚನೆಯನ್ನು ಪೂಜೆಯಿಂದ ಮುಕ್ತಿಯನ್ನು ಒದಗಿಸುವವನು. ಇಷ್ಟೊಂದು ಮಹಿಮೆಗೆ ಇಂಬಾದವನೇ ಜಂಗಮನು. ಇಂತಹ ಜಂಗಮರು ಆದಾರಿಗೆ ಬೇಡಾಗುವರು!

ಇನ್ನು ವಚನಕಾರರು ಬಿತ್ತರಿಸಿದ ಜಂಗಮರ ಸ್ವರೂಪವನ್ನು ನೋಡಿರಿ:—

(೧) "ತೆರಹಿಲ್ಲದ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ಸಂಭಾಷಣೆ ಸುಖ, ತೆರಹಿಲ್ಲದ ನಂಬುಗೆ, ತೆರಹಿಲ್ಲದ ಸ್ವಾನುಭಾವ ಸುಖ, ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ, ಕೂಡಲಸಂಗಮದೇವಾ ನಿಮ್ಮ ಶರಣರಿಗೆ"

ತೆರಹಿಲ್ಲದೆ ಎಲ್ಲೆಡೆಯಲ್ಲಿಯೂ ಒಳಗೆಹೊರಗೆ ಸಹ-ಗಗನಸದೃಶವಾಗಿ ವ್ಯಾಪಿಸಿದ ವಸ್ತುವೆಂದರೆ ಲಿಂಗವು. ಆದುದರಿಂದ ತೆರಹಿಲ್ಲದೆ ನಡೆಯೆಂದರೆ ಲಿಂಗದ ನಡೆಯು. ಇದರಂತೆಯೇ ನುಡಿ, ಸಂಭಾಷಣೆಯ ಸುಖ, ನಂಬುಗೆ, ಸ್ವಾನುಭಾವಸುಖ, ಮಹಿಮೆ, ವಿಚಾರ ಮುಂತಾದವುಗಳೆಲ್ಲ ಲಿಂಗದವೇ ಇರಬೇಕು. ಇದು ಕೂಡಲಸಂಗಮದೇವಾ ನಿಮ್ಮ ಶರಣರಿಗೆ ಮಾತ್ರ ಸಾಧ್ಯವು; ಎಂದು ಬಸವಣ್ಣನವರು ನುಡಿದಿದ್ದಾರೆ. ಇದರಿಂದ ಜಂಗಮನ ಆಚರಣೆಗಳೆಲ್ಲ ಕೇವಲ ಲಿಂಗದ ಆಚರಣೆಗಳೇ ಆಗಿರತಕ್ಕದ್ದೆಂದು ಒಡೆದುಕಾಣುತ್ತದೆ. [ಶರಣ = ಜಂಗಮ]

(೨) "ಜನನ ಮರಣ ದೇಹಧರ್ಮಕ್ಕಲ್ಲದೆ ಜಂಗಮಕ್ಕೆಲ್ಲಿಯದೋ? ಕ್ಷುಧಾತೃಷೆ ಪ್ರಾಣ ಧರ್ಮವಲ್ಲದೆ ಜಂಗಮಕ್ಕೆಲ್ಲಿಯದೋ? ಸುಖದುಃಖ ಮನೋಧರ್ಮವಲ್ಲದೆ ಜಂಗಮಕ್ಕೆಲ್ಲಿಯದೋ? ಜ್ಞಾನಾಜ್ಞಾನಂಗಳು ಮುಮುಕ್ಷುವಿಂಗಲ್ಲದೆ ನಿಮ್ಮಲ್ಲಿ ಸಮರಸವಾದ ಸಚ್ಚಿದಾನಂದ ಶಿವಯೋಗಿ ಜಂಗಮಕ್ಕೆಲ್ಲಿಯದೋ? ಕಪಿಲಸಿದ್ಧಮಲ್ಲಿಕಾರ್ಜುನಾ"

ಜಂಗಮನು ಈ ಷಡೂರ್ಮಿಗಳ ವಿಕಾರವಿಲ್ಲದವನಾಗಿರಬೇಕು; ಎಂದು ಈ ವಚನದಲ್ಲಿ ಹೇಳಿರುತ್ತದೆ. ಇವು ದೇಹ ಪ್ರಾಣ ಮನಗಳಿಗೆ ಸಂಬಂಧಿಸಿದಂತಹವು. ಆದರೆ ಜಂಗಮನು ಕೇವಲ ಆತ್ಮ(ಪರಮಾತ್ಮ) ಸ್ವರೂಪನಾಗಿರುವದರಿಂದ, ಅವನು ದೇಹ ಪ್ರಾಣ ಮನಗಳ ಬಾಧೆಗಳಿಂದ ಮುಕ್ತನಾಗಿರುವನು.

(೩) "ನಿಂದಿಸಿದಲ್ಲಿ ಕುಂದುವನಲ್ಲ ಜಂಗಮನು. ವಂದಿಸಿದಲ್ಲಿ ಆನಂದಮಯನಲ್ಲ ಜಂಗಮನು ಬಂದ ಉಪಚಾರದಲ್ಲಿ ಸಂದುಗೊಳ್ಳುವನಲ್ಲ ಜಂಗಮನು. ಬಂದಲ್ಲಿ ನೀಡದಿರೆ ಕ್ರೋಧನಲ್ಲ ಜಂಗಮನು. ಇಂದುಧರ ಕಪಿಲಸಿದ್ಧಮಲ್ಲಿನೆಂಬೆ ಇಂತಪ್ಪ ಜಂಗಮನು"

ಜನರ ನಿಂದೆವಂದನೆಗಳನ್ನು ಜಂಗಮನು ಸಮನಾಗಿಯೇ ಭಾವಿಸುವನು. ಅವುಗಳ ಪರಿಣಾಮಕ್ಕೆ ಅವನು ಲೌಕಿಕರಂತೆ ಒಳಗಾಗುವವನಲ್ಲ. ಇದೇ ಮೇರೆಗೆ ಯಾವ ದ್ವಂದ್ವಕ್ಕೂ (ಸುಖದುಃಖ, ಲಾಭಹಾನಿ, ಮಾನಾಪಮಾನ, ಜಯಾಜಯ ಇತ್ಯಾದಿಗಳಿಗೆ) ಆಶ್ರಯಕೊಡುವವನಲ್ಲ. ಬಂದುದನ್ನೆಲ್ಲ ಶಿವಪ್ರಸಾದವೆಂದೇ ಆನಂದದಿಂದ ಅನುಭೋಗಿಸತಕ್ಕವನು. ತನಗೆ ಭಿಕ್ಷೆಯನಿಕ್ಕದಿದ್ದರೂ ಸಹ ಆತನ ಶಾಂತತೆಯು ಸ್ಥಿರವಾಗಿಯೇ ಇರುವದು. ಇಂತಹರನ್ನು ಪ್ರತ್ಯಕ್ಷ ಕಪಿಲಸಿದ್ಧಮಲ್ಲನೆಂಬನೆಂದು ಶ್ರೀ ಸಿದ್ಧರಾಮೇಶ್ವರರು ನುಡಿದಿದಾರೆ.

(೪) "ಪರನಾರಿಯರ ನೋಡುವಲ್ಲಿ ಅಂಧಕನಾಗಿಪ್ಪನೋಡಾ ಜಂಗಮನು ಪರಧನವ ಕಂಡಲ್ಲಿ ಹುಲಿಯ ಕಂಡ ಹುಲ್ಲೆಯಂತೆ ಭೀತಿಪಡುವನೋಡಾ ಜಂಗಮನು. ದುರ್ಜನರೊಳು ಸಂಭಾಷಣೆಯ ಮಾಡುವಲ್ಲಿ ಅತಿಮುಗ್ಧನಾಗಿಪ್ಪನೋಡಾ ಜಂಗಮನು. ದುಷ್ಕರ್ಮ ಪಥದೊಳು ಚರಿಸುವಲ್ಲಿ ಕಡುಜಡಪೆಳವನಾಗಿಪ್ಪನೋಡಾ ಜಂಗಮನು. ವಿಷಯಗಳೊಳು ನಿಷ್ಕರುಣಿಯಾಗಿಪ್ಪನೋಡಾ ಜಂಗಮನು. ಶಿವನಿಂದಕರ ಸ್ವರಗೇಳುವಲ್ಲಿ ಅತಿಬಧಿರನಾಗಿಪ್ಪನೋಡಾ ಜಂಗಮನು. ದುರಾತ್ಮರ್ಗೆ ಜ್ಞಾನದ್ರವ್ಯವಕೊಡುವಲ್ಲಿ ಲೋಭಿಯಾಗಿಪ್ಪನೋಡಾ ಜಂಗಮನು. ಕಪಿಲಸಿದ್ಧಮಲ್ಲಿಕಾರ್ಜುನಾ"

ಜಂಗಮನು ಅದೆಷ್ಟು ಪರಿಶುದ್ಧಭಾವಿಯಾಗಿರಬೇಕೆಂಬುದು, ಇದರಿಂದ ಒಳಿತಾಗಿ ವಿದಿತವಾಗುತ್ತದೆ. ಇವೆಲ್ಲ ನಿಜಜಂಗಮನ ಸ್ವರೂಪವನ್ನು ವ್ಯಕ್ತಗೊಳಿಸುತ್ತವೆ. ಇನ್ನು ಡಾಂಭಿಕ ಜಂಗಮರನ್ನು ಕುರಿತು ಶಿವಶರಣರು ಹೊರಡಿಸಿದ ಉದ್ಗಾರಗಳನ್ನು ತುಸು ಕೇಳಿರಿ!

(೫) "ತನು ಬತ್ತಲೆ ಇದ್ದರೇನು? ಮನ ಬತ್ತಲೆಯಾಗದನ್ನಕ್ಕರ! ಮಂಡೆ ಬೋಳಾದರೇನು? ಭಾವ ಬೋಳಾಗದನ್ನಕ್ಕರ! ಭಸ್ಮ ಪೂಸಿದರೇನು? ಕರಣಾದಿ ಗುಣಂಗಳ ಸುಡದನ್ನಕ್ಕರ! ಇಂತೀ ಆಶೆಯ ವೇಷದ ಭಾಷೆಗೆ ಗುಹೇಶ್ವರಾ ನೀ ಸಾಕ್ಷಿಯಾಗಿ ಛೀ ಎಂದು ಅತಿಗಳೆವೆನವರ"

(೬) "ಕಾಯಕ ಕಾರದೆ (ಕಾಯಕವ ಮಾಡಲಾರದೆ) ವೈಸೊಂಬ ತನದಿಂದ ಕೇರಿ ಕೋಗಳಿಸಲರಿಯದೆ ಹಸಿದಿಪ್ಪರಯ್ಯಾ. ಉಡಲು ಸೀರೆಯು (ಬಟ್ಟೆಯು) ಗಳಿಸಲಾರದೆ ಕಚ್ಚುಟವ ಕಟ್ಟಿಕೊಂಡಿಪ್ಪರಯ್ಯಾ. ಮಿಯಲೆಣ್ಣೆಯುಗಳಿಸಲಾರದೆ ಮಂಡೆ ಬೋಳಾಗಿಪ್ಪರಯ್ಯಾ. ಅವಂಗೆ ನಾನಂಜುವೆನಯ್ಯಾ ಸಕಳೇಶ್ವರಾ"

(೭) "ಘಾತುಗೆಟ್ಟ ಬೋಳಾದಡೇನು ನಿಜವನೈದಬಲ್ಲುದೇ ಅಯ್ಯಾ. ವಿಕೃತ ವೇಷವ ಧರಿಸಿ ಉದರಪೊರೆವ ವೇಷಕ್ಕೆಂತಯ್ಯಾ। ಉಪಾಧಿವಿಡಿದು ಮಾಡುವ ಷೋಡಶ ಕ್ರಿ ಸಕಳೇಶ್ವರದೇವಂಗೆ ದೂರವಯ್ಯಾ॥

ಈ ಮೇಲೆ ಕೊಟ್ಟ ಗುರು ಜಂಗಮರ ವಿವರಣದಿಂದ ಅವರ ವಿಷಯವಾಗಿ ಲಿಂಗಾಯತರಲ್ಲಿ ನಿಜವಾದ ಕಲ್ಪನೆ ಏನಿರುವದೆಂಬದು ತಾನೇ ಹೊಳೆಯುವದು. ಭವಿಗಳಂತೆ ಗುರು ಜಂಗಮತ್ವಗಳನ್ನು ವೀರ ಶೈವರಲ್ಲಿ ಒಂದು ವರ್ಗಕ್ಕೆ ಇಲ್ಲವೆ ವ್ಯಕ್ತಿಗೆ ಗುತ್ತಿಗೆಯಿಂದ ಒಪ್ಪಿಸಿರುವದಿಲ್ಲ. ತಕ್ಕ ಗುಣಕರ್ಮಯುಕ್ತರಾದವರಿಗೆಲ್ಲ ಅದು ಸ್ವಾಭಾವಿಕವಾಗಿಯೇ ಪ್ರಾಪ್ತವಾಗುವದು. ಇನ್ನು ತಮ್ಮ ಒಲವಿಗನುಸರಿಸಿ ಯಾರು ಮಾಡಬಹುದು ಯಾರು ಬಿಡಬಹುದು ಇಷ್ಟೇ. ಅದರಂತೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ವಿವೇಕಕ್ಕೆ ತೋರಿದಂತೆ ತನ್ನ ಇಷ್ಟಾನುಸಾರ ಬೇಕಾದ ಸತ್ಪುರುಷನನ್ನು ಗುರುವಾಗಿ ಸ್ವೀಕರಿಸಲೂ ಸ್ವತಂತ್ರನಿರುವನು. ಆದಾಗ್ಯೂ ಸಮಾಜದಲ್ಲಿ ಒಂದು ವ್ಯವಸ್ಥೆ ಇರುವದು ಲೇಸೆಂದು ಬಗೆದು, ಅಲ್ಲಲ್ಲಿ ಗುರು ಜಂಗಮರ ಮಠಗಳು ಪ್ರಸ್ಥಾಪಿತವಾಗಿರುತ್ತವೆ. ಸಮಾಜೋದ್ಧಾರದ ಹೊಣೆಯನ್ನು ಈ ಮಠಗಳು ಹೊತ್ತಿರುವವು. [ಈಗ ಆ ಹೊಣೆಯನ್ನು ಆ ಮಠಗಳು ಅದು ಹೇಗೆ ನಿರ್ವಹಿಸುತ್ತಿರುವವೆಂಬದನ್ನು ಎಲ್ಲರೂ ನೋಡೇ ನೋಡುತ್ತಿರುವರು. ಇರಲಿ.] ಒಂದು ವೇಳೆ ಕಾರಣಾಂತರದಿಂದ ಯಾವದೊಂದು ಸಂಸ್ಕಾರ ಕಾಲದಲ್ಲಿ ಅವರು ಒದಗದಿದ್ದರೆ, ಬೇರೆ ಯೋಗ್ಯರಾದ ಸಾಮಾನ್ಯ ವರ್ಗದವರಿಂದ ಅದನ್ನು ಸಾಂಗಗೊಳಿಸಿಕೊಳ್ಳಲು ಶಾಸ್ತ್ರ ಪ್ರತಿಬಂಧವಿಲ್ಲ. ಅದು ಯೋಗ್ಯ ರೀತಿಯಿಂದ ಶಿವಮಾರ್ಗಾನುಸಾರವಾಗಿ ನೆರವೇರಿತೋ ಇಲ್ಲವೋ ಎಂಬುದಿಷ್ಟೇ ಮುಖ್ಯ ಮಾತಾಗಿರುವದು. ಆ ಗುರು ಜಂಗಮತ್ವದ ಯೋಗ್ಯತೆಯು ಮುಖ್ಯವಾಗಿ ಕೆಳಗಿನ ನಾಲ್ಕು ನಿಯಮಗಳನ್ನು ಅವಲಂಬಿಸಿರುತ್ತದೆಂದು ಹೇಳಬಹುದು. ಅವು:—

೧. ಷಟ್ಸ್ಥಲ ಮಾರ್ಗದಲ್ಲಿ ಪ್ರಗತಿಯನ್ನು ಪಡೆದು ತಾವು ವಹಿಸಿಕೊಂಡ ಕಾರ್ಯಕ್ಕೆ ಸಾಕಷ್ಟು ಜ್ಞಾನ ಕ್ರಿಯಾಚರಣೆಗಳನ್ನು ಸಂಪಾದಿಸಿರಬೇಕು.

೨. ಸ್ವಾರ್ಥತ್ಯಾಗಪೂರ್ವಕವಾಗಿ ಸ್ವಯಂ ಸ್ಫೂರ್ತಿಯಿಂದ ಸಮಾಜೋದ್ಧಾರ ಕಾರ್ಯವನ್ನು ಮಾಡಬೇಕೆಂಬ ಲವಲವಿಕೆಯುಳ್ಳವನಾಗಿರಬೇಕು.

೩. ತಾವು ಹೊತ್ತ ಈ ಸಾಮಾಜಿಕ ಹೊಣೆಯನ್ನು ಬಲು ದಕ್ಷತೆಯಿಂದ ಜರಗಿಸಿ ಪರಿಣಾಮಕಾರಕವಾದ ಯಶಸ್ಸು ಪಡೆಯಲಿಕ್ಕೆ ಸತತ ಪ್ರಯತ್ನಿಸುತ್ತಿರಬೇಕು.

೪. ತಮ್ಮ ಸ್ವಂತ ಭಕ್ತತ್ವದ ಪ್ರಗತಿಯನ್ನು ಕೊನೆಗಾಣಿಸುವದರ ಕಡೆಗೆ ಪೂರ್ಣ ಎಚ್ಚರುಳ್ಳವರಾಗಿ, ತದನುಸಾರ ವರ್ತಿಸಿ ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕು.

ಗುರುಗಳು ಶಿಷ್ಯರಲ್ಲಿ ತಾವು ಮಾಡತಕ್ಕ ಸಂಸ್ಕಾರಾದಿ ಯಾವ ಕಾರ್ಯಕ್ಕೂ ಪ್ರತಿಫಲವನ್ನು (ಹಣ ಮುಂತಾದುದನ್ನು) ಎಂದೂ ಬಯಸಬಾರದು. ಕೇವಲ ನಿರಪೇಕ್ಷ ಬುದ್ಧಿಯಿಂದಲೇ ತಮ್ಮ ಕರ್ತವ್ಯವೆಂದು ಅದನ್ನು ಆನಂದದಿಂದ ಜರುಗಿಸಬೇಕು. ಯಾರಾದರೂ ಭಕ್ತಿಯಿಂದ ತಾವಾಗಿಯೇ ಅರ್ಪಿಸಿದರೆ ಅದನ್ನು ತಕ್ಕೊಳ್ಳಬಹುದು. ಅದು ಮಠದಲ್ಲಿ ನಡೆಯುವ ಶಿವಶರಣರ ಪುರಾತನ ಪುರಾಣ ಕೀರ್ತನಾದಿಗಳನ್ನು ನಡೆಯಿಸಲಿಕ್ಕೂ, ಮಠಗಳನ್ನು ಸರಿಪಡಿಸಲಿಕ್ಕೂ ಉಪಯೋಗಿಸಲ್ಪಡಬೇಕು. ಅದರಂತೆ ಮಠಕ್ಕೆ ಬರಹೋಗುವ ಅತಿಥಿ ಅಭ್ಯಾಗತರ ಆದರೋಪಚಾರಕ್ಕೂ ಅದರ ಕೆಲವು ಭಾಗವು ವಿನಿಯೋಗಿಸಲ್ಪಡಬೇಕು. ಮತ್ತು ಉಳಿದರೆ ಸಾರ್ವಜನಿಕ ಸಂಸ್ಥೆಗಳಿಗೆ ಸಹಾಯ ಸಲ್ಲಿಸಬೇಕು. ಶಕ್ಯವಿದ್ದರೆ ತಾವು ಅಂತಹ ಸ್ವತಂತ್ರ ಸಂಸ್ಥೆಗಳನ್ನೂ ನಡಿಸಬೇಕು.

(ಮುಂದೊರಿದಿದೆ.)

ಲ್ಲೆಲ್ಲ ಸ್ಥಾಪಿಸಿ ಶಿವಾನುಭವವು ನಡೆಯುವಂತೆ ಮಾಡಿದರು. ಇದು ಈ ಕಾಲದ ವೈಶಿಷ್ಟ್ಯವು. ಮಠಗಳು ಆರಂಭದಲ್ಲಿ ಉತ್ತರ ಕರ್ನಾಟಕದಲ್ಲಿ ಪಸರಿಸುತ್ತ ಮುಂದೆ ಅವು ಕ್ರಮೇಣ ಮೈಸೂರು ಸೀಮೆಯ ಉತ್ತರ ಪಶ್ಚಿಮ ಭಾಗಗಳನ್ನು ವ್ಯಾಪಿಸಿದವು. ಈ ಮಠಾಧಿಪತಿಗಳು ತಮ್ಮ ಧರ್ಮಪ್ರಸಾರ ಕಾರ್ಯದಲ್ಲಿ ಶಿವಶರಣರ ನುಡಿಗಳಂತೆ ನಡೆದು ಯಾವ ತರದ ಜಾತಿಭೇದವನ್ನಿಡದೆ ವಿಶಾಲಹೃದಯಿಗಳಾಗಿ ನಡೆದರು. ಆದ್ದರಿಂದಲೇ ಅವರ ಶಿಷ್ಯವರ್ಗಗಳಲ್ಲಿ ಒಕ್ಕಲಿಗರು, ನೇಕಾರರು, ಬಣಜಿಗರು ಮೊದಲಾದ ಎಲ್ಲ ಸಂಗಡದವರಿರುತ್ತಾರೆ. ಒಂದುವೇಳೆ ಅವರು ಬಸವಾದಿ ಪ್ರಮಥರ ವಿಚಾರಗಳಂತೆ ನರ್ತಿಸದೆ ಇದ್ದಿದ್ದರೆ ಮತ್ತು ಚಾತುರ್ವರ್ಣದ ಗೊಂದಲಗಳಲ್ಲಿ ಬಿದ್ದು ಆಕುಂಚಿತ ವೃತ್ತಿಯವರಾಗಿದ್ದರೆ ವೀರಶೈವ ಧರ್ಮವು ದೇಶದಲ್ಲಿ ಎಂದೂ ಪ್ರಸಾರವಾಗುತ್ತಿದ್ದಿಲ್ಲ.

ಈ ಶತಮಾನದಲ್ಲಿ ಷಟ್ಸ್ಥಲ ಸಿದ್ಧಾಂತವು ಪೂರ್ಣಾವಸ್ಥೆಯನ್ನು ಹೊಂದಿತು. ಅದರಲ್ಲಿ ಕರಣಹಸಿಗೆ, ಮಂತ್ರಗೋಪ್ಯ, ಘಟಚಕ್ರ, ಸೃಷ್ಟಿಲಯಗಳ ಕ್ರಮಗಳು, ಷಟ್ಸ್ಥಲಗಳು, ಷಟ್ಸ್ಥಲದ ಅನೇಕ ಅಂಗೋಪಾಂಗಗಳು, ಸಕೀಲಗಳು, ನೂರೊಂದು ಸ್ಥಲಗಳು, ಅಷ್ಟಾವರಣಗಳು, ಇವೇ ಮೊದಲಾದ ವಿಭಾಗಗಳಿರುತ್ತವೆ. ಇವುಗಳಲ್ಲಿ ಹೊಸ ಹೊಸ ಸಂಶೋಧನಗಳುಂಟಾದವು. ಹೊಸ ವಿಚಾರಗಳು ಹೊರಗೆಡವಲ್ಪಟ್ಟವು. ಈ ಎಲ್ಲ ವಿಷಯಗಳ ಮೇಲೆ ಅನೇಕ ವಚನ ಗ್ರಂಥಗಳು ಬಸವೇಶ್ವರನ ಕಾಲದಲ್ಲೂ ಅವನ ಈಚೆಯ ಕಾಲದಲ್ಲೂ ರಚಿಸಲ್ಪಟ್ಟವು. ಅವುಗಳಲ್ಲಿ ಕೆಲವು ಮಾತ್ರ ನಮಗೆ ಈಗ ಉಪಲಬ್ಧವಿವೆ. ಉಳಿದವುಗಳು ಇನ್ನೂ ಸಂಶೋಧಿತವಾಗಿಲ್ಲ. ಅಥವಾ ಅವು ದೀರ್ಘ ಕಾಲದಲ್ಲಿ ನಾಶ ಹೊಂದಿರಬಹುದು. ಆದರೆ ಅವುಗಳ ತತ್ವಗಳು ಬಹುಜನ ಸಮಾಜವನ್ನು ಬಲವಾಗಿ ಆಕರ್ಷಿಸಿದವು. ಅವುಗಳನ್ನು ಪ್ರತಿಪಾದಿಸುವ ವಚನಕಾರರು ಕರ್ನಾಟಕದಲ್ಲಿಯ ಪ್ರತಿಯೊಂದು ಸಣ್ಣ ದೊಡ್ಡ ಸಮಾಜಗಳಲ್ಲಿ ಆಗಿಹೋದರು. ಈ ಕಾಲಕ್ಕೆಯೇ ಅನೇಕ ವೀರಶೈವ ವಿದ್ವಾಂಸರು ಉದ್ಭವಿಸಿ ಸಂಸ್ಕೃತದಲ್ಲಿ ಕೂಡ ಧರ್ಮಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿಯಾದರೂ ವಚನಕಾರರ ವಿಚಾರಗಳೇ ನಿರೂಪಿಸಲ್ಪಟ್ಟಿರುತ್ತವೆ. ಶಿವಶರಣರ ವಿಚಾರಗಳು ಕನ್ನಡದಲ್ಲಿದ್ದುದರಿಂದ ಪರಪ್ರಾಂತಗಳಲ್ಲಿ ಅವುಗಳನ್ನು ಪ್ರಸಾರ ಮಾಡುವ ಉದ್ದಿಷ್ಯವಾಗಿಯೇ ಸಂಸ್ಕೃತ ಗ್ರಂಥಗಳು ಈ ಕಾಲದಲ್ಲಿ ನಿರ್ಮಾಣವಾಗಿರಬೇಕೆಂದು ತೋರುತ್ತದೆ.

ಈ ಪ್ರಕಾರ ಶಿವಶರಣರ ತತ್ವಗಳು ದೇಶದಲ್ಲಿ ಪ್ರಸಾರವಾದ ಹಾಗೆ ಕರ್ನಾಟಕದಲ್ಲಿ ಮೊದಲು ರೂಢವಾಗಿದ್ದ ಮತಗಳ ಅನುಯಾಯಿಗಳು ವೀರಶೈವ ಮತವನ್ನು ಭರದಿಂದ ಅನುಸರಿಸುವವರಾದರು. ಆಗ ಕರ್ನಾಟಕದಲ್ಲಿ ಪಾಶುಪತರೂ ಕಾಳಾಮುಖರೂ ಶಾಕ್ತರೂ ಸಿದ್ಧರೂ ಅಲ್ಲದೆ ಅನೇಕ ವಿಧ ಶೈವರೂ ಇದ್ದು ಇವರ ಸಂಖ್ಯೆಯು ಬಹಳ ದೊಡ್ಡದಾಗಿತ್ತು. ಇಲ್ಲಿಯು ಶಿವಾಲಯಗಳಲ್ಲಿ ಬಹುತರವಾಗಿ ಕಾಳಾಮುಖರೇ ಅರ್ಚಕರಾಗಿದ್ದರು. ಮಹೇಶ್ವರರಲ್ಲಿಯೂ ಜಂಗಮರಲ್ಲಿಯೂ ಕೂಡ ಅನೇಕ ತರದ ಭೇದಗಳುಂಟಾಗಿದ್ದುವು. ಅವರು ತಮ್ಮ ಅಂಗದ ಮೇಲೆ ಅನೇಕ ಬಗೆಯಾಗಿ ಲಿಂಗಧಾರಣ ಮಾಡಿಕೊಂಡು ವಿಶಿಷ್ಟಾಚರಣೆಯುಳ್ಳವರೂ ಸಿದ್ಧಿಗೋಸ್ಕರ ಸಾಧನಗಳು ಹಾಗು ಅನೇಕ ತರದ ಧರ್ಮಪದ್ಧತಿಗಳನ್ನು ಅನುಸರಿಸುವವರೂ ಆಗಿದ್ದರು. ಆದರೆ ಶಿವಶರಣರ ವಚನಗಳ ಪ್ರಸಾರದ ಮೂಲಕ ದೇಶದಲ್ಲಿಯು ಇಂಥ ಪಂಗಡಗಳ ಅನುಯಾಯಿಗಳೆಲ್ಲ ವೀರಶೈವ ಧರ್ಮವನ್ನು ಸ್ವೀಕರಿಸುವವರಾದರು. ಆರಂಭದಲ್ಲಿ ಈ ಚಳವಳಿಯು ಬಸವೇಶ್ವರನ ಕಾಲಕ್ಕೆ ಬಹು ಭರದಿಂದ ನಡೆದು ಅದು ಮುಂದೆಯೂ ೧೦೦-೧೫೦ ವರ್ಷಗಳ ವರೆಗೆ ಸಾಗಿತೆಂದು ತೋರುತ್ತದೆ. ಇದರಿಂದ ಇಡೀ ಕರ್ನಾಟಕದಲ್ಲಿ ವೀರಶೈವ ಮತವು ಬಹು ದಟ್ಟವಾಗಿ ಹಬ್ಬಿತು.

ಶಿವಶರಣರು ತಮ್ಮ ತತ್ವಗಳನ್ನು ಪ್ರಸಾರ ಮಾಡುವ ಕಾರ್ಯದಲ್ಲಿ ಯಾರನ್ನೂ ಹಿಂಸಿಸಿಲ್ಲ. ಅವರು ಆಚಾರ, ನೀತಿಗಳನ್ನು ವೃದ್ಧಿಗೊಳಿಸಲು ಬಹಳ ಪ್ರಯತ್ನಿಸಿದ್ದಾರೆ. ಅವರು ದ್ವೈತಾದ್ವೈತದ ಬಗ್ಗೆ ಕೇವಲ ಆಧ್ಯಾತ್ಮಿಕ ಬಡಿದಾಟಗಳನ್ನೆಬ್ಬಿಸಿಲ್ಲ. ಅವರು ಕೇವಲ ಸಮಾಜ ಸುಧಾರಕರಾಗಿದ್ದಾರೆ, ಅವರು ಇತರ ಸಮಾಜಗಳನ್ನು ಮುಖ್ಯವಾಗಿ ಜೈನರನ್ನು ಬಹಳ ಹಿಂಸಿಸಿದರೆಂತಲೂ ಇದರ ಪರಿಣಾಮವಾಗಿ ಜೈನ ವಾಙ್ಮಯವು ನಿಂತುಹೋಯಿತೆಂತಲೂ ಬಹುಜನರಲ್ಲಿ ತಿಳುವಳಿಕೆ ಇದೆ. ಆದರೆ ಕರ್ನಾಟಕ ವಾಙ್ಮಯದ ಇತಿಹಾಸವನ್ನು ಪರೀಕ್ಷಿಸಿದಲ್ಲಿ ಇದು ತಪ್ಪು ತಿಳುವಳಿಕೆಯೆಂದು ನಮಗೆ ತೋರುತ್ತದೆ. ಯಾಕಂದರೆ ಪ್ರಸಿದ್ಧ ಜೈನಗ್ರಂಥಕಾರರೂ ಕವಿಗಳೂ ಬಸವೇಶ್ವರನ ತರುವಾಯ ಅಂದರೆ ೧೨ನೇ ೧೩ನೇ ಶತಮಾನಗಳಲ್ಲಿಯೇ ಆಗಿಹೋಗಿದ್ದಾರೆ. ಒಂದು ವೇಳೆ ವೀರಶೈವರು ಜೈನ ಸಮಾಜದ ಮೇಲೆ ಬಲಾತ್ಕಾರ ಮಾಡಿ

ದ್ದರೆ ಈ ಕಾಲದಲ್ಲಿ ಜೈನ ವಾಙ್ಮಯವು ಹೀಗೆ ಬೆಳೆಯುತ್ತಿದ್ದಿಲ್ಲ. ವಾಚಕರು ನಾವು ಇಲ್ಲಿ ಕಾಣಿಸುವ ಪ್ರಸಿದ್ಧ ಜೈನ ಗ್ರಂಥಕಾರರ ಪಟ್ಟಿಯನ್ನೂ ಅವರಿದ್ದ ಕಾಲವನ್ನೂ ಲಕ್ಷಿಸಿದಲ್ಲಿ ಈ ಸಂಗತಿಯು ನಿಜತ್ವವು ಕಂಡು ಬರುವದು.

ಕಾವ್ಯಾವಲೋಕನವನ್ನು ಬರೆದ ನಾಗವರ್ಮನು ೧೧೪೫ರಲ್ಲಿ. ಚಾವುಂಡರಾಯನು ೧೧೫೦ರಲ್ಲಿ. ಬಾಲಚಂದ್ರನು ಇದೇ ಕಾಲದಲ್ಲಿ. ಲೀಲಾವತಿ ಮತ್ತು ನೇಮಿನಾಥ ಪುರಾಣಗಳನ್ನು ಬರೆದ ನೇಮಿಚಂದ್ರನು ೧೧೭೦ರಲ್ಲಿ. ಚಂದ್ರಪ್ರಭು ಪುರಾಣವನ್ನು ಬರೆವ ಇಂಗುಳೇಶ್ವರದ ಅಗ್ಗಳನು ೧೧೮೯ರಲ್ಲಿ. ಪಾರ್ಶ್ವನಾಥ ಪುರಾಣವನ್ನು ಬರೆದ ಪಾರ್ಶ್ವಪಂಡಿತನು ೧೨೦೫ರಲ್ಲಿ, ಮಹಾಕವಿ ಜನ್ನನು ೧೨೦೯ರಲ್ಲಿ, ಅಂಡಯ್ಯನು ೧೨೩೫ರಲ್ಲಿ, ಗುಣವರ್ಮನು ೧೨೩೫ರಲ್ಲಿ, ಕಮಲಭವನು ೧೨೩೫ರಲ್ಲಿ, ಮಲ್ಲಿಕಾರ್ಜುನನು ೧೨೪೫ರಲ್ಲಿ, ಮಹಾಬಲ ಕವಿಯು ೧೨೫೪ರಲ್ಲಿ, ಶಬ್ದಮಣಿ ದರ್ಪಣವನ್ನು ಬರೆದ ಕೇಶಿರಾಜನು ೧೨೬೦ರಲ್ಲಿ, ಕುಮುದೇಂದು ರಾಮಾಯಣವನ್ನು ಬರೆದ ಕುಮುದೇಂದುವು ೧೨೭೫ರಲ್ಲಿ ಆಗಿಹೋಗಿದ್ದಾರೆ. ಇವರೆಲ್ಲರೂ ಜೈನ ಮಹಾಕವಿಗಳು. ಕನ್ನಡ ವಾಙ್ಮಯದಲ್ಲಿ ಇವರ ಹೆಸರುಗಳು ಪ್ರಕಾಶಮಾನವಾಗಿ ಈಗಲೂ ಬೆಳಗುತ್ತವೆ. ಇವರಲ್ಲದೆ ಇನ್ನೂ ಅಸಂಖ್ಯ ಜೈನ ಗ್ರಂಥಕಾರರು ಈ ಕಾಲದಲ್ಲಿ ಆಗಿಹೋಗಿದ್ದಾರೆ. ಇದರಿಂದ ಬಸವೇಶ್ವರನ ತರುವಾಯ ಒಂದು ನೂರು ವರ್ಷಗಳ ವರೆಗೂ ಜೈನ ಗ್ರಂಥಕಾರರು ಕರ್ನಾಟಕದಲ್ಲಿ ಪ್ರಾಬಲ್ಯವನ್ನು ಹೊಂದಿದ್ದು ಕಂಡುಬರುತ್ತದೆ. ಇದರಿಂದ ಕರ್ನಾಟಕದಲ್ಲಿ ವೀರಶೈವ ಧರ್ಮವು ಸ್ವಾಭಾವಿಕವಾಗಿ ತನ್ನ ಯೋಗ್ಯತೆಯ ಮೇಲೆ ಅವಲಂಬಿಸಿ ಜನತೆಯಲ್ಲಿ ಪ್ರಸಾರವಾಗಿರುವದೇ ಹೊರತು ಬೇರೆ ಯಾವ ಸಮಾಜದ ಮೇಲೆ ಬಲಾತ್ಕಾರವನ್ನು ಮಾಡಿ ಪ್ರಸಾರ ಹೊಂದಿಲ್ಲೆಂಬುದು ಸ್ಪಷ್ಟವಾಗುತ್ತದೆ. ಈ ಕಾಲಕ್ಕೆ ಜೈನ ಸಮಾಜವು ಶ್ರೀಮಂತ ಸಮಾಜವಾಗಿತ್ತು. ಉತ್ತರ ಕರ್ನಾಟಕದ ಅನೇಕ ಸಣ್ಣ ದೊಡ್ಡ ಮಾಂಡಲಿಕರೂ ಹೊಯಿಸಳ ರಾಜರೂ ಜೈನ ಮತಾವಲಂಬಿಗಳಾಗಿದ್ದರು. ಅವರ ಉದಾರಾಶ್ರಯದಿಂದ ಅನೇಕ ಜೈನ ಗ್ರಂಥಕಾರರು ಈ ಶತಮಾನದಲ್ಲಿ ಪ್ರಸಿದ್ಧಿಗೆ ಬಂದರು. ಆದರೆ ವಚನಕಾರರು ಬಡವರು, ಕೈಕೆಲಸಮಾಡುವವರು. ಅವರು ಬಹುಜನ ಸಮಾಜದವರನ್ನು ಅವ

ಲಂಬಿಸಿದವರು. ಅವರು ರಾಜಾಶ್ರಯುವನ್ನು ಎಂದೂ ಇಚ್ಛಿಸಿಲ್ಲ. ಅವರು ಉಚ್ಚ-ನೀಚ ಭಾವವನ್ನು ದೂರೀಕರಿಸಿದ್ದರಿಂದಲೂ ತಮ್ಮ ತತ್ವಗಳನ್ನು ಸಾಮಾನ್ಯ ಜನರ ರೂಢ ಭಾಷೆಯಲ್ಲಿ ಅತ್ಯುಜ್ವಲ ರೀತಿಯಿಂದ ಬೋಧೆ ಮಾಡುತ್ತ ಬಂದಿದ್ದರಿಂದಲೂ ಅವರು ನಿರೂಪಿಸಿದ ವೀರಶೈವವು ಕರ್ನಾಟಕದಲ್ಲಿ ಬೆಳೆಯಿತು. ಮತ್ತು ಅದು ಜನತೆಯ ಧರ್ಮವಾಯಿತು.

ಈ ಪ್ರಕಾರ ಈ ಕಾಲದಲ್ಲಿ ವೀರಶೈವ ಸಮಾಜಕ್ಕೆ ಉಚ್ಚತರದ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಯು ಪ್ರಾಪ್ತವಾದದ್ದರಿಂದ ಅದಕ್ಕೆ ರಾಜಕೀಯ ಮಹತ್ವವೂ ಉಂಟಾಯಿತು. ಇದು ಸ್ವಾಭಾವಿಕವಾಗಿದೆ. ಆದ್ದರಿಂದ ಅನೇಕ ಯಾದವ ರಾಜರೂ ಅವರ ಸೇನಾಪತಿಗಳೂ ಮಾಂಡಲಿಕರೂ ವೀರಶೈವ ಸಮಾಜದಲ್ಲಿದ್ದ ಆಗಿನ ಮಹತ್ವಿಕರನ್ನೂ ಪ್ರಮುಖರನ್ನೂ ಆದರಿಸುವವರಾದರು. ಹಿಂದಿನ ಪ್ರಕರಣದಲ್ಲಿ ನಾವು ಉಲ್ಲೇಖಿಸಿದ ಅನೇಕ ಉದಾಹರಣೆಗಳಿಂದ ಇದು ಸ್ಪಷ್ಟವಾಗುತ್ತದೆ. ವೀರಶೈವ ಸಮಾಜದ ಈ ವರ್ಚಸ್ಸು ಬಿಜ್ಜಳನ ರಾಜ್ಯದಲ್ಲಷ್ಟೇ ಅಲ್ಲ ಅದರ ಸುತ್ತಲಿನ ದೇಶಗಳಲ್ಲಿಯೂ ಕೂಡ ಬೆಳೆಯುತ್ತ ನಡೆಯಿತು. 'ಗಣಸಹಸ್ರ' ಈ ಗ್ರಂಥವೇ ಇದಕ್ಕೆ ಸಾಕ್ಷಿಯಾಗಿದೆ. ಅದರಲ್ಲಿ ಬರೇ ಕರ್ನಾಟಕಸ್ಥರಷ್ಟೇ ಅಲ್ಲ, ತೆಲುಗು ತಮಿಳು ದೇಶಗಳಲ್ಲಿ ಉದ್ಭವಿಸಿದ ಶಿವಶರಣರ ಹೆಸರುಗಳೂ ಕೂಡ ಕಂಡುಬರುತ್ತವೆ.

ಈ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಶೂರತನದಲ್ಲಿ ಹೆಸಗೊಂಡ ಪಂಗಡಗಳಾದ ರೆಡ್ಡಿಗಳು, ಪಂಚಮಸಾಲಿಗಳು, ಮಲವರು, ಸಾದರು ಮೊದಲಾದ ಸಮಾಜದವರು ಸೇರ್ಪಡೆಯಾದರು. ಆದ್ದರಿಂದ ಆಗಿನ ರಾಜರೂ ಮಂಡಲಾಧೀಶ್ವರರೂ ವೀರಶೈವ ಸಮಾಜಕ್ಕೆ ಬಹಳ ಮಹತ್ವ ಕೊಡುವವರಾದರು. ಬಿಜ್ಜಳನ ತರುವಾಯ ಅವನ ಪಟ್ಟದ ಸಲುವಾಗಿ ಕದನಗಳು ಏಳಲು ಅವನ ತಮ್ಮನಾದ ಕರ್ಣನು ತನಗೆ ಸಹಾಯಮಾಡಬೇಕೆಂದು ಸಿದ್ಧರಾಮೇಶ್ವರನಿಗೆ ಕೋರಿದ್ದಾನೆ. ರಾಯಮುರಾರಿ ಸೋವಿದೇವನು ಬಿಜ್ಜಳನ ತರುವಾಯ ಪಟ್ಟವೇರಲಾಗಿ ಅವನು ಮೊದಲಿನ ಕಲ್ಯಾಣದ ರಾಜಧಾನಿಯನ್ನು ಬಿಟ್ಟುಕೊಟ್ಟು ವೀರಶೈವರ ಕೇಂದ್ರಸ್ಥಾನವಾದ ಮಂಗಳವಾಡದಲ್ಲಿದ್ದುಕೊಂಡು ಕೆಲವುಕಾಲ ರಾಜ್ಯವಾಳುತ್ತಿದ್ದುದು ಕಂಡುಬರುತ್ತದೆ. ಮುಂದೆ ಅನೇಕ ಸೇನಾಪ

R. N. P. 255




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೮] ನವ್ವೆಂಬರ ೧೯೪೨. [ಸಂಚಿಕೆ ೨

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಶಿವಾನುಭವ ಅಂದರೇನು? | ಶ್ರೀ. ಸಿಂಪಿ ಲಿಂಗಣ್ಣ | ೬೨ |
| ೨ ವೀರಶೈವಧರ್ಮ ಸ್ಥಿತಿಯು ವಿಸ.ಶೇ | ಶ್ರೀ. ಜಿ. ಶಾಂತವೀರಪ್ಪ ಬೆಂಗಳೂರನಗರ | ೬೬ |
| ೩ ಬಸವೇಶ್ವರನ ಚರಿತ್ರೆ | ರಾ. ಬ. ಫ. ಗು. ಹಳಕಟ್ಟಿ ವಿಜಾಪುರ | ೭೧ |
| ೪ ಶಿವಶರಣರ ಶಿವದೀಕ್ಷಾ ಕಾಲ | ಶ್ರೀ. ಗುರುಮೂರ್ತಿದೇವರು ಶ್ರೀಶೈಲಸಂಸ್ಥಾನ | ೭೫ |
| ೫ ಲಿಂಗಧಾರಣ ಅರ್ಥಾತ್ ಶಿವದೀಕ್ಷೆ | ಶ್ರೀ. ಚೀರಗೆ ಕ. ಬಸವಪ್ಪ ಬೆಂಗಳೂರ ನಗರ | ೯೪ |
| ೬ ಲಿಂಗಧಾರಣ ಅರ್ಥಾತ್ ಶಿವದೀಕ್ಷೆ | ಶ್ರೀ. ಬಸವಪ್ಪ ಕಾಪ್ಪರಾನಹಳ್ಳಿ ಬೆಂಗಳೂರನಗರ | ೧೦೨ |
| ೭ ವೀರಶೈವ ರಾಜಮನೆತನಗಳ ಚರಿತ್ರೆಗಳು | ಸಂಪಾದಕರು | ೧೬–೨೪ |
| ೮ ಶಿವಾನುಭವ ಶಬ್ದಕೋಶ | ,, | ೧೬೫–೧೭೨ |

ವ ಮಾನವನು ಯತ್ನಿಸತಕ್ಕದ್ದು. ಸಮಾಜ ಪುರುಷನ ಅಸ್ತಿ
ಅಂಗೋಪಾಂಗಗಳನ್ನು ಸರ್ವಾಂಗ ಸುಂದರವಾಗುವಂತೆ ರಚಿಸಿ
ರಲ್ಲಿ ನೀತಿಯ ರಕ್ತ ಸಂಚಾಲನೆಯನ್ನು ಹುಟ್ಟಿಸಿದರು. ಮನಸ್ಸಿನ
ತುದಿಗೆ ಮಾತ್ರ ಸಿಲುಕುವ ಆ ಚಿತ್ಕಳೆಯನ್ನು ಅತಿ ಪ್ರಯಾಸ
ತನ್ನೊಳಗೆ ಅಳವಡಿಸಿಕೊಂಡರು. ಅದು ಸಮಾಜ ಪುರುಷನ



| | | |
|---|---|---|
| ವರ್ಷ ೧೭ | ನವ್ಹೆಂಬರ ೧೯೪೨. | ಸಂಚಿಕೆ ೨ |



# "ಶಿವಾನುಭವ" ಅಂದರೇನು ?

(ಲೇ.— ಸಿಂಪಿ ಲಿಂಗಣ್ಣ.)

ಶಿವಾನುಭವವೆಂದರೆ ಅದೊಂದು ಪತ್ರಿಕೆಯೆಂದು ಬಹು ಜನರಿಗೆ ಗೊತ್ತು. ಆದರೆ ಶಿವನೂ ಅವನ ಅನುಭವವೂ ಕಲ್ಪನಾ ಸೃಷ್ಟಿಯೊಳಗಿನ ಮಾತೇ ಎಂದು ಕಲಿತವರು ಕೈಯೆತ್ತಿ ಹೇಳುವರು. ಶಿವಾನುಭವವು ಒಂದು ಸಿದ್ಧಿಯಾಗಿದ್ದು ಅದನ್ನು ಸಾಧಿಸಿದರೆ ಅದ್ಭುತ ಶಕ್ತಿಗಳು ಲಭಿಸುವವೆಂದೂ, ಅವುಗಳಿಂದ ಸಾಮಾಜಿಕ, ರಾಜನೈತಿಕ ಕ್ರಾಂತಿಗಳನ್ನು ಸಹ ಸಾಧಿಸಬಹುದೆಂದೂ ಕೆಲವರು ನಂಬಿದಂತೆ ತೋರುತ್ತದೆ. "ಶಿವಾನುಭವ" ಪತ್ರಿಕೆಯು ೧೪ ವರುಷಗಳಿಂದ ಹೇಳುತ್ತ ಬಂದ ರಾಮಾಯಣವನ್ನೆಲ್ಲ ಕೇಳಿದರೂ ನಾವಿಂದು "ಸೀತೆ ರಾಮನಿಗೇನಾಗಬೇಕು.?" ಎಂಬ ಪ್ರಶ್ನವನ್ನು ಉಳಿಸಿಕೊಂಡೇ ಕುಳಿತಿದ್ದೇವೆ. ಆ ಪ್ರಶ್ನೆಯನ್ನು ನನ್ನ ಮಟ್ಟಿಗೆ ಹೀಗೆ ಬಿಡಿಸಿಕೊಳ್ಳಬಹುದು.—

ಶಿವಾನುಭವವೆಂದರೆ ಜೀವನು ಶಿವನನ್ನು ಅನುಭವಿಸುವುದು. ಆದರೆ ಜೀವನಿಗೆ ಶಿವನು ಎಲ್ಲಿ ಸಿಗಬೇಕು ? ಎಲ್ಲಿಯೂ ಸಿಗುವದಿಲ್ಲ; ಅದಕ್ಕಾಗಿ ಎಲ್ಲಿಗೂ ಹೋಗುವ ಕಾರಣವಿಲ್ಲ; ಯಾವನೂ ಎಲ್ಲಿಗೂ ಹೋಗಲಾರನು. ಸನ್ಯಾಸಿಯು ಸಹ ಸಂಸಾರವನ್ನು ತೊರೆದು ಹೋಗುವನೇ ಹೊರತು, ಜೀವನವನ್ನು ತೊರೆಯಲಾರನು. ಆದುದರಿಂದ ಜೀವನದಲ್ಲಿಯೇ

ಲ್ಲದೇ ? ಶಿವನು ಇರುವನೋ ? ಇಲ್ಲವೋ ? ಇರಬೇಕೋ ? ಇರಬಾರದೋ ? ಮೊದಲಾದ ಯಾವ ತೊಡುಕುಗಳ ಗೊಂದಲವೂ ನಮಗೆ ಬೇಡ. ಯಾವ ಮನಸ್ಸಿನಿಂದ ಮಾಡಿದ ಕೆಲಸಗಳು ಉಲ್ಲಾಸ ಪ್ರೇರಿತವೂ, ಉತ್ಸವ ಪೂರಿತವೂ ಆಗುವವೋ ಅಂಥ ಮನಸ್ಸು ಲಭಿಸಿದರೆ ಸಾಕು. ಅದು ಹೇಳುವಷ್ಟು ಸುಲಭವಲ್ಲವಾದರೂ ಅಂಥ ಏಕಾಗ್ರವಾದ ಮನಸ್ಸೇ ಹಿಗ್ಗಿನ ನೆಲೆ; ಆನಂದದ ಸೆಲೆ; "ಸಂಸಾರ ದಂದುಗ ಹಿಂಗಿ ಪರಮ ಸಂತೋಷದಲ್ಲಿಹುದು." ಅಲ್ಲಿ ಶಿವನಿಲ್ಲದಿದ್ದರೂ ಶಿವನ ಉಸಿರಿದೆ. ಆ ಉಸಿರಿನಲ್ಲಿ "ಎಲ್ಲರೂ ಒಂದೇ, ನಾವೆಲ್ಲರು ಒಂದೇ" ಎಂಬ ಏಕನಾದವಿದೆ. "ತತ್ರಕೋ ಮೋಹಃ ಕಶ್ಶೋಕ ಏಕತ್ವಮನು ಪಶ್ಯತೀ" ಯಂಥ ಓಪ್ಯೌಷಧೀ ಸತ್ವವಿದೆ. 'ಈಸಬೇಕು ಇದ್ದು ಜೈಸಬೇಕು' ಎನ್ನುವ ತತ್ವವಿದೆ. ನಮ್ಮ ನಿತ್ಯದ ನೂರಾರು ವ್ಯವಹಾರಗಳಿಗೆ ಆ ಉಸಿರು ತಗಲಿದರೆ ನಮ್ಮ ಜೀವನವು ಉತ್ತಮಗೊಳ್ಳುವದು; ನಮ್ಮ ಕೃತಿಗಳೆಲ್ಲ ಕಲಾರೂಪಗಳಾಗುವವು. ಕಾಯಕವು ಕೈಲಾಸವಾಗುವದು. ಆ ಮಹಾ ಉಸಿರು ನಮ್ಮ ಶರೀರದ ಕಾಲುಚಂಡನ್ನ ತುಂಬಿಕೊಂಡಾಗ ಅದೆಷ್ಟು ಉಲ್ಲಾಸ ! ಅದೆಷ್ಟು ಉತ್ಸವ ! ಅದೆಂಥ ಕಾರ್ಯಶಕ್ತಿ!! ಆಗ ಪ್ರಪಂಚವು ಕ್ರೀಡಾಂಗಣವೇ ಸೈ. ಆ ಅನುಭವವೇ ಶಿವಾನುಭವದ ಮೊದಲ ಹೆಜ್ಜೆ.

"ಸತ್ತು ಹುಟ್ಟಿ ಕೆಟ್ಟವರೆಲ್ಲರೂ ದೇವಲೋಕಕ್ಕೆ ಹೋದರೆಂಬ ಬಾಲ ಭಾಷೆಯ ಕೇಳಲಾಗದು. ಸಾಯದ ಮುನ್ನ ಸ್ವಯವನರಿದಡೆ ದೇವನೊಲಿವ ನಮ್ಮ ಗುಹೇಶ್ವರ"

ಸತ್ತಮೇಲೆ ಸಿಗಬಹುದಾದ ಸ್ವರ್ಗ ಸುಖದ ಜೀವ ವಿಮೆಯನ್ನು ಶಿವಶರಣರು ನಂಬಿಲ್ಲ. ಕುಳಿತಲ್ಲಿಯೇ ಕೈಲಾಸದ ಕಿರಣವೊಂದು ಶಕ್ಯವಾದರೆ ಬಂದು ಒಂದು ಸಣ್ಣ ಕೈಲಾಸ ಕಟ್ಟುವಂತೆ ವೈಯಕ್ತಿಕ ಈಶ್ವ

ರನಾದ ಮಾನವನನು ಯತ್ನಿಸತಕ್ಕದ್ದು. ಸಮಾಜ ಪುರುಷನ ಅಸ್ತವ್ಯಸ್ತ ಅಂಗೋಪಾಂಗಗಳನ್ನು ಸರ್ವಾಂಗ ಸುಂದರವಾಗುವಂತೆ ರಚಿಸಿ ಅದರಲ್ಲಿ ನೀತಿಯ ರಕ್ತ ಸಂಚಾಲನೆಯನ್ನು ಹುಟ್ಟಿಸಿದರು. ಮನಸ್ಸಿನ ತುಟ್ಟತುದಿಗೆ ಮಾತ್ರ ಸಿಲುಕುವ ಆ ಚಿತ್ಕಳೆಯನ್ನು ಅತಿ ಪ್ರಯಾಸದಿಂದ ತಮ್ಮೊಳಗೆ ಅಳವಡಿಸಿಕೊಂಡರು. ಅದು ಸಮಾಜ ಪುರುಷನ ಜೀವಕಳೆಯಾಯಿತು. "ಮುಗಿಲಲ್ಲಿ ಹಾರಿದರೂ ಬಾವಿಯಲ್ಲಿ ಜಂಬು"ವ ಸೌಲಭ್ಯವಿದ್ದ ಜೀವನವು ಮಾತ್ರ ಎಲ್ಲರಿಗೂ ಗ್ರಾಹ್ಯವಷ್ಟೇ!

"ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ ಬಳಗವೆಲ್ಲವನು?" ಎನ್ನುವಲ್ಲಿ ಬಳಗವನ್ನು ಕರೆದುಕೊಂಡು ತಿನ್ನಬೇಕೆಂದು ಹೇಳಿದ್ದೇ ಹೊರತು, ಒಂದಗುಳದಲ್ಲಿಯೇ ಎಲ್ಲರೂ ತೃಪ್ತರಾಗಿರಿ; ಬೇರೆ ತುತ್ತು ದೊರಕಿಸುವ ಸಾಹಸ ಬೇಡಿರೆಂದು ಹೇಳಿದ್ದಲ್ಲ. ಬದುಕುವದಕ್ಕಾಗಿ ತಿನ್ನುವುದೂ, ತಿನ್ನುವುದಕ್ಕಾಗಿ ಗಳಿಸುವುದೂ ಕಾಯಕದ ಉದ್ದೇಶವಲ್ಲ. "ಜಂಗಮಕ್ಕೆ ಸವಿಸುವಾತ ಜಾಣನು" ಈ ನುಡಿಗೆ ಜಂಗಮರು ಹೊರೆಯೇರಲಾಗದು. "ಬೇಡುವವ ಜಂಗಮನಲ್ಲ." ಇದರಿಂದ ಭಕ್ತರು ತಪ್ಪಿಸಿಕೊಳ್ಳಲಾರರು.— "ಬೇಡಿಸಿಕೊಳ್ಳುವವ ಭಕ್ತನಲ್ಲ." ಎಂದು ಬೇರೆ ಹೇಳಿದ್ದಾರೆ

"ಕಾಯವೇ ಕೈಲಾಸ, ಕಾಯಕವೇ ಕೈಲಾಸ"

"ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದರೂ ಮರೆಯಬೇಕು; ದೇವಪೂಜೆಯಾದರೂ ತೊರೆಯಬೇಕು."

"ತೊರೆಯ ಮೀವಣ್ಣಗಳಿರಾ! ತೊರೆಯಿರೋ ಪರಧನ—ಪರಸ್ತ್ರೀಯರ"

"ಪರಸ್ತ್ರೀ ಪಾರ್ವತಿಯಂತೆ"

ಮೊದಲಾದ ನುಡಿಗಳಲ್ಲಿ ಸ್ವರ್ಗ ಲೋಕಕ್ಕೆ ಹೊರಡುವ ಎತ್ತುಗಡೆಗಿಂತ ಸ್ವರ್ಗವನ್ನು ಜೀವನದಲ್ಲಿ ಕಟ್ಟುವ ಹೋರಾಟವೇ ಮಿಗಿಲಾದದ್ದು ಕಂಡು ಬರುತ್ತದೆ. ಸಂಸಾರವೆಂಬುದು ಗಾಳಿಯ ಸೊಡರೆಂದೂ, ಸಿರಿಯೆಂಬುದು ಸಂತೆಯ ಮಂದಿಯೆಂದೂ ಅವರಿಗೆ ಗೊತ್ತಿಲ್ಲದಿಲ್ಲ. ಅದರೆ

ಕೂಡಲಸಂಗನ ಪೂಜೆಗೆ ಅವಕಾಶವಿರುವ ಈ ಜೀವನವನ್ನು ಅವ್ಯರ್ಥವನ್ನಾಗಿ ಮಾಡಿಕೊಳ್ಳುವ ಸಾಹಸ ಮಾಡಿದ್ದಾರೆ.

"ಸ್ವರ್ಗಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ. ಸತ್ಯ ನುಡಿವುದೇ ಸ್ವರ್ಗ. ಮಿಥ್ಯ ನುಡಿವುದೇ ನರಕ" ಎಂದು ಸ್ವರ್ಗ ನರಕಗಳನ್ನು ಬಿರಳು ಮಾಡಿ ತೋರಿಸಿದ್ದಾರೆ. ಸ್ವರ್ಗವಾಗಲಿ, ನರಕವಾಗಲಿ ಇದ್ದುದೇ ಆದರೆ ಅದು ನಮಗೆ ಸಿಗುವ ಬಗೆ ಹೇಗೆ? ಸಂಸಾರ ನೀಗಿಸಲಾಗದವನು ಸ್ವರ್ಗವನ್ನೇನು ತೂಗಿಸುವನು? ಅಂತೇ ಶರಣರು.

"ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು" ಎಂದಿದ್ದಾರೆ.

ನಮ್ಮ ಮೈ, ಮೈಮೇಲಿನ ಬಟ್ಟೆ, ನಿದ್ರಿಸುವ ಮನೆ ಇವನ್ನು ಸರಿಯಾಗಿ ಬಳಸಿಕೊಳ್ಳಲಿಕ್ಕಾಗದಿದ್ದರೆ, ಸಂಸಾರನೇ ಸಾವಿರ ಮೈಲು ದೂರ ಉಳಿಯುವಾಗ ಕೈಲಾಸವು ಇನ್ನೆಷ್ಟು ಕೋಟಿ ಮೈಲು ದೂರ ಓಡಬೇಕು. ಆದ್ದರಿಂದ ಶರಣರ ಮನೆಗಳಂತೆ— "ಮನೆ ನೋಡಾ ಬಡವರು; ಮನ ನೋಡಾ ಘನ" ಆಗಬೇಕು. ಬಡವರು, ದುಡ್ಡಿಲ್ಲ, ಒಂಟಿಗರು ಎನ್ನುವ ಕಾರಣಗಳು ಮನಸ್ಸಿಲ್ಲದ ಮಾಟ; ಆಲಸಿಯ ಕುಂಟುನೆವ.

"ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ?
ತನುವಿನಲಿ ಹುಸಿತುಂಬಿ, ಮನದೊಳಗೆ ವಿಷಯ
ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ
ಕೂಡಲಸಂಗಮದೇವಾ."

ಮನದಲ್ಲಿ ಮನೆಯಲ್ಲಿ ದೇವನನ್ನು ಬರಮಾಡಿಕೊಳ್ಳಬೇಕಾದರೆ ಸ್ವಚ್ಛತೆ ಬೇಕು. ಸ್ವಚ್ಛತೆಯಿದ್ದಲ್ಲಿ ಸ್ವರ್ಗ; ಸ್ವಚ್ಛತೆಯ ಸುಖಭೋಗವೇ ಶಿವಾನುಭವ. ಇಂಥ ಮನೆ-ಮನಗಳ ಸ್ವಚ್ಛತೆಯಲ್ಲಿದ್ದವನು— "ಬ್ರಹ್ಮಪದವಿಯನೊಲ್ಲೆ; ವಿಷ್ಣುಪದವಿಯನೊಲ್ಲೆ; ಶರಣರ ಸಂಗವೇ ಲೇಸೆಂ"ದು ಹೇಳುವದರಲ್ಲಿ ಆಶ್ಚರ್ಯವೇನು?

ಮನ-ಮನೆಗಳಾದರೆ ತೀರಿತೆ? ಮನೆಯವಳ ಮಾತು ಮರೆಯೋಣವೇ? ದಂಪತಿಗಳು ಎರಡು ಕಣ್ಣು ಇದ್ದ ಹಾಗೆ. ಇಚ್ಛೆಯ ಹೆಂಡತಿಯಿದ್ದರೆ ಸಾಲದು; ಜೊತೆಗೆ ಬೆಚ್ಚನ್ನ ಮನೆಯೂ, ವೆಚ್ಚಕ್ಕೆ ಹಣವೂ

ಸೇರಿದರೆ ಸ್ವರ್ಗಕ್ಕೆ ಕಿಚ್ಚು ಹಾಕೆನ್ನುವ ಕೆಚ್ಚು (ಅವಿವಾಹಿತ ಸರ್ವಜ್ಞನಂತೆ) ಬರಬಲ್ಲದು. ಆದರೆ ಅದಕ್ಕೂ ಒಂದಡಿ ಮುಂದೆ ಹೋದರೆ "ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣಾ" ಎನ್ನುವದರಲ್ಲಿ ಸ್ವರ್ಗೀಯ ದಾಂಪತ್ಯ ಜೀವನದ ಜೀವಾಳವಿದೆ.

ಇಂಥ ದಂಪತಿಗಳೂ, "ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಲದೇ?" ಎಂದು ಕೇಳುವ ಪ್ರಭಾವಶಾಲಿಗಳೂ, 'ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಅಂಜಲೇಕೋ ಲೋಕವಿಗುರ್ಭಣೆಗೆ ?'' ಎನ್ನುವ ಅಭಯ ಕುಮಾರರೂ ಇರುವ ಲೋಕವು ಮೃತ್ಯುಲೋಕವೆಂದೆನ್ನಲು ಯಾರಿಗೆ ಧೈರ್ಯವಿದೆ? ಅದು ಸ್ವರ್ಗವೇ ಸರಿ. ಅಂಥವರಿರುವ ಕಾಲವೇ ನಿಜವಾಗಿ ಕಲಿ (ಗಳ) ಯುಗವಲ್ಲವೇ ? ಸುತ್ತು ಮುತ್ತು ಎತ್ತ ನೋಡಿದರೂ ಕಾಣಿಸುವುದು ಜನಜಂಗುಳಿಯಲ್ಲ; ಜಂಗಮ-ಲಿಂಗ-ಕೂಡಲ ಸಂಗರು.

"ಬಸವ ಬಾರಯ್ಯಾ ! ಮರ್ತ್ಯ ಲೋಕದೊಳಗೆ ಭಕ್ತರುಂಟೇ ಹೇಳಯ್ಯಾ! ಮತ್ತಾರೂ ಇಲ್ಲಯ್ಯಾ! ಮತ್ತಾರೂ ಇಲ್ಲಯ್ಯಾ! ನಾನೊಬ್ಬನೇ ಭಕ್ತನು. ಮರ್ತ್ಯ ಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀನೇ ಅಯ್ಯಾ—ಕೂಡಲಸಂಗಯ್ಯಾ."

ಹೀಗೆ ಜೀವನವನ್ನು ಉತ್ತಮಗೊಳಿಸುವ ಒಂದು ಉತ್ಕೃಷ್ಟವಾದ ರಸಾಯನವನ್ನು ಶರಣರು ಸಂಶೋಧಿಸಿದರು. ಅದುವೇ ಶಿವಾನುಭವವು. ಯಾರು ಪ್ರತ್ಯಕ್ಷವಾಗಿ ಉತ್ಪಾದಕ ಕಾಯಕವನ್ನು ಕೈಕೊಂಡಿದ್ದಾರೆಯೋ, ಯಾರು ಕಾಯ ಕಷ್ಟದಿಂದ ಬದುಕುತ್ತಿದ್ದಾರೆಯೋ, ಯಾರ ಬಾಳು ಕಷ್ಟ-ನಷ್ಟ, ರೋಗ ರುಜಿನಗಳ ಬೆಂಕಿಯಲ್ಲಿ ಬೇಯುತ್ತಿದೆಯೋ ಅವರಿಗೆ ಈ ಶಿವಾನುಭವ-ರಸಾಯನವು ನೆಮ್ಮದಿಯನ್ನುಂಟುಮಾಡಬಲ್ಲದು. ಎಂಥವನಾದರೂ "ಸಂಕಟದಲ್ಲಿ ವೆಂಕಟರಮಣ'' ಎನ್ನುವುದು ಸಹಜ. ಆದರೆ ಸಾಮಾನ್ಯ ಜನರು ಮೈಮುರಿದು ದುಡಿದರೂ ತಿನ್ನಲುಡಲಿಕ್ಕಿಲ್ಲದೆ ನಿರಾಹಾರ ವ್ರತ ತೊಟ್ಟಿರುವಾಗ ''ಶಿವಾ! ಶಿವಾ! ಹಾದಿ ತೋರಿಸು'' ಎನ್ನದೆ ಗತ್ಯಂತರವೇ ಇಲ್ಲ. ಅಂಥ ಆರ್ತರಿಗೆ ಶಿವಾನು

ಭವವು— "ಮಾತೇ ವ್ಯಥಾ ಮಾಚ ವಿಮೂಢ ಭಾವೋ" ಇತ್ಯಾದಿಯಾಗಿ ಸಾಂತ್ವನಗೊಳಿಸಬಲ್ಲದು. ಆದರೆ "ತಿತ್ತಿರಿ ತುಂಬಿದ ಕೂಳಿನ ಕೋಟಿ" ಯಲ್ಲಿ ಕುಳಿತು "ಹಾಡುವ ಸಭೆಯಲ್ಲಿ ನರಳುವುದು" ಕೇಳಿಸಲಾರದು. ಬಾಳಿಗೆ ಪ್ರತ್ಯಕ್ಷ ಸಂಬಂಧಿಸಿದ ನಿರಾಶ್ರಿತ ಜೀವಿಗಳ ಬಾಳಿನಲ್ಲಿಯೇ ರಶಿಯದ ಟಾಲಸ್ಟಾಯಿಯುವರು ಬೆಳಕು ಕಾಣಲಿಲ್ಲವೇ ? ಅಂಥ ನಿರಾಶ್ರಿತ ಜೀವಿಗಳಿಗೆ ಜೀವಶಕ್ತಿಯನ್ನು ಕೊಡಬಲ್ಲ ಅಮೋಘ ಶಕ್ತಿದಾಯಿ.ಯೆಂದರೆ ಶಿವಾನುಭವ. ಅದು ಬಡವರ ಧರ್ಮ; ಹಳ್ಳಿಗರ ಧರ್ಮ; ಅಶಿಕ್ಷಿತರ ಧರ್ಮ. ಅಂತೇ ಅದು ಕರ್ನಾಟಕದ ಸೊತ್ತು.

---

## ವೀರಶೈವಧರ್ಮ ಕೈಪಿಡಿಯ ವಿಮರ್ಶೆ.

[ಬೆಳಗಾವಿಯ ಲಿಂಗರಾಜಕಾಲೇಜಿನ ಪ್ರಿನ್ಸಿಪಾಲರು ಆದ ಡಾ॥ ಎಸ್. ಸಿ. ನಂದಿಮಠ ಎಂ. ಎ. ಪಿಎಚ್. ಡಿ. ಅವರಿಂದ ರಚಿತವಾಗಿ ೧೯೪೧ನೆಯ ಇಸವಿಯ ನವೆಂಬರ್ ೩೦ಗಳಿನಲ್ಲಿ ಪ್ರಕಟವಾಗಿರುವ "ದಿ ಹ್ಯಾಂಡ್ ಬುಕ್ ಆಫ್ ವೀರಶೈವಿಜಮ್" (ವೀರಶೈವ ಧರ್ಮದ ಕೈಪಿಡಿ) ಎಂಬ ಇಂಗ್ಲೀಷು ಗ್ರಂಥದ ಮೇಲಣ ವಿಮರ್ಶೆ. ಈ ವಿಮರ್ಶೆಯನ್ನು ಇಂಗ್ಲೀಷು ಭಾಷೆಯಲ್ಲಿಯೇ ಬರೆದಿರುತ್ತೆ. ಇದು ಅದರ ಭಾಷಾಂತರ.]

(ವಿಮರ್ಶಕರು:— ಜಿ. ಶಾಂತವೀರಪ್ಪ ಬಿ. ಎ. ನಿವೃತ್ತ ಸೀನಿಯರ್ ಪೋಲೀಸ್ ಸೂಪರಿಂಟೆಂಡೆಂಟರು ಬೆಂಗಳೂರುನಗರ.)

---

ಡಾ॥ ನಂದೀಮಠರವರು ರಚಿಸಿರುವ ಈ "ಕೈಪಿಡಿ" ಗ್ರಂಥವು ಲಿಂಗವಂತ ಧರ್ಮದ ತಾತ್ವಿಕ ಮತ್ತು ಚಾರಿತ್ರಿಕ ವಿಚಾರಗಳ ಮೇಲೆ ಅಮೂಲ್ಯವಾದ ಬೆಳಕನ್ನು ಚೆಲ್ಲತಕ್ಕದಾಗಿದೆ. ಇಲ್ಲಿಯ ವರೆಗೆ ಲಿಂಗವಂತ ಧರ್ಮದ ನಿಜಸ್ವರೂಪವು ಪುರಾಣಗಳಲ್ಲಿಯೂ ಮತ್ತು ಪದ್ಯಕಾವ್ಯಗಳಲ್ಲಿಯೂ ವರ್ಣಿತವಾದ ಕಟ್ಟುಕತೆಗಳಲ್ಲಿ ಅಡಗಿಹೋಗಿ ಅದರ ನಿಜತತ್ವ ಮತ್ತು ನಿಜಚರಿತ್ರೆಗಳು ಏನೆಂಬುದು ಸಾರ್ವಜನಿಕರಿಗೆ ತಿಳಿಯದೆ ಲಿಂಗವಂತ ಧರ್ಮದ ಮೇಲೆ ಗಾಢಾಂಧಕಾರವು ಕವಿತುಕೊಂಡಿ

ದ್ದಿತು. ಲಿಂಗವಂತ ಧರ್ಮವನ್ನು ಕುರಿತು ಕಾವ್ಯಗಳನ್ನು ರಚಿಸಿದ ಸಂಸ್ಕೃತ ಮತ್ತು ಕನ್ನಡ ಕವಿಗಳು ತಮ್ಮ ಕವಿತಾವೇಶದಲ್ಲಿ ಲಿಂಗವಂತ ಧರ್ಮದ ಮತ್ತು ಲಿಂಗವಂತ ಸಮಾಜದ ಚಾರಿತ್ರಿಕ ಅಂಶಗಳಿಗೆ ತಿಲಾಂಜಲಿಯನ್ನಿಟ್ಟರು. ಈ ರೀತಿಯಲ್ಲಿ ಗಾಢಾಂಧಕಾರದಲ್ಲಿ ಆವೃತ್ತವಾದ ಲಿಂಗವಂತ ಧರ್ಮದ ಮೇಲೆ ಕಳೆದ ಸುಮಾರು ಹದಿನಾರು ವರ್ಷಗಳ ಕಾಲಾವಧಿಯಲ್ಲಿ ಬಿಜಾಪುರದ ರಾವ್‌ಬಹದ್ದೂರ್ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಅವರ ಅಮೋಘ ಪ್ರಯತ್ನದಿಂದ ತಕ್ಕಮಟ್ಟಿಗೆ ಬೆಳಕುಬೀಳುವಂತಾಗಿ ಆ ಗಾಢಾಂಧಕಾರವು ಕ್ರಮಕ್ರಮವಾಗಿ ಪರಿಹಾರವಾಗಹತ್ತಿದೆ. ಶ್ರೀಮಾನ್ ಹಳಕಟ್ಟಿಯವರು ತಮ್ಮ "ಶಿವಾನುಭವ" ಮಾಸಪತ್ರಿಕೆಯಲ್ಲಿ ಲೇಖನಗಳನ್ನು ಪ್ರಕಟಿಸುವುದರ ಮೂಲಕವೂ ಮತ್ತು ಶಿವಶರಣರ ವಚನಗಳನ್ನು ಪ್ರಕಟಿಸುವುದರ ಮೂಲಕವೂ ಲಿಂಗವಂತ ಧರ್ಮ ಮತ್ತು ಸಮಾಜಗಳಿಗೆ ಉತ್ಕೃಷ್ಟವಾದ ಸೇವೆಯನ್ನು ಸಲ್ಲಿಸಿದ್ದಾರೆ. ಅವರು ಪ್ರಕಟಿಸಿರುವ ವಚನಶಾಸ್ತ್ರವು ಲಿಂಗವಂತ ಧರ್ಮದ ತತ್ವ ಮತ್ತು ಚರಿತ್ರೆಗಳ ನಿಜರೂಪವನ್ನು ಹೊರಹೊಮ್ಮಿಸುವಂತಹುದಾಗಿದೆ.

ಇನ್ನು ನಮ್ಮ ಮುಂದೆ ಇರತಕ್ಕ ಕೈಪಿಡಿ ಗ್ರಂಥದ ವಿಚಾರವನ್ನು ತೆಗೆದುಕೊಳ್ಳೋಣ. ಕೈಪಿಡಿ ಗ್ರಂಥವು ಲಿಂಗಾಯತ ಧರ್ಮದ ಚರಿತ್ರೆಯನ್ನು ಸಂಕ್ಷೇಪವಾಗಿ ಕರತಳಾಮಳಕ ಮಾಡಿಕೊಡತಕ್ಕುದಾಗಿದೆ. ಡಾ. ನಂದೀಮಠರವರು ಮಾಡಿರತಕ್ಕ ಈ ಅಮೋಘ ಸೇವೆಗಾಗಿ ಇಡಿಯ ಲಿಂಗವಂತ ಸಮಾಜವೇ ಅವರಿಗೆ ಚಿರಋಣಿಯಾಗಿರಬೇಕಾಗಿದೆ.

ಈಗ್ಗೆ ಸುಮಾರು ಹತ್ತು ವರ್ಷಗಳ ಹಿಂದೆ ಎಂದರೆ ೧೯೩೧ನೆಯ ಇಸವಿ ಮೇ ೧೪ನೆಯ ತಾರೀಖಿನ ದಿವಸ ತಿರುಚನಾಪಳ್ಳಿ ಡಿಸ್ಟ್ರಿಕ್ಟ ಮುಸುರಿಯಲ್ಲಿ ಕೂಡಿದ ತಮಿಳು ಲಿಂಗವಂತರ ಸಭೆಯೊಂದರಲ್ಲಿ ಮಾತನಾಡುವ ಅವಕಾಶ ನನಗೆ ಲಭಿಸಿದ್ದಿತು. ಆಗ ನಾನು ನಮ್ಮ ಲಿಂಗವಂತ ಧರ್ಮದ ವಿಚಾರವಾಗಿ ಸರ್ವಸಾಮಾನ್ಯವಾದ ಕೆಲವು ಅಭಿಪ್ರಾಯಗಳನ್ನು ಅರಿಕೆ ಮಾಡಿಕೊಂಡೆನು. ಆ ದಿವಸ ನಾನು ಅರಿಕೆ ಮಾಡಿಕೊಂಡ ಅಭಿಪ್ರಾಯಗಳು ಈ ದಿವಸ ಮೇಲೆ ಹೇಳಿದ ಪ್ರಕಟನೆಗಳ ಬೆಳಕಿನಲ್ಲಿ ಬಹಳ ಮಟ್ಟಿನ ಬದಲಾವಣೆಗಳಿಗೆ ಒಳಗಾಗತಕ್ಕವುಗಳಾಗಿವೆ. ಆ ದಿವಸ ಮಾಡಿದ ಭಾಷಣದಲ್ಲಿ ನಾನು ಈ ಮುಂದೆ

ಕಂಡಂತೆ ಹೇಳಿದೆ:— "ಲಿಂಗವಂತ ಧರ್ಮದ ಪರಿಶೋಧನೆಯ ಕೆಲಸವನ್ನು ಬಿಜಾಪುರದ ರಾವ್‌ಸಾಹೇಬ (ಈಗ ರಾವ್‌ಬಹದ್ದೂರ್) ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಅವರಂಥ ಮತ್ತು ಡಾ॥ ಎಸ್. ಸಿ. ನಂದೀಮಠ, ಎಂ. ಎ. ಪಿ. ಎಚ್. ಡಿ. ಅವರಂಥ ಸಮರ್ಥರು ಕೈಕೊಳ್ಳಬೇಕಾಗಿದೆ." (ಭಾಷಣದ ೭ನೆಯ ಪುಟವನ್ನು ದಯಮಾಡಿ ನೋಡಿ). ಮುಂದೆ ಅದೇ ಭಾಷಣದಲ್ಲಿ ಈ ಕೆಳಗೆ ಕಂಡಂತೆ ಹೇಳಿದೆ:— "ಡಾ॥ ನಂದೀಮಠರವರು ತಮ್ಮ ಪರಿಶೋಧನೆಯ ಕಾರ್ಯವನ್ನು ಮುಂದುವರಿಸಿದ ಪಕ್ಷದಲ್ಲಿ ದಕ್ಷಿಣದೇಶದ ಶಿವದೇವಾಲಯಗಳ ಅವಶೇಷಗಳು ಶೈವಧರ್ಮದ ಇನ್ನೂ ಹೆಚ್ಚಿನ ಪ್ರಾಚೀನತ್ವವನ್ನು ತೋರಿಸಿಕೊಡುವಂತಹವುಗಳಾಗಿವೆಯೆಂಬ ಅಂಶವನ್ನು ಅವರು ನಮಗೆ ತಿಳಿಸಬಲ್ಲವರಾಗಿದ್ದಾರೆ." (ಭಾಷಣದ ೧೧ನೆಯ ಪುಟವನ್ನು ದಯಮಾಡಿ ನೋಡಿ). ಈ ರೀತಿ ನಾನು ಅಂದಿನ ಭಾಷಣದಲ್ಲಿ ಸೂಚಿಸಿದ ಆಶಯಗಳು ಇಂದು ರಾ॥ ಬ॥ ಹಳಕಟ್ಟಿಯವರ ಶಿವಾನುಭವ ಪತ್ರಿಕೆಯ ಲೇಖನಗಳು ಏಕಪ್ರಕಾರವಾದ ಪ್ರಕಟನೆಯ ಮೂಲಕವೂ ಮತ್ತು ಡಾ॥ ನಂದೀಮಠರವರ ಈ ಕೈಪಿಡಿ ಗ್ರಂಥದ ಪ್ರಕಟನೆಯ ಮೂಲಕವೂ ರೂಪಗೊಳ್ಳುವುದಕ್ಕೆ ಉಪಕ್ರಮಿಸಿವೆ. ಅರ್ವಾಚೀನ ಆಚಾರ್ಯರಂತಿರುವ ಈ ಇಬ್ಬರು ಮಹನೀಯರ ಸಹಾಯದಿಂದಲೂ ಮತ್ತು ಇವರಿಗೆ ನೆರವಾಗಿ ನಿಂತು ಲಿಂಗಾಯತ ಧರ್ಮದ ನಿಜಸ್ವರೂಪವನ್ನು ಕಂಡುಹಿಡಿಯಲು ಶ್ರಮಿಸುತ್ತಿರುವ ಹಲವು ಚಾರಿತ್ರಶೋಧಕರ ಸಹಾಯದಿಂದಲೂ ನಾನು ಅನೇಕ ಹೊಸ ವಿಚಾರಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತೆಂಬ ಅಂಶವನ್ನು ನಾನು ಒಪ್ಪಿಕೊಳ್ಳಲೇಬೇಕು.

ಡಾ. ನಂದೀಮಠರವರು ಈ ಕೈಪಿಡಿ ಗ್ರಂಥದಲ್ಲಿ ಮಾಡಿರುವ ವಿಷಯ ಸಮರ್ಥನೆಯ ಪದ್ಧತಿಯು, ಪ್ರೊಫೆಸರ್ ಕೆ. ಬಿ. ರಾನಡೆ, ಎಂ. ಎ. ಅವರು ತಮ್ಮ ಮುನ್ನುಡಿಯಲ್ಲಿ ಹೇಳಿರುವಂತೆ, "ಭಾರತೀಯ ತತ್ವಶಾಸ್ತ್ರದಲ್ಲಿ ಲಿಂಗವಂತ ಧರ್ಮಕ್ಕೆ ಸಲ್ಲಬೇಕಾದ ಉಚ್ಚ ಗೌರವ ಮತ್ತು ಯೋಗ್ಯಸ್ಥಾನಗಳನ್ನು ದೊರಕಿಸಿಕೊಡುವಂತಹುದಾಗಿದೆ." ಡಾ. ನಂದೀಮಠರವರು ನಿಷ್ಪಕ್ಷಪಾತಿಗಳಾಗಿ ವಿಷಯ ಸಮರ್ಥನೆ ಮಾಡಿರುವುದನ್ನು ಕುರಿತು ಪ್ರೊ॥ ರಾನಡೆಯವರು ಹೇಳಿರುವ ಮತ್ತೊಂದು ನುಡಿಯೂ ಇಲ್ಲಿ ಉಲ್ಲೇಖ ಯೋಗ್ಯವಾಗಿದೆ. ಅವರು ಹೇಳಿರುವುದೇ

ನೆಂದರೆ — "ಎಲ್ಲಕ್ಕೂ ಮಿಗಿಲಾಗಿ ಅವರು (ಡಾ॥ ನಂದೀಮಠರವರು) ಅವರ ಹೆಸರೇ ಸೂಚಿಸುತ್ತಿರುವಂತೆ, ಲಿಂಗಾಯತ ಸಮಾಜದಲ್ಲಿ ಅತ್ಯಂತ ಹೆಚ್ಚಿನ ಅಂತಸ್ತಿಗೆ ಸೇರಿದವರಾಗಿದ್ದಾರೆ. ಆದಾಗ್ಯೂ ಅವರು ಬಡವರ, ದೀನರ ಮತ್ತು ಪತಿತರ ವಿಷಯದಲ್ಲಿ ಕಾರುಣ್ಯವುಳ್ಳವರೂ, ಬಂಧು ಪ್ರೇಮವುಳ್ಳವರೂ, ಸಹಾನುಭೂತಿಯುಳ್ಳವರೂ ಆಗಿದ್ದಾರೆ. ಮಹಾತ್ಮ ಶ್ರೀಬಸವಣ್ಣನವರು ಬೋಧೆ ಮಾಡಿದುದು ವಾಸ್ತವಿಕವಾಗಿಯೂ ಈ ಆಚರಣೆಯನ್ನೇ. ಈ ಮೂಲ ಬೋಧೆಯ ಹಾದಿಯಲ್ಲೇ ಹೆಜ್ಜೆಯನ್ನಿಟ್ಟು ಕೊಂಡು ಬರುತ್ತಿರುವ ಡಾ॥ ನಂದೀಮಠರಂತಹವರು ಇರುವರಲ್ಲಾ — ಎಂದು ನಮಗೆ ಹರ್ಷವಾಗುತ್ತದೆ." ಹಿಂದೆ ಹನ್ನೆರಡನೆಯ ಶತಮಾನದಲ್ಲಿ ಸ್ವಾರ್ಥತ್ಯಾಗಿಗಳಾದ ಶರಣರು ತಿದ್ದುಪಾಟುಮಾಡಿ ಸ್ಥಾಪಿಸಿದ ಲಿಂಗಾಯತ ಧರ್ಮದ ಮೂಲತತ್ವಗಳನ್ನು ಈ ಮಾತುಗಳು ಸೂಚಿಸುತ್ತವೆ. ಈ ವಿಚಾರದಲ್ಲಿ ನಾನು ಡಾ. ನಂದೀಮಠರವರ ಬಳಗಕ್ಕೆ ಸೇರಿದವನು. ಅವರ ಬಳಗದಲ್ಲಿರಲು ನನಗೊಂದು ಹೆಮ್ಮೆ. ಲಿಂಗವಂತ ಧರ್ಮದಲ್ಲಿ ಸಾಮಾಜಿಕ ವಿಚಾರಗಳಿಗೆ ಸಂಬಂಧಪಟ್ಟಾಗಲಿ ಅಥವಾ ಧಾರ್ಮಿಕ ವಿಚಾರಗಳಿಗೆ ಸಂಬಂಧಪಟ್ಟಾಗಲಿ ಯಾವ ಮೇಲು ಕೀಳುಗಳೂ ಇಲ್ಲ. ಇದೇ ಲಿಂಗವಂತ ಧರ್ಮದ ತತ್ವ. ಇದೇ ಲಿಂಗವಂತ ಧರ್ಮದ ಮರ್ಮ. ಇಂಥ ಉದಾತ್ತ ಧರ್ಮದ ಆಶ್ರಯದಲ್ಲಿ ಹಿಂದಿನವರೂ ಮುಂದಿನವರೂ ಎಲ್ಲರೂ ಸಮಾನರಾದ ಸಾಮಾಜಿಕ ಮತ್ತು ಧಾರ್ಮಿಕ ಸ್ಥಾನಮಾನಗಳನ್ನು ಪಡೆದವರಾಗಿರುತ್ತಾರೆ.

ಡಾ. ನಂದೀಮಠರವರು ತಮ್ಮ ಕೈಪಿಡಿ ಗ್ರಂಥವನ್ನು ಈ ರೀತಿ ಪ್ರಾರಂಭಿಸುತ್ತಾರೆ. "ಶೈವ ಸಿದ್ಧಾಂತವು ಭಾರತೀಯ ತತ್ವ ಶಾಸ್ತ್ರದ ಒಂದು ಶಾಖೆಯಾಗಿದೆ. ಈ ಶಾಖೆಗೆ ಭಕ್ತಿಯೇ ಮೂಲ ಸೂತ್ರವಾಗಿದೆ. ಇದೇ ವಿಷಯವನ್ನು ಕೈಪಿಡಿ ಗ್ರಂಥವು ಮುಂದೆ ವಿವರವಾಗಿ ಪ್ರತಿಪಾದಿಸುತ್ತದೆ. ಈ ಕೈಪಿಡಿ ಗ್ರಂಥದ ಮೊದಲನೆಯ ಅಧ್ಯಾಯವನ್ನು ಬಹು ಎಚ್ಚರದಿಂದ ಓದಬೇಕಾಗಿದೆ. ಡಾ. ನಂದೀಮಠರವರು ಬಗೆಬಗೆಯ ತರ್ಕಗಳಿಂದ ವಿಷಯವನ್ನು ವಿವರವಾಗಿ ಸಮರ್ಥನೆ ಮಾಡಿದ್ದಾರೆ. ಅವುಗಳಲ್ಲಿ ಬಹುಮಟ್ಟಿನವುಗಳನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಈ ಕೈಪಿಡಿ ಗ್ರಂಥದಲ್ಲಿ "ಪಿಲ್‌ಗ್ರಿಮ್ ಪ್ರೋಗ್ರೆಸ್" ಎಂಬ ಅಧ್ಯಾಯವು ಹೊಸದಾದ ಮತ್ತು ಎಲ್ಲರಿಗೂ ಅರ್ಥವಾಗತಕ್ಕ

ಶೈಲಿಯಲ್ಲಿ ಬರೆಯಲ್ಪಟ್ಟಿದೆ. ಈ ಅಧ್ಯಾಯದಲ್ಲಿ ಕಠಿಣವಾದ ಷಟ್‌ಸ್ಥಲ ಶಾಸ್ತ್ರವನ್ನು ಬಹು ಸುಲಭವಾದ ಮಾತುಗಳಲ್ಲಿ ಪ್ರತಿಪಾದಿಸಲಾಗಿದೆ. ಸಾಮಾನ್ಯ ಮನುಷ್ಯನೂ ಸಹ ಈ ಶಾಸ್ತ್ರವನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಬಹುದಾಗಿದೆ. ಇದು ನಿಜವಾಗಿಯೂ ಅಭಿನಂದನೀಯ ವಾದ ವಿಚಾರ. ಇನ್ನು ಷಟ್‌ಸ್ಥಲಶಾಸ್ತ್ರದ ವಿಚಾರದಲ್ಲಿ, ನಾನು ಹೆಚ್ಚೇ ನನ್ನೂ ಹೇಳಲಾರೆ. ಷಟ್‌ಸ್ಥಲಶಾಸ್ತ್ರದ ವಿಚಾರದಲ್ಲಿ ಡಾ॥ ನಂದೀಮಠ ರವರೂ ಮತ್ತು ರಾ. ಬ. ಹಳಕಟ್ಟಿಯವರೂ ಬಹಳವಾಗಿ ಶ್ರಮಿಸಿದ್ದಾರೆ. ಶ್ರಮಿಸುತ್ತಲೂ ಇದ್ದಾರೆ. ಅವರು ಜೀವಿತವನ್ನೇ ಇದಕ್ಕಾಗಿ ಮೀಸ ಲಾಗಿರಿಸಿದ್ದಾರೆ. ಅವರು ನಮಗೆ ಈ ಷಟ್‌ಸ್ಥಲಶಾಸ್ತ್ರದ ವಿಚಾರದಲ್ಲಿ ಒಳ್ಳೆಯ ಪ್ರಮಾಣವಾಗಿದ್ದಾರೆ. ಆದಾಗ್ಯೂ ಈ ಸಂದರ್ಭದಲ್ಲಿ ನಾನು ಒಂದೆರಡು ಅಂಶಗಳನ್ನು ಕುರಿತು ಯಾರ ಮನಸ್ಸಿಗೂ ನೋವಾಗದ ರೀತಿಯಲ್ಲಿ ನನ್ನ ಕೆಲವು ಅಭಿಪ್ರಾಯಗಳನ್ನು ಸೂಚಿಸಲು ಇಚ್ಛಿಸುತ್ತೇನೆ.

ಹಿಂದೆ ಶೈವಧರ್ಮದಲ್ಲಿ ಅನೇಕ ಪ್ರಭೇಧಗಳಿದ್ದುವು. ಈ ಪ್ರಭೇ ಧಗಳ ಆಚಾರಣೆಗಳು ಬಗೆಬಗೆಯವುಗಳಾಗಿದ್ದುವು. ಮೂಲಶೈವ ಧರ್ಮವು ಯಾವ ರೂಪದಲ್ಲಿತ್ತೆಂಬುದನ್ನು ಈಗ ಊಹಿಸಲು ಸಾಧ್ಯವಿಲ್ಲ. ಆದರೆ ಇಷ್ಟು ಮಾತ್ರ ಹೇಳಬಹುದು. ೧೨ನೆಯ ಶತಮಾನದ ಸರಿ ಸುಮಾ ರಿನಲ್ಲಿ ಶೈವಧರ್ಮದಲ್ಲಿ ಅನೇಕ ದುಷ್ಟ ಆಚರಣೆಗಳು ರೂಢಿಗೆ ಬಂದು ಶೈವಧರ್ಮವು ಬಹಳ ಕೀಳು ಮಟ್ಟದಲ್ಲಿದ್ದಿತು. ಈ ರೀತಿಯಲ್ಲಿ ಬಹಳ ಕೀಳು ಮಟ್ಟಕ್ಕೆ ಇಳಿದಿದ್ದ ಶೈವಧರ್ಮದಲ್ಲಿ ಒಂದು ಕ್ರಾಂತಿ ನಡೆದು, ಆ ಕ್ರಾಂತಿಯ ಪರಿಣಾಮವಾಗಿ ಈಗ ನಾವು ನೋಡುತ್ತಿರುವ ಲಿಂಗ ವಂತ ಧರ್ಮವು ಉದ್ಭವಿಸಿತು. ಶೈವಧರ್ಮದ ಯಾವ ಶಾಖೆಯಿಂದ ಲಿಂಗವಂತ ಧರ್ಮವು ಉದ್ಭವಿಸಿತೆಂಬುದನ್ನು ನಾವು ಈಗ ಹೇಳುವು ದಕ್ಕಾಗುವುದಿಲ್ಲ. ಏಕೆಂದರೆ ಲಿಂಗವಂತ ಧರ್ಮವು ಉದ್ಭವಿಸಿ ಈಗ್ಗೆ ಸುಮಾರು ೮೦೦ ವರ್ಷಗಳಿಗೆ ಮೇಲಾಗಿದೆ. ಈ ದೀರ್ಘ ಕಾಲಾವಧಿ ಯಲ್ಲಿ ಅನೇಕ ಬದಲಾವಣೆಗಳು ನಡೆದುಹೋಗಿವೆ. ಇದ್ದ ಆಚರಣೆ ಗಳು ಮಾರ್ಪಟ್ಟಿವೆ. ಹೊಸ ಆಚರಣೆಗಳು ಕಾಲಿಟ್ಟಿವೆ. ಇಂಥ ಪರಿ ಸ್ಥಿತಿಯಲ್ಲಿ ಊಹಾಪೋಹದ ಮೇಲೆ ಚರಿತ್ರೆಯನ್ನು ಕಟ್ಟಲಿಕ್ಕೆ ಹೋಗು ವುದು ಬಹಳ ಅಪಾಯಕರವಾಗಿದೆ. ಆದುದರಿಂದ ಚಾರಿತ್ರ ಶೋಧಕರು ಬಹಳ ಎಚ್ಚರಿಕೆಯಿಂದ ಕಾಲಿಡಬೇಕಾಗಿದೆ.

ಡಾ॥ ನಂದೀಮಠರವರ ಈ ಕೈಪಿಡಿ ಗ್ರಂಥದಲ್ಲಿ ಅನೇಕ ಚಾರಿತ್ರಿಕ ಅಂಶಗಳು ಅಡಗಿವೆ. ಲಿಂಗವಂತ ಧರ್ಮದ ಸ್ವರೂಪವನ್ನು ತೋರಿಸಿಕೊಡಲು ವಚನಗಳನ್ನು ಆಧಾರವಾಗಿ ತೆಗೆದುಕೊಳ್ಳಲಾಗಿದೆ. ಈ ಕೈಪಿಡಿ ಗ್ರಂಥವನ್ನು ಪ್ರಕಟಿಸುವುದರ ಮೂಲಕ ಹೆಚ್ಚಿನ ಸೇವೆ ನಡೆದಿದೆ. ಆದರೆ ಈ ಗ್ರಂಥದಲ್ಲಿ ಕೆಲವು ಹೇಳಿಕೆಗಳಿಗೆ ಆಧಾರವಿರುವುದಿಲ್ಲ. "ಇಂದಿಗೂ ಪರಿಪೂರ್ಣವಾಗಿ ಆಚರಣೆಯಲ್ಲಿರುವ ಮತ್ತು ಶೈವ ಧರ್ಮದ ಒಂದು ಮುಖ್ಯ ಶಾಖೆಯಾಗಿರುವ ವೀರಶೈವ ಧರ್ಮವು ಬಹುಕಾಲದಿಂದಲೂ ಕರ್ನಾಟಕ ದೇಶದಲ್ಲಿ ನೆಲೆಸಿ ಬಂದಿದೆ. ಬಹುಶಃ ಈ ಧರ್ಮವನ್ನು ೧೨ನೆಯ ಶತಮಾನದ ಶಿವಶರಣರು ಜೀರ್ಣೋದ್ಧಾರ ಮಾಡಿ ಉತ್ತಮಗೊಳಿಸಿರಬೇಕೆಂದು ಊಹಿಸಬಹುದಾಗಿದೆ. ಈ ಧರ್ಮಕ್ಕೆ ಬಳಕೆಯಲ್ಲಿ "ಲಿಂಗಾಯತ" ಅಥವಾ "ಲಿಂಗವಂತ" ಎಂಬ ಹೆಸರುಗಳಿವೆ" ಎಂದು ಡಾ॥ ನಂದೀಮಠರವರು ಹೇಳಿರುತ್ತಾರೆ. ಈ ಹೇಳಿಕೆಯಲ್ಲಿ ಚರಿತ್ರಾಂಶಗಳ ಜೊತೆಗೆ ಊಹಾಪೋಹಗಳೂ ಬೆರೆತುಕೊಂಡಿವೆ. ಲಿಂಗವಂತ ಧರ್ಮವು ೧೨ನೆಯ ಶತಮಾನಕ್ಕೆ ಹಿಂದೆ ಸ್ವತಂತ್ರವಾದ ಮತ್ತು ಪರಿಪೂರ್ಣವಾದ ರೂಪದಲ್ಲೂ ಇತ್ತೆಂಬುದಕ್ಕೂ ಮತ್ತು ಇಂಥ ಧರ್ಮವನ್ನು ೧೨ನೆಯ ಶತಮಾನದಲ್ಲಿ ಶಿವಶರಣರು ಉದ್ಧಾರ ಮಾಡಿದರೆಂಬುದಕ್ಕೂ ಯಾವ ಆಧಾರಗಳೂ ಕಂಡುಬರುವುದಿಲ್ಲ. "ಸ್ವತಂತ್ರವಾದ ಮತ್ತು ಪರಿಪೂರ್ಣವಾದ ರೂಪದಲ್ಲಿ" ಎಂದು ಏಕೆ ಒತ್ತಿ ಹೇಳುತ್ತೇನೆಂದರೆ, ಈ ಲಿಂಗವಂತ ಧರ್ಮದಲ್ಲಿ ವಿಶಿಷ್ಟವಾದ ಮತ್ತು ಪ್ರತ್ಯೇಕವಾದ ಧರ್ಮತತ್ವಗಳು ಅಡಗಿವೆ. ಡಾ॥ ನಂದೀಮಠರವರು ಅಭಿಪ್ರಾಯಪಡುವಂತೆ ಲಿಂಗವಂತ ಧರ್ಮವು ಜೀರ್ಣೋದ್ಧಾರ ಮಾಡಲ್ಪಟ್ಟಿತೆಂದು ಹೇಳುವುದಕ್ಕಿಂತಲೂ ಹಿಂದಿನ ಶೈವಧರ್ಮವು ಕೆಲವು ಮಾರ್ಪಾಟುಗಳ ಮೂಲಕ ಲಿಂಗವಂತ ಧರ್ಮವಾಗಿ ರೂಪಗೊಳಿಸಲ್ಪಟ್ಟಿತೆಂದು ಹೇಳುವುದು ಹೆಚ್ಚು ಸೂಕ್ತವೆಂದು ನನ್ನ ಅಭಿಪ್ರಾಯ. ೧೨ನೆಯ ಶತಮಾನದ ಸರಿ ಸುಮಾರಿನಲ್ಲಿ ಶೈವ ಧರ್ಮದಲ್ಲಿ ಒಂದು ಪ್ರಚಂಡ ಬದಲಾವಣೆ ನಡೆಯಿತು. ಈ ಪ್ರಚಂಡ ಬದಲಾವಣೆಯು ೧೨ನೆಯ ಶತಮಾನದ ಸತ್ಯಾನ್ವೇಷಿಗಳಾದ ಶಿವಶರಣರ ಕೈಯಲ್ಲಿ ಕ್ರಾಂತಿಯ ರೂಪವನ್ನು ತಾಳಿ "ಶಿವಾನುಭವ ಮಂಟಪ"ದಲ್ಲಿ ಅಖಂಡವಾದ ಚರ್ಚೆಗಳೂ ಅನುಭವಗಳೂ ನಡೆದು ಹಳೆಯ ಶೈವಧರ್ಮವು ಒಂದು ಹೊಸರೂಪವನ್ನು ತಾಳಿತು. ಡಾ॥ ಫ್ಲೀಟ್, ಭಂಡಾರ್‌ಕರ್,

ರೈಸ್ ಮೊದಲಾದ ವಿದ್ವಾಂಸರು ಲಿಂಗಾಯತ ಧರ್ಮದ ಚರಿತ್ರೆಯನ್ನು ಬರೆದಿದ್ದಾರೆ. ಆದರೆ ಇವರ ಬರವಣಿಗೆಗಳಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಈ ರೀತಿ ಇವರಲ್ಲಿ ಭಿನ್ನಾಭಿಪ್ರಾಯಗಳು ಬರಲು ಕಾರಣವೇನೆಂದರೆ ಆಗ್ಗೆ ಇವರುಗಳಿಗೆ ೧೨ನೆಯ ಶತಮಾನದ ಶರಣರ ವಚನಗಳು ಸಿಕ್ಕದೇ ಇದ್ದುದೇ. ಈಚೆಗೆ ಎಂದರೆ ೧೯೨೫ನೆಯ ಇಸವಿಯಿಂದೀಚೆಗೆ ಶರಣರ ವಚನಗಳು ರಾ॥ ಬ॥ ಹಳಕಟ್ಟಿಯವರ ಶ್ರಮದಿಂದ ಬೆಳಕಿಗೆ ಬಂದಿರುತ್ತವೆ. ಈ ಅಂಶವನ್ನು ಡಾ॥ ನಂದೀಮಠರವರು ಒತ್ತಿ ಹೇಳಿರುತ್ತಾರೆ. ಈ ಸಂದರ್ಭದಲ್ಲಿ ರಾ॥ ಬ॥ ಹಳಕಟ್ಟಿಯವರು ಕಳೆದ ಎರಡು ವರ್ಷಗಳಿಂದಲೂ ತಮ್ಮ ಶಿವಾನುಭವದಲ್ಲಿ ಬರೆಯುತ್ತಿರುವ ಲೇಖನಗಳ ವಿಚಾರವನ್ನು ಪ್ರಸ್ತಾವಿಸುವುದು ಅಪ್ರಸ್ತುತವಾಗಲಾರದು. ಈ ಲೇಖನಗಳಲ್ಲಿ ರಾ॥ ಬ॥ ಹಳಕಟ್ಟಿಯವರು ಡಾ॥ ನಂದೀಮಠರವರಂತೆಯೇ ಲಿಂಗಾಯತ ಧರ್ಮವು ೧೨ನೆಯ ಶತಮಾನಕ್ಕೆ ಹಿಂದೆ ಇದ್ದಿತೆಂದು ಅಭಿಪ್ರಾಯಪಟ್ಟು, ಈ ಅಭಿಪ್ರಾಯಕ್ಕೆ ದೇವರದಾಸಿಮಯ್ಯ, ಬಾಹೂರ ಬೊಮ್ಮಯ್ಯ, ಶಂಕರದಾಸಿಮಯ್ಯ, ತೆಲುಗ ಜೊಮ್ಮಯ್ಯ, ರೇವಣಸಿದ್ಧ ಇವರೇ ಮೊದಲಾದವರ ಚರಿತ್ರೆಗಳೇ ಆಧಾರವೆಂದು ಹೇಳುತ್ತಿದ್ದಾರೆ. ೧೨ನೆಯ ಶತಮಾನಕ್ಕೆ ಸ್ವಲ್ಪ ಹಿಂದೆ ಇದ್ದ ಈ ಶರಣರ ಪೈಕಿ ದೇವರದಾಸಿಮಯ್ಯನು ಪ್ರಮುಖನೆಂಬುದು ನಿಜ. ಆದರೆ ಈ ಶರಣನು ಬೋಧೆಮಾಡಿದ ತತ್ವವೇನೆಂಬುದನ್ನು ಸ್ವಲ್ಪ ವಿಚಾರ ಮಾಡಿನೋಡುವೆ. "ದೇವರೆಂದರೆ ಒಬ್ಬನೆ. ಅವನು ಸರ್ವವ್ಯಾಪಿ. ಸರ್ವಶಕ್ತ. ಅವನಿಗೆ ನಾಮರೂಪಗಳಿಲ್ಲ" ಎಂಬುದಾಗಿ ದೇವರದಾಸಿಮಯ್ಯನು ದೇವರ ವಿಚಾರದಲ್ಲಿ ಬೋಧೆ ಮಾಡಿದ್ದಾನೆ. ದೇವರದಾಸಿಮಯ್ಯನ ಕಾಲದಲ್ಲಿ ನಾಡಿನಲ್ಲಿ ಆಚರಣೆಯಲ್ಲಿದ್ದ ವಿಲಕ್ಷಣವಾದ ಶೈವೋಪಾಸನ ಕ್ರಮಗಳನ್ನು ನಾವು ಜ್ಞಾಪಕಕ್ಕೆ ತೆಗೆದುಕೊಂಡರೆ ದೇವರದಾಸಿಮಯ್ಯನ ಬೋಧೆಯ ಸ್ವರೂಪವೇನೆಂಬುದು ನಮಗೆ ವೇದ್ಯವಾಗುತ್ತದೆ. ಈ ಬೋಧೆಯಲ್ಲಿ ಲಿಂಗಾಯತ ಧರ್ಮದ ಸ್ವಾತಂತ್ರ ಮತ್ತು ವಿಶಿಷ್ಟ ಚಿಹ್ನೆಗಳು ಗೋಚರವಾಗುವದಿಲ್ಲ. ಆದಾಗ್ಯೂ ೧೨ನೆಯ ಶತಮಾನದ ಅನುಭವ ಮಂಟಪದ ಶರಣರು ತಮ್ಮ ವಚನಗಳಲ್ಲಿ ದೇವರದಾಸಿಮಯ್ಯಗಳೇ ಮೊದಲಾದ ಹಿಂದಿನ ಶೈವಸಾಹಸಿಗಳನ್ನು ಕೊಂಡಾಡಿದ್ದಾರೆ. ಇವರನ್ನೇ ಅಲ್ಲದೆ ತಮಿಳುನಾಡಿನ ೬೩ ಪುರಾತನರನ್ನೂ ಸಹ ಕೊಂಡಾಡಿದ್ದಾರೆ. ಮತ್ತು ಅವರನ್ನು ಆದ್ಯರೆಂದು ಕರೆದಿದ್ದಾರೆ. ಈ ೬೩ ಪುರಾತ

ನರು ಆಚರಿಸಿದ ಧರ್ಮದಲ್ಲಿಯೂ ಸಹ ಲಿಂಗವಂತ ಧರ್ಮದ ಚಿಹ್ನೆಗಳೇನೂ ಕಂಡುಬರುವುದಿಲ್ಲ. ಎಂದಮೇಲೆ ಶಿವಶರಣರು ತಮ್ಮ ಹಿಂದಿನ ಈ ಶೈವ ಸಾಹಸಿಗಳನ್ನೂ ಮತ್ತು ೬೩ ಪುರಾತನರನ್ನೂ ಕೊಂಡಾಡಿದುದಕ್ಕೆ ಕಾರಣವೇನೆಂಬುದನ್ನು ವಿಚಾರ ಮಾಡಿದರೆ, ಈ ಶೈವ ಸಾಹಸಿಗಳೂ ಮತ್ತು ೬೩ ಪುರಾತನರೂ ತಮ್ಮ ಸಾಹಸಯುತವಾದ ಮತ್ತು ಭಕ್ತಿಯುತವಾದ ಕಾರ್ಯಗಳಿಂದ ೧೨ನೆಯ ಶತಮಾನದ ಸತ್ಯಾನ್ವೇಷಿಗಳಾದ ಶಿವಶರಣರನ್ನು ಹುರಿದುಂಬಿಸಿ ಅವರಲ್ಲಿ ಒಂದು ಆವೇಶವನ್ನುಂಟುಮಾಡಿದುದೇ ಕಾರಣವಾಗಿದೆಯೆಂದು ಧಾರಾಳವಾಗಿ ಹೇಳಬಹುದಾಗಿದೆ. ಈ ರೀತಿಯಲ್ಲಿ ಹುರಿದುಂಬಿ ಆವೇಶಹೊಂದಿದ ಶರಣರು ರಚಿಸಿದ ಅನುಭವಮಂಟಪದ ಚರ್ಚೆಗಳ ಫಲವಾಗಿ ಉದ್ಭವಿಸಿದ ಲಿಂಗವಂತ ಧರ್ಮವು ಹೊಸದಾದ, ವಿಶಿಷ್ಟವಾದ ಮತ್ತು ಸ್ವತಂತ್ರವಾದ ಧರ್ಮವಾಗಿದೆ ಹಿಂದಿನ ಶೈವಸಾಹಸಿಗಳು ಬೋಧಿಸಿದ ಧರ್ಮಕ್ಕೂ ಮತ್ತು ೬೩ ಪುರಾತನರು ಆಚರಿಸಿದ ಧರ್ಮಕ್ಕೂ ಲಿಂಗವಂತ ಧರ್ಮವು ತೀರ ಭಿನ್ನವಾದುದಾಗಿದ್ದಿತು. ಆದಾಗ್ಯೂ ಮೇಲೆ ಹೇಳಿದ ಕಾರಣಗಳಿಂದ ೧೨ನೆಯ ಶತಮಾನದ ಶಿವಶರಣರು ದೇವರ ದಾಸಿಮಯ್ಯಗಳೇ ಮೊದಲಾದ ಹಿಂದಿನ ಶೈವಸಾಹಸಿಗಳನ್ನೂ ಮತ್ತು ೬೩ ಪುರಾತನರನ್ನೂ ತಮ್ಮ ವಚನಗಳಲ್ಲಿ ಕೊಂಡಾಡಿದ್ದಾರೆ. ಈ ವಿಚಾರವನ್ನು ಒಟ್ಟಿನಲ್ಲಿ ಉಪಸಂಹಾರ ಮಾಡಿ ಹೇಳುವುದಾದರೆ— ದೇವರ ದಾಸಿಮಯ್ಯಗಳೇ ಮೊದಲಾದ ಶೈವಸಾಹಸಿಗಳು ದೇವರ ಎಂದರೆ ಪರಮಾತ್ಮನ ವಿಚಾರದಲ್ಲಿ ಹೇಳಿದ ಉಚ್ಚವಾದ ಅಭಿಪ್ರಾಯಗಳನ್ನೂ ಮತ್ತು ೬೩ ಪುರಾತನರು ಆಚರಿಸಿದ ನಿಚ್ಚಳ ಭಕ್ತಿಯನ್ನೂ ಬಳಸಿಕೊಂಡು ೧೨ನೆಯ ಶತಮಾನದ ಅನುಭವಮಂಟಪದ ಶಿವಶರಣರು ಕರ್ನಾಟಕದಲ್ಲಿ ಸಕಲಜನಪ್ರಿಯವಾದ ಮತ್ತು ವಿಶೇಷ, ವಿಶಿಷ್ಟ ಮತ್ತು ಸ್ವತಂತ್ರ ತತ್ವಾಚರಣೆಗಳಿಂದ ಕೂಡಿದ ಒಂದು ಹೊಸ ಧರ್ಮವನ್ನು ಸ್ಥಾಪಿಸಿದರು. ದೇವರದಾಸಿಮಯ್ಯಗಳೇ ಮೊದಲಾದ ಹಿಂದಿನ ಶೈವ ಸಾಹಸಿಗಳೂ ಮತ್ತು ೬೩ ಪುರಾತನರೂ ಬೋಧಿಸಿದ ಮತ್ತು ಆಚರಿಸಿದ ತತ್ವಾಚರಣೆಗಳು ೧೨ನೆಯ ಶತಮಾನದ ಅನುಭವಮಂಟಪದ ಶರಣರ ತತ್ವಾಚರಣೆಗಳಷ್ಟು ಆಕರ್ಷಣೀಯವೂ ಮತ್ತು ಅವಲಂಬನೀಯವೂ ಆಗಿರಲಿಲ್ಲ.

ಇನ್ನು ರೇವಣಸಿದ್ಧ ಮತ್ತು ಸಿದ್ಧರಾಮರಾದಿಗಳ ವಿಚಾರವಾದರೂ ಇಷ್ಟೆ. ಇವರುಗಳು ಕೇವಲ ಸ್ಥಾವರಲಿಂಗ ಪೂಜಕರಾಗಿದ್ದರೇ ಹೊರತು ಇಷ್ಟಲಿಂಗಪೂಜಕರಾಗಿರಲಿಲ್ಲ. ಇಷ್ಟಲಿಂಗವು ಲಿಂಗವಂತ ಧರ್ಮದ ಮುಖ್ಯ ಚಿಹ್ನೆ ಲಿಂಗವಂತ ಧರ್ಮದಲ್ಲಿ ಮತ್ತೊಂದು ವಿಶಿಷ್ಟವಾದ ತತ್ವವಿದೆ. ಅದೇ ಗುರುಲಿಂಗಜಂಗಮಗಳ ಏಕತ್ವದ ಮತ್ತು ಲಿಂಗಾಂಗ ಸಾಮರಸ್ಯದ ತತ್ವ. ೧೨ನೆಯ ಶತಮಾನಕ್ಕೆ ಹಿಂದಿನ ಶೈವಸಾಧುಸಿಗಳ ಮತ್ತು ೬೩ ಪುರಾತನರ ಧರ್ಮದಲ್ಲಿ ಈ ತತ್ವವು ಕಂಡುಬರುವುದಿಲ್ಲ. ರೇವಣಸಿದ್ಧಾದಿಗಳ ಕಾಲದಲ್ಲಿ ಸ್ಥಾವರ ಲಿಂಗಗಳನ್ನು ಸಾವಿರ ಸ್ಥಳಗಳಲ್ಲಿ ಸಾವಿರವಿಧಿಗಳಲ್ಲಿ ಪೂಜೆ ಮಾಡಿರಬಹುದು. ಆದರೆ ಸ್ಥಾವರ ಲಿಂಗ ಪೂಜೆಗೂ ಇಷ್ಟಲಿಂಗಪೂಜೆಗೂ ಯಾವ ಸಂಬಂಧವೂ ಇಲ್ಲ. ರಾ॥ ಬ॥ ಹಳಕಟ್ಟಿಯವರು ಈ ವಿಚಾರವನ್ನು ತಮ್ಮ ಶಿವಾನುಭವದ ೧೯೪೧ನೆಯ ಇಸವಿಯ ೧೫ನೆಯ ವರ್ಷದ ೫ನೆಯ ಸಂಚಿಕೆಯ ೧೮೨ನೆಯ ಪುಟದಲ್ಲಿ ೨ನೆಯ ವಿಭಾಗದಲ್ಲಿ ಒತ್ತಿ ಹೇಳಿದ್ದಾರೆ ಮತ್ತು ಲಿಂಗಾಯತ ಧರ್ಮದ ವಿಶಿಷ್ಟ ಮತ್ತು ಪ್ರತ್ಯೇಕ ಆಚರಣೆಗಳನ್ನು ೧೨ನೆಯ ಶತಮಾನದ ಅನುಭವಮಂಟಪದ ಒಬ್ಬ ಮುಖಂಡ ಶರಣನು ರೂಪಗೊಳಿಸಿ ಅವುಗಳನ್ನು ಆಚರಣೆಗೆ ತಂದನೆಂದು ಅವರು ಅದೇ ತಮ್ಮ ಶಿವಾನುಭವದ ೧೯೪೦ನೆಯ ಇಸವಿಯ ೧೪ನೆಯ ವರ್ಷದ ೩ನೆಯ ಸಂಚಿಕೆಯ ೧೧೦ನೆಯ ಪುಟದಲ್ಲಿ ೧ನೆಯ ಮತ್ತು ೨ನೆಯ ಪಂಕ್ತಿಗಳಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ಡಾ॥ ನಂದಿಮಠರವರ ಈ ಕೈಪಿಡಿ ಗ್ರಂಥವನ್ನೂ ಮತ್ತು ರಾವ್ ಬಹದ್ದೂರ್ ಹಳಕಟ್ಟಿಯವರು ತಮ್ಮ ಶಿವಾನುಭವದ ೧೪, ೧೫ ಮತ್ತು ೧೬ನೆಯ ವರ್ಷಗಳ ಸಂಚಿಕೆಗಳಲ್ಲಿ ಪ್ರಕಟಿಸಿರುವ ಲೇಖನ ಮಾಲೆಯನ್ನೂ ವಿಮರ್ಶಾತ್ಮಕ ದೃಷ್ಟಿಯಿಂದಲೂ ಮತ್ತು ತೆರೆದ ಮನಸ್ಸಿನಿಂದಲೂ ಯಾರಾದರೂ ಓದಿದಲ್ಲಿ ಅವರು ಈ ಇಬ್ಬರು ಮಹನೀಯರೂ ಕೊನೆಯಲ್ಲಿ ಯಾವ ತೀರ್ಮಾನಕ್ಕೆ ಬರಲು ಪ್ರಯತ್ನಿಸಿರುವರೋ ಆ ತೀರ್ಮಾನಕ್ಕೆ ತೀರ ವಿರುದ್ಧವಾದ ತೀರ್ಮಾನಕ್ಕೆ ನಿರ್ವಾಹವಿಲ್ಲದೆ ಬರುವಂತಾಗುತ್ತದೆ. ವಾಸ್ತವಿಕವಾಗಿ ನೋಡಿದರೆ ಮೇಲೆ ಕಂಡ ಇಬ್ಬರು ಮಹನೀಯರೂ ೧೨ನೆಯ ಶತಮಾನದ ಸತ್ಯಾನ್ವೇಷಿಗಳಾದ ಶರಣರ ಭದ್ರವಾದ ಮತ್ತು ನಂಬಿಕೆಗರ್ಹವಾದತಳಹದಿಯನ್ನೇ ಘಟ್ಟಿ

ಯಾಗಿ ಹಿಡಿದುಕೊಂಡಿರುತ್ತಾರೆ. ನಿಜವನ್ನು ನುಡಿವುದಾದರೆ ಲಿಂಗಾಯತ ಧರ್ಮವು ಇಂದಿಗೂ ನಿಂತಿರುವುದು ಈ ತಳಹದಿಯ ಮೇಲೆಯೇ. ಲಿಂಗಾಯತ ಧರ್ಮವು ಕರ್ಣಾಟಕ ಪ್ರಾಂತದಲ್ಲಿ ವಿಫುಲವಾಗಿ ಬೆಳೆದು ಈಗ ಸುಮಾರು ೪೦ ಲಕ್ಷ ಪ್ರಜಾ ಸಂಖ್ಯೆಯನ್ನು ಉಳ್ಳುದಾಗಿದೆ. ಈ ಧರ್ಮವು ತತ್ವದಲ್ಲೂ ಆಚರಣೆಯಲ್ಲೂ ಸಾವಿರಾರು ಜನರು ಗೌರವ ಮಾಡುವ ಮತ್ತು ಅವಲಂಬನೆಗಳಿಗೆ ಪಾತ್ರವಾಗಿ ಪರಿಶೋಭಿಸುತ್ತಿದೆ. ಈ ಧರ್ಮವನ್ನು ಸಂಸ್ಥಾಪಿಸಿದವರು ೧೨ನೆಯ ಶತಮಾನದ ಅನುಭವ ಮಂಟಪದ ಶಿವಶರಣರು. ಈ ಅನುಭವ ಮಂಟಪದ ಶಿವಶರಣರ ಈ ಧರ್ಮ ಸ್ಥಾಪನೆಯ ಕಾರ್ಯಕ್ಕೆ ಬೇಕಾದ ಆವೇಶವನ್ನೂ ಉಪಕರಣಗಳನ್ನೂ ಕಲ್ಪಿಸಿ ಕೊಟ್ಟವರು ದೇವರ ದಾಸಿಮಯ್ಯ, ರೇವಣಸಿದ್ಧ ಮೊದಲಾದ ಹಿಂದಿನ ಶೈವ ಸಾಹಸಿಗಳು. ಇದೀಗ ಲಿಂಗಾಯತ ಅಥವ ಲಿಂಗವಂತ ಧರ್ಮದ ನಿಜವಾದ ಇತಿಹಾಸ.

" ವೀರಶೈವ " ಎಂಬ ಪದ ಪ್ರಯೋಗವನ್ನು ನಾನು ಈ ಲೇಖನದಲ್ಲಿ ಔಚಿತ್ಯದಿಂದ ಬಿಟ್ಟಿರುತ್ತೇನೆ. ಏಕೆಂದರೆ ೧೨ನೆಯ ಶತಮಾನದ ಅನುಭವ ಮಂಟಪದ ಶಿವಶರಣರು ಯಾವ ಧರ್ಮವನ್ನು ಪ್ರತಿಪಾದಿಸಿದರೋ ಆ ಧರ್ಮದ ಮೂಲತತ್ವಗಳನ್ನು ನಿರ್ದೇಶಿಸಲು ಈ ಪದವು ಸಾಮರ್ಥ್ಯವುಳ್ಳುದಾಗಿಲ್ಲ. ಈ ಸಂದರ್ಭದಲ್ಲಿ ರಾವ್ ಬಹದ್ದೂರ್ ಹಳಕಟ್ಟಿಯವರು ತಮ್ಮ ಶಿವಾನುಭವದ ೧೯೪೧ನೆಯ ಇಸ್ವಿಯ ೧೫ನೆಯ ಸಂಪುಟದ ೭ನೆಯ ಸಂಚಿಕೆಯ ೨೫೫-೨೬೨ ಪುಟಗಳಲ್ಲಿ " ಬ್ರಹ್ಮ ವಿಷ್ಣು ರುದ್ರ " ಎಂಬ ಶಿರೋನಾಮೆಯಲ್ಲಿ ಬರೆದಿರುವ ಲೇಖನವನ್ನು ವಾಚಕರು ಅವಲೋಕಿಸಬೇಕು. ಆ ಲೇಖನದಲ್ಲಿ ೨ನೆಯ ವಿಭಾಗವು ಬಹು ಮುಖ್ಯವಾದುದು. ಹಿಂದೂ ಮತೀಯರು ಒಪ್ಪಿಕೊಂಡು ಅಂಗೀಕರಿಸಿರುವ ಬ್ರಹ್ಮ ವಿಷ್ಣು ರುದ್ರ ಈ ತ್ರಿಮೂರ್ತಿಗಳನ್ನು ವಚನಕಾರರು ಒಪ್ಪಿಕೊಂಡಿಲ್ಲವೆಂದೂ ಮತ್ತು ಅಂಗೀಕರಿಸಿಲ್ಲವೆಂದೂ ರಾ॥ ಬ॥ ಹಳಕಟ್ಟಿಯವರು ಆ ವಿಭಾಗದಲ್ಲಿ ಉಲ್ಲೇಖಿಸಿದ್ದಾರೆ. ಎಂದ ಮೇಲೆ ವಚನಕಾರರ ಧರ್ಮಾವಲಂಬಿಗಳಾದ ನಾವುಗಳು ವೀರಶೈವರೆಂದು ಕರೆದುಕೊಳ್ಳಲು ಬರುವುದಿಲ್ಲ. (ರಾವ್ ಬಹದ್ದೂರ್ ಹಳಕಟ್ಟಿಯವರು ತಮ್ಮ ಶಿವಾನುಭವದ ೧೯೪೧ನೆಯ ಇಸವಿಯ ೧೫ನೆಯ ಸಂಪುಟದ ೪ನೆಯ ಸಂಚಿಕೆಯ ೧೫೯-೧೬೬ನೆಯ ಪುಟಗಳಲ್ಲಿ ಬರೆದಿರುವ ಲೇಖನವನ್ನು

ನಾಚಕರು ಓದಬೇಕು) ದೇವಸ್ಥಾನಗಳಲ್ಲಿ ಸ್ಥಾಪಿಸಲ್ಪಟ್ಟ ಸ್ಥಾವರ ಲಿಂಗಗಳನ್ನು ಪೂಜಿಸುವ ಪಂಥ ಅಥವಾ ಪಂಥಗಳು ದಕ್ಷಿಣ ಭಾಂತದಲ್ಲಿಯೂ ಮತ್ತು ಇತರ ಕಡೆಗಳಲ್ಲಿಯೂ ಇರಬಹುದು. ಈ ರೀತಿ ಸ್ಥಾವರ ಲಿಂಗ ಪೂಜಕರಾದ ಒಂದು ಬಗೆಯ ಶೈವರು ಮದ್ರಾಸು ಪ್ರಾಂತದ ರಾಮನಾಡು ಮತ್ತು ತಿನ್ನವೆಲ್ಲಿ ಡಿಸ್ಟ್ರಿಕ್ಟುಗಳಲ್ಲಿ ಈಗಲೂ ಇದಾರೆ. ಇವರ ಗುರುಗಳಿಗೆ ಶಿವಾಚಾರ್ಯರೆಂದು ಹೆಸರಿದೆ. ಆದರೆ ಇವರು ಲಿಂಗಾಯತರಲ್ಲ. ಇವರು ಉಗ್ರ ಶಿವೋಪಾಸಕರು ಮಾತ್ರ. ಈ ಉಗ್ರ ಶಿವೋಪಾಸನೆಯ ಕಾರಣದ ಮೇಲೆ ಇವರನ್ನು ಬೇಕಾದರೆ ವೀರ-(ಉಗ್ರ) ಶೈವರೆಂದು ಕರೆಯಬಹುದು. ಆದರೆ ಲಿಂಗವಂತರನ್ನು ವೀರಶೈವರೆಂದು ಕರೆಯುವುದಕ್ಕಾಗುವುದಿಲ್ಲ. ಗುರುಲಿಂಗ ಜಂಗಮ ಎಂಬ ತ್ರಿವಿಧಪೂಜ್ಯ ವಸ್ತುಗಳನ್ನು ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಷಟ್ಸ್ಥಲ ದರ್ಶನವನ್ನು ಗುರುಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಪಾದೋದಕ ಪ್ರಸಾದ ಮಂತ್ರ ಎಂಬ ಅಷ್ಟಾವರಣಗಳ ರಕ್ಷಣೆಯನ್ನೂ ಉಳ್ಳಂಥ ಲಿಂಗವಂತ ಧರ್ಮದಲ್ಲಿ ಶಿವೋಪಾಸನೆಗೂ ಸಹ ಅವಕಾಶವಿಲ್ಲ. ಸ್ಥಾವರ ಲಿಂಗ ಪೂಜೆಗಂತೂ ಸ್ವಲ್ಪವೂ ಅವಕಾಶವಿಲ್ಲ. ಆದುದರಿಂದ "ವೀರಶೈವ" ಎಂಬ ಹೆಸರು ಲಿಂಗಾಯತರಲ್ಲದ ಶುದ್ಧ ಅಥವಾ ಉಗ್ರ ಶೈವರಿಗೆ ಹೆಚ್ಚು ಸಮಂಜಸವಾಗಿ ಅನ್ವಯಿಸುತ್ತದೆ. ಲಿಂಗವಂತ ಧರ್ಮಕ್ಕೂ ಬ್ರಹ್ಮ ವಿಷ್ಣು ಶಿವರೆಂಬ ತ್ರಿಮೂರ್ತಿಗಳಿಗೂ ಯಾವ ಸಂಬಂಧವೂ ಇಲ್ಲ. ದೇವರ ವಿಚಾರದಲ್ಲಿ ಲಿಂಗಾಯತರು ಇಟ್ಟುಕೊಂಡಿರತಕ್ಕ ಕಲ್ಪನೆ ಬ್ರಹ್ಮವಿಷ್ಣುಶಿವರೆಂಬ ತ್ರಿಮೂರ್ತಿಗಳನ್ನು ಮೀರಿದೆ. ಡಾ॥ ನಂದೀಮಠರವರು ತಮ್ಮ ಕೈಪಿಡಿ ಗ್ರಂಥದಲ್ಲಿ ಆಗಮಿಕ ಮತ್ತು ವೈದಿಕ ಸಿದ್ಧಾಂತಗಳನ್ನು ಹೋಲಿಕೆ ಮಾಡುವ ಸಂದರ್ಭದಲ್ಲಿ ನನ್ನ ಈ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. ಆಗಮಿಕ ಸಿದ್ಧಾಂತದಲ್ಲಿ ಅನೇಕ ಪ್ರಭೇದಗಳಿವೆ. ಪಾಶುಪತ, ಲಕುಲೀಶ, ಕಾಳಾಮುಖ ಮುಂತಾದ ಸಿದ್ಧಾಂತಗಳೇ ಆ ಪ್ರಭೇದಗಳು (ಡಾ॥ ನಂದೀಮಠರವರ ಕೈಪಿಡಿ ಗ್ರಂಥದ ೬-೯ನೆಯ ಪುಟಗಳನ್ನು ದಯಮಾಡಿಟ್ಟು ನೋಡಿ). ಈ ಪ್ರಭೇದಗಳು ಬರಬರುತ್ತ ಕ್ಷೀಣತೆಗೆ ಬಂದು ಅವುಗಳಲ್ಲಿ ದುಷ್ಟ ಆಚರಣೆಗಳು ಮೂಡಿದವು. ಪ್ರಸಿದ್ಧರಾದ ಶ್ರೀಶಂಕರಾಚಾರ್ಯರು ಈ ಪ್ರಭೇದಗಳ ಈ ದುಷ್ಟ ಆಚರಣೆಗಳನ್ನು ಖಂಡಿಸಿದರು. ಆದರೆ ಶಂಕರಾಚಾರ್ಯರು ಈ ಪ್ರಭೇದಗಳ ಈ ದುಷ್ಟ ಆಚರಣೆಗಳನ್ನು

ಯಶಸ್ವಿಯಾಗಿ ಕಡೆಗಟ್ಟಲು ಶಿಸ್ತಿನಿಂದ ಕಾರ್ಯಗಳನ್ನು ಕೈಗೊಂಡಂತೆ ಕಾಣುವುದಿಲ್ಲ. ಈ ಕಾರ್ಯಭಾರವು ದೇವರದಾಸಿಮಯ್ಯ ಮತ್ತು ಅವನ ಅನುಯಾಯಿಗಳ ಮೇಲೂ ಕೊನೆಗೆ ೧೨ನೆಯ ಶತಮಾನದ ಅನುಭವಮಂಟಪದ ಶರಣರ ಮೇಲೂ ಬಿದ್ದಿತು. ಅನುಭವ ಮಂಟಪದ ಶರಣರು ಉನ್ನತವಾದ ತತ್ವಗಳನ್ನು ಒಳಗೊಂಡ ಮತ್ತು ಜನತೆಗೆ ಹೆಚ್ಚಿನ ಹಿತವನ್ನು ಕೊಡತಕ್ಕ ಒಂದು ಹೊಸ ಧರ್ಮವನ್ನು ಪ್ರತಿಪಾದಿಸಿದರು. ಇದರ ಕಾರ್ಯ ಕ್ಷೇತ್ರವು ಕರ್ನಾಟಕ ದೇಶಕ್ಕೆ ಮಾತ್ರ ಅನ್ವಯಿಸಿತ್ತು. ಪ್ರಾಯಶಃ ಇಂತಹ ಕಾರ್ಯಗಳು ಇಂಡಿಯಾ ದೇಶದ ಇತರ ಪ್ರಾಂತಗಳಲ್ಲಿಯೂ ನಡೆದಿರಬಹುದು. ಆದರೆ ಪ್ರಸ್ತುತ ಅವು ನಮಗೆ ಸಂಬಂಧಿಸಿಲ್ಲ.

ಇನ್ನು ನಮ್ಮ ಪಂಚಾಚಾರ್ಯರ ವಿಚಾರವಾಗಿ ಈ ಗ್ರಂಥವಲ್ಲಿ ಹೇಳಿರುವುದು ಅತ್ಯಲ್ಪ. ಚಾರಿತ್ರಿಕ ದೃಷ್ಟಿಯಿಂದಲಂತೂ ಈ ಗ್ರಂಥದಲ್ಲಿ ಅವರ ವಿಷಯವಾಗಿ ಹೇಳಿರುವುದು ಏನೇನೂ ಇಲ್ಲವೆಂದೇ ನುಡಿಯಬೇಕಾಗುತ್ತದೆ. ಈಗಿನ ಕಾಲದ ವಿಚಾರ ವಿಮರ್ಶಕರು ಪೌರಾಣಿಕ ಕಥೆಗಳನ್ನು ಒಪ್ಪುವುದಿಲ್ಲ. ಪಂಚಾಚಾರ್ಯರ ಪಂಚಮಠಗಳು ನಮ್ಮ ದುರಿಗೆ ಪ್ರತ್ಯಕ್ಷವಾಗಿ ಕಾಣುತ್ತಿವೆ. ಆ ಪಂಚಪೀಠಗಳ ಮೇಲೆ ಮಂಡಿಸಿ ಶೋಭಿಸುತ್ತಿರುವ ಪಂಚಗುರುಗಳನ್ನೂ ನಾವು ಪ್ರತ್ಯಕ್ಷವಾಗಿ ನೋಡುತ್ತಿದೇವೆ. ಅವರ ವಿಚಾರದಲ್ಲಿ ನಮಗೆ ಪೂರ್ಣವಾದ ಗೌರವವಿದೆ. ಅವರು ನಮ್ಮ ಲಿಂಗವಂತ ಧರ್ಮದ ಮೂರು ಪವಿತ್ರವಸ್ತುಗಳಾದ ಗುರುಲಿಂಗ ಜಂಗಮಗಳಲ್ಲಿ ಒಂದು ವಸ್ತುವಾಗಿ ಪ್ರಜ್ವಲಿಸುತ್ತಿದ್ದಾರೆ. ಲಿಂಗವಂತ ಧರ್ಮದ ಏಕತ್ವ ಮತ್ತು ಸಮಾನತ್ವಗಳು ಈ "ಗುರು ಲಿಂಗ ಜಂಗಮ" ತತ್ವದಲ್ಲಿ ಅಡಗಿವೆ. ಇಂಥ ಪಂಚಾಚಾರ್ಯರ ವಿಷಯದಲ್ಲಿ ನಮಗೆ ಹೆಚ್ಚು ಹೆಚ್ಚಾಗಿ ಚಾರಿತ್ರಿಕ ಅಂಶಗಳು ಬೇಕಾಗಿವೆಯೇ ವಿನಹ ಪೌರಾಣಿಕ ಕಥೆಗಳು ಬೇಕಿಲ್ಲ. ಬೇಧಾ ಬೇಧಗಳ ಗಡಿಬಿಡಿಯೂ ಬೇಕಿಲ್ಲ. ನಮಗೆ ಬೇಕಾದುದು ನಿಜವಾದ ಮತ್ತು ಸಹಜವಾದ ಚಾರಿತ್ರಾಂಶಗಳು ಮಾತ್ರ. ವಚನಕಾರರು ತಿಳಿಸುವಂಥ ನಿಜವಾದ ಸಹಜವಾದ ಅಂಶಗಳು ಮಾತ್ರ ನಮ್ಮ ದುರದೃಷ್ಟದಿಂದ ಪುರಾಣಗಳ ಕಟ್ಟು ಕಥೆಗಳ ಮೆದೆಯಲ್ಲಿ ಸತ್ಯವು ಮುಚ್ಚಿ ಹೋಗಿದೆ. ಇದೇ ನಾವೀಗ ಅನುಭವಿಸುತ್ತಿರುವ ಕಷ್ಟ. ಒಂದು ಕಡೆ ೧೨ನೆಯ ಶತ

ಮಾನದ ಅನುಭವ ಮಂಟಪದ ಶಿವಶರಣರ ನಿಜಚರಿತ್ರೆ ಕಂಗೊಳಿ ಸುತ್ತಿದೆ. ಇನ್ನೊಂದು ಕಡೆ ಪೂಜ್ಯರಾದ ನಮ್ಮ ಪಂಚಾಚಾರ್ಯರ ಪುರಾಣ ಕಥೆಗಳು ಮಿಣ ಮಿಣ ಎನ್ನುತ್ತಿವೆ. ನಾವೀಗ "ನಮ್ಮ ಧರ್ಮ" ಎಂದು ಏನೆ ತತ್ವ ಏನೇನು ಹೇಳಿಕೊಳ್ಳಬಲ್ಲೆವೋ ಅವೆ ಲ್ಲವನ್ನೂ ನಾವು ೧೨ನೆಯ ಶತಮಾನದ ಅನುಭವ ಮಂಟಪದ ಶರ ಣರಿಂದಲೇ ಪಡೆದಿರುತ್ತೇವೆ. ಇನ್ನು ಪಂಚಾಚಾರ್ಯರ ಚರಿತ್ರೆಯಾ ದರೋ ಪೌರಾಣಿಕ ಕಥೆಗಳ ಬಣಬೆಯಲ್ಲಿ ಸಂಪೂರ್ಣವಾಗಿ ಮುಚ್ಚಿ ಹೋಗಿದೆ. ಮೇಲಾಗಿ ೧೨ನೆಯ ಶತಮಾನದ ಶಿವಶರಣರು ತಮ್ಮ ವಚನಗಳಲ್ಲಿ ಪಂಚಾಚಾರ್ಯರ ವಿಷಯವನ್ನು ಪ್ರಸ್ತಾಪಿಸಿಲ್ಲ. ಪಂಚಾ ಚಾರ್ಯರಲ್ಲಿ ರೇವಣಸಿದ್ಧರೊಬ್ಬರು ಮಾತ್ರ ೧೨ನೆಯ ಶತಮಾನದ ಸುಮಾರಿನಲ್ಲಿ ಚಾರಿತ್ರಿಕವಾಗಿ ಸ್ವಲ್ಪ ಮಟ್ಟಿಗೆ ಕಾಣಿಸಿಕೊಳ್ಳುತ್ತಾರೆ. ಉಳಿದ ನಾಲ್ಕು ಮಂದಿ ಆಚಾರ್ಯರು ಆ ಕಾಲದಲ್ಲಿ ಕಣ್ಣಿಗೇ ಬೀಳು ವುದಿಲ್ಲ. ರೇವಣಸಿದ್ಧರಿಗಿಂತ ಸ್ವಲ್ಪ ಈಚೆಗೆ ಪಂಡಿತಾರಾಧ್ಯರು ಆಗ ತಾನೆ ಅನುಭವ ಮಂಟಪದಿಂದ ಪ್ರವಹಿಸಿದ್ದ ವಚನಾಮೃತವನ್ನು ಪಾನ ಮಾಡುತ್ತಿದ್ದುದು ಕಂಡು ಬರುತ್ತದೆ. ಆದರೆ ಈ ಇಬ್ಬರು ಆಚಾರ್ಯ ರೂ ತಮ್ಮ ಜೀವಿತದ ಪ್ರಾರಂಭದಲ್ಲಿ ಲಿಂಗವಂತ ಧರ್ಮವನ್ನು ಸ್ವೀಕ ರಿಸಿದಂತೆ ಕಾಣುವುದಿಲ್ಲ. ಅವರು ಮೊದ ಮೊದಲು ಕೇವಲ ಸ್ಥಾವರ ಲಿಂಗ ಪೂಜಕರಾಗಿಯೇ ಇದ್ದರು. ಕೊನೆ ಕೊನೆಗೆ ಅವರು ಅನುಭವ ಮಂಟಪದ ಶರಣರ ಧರ್ಮವನ್ನು ಒಪ್ಪಿ ಅಪ್ಪಿಕೊಂಡರೆಂದು ಊಹಿಸಲು ಅವಕಾಶವಿದೆ. ಆದರೆ ಈ ಆಚಾರ್ಯರ ಮುಂದಿನ ಪೀಳಿಗೆಯು ಮಾತ್ರ ಲಿಂಗವಂತ ಧರ್ಮವನ್ನು ಸಂಪೂರ್ಣವಾಗಿ ಸ್ವೀಕರಿಸಿತೆಂದು ಖಂಡಿತ ವಾಗಿ ಹೇಳಬಹುದಾಗಿದೆ. ಉದಾಹರಣೆಗೆ ರುದ್ರಮುನಿ ಸ್ವಾಮಿಗಳನ್ನು ತೆಗೆದುಕೊಳ್ಳಬಹುದು. ಇವರು ಲಿಂಗವಂತ ಧರ್ಮವನ್ನು ಸ್ವೀಕರಿಸಿ ಆ ಧರ್ಮವನ್ನು ಕರ್ನಾಟಕದಲ್ಲಿ ಬಲಗೊಳಿಸಿ ಒಂದು ಸ್ಥಾಯಿಗೆ ತರುವ ಕೆಲಸದಲ್ಲಿ ಬಹಳವಾಗಿ ಶ್ರಮಿಸಿದರು. ಆಂಧ್ರದೇಶವಾದರೋ ಪಂಡಿತಾರಾಧ್ಯರ ಪ್ರಭಾವಕ್ಕೆ ಒಳಪಟ್ಟಿತು. ಈ ರೀತಿಯಲ್ಲಿ ಪಂಚಾ ಚಾರ್ಯರ ಚರಿತ್ರೆ ೧೨ನೆಯ ಶತಮಾನದಿಂದೀಚೆಗೆ ಅಲ್ಪ ಸ್ವಲ್ಪ ಸಿಕ್ಕು ವುದೇ ಹೊರತು ೧೨ನೆಯ ಶತಮಾನದಲ್ಲಾಗಲಿ ಅಥವಾ ಅದಕ್ಕೆ ಹಿಂದೆ ಯಾಗಲಿ ಸಿಕ್ಕುವುದಿಲ್ಲ. ಇದರಿಂದ ಪಂಚಾಚಾರ್ಯರು ೧೨ನೆಯ ಶತ

ಮಾನದ ವಚನಕಾರರ ಈಚೆಗೆ ನಾಡಿನಲ್ಲಿ ಧರ್ಮ ಗುರುಗಳಾಗಿ ಕೆಲಸ ಮಾಡಿರಬೇಕೆಂದು ವಿಚಾರ ವಿಮರ್ಶಕರು ಊಹಿಸಲು ಅವಕಾಶವಿದೆ. ಪಂಚಾಚಾರ್ಯರು ೧೨ನೆಯ ಶತಮಾನಕ್ಕೆ ಹಿಂದೆಯೇ ಇದ್ದರೆಂದೂ ಅವರು ಲಿಂಗವಂತ ಧರ್ಮವನ್ನು ಪ್ರತಿಪಾದಿಸಿದರೆಂದೂ ಅದೇ ಧರ್ಮವನ್ನು ಮುಂದೆ ವಚನಕಾರರು ೧೨ನೆಯ ಶತಮಾನದಲ್ಲಿ ಉದ್ಧಾರ ಮಾಡಿದರೆಂದೂ ಒಂದು ಪಕ್ಷ ಹೇಳುವುದಾದರೆ ವಚನಕಾರರು ತಮ್ಮ ವಚನಗಳಲ್ಲಿ ಪಂಚಾಚಾರ್ಯರ ಪ್ರಸ್ತಾಪವನ್ನೇ ಮಾಡಿಲ್ಲವೇಕೆ? ೧೨ನೆಯ ಶತಮಾನಕ್ಕೆ ಸ್ವಲ್ಪ ಹಿಂದೆ ಇದ್ದ ದೇವರ ದಾಸಿಮಯ್ಯ ಮತ್ತು ಇನ್ನು ಕೆಲವರಿಗೂ ಮತ್ತು ಅನುಭವ ಮಂಟಪದ ವಚನಕಾರರಿಗೂ ಸ್ವಲ್ಪ ಮಟ್ಟಿನ ಮತ ಭೇದವಿದ್ದರೂ ಸಹ ವಚನಕಾರರು ಅವರುಗಳನ್ನು ತಮ್ಮ ವಚನಗಳಲ್ಲಿ ಎತ್ತಿಕೊಂಡಿರುವುದೇನು? ಲಿಂಗವಂತ ಧರ್ಮದ ಪಂಚಪೀಠಗಳ ಪಂಚಾಚಾರ್ಯರುಗಳನ್ನು ಬಿಟ್ಟಿರುವುದೇನು? ಈ ವಿಚಾರದಲ್ಲಿ ನಾನು ಹೇಳುವುದಿಷ್ಟೇ. ಕಟ್ಟುಕಥೆಗಳ ಆಚಾರ್ಯರು ಬೇಕಾದರೆ ತಮ್ಮ ಕಥೆಗಳನ್ನು ತಾವೇ ಓದಿಕೊಂಡು ನಲಿಯಲಿ. ಅವರ ಕಟ್ಟುಕಥೆಗಳ ಕೌದಿಗೆ ಮತ್ತಷ್ಟು ಕಥೆಗಳ ತುಂಡುಗಳನ್ನು ಹೊಲಿದು ಜೋಡಿಸಬೇಕಾದ ಹವ್ಯಾಸ ನಮಗೆ ಬೇಡ. ಒಂದು ವೇಳೆ ನಾವು ಆ ಹವ್ಯಾಸಕ್ಕೆ ಬಿದ್ದಲ್ಲಿ ನಮ್ಮ ಸಮಾಜದ ಕಟ್ಟಡವು ಕೆಳಕ್ಕುರುಳುವುದರಲ್ಲಿ ಸಂದೇಹವೇ ಇಲ್ಲ. ಈ ಹವ್ಯಾಸದಿಂದ ದೂರವಾಗಿ ಈಗ ೮೦೦ ವರ್ಷಗಳಿಂದಲೂ ಸರಳವಾಗಿ ಮತ್ತು ನೈಜವಾಗಿ ನಡೆದು ಬಂದಿರತಕ್ಕ ೧೨ನೆಯ ಶತಮಾನದ ಬಂಧುರವಾದ ಮತ್ತು ಸಂರಕ್ಷಿತವಾದ ಶರಣಚಾರಿತ್ರವನ್ನು ನಾವು ಎಷ್ಟೆಷ್ಟು ದೃಢವಾಗಿ ನಂಬುವೆವೋ ಅಷ್ಟಷ್ಟು ನಮ್ಮ ಲಿಂಗವಂತ ಸಮಾಜವು ವಿಜೃಂಭಿಸಿ ಪ್ರಗತಿಯನ್ನು ಹೊಂದುವುದರಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲ.

ಇನ್ನು ಒಟ್ಟಿನಲ್ಲಿ ಡಾಕ್ಟರ್ ಎಸ್. ಸಿ. ನಂದೀಮಠರವರೂ ಮತ್ತು ರಾವ್‌ಬಹದ್ದೂರ್ ಫ. ಗು. ಹಳಕಟ್ಟಿಯವರೂ ತಮ್ಮ ಮೇಲೆ ಕಂಡ ಪ್ರಕಟಣೆಗಳ ಮೂಲಕ ವೀರಶೈವ ಸಮಾಜಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸಿರುತ್ತಾರೆ. ಲಿಂಗಾಯತ ಧರ್ಮದ ತತ್ವಗಳನ್ನು ವಿಮರ್ಶೆಮಾಡಿ ಅವುಗಳ ತಿರುಳನ್ನು ಹೊರಹೊಮ್ಮಿಸಿ ತೋರಿಸಿಕೊಟ್ಟು ಉಪಕಾರ ಮಾಡಿರುವ ಇವರುಗಳನ್ನು ಮುಂದಿನ ಚರಿತ್ರಕಾರರು ಅನುಭವಮಂ

ಟಪದ ಶರಣರ ಜೊತೆಗೆ ಹೋಲಿಕೆ ಮಾಡಿ ವರ್ಣಿಸುವುದರಲ್ಲಿ ಏನೇನೂ ಸಂದೇಹವಿಲ್ಲ.

ಇಲ್ಲಿ ನಾನು ಒಂದು ಸಲಹೆಯನ್ನು ಮಾಡಲು ಇಚ್ಛಿಸುತ್ತೇನೆ. ಡಾ॥ ನಂದೀಮಠರವರ ಈ ಕೈಪಿಡಿ ಗ್ರಂಥವು ಜನಪದ ಆವೃತ್ತದ ರೂಪದಲ್ಲಿ ಅತ್ಯಂತ ಮಿತವಾದ ಬೆಲೆಗೆ ಎಂದರೆ ಸುಮಾರು ಎಂಟು ಆಣೆಗಳ ಬೆಲೆಗೆ ದೊರೆಯುವಂತಾಗಬೇಕು. ಹೀಗೆ ಸುಲಭವಾದ ಬೆಲೆಗೆ ಈ ಗ್ರಂಥವನ್ನು ದೊರಕಿಸಿಕೊಡುವುದರಿಂದ ಪ್ರತಿಯೊಬ್ಬ ಲಿಂಗವಂತನೂ ಈ ಗ್ರಂಥವನ್ನು ಕೊಂಡುಕೊಂಡು ಓದಲು ಅನುಕೂಲವಾಗುವುದು. ಅಲ್ಲದೆ ಈ ಗ್ರಂಥವನ್ನು ಕನ್ನಡ ಭಾಷೆಗೂ ಪರಿವರ್ತಿಸಿ ಅದನ್ನು ಉಚಿತವಾಗಿಯಾಗಲಿ ಅಥವಾ ಒಂದೆರಡು ಆಣೆಗಳ ಬೆಲೆಯ ಮೇಲಾಗಲಿ ಹಂಚಲು ಪ್ರಯತ್ನಮಾಡಬೇಕು. ಈ ಗ್ರಂಥದ ಕನ್ನಡ ಪ್ರತಿಯನ್ನು ಬಹಳ ವ್ಯಾಪಕವಾಗಿ ಹಂಚಬೇಕು. ಇದರ ಜೊತೆಗೆ ರಾವ್‌ಬಹದ್ದೂರ್ ಹಳಕಟ್ಟಿಯವರು ಈ ವಿಚಾರವಾಗಿ ೧೯೪೦—೪೧ ಮತ್ತು ೪೩ನೆಯ ಸಾಲುಗಳ ಶಿವಾನುಭವ ಸಂಚಿಕೆಗಳಲ್ಲಿ ಪ್ರಕಟಗೊಳಿಸಿರತಕ್ಕ ಅವರ ಲೇಖನಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಮುದ್ರಣಗೊಳಿಸಿ ಅವುಗಳನ್ನೂ ಸಹ ಡಾ॥ ನಂದೀಮಠರವರ ಗ್ರಂಥದ ಜೊತೆಗೆ ವಿಪುಲವಾಗಿ ಹಂಚಬೇಕು.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ—೧೫.]

---

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನು ಏಕಾಂತದಲ್ಲಿ ವಾಸಿಸದೆ ಸಾಮಾನ್ಯ ಜನತೆಯ ಜೀವನದಲ್ಲಿ ಬೆರೆದು ಅವರ ರೀತಿನಡತೆಗಳನ್ನು ತಿಳಿದುಕೊಂಡು ಅವರನ್ನುದ್ಧರಿಸುವ ಪ್ರಯತ್ನಮಾಡಿದ್ದಾನೆಂಬುದನ್ನು ಸಿದ್ಧಪಡಿಸಲು ಅವನ ಅನೇಕ ವಚನಗಳನ್ನು ಉದಹರಿಸಿದ್ದೇವೆ. ಅವೆಲ್ಲವುಗಳು ಒಕ್ಕಲಿಗರ ಜೀವನವನ್ನೂ ಅವರೊಡನಾಡುವ ಪಶುಪಕ್ಷಿಗಳನ್ನೂ ಸಂಬಂಧಿಸಿರುತ್ತವೆ. ಒಕ್ಕಲಿಗನಿಗೆ ಹೇಗೆ ಪಶುಪಕ್ಷಿಗಳು ಸಂಬಂಧಪಡುತ್ತವೆಯೋ ಹಾಗೆಯೇ ಗಿಡ, ಬಳ್ಳಿ, ಮರ, ಕಾಯಿ, ಹಣ್ಣು, ಎಲೆ ಮೊದಲಾದವುಗಳೂ ಸಂಬಂಧಪಡುತ್ತವೆ. ಅದ್ದರಿಂದ ಬಸವೇಶ್ವರನು ಅವುಗಳ ಉದಾಹರಣೆಗಳನ್ನು ಆಗಿಂದಾಗ್ಗೆ ತೆಗೆದುಕೊಂಡು ಅನೇಕ ಉಚ್ಚ ಧಾರ್ಮಿಕ ಮತ್ತು ನೈತಿಕ ತತ್ವಗಳನ್ನು ತನ್ನ ವಚನಗಳಲ್ಲಿ ಬೋಧಿಸಿದ್ದಾನೆ. ಆ ವಚನಗಳನ್ನು ನಾವು ಪರೀಕ್ಷಿಸಿದರೆ ಅವು ಏಕಾಂತವಾಸದಲ್ಲಿದ್ದವನ ನುಡಿಗಳಲ್ಲೆಂಬುದು ಕೂಡಲೆ ತಿಳಿದುಬರುವಂತಿದೆ.

"**ಯೆಲವದ ಮರ** ಹೂತು ಫಲವಾದ ತೆರನಂತೆ ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ? ಫಲವಾದರೇನು **ಹಾವುಮೆಕ್ಕೆಯ ಕಾಯಿ**......ಅವಗುಣಿಗಳನು ಮೆಚ್ಚ ನಮ್ಮ ಕೂಡಲಸಂಗಮದೇವ" (ವಚನ ೧೮೯).

ಇವರಲ್ಲಿ ಭಕ್ತಿ ಮತ್ತು ನೀತಿಯ ಮಹತ್ವವನ್ನು ಕೆಲವು ಗಿಡಗಳ ಉದಾಹರಣೆಗಳನ್ನು ತೆಗೆದುಕೊಂಡು ಹೇಳಿದ್ದಾನೆ.

'ಹಸಿದು **ಎಕ್ಕೆಯ ಕಾಯ** ಮೆಲಬಹುದೇ? ...**ಸುಣ್ಣ ತುಯ್ಯಲು ಬಣ್ಣ** ಒಂದೆಂದರೆ ನಂಟುತನಕ್ಕೆ ಉಣಬಹುದೇ? ಲಿಂಗ ಸಾರಾಯ ಸಜ್ಜನರಲ್ಲದವರ ಕೂಡಲಸಂಗಮದೇವರೆಂತೊಲಿವ? (೧೯೩.)

ಇದರಲ್ಲಿ ಬಸವೇಶ್ವರನು ದುರ್ಜನರ ಸಹವಾಸವನ್ನು ನಿಷೇಧಿಸಿದ್ದಾನೆ.

ತುಯ್ಯಲ = ಪರಮಾನ್ನ

'ತಾಳ ಮರದ ಕೆಳಗೆ ಒಂದು ಹಾಲ ಹರಿವೆ ಇದ್ದರೆ, ಅದ ಹಾಲ ಹರಿವೆಯೆನ್ನರು. ಸುರೆಯ ಹರಿವೆ ಯೆಂಬರು. ಈ ಭಾವ ನಿಂದೆಯ ಮಾಣಿಸು. ಕೂಡಲಸಂಗಮದೇವಾ' (೨೧೧) ಎಂದು ಹೇಳುತ್ತಾನೆ.

ಮನಸ್ಸು ಶುದ್ಧವಾಗಿರುವದಿಲ್ಲೆಂಬುದನ್ನು 'ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿದಡೇನು ಹುರುಳಿಲ್ಲವಯ್ಯ." (೨೩೮)

ಇಲ್ಲಿ ಹಣ್ಣಿನ ಉದಾಹರಣೆಯನ್ನು ಕೊಟ್ಟು ಮನಸ್ಸಿನ ಸ್ಥಿತಿಯನ್ನು ಹೇಳುತ್ತಾನೆ. ಇದೇ ವಿಷಯವಾಗಿ ಕೆಳಗೆ ಕಾಣಿಸಿದ ಎರಡು ಉದಾಹರಣೆಗಳನ್ನು ಸಹ ವಾಚಕರು ಅವಲೋಕಿಸಬೇಕು.

ಉರವೆಲೆಯಂತೆ ಒಳಗೊಂದು ಹೊರಗೊಂದು ಆದರೆ ಮೆಚ್ಚುವನೇ? ಬಾರದ ಭವಂಗಳ ಬರಿಸುವನಲ್ಲದೆ ಮೆಚ್ಚುವನೇ? (೨೪೫)

ಬೆದಕದಿರು. ಬೆದಕಿದರೆ ಹುರುಳಿಲ್ಲ. ಚಿತ್ರದಟ್ಟೆಯ ಕಾಯಲ್ಲಿ ಮತ್ತೇನನರಸುವಿರಯ್ಯ? ನಿಮ್ಮ ಉತ್ತಮಿಕೆಯ ಪೂರೈಸುವುದು ಕೂಡಲಸಂಗಮದೇವಾ. (೨೪೬)

ಬಸವೇಶ್ವರನು ಇಲ್ಲಿ ಪಾಡಿಕೆಯಲ್ಲಿರದ ಗಿಡಗಳನ್ನು ತನ್ನ ವಚನಗಳಲ್ಲಿ ಉಲ್ಲೇಖಿಸುವುದನ್ನು ನೋಡಿದರೆ ಅವನಲ್ಲಿ ವನಸ್ಪತಿಗಳ ಜ್ಞಾನವು ಎಷ್ಟು ಚನ್ನಾಗಿತ್ತೆಂಬುದನ್ನು ನಾವು ಊಹಿಸಬಹುದಾಗಿದೆ.

ಬಸವೇಶ್ವರನು ತಾನು ದೀನ ಮನುಷ್ಯನೆಂದು ಹೇಳುವಲ್ಲಿ 'ಮಾವಿನಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯ.' (೨೬೦) ಎಂಬ ಉದಾಹರಣೆಯಿಂದ ಹೇಳುತ್ತಾನೆ.

'ಎನ್ನ ಪಾಪಕ್ಷೇಮ ನಿಮ್ಮದಯ್ಯ...... ಎನ್ನ ಮಾನಾಪಮಾನ ನಿಮ್ಮದಯ್ಯ. ಬಳ್ಳಿಗೆ ಕಾಯಿ ದಿಮ್ಮಿತ್ತೆ ಕೂಡಲಸಂಗಮದೇವಾ?' (೩೨೯) ಎಂದು ತನ್ನ ಆತ್ಮಾರ್ಪಣಭಾವವನ್ನು ಇಲ್ಲಿ ಬಹು ಸುಂದರವಾಗಿ ಹೇಳುತ್ತಾನೆ.

ದಿಮ್ಮಿತ್ತೆ = ದೊಡ್ಡದು

'ಎಂತಕ್ಕೆ ಎಂತಕ್ಕೆ ಹಡೆದ ಕಾಯ ಬೀಯವಾಗದ ಮುನ್ನ ಅಟ್ಟುಣ್ಣಿರೋ ?' ಎಂದು ಸಕಾಲದಲ್ಲಿ ದೇವರ ಕಾರ್ಯ ಮಾಡೆಂದು ಬೋಧಿಸುತ್ತಾನೆ.

'ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ! ಪಶುವೇನ ಬಲ್ಲುದು? ಹಸುರೆಂದೆಳಸುವದು. ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿಯೆಂಬ ಉದಕವನೆರೆದು ನೋಡಿ ಸಲಹಯ್ಯ ಕೂಡಲಸಂಗಮದೇವಾ.' (೩೭೭) ದನಗಳನ್ನು ಮೇಯಿಸಿ ಸಲಹುವುದು ಒಕ್ಕಲಿಗನ ನಿತ್ಯದ ಕಾರ್ಯವು. ಇದನ್ನೇ ಬಸವೇಶ್ವರನು ತನ್ನ ಉದಾಹರಣೆಯನ್ನಾಗಿ ಇಟ್ಟುಕೊಂಡು ಅವಗುಣಗಳನ್ನು ದೂರಮಾಡಬೇಕೆಂದು ದೇವರನ್ನು ಕುರಿತು ಬೇಡಿಕೊಳ್ಳುತ್ತಾನೆ.

'ಕಬ್ಬಿನ ಹಣಿದವನಾಡುವರಲ್ಲದೆ ಕಾಯದ ಹಣಿದವನಾಡುವರೇ ಮೇಲೊಡ್ಡವಾಯಿತ್ತೆಂದು?' (೩೯೮)

ಹಣಿದ = ಹಿಂಡಿ ಸಿಪ್ಪೆ ಮಾಡಿದ್ದು

'ನಾರುಳಿಯ ಹಣಿದವನಾರಾದಡೆಯೂ ಆದರೆ ನಾರುಳಿದರೆ ಮುಂದೆ ಅಂಕುರಿತ ಫಲ ತಪ್ಪದು.' (೬೨೫)

ಇದೇ ಪ್ರಕಾರ ಬಸವೇಶ್ವರನು ಕೆಳಗಿನ ವಚನಗಳಲ್ಲಿ ಅನೇಕ ತರದ ವನಸ್ಪತ್ತಿಗಳ ಉದಾಹರಣೆಗಳನ್ನು ಕೊಟ್ಟು ಬೋಧಿಸಿದ್ದಾನೆ.

'ಬೇವಿನಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಲು ಬಾರದು. ಲಿಂಗ ಸಂಬಂಧವಿಲ್ಲದವರ ನೋಡಿ ಕೂಡಲಸಂಗದ ಶರಣರಿಗೆ ಸಮನಿಸದು.' (೭೦೦)

'ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ ಕೂಡಲಸಂಗಮದೇವಾ.' (೭೮೩)

'ಮಾಡುವ ಭಕ್ತನ ಕಾಯ ಬಾಳೆಯ ಕಂಭದಂತಿರಬೇಕು. ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದಡೆ ಒಳಗೆ ಕೆಚ್ಚಿಲ್ಲದಿರಬೇಕು. (೮೧೬)

**‘ತುಂಬಳಿದ ಕಾಯಿಗೆ** ಕಬ್ಬುನದ ಕಟ್ಟು ಕೊಟ್ಟರೆ ಬಲುಹಾಗ ಬಲ್ಲುದೇ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತ ಹುದೋ?’ (೮೩೧)

‘ಬೀಗಿ ಬೆಳೆದ **ಕೊನೆವಾಳೆಯಂತೆ** ಬಾಗಿಕೊಂಡಿದ್ದರೆ ಬೇಡಿದ ಪದವಿಯನೀವ ಕೂಡಲಸಂಗಮದೇವಾ.’ (೮೬೮)

‘ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ. **ಕಹಿಸೋರೆಯ ಕಾಯ** ತಂದು ವಿಭೂತಿಯ ತುಂಬಿದರೆ ಸಿಹಿಯಾಗದೆ ಮೂರು ದಿವಸಕ್ಕಯ್ಯಾ?’ (೯೪೫)

ಮೇಲಿನ ವಚನಗಳಲ್ಲಿ ಬಸವೇಶ್ವರನು ಅನೇಕ ತರದ ಗಿಡಬಳ್ಳಿಗಳ ಉದಾಹರಣೆಗಳನ್ನು ಕೊಟ್ಟು ಬೋಧಿಸಿದ್ದಾನೆ. ಸಾಮಾನ್ಯ ಜನರಿಗೆ ಸಹ ತಿಳಿಯಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಅವನು ಹೀಗೆ ನುಡಿದಿದ್ದಾನೆಂಬುದು ಸ್ಪಷ್ಟವು. ಅವನು ಜನರಲ್ಲಿ ಬೆರೆತುಕೊಂಡು ಅವರಲ್ಲಿ ಉಚ್ಚ ಧಾರ್ಮಿಕ ತತ್ವಗಳನ್ನು ಪ್ರಸಾರ ಮಾಡಲು ಯತ್ನಿಸಿದ್ದಾನೆ. ಅವನು ತನ್ನ ಅಧಿಕಾರದ ಬಲದಿಂದ ಜನರನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳಲು ಮನಸ್ಸು ಮಾಡಿಲ್ಲ. ಅವನು ತನ್ನ ನಡೆನುಡಿಗಳಿಂದ ಅವರ ಅಂತಃಕರಣವನ್ನು ಎಳೆದುಕೊಂಡಿದ್ದರಿಂದ ಜನಪ್ರಿಯನಾಗಿದ್ದಾನೆ.

ಕೆಳಗೆ ಕಾಣಿಸಿದ ವಚನಗಳಿಂದ ಅವನು ದೇಶದಲ್ಲಿ ಪ್ರವಾಸ ಮಾಡಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಅವುಗಳಿಂದ ಅವನು ಮಲೆನಾಡ ಸೀಮೆಗೆ ಒಂದು ಕಾಲಕ್ಕೆ ಹೋಗಿ ಬೋಧೆ ಮಾಡಿದ್ದಾನೆಂದು ನಮಗೆ ತೋರುತ್ತದೆ.

## ಮಲೆನಾಡಿನಲ್ಲಿ ಪ್ರವಾಸ

‘ಬಿದಿರ ಅಂದಣವಕ್ಕು. ಬಿದಿರ ಸತ್ತಿಗೆಯಕ್ಕು. ಬಿದಿರಲ್ಲಿ ಗುಡಿಗುಡಾರವಕ್ಕು. ಬಿದಿರಲ್ಲಿ ಸಕಲ ಸಂಪದವೆಲ್ಲವು. ಬಿದಿರದವರ ಮೆಚ್ಚ ನಮ್ಮ ಕೂಡಲಸಂಗಮದೇವ.’ (೩೨೧)

ಈ ವಚನದಲ್ಲಿ ಬಸವೇಶ್ವರನು ಬಿದಿರಿನ ಮಹತ್ವವನ್ನು ಹೇಳಿದ್ದಾನೆ. ಮಲೆನಾಡನ್ನು ಬಿಟ್ಟು ಬೈಲು ಸೀಮೆಯಲ್ಲಿ ಆದರಲ್ಲಿ ವಿಶೇ

ಷವಾಗಿ ವಿಜಾಪುರ ಜಿಲ್ಲೆಯಲ್ಲಿ, ಬಿದಿರಿನ ಮೆಳೆಗಳು ದೃಷ್ಟಿಗೆ ಎಲ್ಲಿಯೂ ಬೀಳುವದಿಲ್ಲ. ವಿಜಾಪುರ ಜಿಲ್ಲೆಯಲ್ಲೆಲ್ಲ ಗರಸು ಭೂಮಿಯು, ಇಲ್ಲವೆ ಎರೆ ಭೂಮಿಯು, ಮತ್ತು ಅಲ್ಲಲ್ಲಿ ಕಲ್ಲು ಗುಂಡುಗಳಿಂದ ತುಂಬಿಕೊಂಡ ಮೊರಡಿಗಳು ಮಾತ್ರ ಪಸರಿಸಿರುತ್ತವೆ. ಇಲ್ಲಿಯ ಹವೆಯು ಅತಿ ಶುಷ್ಕವು. ಇಂಥ ಭಾಗದಲ್ಲಿ ಬಿದಿರು ವಿಪುಲವಾಗಿ ಬೆಳೆಯಲಾರದು. ಇಲ್ಲಿಯ ಜನರಿಗೆ ಬಿದಿರಿನ ಉಪಯೋಗವೇ ಗೊತ್ತಿರುವದಿಲ್ಲ. ಆದರೆ ಬಸವೇಶ್ವರನು ಮೇಲಿನ ವಚನದಲ್ಲಿ ಬಿದಿರಿನ ಮಹತ್ವವನ್ನು ಅತ್ಯಂತವಾಗಿ ವರ್ಣಿಸಿದ್ದಾನೆ. ಹೀಗೆ ಅದನ್ನು ವರ್ಣಿಸುತ್ತ ಬಿದಿರಿನಂತೆ ವಿಶಾಲ ಹೃದಯಿಗಳಾಗಿ ನಡೆಯದವರನ್ನು ಪರಮಾತ್ಮನು ಮೆಚ್ಚುವದಿಲ್ಲೆಂದು ಇಲ್ಲಿ ಹೇಳುತ್ತಾನೆ.

ಬಿದಿರಿನ ಮಹತ್ವವು ಮಲೆನಾಡಿನವರಿಗೆ ಮಾತ್ರ ಚನ್ನಾಗಿ ಗೊತ್ತು. ಬಸವೇಶ್ವರನು ಮಲೆನಾಡಿನಲ್ಲಿದ್ದಾಗ ಅಲ್ಲಿಯ ಜನರು ಅದರ ಉಪಯೋಗ ಮಾಡುವದನ್ನು ಕಂಡು ಅವರಿಗೋಸ್ಕರ ನುಡಿದ ವಚನವು ಇದಾಗಿರುತ್ತದೆಂದು ತೋರುತ್ತದೆ. ಅವನು ಇದರಲ್ಲಿ ಹೇಳಿರುವದೇನಂದರೆ:—

'ಬಿದಿರ ಅಂದಣವಕ್ಕು' ಅಂದರೆ ಬಿದಿರಿನಿಂದ ಪಲ್ಲಕ್ಕಿಯಾಗುವದು. 'ಬಿದಿರ ಸತ್ತಿಗೆಯಕ್ಕು' ಅಂದರೆ ಬಿದಿರಿನಿಂದ ಛತ್ರವಾಗುವುದು. ಈ ವಚನದಲ್ಲಿ ಇಷ್ಟೇ ಶಬ್ದಗಳಿದ್ದಿದ್ದರೆ ನಾವು ಮೇಲಿನ ಅನುಮಾನವನ್ನು ಮಾಡಲಿಕ್ಕೆ ಕಾರಣವಿದ್ದಿದ್ದಿಲ್ಲ. ಯಾಕಂದರೆ ಎಲ್ಲ ಕಡೆಗೂ ಪಲ್ಲಕ್ಕಿ ಮತ್ತು ಛತ್ರಗಳು ಮೊದಲಿನಿಂದಲೂ ಇದ್ದು ಅವು ಬಿದಿರಿನಿಂದಲೇ ಮಾಡುವದು ವಾಡಿಕೆಯಾದದ್ದು. ಆದರೆ ಮುಂದಿನ ಶಬ್ದಗಳಲ್ಲಿ 'ಬಿದಿರಲ್ಲಿ ಗುಡಿ ಗುಡಾರವಕ್ಕು' ಎಂಬ ಶಬ್ದಗಳಿವೆ. ಅಂದರೆ ಅದರಿಂದ ದೇವಾಲಯಗಳೂ ಸಣ್ಣ ಮನೆಗಳೂ ಆಗುವವೆಂದು ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಆದರೆ ಬಿದಿರಿನಿಂದ ಕಟ್ಟಿದ ಗುಡಿ—ಗುಡಾರಗಳು ಇಡೀ ವಿಜಾಪುರ ಜಿಲ್ಲೆಯಲ್ಲಂತೂ ತೋರಿ ಬರಲಾರವು. ಹೀಗೆ ಅವುಗಳನ್ನು ಕಟ್ಟುವದು ಅವರಿಗೆ ಗೊತ್ತೇ ಇಲ್ಲ. ಇಲ್ಲಿ ಕಲ್ಲು ವಿಪುಲವಾಗಿ ಸಿಗುವದರಿಂದ ಸಣ್ಣ ಸಣ್ಣ ಹಳ್ಳಿಗಳಲ್ಲಿ ಸಹ ಕಲ್ಲಿನಿಂದ ಮನೆಗಳನ್ನು ಕಟ್ಟುವರೇ ಹೊರತು ಬಿದಿರಿನಿಂದ ಎಂದೂ ಕಟ್ಟುವದಿಲ್ಲ.

ಆದರೆ ಮಲೆನಾಡಿನಲ್ಲಿ ಬಿದಿರನ್ನು ಮನೆ ಕಟ್ಟುವಲ್ಲಿ ಬಹಳ ಉಪಯೋಗಿಸುತ್ತಾರೆ. ಬಸವೇಶ್ವರನು ಇದನ್ನು ನೋಡಿ ಈ ಪ್ರಕಾರ ಈ ವಚನವನ್ನು ನುಡಿದಿದ್ದಾನೆಂದು ತೋರುತ್ತದೆ. ಈ ಶಬ್ದಗಳ ತರುವಾಯ ಅವನು 'ಬಿದಿರಲ್ಲಿ ಸಕಲ ಸಂಪದವೆಲ್ಲವು' ಎಂದು ನುಡಿಯುತ್ತಾನೆ. ಸಕಲ ಸಂಪತ್ತು ಎಲ್ಲವೂ ಬಿದಿರಿನಲ್ಲಿಯೇ ಇರುತ್ತದೆಂದು ಅವನ ಹೇಳಿಕೆ! ಇದು ಬೈಲು ಸೀಮೆಯವರಿಗೆ ಏನೂ ತಿಳಿಯದು. ಆದರೆ ಮಲೆನಾಡಿಗರಲ್ಲಿ ಇದು ಅಕ್ಷರಶಃ ನಿಜವಾದದ್ದು. ಬಿದಿರಿನ ಉಪಯೋಗವು ಅವರಲ್ಲಿ ಬಹಳ ಇದೆ. ಅವರಲ್ಲಿ ಮನೆಗಳು, ಅನೇಕತರದ ಸಣ್ಣ ಪಾತ್ರೆಗಳು, ಹರಿನಾಳಿಗೆಗಳು, ಹಟ್ಟಿಗಳು, ಊದುಗೊಳವೆಗಳು ನಾನಾ ತರದ ಮಂಚ ಮೊದಲಾದ ಆಸನಗಳು, ಹೀಗೆ ಅನೇಕ ಜಿನಸುಗಳೂ ಅಲ್ಲದೆ ಬಿದಿರಕ್ಕಿಯೂ ಬಿದಿರಲ್ಲಿ ಆಗುವದರಿಂದ 'ಬಿದಿರಲ್ಲಿ ಸಕಲ ಸಂಪದವೆಲ್ಲವು' ಎಂಬುದು ಅವರಿಗೆ ಪೂರ್ಣ ಅನ್ವಯಿಸುತ್ತದೆ. ಆದರೆ ಬೈಲು ಸೀಮೆಯವರಿಗೆ ಇದರ ತಿಳಿವಳಿಕೆಯು ಎಷ್ಟು ಮಾತ್ರವೂ ಆಗಲಾರದು. ಅವರಿಗೆ ಈ ವಚನದ ಅರ್ಥವಾಗಲಾರದು. ಕಡೆಗೆ ಈ ವಚನದಲ್ಲಿ 'ಬಿದಿರದವರ ಮೆಚ್ಚ' ಎಂಬ ಶಬ್ದಗಳಿವೆ. ಅಂದರೆ ಬಿದಿರಿನ ಹಾಗೆ ಯಾರು ನಡೆಯುವದಿಲ್ಲವೋ ಅಂದರೆ ಜನತೆಗೆ ಉಪಯೋಗವುಳ್ಳವರಾಗಿ ಯಾರು ವರ್ತಿಸುವದಿಲ್ಲವೋ ಅವರನ್ನು ಪರಮಾತ್ಮನು ಮೆಚ್ಚಲಾರನೆಂದು ಬಸವೇಶ್ವರನು ಹೇಳುತ್ತಾನೆ.

ವಾಚಕರು ದಯವಿಟ್ಟು ನಾವು ಇಲ್ಲಿ ನಿರ್ದೇಶ ಮಾಡಿದ ಸಂಗತಿಗಳನ್ನು ಚನ್ನಾಗಿ ಪರೀಕ್ಷಿಸಬೇಕೆಂದು ನಮ್ಮ ಸೂಚನೆ ಇದೆ. ಈ ವಚನದಿಂದ ಬಸವೇಶ್ವರನು ಮಲೆನಾಡಿನಲ್ಲಿ ಕೆಲವು ಕಾಲವಿದ್ದು ಅಲ್ಲಿಯ ಜನರಿಗೆ ಬೋಧೆ ಮಾಡಿದ್ದಾನೆಂತಲೂ ಅವರ ಮನಸ್ಸಿನಲ್ಲಿ ಬಿಂಬಿಸುವದಕ್ಕೋಸ್ಕರ ಬಿದಿರಿನ ಉದಾಹರಣೆಯನ್ನು ಕೊಟ್ಟು ಅವರಿಗೆ ಈ ರೀತಿ ಹೇಳಿದ್ದಾನೆಂತಲೂ ನಮಗೆ ತೋರುತ್ತದೆ.

ಬಸವೇಶ್ವರನ ವಚನಗಳಲ್ಲಿ ಬಿದಿರು ಈ ಶಬ್ದವುಳ್ಳ ಇನ್ನೊಂದು ವಚನವಿದೆ. ಅದು ಯಾವದೆಂದರೆ:—

'ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಹಡೆಯಲು ಬಾರದು...ನಮ್ಮ ಕೂಡಲಸಂಗಮದೇವನಲ್ಲದೆ ಅನ್ಯ ದೈವಕ್ಕೆರಗಿದರೆ ಹೊಳ್ಳ ಕುಟ್ಟಿ ಕೈಹೊಟ್ಟಾದಂತಾಯಿತ್ತಯ್ಯ.' (೪೭೩)

ಬಸವೇಶ್ವರನು ಮಲೆನಾಡಿಗೆ ಹೋದಾಗ್ಗೆ ಬಿದಿರನ್ನು ನೋಡಿ ಅದರ ಎಲೆಯನ್ನು ಬಾಯಲ್ಲಿ ಹಾಕಿಕೊಂಡು ಅದನ್ನು ಮೆಲ್ಲಿರಬೇಕು. ಆದರಲ್ಲಿ ಅವನಿಗೆ ರಸವೇನೂ ಕಾಣದಂತಾಗಲು ಅವನು ಅದರ ಉದಾಹರಣೆಯನ್ನು ಕೊಟ್ಟು ಈ ವಚನವನ್ನು ನುಡಿದಿದ್ದಾನೆಂದು ತೋರುತ್ತದೆ. ಬೈಲು ಸೀಮೆಯವರು ಬಿದಿರಿನ ಎಲೆಯನ್ನು ಬಾಯೊಳಗೆ ಹಾಕಿಕೊಂಡು ತಿಂದು ನೋಡುವ ಸಂಭವವೇ ಇಲ್ಲ. ಅವರು ಅದನ್ನು ತಿಂದುನೋಡಬೇಕೆಂದರೆ ಎಲ್ಲಾದರೂ ಹಳ್ಳಕೊಳ್ಳದಲ್ಲಿ ಅದು ಬೆಳೆದಿದ್ದರೆ, ಅದನ್ನು ಅವರಲ್ಲಾರೋ ಒಬ್ಬರು ನೋಡಬೇಕು. ಆದರೆ ಜನಸಮುದಾಯವೆಲ್ಲ ಅದನ್ನು ತಿಂದು ನೋಡುವುದಂತೂ ಶಕ್ಯವಿಲ್ಲ. ಆದರೆ ಮಲೆನಾಡಿನಲ್ಲಿದ್ದವರು ಮಾತ್ರ ಅದನ್ನು ತಿಂದುನೋಡುವದು ಶಕ್ಯವಿದೆ. ಆದ್ದರಿಂದ ಅವರಿಗೋಸ್ಕರ ಬಸವೇಶ್ವರನು ಈ ಸಾಮ್ಯವನ್ನು ನುಡಿದಿದ್ದಾನೆಂದು ನಮಗೆ ತೋರುತ್ತದೆ.

ಈ ಎಲ್ಲ ಸಂಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಬಸವೇಶ್ವರನು ತನ್ನ 'ತರ್ದೆವಾಡಿ' ನಾಡಿನಿಂದ ಹೊರಬಿದ್ದು ಧರ್ಮ ತತ್ವಗಳನ್ನು ಬೋಧಿಸುತ್ತ ದೇಶವನ್ನು ಸಂಚಾರ ಮಾಡಿರಬೇಕೆಂದು ನಮಗೆ ತೋರುತ್ತದೆ. ಅವನು ವೀರಶೈವ ಧರ್ಮವನ್ನು ಸ್ವೀಕರಿಸಿದ ಬಳಿಕ ದೇವರ ಭಜನೆಯನ್ನು ಮಾಡುತ್ತ ಒಂದೇ ಸ್ಥಳದಲ್ಲಿ ಕುಳಿತಿಲ್ಲ. ಜನಸಮುದಾಯದಲ್ಲೆಲ್ಲ ಧರ್ಮೋಪದೇಶ ಮಾಡುತ್ತ ಪ್ರವಾಸಮಾಡಿದ್ದಾನೆ. ಬೈಲು ಸೀಮೆಯಲ್ಲಿಯೂ ಮಲೆನಾಡಿನಲ್ಲಿಯೂ ಅವನು ಹೋಗಿದ್ದಾನೆ. ಇಲ್ಲಿ ಹೋಗಿ ಜನರಿಗೆ ತಿಳಿಯುವ ಭಾಷೆಯಲ್ಲಿ ಅವರು ಗ್ರಹಿಸುವಂಥ ಸಾಮ್ಯಗಳನ್ನೂ ಉದಾಹರಣೆಗಳನ್ನೂ ನಾನಾ ರೀತಿಯಾಗಿ ಕೊಡುತ್ತ ಉಪದೇಶ ಮಾಡಿದ್ದಾನೆ. ಬುದ್ಧ, ಜೀಜಸ್ ಕ್ರೈಸ್ತರಂತೆ ಅವನು ಶ್ರಮಪಟ್ಟಿದ್ದಾನೆಂದು ನಮಗೆ ತೋರುತ್ತದೆ. ಇವುಗಳ ಸವಿಸ್ತಾರ ವಿವರಗಳು ಕರ್ನಾಟಕದ ದುರ್ದೈವದಿಂದ ಈಗ ನಮಗೆ ಉಪಲಬ್ಧವಿಲ್ಲ. ಅವು ನಷ್ಟವಾಗಿ ಹೋಗಿವೆ. ಆದರೆ ಅವನ ಉಕ್ತಿಗಳಲ್ಲಿ ಅಂಥ ಸಂದರ್ಭಗಳನ್ನು ನಾವು ಅಲ್ಲಲ್ಲಿ ಕಂಡುಹಿಡಿಯಬಹುದಾಗಿದೆ. ಅವುಗಳು ಅವನ ಚರಿತ್ರೆಯ ಮೇಲೆ ನಿಜವಾದ ಪ್ರಕಾಶವನ್ನು ಕೆಡಹುತ್ತವೆ. ಈ ದೃಷ್ಟಿಯನ್ನಿಟ್ಟುಕೊಂಡು ವಾಚಕರು ನಮ್ಮ ಈಗಿನ ಮತ್ತು ಇದರ ಹಿಂದಿನ ಲೇಖವನ್ನು ಪರೀಕ್ಷಿಸಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

(ಮುಂದೆಸಾಗುವದು.)

# ಶಿವಶರಣರ ಶಿವದೀಕ್ಷಾಕಾಲ.

[ಲೇಖಾಂಕ-೫.]

(ಲೇ:— ಶ್ರೀ. ಗುರುಮೂರ್ತಿದೇವರು ಶ್ರೀಜಗದ್ಗುರು
ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ. )

---

ಲೇಖಾಂಕ ನಾಲ್ಕರಲ್ಲಿ ಲಿಂಗಧಾರಣ-ಶಿವದೀಕ್ಷೆಗಳು ವಿಭಿನ್ನ ಸಂಸ್ಕಾರಗಳು; ಲಿಂಗಧಾರಣವನ್ನು ಮಾತೃಗರ್ಭ ಜನನದಲ್ಲಿಯೂ ಶಿವದೀಕ್ಷೆಯನ್ನು ಗುರುಕರಕಂಜನನದಲ್ಲಿಯೂ ಮಾಡುವುದೆ ನ್ಯಾಯಬದ್ಧ-ಪುರಾತನ ಪ್ರಸಿದ್ಧವೆಂದು ಪ್ರತಿಪಾದಿಸಿದುದಾಯ್ತು. ಹೀಗೆ ಹೇಳುವಾಗ ವಾದಿಗಳು ಇದು 'ಶೈವಾನುಕರಣ' ಎಂಬ ಒಂದು ದೊಡ್ಡ ಪ್ರಶ್ನೆಯನ್ನು ಅಡ್ಡತರುತ್ತಾರೆ. ಇದು ಅವರಿಗೆ ದೊಡ್ಡದಾಗಿ ತೋರಿದ್ದರೂ ವಿಚಾರ ಮುಖದಲ್ಲಿ ತೀರ ಅತ್ಯಲ್ಪವಾದುದು; ಅಲ್ಲದೆ ದೃಷ್ಟಿದೋಷದಿಂದ ಆವಿರ್ಭವಿಸಿದುದು, ಎಂದೇ ಸಿದ್ಧವಾಗುವದು.

## ಶೈವ ವಾದ ಸೂಕ್ತವಾದುದಲ್ಲ.

ಪೂರ್ವಜರು ವೀರಶೈವ ತತ್ವ-ಸಮಾಜ ಇವೆರಡನ್ನು ಅನುಸರಿಸಿ ಕೆಲವು ವಿಧಿವಿಧಾನಗಳನ್ನು ಹೇಳಿದ್ದರೆ, ಅವನ್ನೆಲ್ಲ ಇಂದು ನಮ್ಮ ತರ್ಕ ಬುದ್ಧಿಯಿಂದ ಶೈವ ಸಾಂಪ್ರದಾಯಕ್ಕೆ ಸರಿಹೋಲತಕ್ಕವೆಂದು ಆಪಾದಿಸಿ ವರ್ಜಿಸುವದು ಎಷ್ಟು ಮಾತ್ರಕ್ಕೂ ಉಚಿತವಲ್ಲ; ಉಪಯೋಗವಿಲ್ಲ. ತತ್ವ ಉಳಿಯುವಂತೆ ಸಮಾಜ ಬಾಳುವಂತೆ ಸಂಸ್ಕೃತಿ ಬೆಳೆಯುವಂತೆ ಧಾರಣ-ದೀಕ್ಷೆಗಳ ವಿಭಾಗ ವಿಧಾನವನ್ನು ಪೂರ್ವಜರು ಏರ್ಪಡಿಸಿದ್ದಾರೆ. ಈ ಏರ್ಪಾಡನ್ನು ಮುರಿಯುವದರಿಂದ ಇಂದು ನಮಗೆ ಲಾಭವಾಗುವಂತಿದ್ದರೆ ಲೇಸು. ಅದಿಲ್ಲದೆ ಪ್ರತಿಯಾಗಿ ನಾಶವುಂಟಾಗುವಂತಿದ್ದರೆ ಏತಕ್ಕೆ ಅಲ್ಲಗಳೆಯಬೇಕು? ಹೀಗೆ ವೃಥಾ ಒಂದೊಂದನ್ನೆ ಆಪಾದಿಸಿ ವಿಸರ್ಜಿಸ ಹೊರಟರೆ ವೀರಶೈವ ತತ್ವಗಳೆಲ್ಲವನ್ನೂ ಅಲ್ಲಗಳೆಯಬಹುದು. ನಿದರ್ಶನಕ್ಕಾಗಿ—"ಲಿಂಗಮುಖಂ ಚರಲಿಂಗವೆಂದು ತಿಳಿ." ಎಂಬ ತತ್ವವನ್ನು ಶೈವರ "ಅಗ್ನಿ ಮುಖೋ ವೈ ದೇವಾಃ" ಎಂಬ ತತ್ವಕ್ಕೆ

ಸರಿತೂಗಿ ಅಲ್ಲಗಳೆಯಬಹುದು. ಎರಡನೆಯದಾಗಿ ಭಸ್ಮ ಮತ್ತು ರುದ್ರಾಕ್ಷ ಧಾರಣಗಳು ಪೂರ್ವಜರಾದ ಶೈವರಿಂದ ಬಂದವುಗಳೆಂದು ಪರಿಭಾವಿಸಿ ಪರಿತ್ಯಜಿಸಿ, ಅಷ್ಟಾವರಣವನ್ನು ಷಷ್ಠಾವರಣವನ್ನಾಗಿ ಮಾಡಬಹುದು. ಇದಲ್ಲದೆ ವೀರಶೈವರ ಮುಖ್ಯ ಮುಖ್ಯ ತತ್ವಗಳ ಹೆಸರುಗಳಾದ ಶಿವಯೋಗ, ಶಿವಲಿಂಗ, ಶಿವಾನುಭವ, ಶಿವಾಚಾರ, ಶಿವದೀಕ್ಷೆ, ಶಿವಪೂಜೆ, ಶಿವಾಂಗ, ನಮಃಶಿವಾಯ, ವೀರಶೈವ ಮುಂತಾದವುಗಳನ್ನು ವಿಚಾರಿಸಿದರೆ 'ಶಿವ' ಶಬ್ದವೆ ಸಂಯೋಗವಾಗಿರುವದರಿಂದ ಶೈವ ಸಾಂಪ್ರದಾಯವೆಂದು ಇವೆಲ್ಲವನ್ನೂ ಮಾರ್ಪಡಿಸಬೇಕಾದೀತು! ಒಂದು ವೇಳೆ ಮಾರ್ಪಡಿಸಲೇಬೇಕೆಂದು ಹಟಹಿಡಿದರೆ ಕೆಲವನ್ನು ಮಾರ್ಪಡಿಸಬಹುದು. ಶಿವಲಿಂಗ, ನಮಃಶಿವಾಯ, ವೀರಶೈವ ಮುಂತಾದವುಗಳಲ್ಲಿ ಸಾಧ್ಯವೇ ಇಲ್ಲ. ಅಲ್ಲದೆ ವೀರಶೈವ ತತ್ವವೆ ಬುಡಮೇಲಾಗಿ ನಿಲ್ಲುವ ಪ್ರಸಕ್ತಿ ಒದಗುತ್ತದೆ, ಈ ವಿತರ್ಕವಾದದಲ್ಲಿ. ಆದ್ದರಿಂದ ವರ್ಷ ಮಾತ್ರ ಸಾಮ್ಯವುಳ್ಳ ಎಂಟು ವರುಷದ ಮೇಲಿನ ಶಿವದೀಕ್ಷೆಯು ಶೈವಾನುಕರಣವೆಂಬ ವಾದವು ಎಷ್ಟು ಮಾತ್ರಕ್ಕೂ ಸೂಕ್ತವಾದುದಲ್ಲ,

## ಗರ್ಭದೀಕ್ಷೆಯೂ ಶಿವಾನುಕರಣವೆ

ತರ್ಕಮುಖಕ್ಕೆ ತತ್ವವನ್ನು ಒರೆಹಚ್ಚಿ ಹೋದರೆ ತತ್ವ ಬೇರವನ್ನೆ ಬಗೆದಿಕ್ಕಬಹುದು. ವಾದಿಗಳು ಬರೀ ಎಂಟು ವರ್ಷದ ಮೇಲಿನ ದೀಕ್ಷೆಯು, ಶೈವಾನುಕರಣವೆಂದು ಆಪಾದಿಸುತ್ತಾರೆ, ಆದರೆ ಇನ್ನೂ ಆಳವಾಗಿ ಆಲೋಚಿಸಿದರೆ ವಾದಿಗಳು ಗರ್ಭ ಮತ್ತು ಜನನ ದೀಕ್ಷೆಯೂ ಸಹ ಶೈವಾನುಕರಣವೆಂದೇ ಹೇಳಬೇಕಾಗುವದು. ವೀರಶೈವ ಮಕ್ಕಳಿಗೆ ದೀಕ್ಷೆಯೆಂದರೇನು ? ಧಾರಣವೆಂದರೇನು ? ವೀರಶೈವ ತತ್ವದಂತೆ ಹೋದರೆ ಇದಾವುದೂ ಬೇಕಿಲ್ಲ. ಏಕೆಂದರೆ ವೀರಶೈವ ಮಕ್ಕಳ ತಾಯಿತಂದೆಗಳಿಬ್ಬರೂ ದೀಕ್ಷಿತರಾಗಿ, ಮಾಂಸ ಪಿಂಡವಳಿದು, ಮಂತ್ರ ಶರೀರಿಗಳಾಗಿಯೇ ಇರುತ್ತಾರೆ ಇಂತಹ ಸತಿಪತಿಗಳ ಮಂತ್ರ ಪಿಂಡಗಳಿಂದ ಉದಿಸುವ ಮಗು ಮಾಂಸಪಿಂಡ ಹೇಗಾಗುತ್ತದೆ ? ಯಾವಾಗ ಮಾಂಸ ಪಿಂಡವಿಲ್ಲವೋ ಆಗ ಧಾರಣ-ದೀಕ್ಷೆಗಳ ಅವಶ್ಯಕತೆಯೇ ಇಲ್ಲ. ಈ ಕಾರಣದಿಂದ ನೋಡಿದರೆ ಮಂತ್ರ ಪಿಂಡಿಗಳಾದ ವೀರಶೈವರ ಮಕ್ಕಳಿಗಾಗಲಿ, ಗರ್ಭಕ್ಕಾಗಲಿ ದೀಕ್ಷೆಯೆ ಬೇಕಾಗಿಲ್ಲ. ಈಗ ವಾದಿಗಳು ಗರ್ಭ ಮತ್ತು ಜನನಕ್ಕೆ ದೀಕ್ಷೆಯನ್ನು ಮಾಡಬೇಕೆಂದು ವಾದಿಸುವುದೂ

ಸಹ "ಶೈವಾನುಕರಣವೇ" ಎಂದು ಏಕೆ ತರ್ಕದ ಹುಯಿಲೆಬ್ಬಿಸಬಾರದು? ಇಂತಹ ಅಲ್ಪ ಕಲ್ಪನೆಗಳ ಪ್ರವಾಹದಲ್ಲಿ ತತ್ವದ ಜೀವನಾಡಿಯು, ಕೊಚ್ಚಿ ಹೋಗುತ್ತವೆ; ನುಚ್ಚು ನೂರಾಗುತ್ತದೆ.

ಈ ತರ್ಕವನ್ನು ಇನ್ನೂ ಕೊಂಚ ಲಂಬಿಸಿದರೆ, ವೀರಶೈವರ "ಇಷ್ಟಲಿಂಗ" ಕಲ್ಪನೆಯು ಸಹ ಶೈವರ ಸ್ಥಾವರ ಲಿಂಗಗಳ ಅನುಕರಣವೆಂದೇ ಹೇಳಬೇಕು. ಇಷ್ಟಲಿಂಗದ ಆಕೃತಿ ಧಾರಣಾದಿಗಳು ಶೈವರಿಂದ ಬಂದವುಗಳೆ. ಶೈವರು ಧನವ್ಯಯ ಮಾಡಿ ದೇವಾಲಯವನ್ನು ಕಟ್ಟಿಸಿ ಸ್ಥಾವರಲಿಂಗ ಸ್ಥಾಪಿಸಿ ಶೈವ ಶಕ್ತಿಯನ್ನು ಆಹ್ವಾನಿಸಿ ಪೂಜಿಸುತ್ತಿದ್ದರೆ ವೀರಶೈವರು ಸ್ವಲ್ಪ ವ್ಯಯದಲ್ಲಿಯೆ ಪ್ರತಿಯೊಬ್ಬನು ಸ್ವತಂತ್ರವಾಗಿ ಪೂಜಿಸಬೇಕೆಂಬ ಸೌಕರ್ಯದಿಂದ ಅದೇ ಆಕೃತಿಯ ಚಿಕ್ಕ ಲಿಂಗವನ್ನು ನಿರ್ಮಿಸಿ ಆತ್ಮ ಚೈತನ್ಯವನ್ನು ತಂದಿರಿಸಿ ಆತ್ಮ ಸ್ವರೂಪವೆಂದು ಭಾವಿಸಿ ದೇಹ ದೇವಸ್ಥಾನದಲ್ಲಿ ಧರಿಸಿ ಪೂಜಿಸತೊಡಗಿದರು. ವಿಚಾರಿಸಿದರೆ ಇದೂ ಸಹ ಶೈವರ ಅನುಕರಣವೆಂದು ಏತಕ್ಕೆ ವಿತರ್ಕಿಸಬಾರದು ?

"ಶೈವಾನುಕರಣ" ವೆಂಬ ಒಂದು ಮಾತನ್ನು ಮುಂದು ಮಾಡಿಕೊಂಡು ಹೊರಟರೆ, ನಮ್ಮಲ್ಲಿ ನಮ್ಮದಾದ ಯಾವ ಸೊತ್ತೂ ನಿಲ್ಲುವದಿಲ್ಲ. ವೀರಶೈವ ತತ್ವಗ್ರಂಥಗಳೆಲ್ಲವನ್ನೂ ಶೈವದವೆಂದು ತಳ್ಳಿಬಿಡಬೇಕಾದೀತು ? ವೀರ ಶಿವಾಗಮಗಳಾಗಲಿ, ವಚನಗಳಾಗಲಿ ಇವೆಲ್ಲ ಕಪಾಲ ಮತ್ತು ತ್ರಿಶೂಲಧಾರಿಯಾದವನ, ಪಂಚವಕ್ತ್ರ—ಅರ್ಧನಾರಿಯಾದವನ, ಚರ್ಮಾಂಬರಧರನ, ಸರ್ಪಾಭರಣನ, ಚಂದ್ರಶೇಖರನ, ವೃಷಭಾರೂಢನ, ಕೆಂಜೆಡೆಮುಡಿಯವನ, ಕಪ್ಪುಗೊರಳನ, ಮೃಗ ಡಮರುಗ ಕರದವನ, ಗಂಗೆ-ತಿಂಗಳಸೂಡಿದನ ಮುಂತಾದ ವಿಶೇಷಣಗಳಿಂದ ಶೈವ ವರ್ಣನೆಯನ್ನು ಬೇಕಾದಷ್ಟು ಮಾಡಿವೆ. ಪ್ರತಿಯೊಂದು ಗ್ರಂಥದಲ್ಲಿಯೂ ಗಮನಿಸಿದರೆ ಕಾಣಬಹುದು. ನಿಬಂಧನ ವಿಸ್ತಾರ ಭಯದಿಂದ ಉದಹರಿಸುವ ಕೆಲಸಕ್ಕೆ ಕೈಹಾಕಿಲ್ಲ. ಇಷ್ಟವುಳ್ಳವರು ಓದಿ ನೋಡಿಕೊಳ್ಳಬಹುದು. ಒಂದು ವೇಳೆ ಪ್ರಯೋಗ ಪ್ರಸಂಗವು ಪ್ರಸಕ್ತವಾದರೆ ಪ್ರವಹಿಸಿ ಪ್ರದರ್ಶಿಸೋಣವಾಗುತ್ತದೆ. ಹೀಗೆಯೇ ವೀರಶೈವ ತತ್ವ ತರ್ಕದ ಕಡಲಲ್ಲಿ ತೋರುವ ತೆರೆಗಳನ್ನು ಗಣಿಸಿ ಗುಣಿಸಿ ನೋಡುತ್ತ ಹೊಂಟರೆ ತುದಿ ಮೊದಲಿಲ್ಲಾಗುತ್ತದೆ. ಆದಕಾರಣ ವರ್ಷ ಮಾತ್ರ ಸಾಮ್ಯವುಳ್ಳ ವೀರಶೈವ ದೀಕ್ಷೆಯು ಶೈವಾನುಕರಣವೆಂದು ವಾದಿಸು

ವದು ಎಷ್ಟಕ್ಕೂ ನ್ಯಾಯವಾದುದಲ್ಲ; ಅದು ಪ್ರಾಕೃತಿಕ ನಿಯಮವಲ್ಲ. ಆದರಲ್ಲಿ ಸಾಮಾಜಿಕ ಸೌಕರ್ಯವಿಲ್ಲ.

### ಗರ್ಭದೀಕ್ಷಾವಾದದಿಂದೇನು ಫಲ?

ಪ್ರಬುದ್ಧಾವಸ್ಥೆಯಲ್ಲಿ ಮಾಡುವ ದೀಕ್ಷೆಯಿಂದಾಗುವ ಫಲ ಗರ್ಭ ದೀಕ್ಷೆಯಿಂದಾಗಲಾರದು; ಆಗುವದಿಲ್ಲ. ಆದರಿಂದ ಅಲ್ಲಿ ಬರೀ ಧಾರಣವನ್ನು ಮಾತ್ರ ಏರ್ಪಡಿಸಿದ್ದಾರೆ ಗರ್ಭ ಶಿಶುಗಳಿಗೆ ಶಿವದೀಕ್ಷೆಯನ್ನು ಮಾಡಿ ಸಮಾಜವನ್ನು ಉದ್ಧರಿಸುವದು ಸಾಹಸದ ಮಾತು. ಅಂತರಂಗಕ್ಕೆ ಸಂಬಂಧವಾದ ಒಂದು ತತ್ವವನ್ನು ಬಹಿರಂಗದ ಇಡೀ ಸಮಾಜವನ್ನೆ ಪಳಗಿಸುವದು-ಪರಿಪೂರ್ಣಿಸುವದು ಎಂಥ ಮಹಾನುಭಾವನಿಗೂ ಸಮರ್ಥನಿಗೂ ಸಾಧ್ಯವಾಗುವದಿಲ್ಲ. ಅದರಲ್ಲಿಯೂ ಗರ್ಭಾವಸ್ಥೆಯಲ್ಲಿ. ಬುದ್ಧನು ತನ್ನ ತತ್ವವನ್ನು ಅದೆಷ್ಟು ಪ್ರಬುದ್ಧ ಜನರಲ್ಲಿ ಸಂಪೂರ್ಣನಾಗಿ ಬಿಂಬಿಸಿದ! ಆತನ ತತ್ವವನ್ನು ಬರಿ ಒಪ್ಪಿದ ಸಮಾಜ ಸಂಖ್ಯೆಯು ಅತಿಯಾಗಿರಬಹುದು. ಆದರೆ ಆತನಂತೆ ಆ ತತ್ವದಲ್ಲಿ ಆಳವಾಗಿ ಇಳಿದು ಆತನಂತೆಯೇ ಆದವರಾರು ? ಇದರಂತೆಯೇ ಶಂಕರಾಚಾರ್ಯರು, ರಾಮಕೃಷ್ಣಪರಮಹಂಸರು, ರೇಣುಕಾಚಾರ್ಯರು, ಬಸವಾದಿ ಪ್ರಮಥರು ಅದೆಷ್ಟು ಜನರ ಸಮಾಜವನ್ನು ತಂತಮ್ಮ ಸ್ವರೂಪಕ್ಕೆ ತಂದಿದ್ದಾರೆ ? ಅದೇಕೆ ಇಂದಿನ ಕಾಂಗ್ರೆಸ್ಸಿನ ಜನರು ಅದೆಷ್ಟು ಜನ ಗಾಂಧೀಜಿಯವರ ಅಸಾಧಾರಣ ವ್ಯಕ್ತಿತ್ವಕ್ಕೆ ಸರಿತೂಗಿ ನಿಂತಿದ್ದಾರೆ? ಒಂಬುದನ್ನು ಯೋಚಿಸಿದರೆ ನಾವು ಹೇಳುವ ಮಾತಿನ ಅರ್ಥವು ತಾನಾಗಿಯೆ ಅಭಿವ್ಯಕ್ತವಾಗುತ್ತದೆ. ಒಂದು ತತ್ವವನ್ನು ಸ್ವಲ್ಪೂ ಮಾರ್ಪಡಿಸದೆ ಸಮಾಜಕ್ಕೆ ಇಲ್ಲವೆ ಜನಾಂಗಕ್ಕೆ ಸಂಪೂರ್ಣ ಅಂಟಿಸಿ, ಒಗ್ಗಿಸಿ ಸಮಾಜವನ್ನೆ ತತ್ವವನ್ನಾಗಿ ಅಥವಾ ತನ್ನ ಸ್ವರೂಪವನ್ನಾಗಿ ಮಾಡಿದ ಮಹಾಪುರುಷರು ಜಗತ್ತಿನ ಇತಿಹಾಸದಲ್ಲಿಯೆ ಸಿಕ್ಕುವದು ತೀರ ಅಸಾಧ್ಯ. ಹೀಗಿರುವಾಗ ವೀರಶೈವರ ಉದಾತ್ತವಾದ ಪ್ರಬುದ್ಧರ ಬುದ್ಧಿಗೂ ಅಸಾಧ್ಯವಾದ ದೀಕ್ಷೆಯ ತತ್ವವನ್ನು ತೊದಲ್ನುಡಿಯಾಡದ ಸಮಾಜದ ಸಮಸ್ತ ಹಸುಮಕ್ಕಳಲ್ಲಿರಿಸಿ-ಗರ್ಭಕ್ಕಿರಿಸಿ ಶಿಶುದಶೆಯಲ್ಲಿಯೆ ಶಿವ ಸ್ವರೂಪರನ್ನಾಗಿ ಮಾಡಬೇಕೆಂದರೆ ಅದಾರಿಗೆ-ಆದೆಂದಿಗೆ ಸಾಧ್ಯ? ಅದೆಂತಹ ಗುರುವಾಗಿದ್ದರೂ ಶಕ್ಯವಿಲ್ಲ. ವೀರಶೈವ ತತ್ವಗಳೆಲ್ಲ ಇದ್ದಂತೆಯೆ ಅಳವಟ್ಟರೇನೆ ವೀರಶೈವತ್ವವೆಂದು ಹೇಳುವದಾದರೆ, ಇಂದಿಗೆ ಯಾರೂ ವೀರಶೈವರಾಗಿ ಸಿಕ್ಕುವದಿಲ್ಲ. ಧಾನ್ಯ— ಹತ್ತಿ ಮುಂತಾದ ತಮಗೆ ಬೇಕಾದುದೆಲ್ಲವನ್ನೂ ತಾವೇ

ಬೆಳೆದು ತಾವೇ ಪಾಕಮಾಡಿ, ಬಟ್ಟೆಯನ್ನು ತಾವೇ ನೆಯ್ದು ತಾವೇ ಉಪಯೋಗಿಸುವುದೇ ನಿಜವಾದ ವೀರಶೈವರ ಆಚರಣೆ. ಈ ಆಚರಣೆಯನ್ನು ಇಂದು ಅದೆಷ್ಟು ಜನರಲ್ಲಿ ನೋಡಬಹುದು? ಭವಿ ಬೆಳೆದ ಧಾನ್ಯ, ಭವಿ ಬೆಳೆದ ಹತ್ತಿ, ಭವಿ ನೇಯ್ದು ಹೊಲಿದ ಬಟ್ಟೆ, ಮುಂತಾದವುಗಳನ್ನು ಉಪಯೋಗಿಸುವುದು ಶೈವಾಚಾರವಲ್ಲವೇ ? ಈ ಸ್ಥೂಲವಾದ ಮತ್ತು ಶಿವಶರಣರು ಖಂಡತುಂಡಾಗಿ ನಿಷೇಧಿಸಿದ ಈ ಶೈವಾಚಾರವು (ಅನುಕರಣವಲ್ಲ.) ಇರಬಹುದು. ಆದರೆ ವೀರಶೈವರದೇ ಆದ ಮತ್ತು ವೀರಶೈವ ಸಮಾಜಕ್ಕೆ ಸಾರ್ಥಕ್ಯವನ್ನುಂಟುಮಾಡುವ ಸಂಸ್ಕೃತಿಯ ಅಭಿವೃದ್ಧಿಗೆ ಕಾರಣವಾದ ಜ್ಞಾನಾವಸ್ಥೆಯ ಶಿವದೀಕ್ಷೆಯು ಇರಬಾರದೇ ? ಇದ್ದರೆ ಘಾತುಕವೆ ? ಇನ್ನೂ ಭವಿಹತ್ತಿ, ಭವಿಧಾನ್ಯಗಳನ್ನು ಉಪಯೋಗಿಸುವದರಿಂದ ಸಮಾಜಕ್ಕೆ ಹೆಚ್ಚಿನ ಘಾತುಕವಿದೆಯೆಂದೇ ಹೇಳಬೇಕು. ಭವಿಗಳು ಬೆಳೆಯುವ ಹತ್ತಿ, ಧಾನ್ಯಗಳನ್ನು ವೀರಶೈವರು ಬಳಸದಿರುವದರಿಂದ ನಮ್ಮಲ್ಲಿ ಔದ್ಯೋಗಿಕ ಕಲೆಗಳಾದರೂ ಹೆಚ್ಚಿ ಆರ್ಥಿಕ ಸ್ಥಿತಿಯು ಬಲಪಟ್ಟು ಸಮಾಜವಾದರೂ ಸುಖವಾಗಿದ್ದೀತು! ಇತರ ಸಮಾಜಗಳಲ್ಲಿ ಕೀರ್ತಿಯನ್ನು ಗಳಿಸೀತು! ಪ್ರಬುದ್ಧಾವಸ್ಥೆಯ ಶಿವದೀಕ್ಷೆಯನ್ನು ತೆಗೆದುಹಾಕುವದರಿಂದ ಸಮಾಜ ಮತ್ತು ಸಂಸ್ಕೃತಿಯ ನಾಶವೇ ಹೊರ್ತು ಬೇರೆ ಏನೂ ಪ್ರಯೋಜನವಿಲ್ಲ. ಈ ಪ್ರಬುದ್ಧಾವಸ್ಥೆಯ ಶಿವದೀಕ್ಷೆಯಲ್ಲಿ ವರ್ಷ ಸಾಮ್ಯವಿರಬಹುದೇ ಹೊರ್ತು ದೀಕ್ಷೆಯ ತತ್ವಗಳು ಶೈವ ಸಾಂಪ್ರದಾಯದವಲ್ಲ. ಈ ಕಾರಣಗಳಿಂದ ಗರ್ಭಕ್ಕೆ ಮಾಡುವುದು ಬರೀ ಧಾರಣವೇ ಹೊರ್ತು ದೀಕ್ಷೆಯಲ್ಲ. ಅಲ್ಲದೆ ಧಾರಣ-ದೀಕ್ಷೆಗಳೆರಡೂ ಐಕ್ಯೈಕ ಸಂಸ್ಕಾರಗಳೆಂದು ಸಾಧಿಸುವುದು ಅದೆಂದಿಗೂ ಸಾಧ್ಯವಿಲ್ಲ. ಹಾಗು ಗರ್ಭ ದೀಕ್ಷೆ ಮಾಡುವದರಿಂದ ಗುಂಜಾಫಲದಷ್ಟೂ ಪ್ರಯೋಜನವಿಲ್ಲ. ಆದ್ದರಿಂದ ಶಿವಶರಣರು ಹೇಳುವ ಪ್ರಬುದ್ಧಾವಸ್ಥೆಯ ದೀಕ್ಷೆಯೆ ಬಂಧುರ ತತ್ವವು; ಭಾಸುರ ಸತ್ಯವು.

ಇಲ್ಲಿಯ ವರೆಗಿನ ವಿವರಣೆಯಿಂದ ಶೈವಾನುಕರಣವೆಂದು ಹೊರಟರೆ ತಾಕುವ ತೊಡರುಗಳನ್ನು ತತ್ವದ ನಿಸ್ಸತ್ವವನ್ನು ವಿಚಾರ ಶೀಲರಾದ ವಾಚಕರು, ವಾದಿಗಳು ಪವಿತ್ರ ದೃಷ್ಟಿಯಿಂದ ಪ್ರವಿಮಲ ಚಿತ್ತದಿಂದ—ಪ್ರಶಾಂತ ಭಾವದಿಂದ ಪರಕಿಸಬೇಕು, ಪರಿಶೀಲಿಸಬೇಕು, ಪರಿಭಾವಿಸಬೇಕು.

---

# ಲಿಂಗಧಾರಣ ಅರ್ಥಾತ್ ಶಿವದೀಕ್ಷೆ.

[ಲೇಖಾಂಕಃ— ೪.]

(ಲೇಖಕ:— ವಿ|| ಜೀರಗೆ ಕ. ಬಸವಪ್ಪ, ಬಿ. ಎ. ಬೆಂಗಳೂರುನಗರ.)

---

ಹಿಂದಿನ ಲೇಖನದಲ್ಲಿ ದೀಕ್ಷಾಕಾಲ, ಕರಸ್ಥಲ, ಜ್ಞಾನಾವಸ್ಥೆಯ ದೀಕ್ಷೆ ಮತ್ತು ಅಜ್ಞಾನಾವಸ್ಥೆಯ ದೀಕ್ಷೆ— ಈ ವಿಚಾರಗಳನ್ನು ಕುರಿತು ಶಾಸ್ತ್ರ ಮತ್ತು ಅನುಭವಗಳು ಏನು ಹೇಳುತ್ತವೆಯೆಂಬುದನ್ನೂ ಮತ್ತು ಶಿವಭಕ್ತ ಶಿಶುಗಳ ದೀಕ್ಷೆಯ ಸಂಬಂಧದಲ್ಲಿ ಶ್ರೀಚನ್ನಬಸವಣ್ಣನವರು ಕೊಟ್ಟಿರುವ ಎರಡು ಎಚ್ಚರಿಕೆಗಳನ್ನೂ ಶೃತಪಡಿಸಿದ್ದೇನೆ. ಇನ್ನು ಈ ಲೇಖನದಲ್ಲಿ ದೀಕ್ಷೆಯ ಅರ್ಥ, ದೀಕ್ಷೆಯ ಫಲ, ದೀಕ್ಷೆಯ ವಿಧಾನ ಮತ್ತು ದೀಕ್ಷೆಯನ್ನು ಕೊಡುವ ಗುರುವಿನ ದಕ್ಷತೆ, ಅರ್ಹತೆ ಮತ್ತು ಯೋಗ್ಯತೆ ಇವುಗಳ ವಿಚಾರವನ್ನು ಕುರಿತು ವಿವೇಚನೆ ನಡೆಯಿಸಿ ಶ್ರೀನಿಡುಮಾಮಿಡಿ ಗುರುಮೂರ್ತಿದೇವರ ಎರಡನೆಯ ಲೇಖಾಂಕಕ್ಕೆ ಉತ್ತರಕೊಡಲು ಬಯಸುತ್ತೇನೆ.

## ದೀಕ್ಷೆಯ ಅರ್ಥ.

ಶ್ರೀ ಗುರುಮೂರ್ತಿದೇವರು ದೀಕ್ಷೆಯ ಅರ್ಥ ವಿವರಣೆಯನ್ನು ಮಾಡಲು ಪ್ರಯತ್ನಿಸಿ "ಯಾವುದರ ಪ್ರಭಾವದಿಂದ ಶಿಷ್ಯನಲ್ಲಿ ಶೈವ ಶಕ್ತಿ ಅಥವಾ ಆಧ್ಯಾತ್ಮದೃಷ್ಟಿ ಹುಟ್ಟಿ ಅದರಲ್ಲಿ ಅವನು ಲೀನವಾಗುತ್ತಾನೋ ಅಥವಾ ಆಸಕ್ತನಾಗುತ್ತಾನೋ ಆ ಪ್ರಭಾವಕ್ಕೆ ದೀಕ್ಷೆ ಎಂದು ಹೆಸರು" ಎಂದು ಹೇಳಿದ್ದಾರೆ. ಈ ಅರ್ಥ ವಿವರಣೆಯನ್ನು ನೋಡಿದರೆ ಶ್ರೀಗುರುಮೂರ್ತಿಗಳು ಸುಲಭವಾಗಿ ವಿವರಿಸಬಹುದಾದ ಅರ್ಥವನ್ನು ಬಹಳ ಕ್ಲಿಷ್ಟವಾದುದನ್ನಾಗಿ ರೂಪಗೊಳಿಸಿ, ಅವರೇ ಹೇಳಿಕೊಳ್ಳುವಂತೆ "ಬಲು ಆಳ" ಮತ್ತು "ಅತಿ ಗಡಚು" ಆದ ಪ್ರಸಂಗವನ್ನಾಗಿ ಮಾಡಿಟ್ಟಿದ್ದಾರೆ. "ಶೈವಶಕ್ತಿ" ಎಂಬ ಪದ ಪ್ರಯೋಗವನ್ನು ಮಾಡಿದ್ದಾರೆ. ಇಂಥ ಪದ ಪ್ರಯೋಗದ ಔಚಿತ್ಯವೇನೆಂಬುದು ಗೊತ್ತಾಗುವುದಿಲ್ಲ. ಸಹಜವಾದ ಮತ್ತು ಸುಲಭವಾದ ವಿಷಯಗಳನ್ನು ಅಸಹಜವಾದ ಮತ್ತು ಕಠಿಣವಾದ ವಿಷಯಗಳನ್ನಾಗಿ ಮಾಡುವುದು ನ್ಯಾಯವಲ್ಲ. "ಅದರಲ್ಲಿ

ಅವನು ಲೀನವಾಗುತ್ತಾನೆ” ಎಂಬ ಪ್ರಯೋಗವೂ ಉಚಿತವಾಗಿ ಕಾಣು ವುದಿಲ್ಲ. ಲೀನವಾಗುವುದು ಯಾವುದರಲ್ಲಿ? ಶ್ರೀಗುರುಮೂರ್ತಿಗಳ ವಾಕ್ಯದ ವ್ಯಾಕರಣ ಬಂಧವನ್ನು ಅನುಸರಿಸಿದಲ್ಲಿ “ಅದರಲ್ಲಿ” ಎಂಬು ದಕ್ಕೆ “ಶೈವಶಕ್ತಿ”ಯಲ್ಲಿ ಅಥವಾ “ಆಧ್ಯಾತ್ಮದೃಷ್ಟಿ”ಯಲ್ಲಿ ಎಂದು ಅರ್ಥ ವಾಗುತ್ತದೆ. ಒಂದು ಪಕ್ಷ ಶ್ರೀಗುರುಮೂರ್ತಿಗಳು ಲಿಂಗಾಂಗಸಂಯೋ ಗದ ವಿಚಾರವನ್ನು ಪ್ರಸ್ತಾವಿಸುತ್ತಿರುವರೆಂದು ಇಟ್ಟುಕೊಂಡಾಗ್ಯೂ ಸಹ ಇವರ ಅರ್ಥವಿವರಣೆ ಕ್ರಮವಾಗಿ ಕಾಣುವುದಿಲ್ಲ. “ಅಂಗ”ಲೀನವಾಗು ವುದು ಅಥವಾ ಸಂಯೋಗವಾಗುವುದು “ಶಕ್ತಿ”ಯಲ್ಲೂ ಅಲ್ಲ “ದೃಷ್ಟಿ” ಯಲ್ಲೂ ಅಲ್ಲ. ಶಿವಶರಣರ ಷಟ್‌ಸ್ಥಲಶಾಸ್ತ್ರ ರೀತ್ಯಾ “ಅಂಗ” ಲೀನ ವಾಗುವುದು “ಲಿಂಗ”ದಲ್ಲಿ. “ಶಕ್ತಿ”ಯನ್ನು ಭಕ್ತಿಯಿಂದ ಗೆದ್ದು ಲಿಂಗ ದಲ್ಲಿ “ದೃಷ್ಟಿ”ನಟ್ಟು “ಲಿಂಗದೊಡನೆ” “ಅಂಗ” ಸಂಯೋಗವಾಗುತ್ತದೆ. ಇದೇ ಷಟ್‌ಸ್ಥಲದ ಆಚರಣೆ. ಇದೇ ದೀಕ್ಷೆಯ ಗುರಿ. ಈ ರೀತಿಯಲ್ಲಿ ಷಟ್‌ಸ್ಥಲದ ಆಚರಣೆ ಮತ್ತು ದೀಕ್ಷೆಯ ಗುರಿ ಇರುವಲ್ಲಿ ಶಿಷ್ಯನು (ಅಂಗನು) “ಶಕ್ತಿ”ಯಲ್ಲಿ ಅಥವಾ “ದೃಷ್ಟಿ”ಯಲ್ಲಿ ಲೀನವಾಗುತ್ತಾನೆಂದು ಹೇಳುವುದು ಕೇವಲ ತಪ್ಪೆಂದು ನಿರ್ವಾಹವಿಲ್ಲದೆ ಹೇಳಬೇಕಾಗುತ್ತದೆ. ಇನ್ನು ದೀಕ್ಷೆಯ ವಿಚಾರದಲ್ಲಿ ಹಿಂದಿನ ಅನುಭವಿಗಳು ಮಾಡಿತಕ್ಕ ಅರ್ಥವಿವರಣೆಗಳನ್ನು ಅವಲೋಕಿಸಿದ್ದಾದರೆ ದೀಕ್ಷೆಯಲ್ಲಿ ಎರಡು ಮುಖ್ಯ ವಾದ ಅಂಶಗಳು ಎದ್ದು ಕಾಣುತ್ತವೆ. ಒಂದು “ದೀಯತೇ” ಮತ್ತೊಂದು “ಕ್ಷೀಯತೆ”. “ದೀಯತೆ”ಯಲ್ಲಿ ಲಿಂಗಸಂಬಂಧವಾಗುತ್ತದೆ. ಕ್ಷೀಯತೆ ಯಲ್ಲಿ ಮಲತ್ರಯಗಳು ನಾಶವಾಗುತ್ತವೆ. ಈ ಎರಡು ಕ್ರಿಯಾಚರ ಣೆಗಳನ್ನು ಒಳಗೊಂಡುದೇ “ದೀಕ್ಷೆ” ಎನಿಸಿಕೊಳ್ಳುತ್ತವೆ. ಇಷ್ಟು ಸಹಜವೂ, ಸರಳವೂ, ಸುಲಭವೂ ಆಗಿರತಕ್ಕ ದೀಕ್ಷೆಯ ಅರ್ಥವನ್ನು “ಆಳ”, “ಗಡಚು” ಎಂದು ಹೇಳಿ ಸಂದೇಹಗಳನ್ನು ಹುಟ್ಟಿಸಿ ಜನ ರನ್ನು ಭ್ರಮಿತರನ್ನಾಗಿ ಮಾಡುವುದು ನ್ಯಾಯವಲ್ಲ.

ಇನ್ನು ಶ್ರೀ ಗುರುಮೂರ್ತಿಗಳು ಕ್ರಿಯಾಶಕ್ತಿಯ ವಿಚಾರವನ್ನು ಪ್ರಸ್ತಾಪಿಸುತ್ತ “ಕ್ರಿಯಾಶಕ್ತಿಯಿಲ್ಲದ—ವ್ಯಕ್ತಿಗೆ ದೀಕ್ಷೆಯು ಹೊಲ್ಲದು ನಿಲ್ಲದು” ಎಂದು ಹೇಳಿ “ಈ ವಿಚಾರವನ್ನು ಕೆಲವರು ಒಪ್ಪುವುದಿಲ್ಲ” ವೆಂದು ಉದ್ಗಾರ ತೆಗೆದಿದ್ದಾರೆ. ಆದರೆ ಇದುವರೆಗೆ ನಡೆದಿರುವ ದೀಕ್ಷಾ ವಾದದಲ್ಲಿ ಕ್ರಿಯಾಶಕ್ತಿ ಅನಾವಶ್ಯಕವೆಂದು ಯಾರೂ ಹೇಳಿಲ್ಲ. ಕ್ರಿಯಾ

ಶಕ್ತಿ ಮತ್ತು ಜ್ಞಾನಶಕ್ತಿ ಇವೆರಡೂ ಬೇಕೆಂದೇ ನಾವುಗಳು ಮೇಲಿಂದ
ಮೇಲೆ ಪ್ರಸ್ತಾಪಿಸಿದ್ದೇವೆ. ಹೀಗಿದ್ದರೂ ಕ್ರಿಯಾಶಕ್ತಿ ಬೇಡವೆಂದು ಕೆಲ
ವರು ಹೇಳುವುದಾಗಿ ನುಡಿಯುವುದು ಕುತರ್ಕ. ಇನ್ನು ದೀಕ್ಷೆಗೆ
ಬೇಕಾದ ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿಗಳು ಯಾವಾಗ ಮಾನವನಲ್ಲಿ
ಪ್ರಚೋದನಗೊಳ್ಳುತ್ತವೆಯೆಂಬುದನ್ನು ವಿಮರ್ಶಿಸಿ ನೋಡಿದಲ್ಲಿ ಕ್ರಿಯಾ
ಮತ್ತು ಜ್ಞಾನಶಕ್ತಿಗಳ ಸಮಸ್ಯೆ ಪರಿಹಾರವಾಗುತ್ತದೆ. ಈ ವಿಚಾರ
ವನ್ನು ನಾನು ಹಿಂದಿನ ಲೇಖನದಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಿರುತ್ತೇನೆ.
ಅದನ್ನೇ ಇಲ್ಲಿ ಪುನಃ ಸೂಕ್ಷ್ಮವಾಗಿ ತಿಳಿಸುತ್ತೇನೆ. ದೀಕ್ಷೆಗೆ ಅವಶ್ಯಕ
ವಾದ ಜ್ಞಾನ ಮತ್ತು ಕ್ರಿಯಾಶಕ್ತಿಗಳು ಮಾನವನ ಜೀವಿತದಲ್ಲಿ ಎರಡು
ಕಾಲಗಳಲ್ಲಿ ಉಂಟಾಗುತ್ತವೆ. ಗರ್ಭದ ಎಂಟನೆಯ ತಿಂಗಳಿನಲ್ಲಿ ಉಂಟಾ
ಗತಕ್ಕುದು ಒಂದು ಕಾಲ. ಇದು ನಿರ್ದಿಷ್ಟವಾದ ಕಾಲ. ವಯಸ್ಕ
ನಾಗಿ ಬೆಳೆದು ಸಂಸಾರದ ಕಷ್ಟ ಸುಖಗಳನ್ನು ಅನುಭವಿಸಿ ಸಂಸಾರ
ದಲ್ಲಿ ಹೇಯ ಹುಟ್ಟಿ ಗುರುಕರುಣೆಯನ್ನು ಪಡೆದು ಮುಕ್ತನಾಗಬೇ
ಕೆಂಬ ಆಕಾಂಕ್ಷೆ ಉಂಟಾಗತಕ್ಕುದು ಮತ್ತೊಂದು ಕಾಲ. ಈ ಎರಡ
ನೆಯ ಕಾಲ ಮೊದಲನೆಯ ಕಾಲದಂತೆ ನಿರ್ದಿಷ್ಟವಾದ ಕಾಲವಲ್ಲ.
ಇದು ಸನ್ನಿವೇಶ, ಕಾಯಕ, ಸಂಪ್ರದಾಯ, ದೇಶಕಾಲಗಳನ್ನು ಅನು
ಸರಿಸಿ ಯಾವಾಗಲಾದರೂ ಪ್ರಾಪ್ತವಾಗುತ್ತದೆ. ಇದು ಚಿಕ್ಕವಯಸ್ಸಿನಲ್ಲೇ
ಪ್ರಾಪ್ತವಾದರೂ ಆಗಬಹುದು. ನಡುವಯಸ್ಸಿನಲ್ಲಿ ಪ್ರಾಪ್ತವಾದರೂ ಆಗ
ಬಹುದು. ಮುಪ್ಪಿನಲ್ಲಿ ಪ್ರಾಪ್ತವಾದರೂ ಆಗಬಹುದು. ಅಥವಾ ಆಗ
ದೆಯೇ ಹೋಗಲೂಬಹುದು. ಆದುದರಿಂದ ಎರಡನೆಯ ಕಾಲ ನಿರ್ದಿ
ಷ್ಟವಾದ ಕಾಲವಲ್ಲ. ದೀಕ್ಷೆಗೆ ಅವಶ್ಯಕವಾದ ಕ್ರಿಯಾ ಮತ್ತು ಜ್ಞಾನ
ಶಕ್ತಿಗಳು ಈ ಎರಡನೆಯ ಕಾಲದಲ್ಲಿ ಪ್ರಾಪ್ತವಾಗಲೇಬೇಕೆಂಬ ನಿಯ
ಮವಿಲ್ಲ. ಈ ಕಾರಣದಿಂದಲೇ ಶಿವಶರಣರು ಈ ಎರಡನೆಯ ಕಾಲದಲ್ಲಿ
ದೀಕ್ಷೆಗೆ ಬೇಕಾದ ಕ್ರಿಯಾ ಮತ್ತು ಜ್ಞಾನಶಕ್ತಿಗಳು ಉಂಟಾದುವೇ
ಎಂಬುದನ್ನು ಪರಿಶೀಲಿಸಲು ಬಹಳ ಕಠಿಣವಾದ ಪರೀಕ್ಷೆಗಳನ್ನು ಇಟ್ಟಿ
ರುತ್ತಾರೆ. ಆದರೆ ಇಂಥ ಕಠಿಣವಾದ ಪರೀಕ್ಷೆಗಳನ್ನು ಮೊದಲನೆಯ
ಕಾಲದ ದೀಕ್ಷೆಯ ಸಂಬಂಧದಲ್ಲಿ ಇಟ್ಟಿರುವುದಿಲ್ಲ.

ಇನ್ನು ಶ್ರೀ ಗುರುಮೂರ್ತಿಗಳು ಶಿಶುವಿಗೆ ಕ್ರಿಯಾಶಕ್ತಿ ಇರುವುದೇ
ಎಂದು ಸಂದೇಹಪಟ್ಟಿದ್ದಾರೆ. ಈ ಸಂದೇಹ ಪರಿಹಾರವಾಗಬೇಕಾದರೆ

ಕ್ರಿಯಾಶಕ್ತಿಗೂ ಜ್ಞಾನಶಕ್ತಿಗೂ ಇರುವ ಸಂಬಂಧವನ್ನು ನಾವು ಮೊದಲು ಅರಿತುಕೊಳ್ಳಬೇಕಾಗುತ್ತದೆ. ಕ್ರಿಯಾಜ್ಞಾನಗಳು ರಸರುಚಿಗಳಂತೆ, ಕುಸುಮ ಗಂಧಗಳಂತೆ ನೆರಳುಬೆಳಕುಗಳಂತೆ ಒಂದನ್ನು ಅವಲಂಬಿಸಿ ಮತ್ತೊಂದು ಇರುತ್ತದೆ. ಯಾವ ಕ್ರಿಯೆಗೂ ಹಿನ್ನೆಲೆಯಾಗಿ ಜ್ಞಾನ ಇದ್ದೇ ಇರುತ್ತದೆ. ಯಾವ ಜ್ಞಾನಕ್ಕೂ ಹಿನ್ನೆಲೆಯಾಗಿ ಕ್ರಿಯೆ ಇದ್ದೇ ಇರುತ್ತದೆ. ಕ್ರಿಯೆಗೆ ಕಾರಣ ಜ್ಞಾನ. ಜ್ಞಾನಕ್ಕೆ ಕಾರಣ ಕ್ರಿಯೆ. ಈ ರೀತಿಯಲ್ಲಿ ಕ್ರಿಯಾಜ್ಞಾನ ಗಳು ಹಾಸುಹೊಕ್ಕುಗಳಂತೆ ಒಂದಕ್ಕೊಂದು ಹೆಣೆದುಕೊಂಡಿರುತ್ತವೆ. ಇದು ಪ್ರಕೃತಿನಿಯಮ. ಈ ನಿಯಮವನ್ನು ಯಾರೂ ಬದಲಾಯಿಸುವು ದಕ್ಕಾಗುವುದಿಲ್ಲ. ಎಂದ ಮೇಲೆ ಗರ್ಭಶಿಶುವಿಗೆ ಎಂಟನೆಯ ತಿಂಗಳಿನಲ್ಲಿ ಜ್ಞಾನಶಕ್ತಿ ಉಂಟಾಯಿತೆಂದರೆ— ಅದರ ಜೊತೆಗೆ ಕ್ರಿಯಾಶಕ್ತಿಯೂ ಉಂಟಾಯಿತೆಂದು ನಿರ್ಣಯವಾಗುತ್ತದೆ. ಅಲ್ಲದೆ ಶಿಶುವಿಗಿರುವಷ್ಟು ಜ್ಞಾನ ಮತ್ತು ಕ್ರಿಯಾಶಕ್ತಿಗಳು ವಯಸ್ಕರಾದವರಿಗೆ ಇರುವುದಿಲ್ಲವೆಂಬ ಅಂಶವನ್ನು ಅನೇಕ ಅನುಭವಿಗಳೂ ಮತ್ತು ಶಾಸ್ತ್ರಜ್ಞರೂ ಪ್ರಯೋಗ ಗಳ ಮೂಲಕ ತೋರಿಸಿಕೊಟ್ಟಿರುತ್ತಾರೆ. ಈ ವಿಚಾರದಲ್ಲಿ ಮಹಾನುಭ ವಿಗಳಾದ ಶ್ರೀ ನಿಜಗುಣಶಿವಯೋಗಿಗಳು ತಮ್ಮ ವಿವೇಕಚಿಂತಾಮಣಿ ಯಲ್ಲಿ ಪಿಂಡೋತ್ಪತ್ತಿ ಪ್ರಕರಣದಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ. ಈ ವಿಚಾರವಾಗಿ ಗರ್ಭೋಪನಿಷತ್ತೆಂಬ ಒಂದು ಪ್ರತ್ಯೇಕವಾದ ಉಪನಿಷತ್ತು ಸಹ ಇದೆ ಎಂದು ಶ್ರೀನಿಜಗುಣರು ತಮ್ಮ ಗ್ರಂಥದಲ್ಲಿ ಹೇಳಿ ಅದನ್ನು ಆಧಾರವಾಗಿ ತೆಗೆದುಕೊಂಡಿರುತ್ತಾರೆ. ಇತ್ತೀಚಿನ ಎಂದರೆ ನಮ್ಮ ಕಾಲದ ಪ್ರಸಿದ್ಧ ಅನುಭವಿಗಳಾದ ಮೆಡೇಮ್ ಮಾಂಟಿಸೋರಿ ಎಂಬ ಪಾಶ್ಚಾತ್ಯ ಶಾಸ್ತ್ರಜ್ಞೆಯು ಶಿಶುಶಾಸ್ತ್ರದ ವಿಚಾರದಲ್ಲಿ ಅನೇಕ ಪ್ರಯೋಗಗಳನ್ನು ನಡೆಯಿಸಿ ಶಿಶುವಿನ ಜ್ಞಾನ ಮತ್ತು ಕ್ರಿಯಾಶಕ್ತಿಗಳು ಅತ್ಯಂತ ಚುರು ಕಾದವುಗಳೆಂದು ಕಂಡುಹಿಡಿದಿದ್ದಾರೆ. ಈ ವಿಚಾರವನ್ನು ಅವರು ಮೊನ್ನೆ ಮದರಾಸಿನಲ್ಲಿ ಅಡ್ಯಾರದಲ್ಲಿ ನೆರೆದ ಮಹಾಸಭೆಯೊಂದರಲ್ಲಿ ವ್ಯಕ್ತಗೊ ಳಿಸಿದರು. ಅವರು ಶಿಶುಪಿಂಡವನ್ನು "ಆಧ್ಯಾತ್ಮಪಿಂಡ" (*Spiritual embryo*) ಎಂದು ಕರೆದಿದ್ದಾರೆ. ಶಿಶುಪಿಂಡದ ಬೆಳವಣಿಗೆಯನ್ನು "ಅವತಾರ" (*incarnation*) ಎಂದು ಸಂಬೋಧಿಸಿದ್ದಾರೆ. ಶಿಶುವು ಹೇಗೆ ತನ್ನ ಪಿಂಡಾವಸ್ಥೆಯಲ್ಲಿ ಸೃಷ್ಟಿಯ ವಿವಿಧ ಸಾಮರ್ಥ್ಯಗಳನ್ನು ಸಂಪಾದಿಸುತ್ತದೆ ಎಂಬುದನ್ನು ಅವರು ಹೃದಯಂಗಮವಾಗಿ ವಿವರಿಸಿ

ದ್ದಾರೆ. ಈ ರೀತಿಯಲ್ಲಿ ಶಾಸ್ತ್ರಜ್ಞರ ಮತ್ತು ಅನುಭವಿಗಳ ಪ್ರಯೋಗ ಪರೀಕ್ಷೆಗಳು ನಡೆದು ಶಿಶುವಿಗೆ ಅತ್ಯಂತ ಉನ್ನತವಾದ ಜ್ಞಾನ ಮತ್ತು ಕ್ರಿಯಾಶಕ್ತಿಗಳು ಅದರಲ್ಲಿಯೂ ನಮ್ಮ ಪ್ರಕೃತದ ದೀಕ್ಷೆಗೆ ಬೇಕಾದ ಆಧ್ಯಾತ್ಮಿಕ ಜ್ಞಾನ ಕ್ರಿಯಾಶಕ್ತಿಗಳು ಇರುವುದು ಕಂಡುಬಂದಿದೆ. ಈ ಜ್ಞಾನ ಕ್ರಿಯಾಶಕ್ತಿಗಳು ಶಿಶುವಿಗೆ ಇರುವುದರಿಂದಲೇ ಗರ್ಭಿಣಿಯರ ನಡೆನುಡಿ, ಆಚಾರವಿಚಾರಗಳು ಬಹಳ ಶುದ್ಧವಾದವುಗಳಾಗಿಯೂ, ಅಚ್ಚುಕಟ್ಟಾದವುಗಳಾಗಿಯೂ ಇರಬೇಕೆಂಬ ನಿಯಮ ನಮ್ಮಲ್ಲಿ ಈಗಲೂ ಬಳಕೆಯಲ್ಲಿದೆ. ಕೆಟ್ಟ ವಾರ್ತೆಗಳೂ, ಕೆಟ್ಟ ದೃಶ್ಯಗಳೂ, ಕೆಟ್ಟ ಮನೋಭಾವಗಳೂ ಗರ್ಭಿಣಿಯರಿಗೆ ನಿಷಿದ್ಧವಾದವುಗಳಾಗಿವೆ. ಇದಕ್ಕೆಲ್ಲಾ ಕಾರಣವೆಂದರೆ ಶಿಶುವಿನ ಅತ್ಯಂತ ಚುರುಕಾದ ಜ್ಞಾನಕ್ರಿಯಾ ಶಕ್ತಿಗಳೇ.

## ದೀಕ್ಷೆಯ ಫಲ.

ಇನ್ನು ಶ್ರೀ ಗುರುಮೂರ್ತಿ ದೇವರು ಶಿವಾನುಭವದ ವಿಚಾರವನ್ನು ತೆಗೆದುಕೊಂಡು ಅನುಭವಕ್ಕೆ ಬಾರದ್ದನ್ನು ಬಳಸಬಾರದೆಂದು ಶ್ರೀ ನಿ. ಪ್ರ. ಶ್ರೀ ಮಹಾದೇವ ಸ್ವಾಮಿಗಳು ತಮ್ಮದೊಂದು ಉಪನ್ಯಾಸದಲ್ಲಿ ನಿರೂಪಿಸಿದರೆಂದೂ, ಶಿವಾನುಭವ ಸಂಸ್ಕಾರವುಂಟಾಗದ ಗರ್ಭಶಿವದೀಕ್ಷಾ ಸಂಸ್ಕಾರವು ಬೋರ್ಗಲ್ಲ ಮೇಲೆ ನೀರೆರದಂತೆ ವ್ಯರ್ಥವೆಂದೂ ಹೇಳಿರುತ್ತಾರೆ. ಅನುಭವಕ್ಕೆ ಬಾರದ್ದನ್ನು ಬಳಸಬಾರದೆಂದು ಶ್ರೀ ನಿ. ಪ್ರ. ಶ್ರೀ. ಮಹಾದೇವಸ್ವಾಮಿಗಳು ಹೇಳಿರುವುದು ಅನುಭವದ ಮಾತೇ ಸರಿ. ಆದರೆ ಶಿವಾನುಭವವನ್ನು ಹೇಗೆ ಸಂಪಾದಿಸಬೇಕೆಂಬ ವಿಚಾರದಲ್ಲಿ ಶ್ರೀ ಗುರುಮೂರ್ತಿಗಳು ಹೇಳಿರುವುದು ಮಾತ್ರ ಅನುಭವಕ್ಕೆ ನಿಲ್ಲತಕ್ಕುದಾಗಿಲ್ಲ. ನಾನು ಹಿಂದಿನ ಲೇಖನದಲ್ಲಿ ದೀಕ್ಷೆ ಮತ್ತು ಶಿವಾನುಭವ ವಿಚಾರಗಳನ್ನು ವಿಶದೀಕರಿಸಿದ್ದೇನೆ. ಶಿವಾನುಭವವು ದೀಕ್ಷೆಯ ಫಲ. ದೀಕ್ಷೆ ಶಿವಾನುಭವಕ್ಕೆ ಅಧಿಕಾರ. ಅಧಿಕಾರವನ್ನು ಪಡೆಯುವುದಕ್ಕೆ ಮುಂಚೆ ಶಿವಾನುಭವವನ್ನು ನಡೆಯಿಸುವುದಕ್ಕಾಗುವುದಿಲ್ಲ. ದೀಕ್ಷೆ ಒಂದು ನಿರ್ದಿಷ್ಟವಾದ ಕ್ರಿಯಾಚರಣೆ. ಶಿವಾನುಭವ ದಿನಚರಿಯ ಕ್ರಿಯಾಚರಣೆ. ದೀಕ್ಷೆ ಒಂದು ಸಂಸ್ಕಾರ. ಶಿವಾನುಭವ ಒಂದು ಜೀವನ. ಹೇಗೆ ವಿವಾಹವು ಒಂದು ನಿರ್ದಿಷ್ಟವಾದ ಕಾಲದಲ್ಲಿ ನಡೆಯತಕ್ಕ ಕ್ರಿಯಾಚರಣೆಯಾಗಿ ದಾಂಪತ್ಯವು ನಿತ್ಯಜೀವನವಾಗಿರುವದೋ, ಹಾಗೆ ದೀಕ್ಷೆ ಒಂದು ನಿರ್ದಿಷ್ಟವಾದ ಕಾಲದಲ್ಲಿ ನಡೆಯತಕ್ಕ ಕ್ರಿಯಾಚರಣೆಯಾಗಿ ಶಿವಾನುಭ

ವವು ನಿತ್ಯಜೀವನವಾಗಿದೆ. ದೀಕ್ಷೆ ಬೀಜವನ್ನು ಬಿತ್ತಿದಂತೆ, ಶಿವಾನುಭವ ಬಿತ್ತಿದ ಬೀಜ ಮೊಳಕೆಯಾಗಿ, ಸಸಿಯಾಗಿ, ಗಿಡವಾಗಿ, ಮರವಾಗಿ, ಎಲೆಯಾಗಿ, ಹೂವಾಗಿ, ಕಾಯಾಗಿ. ಹಣ್ಣುಬಿಟ್ಟಂತೆ, ದೀಕ್ಷೆಗೂ ಶಿವಾನುಭವಕ್ಕೂ ಇರತಕ್ಕ ಈ ಅಂತರವನ್ನು ತಿಳಿಯದೆ "ಶಿವಾನುಭವ ಸಂಸ್ಕಾರವುಂಟಾಗದ ಗರ್ಭಶಿವದೀಕ್ಷಾ ಸಂಸ್ಕಾರವು ಬೋರ್ಗಲ್ಲ ಮೇಲೆ ನೀರೆರೆದಂತೆ ವ್ಯರ್ಥ" ಎಂದು ಶ್ರೀ ಗುರುಮೂರ್ತಿಗಳು ಹೇಳಿರುವುದೇ ವ್ಯರ್ಥ. ಈ ವಿಚಾರದಲ್ಲಿ ಶ್ರೀ ಗುರುಮೂರ್ತಿಗಳು ಇನ್ನೂ ಹೆಚ್ಚಿನ ಅನುಭವಗಳನ್ನು ಮಾಡಿಕೊಳ್ಳಬೇಕೆಂದು ನನ್ನ ಬಿನ್ನಹ.

## ದೀಕ್ಷೆಯ ವಿಧಾನ.

ಇನ್ನು ಶ್ರೀ ಗುರುಮೂರ್ತಿಗಳು ಶಿವದೀಕ್ಷೆಗೆ ಪೂರ್ವ ನಡೆಯಿಸುವ ಕಾಯಶುದ್ಧಿ, ಜೀವಶುದ್ಧಿ ಮೊದಲಾದ ಶುದ್ಧಿಸಂಸ್ಕಾರಗಳ ವಿಚಾರವನ್ನು ಪ್ರಸ್ತಾಪಿಸುತ್ತ ಈ ಶುದ್ಧಿ ಸಂಸ್ಕಾರಗಳನ್ನು ಗರ್ಭದ ಶಿಶುವಿಗೆ ಮಾಡಲು ಸಾಧ್ಯವೇ ಎಂದು ಪ್ರಶ್ನಿಸಿ ಕೆಲವು ವಚನಗಳ ಉದಾಹರಣೆಯನ್ನು ಕೊಟ್ಟಿದ್ದಾರೆ. ಈ ವಚನಗಳಲ್ಲಿ ಹೇಳಿರುವ ಈ ಶುದ್ಧಿ ಸಂಸ್ಕಾರಗಳನ್ನು ಶಿವಶರಣರು ಯಾರಿಗೋಸ್ಕರ ನಿರ್ಮಿಸಿರುತ್ತಾರೆಂಬುದನ್ನೂ ಮತ್ತು ಯಾವ ಕಾರಣಕ್ಕೋಸ್ಕರ ನಿರ್ಮಿಸಿರುತ್ತಾರೆಂಬುದನ್ನೂ ನಾವು ಮೊದಲು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಶುದ್ಧಿ ಸಂಸ್ಕಾರಗಳನ್ನು ಶಿವಶರಣರು ಭವಿಗಳ ದೀಕ್ಷೆಗೋಸ್ಕರವಾಗಿ ಏರ್ಪಡಿಸಿರುತ್ತಾರೆ. ಶಿವಭಕ್ತರ ಗರ್ಭದಲ್ಲಿ ಹುಟ್ಟುವ ಶಿಶುಗಳಿಗೂ, ಹೊಸದಾಗಿ ಲಿಂಗವಂತ ಧರ್ಮಕ್ಕೆ ಬರತಕ್ಕ ಭವಿಗಳಿಗೂ ಇರತಕ್ಕ ಮಹದಂತರವೇ ಈ ಶುದ್ಧಿ ಸಂಸ್ಕಾರಗಳ ನಿರ್ಮಾಣಕ್ಕೆ ಕಾರಣವಾಗಿದೆ. ಭವಿಗಳನ್ನು ಭಕ್ತರನ್ನಾಗಿ ಮಾಡುವುದಕ್ಕೆ ಮುಂಚೆ ಆ ಭವಿಗಳ ಹಿಂದಿನ ಆಚಾರಗಳನ್ನೂ, ವಿಚಾರಗಳನ್ನೂ, ಸಂಪ್ರದಾಯಗಳನ್ನೂ, ನಂಬಿಕೆಗಳನ್ನೂ ತಿದ್ದಿ ಮಾರ್ಪಡಿಸಬೇಕಾಗುತ್ತದೆ. ಈ ರೀತಿ ತಿದ್ದಿ ಮಾರ್ಪಡಿಸುವ ಕಾರ್ಯವು ಸುಲಭವಾಗಿರದೆ ಬಹಳ ಕಷ್ಟವಾದ ಕಾರ್ಯವೇ ಆಗಿರುತ್ತದೆ. ಏಕೆಂದರೆ ಭವಿತನ ಬಲಿತು ಹೋಗಿರುತ್ತದೆ. ರಕ್ತಗತವಾಗಿರುತ್ತದೆ. ಬೇರೂರಿರುತ್ತದೆ. ಈ ವಿಚಾರದಲ್ಲಿ ಬಸವಣ್ಣನವರು ಹೀಗೆ ಹೇಳಿದ್ದಾರೆ:-

"ಬಡಹಾರುವನೇಸು ಭಕ್ತನಾದರೆಯೂ ನೇಣಿನ ಹಂಗಬಿಡ!
ಮಾಲೆಗಾರನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗಬಿಡ!
ಬಣಜಿಗನೇಸು ಭಕ್ತನಾದರೆಯೂ ಒಟ್ಟಿಲ ಬೆನಕನ ಹಂಗಬಿಡ!
ಕಂಚುಗಾರನೇಸು ಭಕ್ತನಾದರೆಯೂ ಕಾಳಿಂ) ದೇವಿಯ ಹಂಗಬಿಡ!

\+ \+ \+. \+

ಇಷ್ಟೊಂದು ಬಲವಾಗಿ ಅಂಟಿಕೊಂಡಿರುವ ಭವಿತನವನ್ನು ಕಳೆಯಬೇಕಾದರೆ ಬಲವಾದ ಶುದ್ಧಿ ಸಂಸ್ಕಾರಗಳೇ ಬೇಕಾಗುತ್ತವೆ. ಇದಕ್ಕಾಗಿ ಶಿವಶರಣರು ಕಾಯಶುದ್ಧಿ, ಜೀವಶುದ್ಧಿ, ಭೂತಶುದ್ಧಿ ಇವೇ ಮೊದಲಾದ ಶುದ್ಧಿಗಳ ಕ್ರಿಯಾಚರಣೆಗಳನ್ನು ಗೊತ್ತುಮಾಡಿರುತ್ತಾರೆ. ಭವಿಗಳಿಗೆ ದೀಕ್ಷೆಯನ್ನು ಕೊಡುವ ಕಾಲದಲ್ಲಿ ಕಾಯಶುದ್ಧಿ ಮೊದಲಾದ ಶುದ್ಧಿಕ್ರಿಯೆಗಳನ್ನು ಹೇಗೆ ಮಾಡಬೇಕೆಂಬ ವಿಚಾರದಲ್ಲಿ ಶ್ರೀ ಚನ್ನಬಸವಣ್ಣನವರು ಸವಿಸ್ತಾರವಾಗಿ ಈ ಮುಂದೆ ಕಂಡಂತೆ ನಿರೂಪಿಸಿರುತ್ತಾರೆ: —

"ಭವಿತನಕ್ಕೆ ಹೇಸಿ ಭಕ್ತನಾದೆನೆಂದೊಡೆ ಆತನ ಪೂರ್ವಾಶ್ರಯವ ಕಳೆದು ಭಕ್ತನ ಮಾಡುವ ಪರಿ ಎಂತೆಂದೊಡೆ ಅವನ ಕಾಯವ ಶುದ್ಧಿವ ಮಾಡುವುದು. ಜೀವವ ಶುದ್ಧವ ಮಾಡುವುದು. ಆತ್ಮಗೂಡಿವಾಕ್ಕು ಪಾಣಿಪಾದ ಪಾಯುಗುಹ್ಯವೆಂಬ ಕರ್ಮೇಂದ್ರಿಯವ ಶುದ್ಧವ ಮಾಡುವುದು. ಆತನ ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕೆಂಬ ಜ್ಞಾನೇಂದ್ರಿಯ ಶುದ್ಧವ ಮಾಡುವುದು. ಆತನ ಒಳಹೊರಗೆ ಸುತ್ತಿರ್ದ ಮಾಯಾಪಾಶದ ಪ್ರಪಂಚವ ಬಿಡಿಸಿ ಹಿಂದಣ ಭೂತಭಾವದಿಂದ ಜೀವೋಶಿವನೆಂಬ ಪರಿಯಾಯವ ಕೆಡಿಸಿ...... ಆತನ ಸರ್ವಾಂಗವ ಶುದ್ಧವ ಮಾಡಿ ಆತನ ತಂದು ಗಣಪಂಗ್ತಿಯಲ್ಲಿ ಕುಳ್ಳಿರಿಸಿ... ಶೈವಕರ್ಮದಿಂದ ಮಾಡುವ ಸ್ಥಾವರಲಿಂಗ ಪೂಜೆಯಂ ಮಾಣಿಸಿ, ಕರಚೆ ಕಂಕಣವ ಕಟ್ಟಿ ನಿರ್ಧಾರದ ತಾಳಿಯಂ ಕಂಠದಲ್ಲಿ ಕಟ್ಟಿ ಕಲಿಯಾಗು ಎಂದು ಎನ್ನ ಕೃತಾರ್ಥನ ಮಾಡಿದ ಶ್ರೀ ಗುರುವೇ ಕೂಡಲಚನ್ನಸಂಗ ನಿಮ್ಮ ಶರಣ ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು."

ಈ ವಚನ ಯಾರಿಗಾಗಿ ಹೇಳಲಾಗಿದೆ ಎಂಬುದು ಈಗಲಾದರೂ ಶ್ರೀ ಗುರುಮೂರ್ತಿಗಳಿಗೆ ಅರ್ಥವಾಗುವುದೆ? "ಭವಿತನಕ್ಕೆ ಹೇಸಿ ಭಕ್ತ

ನಾಡೆನೆಂದೊಡೆ" ಎಂಬ ಮಾತುಗಳು ಭವಿಯ ದೀಕ್ಷೆಯನ್ನು ಸೂಚಿಸುವುದಿಲ್ಲವೆ? "ಆತನ ತಂದು ಗಣಪಂಗ್ತಿಯಲ್ಲಿ ಕುಳ್ಳಿರಿಸಿ" ಎಂಬ ಮಾತುಗಳು ದೀಕ್ಷಿತನು ಭವಿ ಎಂಬುದನ್ನು ವ್ಯಕ್ತಪಡಿಸುವುದಿಲ್ಲವೇ? "ಶೈವ ಕರ್ಮದಿಂದ ಮಾಡುವ ಸ್ಥಾವರ ಲಿಂಗಪೂಜೆಯ ಮಾಣಿಸಿ" ಎಂಬ ಮಾತುಗಳು ಭವಿಯ ಪೂರ್ವಾಶ್ರಯದ ನಿರಸನವನ್ನು ನಿರೂಪಿಸುವುದಿಲ್ಲವೆ? ಈ ರೀತಿಯಲ್ಲಿ ಭವಿಗಳಾಗಿ ಏರ್ಪಡಿಸಿದ ಕಾಯಶುದ್ಧಿ ಜೀವಶುದ್ಧಿ ಇತ್ಯಾದಿ ಶುದ್ಧಿ ಸಂಸ್ಕಾರಗಳು ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಶಿಶುಗಳ ದೀಕ್ಷಾಕಾಲವನ್ನು ನಿರ್ಣಯಿಸತಕ್ಕವುಗಳಾಗಿವೆ ಎಂದು ಹೇಳುವುದು ಕೇವಲ ಅಸಮಂಜಸವಾಗಿದೆ. ಭವಿಗಳ ದೀಕ್ಷೆಯಲ್ಲಿ ಪೂರ್ವಭಾವಿಯಾಗಿ ಮಾಡಬೇಕಾದ ಶುದ್ಧಿ ಕಾರ್ಯಗಳು ಗರ್ಭದ ಎಂಟನೆಯ ತಿಂಗಳಿನಲ್ಲಿ ದೈವಿಕವಾಗಿ ನಡೆದೇ ಹೋಗಿರುತ್ತವೆ. ಭವಿಗಳ ದೀಕ್ಷೆಯ ಪೂರ್ವಸಿದ್ಧತೆ ಕೃತಕವಾಗಿದ್ದರೆ ಗರ್ಭಶಿಶುವಿನ ದೀಕ್ಷೆಯ ಪೂರ್ವಸಿದ್ಧತೆ ನೈಸರ್ಗಿಕವಾಗಿದೆ. ಈ ರೀತಿಯಲ್ಲಿ ಶಿವಭಕ್ತ ಶಿಶುಗಳಿಗೂ ವಯಸ್ಕರಾದ ಭವಿಗಳಿಗೂ ಇರತಕ್ಕ ತಾರತಮ್ಯವನ್ನು ಅರ್ಥಮಾಡಿಕೊಳ್ಳದೆ ದೀಕ್ಷಾಸಂಸ್ಕಾರಗಳ ವಿಚಾರದಲ್ಲಿ ಚರ್ಚೆ ಮಾಡುವುದು ವ್ಯರ್ಥವೇ ಸರಿ.

## ದೀಕ್ಷಾಗುರು.

ಇನ್ನು ಶ್ರೀಗುರುಮೂರ್ತಿ ದೇವರು ದೀಕ್ಷೆಯನ್ನು ಕೊಡತಕ್ಕ ಗುರುವಿನ ವಿಚಾರದಲ್ಲಿ ಪ್ರಸ್ತಾಪಿಸುತ್ತ, ಕ್ರಿಯಾಶಕ್ತಿ ಇಲ್ಲದ ಮಗುವಿಗೆ ಅಥವಾ ಗರ್ಭಕ್ಕೆ ಸಂಪೂರ್ಣ ದೀಕ್ಷೆಯನ್ನು ಮಾಡುವವನು ದೀಕ್ಷಾಗುರುವೇ ಅಲ್ಲವೆಂದು ಮೂದಲಿಸಿದ್ದಾರೆ. ಗರ್ಭ ಶಿಶುವಿಗೆ ಶಿವದೀಕ್ಷೆಯನ್ನು ಕೊಡುವವನು ದೀಕ್ಷಾಗುರುವಲ್ಲವೆಂದು ಯಾವ ಶಿವಶರಣರು ಯಾವ ವಚನದಲ್ಲಿ ಹೇಳಿದ್ದಾರೆ? ಹಾಗೆ ಹೇಳಿರುವ ಶರಣರ ಹೆಸರನ್ನೂ ವಚನವನ್ನೂ ಶ್ರೀ ಗುರುಮೂರ್ತಿಗಳು ತೋರಿಸಿ ಕೊಡುವರೆ? ಶ್ರೀ ಗುರುಮೂರ್ತಿಗಳು ತಮ್ಮ ಈ ವಾದವನ್ನು ಸಮರ್ಥಿಸುವುದಕ್ಕೆ ಕೆಲವು ವಚನಗಳನ್ನು ಉದಹರಿಸಿದ್ದಾರೆ. ಆದರೆ ಈ ವಚನಗಳ ಪೈಕಿ ಯಾವುದೊಂದರಲ್ಲಿಯೂ ಅವರ ಅರ್ಥ ಕಾಣುವುದಿಲ್ಲ. ಈ ವಚನಗಳಲ್ಲಿ ಗುರುವಿನ ಮಹತ್ವವನ್ನು ವರ್ಣಿಸಲಾಗಿದೆಯೇ ವಿನಹ ಗರ್ಭಶಿಶುವಿಗೆ ದೀಕ್ಷೆ ಮಾಡಿದವನು ದೀಕ್ಷಾಗುರುವಲ್ಲವೆಂದು ಎಲ್ಲಿಯೂ ಹೇಳಿಲ್ಲ. ಇಂಥ ವಚ

ನಗಳನ್ನು ತಮ್ಮ ಪರವಾಗಿ ತಿರುಗಿಸಿ ವಾದವನ್ನು ಗೆಲ್ಲುವುದಕ್ಕೆ ಹೋಗು ವುದು ಬಿಸಿಲು ಕುದುರೆಯ ಬೇಟೆಯೇ ಸರಿ.

ಇನ್ನು ಗುರುಮೂರ್ತಿ ದೇವರು ಮರವೆಯ ವಿಚಾರವನ್ನು ಪ್ರಸ್ತಾ ಪಿಸುತ್ತ "ಶ್ರೀ ಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ" ಎಂಬ ವಾಕ್ಯಾ ಭಿಪ್ರಾಯವು ಗರ್ಭಶಿಶುವಿಗೆ ಸಾರ್ಥಕವಾಗ ವುದಿಲ್ಲವೆಂದು ಹೇಳಿದ್ದಾರೆ. ಮರವೆ ಎಂದರೇನೆಂಬುದನ್ನು ಅರ್ಥಮಾಡಿಕೊಳ್ಳಲಾರದೆ ಅಜ್ಞಾನವೆಂದು ಅರ್ಥಮಾಡಿಕೊಂಡು ಪೇಚಾಡಹತ್ತಿದ್ದಾರೆ. ಅವರು ಹೇಳುವ ಪ್ರಕಾರ ಮರವೆಗೆ ಅಜ್ಞಾನವೆಂದು ಅರ್ಥಮಾಡಿದಲ್ಲಿ ಅಜ್ಞಾನವಿರುವ ಬಾಲಕ ನಿಗೆ ಅಥವಾ ವಯಸ್ಕನಿಗೆ ಶ್ರೀ ಗುರುಮೂರ್ತಿಗಳು ದೀಕ್ಷೆ ಕೊಡುವು ದೆಂತು? ಎಂಟನೆಯ ವರ್ಷದ ಮೇಲೆ ಜ್ಞಾನವಿರುತ್ತದೆ. ಆದಕಾರಣ ಎಂಟನೆಯ ವರ್ಷದಿಂದ ಮೇಲಕ್ಕೆ ದೀಕ್ಷೆಯನ್ನು ಕೊಡಬಹುದೆಂದು ಹೇಳಿದ ಗುರುಮೂರ್ತಿಗಳು ಮರವೆಯ ವಿಚಾರವನ್ನು ಎತ್ತಿಕೊಂಡು ತಮ್ಮ ಹಿಂದಿನ ವಾದವನ್ನೇ ಮರೆತು ಬಿಟ್ಟಿದ್ದಾರೆ. ಮರೆವೆಗೆ ಅಜ್ಞಾನ ವೆಂದು ಅರ್ಥವಲ್ಲ. ಶಿವಜ್ಞಾನವಲ್ಲದ ಜ್ಞಾನ ಎಂಬ ಅರ್ಥ. ಜ್ಞಾನ ವಿಲ್ಲದವನಿಗೆ ಯಾರೂ ದೀಕ್ಷೆಯನ್ನು ಕೊಡಬಾರದು. ಜ್ಞಾನವಿರುವವ ನಿಗೇ ದೀಕ್ಷೆಯನ್ನು ಕೊಡಬೇಕು. ಕೊಟ್ಟು ಆ "ಜ್ಞಾನ"ವನ್ನು "ಶಿವ ಜ್ಞಾನ"ವನ್ನಾಗಿ ಮಾರ್ಪಡಿಸಬೇಕು. "ಶ್ರೀ ಗುರುಕರುಣಿಸಲು ಬಿಟ್ಟಿತ್ತು ಮರವೆ" ಎಂಬುದಕ್ಕೆ ಇದೇ ಅರ್ಥ. ಈ ಅರ್ಥದ ಮೇರೆಗೆ ಗರ್ಭ ಶಿಶುವಿನ "ಜ್ಞಾನ"ವನ್ನು ಶ್ರೀ ಗುರುವು, ದೀಕ್ಷೆಯ ಮೂಲಕ, "ಶಿವ ಜ್ಞಾನ"ವನ್ನಾಗಿ ಮಾರ್ಪಡಿಸುತ್ತಾನೆ. ಅನುಭವ ಹೀಗಿರುವಲ್ಲಿ ಮರವೆಗೆ ಅಜ್ಞಾನವೆಂದು ಅರ್ಥವನ್ನು ಕಲ್ಪಿಸಿ ಅಜ್ಞಾನಿಗಳಿಗೆ ಶ್ರೀ ಗುರುವು ದೀಕ್ಷೆ ಯನ್ನು ಕೊಡುತ್ತಾನೆಂದು ಹೇಳುವುದು ಅನನುಭವ.

ಈ ಅಂಶಗಳೆಲ್ಲವನ್ನೂ ವಿಚಾರಮಾಡಿ ನೋಡಿದರೆ ದೀಕ್ಷಾಗುರು ಯಾರು ಎಂಬುದು ಅರ್ಥವಾಗುತ್ತದೆ. ದೀಕ್ಷೆಗೆ ಅವಶ್ಯಕವಾದ ಜ್ಞಾನವು ಜೀವಿಗಳಿಗೆ ಯಾವ ಯಾವ ಕಾಲಗಳಲ್ಲಿ ಉಂಟಾಗುತ್ತದೆ ಎಂಬುದನ್ನು ಅರ್ಥಮಾಡಿಕೊಂಡು ಆಯಾ ಸಂದರ್ಭಗಳಿಗನುಸಾರವಾದ ಆಚರಣೆ ಗಳನ್ನು ಅನುಸರಿಸಿ ವೇಧಾ, ಮನು ಮತ್ತು ಕ್ರಿಯಾ ಈ ಮೂರು ವಿಧವಾದ ದೀಕ್ಷೆಗಳನ್ನು ಕೊಟ್ಟು ಇಷ್ಟ ಪ್ರಾಣ ಭಾವ ಲಿಂಗಗಳನ್ನು ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ ಯಾವನು ಸ್ಥಾಪಿಸುವನೋ

ಅವನೇ ದೀಕ್ಷಾಗುರು. ಈ ಅರ್ಥ ವಿವರಣೆಯನ್ನು ಶಿವಶರಣರು ತಮ್ಮ ಅನಂತಾನಂತ ವಚನಗಳಲ್ಲಿ ಅನಂತಾನಂತ ರೀತಿಗಳಲ್ಲಿ ನಿರೂಪಿಸಿದ್ದಾರೆ. ಈ ಅರ್ಥವಿವರಣೆಯ ಮೇರೆಗೆ ಗರ್ಭಶಿಶುವಿನ ಎಂಟನೆಯ ತಿಂಗಳ ನಿರ್ದಿಷ್ಟವಾದ ಕಾಲದಲ್ಲಿ ದೀಕ್ಷೆಯನ್ನು ಕೊಡತಕ್ಕವನೂ ದೀಕ್ಷಾಗುರುವೇ. ವಯಸ್ಕರಾದ ಭವಿಗಳಿಗೆ ಜ್ಞಾನೋದಯವಾಗುವ ಕಾಲವನ್ನು ಪರೀಕ್ಷಿಸಿ ಪರೀಕ್ಷಾಕಾಲಾವಧಿಯನ್ನು ಅನುಸರಿಸಿ ಕಾಯಶುದ್ಧಿ ಜೀವಶುದ್ಧಿ ಮೊದಲಾದ ಶುದ್ಧಿ ಕ್ರಿಯೆಗಳನ್ನು ಕೈಕೊಂಡು ದೀಕ್ಷೆಯನ್ನು ಕೊಡತಕ್ಕವನೂ ದೀಕ್ಷಾಗುರುವೇ. ಈ ವಿಚಾರದಲ್ಲಿ ಯಾವ ಸಂದೇಹವೂ ಇಲ್ಲ. ಇದಕ್ಕೆ ಶಿವಶರಣರ ಸಮ್ಮತಿಯುಂಟು. ಅನುಭವದ ಬೆಂಬಲವುಂಟು. ಶಾಸ್ತ್ರದ ಆಧಾರವುಂಟು.

[ಮುಂದುವರಿಯುವುದು.]

---

# ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆ

(ಲೇಖಕ:— ಕಾನಕಾನಹಳ್ಳಿ ಬಸಪ್ಪ ಬೆಂಗಳೂರುನಗರ)

---

ಲಿಂಗಧಾರಣ ಅರ್ಥಾತ್ ಶಿವದೀಕ್ಷೆಯು ವೀರಶೈವಾಚರಣೆಗಳಲ್ಲಿ ಎಷ್ಟು ಮುಖ್ಯವಾದುದೋ ಅಷ್ಟು ಕ್ಲಿಷ್ಟವಾದುದೂ ಆಗಿದೆ. ಏಕೆಂದರೆ ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆಯು ಬರಿಯ ಮಾತಿನ ಆಡಂಬರವಲ್ಲ. ಶುಷ್ಕ ಕರ್ಮದ ಜಂಜಡವಲ್ಲ. ಆದರೆ ಅನುಭವ ಪ್ರಧಾನವಾದ ಮತ್ತು ಕ್ರಿಯಾಜ್ಞಾನ ಸಮ್ಮಿಳಿತವಾದ ವಿಚಾರಾತ್ಮಕ ಆಚರಣೆಯಾಗಿದೆ. ಆದುದರಿಂದ ಈ ದೀಕ್ಷಾವಾದವನ್ನು ಹೆಚ್ಚಿನ ವಿಚಾರಾತ್ಮಕ ದೃಷ್ಟಿಯಿಂದಲೂ ಅನುಭವದ ಪ್ರಯೋಗದಿಂದಲೂ ಅರ್ಥಮಾಡಿಕೊಳ್ಳಬೇಕಾಗಿದೆ. ಸುಮ್ಮನೆ ಮನಸ್ಸಿಗೆ ಬಂದಂತೆ ಗದ್ಯ-ಪದ್ಯ, ಮಂತ್ರ-ತಂತ್ರ, ರಾಗ ತಾಳಗಳಿಂದ ಈ ವಾದವನ್ನು ಸಮರ್ಥಿಸುವುದು ಎಂದೆಂದಿಗೂ ಸಾಧ್ಯವಾಗಲಾರದು. ಆದುದರಿಂದ ಲೇಖಕರು ಈ ವಿಷಯವನ್ನು ಇನ್ನು ಮುಂದೆ ವಿಚಾರ ದೃಷ್ಟಿಯಿಂದಲೂ ಮತ್ತು ಅನುಭವ ಪ್ರಯೋಗದಿಂದಲೂ ಸಮರ್ಥಿಸುವರೆಂದು ನಂಬಿ ಪ್ರಕೃತ ಹುಬ್ಬಳ್ಳಿಯ

ಶ್ರೀ ಸಿದ್ಧವೀರ ದೇವರ "ದೀಕ್ಷಾವಾದ ವಿಮರ್ಶೆ" ಯ ಸಂದೇಹಗಳಿಗೆ ಪರಿಹಾರಗಳನ್ನು ಕೊಡಲು ಇಚ್ಛಿಸುತ್ತೇನೆ.

ಶ್ರೀ ಸಿದ್ಧವೀರ ದೇವರು ತಮ್ಮ ಲೇಖನದ ಮೊದಲನೆಯ ಪ್ಯಾರಾದಲ್ಲಿ ದೀಕ್ಷಾವಾದದ ವಿಚಾರವನ್ನು ಎತ್ತಿಕೊಂಡು "ಇದ್ದದನ್ನು ಮುಚ್ಚಿ ಇಲ್ಲದ್ದನ್ನು ಎತ್ತಿಯಾಡುವ ನಾಲಿಗೆಯ ಚಾಪಲ್ಯವಾಗಿ ಪರಿಣಮಿಸಿದೆ." ಎಂದೂ "ಸುಳ್ಳಿನ ಕಳೆಯನ್ನರಿಸಿ ಸತ್ಯದ ಬೆಳೆಯನ್ನು ಕಿತ್ತೆಸೆವ ಬಾಲಿಶತನನಡೆದಿದೆ." ಎಂದೂ "ಇದು ಯಾರಿಗೂ ನ್ಯಾಯವಲ್ಲ" ಎಂದೂ ಹೇಳಿದ್ದಾರೆ. ಈ ಮಾತು ಸತ್ಯ. ಈ ವಿಚಾರದಲ್ಲಿ ಯಾರ ಭಿನ್ನಾಭಿಪ್ರಾಯವೂ ಇಲ್ಲ. ಈ ವಿಚಾರವನ್ನು ಲೇಖಕರೆಲ್ಲರೂ ಗಮನದಲ್ಲಿಟ್ಟುಕೊಂಡು ಇದ್ದದ್ದನ್ನು ಬಯಲಿಗೆ ಇಟ್ಟು ಇಲ್ಲದ್ದನ್ನು ತೊಡೆದು ಹಾಕಿದಲ್ಲಿ ಸಮಾಜಕ್ಕೆ ಖಂಡಿತವಾಗಿಯೂ ಹಿತವಾಗುವುದು. ಸುಳ್ಳಿನ ಕಳೆಯನ್ನು ಕಿತ್ತೆಸೆದು ಸತ್ಯದ ಬೆಳೆಯನ್ನು ಬಿತ್ತಿದಲ್ಲಿ ಸರ್ವರೂ ನಿತ್ಯರಾಗುವರು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ದೃಷ್ಟಿಯಿಂದ ನಾನು ಶ್ರೀ ಸಿದ್ಧವೀರ ದೇವರ ಲೇಖನವನ್ನು ವಿಮರ್ಶಿಸಲಿಚ್ಛಿಸುತ್ತೇನೆ.

ಶ್ರೀ ಸಿದ್ಧವೀರದೇವರು ಪಿಂಡಸ್ಥಲ ಮತ್ತು ಪಿಂಡ ಜ್ಞಾನ ಸ್ಥಲಗಳ ವಿಚಾರವಾಗಿ ಪ್ರಸ್ತಾಪಿಸುತ್ತ "...ಕೂಡಲಸಂಗಮದೇವರ ನಿಲವು ಕನ್ನೆಯಸ್ನೇಹದಂತೆ ಇದ್ದಿತ್ತು" ಎಂಬುದನ್ನು ಅಕ್ಕುಲಯ್ಯನವರು ಪಿಂಡಸ್ಥಲಕ್ಕೆ ಉದಹರಿಸಿದ್ದರೆ ಪಿಂಡಜ್ಞಾನ ಸ್ಥಲಕ್ಕೆಂದು ಅಪಾರ್ಥ ಮಾಡಿಕೊಂಡು ಅಲ್ಲೋಕ್ತಿಗಳನ್ನಾಡುವುದು ಯಾವ ಸೌಜನ್ಯ? ಯಾವ ಪುರಾತನ ನಡೆ?" ಎಂದು ಶ್ರೀಮಾನ್ ನಂಜಪ್ಪನವರನ್ನು ಟೀಕೆ ಮಾಡಿದ್ದಾರೆ. ಶ್ರೀ ಅಕ್ಕುಲಯ್ಯನವರು ಪಿಂಡಸ್ಥಲದ ನಿರ್ದೇಶಕ್ಕಾಗಿ ಉಪಯೋಗಿಸಿದ "ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು." ಎಂಬ ವಚನವನ್ನು ಶ್ರೀ ನಂಜಪ್ಪನವರು ಪಿಂಡ ಜ್ಞಾನ ಸ್ಥಲದ ವಚನವೆಂದು ಎಲ್ಲಿಯೂ ಹೇಳಿಲ್ಲ. ಶ್ರೀ ಅಕ್ಕಲಯ್ಯನವರು ಉದಹರಿಸಿರುವ ಈ ವಚನವು ಪಿಂಡಸ್ಥಲಕ್ಕೆ ಅನ್ವಯಿಸುವುದೇ ವಿನಹ ಪಿಂಡಜ್ಞಾನಸ್ಥಲಕ್ಕೆ ಅನ್ವಯಿಸುವದಿಲ್ಲವೆಂದೂ. ಪಿಂಡಜ್ಞಾನ ಸ್ಥಲದ ವಚನಗಳು ಬೇರೆ ಇವೆ ಎಂದೂ, ಆ ವಚನಗಳು ಶಿಶುವಿನ ಜ್ಞಾನೋದ

ಯುವನ್ನು ಸೂಚಿಸತಕ್ಕ ವಚನಗಳಾಗಿವೆ ಎಂದೂ ಶ್ರೀ ನಂಜಪ್ಪನವರು ಹೇಳಿರುವರೇ ಹೊರತು ಶ್ರೀ ಅಕ್ಕಲಯ್ಯನವರು ಉದಹರಿಸಿರುವ ಮೇಗೆ ಕಂಡ ವಚನವು ಪಿಂಡ ಸ್ಥಲಕ್ಕೆ ಅನ್ವಯಿಸವೆ ಪಿಂಡ ಜ್ಞಾನ ಸ್ಥಲಕ್ಕೆ ಅನ್ವಯಿಸುತ್ತದೆ ಎಂದು ಹೇಳಿಲ್ಲ. ಇಷ್ಟು ತಾರತಮ್ಯವನ್ನು ಅರ್ಥ ಮಾಡಿಕೊಳ್ಳದೆ ವ್ಯರ್ಥವಾಗಿ ತಮ್ಮ ಲೇಖನದ ಒಂದು ಭಾಗವನ್ನು ವ್ಯಯಮಾಡಿರುವುದು ಶೋಚನೀಯ. ಹೇಗೆ ನ್ಯಾಯ ಶಾಸ್ತ್ರದಲ್ಲಿ ಆಯಾಯ ವ್ಯವಹಾರಗಳಿಗೆ ಆಯಾಯ ಸೆಕ್ಷನ್ನುಗಳನ್ನು ಎಂದರೆ ಪ್ರಕ ರಣಗಳನ್ನು ಅನ್ವಯಿಸಬೇಕೋ ಹಾಗೆ ಮತ ಅಥವಾ ಧರ್ಮ ಶಾಸ್ತ್ರ ದಲ್ಲಿಯೂ ಸಹ ಆಯಾಯ ಕ್ರಿಯಾಚರಣೆಗಳಿಗೆ ಆಯಾಯ ಸೂತ್ರಗ ಳನ್ನು ಅನ್ವಯಿಸಬೇಕಾಗಿದೆ. ಪಿಂಡಜ್ಞಾನಸ್ಥಲದ ವಿಚಾರವನ್ನು ಮಾತನಾಡುವಾಗ ಪಿಂಡ ಸ್ಥಲದ ವಚನವನ್ನು ಉಪಯೋಗಿಸಿದಲ್ಲಿ ಅದು ಜ್ವರದ ರೋಗಕ್ಕೆ ಕೂಟ್ಟೆ ಶೂಲೆಯ ಔಷಧವನ್ನು ಕೊಟ್ಟಂತಾ ಗುತ್ತದೆ. ಶ್ರೀ ಸಿದ್ಧವೀರ ದೇವರು ತಮ್ಮ ಟೀಕೆಯನ್ನು ಮತ್ತೊಮ್ಮೆ ಪರಿಶೀಲಿಸಿ ದೋಷ ಯಾರದೆಂಬುದನ್ನು ಅರ್ಥ ಮಾಡಿಕೊಳ್ಳಬೇಕು.

ಮುಂದೆ ಶ್ರೀ ಸಿದ್ಧವೀರದೇವರು ಶಿಶುವಿನ ಪಿಂಡಜ್ಞಾನದ ವಿಚಾ ರವನ್ನು ಪ್ರಸ್ತಾಪಿಸುತ್ತ ಚನ್ನಬಸವೇಶ್ವರ, ಛತ್ರಪತಿ ಶಿವಾಜಿ, ನೆಪೋ ಲಿಯನ್ ಬೋನಾಪಾರ್ಟ ಮುಂತಾದ ಮಹಸಿಯರ ಉದಾಹರಣೆಗ ಳನ್ನು ಟೀಕೆ ಮಾಡಿ "ಇದು ಎಲ್ಲರಿಗೂ ಅನ್ವಯಿಸುವುದಾದರೆ ಎಲ್ಲರೂ ಅವರಂತೆ ಮಹಾತ್ಮರೇಕಾಗುವದಿಲ್ಲ ? ರಾಜ್ಯಸ್ಥಾಪಕರೇಕಾಗುವುದಿಲ್ಲ? ಧರ್ಮೋದ್ಧಾರಕರೇಕಾಗುವದಿಲ್ಲ ?" ಎಂದು ಪ್ರಶ್ನೆ ಮಾಡಿದ್ದಾರೆ. ಹಾಗಾ ದರೆ ಶ್ರೀ ಸಿದ್ಧವೀರ ದೇವರು ಮಂಡಿಸುವ ಎಂಟನೆಯ ವರ್ಷದ ದೀಕ್ಷೆ ಯನ್ನು ಪಡೆದವರೆಲ್ಲರೂ ಮಹಾತ್ಮರಾಗಿರುವರೇ ? ರಾಜ್ಯಸ್ಥಾಪಕ ರಾಗಿರುವರೇ ? ಧರ್ಮೋದ್ಧಾರಕರಾಗಿರುವರೇ ? ಇದಕ್ಕೆ ಶ್ರೀ ಸಿದ್ಧ ವೀರದೇವರ ಉತ್ತರವೇನು ? ಶ್ರೀ ಸಿದ್ಧವೀರದೇವರು ಶಿವಾನುಭವದ ಮೂಲ ತತ್ವವನ್ನೇ ಮರೆತು ಶುಷ್ಕವಾದ ಪ್ರಶ್ನೆಗಳನ್ನು ಹಾಕಲು ಉಪ ಕ್ರಮಿಸಿದ್ದಾರೆ. ದೀಕ್ಷೆಯ ಮೂಲ ಉದ್ದೇಶವೇನೆಂಬುದನ್ನು ಸ್ವಲ್ಪ ವಿಚಾರ ಮಾಡಿ ನೋಡೋಣ. ದೀಕ್ಷೆಯನ್ನು ಪಡೆದವರೆಲ್ಲರೂ ಮಹಾ ತ್ಮರಾಗಬೇಕಾದುದಿಲ್ಲ. ರಾಜ್ಯಸ್ಥಾಪಕರಾಗಬೇಕಾದುದಿಲ್ಲ. ಧರ್ಮೋ ದ್ಧಾರಕರಾಗಬೇಕಾದುದಿಲ್ಲ. ಆದರೆ ಎಲ್ಲರೂ ಸದಾಚಾರ ಸಂಪನ್ನರಾ

ಗಬೇಕು. ಸದ್ಗುಣ ಶೀಲರಾಗಬೇಕು. ಸತ್ಕ್ರಿಯಾಪಾಲಕರಾಗಬೇಕು. ಇದೇ ಶರಣರು ಪ್ರತಿಪಾದಿಸಿದ ದೀಕ್ಷೆಯ ಪರಮೋದ್ದೇಶ. ಸುಮ್ಮನೆ ಪ್ರಸಿದ್ಧಿಗೆ ಬರಬೇಕೆಂಬುದು ದೀಕ್ಷೆಯ ಗುರಿಯಲ್ಲ. ಈ ತತ್ವವನ್ನು ಅಲ್ಲಮಪ್ರಭುದೇವರು "ಅರಿತವ ಅರಿಯದಂತಿಪ್ಪ" ಎಂಬ ಒಂದು ಅಮೋಘವಾದ ವಾಕ್ಯದಲ್ಲಿ ಅರ್ಥಮಾಡಿ ತೋರಿಸಿದ್ದಾರೆ. ಬಸವಣ್ಣನವರೂ ಕೂಡ

ಬ್ರಹ್ಮಪದವಿಯನೊಲ್ಲೆ, ವಿಷ್ಣುಪದವಿಯನೊಲ್ಲೆ,
ರುದ್ರಪದವಿಯನೊಲ್ಲೆ, ನಾನಾವ ಪದವಿಯನೊಲ್ಲೆನಯ್ಯ.
ಸದ್ಭಕ್ತರ ಪಾದವನರಿದಿಪ್ಪ ಪದವಿಯನೊಂದನೇ,
ಕರುಣಿಸಯ್ಯ ಕೂಡಲಸಂಗಮದೇವಾ.

ಎಂದು ಗೀತೆಯನ್ನು ಹಾಡಿ ಶಿವದೀಕ್ಷಾ ಸಂಪನ್ನರ ಜೀವನದ ಉಸಿರೇನಾಗಿರಬೇಕೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಇದೇ ತತ್ವವನ್ನೇ ನಮ್ಮ ಕನ್ನಡನಾಡಿನ ಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ ಡಿ. ವಿ. ಗುಂಡಪ್ಪನವರೂ ಸಹ ಈ ಕೆಳಗೆ ಕಂಡ ಗೀತೆಯಲ್ಲಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

"ವನಸುಮದೊಲೆನ್ನ ಜೀ। ವನವು ವಿಕಸಿಸುವಂತೆ।
ಮನವನನುಗೊಳಿಸು ಗುರುವೇ- ಹೇ ದೇವ ॥ಪ॥
ಜನಕೆ ಸಂತಸವೀವ। ಘನನು ನಾನೆಂದೆಂಬ। ಎಣಿಕೆ
ತೋರದೆ ಜಗದ ಪೊಗಳಿಕೆಗೆ ಬಾಯ್‌ ಬಿಡದೆ ॥ಅ ಪ॥
ಕಾನನದಿ ಮಲ್ಲಿಗೆಯು। ಮೌನದಿಂ ಬಿರಿದು ನಿಜ।
ಸೌರಭವ ಸೂಸಿ ನಲವಿಂ॥ ತಾನೆಲೆಯ ಮರೆಯಿರ್ದು।
ದೀನತೆಯ ತೋರಿ ಅಭಿ। ಮಾನವನು ತೊರೆದು ಕೃತ
ಕೃತ್ಯತೆಯ ಪಡೆವಂತೆ ॥೧॥
ಉಪಕಾರಿ ನಾನು ಎ। ನ್ನುಪಕೃತಿಯು ಜಗಕೆಂಬ।
ವಿಪರೀತ ಮತಿಯ ನುಳಿದು ॥
ವಿಪುಲಾಶ್ರಯುವನೀವ। ಸುಫಲಸುಮಭರಿತ ಪಾ।
ದಪದಂತೆ ನೈಜ ಮಾದೊಳ್ಪಿನಿಂ ಬಾಳ್ವವೊಲು ॥೨॥

ಈ ರೀತಿಯಲ್ಲಿ ದೀಕ್ಷೆಯ ಪರಮೋದ್ದೇಶವು ಮಹಾತ್ಮರಾಗಬೇಕೆಂಬುದೂ ಅಲ್ಲ. ರಾಜ್ಯಸ್ಥಾಪಕರಾಗಬೇಕೆಂಬುದೂ ಅಲ್ಲ. ಧರ್ಮೋ

ಹ್ಲಾರಕರಾಗಬೇಕೆಂಬುದೂ ಅಲ್ಲ. ತನುಮನಧನಗಳನ್ನು ಗಳಿಸಿ ಗುರು ಲಿಂಗ ಜಂಗಮಕ್ಕೆ ಎಂದರೆ ಲೋಕಕ್ಕೆ ಪ್ರತಿಫಲಾಪೇಕ್ಷೆಯಿಲ್ಲದೆ ಸಲ್ಲಿಸುವ ಸತ್ಕ್ರಿಯಾ ಮಾರ್ಗವೊಂದೇ ದೀಕ್ಷೆಯ ಪರಮೋದ್ದೇಶ. ಶ್ರೀ ಸಿದ್ಧವೀರದೇವರು ಈ ತತ್ವವನ್ನು ಅರ್ಥಮಾಡಿಕೊಂಡು ಅಡಿಯಿಡಬೇಕೆಂದು ಅವರಲ್ಲಿ ಬಿನ್ನೈಸಿಕೊಳ್ಳುತ್ತೇನೆ.

ಇನ್ನು ಶ್ರೀ ಸಿದ್ಧವೀರದೇವರು ಗರ್ಭೋಪನಿಷತ್ತಿನ ವಿಚಾರವನ್ನು ಪ್ರಸ್ತಾಪಿಸುತ್ತ ಶ್ರೀ ನಂಜಪ್ಪನವರು ಗರ್ಭೋಪನಿಷತ್ತಿನ ಸಹಾಯವನ್ನು ಬಯಸಿ ಕೊನೆಗೆ ನಿಜಗುಣರ ಅನುವಾದದಲ್ಲಿ ತೃಪ್ತಿಯನ್ನು ಹೊಂದಿದ್ದಾರೆಂದು ತಮ್ಮ ಅತೃಪ್ತಿಯನ್ನು ತೋರಿಸಿದ್ದಾರೆ ಶ್ರೀ ನಂಜಪ್ಪನವರೇನೋ ಗರ್ಭೋಪನಿಷತ್ತಿನ ಮೂಲಕ್ಕೆ ಕೈಹಾಕಲಿಲ್ಲ. ಹೋಗಲಿ ಶ್ರೀ. ಸಿದ್ಧವೀರದೇವರಾದರೂ ಗರ್ಭೋಪನಿಷತ್ತಿಗೆ ಕೈಹಾಕಿ ಅದನ್ನು ಓದಿ ಅರ್ಥಮಾಡಿ ಪ್ರಕಟಿಸಿದ್ದರೆ ಚೆನ್ನಾಗಿತ್ತಲ್ಲವೇ? ‘ ಗುಲಗಂಜಿಯ ತಪ್ಪು ಗುಲಗಂಜಿಗೆ ಕಾಣಿಸದು” ಎಂಬ ನಾಣ್ನುಡಿ ಸುಳ್ಳಲ್ಲ. ಶ್ರೀ ನಂಜಪ್ಪನವರ ಮೇಲೆ ಎಸೆವ ಟೀಕೆ ಹಿಂದಿರುಗಿ ಶ್ರೀ ಸಿದ್ಧವೀರದೇವರ ಮೇಲೇ ಬಿದ್ದಿತಲ್ಲವೇ?

ಮುಂದೆ ಶ್ರೀ ಗುರುಮೂರ್ತಿದೇವರು “ಗರ್ಭಾಷ್ಟಮೆ”ಯ ವಿಚಾರವನ್ನು ಪ್ರಸ್ತಾಪಿಸುತ್ತ “ಗಾರುಡ ಪುರಾಣದ ಶ್ಲೋಕಗಳಿಗೂ ಗರ್ಭಾಷ್ಟಮೇಕೃತಾದೀಷಾ ಎಂಬ ಶ್ಲೋಕಕ್ಕೂ ಸರಿಯಾಗಿ ಟೀಕೆಯನ್ನು ಬರೆಯದೆ ತಮಗನುಕೂಲಿಸುವಂತೆ ಮೇಲಿಂದ ಮೇಲೆ ತಪ್ಪರ್ಥವನ್ನೇ ಹೇಳುತ್ತ ಹೋದರೆ ಇದಾವ ಶಾಸ್ತ್ರೀಯವಾದ?” ಎಂದು ಪೇಚಾಡಿದ್ದಾರೆ. ಕ್ಲಿಷ್ಟವಾದ ವ್ಯಾಕರಣವನ್ನುಳ್ಳ, ಸಂದಿಗ್ಧವಾದ ಅರ್ಥಗಳನ್ನು ಕೊಡುವ, ಜನರ ಬಳಕೆಯಲ್ಲಿಲ್ಲದ, ಅನುಭವಕ್ಕೆ ಬಾರದ, ಸಂಸ್ಕೃತ ಶ್ಲೋಕಗಳನ್ನು ಕಟ್ಟಿಕೊಂಡು ಅರ್ಥವಾಗುವುದಿಲ್ಲವೆಂದು ತಲೆಯನ್ನು ಚಚ್ಚಿಕೊಂಡರೆ ಬರುವ ಲಾಭವಾದರೂ ಏನು? ಅಲ್ಲದೆ ಈ “ಗರ್ಭಾಷ್ಟಮೆ” ಪದವಾಗಲಿ ಗರ್ಭಾಷ್ಟಮೆಗೆ ಕೆಲವರು ಕಟ್ಟುವ ಅರ್ಥವಾಗಲಿ ಶಿವಶರಣರ ವಚನಗಳಲ್ಲಿ ಬಳುವುದಿಲ್ಲ. ಮೇಲಾಗಿ ಈ ಗರ್ಭಾಷ್ಟಮೆ ಶ್ಲೋಕದ ಮೂಲವನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ವರ್ಣಿಸಲಿಕ್ಕೆ ಉಪಕ್ರಮಿಸಿದ್ದಾರೆ. ಮೂಲವೇ ಸರಿಯಾಗಿ ಗೊತ್ತಿಲ್ಲದ ಈ ಸಂಸ್ಕೃತ ಶ್ಲೋಕಗಳನ್ನು ಅರ್ಥಮಾಡುವುದಕ್ಕೆ ಹೋಗುವುದು ಕೆಲಸವಿ

ಲ್ಲದ ಬಡಗಿ ಮಗುವಿನ ಕುಂಡಿಯನ್ನು ಕೆತ್ತಿದಂತೆಯೇ ಸರಿ. ಈ ಸಂದರ್ಭ ದಲ್ಲಿ ನಾನು ವೀರಶೈವ ಬಾಂಧವರಲ್ಲೂ ವಿನಯದಿಂದ ಅರಿಕೆಮಾಡಿ ಕೊಳ್ಳುವುದಿಷ್ಟೆ. ಶಿವಶರಣರ ಅನುಭಾವದ ವಚನಗಳೆಂಬ ಸ್ವಚ್ಛವಾದ ಸಿಹಿನೀರಿನ ಚಿಲುಮೆಗಳು ಹತ್ತಿರದಲ್ಲಿರುವಲ್ಲಿ ಲಕ್ಷ್ಯಗಾವುದ ನಡೆದು ಹೋಗಿ ಉಪ್ಪು ನೀರನ್ನು ಹೊತ್ತುಕೊಂಡು ಬರಬಾರದು. ಶಿವಶರಣರ ವಚನಗಳೇ ನಮ್ಮ ಆಧಾರ ಗ್ರಂಥಗಳು. ಅವುಗಳೇ ನಮ್ಮ ಆಗಮ ಗಳು. ಅವುಗಳೇ ನಮ್ಮ ಉಪನಿಷತ್ತುಗಳು. ಅವುಗಳನ್ನು ಬಿಟ್ಟು ಉಳಿ ದುವು ಬರಿಯ ನುಚ್ಚು ತೌಡು.

ಇನ್ನು ಶ್ರೀ ಸಿದ್ಧವೀರದೇವರು ಜ್ಞಾನಕ್ರಿಯೆಗಳ ಮಾತನ್ನು ಎತ್ತಿ ಕೊಂಡು ಪ್ರಸ್ತಾಪಿಸಿದ್ದಾರೆ. ಆದರೆ ಅವರು ಆ ಪ್ರಸ್ತಾವವನ್ನು ಅರ್ಥ ವಾಗುವ ಹಾಗೆ ಬರೆದಿಲ್ಲ. ಆದುದರಿಂದ ಆ ಪ್ರಸ್ತಾಪವನ್ನು ಶ್ರೀ ಸಿದ್ಧ ವೀರದೇವರು ಅರ್ಥವಾಗುವಂತೆ ಬರೆದು ಪ್ರಕಟಿಸಿದಲ್ಲಿ ನಾನು ಅದಕ್ಕೆ ಉತ್ತರವನ್ನು ಕೊಡುತ್ತೇನೆ.

ಮುಂದೆ ಶ್ರೀ ಸಿದ್ಧವೀರದೇವರು ಚನ್ನಬಸವ ಪುರಾಣದ ಗಿರಿ ಜೆಯ ದೀಕ್ಷೆಯ ವಿಚಾರವನ್ನು ಪ್ರಸ್ತಾಪಿಸುತ್ತ "ತಚ್ಛಿಸುವಿಂಗೆ ತಲ್ಲಿಂಗ ಮಂ ತನ್ನ ಕುಲಗುರುವಿನಿಂ ಕೊಡಿಸಿ ಪೆಸರಿಡಲ್" ಎಂಬ ಪದ್ಯಭಾಗಕ್ಕೆ ಪುನಃ ಅದೇ ಶಿಶುವಿಗೆ ಅದೇ ಲಿಂಗವನ್ನು ಗುರುದೀಕ್ಷೆಯಿಂದ ಕೊಡಿಸಿ ಹೆಸರಿಟ್ಟರು ಎಂದು ಅರ್ಥವಾಗುತ್ತದೆಂದು ಹೇಳಿ ಈ ವಿಚಾರವು ತಮ್ಮ ವಾದಕ್ಕೆ ಪೋಷಕವಾಗಿದೆ ಎಂದು ಸಂತೋಷಪಟ್ಟಿದ್ದಾರೆ. ಆದರೆ ಗಿರಿ ರಾಜನು ಗಿರಿಜೆಗೆ ದೀಕ್ಷೆಯನ್ನು ಶಿಶುದೆಶೆಯಲ್ಲಿ ಕೊಡಿಸಿದನೇ ಅಥವಾ ಟನೆಯ ವರ್ಷದಲ್ಲಿ ಕೊಡಿಸಿದನೇ ಎಂಬ ವಿಚಾರವನ್ನು ಕೈಸಂದಿನಲ್ಲಿ ಬಿಟ್ಟು ಪುನಃ ದೀಕ್ಷೆಯನ್ನು ಕೊಟ್ಟದ್ದನ್ನೇ ದೊಡ್ಡದನ್ನಾಗಿ ಮಾಡಿ ತಮ್ಮ ವಾದವು ಗೆದ್ದಿತೆಂದು ಹಿಗ್ಗಿದ್ದಾರೆ. ವಿರೂಪಾಕ್ಷ ಪಂಡಿತನು ತನ್ನ ಚನ್ನಬಸವ ಪುರಾಣದಲ್ಲಿ ಗಿರಿಜೆಗೆ ಎಂಟನೆಯ ವರ್ಷದಲ್ಲಿ ದೀಕ್ಷೆಯಾ ಯಿತೆಂದು ಹೇಳಿಲ್ಲ. ಶಿಶುದೆಶೆಯಲ್ಲೇ ಗುರುವಿನಿಂದ ದೀಕ್ಷಾನುಗ್ರಹ ವಾಯಿತೆಂದು ಸ್ಪಷ್ಟವಾಗಿ ವರ್ಣಿಸಿದ್ದಾನೆ. ಎಂದ ಮೇಲೆ ಶಿಶುವಿಗೆ ದೀಕ್ಷೆಯನ್ನು ಕೊಡುವ ಪದ್ಧತಿಯು ಲಿಂಗವಂತರಲ್ಲಿ ರೂಢಿಯಲ್ಲಿದ್ದಿ ತೆಂಬುದನ್ನು ಒಪ್ಪಿಕೊಂಡಂತಾಗುವುದಿಲ್ಲವೇ ? ಶಿಶುವಿಗೆ ದೀಕ್ಷೆಯೇ ಸಲ್ಲದು ಎಂದು ಕೂಗ್ಗುವ ಕೂಗು ಕಾಡನ್ನು ಸೇರಿತಲ್ಲವೇ ? ಈ ವಿಚಾ

ರದಲ್ಲಿ ಶ್ರೀ ಸಿದ್ಧವೀರದೇವರು ಒಂದು ಸಮಾಧಾನವನ್ನು ಹೇಳಿಕೊಂಡಿದ್ದಾರೆ. ಗಿರಿಜೆಗೆ ಹನ್ನೊಂದನೆಯ ದಿನಕ್ಕೆನೇ ಸಂಪೂರ್ಣ ಜ್ಞಾನ ವಳವಟ್ಟಿರಬಹುದು ಎಂದು. ವಿರೂಪಾಕ್ಷ ಪಂಡಿತನು ಹನ್ನೊಂದನೆಯ ದಿನದ ಮಾತನ್ನೇ ಹೇಳಿಲ್ಲ. ಈ ಅರ್ಥವನ್ನು ಶ್ರೀ ಸಿದ್ಧವೀರದೇವರು ಎಲ್ಲಿಂದ ಹುಡುಕಿ ತಂದರೆಂಬುದನ್ನು ಅವರು ತಿಳಿಸ ವರೇ? ಇನ್ನೊಂದು ವಿಚಾರ. ಚನ್ನಬಸವ ಪುರಾಣದಲ್ಲಿ ವರ್ಣಿತವಾಗಿರುವ ಗಿರಿಜೆಯ ಕಥೆ ಪೌರಾಣಿಕ ಕಥೆ ಇತಿಹಾಸವಲ್ಲ. ಗಿರಿಜೆ ಪೌರಾಣಿಕ ಕಥಾ ನಾಯಕಿ. ಚಾರಿತ್ರ್ಯವ್ಯಕ್ತಿಯಲ್ಲ. ಮೇಲಾಗಿ ಗಿರಿಜಾಕಲ್ಯಾಣ ಕಥೆಯನ್ನು ವರ್ಣಿಸಿರುವ ಹಿಂದಿನ ಸಂಸ್ಕೃತ ಮತ್ತು ಕನ್ನಡ ಪಂಡಿತರಾರೂ ಗಿರಿಜೆಗೆ ದೀಕ್ಷೆ ಕೊಡಿಸಿಲ್ಲ. ಎಂದ ಮೇಲೆ ಈ ಗಿರಿಜೆಯ ದೀಕ್ಷೆಯ ಪ್ರಸಂಗವು ಚನ್ನಬಸವ ಪುರಾಣದ ಕರ್ತೃವಾದ ವಿರೂಪಾಕ್ಷ ದಂಡಿತನ ಕಾಲದ ಲಿಂಗವಂತರಲ್ಲಿ ರೂಢಿಯಲ್ಲಿದ್ದ ಆಚರಣೆಯನ್ನು ಸೂಚಿಸುತ್ತದೆಯೇ ವಿನಹ ಗಿರಿಜೆ ಚಾರಿತ್ರ ವ್ಯಕ್ತಿಯೆಂದಾಗಲೀ ಅವಳಿಗೆ ದೀಕ್ಷೆಯು ನಡೆದುದು ನಿಜ ವೆಂದಾಗಲಿ ಆದರಿಂದ ಅರ್ಥವಾಗುವುದಿಲ್ಲ. ಆದುದರಿಂದ ಕಥೆಯ ಹಿಂದಿರುವ ಚಾರಿತ್ರಕ ಹಿನ್ನೆಲೆಯ ಕಡೆ ನಾವು ಗಮನಕೊಡಬೇಕು. ಏನೋ ಬರೆದಿದೆಯೆಂದು ಥಡಕ್ಕನೆ ದುಮುಕಿ ಟೀಕಿಸಬಾರದು.

ಇನ್ನು ಶ್ರೀ ಸಿದ್ಧವೀರ ದೇವರು ವೈಯ್ಯಕ್ತಿಕ ಟೀಕೆಗಳನ್ನು ಮಾಡಿದ್ದಾರೆ. ಈ ಟೀಕೆಗಳನ್ನು ಎತ್ತಿಕೊಂಡು ಮತ್ತಷ್ಟು ಟೀಕೆಗಳನ್ನು ಮಾಡಿ ಶಿವಾನುಭವದ ಅಮೂಲ್ಯವಾದ ಹಾಳೆಗಳನು, ವ್ಯರ್ಥಮಾಡಲು ನನಗೆ ಇಷ್ಟ ವಿಲ್ಲ. ನನಗೆ ಬೇಕಾದುದು ತತ್ವ, ತತ್ವಕ್ಕೆ ಸಂಬಂಧಪಟ್ಟ ಸಾಹಿತ್ಯ, ಸಾಹಿತ್ಯಕ್ಕೆ ಸಂಬಂಧಪಟ್ಟ ಇತಿಹಾಸ, ಇತಿಹಾಸಕ್ಕೆ ಸಂಬಂಧಪಟ್ಟ ವ್ಯಕ್ತಿ. ಇವುಗಳನ್ನು ಬಿಟ್ಟು ಉಳಿದ ವಿಚಾರಗಳಿಂದ ಸಮಾಜಕ್ಕೆ ಯಾವ ಹಿತವೂ ಆಗಲಾರದೆಂದು ನಾನು ಭಾವಿಸಿದ್ದೇನೆ. ಇಷ್ಟನ್ನು ಹೇಳಿ ಈ ಲೇಖನವನ್ನು ಇಲ್ಲಿಗೆ ಮುಗಿಸುತ್ತೇನೆ.

---

ಸ್ವೀಕರಿಸಿದ ಬಳಿಕ ಅವನು ಗ್ರಾಮದಿಂದ ಹೊರಗೆ ಹಾಕಲ್ಪಟ್ಟನಷ್ಟೇ. ಆಗ ಅವನಿಗೆ ನಾಗಲಾಂಬಿಕೆ ಎಂಬ ಅಕ್ಕ ಮತ್ತು ದೇವರಾಜನೆಂಬ ಅಣ್ಣನು ಇದ್ದು, ಅವರೂ ಕೂಡ ಬಸವನಂತೆಯೇ ಸ್ವಗ್ರಾಮವನ್ನು ಬಿಟ್ಟು ಹೊರಬಿದ್ದರು. ಅವರಲ್ಲಿ ದೇವರಾಜನು ಅರ್ಜುನವಾಡದ ಸಮೀಪದಲ್ಲಿ ಆಗ ಅತಿ ವಿಸ್ತಾರವಾದ ಪಟ್ಟಣವಾಗಿದ್ದ ಕವಿಳಾಸಪುರದಲ್ಲಿ ಬಂದು ನೆಲಿಸಿದನು. ಮುಂದೆ ದೇವರಾಜನ ಮಗನು (ಈತನ ಹೆಸರು ಶಿಲಾಲೇಖದಲ್ಲಿ ಅಳಿಸಿದೆ.) ಬಹಳ ಪ್ರಸಿದ್ಧಿಯನ್ನು ಹೊಂದಿದನು. ಅವನ ತರುವಾಯ ಅವನ ಮಗ ಕಲಿದೇವನೆಂಬವನಿದ್ದು ಆತನ ಮಗನೇ ಹಾಲಬಸವಿದೇವನು. ಇವನು 'ಸುವರ್ಣ ವೃಷಭಧ್ವಜ' ವುಳ್ಳವನೂ, 'ಮಹಾಲಿಂಗ ಜಂಗಮ ಪ್ರಸಾದ ನಿಯತ'ನೂ, 'ಸಮಯ ಭಕ್ತಿ ಸಂಪನ್ನ'ನೂ 'ಬಸವರಾಜನನ್ವಯ'ನೂ ಎಂದು ಈ ಶಿಲಾಶಾಸನ ದಲ್ಲಿ ಹೇಳಲ್ಪಟ್ಟಿದ್ದಾನೆ. ಚಾವುಂಡನು ಅವನಿಗೆ ಮೆಚ್ಚಿದವನಾಗಿ ಅವ ನನ್ನು ಹುಲಿಗೆರಿಯ ಸೋಮನಾಥ ದೇವರ ಸನ್ನಿಧಿಗೆ ಬರಮಾಡಿ ಕೊಂಡು ಅವನಿಗೆ ಅನೇಕ ಹಕ್ಕು ಬಾಬುಗಳನ್ನು ದಾನವಾಗಿ ಕೊಟ್ಟಿ ದ್ದಾನೆ. ಈ ಕಾಲದಲ್ಲಿ ಯಾದವ ರಾಜನಿಗೆ ನಾಗರಸನೆಂಬ ಬಹು ಪ್ರಸಿದ್ಧ ಪ್ರಧಾನನಿದ್ದನು. ಅವನ ಒಪ್ಪಿಗೆಯಿಂದ ಅವನ ಸಮಕ್ಷ ಮವೇ ಹಾಲಬಸವಿದೇವನಿಗೆ ಚಾವುಂಡನು ಈ ದಾನವನ್ನು ಕೊಟ್ಟಿ ದ್ದಾನೆ. ಇದರ ಮೇಲಿಂದ ಯಾದವರಾಜರಲ್ಲಿ ಉಚ್ಚಸ್ಥಾನದಲ್ಲಿದ್ದ ಶ್ರೇಷ್ಠಾಧಿಕಾರಿಗಳೂ ಸೇನಾಪತಿಗಳೂ ಈ ಕಾಲದಲ್ಲಿ ಶಿವಶರಣರ ವಿಷ ಯವಾಗಿ ಎಷ್ಟು ಆದರಭಾವವುಳ್ಳವರಾಗಿದ್ದರೆಂಬುದು ಗೊತ್ತಾಗುತ್ತದೆ.

**ಬೀರರಸ**:— ಈ ಕಾಲದಲ್ಲಿ ಶಿವಶರಣರ ಪ್ರಾಬಲ್ಯವು ಕೇವಲ ಉತ್ತರ ಕರ್ನಾಟಕ ಪ್ರಾಂತದಲ್ಲಷ್ಟೇ ಅಲ್ಲ, ಮೈಸೂರು ದೇಶವನ್ನಾ ದರೂ ಸಹ ಪ್ರವೇಶಿಸಿತ್ತು. ಆದರ ಉತ್ತರ ಭಾಗದಲ್ಲಿ ಆಳುತ್ತಿದ್ದ ಸಾಂತರ ರಾಜರೂ ಪಾಂಡ್ಯರೂ ನೊಳಂಬ ಪಲ್ಲವರೂ ವೀರಶೈವ ಧರ್ಮಕ್ಕೋಸ್ಕರ ಅತ್ಯಂತ ಆದರಭಾವವುಳ್ಳವರಾಗಿದ್ದರು. ಇದಕ್ಕೂ ಪೂರ್ವದಲ್ಲಿಯೇ ಇಲ್ಲಿಯ ಬಹುಜನ ಸಮಾಜದಲ್ಲಿ ವೀರಶೈವ ಧರ್ಮವು ಪ್ರವೇಶ ಮಾಡಿತ್ತು. ಇದು ಪ್ರಭುದೇವ, ಮಹಾದೇವಿಯಕ್ಕ, ಅನು ಮಿಷರ ನಾಡು. ಇವರು ಶಿವಶರಣರಲ್ಲಿ ಅಗ್ರೇಸರರು. ಅಲ್ಲಮಪ್ರಭು ಹೇಗೆ ಶಿವಜ್ಞಾನಿ ಎಂದೆನಿಸಿಕೊಂಡನೋ, ಹಾಗೆಯೇ ಧರ್ಮ ಪ್ರಚಾರ

ಕನೆಂತಲೂ ಪ್ರ್ರಸಿದ್ಧಿಯನ್ನು ಹೊಂದಿದ್ದಾನೆ. ಈ ಎಲ್ಲ ಮಹಾನುಭಾವರ ಪ್ರಭಾವದಿಂದ ಇತ್ತ ಕಡೆಗಿನ ಅನೇಕ ಮಾಂಡಲಿಕ ಭೂಪಾಲರೂ ಸೇನಾಪತಿಗಳೂ ವೀರಶೈವ ಧರ್ಮವನ್ನು ಆಚರಿಸುವವರಾಗಿದ್ದರೆಂಬುದು ಕೆಳಗಿನ ಸಂಗತಿಗಳಿಂದ ತಿಳಿದು ಬರುತ್ತದೆ.

ಶಿವಮೊಗ್ಗಾ ಜಿಲ್ಲಾ ಸೊರಬ ತಾಲೂಕಿನಲ್ಲಿ ಕೋಳೀಸಾಲೆ ಎಂಬ ಗ್ರಾಮವಿದೆ. ಅಲ್ಲಿಯ ಶಿಲಾಶಾಸನವು ಕ್ರಿ. ಶ. ೧೨೫೬ನೇ ವರ್ಷದ್ದಿದ್ದು ಅದರಲ್ಲಿ ಸೊಲ್ಲಾಪುರದ ಸಿದ್ಧರಾಮೇಶ್ವರನ ಮತ್ತು ಅವನ ಇಷ್ಟದೇವತೆಯಾದ ಕಪಿಲಸಿದ್ಧಮಲ್ಲಿಕಾರ್ಜುನನ ಉಲ್ಲೇಖಗಳಿವೆ. ಈ ಭಾಗದಲ್ಲಿ ಈ ಕಾಲಕ್ಕೆ ಬೀರರಸನೆಂಬ ಮಹಾಮಂಡಲೇಶ್ವರನು ರಾಜ್ಯವಾಳುತ್ತಿದ್ದನು. ಅವನು 'ದಕ್ಷಿಣ ವಾರಣಾಸಿ' ಮತ್ತು 'ಅಭಿನವ ಶ್ರೀಶೈಲ'ವೆಂದೆನಿಸಿಕೊಳ್ಳುವ 'ಪೊನ್ನಲಿಗೆಯ ಪುರ'ದ ಅಂದರೆ ಈಗಿನ ಸೊಲ್ಲಾಪುರದ ಕಪಿಲಸಿದ್ಧಮಲ್ಲಿಕಾರ್ಜುನ ದೇವರ ಅಂಗಭೋಗ ರಂಗಭೋಗಕ್ಕೂ, ಜೀರ್ಣೋದ್ಧಾರಕ್ಕೂ, ನಿತ್ಯಾಹಾರಕ್ಕೂ, ತನ್ನ ಜಿದುವಳಿಗೆ ನಾಡೊಳಗಿನ ಕೋಳಿಗೆಸಾಲೆ ಗ್ರಾಮದಲ್ಲಿಯ ಭೂಮಿಯನ್ನು ಧಾರಾಪೂರ್ವಕವಾಗಿ ಧರ್ಮ ಮಾಡಿದ್ದರ ಉಲ್ಲೇಖವು ಈ ಶಾಸನದಲ್ಲಿದೆ. ಇದರಿಂದ ಶಿವಶರಣರ ವರ್ಚಸ್ಸು ಈ ಕಾಲದಲ್ಲಿ ಬಹು ದೂರದವರೆಗೆ ಪಸರಿಸಿದ್ದು ತಿಳಿಯುತ್ತದೆ. ಸಿದ್ಧರಾಮೇಶ್ವರನು ಜಗದ್ಗುರುವಾಗಿದ್ದನೆಂದು ಹರಿಹರನು ರಚಿಸಿದ ಪ್ರಭುದೇವರ ರಗಳೆಯಲ್ಲಿ ಹೇಳಲ್ಪಟ್ಟಿದೆ. ಅವನು ಕೇವಲ ಪೊನ್ನಲಿಗೆಯ ಗ್ರಾಮದಲ್ಲಿದ್ದು ವೇಳೆಗಳಿಯದೆ ಆಗಿಂದಾಗ್ಗೆ ದೇಶವನ್ನು ಸಂಚರಿಸುತ್ತ ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡುತ್ತಿದ್ದನೆಂದು ತೋರುತ್ತದೆ. ಯಾಕಂದರೆ ಸಿದ್ಧರಾಮೇಶ್ವರನ ಕುರುಹುಗಳು ಸೊಲ್ಲಾಪುರದಲ್ಲಿ ಮಾತ್ರವಲ್ಲ, ಅವು ಮೈಸೂರು ಪ್ರಾಂತದ ಮಧ್ಯಭಾಗದಲ್ಲಿಯೂ ಕೂಡ ಕಂಡುಬರುತ್ತವೆ. ತುಮಕೂರು ಜಿಲ್ಲೆಯಲ್ಲಿ ಅನೇಕ ಗ್ರಾಮಗಳಲ್ಲಿ ಸಿದ್ಧರಾಮೇಶ್ವರನ ದೇವಸ್ಥಾನಗಳಿವೆ. ಗೋಡೆಕೆರೆ, ಯಳನಡು, ಭಟ್ಟರಹಳ್ಳಿ, ತಮ್ಮಡಿಹಳ್ಳಿ, ಸುಂಟರಮಳೆ, ಹಾವಿನಹಳ್ಳಿ, ಸಿದ್ಧರಾಮೇದೇವರಹಳ್ಳಿ, ಮಾದಿಹಳ್ಳಿ, ಅರಸಿಕೆರೆ, ಸೊಲ್ಲಾಪುರ, ಸುಂಕದಹಳ್ಳಿ, ಮೊದಲಾದ ಗ್ರಾಮಗಳಲ್ಲಿ ಈಗಲೂ ಸಿದ್ಧರಾಮೇಶ್ವರನ ದೇವಾಲಯಗಳಿವೆ. ಸೊಲ್ಲಾಪುರವು ಸಿದ್ಧರಾಮೇಶ್ವರನ ಗ್ರಾಮವಾದ್ದರಿಂದ ಈ ಹೆಸರೇ ಇಲ್ಲಿಯ

ಒಂದು ಗ್ರಾಮಕ್ಕೆ ಕೊಡಲ್ಪಟ್ಟಿದೆ. ಇಲ್ಲಿಯ ಕೆಲವು ಗ್ರಾಮಗಳಲ್ಲಿ ರಥೋತ್ಸವಗಳು ಬಹು ವಿಜೃಂಭಣೆಯಿಂದ ನಡೆಯುತ್ತವೆ. ಈ ದೇವಸ್ಥಾನಗಳಲ್ಲಿಯ ಅನೇಕ ಕಟ್ಟಡಗಳು ಪುರಾತನ ಪದ್ಧತಿಯವಿರುತ್ತವೆ. ಈ ಸಂಗತಿಗಳ ಮೇಲಿಂದ ಬಸವಾದಿ ಪ್ರಮಥರ ಪ್ರಭಾವವು ಯಾದವ ರಾಜರ ಕಾಲದಲ್ಲಿ ಇಡೀ ಕರ್ನಾಟಕ ದೇಶದಲ್ಲಿ ಹೇಗೆ ವಿಸ್ತಾರವಾಗಿ ಹಬ್ಬಿತ್ತೆಂಬುದು ತಿಳಿದುಬರುತ್ತದೆ.

---

## ಮಹಾದೇವ.

(೧೨೬೦—೧೨೭೧)

ಕನ್ನರನ ತರುವಾಯ ಅವನ ತಮ್ಮನಾದ ಮಹಾದೇವನು ದೇವಗಿರಿಯಲ್ಲಿ ಪಟ್ಟಾಭಿಷಿಕ್ತನಾದನು. ಇವನ ಕಾಲದಲ್ಲಿ ದೇವರಸನೆಂಬವನು ಅವನಿಗೆ ಸೇನಾಪತಿಯಾಗಿ ಉತ್ತರ ಕರ್ನಾಟಕ ಭಾಗವನ್ನು ಆಳುತ್ತಿದ್ದನು. ಇವನ ಶಿಲಾಶಾಸನಗಳಲ್ಲಿ ಶಿವಶರಣರಿಗೆ ಕೊಟ್ಟ ಶಾಸನಗಳು ಬಹಳ ಮಹತ್ವದವಿರುತ್ತವೆ. ಇವನು ಯಾದವ ರಾಜನಾದ ಮಹಾದೇವನ ಮಹಾಪ್ರಧಾನನೆಂತಲೂ ಸರ್ವಾಧಿಕಾರಿಯೆಂತಲೂ ಇವುಗಳಲ್ಲಿ ಹೇಳಲ್ಪಟ್ಟಿದ್ದಾನೆ. * ಇವನು ಈಗಿನ ತೊರಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ದೇವರಸ ಮತ್ತು ಮಹಾದೇವ ಯಾದವನೃಪತಿ ಈ ಉಭಯತರು ವೀರಶೈವ ಧರ್ಮದ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರೆಂಬದು ಕೆಳಗಿನ ಶಾಸನಗಳಿಂದ ತಿಳಿದು ಬರುತ್ತದೆ.

**ದೇವರಸ ದಂಡಾಧಿಪಃ—** ದೇವರಸನು ಯಾದವ ರಾಜನಾದ ಮಹಾದೇವನ ಕೇವಲ ವಿಶ್ವಾಸಕ್ಕೆ ಪಾತ್ರನಾಗಿದ್ದನೆಂದು ಈ ಶಿಲಾಶಾಸನಗಳಿಂದ ಕಂಡುಬರುತ್ತದೆ. ಚೌಡದಾನಪುರದಲ್ಲಿಯ ಒಂದು ಶಿಲಾಶಾಸನದಲ್ಲಿ ಇವನು 'ಶಿವಭಕ್ತ ಸುಖದಿಂದುಕ್ಕಿದ' ಎಂತಲೂ 'ಭಕ್ತ್ಯಾಚಾರದ'ವನೆಂತಲೂ 'ಜಂಗಮ ಸುಖೈಕ ಗುಣಸದ್ಭಾವ'ನೆಂತಲೂ ಹೊಗಳಲ್ಪಟ್ಟಿದ್ದಾನೆ. ಈ ಶಬ್ದಗಳನ್ನು ನೋಡಿದಲ್ಲಿ, ಇವನು ವೀರಶೈವ

---

* ಶಿವಾನುಭವ ೪—೪—೧೨೦.

ಮತಾನುವರ್ತಿಯಾಗಿದ್ದನೆಂದು ತಿಳಿದುಬರುತ್ತದೆ. ಈ ಶಿಲಾಶಾಸನದ ೩ ಇವನು 'ಕಾರುಣಿಕರೊಳು ತಾಂ ಕಾರುಣಿಕ'ನೆಂತಲೂ 'ಸಿದ್ಧರೇವಣ ದೇವರ ಕಾರುಣ್ಯದ ಶಿಶು' ಎಂತಲೂ ಹೇಳಲ್ಪಟ್ಟಿದ್ದಾನೆ. ಇದರಿಂದ ಇವನು ಸಿದ್ಧರೇವಣದೇವರೆಂಬುವರಿಂದ ವೀರಶೈವ ದೀಕ್ಷೆಯನ್ನು ಹೊಂದಿ ರಬಹುದೆಂಬ ಅನುಮಾನವು ಉಂಟಾಗುತ್ತದೆ. ಶಿಲಾಶಾಸನದಲ್ಲಿ ಈ ಉಲ್ಲೇಖಗಳಿದ್ದ ಶ್ಲೋಕಿನ ಮುಂದಿನ ಒಂದು ಶ್ಲೋಕದಲ್ಲಿ ಈ ರೇವಣನ ವಾಸಸ್ಥಳವು ಹೇಳಲ್ಪಟ್ಟಿದೆ. 'ಅಲ್ಲಿ ಪರಮಗುರು ಸಿದ್ಧರೇವಣ ಸಿರಿಗಿರಿಯ ನಿವಾಸನಾಜ್ಞೆಯಿಂ ಬೆಸಸಿದನಚ್ಚರಿಯ ಮನೆಯಪ್ಪ ಮುಕ್ತೇಶ್ವರ ಲಿಂಗ ದೊಳಲ್ಲಿ ತುಂಗಭದ್ರೆಯ ತಡೆಯೋಳ್' ಎಂದಿರುವದರಿಂದ ದೇವರಸ ನಿಗೆ ದೀಕ್ಷೆಯನ್ನು ಮಾಡಿದ ರೇವಣನು ಶ್ರೀಶೈಲದವನಿರಬೇಕೆಂದು ತೋರುತ್ತದೆ.

ಪ್ರಾಂತಾಧಿಪತಿಯಾದ ಈ ದೇವರಸನು ಕೆಲವೊಂದು ಸಮಯ ದಲ್ಲಿ ಚೌಡದಾನಪುರಕ್ಕೆ ಅಲ್ಲಿಯ ಶಿವದೇವರ ದರ್ಶನಾರ್ಥವಾಗಿ ಬಂದಿ ರಲು ಆ ಕಾಲದಲ್ಲಿ ಅವನು ಶಿವದೇವನಿಗೆ ಒಂದು ದಾನವನ್ನು ಕೊಟ್ಟಿದ್ದಾನೆ. ಈ ಕಾಲದಲ್ಲಿ ಯಾದವರಾಜನಾದ ಮಹಾದೇವರಾಜನೂ ಸಹ ಇಲ್ಲಿಗೆ ಬಂದಿದ್ದನು. ಈ ರಾಜನೂ ಅವನಿಗೆ ಗ್ರಾಮವನ್ನು ಕೊಡಲು ಒಪ್ಪಿಗೆಯ ನ್ನಿತ್ತಿದ್ದಾನೆ. ಅವನ ಹೇಳಿಕೆಯಿಂದಲೇ ದೇವರಸನು ಈ ದತ್ತಿಯನ್ನು ಕೊಟ್ಟಿದ್ದಾನೆಂದು ಈ ಶಾಸನದಲ್ಲಿ ಹೇಳಿದೆ.

ಹಾವೇರಿಯ ನೈಋತ್ಯ ದಿಕ್ಕಿನಲ್ಲಿ ೮ ಮೈಲುಗಳ ಮೇಲೆ ಸಂಗೂರ ಎಂಬ ಗ್ರಾಮವಿದೆ. ಅಲ್ಲಿಯ ಶಿಲಾಶಾಸನದಲ್ಲಿ ಈ ದೇವರಾಜನು 'ಶ್ರೀ ಸಿದ್ಧರಾಮಾಧಿಷ್ಠಿತಮಾದ' ಸೊನ್ನಲಿಗೆಯ ನಗರವನ್ನವಲೋಕಿಸಿ ಕಪಿಲಸಿದ್ಧಮಲ್ಲಿಕಾರ್ಜುನನ ಅಂಗಭೋಗ ರಂಗಭೋಗಕ್ಕೆ ಮತ್ತು ಜೀರ್ಣೋದ್ಧಾರಕ್ಕೆ ಇದೇ ಸಂಗೂರು ಗ್ರಾಮವನ್ನು ಕೊಟ್ಟದ್ದು ಹೇಳಿದೆ. ಅಲ್ಲದೆ ಅದರಲ್ಲಿ 'ಗುರು ಸಿದ್ಧರಾಮನಾಥದೇವರ ವಚನ'ವೊಂದು ಉದಹ ರಿಸಲ್ಪಟ್ಟಿದೆ.

ಈ ಎಲ್ಲ ಸಂಗತಿಗಳಿಂದ ಮಹಾದೇವ ರಾಜನೂ ಅವನ ಕಾಲದಲ್ಲಿದ್ದ ಸೇನಾಪತಿಗಳೂ ವೀರಶೈವ ಸಮಾಜವನ್ನು ಆದರಿಸುವವರಾಗಿದ್ದರೆಂದು ಕಂಡುಬರುತ್ತದೆ. ಈ ಶಾಸನಗಳು ಆ ಕಾಲದಲ್ಲಿ ಶಿವಶರಣರ ವರ್ಚಸ್ಸು ದೇಶದಲ್ಲಿ ಎಷ್ಟಿತ್ತೆಂಬುದನ್ನು ಬಹು ಚೆನ್ನಾಗಿ ವ್ಯಕ್ತಗೊಳಿಸುತ್ತವೆ.

**ಸಾಯಿದೇವ ದಂಡನಾಯಕಃ—** ವರದಾನಿ ಗುಡ್ಡವ್ವೆಯು ಶಿವಶರಣರಲ್ಲಿ ಬಹು ಪ್ರಖ್ಯಾತಳಾಗಿದ್ದಾಳೆ. ಇವಳ ದೇವಾಲಯವು ಈಗಿನ ಜತ್ತ ಸಂಸ್ಥಾನದಲ್ಲಿದ್ದು ವಿಜಾಪುರ ಪಟ್ಟಣದಿಂದ ಅದು ಪಶ್ಚಿಮಕ್ಕೆ ೩೬ ಮೈಲುಗಳ ಮೇಲಿದೆ. ಇವಳಿಗೋಸ್ಕರ ಸಾಯಿದೇವ ದಂಡನಾಯಕನು 'ವಾತಾಖ್ಯಪುರ' ಎಂಬ ಗ್ರಾಮದಲ್ಲಿ ಒಂದು ದೇವಾಲಯವನ್ನು ೧೧೭೮ರಲ್ಲಿ ಕಟ್ಟಿಸಿದ್ದು ತಿಳಿಯುತ್ತದೆ. § ಇದು ಭೀಮಾ ತೀರದಲ್ಲಿರುವ ಈಗಿನ ವಾಡಪುರ ಎಂಬುದಿರುತ್ತದೆ. ಈ ಸಾಯಿದೇವನು ನಗರ ಶ್ರೇಷ್ಠಿಗಳನ್ನೂ ವಣಿಗ್ಜನರನ್ನೂ ಬರಮಾಡಿಕೊಂಡು ಅವರ ಸಮ್ಮುಖದಲ್ಲಿ ಈ ಗ್ರಾಮದ ಸುತ್ತಲಿನ ಕೆಲವು ಗ್ರಾಮಗಳಲ್ಲಿಯ ಭೂಮಿಗಳನ್ನು ಈ ದೇವಾಲಯಕ್ಕೆ ದಾನ ಮಾಡಿದ್ದಾನೆ. ದೇವಾಲಯವನ್ನು ಕಟ್ಟಿಸುವ ಪೂರ್ವದಲ್ಲಿ ಈ ಸಾಯಿದೇವನು ಅಲ್ಲಿ ಒಂದು ಗ್ರಾಮವನ್ನು ನಿರ್ಮಿಸಿದ್ದಾನೆ. ಅವನು ಈ ಕಾರ್ಯಗಳನ್ನೆಲ್ಲ ರಾಜನ ಸಮ್ಮತಿಯಿಂದಲೇ ಮಾಡಿದ್ದು ಈ ಶಾಸನದಲ್ಲಿ ಹೇಳಲ್ಪಟ್ಟಿದೆ.

ಮಹಾದೇವರಸನ ತರುವಾಯ ರಾಮಚಂದ್ರನು ದೇವಗಿರಿಯಲ್ಲಿ ರಾಜ್ಯವಾಳಹತ್ತಿದನು. ಇವನ ಆಳಿಕೆಯಲ್ಲಿಯೇ ಮಲಿಕ ಕಾಫರನು ಕರ್ನಾಟಕವನ್ನು ಅಭಿಯೋಗಿಸಿ ಯಾದವರ ರಾಜ್ಯವನ್ನು ಕೈವಶಮಾಡಿಕೊಂಡನು. ಮುಂದೆ ಅವನು ಹಾಗೆಯೇ ದಕ್ಷಿಣಕ್ಕೆ ಸಾಗಿ ಕರ್ನಾಟಕದ ರಾಜ್ಯವಾದ ಹೊಯಿಸಳ ರಾಜ್ಯವನ್ನೂ ಕೂಡ ನಾಶಮಾಡಿದನು.

ಈ ಪ್ರಕರಣದಲ್ಲಿ ಉಲ್ಲೇಖಮಾಡಿದ ಸಂಗತಿಗಳಿಂದ ಶಿವಶರಣರ ವರ್ಚಸ್ಸು ಕರ್ನಾಟಕದಲ್ಲಿ ಈ ಕಾಲದಲ್ಲಿ ಎಷ್ಟು ಪ್ರಬಲವಾಗಿತ್ತೆಂಬುದು ಚನ್ನಾಗಿ ವ್ಯಕ್ತವಾಗುತ್ತದೆ. ಇದು ೧೩ನೇ ಶತಮಾನವು. ಈ ಕಾಲದ ಕರ್ನಾಟಕದ ಇತಿಹಾಸವು ಸಾದ್ಯಂತವಾಗಿ ಎಲ್ಲಿಯೂ ಉಪಲಬ್ಧವಿಲ್ಲ. ಆಗ ಆಳುತ್ತಿದ್ದ ಹೊಯಿಸಳರ, ದೇವಗಿರಿ ಯಾದವರ, ಇತರ ಸಾಮಂತ ರಾಜರ, ಇತಿಹಾಸಗಳನ್ನು ನಾವು ಶಿಲಾಲೇಖಗಳಲ್ಲಿ ದೊರೆಯುವ ಸಂಗತಿಗಳ ಆಧಾರಗಳಿಂದಲೇ ಬರೆಯಬೇಕಾಗುತ್ತದೆ. ಈ ಕಾಲದ ವೀರಶೈವರ ಇತಿಹಾಸವನ್ನಾದರೂ ಬರೆಯುವಲ್ಲಿ ಇದೇ ರೀತಿಯನ್ನು ನಾವು ಅನುಸರಿಸಬೇಕಾಗುತ್ತದೆ. ಈ ಪ್ರಕಾರ ನಮಗೆ ದೊರೆತ ಆಧಾರಗಳ ಮೇಲಿಂದ

§ ಶಿವಾನುಭವ ೧೩ನೇ ಸಂಪುಟ ೧೧ನೇ ಸಂಚಿಕೆ ೪೮೫ ಪುಟ (ವಿಜಾಪುರ ಮ್ಯೂಜಿಯಮದಲ್ಲಿದ್ದ ಶಿಲಾಶಾಸನ)

ಯಾದವರಾಜರಾದ ಸಿಂಘಣನು, ಕನ್ನರನು, ಮಹಾದೇವನು, ಇವರೆಲ್ಲರು ಶಿವಶರಣರ ವಿಷಯವಾಗಿ ಬಹು ಆದರಬುದ್ಧಿಯುಳ್ಳವರಾಗಿದ್ದರೆಂದು ತೋರಿಬರುತ್ತದೆ. ಈ ರಾಜರ ರಾಜಧಾನಿಯು ಕರ್ನಾಟಕ ಪ್ರಾಂತದಿಂದ ಮಹಾರಾಷ್ಟ್ರದಲ್ಲಿ ಬಹು ದೂರವಿದೆ. ಆದ್ದರಿಂದ ಕರ್ನಾಟಕ ಭಾಗವನ್ನು ಅವರು ತಮ್ಮ ಸೇನಾಪತಿಗಳ ಮೂಲಕವೇ ಆಳುತ್ತಿದ್ದರು. ಇವರಲ್ಲನೇಕರು ವೀರಶೈವ ಧರ್ಮಾನುಯಾಯಿಗಳಾಗಿದ್ದರೆಂಬುದು ಈ ಪ್ರಕರಣದಲ್ಲಿ ನಾವು ಉಲ್ಲೇಖಿಸಿದ ಶಿಲಾಶಾಸನಗಳಿಂದ ಕಂಡುಬರುತ್ತದೆ. ೧೩ನೇ ಶತಮಾನದಲ್ಲಿ ವೀರಶೈವ ಸಮಾಜವು ಉಜ್ವಲಸ್ಥಿತಿಯಲ್ಲಿದ್ದುದ್ದರ ದ್ಯೋತಕವು ಇದಾಗಿದೆ. ಅನೇಕರು ವೀರಶೈವ ಸಮಾಜದ ವರ್ಚಸ್ಸು ಈ ಕಾಲದಲ್ಲಿ ಏನೂ ಇದ್ದಿಲ್ಲೆಂತಲೂ, ಬಸವೇಶ್ವರನ ತರುವಾಯ ಮಹಾಪುರುಷರೂ ಗ್ರಂಥಕಾರರೂ ಶಿವಶರಣರೂ ಯಾರೂ ಆಗಿಲ್ಲೆಂತಲೂ ತಿಳಿದಿರುತ್ತಾರೆ. ಆದರೆ ಈ ತಿಳುವಳಿಕೆಯು ತಪ್ಪಾದದ್ದೆಂಬುದು ಈ ಪ್ರಕರಣದಲ್ಲಿ ನಾವು ಹೇಳಿದ ಸಂಗತಿಗಳಿಂದ ವಾಚಕರಿಗೆ ಗೊತ್ತಾಗದಿರದು.

---

## ೪ ನೇ ಪ್ರಕರಣ.

### ವಚನಶಾಸ್ತ್ರದ ಘನತೆಯ ಕಾಲ.

ಬಸವೇಶ್ವರನು ೧೨ನೇ ಶತಮಾನದ ಮಧ್ಯಕಾಲದಲ್ಲಿ ಉಗಮಿಸಿ ಕಲ್ಯಾಣ ಪಟ್ಟಣದಲ್ಲಿ ಪ್ರಸಿದ್ಧಿಗೆ ಬಂದ ಬಳಿಕ ಸುಮಾರು ೧೫೦ ವರ್ಷಗಳಾದ ಮೇಲೆ ಮಲಿಕಕಾಫರನು ಕರ್ನಾಟಕ ದೇಶವನ್ನು ಅಭಿಯೋಗಿಸಿ ಅಲ್ಲಿಯ ರಾಜ್ಯಗಳನ್ನು ಹಾಳು ಮಾಡಿದನು. ದೇಶದಲ್ಲಿ ಹೀಗೆ ರಾಜ್ಯಗಳು ಹಾಳಾಗಬಹುದು. ಆದರೆ ಸಂಸ್ಕೃತಿ, ಧರ್ಮ, ವಾಙ್ಮಯ ಇವುಗಳು ಎಂದಿಗೂ ಹಾಳಾಗಲಾರವು. ಒಂದುವೇಳೆ ಅವು ಜನಸಮುದಾಯದಲ್ಲಿ ಪ್ರಸಾರವಾಗಿದ್ದರೆ ಅವು ಶಾಶ್ವತವಾಗಿ ಉಳಿಯುವವು. ಬಸ

ವೇಶ್ವರನ ಕಾಲದಲ್ಲಿ ಶಿವಶರಣರ ವಿಚಾರಗಳು ಕರ್ನಾಟಕದಲ್ಲಿ ಉದಯ ಹೊಂದಿದವು. ಮುಂದೆ ಅವು ೧೩ನೇ ಶತಮಾನದಲ್ಲಿ ಇನ್ನೂ ಹೆಚ್ಚಾಗಿ ಪ್ರಸಾರ ಹೊಂದಿದವು. ತರುವಾಯ ಮುಸಲ್ಮಾನರು ಕರ್ನಾಟಕವನ್ನು ಪ್ರವೇಶಿಸಿದರು. ಇದರಿಂದ ೧೪ನೇ ಶತಮಾನದಲ್ಲಿ ಕೆಲವು ಕಾಲ ವೀರಶೈವ ಸಂಸ್ಕೃತಿಗೆ ಆತಂಕ ಉಂಟಾಯಿತು. ಆದರೆ ಅದರಲ್ಲಿ ನೆಲೆಗೊಂಡಿದ್ದ ಮೊದಲಿನ ವ್ಯವಸ್ಥೆ ಮತ್ತು ಶಿಸ್ತು ನಾಶವಾಗಲಿಲ್ಲ. ಬಸವೇಶ್ವರನ ಕಾಲದಲ್ಲಿ ಮತ್ತು ಬಸವೇಶ್ವರನ ತರುವಾಯ ೧೦೦ - ೧೫೦ ವರ್ಷಗಳ ವರೆಗೆ ವಚನಶಾಸ್ತ್ರವು ಘನತೆ ಹೊಂದಿದ್ದರ ಪರಿಣಾಮವು ಇದಾಗಿದೆ. ಇದರಿಂದ ಅದು ಕರ್ನಾಟಕದಲ್ಲಷ್ಟೇ ಅಲ್ಲ. ನೆರೆಪ್ರಾಂತಗಳಾದ ತಮಿಳು ತೆಲುಗು ದೇಶಗಳಲ್ಲಿಯೂ ಸಹ ಅದರ ಪ್ರಭಾವವು ಉಂಟಾಯಿತು.

ವೀರಶೈವ ಧರ್ಮದ ಪ್ರಸಾರವು ಬಸವೇಶ್ವರನು ಜನಿಸಿದ ಪ್ರಾಂತವಾದ ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಮೊದಲು ಪ್ರಾರಂಭವಾಯಿತು. ಮುಂದೆ ಬಿಜ್ಜಳನು ಕಲ್ಯಾಣ ಪಟ್ಟಣದಲ್ಲಿ ಚಕ್ರಾಧಿಪತ್ಯವನ್ನು ಹೊಂದಿದ ಬಳಿಕ ಬಸವೇಶ್ವರನು ಅವನಲ್ಲಿ ಶ್ರೇಷ್ಠಾಧಿಕಾರವನ್ನು ಹೊಂದಿದ್ದರಿಂದ ಅವನ ಮತಪ್ರಸಾರ ಕಾರ್ಯವು ಮತ್ತಷ್ಟು ಭರದಿಂದ ಸಾಗಿತು. ಆದರೆ ಮುಂದೆ ಬಿಜ್ಜಳನಿಗೂ ವೀರಶೈವರಿಗೂ ಮನಸ್ತಾಪಗಳುಂಟಾದವು. ಇದರಿಂದ ಉಭಯ ಪಕ್ಷಗಳಲ್ಲಿ ಯುದ್ಧಗಳು ಸಂಭವಿಸಿ ಅವುಗಳು ಕಡೆಗೆ ಉಳಿವಿಯ ಕದನದಲ್ಲಿ ಪರ್ಯವಸಾನವನ್ನು ಹೊಂದಿದವು. ಈ ಕಾಲದಲ್ಲಿ ವೀರಶೈವರು ತಮ್ಮ ಧರ್ಮಕ್ಕೋಸ್ಕರ ತಮ್ಮ ರಕ್ತವನ್ನು ಸೂರೆಮಾಡಬೇಕಾಯಿತು. ಆದರೆ ಇದರಿಂದ ಅವರ ಧರ್ಮವು ಕರ್ನಾಟಕದಲ್ಲಿ ಮುಗ್ಗಲಿಲ್ಲ. ಇದರ ಬದಲು ಬಸವ, ಅಲ್ಲಮಪ್ರಭು, ಚನ್ನಬಸವ, ಸಿದ್ಧರಾಮಾದಿ ಶಿವಶರಣರ ವಿಚಾರಗಳು ದೇಶದಲ್ಲಿ ಬಹು ಪ್ರಬಲವಾಗಿ ಪ್ರಸಾರವಾಗುತ್ತಲೇ ನಡೆದವು. ಈ ಮಹಾನುಭಾವರ ಧಾರ್ಮಿಕ, ಸಾಮಾಜಿಕ ಉಚ್ಚ ವಿಚಾರಗಳು ಬಹುಜನ ಸಮಾಜದ ಅಂತಃಕರಣದ ಮೇಲೆ ಬಹು ಪ್ರಬಲವಾಗಿ ಪ್ರತಿಬಿಂಬಿಸಿದವು. ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯ ೧೦೦-೧೫೦ ವರ್ಷಗಳಲ್ಲಿಯೂ ಅಸಂಖ್ಯ ಶಿವಶರಣರೂ ವಚನಕಾರರೂ ದೇಶದಲ್ಲೆಲ್ಲ ಉದ್ಭವಿಸಿದರು. ಇವರ ಮೂಲಕವೇ ವಚನವಾಙ್ಮಯವು ಜನ

ಸಮುದಾಯದಲ್ಲಿ ಹಬ್ಬಿಗೊಂಡಿತು. ಶಿವಶರಣರ ವಚನಗಳು ಎರಡೆಂಭತ್ತು ಕೋಟಿ ಇರುತ್ತವೆಂಬ ಪ್ರತೀತಿ ಇದೆ. ಅವುಗಳ ಸಂಖ್ಯೆಯು ಇಂತಿಷ್ಟೇ ಇರುತ್ತದೆಂದು ನಿಶ್ಚಯಪೂರ್ವಕವಾಗಿ ಹೇಳಲಿಕ್ಕೆ ಬಾರದಿದ್ದರೂ ಅದು ಬಹಳ ದೊಡ್ಡದಿದೆಂಬುದರಲ್ಲಿ ಏನೂ ಸಂದೇಹವಿಲ್ಲ. ವಚನವಾಙ್ಮಯದ ಈ ವಿಸ್ತಾರವು ಇದೇ ಕಾಲದಲ್ಲಿ ಸಂಭವಿಸಿತು. ಬಸವೇಶ್ವರನ ಕಾಲದಲ್ಲಿ ಬಹುಜನ ಶಿವಶರಣರೂ ವಚನಕಾರರೂ ಆಗಿ ಹೋಗಿದ್ದರೂ ಅವನ ತರುವಾಯ ೧೦೦-೧೫೦ ವರುಷಗಳ ವರೆಗೂ ಅವರ ಸಂಖ್ಯೆಯು ಬೆಳೆಯುತ್ತಲೇ ನಡೆಯಿತು. ಇದರಿಂದ ವೀರಶೈವ ಸಮಾಜವು ಈ ೧೩ನೇ ಶತಮಾನದಲ್ಲಿ ಕರ್ನಾಟಕದಲ್ಲೆಲ್ಲ ಪಸರಿಸಿತು.

ಈ ಕಾಲದಲ್ಲಿ ದೇಶದಲ್ಲೆಲ್ಲ ಮಠಗಳು ಸ್ಥಾಪಿಸಲ್ಪಟ್ಟವು. ಅವು ಗುರುಸ್ಥಲದ ಮಠಗಳೆಂತಲೂ ಪಂಚಾಚಾರ್ಯರ ಮಠಗಳೆಂತಲೂ ಈಗ ಹೇಳಲ್ಪಡುತ್ತವೆ. ಇವುಗಳಲ್ಲಿಯ ಮಠಾಧಿಪತಿಗಳು ಗ್ರಾಮಗಳಲ್ಲಿ ಧರ್ಮೋಪದೇಶವನ್ನು ಮಾಡಿ, ವೀರಶೈವರಾಗಲಪೇಕ್ಷಿಸುವವರಿಗೆ ದೀಕ್ಷೆಯನ್ನು ಕೊಟ್ಟು, ಅವರಿಗೋಸ್ಕರ ಮಠಗಳನ್ನು ಸ್ಥಾಪಿಸಿ, ಅಲ್ಲಿ ನಿತ್ಯ ವಚನಾನುಭವವು ನಡೆಯುವಂತೆ ವ್ಯವಸ್ಥೆ ಮಾಡಿದರು. ಹೀಗೆ ವ್ಯವಸ್ಥೆಯಾದ ಕೂಡಲೆ ಅವರು ಹೊಸ ಗ್ರಾಮಗಳಲ್ಲಿ ಇದೇ ಕ್ರಮವನ್ನು ಅನುಸರಿಸುತ್ತ ದೇಶವನ್ನು ಪಸರಿಸಿದರು. ಈ ಕಾರ್ಯವನ್ನು ಬಹು ಜನರು ಮಾಡಿದ್ದರಿಂದ ವೀರಶೈವರಲ್ಲಿ ಶಿವಶರಣರ ಮಾಲಿಕೆಯು ಬಹು ದೊಡ್ಡದಾಗಿದೆ. ಇವರ ಹೆಸರುಗಳು 'ಗಣಸಹಸ್ರ' ಎಂಬ ಹೆಸರಿನ ಗ್ರಂಥದಲ್ಲಿ ಉಪಲಬ್ಧವಿವೆ. ಇವರು ಒಂದು ಸಾವಿರ ಜನರಿದ್ದಾರೆ. ಅವರ ಈ ಧರ್ಮಪ್ರಸಾರ ಕಾರ್ಯದಲ್ಲಿ ಅವರಿಗೆ ಅನುಕೂಲವಾಗುವಂತೆ ಮಠಗಳ ಯೋಜನೆಯೂ ಉಂಟಾಯಿತು. ಮಠಗಳಲ್ಲಿ ಪಟ್ಟದವರು, ಚರಮೂರ್ತಿಗಳು, ಗಣಕ ಗಣಾಚಾರಿಗಳು, ಸ್ಥಾವರ ಮಠಪತ್ತಿಗಳು, ಹೀಗೆ ಅಧಿಕಾರಿಗಳಿದ್ದು ಅವರಿಂದ ಸಮಾಜದಲ್ಲಿ ಸುವ್ಯವಸ್ಥೆ, ಜನರಲ್ಲಿ ನಿರಂತರ ಧರ್ಮಬೋಧೆ, ಗ್ರಾಮದಲ್ಲಿಯ ಬಾಲಕರಿಗೆ ಶಿಕ್ಷಣ ಕಾರ್ಯ, ಧರ್ಮಪ್ರಸಾರ ಕಾರ್ಯ ಇವೇ ಮೊದಲಾದ ಕಾರ್ಯಗಳಾಗುವಂತೆ ಏರ್ಪಾಡಾಯಿತು. ವಚನಶಾಸ್ತ್ರದ ಅಭ್ಯುದಯದ ಈ ಕಾಲದಲ್ಲಿ ವೀರಶೈವರು ಜೈನಬೌದ್ಧರಂತೆ ದೇವಾಲಯಗಳನ್ನು ಕಟ್ಟುವ ಕಾರ್ಯದಲ್ಲಿ ತೊಡಗಲಿಲ್ಲ. ಮೂರ್ತಿಗಳ ಪೂಜೆಯು ಅವರಲ್ಲಿರಲಿಲ್ಲ. ಆದರೆ ಅವರು ಮಠಗಳನ್ನು ದೇಶದ

ಎಂದು ತೃಪ್ತಿಪದಾರ್ಥವನ್ನು ಭಾವಲಿಂಗಕ್ಕೆ ಅರ್ಪಿಸುವುದು. ಇದು ಕರಣಾರ್ಪಣ ಜಪವು.

(೨೮೮) ಇಷ್ಟಲಿಂಗಾರ್ಪಣ ಜಪವುಃ- ಇದನ್ನು ಅರ್ಪಿಸುವ ವಿಧವು ಹೇಗೆಂದರೆಃ—

ಓಂ ಹ್ರಾಂ ನಮಃಶಿವಾಯ ಪೀಠದಲ್ಲಿರುವ ಆಚಾರಲಿಂಗಕ್ಕೆ
ಓಂ ಹ್ರೀಂ ನಮಃಶಿವಾಯ ಕಟಿಯಲ್ಲಿರುವ ಗುರುಲಿಂಗಕ್ಕೆ
ಓಂ ಹ್ರೂಂ ನಮಃಶಿವಾಯ ವರ್ತುಳದಲ್ಲಿರುವ ಶಿವಲಿಂಗಕ್ಕೆ
ಓಂ ಹ್ರೈಂ ನಮಃಶಿವಾಯ ಗೋಮುಖದಲ್ಲಿರುವ ಜಂಗಮಲಿಂಗಕ್ಕೆ
ಓಂ ಹ್ರೌಂ ನಮಃಶಿವಾಯ ನಾಳದಲ್ಲಿರುವ ಪ್ರಸಾದಲಿಂಗಕ್ಕೆ
ಓಂ ಹ್ರಃ ನಮಃಶಿವಾಯ ಗೋಳಕದಲ್ಲಿರುವ ಮಹಾಲಿಂಗಕ್ಕೆ
ಸಮರ್ಪಿಸುವುದು.

ಬೇರೆ ಪದ್ಧತಿಯ ಜಪಗಳೂ ಉಂಟು. ಆದರೆ ಅವುಗಳ ಮೂಲ ತತ್ವಗಳಲ್ಲಿ ಭೇದವಿಲ್ಲ. ಅವುಗಳ ಉಪಯೋಗದಂತೆ ಬೇರೆ ಬೇರೆ ಹೆಸರುಗಳುಂಟು. ಅವುಗಳಲ್ಲಿ ಕೆಲವು ಮಾದರಿಗಾಗಿ ಕೆಳಗೆ ಹೇಳಲ್ಪಟ್ಟಿವೆ.

(೨೮೯) ಹಸ್ತಪ್ರಸಾದ ಜಪಃ— ಈ ಜಪದ ವಿವರ ಕೆಳಗೆ ಕಾಣಿಸಿದಂತೆ ಇದೆ. ಇಷ್ಟ ಪ್ರಾಣ ಭಾವಲಿಂಗಗಳ ಜಪಗಳು ಇವಾಗಿವೆ.

ಓಂ ಹ್ರಾಂ ಹ್ರೀಂ ಬಾಂ ಅಂ ನಾಂ ಮಾಂ ಇಷ್ಟಲಿಂಗಾಯನಮಃ
ಓಂ ಹ್ರಾಂ ಹ್ರೇಂ ಸಾಂ ಊಂ ಶೀಂ ವಾಂ ಪ್ರಾಣಲಿಂಗಾಯನಮಃ
ಓಂ ಹ್ರೌಂ ಹ್ರಃ ವಾಂ ಮಾಂ ಯಾಂ ಓಂ ಭಾವಲಿಂಗಾಯನಮಃ

ಇದನ್ನು ಜಪಿಸಿ ಅಡಿಗೆಯನ್ನು ಮುಟ್ಟಿಸುವುದು.

(೨೯೦) ರೂಪು ರುಚಿ ತೃಪ್ತಿಗಳ ಅರ್ಪಣಃ—

ನಮಃಶಿವಾಯ ರೂಪು ಇಷ್ಟಲಿಂಗಾಯನಮಃ
ನಮಃಶಿವಾಯ ರುಚಿ ಪ್ರಾಣಲಿಂಗಾಯನಮಃ
ನಮಃಶಿವಾಯ ತೃಪ್ತಿ ಭಾವಲಿಂಗಾಯನಮಃ

ಇದೊಂದು ವಿಧದ ಕರಣಾರ್ಪಣ ಜಪವುಃ— ಲಿಂಗಕ್ಕೆ ತೋರಿಸಿ ಎಡೆಯನ್ನು ಅರ್ಪಿಸುವುದು.

(೨೯೧) ನ್ಯಾಸಗಳು:— ವೀರಶೈವರಲ್ಲಿ ಅನೇಕ ತರದ ನ್ಯಾಸಗಳಿವೆ. ನ್ಯಾಸಗಳು ಮಂತ್ರಾಕ್ಷರಗಳ ಮೂಲಕವೇ ಆಗುತ್ತವೆ. ಅವುಗಳಿಂದ ವೀರಶೈವನು ಮಂತ್ರ ಶರೀರಿಯಾಗಿ ಲಿಂಗವನ್ನು ಪೂಜಿಸುತ್ತಾನೆ. ಅವುಗಳ ವಿವರಗಳು ಮುಂದೆ ಕೊಡಲ್ಪಡುವವು. ಹೀಗೆ ಮಂತ್ರಗಳ ಕಾರ್ಯಗಳು ಅನೇಕ ವಿಧವಾಗಿವೆ.

(೨೯೨) ತ್ರಿಲಿಂಗಗಳ ಜಪಸಂಖ್ಯೆ:- ಇಷ್ಟಲಿಂಗದ ಜಪಗಳ ಸಂಖ್ಯೆ ೪೩೨೦. ಪ್ರಾಣಲಿಂಗದ ಜಪಗಳ ಸಂಖ್ಯೆ ೯೫೦೪. ಭಾವಲಿಂಗದ ಜಪಗಳ ಸಂಖ್ಯೆ ೭೭೭೬. ಹೀಗೆ ಒಟ್ಟು ಜಪಸಂಖ್ಯೆ ೨೧೬೦೦ ಆಗುತ್ತದೆ. ಇಷ್ಟಲಿಂಗದಲ್ಲಿ ಆಚಾರಲಿಂಗದ ೪ ದಳಗಳು ಗುರುಲಿಂಗದ ೬ ದಳಗಳು ಅಂತು ೧೦ ದಳಗಳಿದ್ದು ಪ್ರತಿಯೊಂದು ದಳಕ್ಕೆ ೪೩೨ ಜಪಸಂಖ್ಯೆಯ ಪ್ರಕಾರ ಇದಕ್ಕೆ ಒಟ್ಟು ೪೩೨೦ ಜಪಗಳಾಗುತ್ತವೆ. ಪ್ರಾಣಲಿಂಗದಲ್ಲಿ ೧೦ ದಳಗಳುಳ್ಳ ಶಿವಲಿಂಗ ಮತ್ತು ೧೨ ದಳಗಳುಳ್ಳ ಜಂಗಮಲಿಂಗವಿದ್ದು ಮೇಲಿನ ಎಣಿಕೆಯ ಪ್ರಕಾರ ಜಪಗಳ ಸಂಖ್ಯೆ ೯೫೦೪ ಆಗುತ್ತದೆ. ಭಾವಲಿಂಗದಲ್ಲಿ ೧೬ ದಳಗಳುಳ್ಳ ಪ್ರಸಾದಲಿಂಗ ಮತ್ತು ೨ ದಳಗಳುಳ್ಳ ಮಹಾಲಿಂಗವಿದ್ದು ಅದೇ ಎಣಿಕೆಯಿಂದ ಒಟ್ಟು ಜಪಸಂಖ್ಯೆ ೭೭೭೬ ಆಗುತ್ತವೆ. ಜಪಕ್ಕೆ ಒಟ್ಟು ೬೦ ಗಳಿಗೆ ಅಂದರೆ ೨೪ ತಾಸುಗಳು ಹತ್ತುತ್ತವೆ.

(೨೯೩) ಷಡ್ವಿಧ ಲಿಂಗಗಳ ಜಪಸಂಖ್ಯೆ:—

| ಲಿಂಗ | ಲಿಂಗಕ್ಕೆ ದಳಗಳು | ಒಂದು ದಳಕ್ಕೆ ಜಪಸಂಖ್ಯೆ | ಲಿಂಗದ ಒಟ್ಟು ಜಪಸಂಖ್ಯೆ | ಹತ್ತುವ ವೇಳೆ ಗಳಿಗೆ-ಪಾನಿವಾಳ |
|---|---|---|---|---|
| ಆಚಾರಲಿಂಗ | ೪ | ೪೩೨ | ೧೭೨೮ | ೪-೪೮ |
| ಗುರುಲಿಂಗ | ೬ | ೪೩೨ | ೨೫೯೨ | ೭-೧೨ |
| ಶಿವಲಿಂಗ | ೧೦ | ೪೩೨ | ೪೩೨೦ | ೧೨- ೦ |
| ಜಂಗಮಲಿಂಗ | ೧೨ | ೪೩೨ | ೫೧೮೪ | ೧೪-೨೪ |
| ಪ್ರಸಾದಲಿಂಗ | ೧೬ | ೪೩೨ | ೬೯೧೨ | ೧೯-೧೨ |
| ಮಹಾಲಿಂಗ | ೨ | ೪೩೨ | ೮೬೪ | ೨-೨೪ |
| | ೫೦ | | ೨೧೬೦೦ | ೬೦- ೦ |

ವೇಳೆಯ ಕೋಷ್ಟಕಃ—೬೦ ಪಾನಿವಾಳ = ೧ ಗಳಿಗೆ; ೨½ ಗಳಿಗೆ ೧ ತಾಸು.

(೨೯೪) ಲಿಂಗಗಳ ಜಪಸಂಖ್ಯೆಯ ಪ್ರಮಾಣಗಳು:— ಆಚಾರ ಲಿಂಗದ ಜಪಕ್ಕೆ ೩೦೮ರಿಂದ ೧೬ ವೇಳೆ ಜಪಿಸುವದು. ಗುರುಲಿಂಗದ ಜಪಕ್ಕೆ ೩೦೮ರಿಂದ ೨೪ ವೇಳೆ ಜಪಿಸುವದು. ಶಿವಲಿಂಗದ ಜಪಕ್ಕೆ, ೩೦೮ರಿಂದ ೪೦ ವೇಳೆ ಜಪಿಸುವದು. ಜಂಗಮಲಿಂಗದ ಜಪಕ್ಕೆ ೩೦೮ರಿಂದ ೪೮ ವೇಳೆ ಜಪಿಸುವದು. ಪ್ರಸಾದಲಿಂಗದ ಜಪಕ್ಕೆ, ೩೦೮ರಿಂದ ೬೪ ವೇಳೆ ಜಪಿಸುವದು. ಮಹಾಲಿಂಗದ ಜಪಕ್ಕೆ, ೩೦೮ರಿಂದ ೮ ವೇಳೆ ಜಪಿಸುವದು. ಅಂದರೆ ಎಲ್ಲಕ್ಕೂ ಕಡಿಮೆ ೨೦೦ ಜಪಗಳು ಆಗುತ್ತಿದ್ದು ಎಲ್ಲಕ್ಕೂ ಹೆಚ್ಚು ಜಪಗಳು ೨೧೬೦೦ ಆಗುವವು. ಎಲ್ಲಕ್ಕೂ ಕಡಿಮೆ ಎಂದರೆ ೨೦೦ ಜಪಗಳಿಗೆ ಈಗಿನ ಲೆಕ್ಕದ ಪ್ರಕಾರ ೧೩½ ಮಿನಿಟುಗಳು ಹತ್ತುವವು.

(೨೯೫) ಮಿಶ್ರಷಟ್‌ಸ್ಥಲ ಜಪಗಳು(೩೬ ಅಂಗಲಿಂಗ ಸ್ಥಳಗಳ ಜಪಗಳು):— ಪ್ರತಿಯೊಂದು ಲಿಂಗದಲ್ಲಿ ಆರಾರು ಲಿಂಗಗಳಿವೆಯಷ್ಟೇ. ಒಂದು ಲಿಂಗದಲ್ಲಿಯ ಜಪಗಳನ್ನು ಈ ಆರರಲ್ಲಿ ಸಮನಾಗಿ ಹಂಚಿಹಾಕತಕ್ಕದ್ದು. ಹೀಗೆ ಹಂಚಿಹಾಕಿದಲ್ಲಿ ಆಯಾ ಲಿಂಗಗಳಿಗೆ ಆಗುವ ಜಪಸಂಖ್ಯೆ ಕೆಳಗೆ ಬರೆದಂತೆ ಆಗುವದು.

| ಲಿಂಗಗಳು | ಒಟ್ಟು ಜ. ಸಂಖ್ಯೆ | ಮಿಶ್ರ ಲಿಂಗಗಳ ಸಂಖ್ಯೆ | | ಪ್ರತಿ ಲಿಂಗಕ್ಕೆ ಜ. ಸಂಖ್ಯೆ | ಜಪಕ್ಕೆ ಹತ್ತುವ ವೇಳೆ ಪಳಗಳು | ಪಳಕ್ಕೆ ಜಪಗಳು |
|---|---|---|---|---|---|---|
| ಆಚಾರಲಿಂಗ | ೧೭೨೮ | ಆಚಾರಲಿಂಗ ಮಿಶ್ರ | ೬ | ೨೮೮ | ೪೮ | ೬ |
| ಗುರುಲಿಂಗ | ೨೫೯೨ | ಗುರುಲಿಂಗ ಮಿಶ್ರ | ೬ | ೪೩೨ | ೭೨ | ೬ |
| ಶಿವಲಿಂಗ | ೪೩೨೦ | ಶಿವಲಿಂಗ(ಮಿಶ್ರ) | ೬ | ೭೨೦ | ೧೨೦ | ೬ |
| ಜಂಗಮಲಿಂಗ | ೫೧೮೪ | ಜಂಗಮಲಿಂಗ ಮಿಶ್ರ | ೬ | ೮೬೪ | ೧೪೪ | ೬ |

| | | | | | | |
|---|---|---|---|---|---|---|
| ಪ್ರಸಾದಲಿಂಗ | ೬೯೧೨ | ಪ್ರಸಾದಲಿಂಗ ಮಿಶ್ರ | ೬ | ೧೧೫೨ | ೧೯೨ | ೬ |
| ಮಹಾಲಿಂಗ | ೮೬೪ | ಮಹಾಲಿಂಗ ಮಿಶ್ರ | ೬ | ೧೪೪ | ೨೪ | ೬ |
| | | | ೩೬ | | | |

ಈ ಪ್ರಕಾರ ೩೬ ಸ್ಥಳಗಳಿಗೆ ಸಂಬಂಧಿಸಿ ಜಪಗಳನ್ನು ಮಾಡುವದು.

(೨೯೬) ಅಷ್ಟದಳಕ್ಕೆ ಜಪ ವಿವರಃ— ಹೃದಯದಲ್ಲಿ ಅಷ್ಟದಳ ಕಮಲ ಇದೆ. ಅಲ್ಲಿ ಪ್ರಾಣಲಿಂಗವು ನೆಲೆಗೊಂಡಿದೆ. ದಳಗಳಿಗನುಸರಿಸಿ ಪ್ರಾಣದ ಗುಣಗಳು ಉಂಟಾಗುತ್ತವೆ. ಅವುಗಳ ಒಲವುಗಳನ್ನು ಲಿಂಗಜಪದಿಂದ ಸರಿಪಡಿಸುವದು.

| | | | | | | |
|---|---|---|---|---|---|---|
| (೧) | ಪೃಥ್ವೀ | ತತ್ವದ | ಪೂರ್ವ | ದಳಕ್ಕೆ | ಜಪ | ೫೦೦೦ |
| (೨) | ಅಪ್ಪು | ,, | ವರುಣ | ,, | ,, | ೪೦೦೦ |
| (೩) | ಅಗ್ನಿ | ,, | ಅಗ್ನಿ | ,, | ,, | ೩೦೦೦ |
| (೪) | ವಾಯು | ,, | ವಾಯುವ್ಯ | ,, | ,, | ೨೦೦೦ |
| (೫) | ಆಕಾಶ | ,, | ಈಶಾನ್ಯ | ,, | ,, | ೧೦೦೦ |
| (೬) | ಸೂರ್ಯ | ,, | ಯಮ | ,, | ,, | ೨೪೦೦ |
| (೭) | ಚಂದ್ರ | ,, | ನೈಋತ್ಯ | ,, | ,, | ೩೨೦೦ |
| (೮) | ಆತ್ಮ | ,, | ಕುಬೇರ | ,, | ,, | ೧೦೦೦ |
| | | | | | ಒಟ್ಟು | ೨೧೬೦೦ |

(೨೯೭) ಷಟ್‌ಸ್ಥಲಗಳಿಗೆ ೧೦೧ ಸ್ಥಲಗಳ ಸಂಬಂಧಃ— ಜಪಗಳ ಮೂಲಕ ಈ ಸಂಬಂಧವು ದೃಢಪಡುತ್ತದೆ. ಭಕ್ತಸ್ಥಳ ೧೫ ಆಚಾರಲಿಂಗ ಸ್ಥಳ ೯ ಇವು ಇಷ್ಟಲಿಂಗದ ವೃತ್ತದಲ್ಲಿ ಸಂಬಂಧವು. ಮಹೇಶ್ವರಸ್ಥಳ ೯ ಗುರುಲಿಂಗಸ್ಥಳ ೯ ಇವು ಇಷ್ಟಲಿಂಗದ ಕಟಿಯಲ್ಲಿ ಸಂಬಂಧವು. ಪ್ರಸಾದಿ ಸ್ಥಲ ೭ ಶಿವಲಿಂಗಸ್ಥಲ ೯ ಇವು ಇಷ್ಟಲಿಂಗದ ವರ್ತುಳದಲ್ಲಿ ಸಂಬಂಧವು. ಪ್ರಾಣಲಿಂಗಿಸ್ಥಲಗಳು ೫ ಜಂಗಮಲಿಂಗಸ್ಥಲಗಳು ೧೨ ಇವು ಇಷ್ಟ ಲಿಂಗದ ಗೋಮುಖದಲ್ಲಿ ಸಂಬಂಧವು. ಶರಣಸ್ಥಲಗಳು ೪, ಪ್ರಸಾದ ಲಿಂಗಸ್ಥಲಗಳು ೯ ಇವು ಲಿಂಗದ ನಾಳದಲ್ಲಿ ಸಂಬಂಧವು. ಐಕ್ಯಸ್ಥಲ ೪ ಮಹಾಲಿಂಗಸ್ಥಲ ೯ ಇವು ಇಷ್ಟಲಿಂಗದ ಗೋಳಕದಲ್ಲಿ ಸಂಬಂಧವು.

ಹೀಗೆ ಅಂಗಸ್ಥಲಗಳು ೪೪. ಲಿಂಗಸ್ಥಲಗಳು ೫೭ ಅಂತು ೧೦೧ ಸ್ಥಲಗಳು ಇವೆ. ಇವುಗಳನ್ನು ಮೇಲೆ ಹೇಳಿದಂತೆ ಇಷ್ಟಲಿಂಗದ ಷಡ್ವಿಧ ಸ್ಥಾನಗಳಲ್ಲಿ ಸಂಬಂಧ ಮಾಡಿಕೊಂಡ. ಭಕ್ತಿಜ್ಞಾನವೈರಾಗ್ಯದಿಂದಾಚರಿಸುತ್ತ ಜಪಗಳ ಮೂಲಕ ಲಿಂಗಸಂಬಂಧ ಮಾಡಿಕೊಂಡಲ್ಲಿ ಲಿಂಗವು ತನ್ನಲ್ಲಿ ಪ್ರಕಟವಾಗುತ್ತದೆ. ಜಪಗಳ ಕಾರ್ಯವು ಇದೇ ಇರುತ್ತದೆ.

ಟೀಕು:— ಮೇಲ್ಕಂಡ ವಿವರಣೆಗಳಲ್ಲಿ ಮಂತ್ರಗಳ ಜಪದಲ್ಲಿ ಒಂದು ವ್ಯವಸ್ಥೆ ಇದ್ದದ್ದು ವಾಚಕರಿಗೆ ಕಂಡುಬರದೆ ಇರಲಾರದು. ನ, ಮ, ಶಿ, ವಾ, ಯ, ಓಂ ಇವು ಕ್ರಮವಾಗಿ ಸ್ಥೂಲದಿಂದ ಹೆಚ್ಚು ಹೆಚ್ಚು ಸೂಕ್ಷ್ಮವಾಗಿರುವದರಿಂದ ಇವು ಅನುಕ್ರಮವಾಗಿ ಆಚಾರಲಿಂಗ ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳಿಗೆ ಸಂಬಂಧಿಸುತ್ತವೆ ಈ ಆರು ಅನುಕ್ರಮವಾಗಿ ಇಷ್ಟ, ಪ್ರಾಣ, ಭಾವಲಿಂಗಗಳಿಂದ ಎರಡೆರಡರಂತೆ ಉಂಟಾಗಿವೆ. ಇವು ಮೂರು ಅ ಉ ಮ ಪ್ರಣವಗಳಿಂದಾಗಿವೆ. ಈ ತ್ರಿವಿಧಗಳು ಸೂಕ್ಷ್ಮವಾದವು. ಅವು ಇಷ್ಟ ಪ್ರಾಣ ಭಾವಲಿಂಗಗಳನ್ನು ಸೂಚಿಸುತ್ತವೆ. ಮತ್ತು ಈ ತ್ರಿವಿಧ ಲಿಂಗಗಳ ತರುವಾಯ ಶೂನ್ಯಲಿಂಗಗಳು ಬರುತ್ತವೆ. ಇವು ಬ, ಸ, ವ ಪ್ರಣವಗಳಿಂದ ಸೂಚಿತವಾಗುತ್ತವೆ. ಈ ತತ್ವವನ್ನನುಸರಿಸಿ ಎಲ್ಲ ಜಪಗಳ ರಚನೆ ಇರುತ್ತದೆ. ಈ ಪ್ರಣವಗಳನ್ನು ಆಯಾ ಲಿಂಗಗಳಿಗೆ ಸಂಬಂಧಿಸುವಲ್ಲಿ ಹ್ರಾಂ, ಹ್ರೀಂ ಹ್ರೂಂ, ಹ್ರೈಂ ಹ್ರೌಂ ಹ್ರಃ ಎಂಬ ಷಟ್ ಪ್ರಸಾದ ಮಂತ್ರವು ಅಥವಾ ಕೀಲಕಮಂತ್ರವು ಉಪಯೋಗಿಸಲ್ಪಡುತ್ತದೆ. ಈ ತತ್ವಗಳನ್ನು ಎಲ್ಲ ಮಂತ್ರಗಳಲ್ಲಿಯೂ ಕಾಣಬಹುದು. ಒಮ್ಮೊಮ್ಮೆ ಈ ಮಂತ್ರಾಕ್ಷರಗಳನ್ನು ಏಕಕಾಲಕ್ಕೆ ಗೋಚರಕ್ಕೆ ತಂದುಕೊಂಡು ಯಾವ ವಿಶಿಷ್ಟಲಿಂಗವನ್ನು ನಾವು ಉದ್ದೇಶಿಸಿಕೊಂಡಿರುತ್ತೇವೆಯೋ ಅದನ್ನಷ್ಟೇ ಕಡೆಗೆ ಅಂದುಬಿಡುವ ಪದ್ಧತಿಯೂ ಉಂಟು. (ನಂ॥ ೨೮೫—೨ನೇ ವಿಧ ನೋಡಿರಿ.) ಆದರೆ ಇದರಿಂದ ಮೂಲತತ್ವಕ್ಕೆ ಯಾವದೂ ವ್ಯತ್ಯಯ ಬರುವದಿಲ್ಲ. ಜಪಗಳ ಸಂಖ್ಯೆಯು ಆಯಾಚಕ್ರಗಳ ದಳಗಳ ಮೇಲೆ ಅವಲಂಬಿಸಿರುತ್ತದೆ. ದಳಗಳಲ್ಲೆಲ್ಲ ರುದ್ರರೂ ಶಕ್ತಿಯರೂ ವಾಸಮಾಡುತ್ತಾರೆ. ಅವರ ಸಂಗಮದಿಂದ ಆಯಾ ಚಕ್ರಗಳಲ್ಲಿ ಕೆಲವೊಂದು ಲೈಂಗಿಕ ಶಕ್ತಿಯು ಉಂಟಾಗುತ್ತದೆ. ಈ ಶಕ್ತಿಯಲ್ಲಿಯೇ ಆಯಾ ಲಿಂಗಗಳು ನೆಲೆಗೊಂಡಿರುತ್ತವೆ. ಹೀಗೆ ಆಯಾ ಲಿಂಗಗಳು ನೆಲೆಗೊಳ್ಳಲು, ಆ ಲಿಂಗ

ಗಳ ಅಧೀನದಲ್ಲಿಯೇ ಮನುಷ್ಯನ ಕಾರ್ಯಗಳು ಜರಗಹತ್ತುವವು. ಆಗ ಅವನಲ್ಲಿ ಒಂದು ಅಲೌಕಿಕ ಶಕ್ತಿಯು ಉತ್ಪನ್ನವಾಗುತ್ತದೆ ಶಿವ ಶರಣರಲ್ಲಿ ಇಂಥ ಶಕ್ತಿಯು ಇರುತ್ತದೆ. ಆದರೆ ಅವರು ಅದನ್ನು ಆತ್ಮೋದ್ಧಾರಕ್ಕೆ ಮತ್ತು ಜನ ಸೇವೆಗೆ ಉಪಯೋಗ ಮಾಡತಕ್ಕದ್ದೇ ಹೊರತು ಸ್ವಾರ್ಥಕ್ಕೆ ಅಥವಾ ದುಷ್ಟ ಕಾರ್ಯಗಳಿಗೆ ಉಪಯೋಗಿಸತಕ್ಕದ್ದಲ್ಲ. ಹೀಗೆ ಜಪಗಳು ಮನುಷ್ಯನ ಕ್ರಿಯೆಗಳಲ್ಲಿ, ನಡೆಯಲ್ಲಿ, ಕಾಯಕದಲ್ಲಿ ಸಹಾಯಕವಾಗುತ್ತದೆ.

(೨೯೮) ಜಪದ ಕಟ್ಟಳೆ:— ಒಂದು ಉಶ್ವಾಸನಿಶ್ವಾಸಕ್ಕೆ ಒಂದು ಜಪವಿರುತ್ತದೆ. ಇಂಥ ಒಂಬತ್ತು ಉಶ್ವಾಸನಿಶ್ವಾಸಗಳಾದಲ್ಲಿ ಚಿಟ್ಟೆ ಎಂಬ ಹೆಸರಿದೆ. ತಾಸಿಗೆ ೯೦೦ ಜಪಗಳಾಗತಕ್ಕದ್ದು. ಅಂದರೆ ಒಂದು ಮಿನಿಟಿಗೆ ೧೫ ಜಪಗಳ ಪ್ರಮಾಣವಿರುತ್ತದೆ. ತಾಸಿಗೆ ೯೦೦ ಜಪದಂತೆ ೨೪ ತಾಸಿಗೆ ೨೧೬೦೦ ಜಪಗಳಾಗುತ್ತವೆ. ಇದು ಜಪದ ಕಟ್ಟಳೆ.

(೨೯೯) ಮಿಶ್ರಾರ್ಪಣವು:— ಅಂತರಂಗ ಬಹಿರಂಗದಲ್ಲೆಲ್ಲ ಲಿಂಗ ದೊಡಗೂಡಿರುವುದೇ ಮಿಶ್ರಾರ್ಪಣವು. ಅಷ್ಟಾವರಣಗಳನ್ನು ತಿಳಿದವರಿಗೆ ಮಾತ್ರ ಇದು ಸಾಧ್ಯವು. ಇದರಲ್ಲಿ ಕಾಯಾರ್ಪಣ, ಕರಣಾರ್ಪಣ ಭಾವಾರ್ಪಣವೆಂದು ಮೂರು ವಿಭಾಗಗಳಿವೆ. ಕಾಯಾರ್ಪಣವು ಹಿಂದೆ ೧೬೦ (೧) ಇದರಲ್ಲಿ, ಕರಣಾರ್ಪಣವು ೧೬೦ (೨) ಇದರಲ್ಲಿ, ಭಾವಾರ್ಪಣವು ೧೬೦ (೩) ಇದರಲ್ಲಿ, ಹೇಳಲ್ಪಟ್ಟಿವೆ. ಕರಣಾರ್ಪಣದಲ್ಲಿ ಆಚಾರಲಿಂಗ ಮಿಶ್ರ ೬, ಗುರುಲಿಂಗ ಮಿಶ್ರ ೬, ಶಿವಲಿಂಗ ಮಿಶ್ರ ೬, ಜಂಗಮಲಿಂಗ ಮಿಶ್ರ ೬, ಪ್ರಸಾದಲಿಂಗ ಮಿಶ್ರ ೬, ಮಹಾಲಿಂಗ ಮಿಶ್ರ ೬, ಹೀಗೆ ೩೬ ವಿಭೇದಗಳಿವೆ. ಅವುಗಳ ವಿವರಗಳು ೧೬೦ (೨) ಇದರಲ್ಲಿ ಹೇಳಲ್ಪಟ್ಟಿವೆ. ಈ ಪ್ರಕಾರ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳೊಳಗೆ ಷಡ್ವಿಧಲಿಂಗ ಮಿಶ್ರಾರ್ಪಣವು ಪಸರಿಸಿ ಆ ೩೬ ಮಿಶ್ರಾರ್ಪಣದೊಳಗೆ ೨೧೬ ಮಿಶ್ರಾರ್ಪಣವು ಪಸರಿಸಿ ಲಿಂಗ ಪರಿಪೂರ್ಣನಾಗಿ ಪಿಂಡಾಂಡದಲ್ಲಿ ಸದಾ ಸನ್ನಿಹಿತನಾಗಿರುತ್ತಾನೆ. ಈ ಷಡ್ವಿಧ ಲಿಂಗಗಳು ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ, ಸದ್ಭಾವ, ಎಂಬ ಹಸ್ತಗಳು ತನ್ನಲ್ಲಿ ಸ್ವಸ್ಥವಾಗಿ ನೆಲೆಗೊಂಡಲ್ಲದೆ ಸಾಧ್ಯವಾಗವು. ಷಡ್ವಿಧ ಲಿಂಗವು ಸಾಧ್ಯವಾದಲ್ಲದೆ ಷಡ್ವಿಧಲಿಂಗಸಂಯೋಗವಾಗದು. ಷಡ್ವಿಧ

ಲಿಂಗ ಸಂಯೋಗವಾದಲ್ಲದೆ ಷಡ್ವಿಧಾರ್ಪಣದ ಮಿಶ್ರದೊಳಗಣ ಮಿಶ್ರಾರ್ಪಣದ ಛಾಯೆ ಕಾಣಿಸದು ಅದ್ದರಿಂದ ಹಸ್ತಗಳು ತನ್ನಲ್ಲಿ ನೆಲೆಗೊಳ್ಳುವ ರೀತಿಗಳನ್ನು ಅರಿಯಬೇಕು ಅದು ಹೇಗೆಂದರೆ:—

(೩೦೦) ಸುಚಿತ್ತದ ನೆಲೆ:- ಕ್ರಿಯಾಶಕ್ತಿಯ ಮಥನದಿಂದ ಪ್ರಾಣವಾಯುವನ್ನು ನಿಲಿಸಿ ಆಧಾರ ಚಕ್ರದ ಕೆಂಪುವರ್ಣದ ನಾಲ್ಕು ಅಕ್ಷರದ ಅಧಿ ದೈವವಾದ ಬ್ರಹ್ಮನ ಜಾಗ್ರತಾವಸ್ಥೆಯನ್ನು ನಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ಈ ಷಡ್ವಿಧ ವಿಚಾರವಿಡಿದು ಸದ್ಭಕ್ತಿಯಿಂದ ಒಂದನೇ ತತ್ವದಾದಿಯ ಪಶ್ಚಿಮ ದಿಕ್ಕಿನ ಸದ್ಯೋಜಾತ ಮುಖವನ್ನರಿತು ಪೃಥ್ವಿಯ ಕಠಿಣವನು ಕಿಂಕುರ್ವಾಣ ಭಕ್ತಿಯಿಂದ ತಿಳಿದು ತನುಗುಣನಾಸ್ತಿಯಾಗಬೇಕು. ಹೀಗೆ ಭಕ್ತಸ್ಥಲವನಂಗಂಗೊಳ್ಳಬೇಕು. ಇದು ಸುಚಿತ್ತದ ನೆಲೆಯು. ಇದರಿಂದ ಆಚಾರಲಿಂಗದ ಮಿಶ್ರವನ್ನರಿಬೇಕು.

(೩೦೧) ಸುಬುದ್ಧಿಯ ನೆಲೆ:—ಜ್ಞಾನ ಶಕ್ತಿಯ ಮಥನದಿಂದ ಅಪಾನವಾಯುವ ನಿಲಿಸಿ ಸ್ವಾಧಿಷ್ಠಾನ ಚಕ್ರದ ನೀಲವರ್ಣದ ಷಡ್ದಳದ ಆರಕ್ಷರದ ಅಧಿದೈವವಾದ ವಿಷ್ಣು ಆತನ ಸ್ವಪ್ನಾವಸ್ಥೆಯನ್ನು ಮಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ತಿಳಿದು ನೈಷ್ಠಿಕಾಭಕ್ತಿಯಿಂದ ಎರಡನೆಯ ತತ್ವದಾದಿಯ ಉತ್ತರ ದಿಕ್ಕಿನ ವಾಮದೇವಮುಖವನರಿತು ಅಪ್ಪುವಿನ ಮೃದುವನು ದೃಢವ್ರತದಿಂದ ತಿಳಿದು ಸಂಸಾರನಾಸ್ತಿಯಾಗಬೇಕು. ಹೀಗೆ ಮಹೇಶ್ವರ ಸ್ಥಲವನಂಗಂಗೊಳ್ಳಬೇಕು. ಇದು ಸುಬುದ್ಧಿಯ ನೆಲೆಯು. ಇದರಿಂದ ಗುರುಲಿಂಗದ ಮಿಶ್ರವನ್ನರಿಯಬೇಕು.

(೩೦೨) ನಿರಹಂಕಾರದ ನೆಲೆ: — ಇಚ್ಛಾ ಶಕ್ತಿಯ ಮಥನದಿಂದ ವ್ಯಾನವಾಯುವ ನಿಲಿಸಿ ಮಣಿಪೂರಕ ಚಕ್ರದ ಕುಂಕುಮ ವರ್ಣದ ದಶದಳದ ಅಧಿದೈವ ರುದ್ರ ಆತನ ಸುಷುಪ್ತಾವಸ್ಥೆಯನ್ನು ಶಿಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರವಿಡಿದು ಅವಧಾನ ಭಕ್ತಿಯಿಂದ ಮೂರನೆಯ ತತ್ವದಾದಿಯಾದ ದಕ್ಷಿಣ ದಿಕ್ಕಿನ ಅಘೋರ ಮುಖವನರಿದು ಅಗ್ನಿಯ ಉಷ್ಣವನ್ನು ಶಿವಯೋಗದಿಂದ ಕೆಡಿಸಿ ಕಾವ್ಯನಾಸ್ತಿಯಾಗಬೇಕು. ಹೀಗೆ ಪ್ರಸಾದಿಸ್ಥಲವನಂಗಂಗೊಳ್ಳಬೇಕು. ಇದು ನಿರಹಂಕಾರದ ನೆಲೆಯು. ಇದರಿಂದ ಶಿವಲಿಂಗದ ಮಿಶ್ರವನ್ನರಿಯಬೇಕು.

(೩೦೩) ಸುಮನದ ನೆಲೆಃ- ಆದಿಶಕ್ತಿಯು ಮಥನದಿಂದ ಉದಾನ ವಾಯುವ ನಿಲಿಸಿ ಅನಾಹತ ಚಕ್ರದ ಪೀತವರ್ಣದ ದ್ವಾದಶ ದಳದ ದ್ವಾದಶಾಕ್ಷರದ ಅಧಿದೈವ ಈಶ್ವರನ ತೂರ್ಯಾವಸ್ಥೆಯನು ವಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ಈ ಷಡ್ವಿಧ ವಿಚಾರವಿಡಿದು ಅನುಭಾವ ಭಕ್ತಿಯಿಂದ ನಾಲ್ಕನೆಯ ತತ್ವದಾದಿಯಾದ ಪೂರ್ವ ದಿಕ್ಕಿನ ತತ್ಪುರುಷ ಮುಖವನರಿದು ವಾಯುವಿನ ಚಲನೆಯನು ಪರಿಪೂರ್ಣದಿಂದ ಕೆಡಿಸಿ ಗಮನನಾಸ್ತಿಯಾಗಬೇಕು. ಹೀಗೆ ಪ್ರಾಣಲಿಂಗ ಸ್ಥಲವನಂಗಂಗೊಳ್ಳಬೇಕು. ಇದು ಸುಮನದ ನೆಲೆಯು. ಇದರಿಂದ ಜಂಗಮ ಲಿಂಗದ ಮಿಶ್ರವನ್ನರಿಯಬೇಕು.

(೩೦೪) ಸುಜ್ಞಾನದ ನೆಲೆಃ- ಪರಾಶಕ್ತಿಯು ಮಥನದಿಂದ ಸಮಾನ ವಾಯುವ ನಿಲಿಸಿ ವಿಶುದ್ಧಿ ಚಕ್ರದ ಶ್ವೇತವರ್ಣದ ಷೋಡಶದಳದ ಷೋಡಶಾಕ್ಷರದ ಅಧಿದೈವ ಸದಾಶಿವನ ಅತೀತಾವಸ್ಥೆಯನ್ನು ಯಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರವಿಡಿದು ಆನಂದ ಭಕ್ತಿಯಿಂದ ಐದನೆಯ ತತ್ವದಾದಿಯ ಊರ್ಧ್ವ ದಿಕ್ಕಿನ ಈಶಾನ್ಯವನರಿದು ಆಕಾಶದ ಭ್ರಮೆಯನು ಪರಿಣಾಮದಿಂದ ತಿಳಿದು ಕರ್ಮನಾಸ್ತಿಯಾಗಬೇಕು. ಹೀಗೆ ಶರಣಸ್ಥಲವನಂಗಂಗೊಳ್ಳುವದು ಸುಜ್ಞಾನದ ನೆಲೆಯು. ಇದರಿಂದ ಪ್ರಸಾದಲಿಂಗದ ಮಿಶ್ರವನ್ನರಿಯಬೇಕು.

(೩೦೫) ಸದ್ಭಾವದ ನೆಲೆಃ- ಚಿತ್ ಶಕ್ತಿಯು ಮಥನದಿಂದ ನಾಗ ಕೂರ್ಮ ಕ್ರಕರ ದೇವದತ್ತ ಧನಂಜಯುವೆಂಬ ಪಂಚವಾಯುಗಳನ್ನು ನಿಲಿಸಿ ಆಜ್ಞಾಚಕ್ರದ ಮಾಣಿಕ್ಯವರ್ಣದ ದ್ವಿದಳದ ಹಂ ಕ್ಷಂ ಎಂಬೆರಡು ಅಕ್ಷರದ ಅಧಿದೈವ ಮಹಾಗುರುವಿನ ನಿರಾವಸ್ಥೆಯನು ಓಂಕಾರವೆಂಬ ಬೀಜಾಕ್ಷರದಿಂದ ತಿಳಿಯಬೇಕು. ತಿಳಿದು ಷಡ್ವಿಧ ವಿಚಾರವಿಡಿದು ಸಮರಸ ಭಕ್ತಿಯಿಂದ ಆರನೆಯ ತತ್ವದಾದಿಯ ಗಂಭೀರ ದಿಕ್ಕಿನ ಮಹಾತತ್ವದ ಮುಖವನರಿದು ಆತ್ಮನ ಅಹಂ ಮಮತೆಯನು ಘನ ಪ್ರಕಾಶದಿಂದ ತಿಳಿದು ಮೋಕ್ಷಾರ್ಥನಾಸ್ತಿಯಾಗಬೇಕು. ಇದು ಐಕ್ಯ ಸ್ಥಲವನಂಗಂಗೊಳ್ಳುವದು. ಇದು ಸದ್ಭಾವದ ನೆಲೆಯು. ಇದರಿಂದ ಮಹಾಲಿಂಗದ ಮಿಶ್ರವನ್ನರಿಯಬೇಕು.

# ಶಿವಾನುಭವ.

ವರ್ಷ ೧೭ | ಅಕ್ಟೋಬರ ೧೯೪೨. | ಸಂಚಿಕೆ ೧

## ಆತ್ಮ ನಿವೇದನ.

**ಶಿವಾನುಭವ** ಪತ್ರಿಕೆಯನ್ನು ಪ್ರಾರಂಭಿಸಿ ಇಂದಿಗೆ ೧೬ ವರ್ಷಗಳಾದವು. ಅದರ **೧೭ನೆಯ ವರ್ಷವು** ಈಗಿನ ಸಂಚಿಕೆಯಿಂದ ಪ್ರಾರಂಭವಾಗುತ್ತದೆ. ಈ ಅವಧಿಯಲ್ಲಿ ಇದರ ಕಾರ್ಯಗಳು ಯಾವಾಗಲೂ ನಿಂತಿಲ್ಲೆಂಬುದು ವಾಚಕರ ಲಕ್ಷಕ್ಕೆ ಬಂದಿರದೆ ಇರಲಾರದು. ಇದರ ಮೊದಲನೆಯ ಸಂಚಿಕೆಯು ೧೯೨೬ ಫೇಬ್ರುವರಿ ತಿಂಗಳಿನಲ್ಲಿ ಪ್ರಕಟಿಸಲ್ಪಟ್ಟಿತು. ಅಂದಿನಿಂದ ಅದು ತನ್ನ ಉದ್ದೇಶಕ್ಕನುಸರಿಸಿಯೇ ಶಕ್ಯವಿದ್ದಷ್ಟು ಕಾರ್ಯ ಮಾಡುತ್ತ ಬಂದಿದೆ. ಈ ನಮ್ಮ ಕಾರ್ಯದಲ್ಲಿ ಅನೇಕ ಮಹನೀಯರು ಅತ್ಯಂತ ಸಹಾನುಭೂತಿಯುಳ್ಳವರಾಗಿ ನಮಗೆ ಯಾವಾಗಲೂ ಪ್ರೋತ್ಸಾಹಿಸುತ್ತ ಬಂದಿದ್ದಾರೆ. ಅವರಿಗೆ ನಾವು ಬಹಳ ಆಭಾರಿಯಾಗಿದ್ದೇವೆ. ಹಾಗೆಯೇ ಅನೇಕ ಲೇಖಕರು ತಮ್ಮ ವಿದ್ವತ್ಪರಿಪೂರ್ಣವಾದ ಲೇಖಗಳನ್ನು ಕಳಿಸುತ್ತ ಪತ್ರಿಯ ಯೋಗ್ಯತೆಯನ್ನು ಹೆಚ್ಚಿಸಲು ಕಾರಣರಾಗಿದ್ದಾರೆ. ಇವರಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ. ವಾಙ್ಮಯ ಸಂಶೋಧನವೇ ಈ ಪತ್ರಿಯ ಮುಖ್ಯ ಉದ್ದೇಶವಾಗಿದೆ. ಈ ಉದ್ದೇಶಕ್ಕನುಸರಿಸಿ ಅನೇಕ ಮಹನೀಯರು ವಿವಿಧ ವಿಷಯಗಳ ಬಗ್ಗೆ ತಮ್ಮ ಸಂಶೋಧನಗಳನ್ನು ಈ ಪತ್ರಿಕೆಯ ದ್ವಾರಾ ಪ್ರಕಟಿಸಿರುವರು. ಅವರೆಲ್ಲರಿಗೂ ನಾವು ವಂದನೆಗಳನ್ನು ಅರ್ಪಿಸುತ್ತೇವೆ.

ವೀರಶೈವ ಧರ್ಮವು ಕರ್ನಾಟಕದಲ್ಲಿ ಸಾಮಾಜಿಕ, ಧಾರ್ಮಿಕ, ಮತ್ತು ವಾಙ್ಮಯ ವಿಷಯಗಳಲ್ಲಿ ಒಂದು ಮಹತ್ತಾದ ಕ್ರಾಂತಿಯನ್ನುಂಟು

ಮಾಡಿದೆ. ಇದರ ಇತಿಹಾಸವು ಇನ್ನೂ ಪೂರ್ಣವಾಗಿ ಸಂಶೋಧಿಸಲ್ಪಟ್ಟಿಲ್ಲ. ಈ ಕಾರ್ಯವನ್ನು ನಾವು ಶಕ್ಯವಿದ್ದಷ್ಟರ ಮಟ್ಟಿಗೆ ನಾವು ಈ ಪತ್ರಿಕೆಯ ಮೂಲಕ ನಡಿಸುತ್ತ ಬಂದಿರುತ್ತೇವೆ. ಪತ್ರಿಕೆಯನ್ನು ನಾವು ಆರಂಭಿಸುವಾಗ ನಾವು ಪ್ರಕಟ ಮಾಡಿದ ಉದ್ದೇಶವನ್ನು ನಾವು ಕೆಳಗೆ ಕಾಣಿಸಿದ್ದೇವೆ. ಅದನ್ನೇ ನಾವು ಯಾವಾಗಲೂ ನಮ್ಮ ಮುಖ್ಯ ಗುರಿಯಾಗಿಟ್ಟುಕೊಂಡು ಕಾರ್ಯ ಮಾಡುತ್ತ ಬಂದಿದ್ದು ವಾಚಕರ ಲಕ್ಷಕ್ಕೆ ಬರದೆ ಇರಲಾರದು. ಆದರೆ ಇದು ಕೊನೆಗಾಣಬೇಕಾದರೆ ಪತ್ರಿಕೆಗೆ ಪೋಷಕ ವರ್ಗವು ಇನ್ನೂ ಬಹಳ ಹೆಚ್ಚಾಗಬೇಕಾಗಿದೆ. ಇದರಲ್ಲಿ ನಮಗೆ ಅನೇಕ ಕಷ್ಟನಷ್ಟಗಳುಂಟಾಗಿದ್ದರೂ ಕೂಡ ಈ ಕಾರ್ಯವನ್ನು ನಾವು ಮುಂದುವರಿಸುತ್ತ ಬಂದಿದ್ದೇವೆ. ಆದ್ದರಿಂದ ವಾಚಕರು ಈ ಕಾರ್ಯದಲ್ಲಿ ನಮಗೆ ಹೆಚ್ಚಾಗಿ ಸಹಾಯವನ್ನು ಮಾಡಿದಲ್ಲಿ ಈ ಪತ್ರಿಕೆಯು ಈಗಿನಕಿಂತಲೂ ಎಷ್ಟೋ ಪಾಲು ಹೆಚ್ಚು ಸಮಾಜ ಸೇವೆಯನ್ನು ಮಾಡಲಿಕ್ಕೆ ಅದಕ್ಕೆ ಸಾಧ್ಯವಾಗುವದೆಂದು ನಾವು ನಮ್ಮ ವಾಚಕರಿಗೆ ನಮ್ರಪೂರ್ವಕವಾಗಿ ನಿವೇದನೆ ಮಾಡಿಕೊಳ್ಳುತ್ತೇವೆ.

## ಪತ್ರಿಕೆಯ ಉದ್ದೇಶ.

(೧ನೇ ಸಂಪುಟ ೧ನೇ ಸಂಚಿಕೆಯಲ್ಲಿ ಪ್ರಕಟವಾದುದು.)

"ಶಿವಾನುಭವ ಪತ್ರಿಕೆಯ ಉದ್ದೇಶವು ವೀರಶೈವ ಧರ್ಮದಲ್ಲಿಯ ಧರ್ಮ ಗ್ರಂಥಗಳನ್ನು ಪ್ರಸಿದ್ಧಪಡಿಸುವದೇ ಮುಖ್ಯವಾಗಿರುತ್ತದೆ. ಈ ಉದ್ದೇಶದಿಂದ ಹೊರಡಿಸಲ್ಪಟ್ಟ ಪತ್ರಿಕೆಗಳಾಗಲಿ, ಇಲ್ಲವೆ ಪುಸ್ತಕ ಮಾಲಿಕೆಗಳಾಗಲಿ, ಈಗ ಯಾವವೂ ಇರುವದಿಲ್ಲ. ಕೈ. ವಾ. ರಾವಬಹಾದ್ದೂರ ಮಲ್ಲಪ್ಪಾ ವಾರದ ಇವರು ಬಹಳ ಹಣ ವ್ಯಯ ಮಾಡಿ ಅನೇಕ ಧಾರ್ಮಿಕ ಗ್ರಂಥಗಳನ್ನು ಮೊದಲು ಹೊರಪಡಿಸಿದರು. ಅವರ ಪ್ರಯತ್ನಗಳಿಂದ ಅನೇಕ ಧಾರ್ಮಿಕ ಗ್ರಂಥಗಳು, ಅದರಲ್ಲಿ ವಿಶೇಷವಾಗಿ ಸಂಸ್ಕೃತ ಗ್ರಂಥಗಳು ಹೊರಬಿದ್ದವು. ಅವರು ಮಾಡಿದ ಕಾರ್ಯವು ಚಿರಸ್ಮರಣೀಯವಾಗಿದೆ. ತರುವಾಯ ಕೈ. ವಾ. ಎನ್. ಆರ್. ಕರಿಬಸವಶಾಸ್ತ್ರಿಗಳು ಈ ಮಹತ್ವದ ಕಾರ್ಯವನ್ನು ಕೈಕೊಂಡು 'ವೀರಶೈವ ಗ್ರಂಥ ಪ್ರಕಾಶಿಕಾ' ಎಂಬ ಹೆಸರಿನಿಂದ ಒಂದು ಮಾಸಪತ್ರಿಕೆಯನ್ನು

ಹೊರಡಿಸಹತ್ತಿದರು. ಇದರ ದ್ವಾರಾ ಅನೇಕ ಸಂಸ್ಕೃತ, ಮತ್ತು ಕನ್ನಡ ಉದ್ಗ್ರಂಥಗಳು ಪ್ರಕಾಶಿತವಾದವು. ಆದರೆ ಈಚೆಗೆ ಇಂಥ ಗ್ರಂಥ ಪ್ರಕಾಶನದ ಕಾರ್ಯಗಳು ತೀರ ನಿಂತು ಹೋಗಿವೆ. ನಿಜವಾಗಿ ವೀರ ಶೈವ ವಾಙ್ಮಯವು ಬಹು ದೊಡ್ಡದದೆ ಮತ್ತು ನಾನಾವಿಧವುಳ್ಳದ್ದು ಇದೆ. ಇದನ್ನು ಪ್ರಕಟಪಡಿಸಲು ಪ್ರಯತ್ನಗಳು ವೀರಶೈವ ಸಮಾಜದಿಂದ ಎಡೆಬಿಡದೆ ನಡಿಯದೆ ಹೋದರೆ, ಅದರ ನಿಜವಾದ ಹೆಚ್ಚಳಕ್ಕೆ ಕುಂದಕ ಉಂಟಾಗದೆ ಇರಲಾರದು. ಇದನ್ನು ಕೆಲಮಟ್ಟಿಗಾದರೂ ದೂರ ಮಾಡುವ ಉದ್ದೇಶದಿಂದ ನಾನು ಈಗಿನ ಪತ್ರಿಕೆಯನ್ನು ಪ್ರಾರಂಭಿಸಿದ್ದೇನೆ.

ಈ ಪತ್ರಿಕೆಯ ದ್ವಾರಾ ಗ್ರಂಥ ಪ್ರಕಾಶನದ ಕಾರ್ಯವನ್ನಷ್ಟೇ ಅಲ್ಲ, ವೀರಶೈವ ಸಮಾಜದ ಧಾರ್ಮಿಕ, ರಾಜಕೀಯ, ಸಾಮಾಜಿಕ ಇತಿಹಾಸವನ್ನೂ ಸಹ ಆದಷ್ಟು ಮಟ್ಟಿಗೆ ಶೋಧಿಸಿ, ಪ್ರಕಟ ಮಾಡುವ ಕಾರ್ಯವನ್ನೂ ಕೂಡ ಕೈಕೊಳ್ಳಬೇಕೆಂದು ನಮ್ಮ ಉದ್ದೇಶವಿರುತ್ತದೆ. ವೀರಶೈವ ಸಮಾಜದಲ್ಲಿ ಬಹು ಪುರಾತನ ಕಾಲದಿಂದಲೂ ಅನೇಕ ಸಾಧುಸತ್ಪುರುಷರೂ ಧರ್ಮಪ್ರವರ್ತಕರೂ ಉತ್ಪನ್ನರಾಗಿ, ಅವರು ಕರ್ನಾಟಕದಲ್ಲಿ ಅತ್ಯುಜ್ವಲವಾದ ಧರ್ಮ ಪ್ರಭೆಯನ್ನು ಬೀರಿದ್ದಾರೆ. ಅವರ ಕೃತಿಗಳನ್ನು ಕರ್ನಾಟಕಸ್ಥರು ಅರಿಯುವದು ಅತ್ಯಂತಾವಶ್ಯಕವು. ಅದರಂತೆಯೇ ವೀರಶೈವರಲ್ಲಿ ಅನೇಕ ಶೂರ ರಾಜಮನೆತನಗಳು ಉದ್ಭವಿಸಿವೆ. ಹಿಂದುತ್ವದ ರಕ್ಷಣೆಯ ಹೊಡೆದಾಟದಲ್ಲಿ ಕರ್ನಾಟಕ ರಾಜ್ಯಗಳು ಯಾವ ಯಾವ ಮಹತ್ಕಾರ್ಯಗಳನ್ನು ಕೈಕೊಂಡವೋ ಅವುಗಳಲ್ಲಿ ಈ ಮನೆತನಗಳವರು ಯಾವ ತರದ ಸಹಾಯವನ್ನು ಮಾಡಿದರು ಎಂಬದನ್ನೂ ಸಹ ಶೋಧಿಸಿ ಪ್ರಕಟಿಸುವದು ಬಹಳ ಅವಶ್ಯವಾಗಿದೆ. ಹೀಗೆ ನಮ್ಮ ಸಮಾಜದಲ್ಲಿ ಶೋಧಪಡಿಸತಕ್ಕ ಸಂಗತಿಗಳು ಅನೇಕವಿವೆ. ಮತ್ತು ಅವುಗಳ ಸಾಧನಗಳಾದರೂ ಇನ್ನೂ ಬಹಳ ಮಟ್ಟಿಗೆ ಉಪಲಬ್ಧವಿದೆ. ಈ ತರದ ಸಂಶೋಧನೆಯ ಕಾರ್ಯದಲ್ಲಿ ಕರ್ನಾಟಕಸ್ಥರನ್ನೂ ಅದರಲ್ಲಿ ವಿಶೇಷವಾಗಿ ವೀರಶೈವ ಸುಶಿಕ್ಷಿತರನ್ನೂ ತತ್ಪರಗೊಳಿಸಿ ಅವರನ್ನು ಶೋಧನೆಯ ಕಾರ್ಯಗಳಿಗೆ ಪ್ರೋತ್ಸಾಹಿಸುವದಾದರೂ ಈ ಪತ್ರಿಕೆಯ ಎರಡನೆಯ ಮುಖ್ಯ ಉದ್ದೇಶವಿರುತ್ತದೆ.

ಶ್ರೀ ಬಸವೇಶ್ವರನು ಹಿಂದುಸ್ತಾನದಲ್ಲಿ ಈ ವರೆಗೆ ಆಗಿ ಹೋದ ಧರ್ಮ ಸುಧಾರಕರಲ್ಲಿ ಅಗ್ರಗಣ್ಯನಾಗಿರುತ್ತಾನೆ. ಯಾವ ಕಾಲಕ್ಕೆ ಕರ್ನಾ

ಟಕದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಯು ಮಸುಳಿಸಿ ಹೋಗಿತ್ತೋ, ಆಗ ಆತನು ಉತ್ಪನ್ನನಾಗಿ ಅದರ ಪ್ರಭಾವವನ್ನು ಅಲ್ಲಿ ಸ್ಥಿರಗೊಳಿಸಿದನು. ಅವನು ಹರಡಿದ ವಿಚಾರಗಳು ಅಸ್ಪೃಶ ವರ್ಣದವರಿಂದ ಮೇಲಿನ ವರ್ಣದವರ ವರೆಗೂ ರೋಮರೋಮಗಳಲ್ಲಿ ಸಂಧಿಸಿ ಹೋದದ್ದರಿಂದ, ಅವರೆಲ್ಲರಲ್ಲಿ ಒಂದು ತರದ ರಾಷ್ಟ್ರೀಯ ಭಾವನೆಯು ಉತ್ಪನ್ನವಾಗಲಿಕ್ಕೆ ಕಾರಣವಾಯಿತು. ಇದರ ಪ್ರಭಾವದಿಂದ ಅಸಂಖ್ಯ ಗ್ರಂಥಕಾರರು ಉತ್ಪನ್ನರಾದರು. ಮತ್ತು ಅವರು ತಮ್ಮ ಉಜ್ವಲ ವಿಚಾರಗಳನ್ನು ನಾನಾಬಗೆಯ ವಚನಗಳಿಂದ ನುಡಿದು ತೋರಿಸಿದರು. ಅವರು ರಚಿಸಿದ ಈ ವಚನಗಳ ಸಮುದಾಯವು ಅಪಾರವಾಗಿರುತ್ತದೆ. ಈ ವಚನಗಳು ಎಷ್ಟು ಪ್ರಾಸಾದಿಕವೂ, ಉದಾತ್ತ ವಿಚಾರದವೂ ಇರುತ್ತವೆಂಬುದು ನಾನು ಗ್ರಥಿಸಿದ "ವಚನ ಶಾಸ್ತ್ರಸಾರ" ಎಂಬ ಗ್ರಂಥದಿಂದ ಕೆಲಮಟ್ಟಿಗೆ ವಾಚಕರಿಗೆ ತಿಳಿದು ಬರುವಂತೆ ಇದೆ. ಇಂಥ ವಾಙ್ಮಯವು ಯಾವ ಭಾಷೆಯಲ್ಲಿದ್ದರೂ ಅದಕ್ಕೆ ಅದು ಗೌರವವನ್ನು ಕೊಡದೆ ಇರಲಾರದು. ಇಂಥ ಶ್ರೇಷ್ಠವಾದ ವಾಙ್ಮಯವನ್ನು ಅಚ್ಚುಗೊಳಿಸಿ ಪ್ರಸಿದ್ಧಿಸುವದು ನಮ್ಮ ಕರ್ನಾಟಕಸ್ಥರ, ಅದರಲ್ಲಿ ವಿಶೇಷವಾಗಿ ಲಿಂಗಾಯತರ, ಕರ್ತವ್ಯವಾಗಿದೆ. ಈ ಉದ್ದೇಶವನ್ನು ಮುಂದಿಟ್ಟುಕೊಂಡು ಅನೇಕ ವಚನ ಗ್ರಂಥಗಳನ್ನು ಈ ಶಿವಾನುಭವದಲ್ಲಿ ನಾವು ಕ್ರಮೇಣ ಪ್ರಕಟಪಡಿಸುತ್ತ ಹೋಗುವೆವು. ಈ ತರದ ವಾಙ್ಮಯಕ್ಕೆ ಕಾರಣೀಭೂತನಾದ ಶ್ರೀ ಬಸವೇಶ್ವರನ ವಚನಗಳನ್ನೇ ನಾವು ಮೊದಲು ಪ್ರಕಟಪಡಿಸುವೆವು. ಮುಂದೆ ಕ್ರಮವಾಗಿ ಬೇರೆ ಮಹತ್ವದ ವಚನಗಳನ್ನು ಇದರಲ್ಲಿ ಕೊಡುತ್ತಾ ಹೋಗುವೆವು.

ಲಿಂಗಾಯತ ಧರ್ಮವು ಬಹು ಜನ ಸಮಾಜವನ್ನು ಉಚ್ಚನೀಚ ಭಾವವನ್ನು ಎಳ್ಳಷ್ಟಾದರೂ ಮನಸ್ಸಿನಲ್ಲಿ ತಾರದೆ ಮೇಲಕ್ಕೆಬ್ಬಿಸಲು ಮುಂದುವರೆದದ್ದಿರುತ್ತದೆ. ಈ ಪ್ರಯತ್ನದಲ್ಲಿ ಅದು ಯಾವ ತರದ ಅಸಾಧು ಮಾರ್ಗವನ್ನು ಸ್ವೀಕರಿಸಲಿಲ್ಲ. ಜನರಲ್ಲಿ ಭಕ್ತಿ, ನೀತಿ, ತಿಳವಳಿಕೆ ಇವುಗಳನ್ನು ಹಬ್ಬಿಸಲಿಕ್ಕೆ ಯತ್ನಿಸಿ ಈ ಮಾರ್ಗದಿಂದಲೇ ಸಮಾಜದಲ್ಲಿ ಅತ್ಯುಚ್ಚ ಭಾವವನ್ನು ನೆಲೆಗೊಳಿಸಿರುತ್ತದೆ. ಈ ಮಾರ್ಗವನ್ನು ಇದು ಕೈಕೊಂಡಿರುವ ಕಾರಣ ಅದರ ಪ್ರವರ್ತಕರು ಹಗುರು ಭಾಷೆಯಲ್ಲಿಯೇ ತಮ್ಮ ವಿಚಾರಗಳನ್ನು ಪ್ರಕಟಿಸಲು ತೊಡಗಿದರು. ಈ ಉದ್ದೇ

ಶದಿಂದ ಅವರು ಮೊದಲಿನ ನಾನಾ ತರದ ವೃತ್ತಗಳು, ಕಂದ ಪದ್ಯಗಳು ಮೊದಲಾದ ಕ್ಲಿಷ್ಟ ಕವಿತಾ ಪದ್ಧತಿಗಳನ್ನು ಬಿಟ್ಟುಕೊಟ್ಟು, ಎಂಥ ಪಾಮರನಿಗಾದರೂ ಸುಲಭವಾಗಿ ತಿಳಿಯುವಂತೆ ನಾನಾ ಬಗೆಯ ಷಟ್ಪದಿಗಳನ್ನೂ, ತ್ರಿಪದಿಗಳನ್ನೂ, ಸಾಂಗತ್ಯಗಳನ್ನೂ, ರಗಳೆಗಳನ್ನೂ, ರಚಿಸಿರುವರು. ಈ ರಚನೆಗಳಾದರೂ ಬಹು ಸುಂದರವೂ ಪ್ರತಿಭಾಮಯವೂ ಇವೆ. ಆದರೆ ಈ ವಾಙ್ಮಯವು ಇನ್ನು ಅಜ್ಞಾತಾವಸ್ಥೆಯಲ್ಲಿ ಇದೆ. ಅದನ್ನು ಸಹ ಶೋಧಿಸಿ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುವ ಯತ್ನವು ಮಾಡಲ್ಪಡುವದು.

ಮೇಲ್ಕಂಡ ಗ್ರಂಥಗಳು ಕನ್ನಡದ ಮಾಧ್ಯಮಿಕ ಭಾಷಾಶೈಲಿಯಲ್ಲಿ ಬರೆಯಲ್ಪಟ್ಟಿರುತ್ತವೆ. ಆದ್ದರಿಂದ ಇವುಗಳು ಈಗಿನವರಿಗೆ ಅಷ್ಟು ಸುಗಮವಾಗಿರುವದಿಲ್ಲ. ಇವುಗಳ ಮರ್ಮಗಳನ್ನು ಅರಿಯಬೇಕಾದರೆ, ಈಗಿನ ಗದ್ಯಾತ್ಮಕ ಭಾಷೆಯಲ್ಲಿ ಅವುಗಳ ವಿಚಾರಗಳನ್ನು ಸುಲಭವಾಗಿ ವಿವರಿಸುವದು ಅತ್ಯಾವಶ್ಯಕವಾಗಿದೆ. ಆದ್ದರಿಂದ ಈ ತರದ ಲೇಖಗಳನ್ನೂ ಸಹ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸಲು ವ್ಯವಸ್ಥೆಯು ಮಾಡಲ್ಪಡುವದು.

ವೀರಶೈವ ಪೂರ್ವ ಪಂಡಿತರು ಹೇಗೆ ಕನ್ನಡ ಭಾಷೆಯಲ್ಲಿ ತಮ್ಮ ರಚನೆಗಳನ್ನು ಮಾಡಿದರೋ ಹಾಗೆಯೇ ಸಂಸ್ಕೃತ ಭಾಷೆಯಲ್ಲಿಯೂ ಮಾಡಿದ್ದಾರೆ. ಸಂಸ್ಕೃತ ಭಾಷೆಯು ಮೊದಲಿನ ಕಾಲಕ್ಕೆ ಹಿಂದುಸ್ಥಾನದ ಸಾರ್ವತ್ರಿಕ ಭಾಷೆಯು. ಆದ್ದರಿಂದ ಬೇರೆ ಬೇರೆ ನಾಡುಗಳಲ್ಲಿಯ ಪಂಡಿತರಿಗೂ ಸಹ ಮತತತ್ವಗಳನ್ನು ತಿಳಿಯಪಡಿಸಬೇಕೆಂದು, ಸಂಸ್ಕೃತದಲ್ಲಿಯೂ ಅನೇಕ ಗ್ರಂಥಗಳನ್ನು ವೀರಶೈವ ಪಂಡಿತರು ಬರೆದಿದ್ದಾರೆ. ಇವುಗಳನ್ನು ಸಹ ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುವ ಪ್ರಯತ್ನವು ಮಾಡಲ್ಪಡುವದು.

ಮೇಲ್ಕಂಡ ಕಾರ್ಯಗಳು ಎಷ್ಟು ಮಹತ್ವದವಿರುತ್ತವೆಂಬುದು ನಮ್ಮ ವಾಚಕರೆಲ್ಲರಿಗೂ ತಿಳಿಯದೆ ಇರಲಾರರು. ಆದ್ದರಿಂದ ಅವರು ನಮ್ಮ ಈ ಪ್ರಯತ್ನಕ್ಕೆ ಮನವಿಟ್ಟು ಸಹಾಯ ಮಾಡುವರೆಂದು ನಾವು ಅವರನ್ನು ಪ್ರಾರ್ಥಿಸುತ್ತೇವೆ. ಈ ಕಾರ್ಯದಲ್ಲಿ ವೀರಶೈವ ಸಮಾಜದಲ್ಲಿಯ ಪಂಡಿತರೂ, ಮಠಾಧಿಪತಿಗಳೂ, ಧನಿಕರೂ, ನಮಗೆ ಸಹಾಯ ಮಾಡುವದು ಅತ್ಯಾವಶ್ಯಕವಾಗಿದೆ. ಇವರ ಸಂಪೂರ್ಣ ಸಹಾ-

ಯವಿಲ್ಲದೆ ಈ ಮಹತ್ಕಾರ್ಯವು ಎಂದಿಗೂ ನೆರವೇರಲಾರದು. ಆದ್ದರಿಂದ ಈ ಕಾರ್ಯಕ್ಕೆ ಅವರು ತಮ್ಮಿಂದಾದಷ್ಟು ಸಹಾಯ ಮಾಡಿ ಪ್ರೋತ್ಸಾಹಿಸಬೇಕೆಂದು, ನಾವು ಅವರನ್ನು ವಿನಯಪೂರ್ವಕವಾಗಿ ಬಿನ್ನವಿಸಿಕೊಳ್ಳುತ್ತೇವೆ."

ಮೇಲೆ ಕಾಣಿಸಿದ ನಮ್ಮ ಆರಂಭದ ಉದ್ದೇಶಗಳಿಗನುಸರಿಸಿ ನಮಗೆ ಶಕ್ಯವಿದ್ದಷ್ಟರಮಟ್ಟಿಗೆ ಕಾರ್ಯ ಮಾಡುತ್ತ ಬಂದಿದ್ದೇವೆ. ಈ ಕಾರ್ಯದಲ್ಲಿ ಅನೇಕ ನ್ಯೂನತೆಗಳಿರಬಹುದು. ಆದರೂ ವಾಚಕರು ಅವುಗಳನ್ನು ಕ್ಷಮಿಸಿ ನಮ್ಮ ಈ ಪ್ರಯತ್ನದಲ್ಲಿ ನಮಗೆ ಸಹಾಯ ಮಾಡುತ್ತ ಹೋಗಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

---

# ಶಿವಾನುಭವ.

(ಲೇ॥— ಶ್ರೀ. ಜ. ಪ. ಚನ್ನಬಸವರಾಜ ದೇಶಿಕೇಂದ್ರಸ್ವಾಮಿಗಳವರು ಜಗದ್ಗುರು ಶ್ರೀನಿಡುಮಾಮಿಡಿ ಶ್ರೀಶೈಲಸಂಸ್ಥಾನ.)

"ಶಿವಾನುಭವ"ಕ್ಕೆ ಷೋಡಶಪ್ರಾಯವು ತುಂಬಿ ಇದೀಗ ಹದಿನೇಳನೆಯ ವರುಷ ಪ್ರಾರಂಭ. "ಶಿವಾನುಭವ"ವು ಕನ್ನಡನಾಡಿನ ಒಂದೇ ಒಂದು ಆಧ್ಯಾತ್ಮದ ಕೂಸು. ಶಿವಾನುಭವಿಗಳ ಅಭಿಮಾನದ ಶಿಶು. ಈ ಶಿಶು ಇಂದು ಶ್ರೀಮಾನ್ ರಾ. ಬ. ಹಳಕಟ್ಟಿಯವರಂತಹ ಪ್ರಾಜ್ಞರ ಪ್ರಬುದ್ಧರ ಆಶ್ರಯದಲ್ಲಿ ಬೆಳೆದು ಬಾಳಿದ ನವತರುಣ. ಈ ತರುಣನ ಸುಖದ ಸುಗ್ಗಿಯ ಕಾಲವಿದು. ಮುಂದೆಯೂ ಈ ಸುಖದ ಸುಗ್ಗಿ ಸವೆದು ನವೆಯದಂತೆ ನಾನಾವಿಧದಲ್ಲಿ ನೋಡಿಕೊಳ್ಳುವದು ಶಿವಾನುಭವಿಗಳ ಅಥವಾ ಆಧ್ಯಾತ್ಮಜಿಜ್ಞಾಸುಗಳ ಆದ್ಯ ಕರ್ತವ್ಯ.

ಶ್ರೀಮಾನ್ ಹಳಕಟ್ಟಿಯವರು ಹೇಳತೀರದ ಪರಿಶ್ರಮದಿಂದ, ಪರಿಪ್ರಯದಿಂದ ಪರಿಪೋಷಿಸಿದ ಈ ಪತ್ರಿಕೆಯು, ೧೬ ವರುಷಗಳ ಅವಧಿಯಲ್ಲಿ ಮಾಡಿದ ಸೇವೆ ಅಪಾರವಾಗಿದೆ; ನೀಡಿದ ಅಮೃತ ಅನಂತ

ನಾಗಿದೆ. ವೀರಶೈವರ ತಿಳಿಗಣ್ಣು ತೆರಿಸಿದ್ದು ಶಿವಾನುಭವ. ಶಿವಾನು ಭಾವಿಗಳ ಅಂತರ್ಭಾವಗಳನ್ನು ಕೆರಳಿಸಿದ್ದು ಶಿವಾನುಭವ. ಕನ್ನಡದೇ ಆದ ವಚನಸಾಹಿತ್ಯದ ಸವಿದುತ್ತ ಉಣಿಸಿ ದಣಿಸಿದ್ದು ಶಿವಾನುಭವ. ರಗಳೆಗಳ ರಸದೂಟದಿಂದ ಪಂಡಿತಪಾಮರರೆಲ್ಲರನ್ನು ತೃಪ್ತಿಪಡಿಸಿದ್ದು ಶಿವಾನುಭವ. ಷಟ್ಪದಿಗಳ ಝೇಂಕಾರದ ಮಧುರಗಾನವನ್ನು ಕೇಳ ಹಚ್ಚಿದ್ದು ಶಿವಾನುಭವ. ಸಾಂಗತ್ಯಗಳ ಸುಗಂಧವನ್ನು ಆಘ್ರಾಣಿಸ ಹಚ್ಚಿದ್ದು ಶಿವಾನುಭವ. ಸಂಗೀತ ವಚನಗಳ ಸಾಂಗತ್ಯವನ್ನು ಮಾಡ ಹೇಳಿದ್ದು ಶಿವಾನುಭವ. ಹಾಡುಗಬ್ಬಗಳ ಅಮೃತದ ಅರವಟ್ಟಿಗೆಯು ದಾರಿತೋರಿದ್ದು ಶಿವಾನುಭವ. ಸ್ತ್ರೀಯರು ಕಳೆದುಕೊಂಡ ಆಧ್ಯಾತ್ಮ ಸ್ವಾತಂತ್ರ್ಯ ಸಂಪತ್ತನ್ನು ಉಳಿಸಿ ಗಳಿಸಿ ಕೊಟ್ಟದ್ದು ಶಿವಾನುಭವ. ಸ್ತ್ರೀಯರ ಅಧಿದೇವತೆಯಾದ ಅಕ್ಕನನ್ನು ಬೆಳಕಿಗೆ ತಂದು ಹೆಣ್ಣುಮಕ್ಕಳಿಗೆ ಒಂದು ಬಗೆಯ ಹೆಮ್ಮೆಯ ಹೆಕ್ಕಳನ್ನು—ಹರುಷದ ಹೊರೆಯನ್ನು ತಂದು ಕೊಟ್ಟದು ಶಿವಾನುಭವ. ವೀರಶೈವ ರಾಜಮನೆತನಗಳ ಶೂರ ಇತಿಹಾಸಗಳನ್ನು ಈಚೆಗೆ ತಂದು ತೋರಿಸಿ ವೀರಾಭಿಮಾನವನ್ನು ತಂದು ತುಂಬಿದ್ದು ಶಿವಾನುಭವ. ಒಟ್ಟಿನಲ್ಲಿ ಶಿವಶರಣರ ಶಿವಾನುಭವ ಮಂಟಪದ ಗತಕಾರ್ಯ ವೈಭವಗಳನ್ನು ಕನ್ನಡಿಗರ ಕಣ್ಮುಂದೆ ತರುತ್ತಿರುವ ಪತ್ರಿಕೆಯೆಂದರೆ ಇದೊಂದೆ "ಶಿವಾನುಭವ."

## ಶಿವಾನುಭವ-ಶಕ್ತಿವಿಶಿಷ್ಟಾದ್ವೈತ:

"ಶಿವಾನುಭವ" ಇದೊಂದು ಸಮಸ್ಯೆ. ಆಧ್ಯಾತ್ಮ ಜೀವಾಳದ ಆತ್ಯಂತಿಕ ಸಮಸ್ಯೆ. ಅರ್ಥಾನುಸಂಧಾನದ ಆಳವಾದ ಸಮಸ್ಯೆ. 'ಶಿವಾನುಭವ' ಕೇವಲ ಪತ್ರಿಕೆಯಲ್ಲ. ಅಥವಾ ಬರೀ ಶಿವನ ಅನುಭವವಲ್ಲ. "ಶಿವಾ-ಅನು-ಭವ" ಎಂಬುದೇ ಅದರ ಮೂಲ ಜೀವಾಳ. ಶಿವೆಯೊಡನೆ ಅವಿರಳನಾದ ಶಿವನೆಂಬುದೇ ಅದರ ರಹಸ್ಯಾರ್ಥ. 'ಶಕ್ತಿವಿಶಿಷ್ಟಾದ್ವೈತ' ವೆಂಬುದೇ ಅದರ ಕೊನೆಯ ಮಥಿತಾರ್ಥ. ಹೀಗೆ ಹೇಳುವ ಈ ಮಾತಿನಲ್ಲಿ ಶಿವಶಕ್ತಿಯರಿಗಿರುವ ಅವಿರಳ ಸಂಬಂಧ ಮತ್ತು ಶಕ್ತಿವಿಶಿಷ್ಟಾದ್ವೈತಕ್ಕೂ ಶಿವಾನುಭವಕ್ಕೂ ಇರುವ ಸಮರಸಾರ್ಥ ಇವುಗಳನ್ನು ಚನ್ನಾಗಿ ಪರಿಗ್ರಹಿಸಿ ನೋಡಿ! ಹೀಗೆ ನಾವು ಮಾಡಿದ ಅರ್ಥವನ್ನು ಒಪ್ಪುವದಾದರೆ ಆಗ:—

೧. "ಶಿವಾನುಭವ" ಈ ಪದದಲ್ಲಿ ಸರ್ವಮತ ಸಮನ್ವಯವಾದ 'ಶಕ್ತಿವಿಶಿಷ್ಟಾದ್ವೈತ' ಮತವು ಅಡಗಿದೆ.

೨. "ಶಿವಾನುಭವ" ಈ ಬೀಜದಲ್ಲಿ–ಶಿವಶಕ್ತಿಯರಿಗೆ ಅವಿರಳವನ್ನು ಸೂಚಿಸುವ ಮಹಾಕವಿ ಕಾಳಿದಾಸನ "ವಾಗರ್ಥಾವಿವ ಸಂಪೃಕ್ತೌ ವಾಗರ್ಥಃ ಪ್ರತಿಪತ್ತಯೆ । ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ" ಈ ಶ್ಲೋಕವೃಕ್ಷವು ಹುದುಗಿದೆ.

೩. "ಶಿವಾನುಭವ" ಈ ಇಸಿಗಬ್ಬಿನಲ್ಲಿ—ಷಟ್‌ಸ್ಥಲ ಜ್ಞಾನಿಯಾದ ಚನ್ನಬಸವಣ್ಣನ "ಕಾಯವು ಜೀವವು; ಜೀವವು ಕಾಯವು. ಇವು ಎಂತು ಬೆರಸಿಪ್ಪವಂತೆ; ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ. 'ನ ಶಿವೇನ ವಿನಾಶಕ್ತಿರ್ನ ಶಕ್ತಿರಹಿತಃ ಶಿವಃ । ಪುಷ್ಪಗಂಧ ವಿನಾನ್ಯೈವ ಮರುತಾಂಬರಯೋರಿವ' ಎಂದುದಾಗಿ ಭಾವಭೇದವಿಲ್ಲದ ಜಂಗಮವೇ ಲಿಂಗವು ಕೂಡಲ ಚನ್ನಸಂಗಮದೇವಾ" ಭಾವಾಭೇದವನ್ನು ಸೂಚಿಸುವ ಈ ವಚನದ ತನಿರಸವು ತುಂಬಿದೆ.

೪. "ಶಿವಾನುಭವ" ಈ ಮಲ್ಲಿಗೆಯ ಮೊಗ್ಗದಲ್ಲಿ—ಕನ್ನಡದಲ್ಲಿ ಮೊದಲು ಷಟ್‌ಶಾಸ್ತ್ರಗಳನ್ನು ಬರೆದ ನಿಜಗುಣರ 'ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು- । ಮಂಗಳೊಳು ಕಂಪು ಬೆರೆದಂತೆ ಪರಮನೊಳು । ಲಿಂಗದಗಸುತಿಗೆ ನತನಪ್ಪೆ' ಅವಿನಾಭಾವವನ್ನು ಅಭಿವ್ಯಕ್ತಗೊಳಿಸುವ ಈ ತ್ರಿಪದಿಯ ಸುಗಂಧವು ಸೂಸಿದೆ.

೫. "ಶಿವಾನುಭವ" ಈ ಷಡ್ದಳ ಕಮಲ ಮಕರಂದದಲ್ಲಿ—ನಿಖಿಲಾಗಮ ನಿಪುಣನಾದ, ವೀರಶೈವಾಚಾರ ಮಾರ್ಗಸಾರೋದ್ಧಾರನಾದ, ಸುರಸ ಕವಿಯರಸನಾದ ಚಾಮರಸ ಕವಿಯ—"ಶಶಿಯ ಶೀತಳದಂತೆ ಕರ್ಪುರ । ದೆಸೆವ ಕಂಪುಗಳಂತೆ ಕನಕದ । ಮಿಸುಪ ಕಾಂತಿಗಳಂತೆ ನವ್ಯ ಸುಧಾಂಶು ರುಚಿಯಂತೆ । ಲಸಿತ ಮಿಥುನಾಳಾಪ ಹೊರಗಾ- । ಣಿಸದೆ ಶಕ್ತಿಸಮೇತ ಶಂಕರ । ನೊಸೆದು ಕುಳ್ಳಿತು ಮೆರೆವುತಿರ್ದನು ದಿವ್ಯತೇಜದಲಿ" ಎಂಬುದಾಗಿ ಏಕತಾನದಲಿ ಮಂಜುಳವಾಗಿ ಕುಂಜಿಸುವ ಷಟ್ಪದಿಯು ತಲ್ಲೀನವಾಗಿದೆ.

## ಶಿವಾನುಭವ-ಲಿಂಗೋದ್ಭವಃ

'ಭವ' ಶಬ್ದವು ಶಿವನಲ್ಲಿ ವರ್ತಿಸುವಂತೆ ಜನನದಲ್ಲಿಯೂ ವರ್ತಿಸುತ್ತದೆ. "ಜನ್ಮಹರೌ ಭವೌ" ಎಂದುದಾಗಿ ಅಮರಕೋಶದ ಪ್ರಮಾಣ

ವಿದೆ. ಈ ಕಾರಣದಿಂದ 'ಶಿವಾನುಭವ' ವೆಂದರೆ ಶಿವನನ್ನು ಒಳಗೊಂಡ ಅಥವಾ ಶಿವನ ಸದೃಶವಾದ ಜನನ ಅಂದರೆ ಲಿಂಗೋದ್ಭವ ಎಂದರ್ಥ. ಹೀಗೆ ಅರ್ಥ ಮಾಡುವಾಗ ಶಿವಾನುಭವ ಪದವನ್ನು 'ಶಿವ-ಅನು-ಭವ' ಎಂದು ವಿಗ್ರಹಿಸಬೇಕು. ಇನ್ನು ಭವ ಶಬ್ದಕ್ಕೆ ಸ್ಥಿತ್ಯರ್ಥವನ್ನೂ ಹೇಳ ಬಹುದು. ಕೊನೆಯದಾಗಿ ಶಿವನ ಸದೃಶನಾಗಿರು ಎಂದು ಹೇಳುವ ದಾದರೆ ಲಯಾರ್ಥವೂ ಸಂಭವಿಸುತ್ತದೆ. ಒಟ್ಟಿನಲ್ಲಿ 'ಶಿವನ ನೆನಹಿನೊಡನೆ ಜನನ' 'ಶಿವಾರ್ಪಣ ಬುದ್ಧಿಯೊಡನೆ ಜೀವನ' 'ಶಿವನ ಸಂಸ್ಮರಣದೊಡನೆ ಮರಣ' ಕ್ರಮವಾಗಿ ಈ ಮೂರು ಅರ್ಥಗಳನ್ನೂ ಮಾಡ ಬಹುದು. ಹೀಗುಂಟಾಗುವದೇ ವೀರಶೈವತ್ವದ ಮುಖ್ಯ ಧ್ಯೇಯ. ಈ ಸ್ಥಿತಿಗಳನ್ನಳವಡಿಸಿಕೊಂಡವನೆ ಶಿವಾನುಭಾವಿ. ಈ ವೀರಶೈವ ಧರ್ಮದ ಮೂಲ ತಿರುಳನ್ನು ತಿಳಿಸುವದೇ ಈ 'ಶಿವಾನುಭವ' ಶಬ್ದದ ಅಂತರಂಗದ ಮತ್ತೊಂದರ್ಥ.

## ಶಿವಾನುಭವ-ಶಿವಮಯ ಜಗತ್ತು.

"ಪಶ್ಚಾತ್ ಸಾದೃಶ್ಯಯೋರನು" ಎಂದು ಅಮರಕೋಶದ ಹೇಳಿಕೆ. ಆದರೆ ಅನು-ಕರಣ, ಅನು–ದಿನ, ಅನು-ವಾದ, ಅನು-ಭಾವ, ಅನು-ನಯ, ಅನು-ಚರ, ಅನು-ಮತಿ, ಅನು-ಮಾನ, ಇತ್ಯಾದಿ ಶಬ್ದಗಳನ್ನು ಅನುಲಕ್ಷಿಸಿದರೆ "ಅನು" ಎಂಬುದಕ್ಕೆ ಅಮರಕೋಶವು ವಿಧಿಸಿದ ಅರ್ಥಗಳ ಎಲ್ಲೆಯನ್ನು ಮೀರದೆ ವಿಧಿಯಿಲ್ಲ. ಈ ಅನು ಉಪಸರ್ಗದ ಬಲದಿಂದ 'ಭೂ' ಧಾತುವಿಗೂ ಅನಂತಾರ್ಥಗಳನ್ನು ಇಲ್ಲಿ ಹೇಳಬಹುದು. ಉಪಸರ್ಗಗಳ ಬಲದಿಂದ ಧಾತ್ವರ್ಥವು ಮಾರ್ಪಡುತ್ತದೆಂಬುದಾಗಿ ವ್ಯಾಕರಣ ಶಾಸ್ತ್ರದ ನಿಯಮವೇ ಉಂಟು. ಈ ನಿಯಮಕ್ಕನುಸರಿಸಿ ಇಲ್ಲಿಯವರೆಗೂ 'ಭೂ' ಧಾತುವಿನಿಂದಾದ 'ಭವ' ಶಬ್ದಕ್ಕೆ ಅರ್ಥಗಳನ್ನು ಪವಣಿಸಿದ್ದಾಯ್ತು. ಅದೆ 'ಭವ' ಶಬ್ದಕ್ಕೆ ಪಾರಿಭಾಷಿಕ ಅರ್ಥವೊಂದುಂಟು. 'ಭವ' ಎಂದರೆ ಸಂಸಾರ. ಅಥವಾ ಜಗತ್ತು. ಶಿವಾನುಭವ ಎಂದರೆ ಶಿವಮಯವಾದ ಜಗತ್ತು ಎಂಬ ವಿಶ್ವವಿಶಾಲವಾದ ಅರ್ಥವನ್ನೂ ಮಾಡ ಬಹುದು. ಹೀಗೆ ಅರ್ಥ ಮಾಡುವಲ್ಲಿ "ಸರ್ವಂ ಖಲ್ವಿದಂ ಬ್ರಹ್ಮ" "ಈಶಾವಾಸ್ಯಮಿದಂ ಸರ್ವಂ" "ಸರ್ವಂ ಶಿವಮಯಂ ಜಗತ್" ಈ ಉದಾತ್ತ ವಚನಗಳೆಲ್ಲ ಈ 'ಶಿವಾನುಭವ' ಶಬ್ದದ್ವಯದ ಶುಕ್ತಿಸಂಪುಟದಲ್ಲಿಯೆ ಮುತ್ತುಗಳಂತೆ ಮುಚ್ಚಿಹೋಗುತ್ತವೆ.

"ಶಿವಾನುಭವ" ಶಬ್ದವು ನಮಗೆ ಕಿರಿದಾಗಿ ಕಂಡರೂ ಅದರ ಅನುಭಾವ ಅಥವಾ ಅನುಲಕ್ಷ್ಯ ಬಹಳ ಹಿರಿದಾಗಿದೆ. ಉದಾತ್ತ ತತ್ವಾರ್ಥಗಳೆಲ್ಲ ಅದರಲ್ಲಿ ಆಲದ ಬೀಜದ ಮರದಂತೆ ಅಡಕಾಗಿವೆ. ವೇದ-ಉಪನಿಷತ್ತು ಆಗಮಾದಿ ಶಾಖೆಗಳೆಲ್ಲ ಅವೆರಡು ಶಬ್ದಗಳಲ್ಲಿಯೆ ಅಡಕಾಗಿವೆ. ಸರ್ವಜಗತ್ತು, ಸಮಸ್ತ ಮತಮತಾಂತರಗಳ ಸಾರ ಮರ್ಮ, ಅದರಲ್ಲಿ ಅಚ್ಚೊತ್ತಿವೆ. ಮಹಾಚೈತನ್ಯಜ್ಞಾನದ ನಿಜ ಬೆಳಗನೊಳಕೊಂಡು ಮೂರ್ತಿಗೊಂಡಿದೆ. ವೀರಶೈವದ ವಿಶಾಲತೆಗೆ ವಿಶ್ವಭಾವನೆಗೆ ವಿಚಾರ ಪರಿಪಕ್ವತೆಗೆ ಈ "ಶಿವಾನುಭವ" ಶಬ್ದವೊಂದೇ ಸಾಕು.

ಇಷ್ಟೆಲ್ಲ ಆಳವಾದ ಅರ್ಥಗಳನ್ನು ಹೊಟ್ಟೆಯಲ್ಲಿ ಹೊತ್ತ ಈ "ಶಿವಾನುಭವ" ಹೆಸರಿನಿಂದ ಹೊರಡುವ ಈ ಪತ್ರಿಕೆಯು ಸಾಮಾನ್ಯವಾದುದಲ್ಲ; ಸರ್ವ ಮಾನ್ಯವಾದುದು. ಈ 'ಶಿವಾನುಭವ' ಪತ್ರಿಕೆಯು ಇಲ್ಲಿಯವರೆಗೂ ತನ್ನ ಹೆಸರಿಗೆ ತಕ್ಕಂತೆ ಧಾರ್ಮಿಕ, ಸಾಮಾಜಿಕ, ರಾಜಕೀಯ, ಸಾಹಿತ್ಯಾತ್ಮಕ ಸೇವೆಯನ್ನು ಸಲ್ಲಿಸಿರುವಂತೆ ಇನ್ನು ಮುಂದಿನ ತನ್ನ ಪ್ರಬುದ್ಧಾವಸ್ಥೆಯಲ್ಲಿಯೂ ಇನ್ನೂ ಹೆಚ್ಚಾಗಿ ಸಲ್ಲಿಸಿ ಇನ್ನೂ ಹೆಚ್ಚಿನ ಪ್ರಖ್ಯಾತಿ ಪಡೆಯಲಿ; ಚಿರಾಯುವಾಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸೋಣವಾಗಿದೆ.

---

# ಗುರು ಲಿಂಗ ಜಂಗಮು.

[ ೩ ]

(ಲೇಖಕ:— ಬಸಪ್ಪ ಚನ್ನಪ್ಪಾ ಪಟ್ಟೇದ– ವಂಟಮುರಿ.)

ಮೊದಲನೆಯ ಲೇಖದಲ್ಲಿ ಗುರು ಲಿಂಗ ಜಂಗಮುದ ನಿಜಕಲ್ಪನೆಯು ಸ್ಥೂಲಸ್ವರೂಪವು ಜನರ ಲಕ್ಷಕ್ಕೆ ಬರುವಂತೆ ಯತ್ನಿಸಿತು. ಎರಡನೆಯು ದರಲ್ಲಿ ಅವುಗಳ ಅನ್ಯೋನ್ಯ ಸಂಬಂಧವನ್ನು ಅರಿಕೆ ಮಾಡಿತು. ಈ ಲೇಖದಲ್ಲಿ ಗುರು ಲಿಂಗ ಜಂಗಮುಗಳ ಸ್ವಗತವಲ್ಲದ ಅಂದರೆ ತನ್ನಿಂದ ಹೊರಗಿರುವ ಸ್ವರೂಪದ ವಿವರಣೆಯೂ, ಆ ಸಂಬಂಧದ ಸಮಾಜದ ಕರ್ತವ್ಯವೂ ಮುಂದಿರಿಸಲಾಗುವವು. ಇವು ಬಹಿರ್ಗತವಾದುದರಿಂದ ಈ ವಿಚಾರಗಳು, ಬಹುಮಟ್ಟಿಗೆ ಲೌಕಿಕವಾಗಿರುವವೆಂಬುದು ಸ್ಪಷ್ಟವದೆ. ಅಂತೇ ಅವನ್ನು ಶಾಸ್ತ್ರಗ್ರಂಥಗಳ ಒರೆಗಲ್ಲಿಗೆ ತಿಕ್ಕಿ, ಸೂಕ್ಷ್ಮವಾಗಿ ಪರೀಕ್ಷಿಸಿ, ನಮ್ಮ ವೀರಶೈವತ್ವದ ಪ್ರಾಪ್ತಿಗೆ ಅನುಗುಣವಾಗುವಂತೆ, ಸತ್ಯಾನ್ವೇಷಣ ಪೂರ್ವಕವಾಗಿಯೇ ವಿವೇಚಿಸುವ ಅನಿವಾರ್ಯಕಾರ್ಯವನ್ನು ಈಗ ಸ್ವೀಕರಿಸಬೇಕಾಗಿರುವದು. ಆದುದರಿಂದ ಸುಜ್ಞರು, ಇದನ್ನು ಬಗೆದೇ ಮುಂದಿನ ಬರೆಹವನ್ನು ಶಾಂತಚಿತ್ತದಿಂದಲೂ ಸಹಾನುಭೂತಿಯಿಂದಲೂ ನ್ಯಾಯದೃಷ್ಟಿಯಿಂದಲೂ ಕಾಣುವರೆಂದು ನಂಬಿದ್ದೇವೆ. ಲೌಕಿಕವೇ ಪಾರಮಾರ್ಥಿಕದ ತಾಯಿಯು. ಅದು ಒಳಿತಾಗಿ ತಿದ್ದಿದುದೂ ಭದ್ರವಾದುದೂ ಇರುವದು ಅತ್ಯವಶ್ಯವು. ಆದುದರಿಂದಲೇ ಅದನ್ನು ಈಗ ನಿರ್ದಾಕ್ಷಿಣ್ಯದಿಂದ ಮುಂದಿಡಲಾಗುವದು.

ಸೃಷ್ಟಿಯನ್ನೂ ಅದರಲ್ಲಿರುವ ವಿಷಯಗಳನ್ನೂ ಕಂಡು ಮೋಹಿತರಾಗಿ, ಎಷ್ಟೋ ಜನರು ಅದರ ಉಪಭೋಗದಿಂದ ಸುಖಪ್ರಾಪ್ತಿಯಾಗುವದೆಂದು ಭ್ರಾಂತಿಮೂಲಕ ನಂಬಿ, ಆ ಪ್ರಕಾರ ನಡೆಯುತ್ತಿರುವರು.

---

**ಟೀಪು:— ಮಾಡುವವನೂ ಫಲಭೋಗಿಸುವವನೂ 'ನಾನು, ಎಂಬ ಅಭಿಮಾನವಿಡಿದು ಮಾಡುವ ಕ್ರಿಯೆ (ಕರ್ಮ) ಔಪಾಧಿಕವು; ನಾನಲ್ಲ 'ಶಿವನು' ಎಂಬ ಭಾವನೆಯಿಂದ ಮಾಡುವ ಕ್ರಿಯೆ (ಮಾಟ) ಅನೌಪಾಧಿಕವು; ಯಾವದೊಂದೂ ಭಾವನೆ ತಾಳದೆ ಮಾಡುವದೇ ಸಾಹಜಿಕವು.**

ಇವರಿಗೆ ವೀರಶೈವರು ಭವಿಗಳೆಂದು ಸಂಜ್ಞೆಕೊಟ್ಟಿದ್ದಾರೆ. ತಾವು ಸೃಷ್ಟಿಯ ನಿಜಸ್ವರೂಪವನ್ನು ಅದರಲ್ಲಿರುವ ವಿಷಯಗಳ ಸುಖದ ಅತ್ಯಲ್ಪತ್ವ-ಅನಿತ್ಯತ್ವಗಳನ್ನೂ ಕಂಡು, ಅವಕ್ಕೆ ಮೋಹಿಸಿ ಬದ್ಧಿತರಾಗದೆ, ಸೃಷ್ಟಿಯ ಆದಿ ಕಾರಣವಾದ ಪರಮಾತ್ಮ ಸ್ವರೂಪವನ್ನು ಭಜಿಸಿ ಆತನ ಕೃಪೆವಡೆದು, ಅದರಲ್ಲಿ ತಮ್ಮನ್ನೂ ಜನರನ್ನೂ ಸಮರಸಗೊಳಿಸಲು ಉದ್ಯುಕ್ತರಾದುದರಿಂದ ತಮ್ಮನ್ನು ಭಕ್ತರೆಂದು ಕರೆದುಕೊಂಡಿದ್ದಾರೆ. ಭಕ್ತರಿಗೆ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳು ಉದ್ಧಾರದ ಮಾರ್ಗಗಳಾಗಿರುತ್ತವೆ.

ಭವಿಗಳು ತಮ್ಮಲ್ಲಿ ಅನೇಕ ವಿಧವಾದ ಭೇದಭಾವನೆಗಳನ್ನು ತಾಳುತ್ತಾರೆ. ಸ್ತ್ರೀ ಪುರುಷರಲ್ಲಿ ಭೇದ, ವರ್ಣರೂಪದಿಂದ ಪುರುಷ ಪುರುಷರಲ್ಲಿ ಭೇದ, ಸ್ಪೃಶ್ಯಾಸ್ಪೃಶ್ಯತೆಯ ಗೊಂದಲ ಇತ್ಯಾದಿಗಳನ್ನು ಎಣಿಸಿ ವಿಷಮತೆಯ ಆಗರವಾಗಿದ್ದಾರೆ. ಇದರಿಂದ ಮನುಷ್ಯನ ಉದ್ಧಾರಕ್ಕೆ ವಿಘ್ನವುಂಟಾಗುತ್ತದೆ. ಆದುದರಿಂದ ಭಕ್ತರು ತಮ್ಮಲ್ಲಿ ಇಂತಹ ಅದಾವ ವಿಷಮತೆಗೂ ಇಂಬುಗೊಡದೆ, ಸಕಲರಲ್ಲಿಯೂ ಸಮಾನತೆಯನ್ನು ಸ್ವೀಕರಿಸಿರುವದರಿಂದ, ಅವರಿಗೆ ಸಾಮಾನ್ಯರೆಂಬ ಮತ್ತೊಂದು ಹೆಸರು ಉಂಟಾಯಿತು. ಅವರಿಗೆ ಲಿಂಗಾಯತ, ವೀರಶೈವ ಎಂತಲೂ ಕರೆಯುವದುಂಟು. ಈ ಭಕ್ತನು ಮೊದಲು ತ್ಯಾಗಾಂಗಿ, ಬಳಿಕ ಭೋಗಾಂಗಿ, ಕಡೆಗೆ ಯೋಗಾಂಗಿಯಾಗಿ ಕೃತಕೃತ್ಯನಾಗುತ್ತಾನೆ. ತ್ಯಾಗಾಂಗ ಸ್ಥಿತಿಯಲ್ಲಿ ಅವನು ಬಹಿರ್ದೃಷ್ಟಿಯುಳ್ಳವನಾಗಿ ಔಪಾಧಿಕ ಕ್ರಿಯೆಗಳನ್ನಾಚರಿಸುತ್ತ ಇಷ್ಟಲಿಂಗವನ್ನೂ ಭೋಗಾಂಗನಾಗಿರುವಾಗ ಅಂತರ್ದೃಷ್ಟಿವಿಡಿದು ನಿರೌಪಾಧಿಕ ಕ್ರಿಯೆಗಳನ್ನಾಚರಿಸುತ್ತ ಪ್ರಾಣಲಿಂಗವನ್ನೂ, ಭೋಗಾಂಗ ದೆಸೆಯಲ್ಲಿ ಬಹಿರಂತರಾತೀತನಾಗಿ ಸಾಹಜಿಕ ಕ್ರಿಯೆಗಳನ್ನಾಚರಿಸುತ್ತ ಭಾವಲಿಂಗವನ್ನೂ ಪೂಜಿಸುವನು. ಭೋಗಾಂಗಿಗಳಲ್ಲಿ ಕೆಲವರು ಸಮಾಜಹಿತದ ಕಡೆಗೆ ಹೆಚ್ಚು ಒಲವುಳ್ಳವರಾಗಿ, ಸ್ವಾರ್ಥತ್ಯಾಗ ಮಾಡಿ ಸಮಾಜೋದ್ಧಾರ ಕಾರ್ಯವನ್ನು ಕೈಕೊಂಡರು. ಅದಕ್ಕೆ ನಡುವೆ ವಿಘ್ನ ತಟ್ಟಬಾರದೆಂದು ವಿವಾಹವನ್ನು ತೊರೆದು, ಅಜನ್ಮ ಬ್ರಹ್ಮಚಾರಿಗಳಾದರು. ಅವರೇ ಗುರುಗಳೆನಿಸುವ ಪಟ್ಟಚರಮೂರ್ತಿಗಳೂ ಪಂಚಾಚಾರ್ಯರೂ ಇಂತಹ ಸಮಾಜಸೇವೆಯ ಹೆಚ್ಚಿನ ಭಾರವನ್ನು ವಹಿಸಿದುದರಿಂದ ಇವರು ವಿಶೇಷರೆಂದೆನಿಸಿಕೊಂಡರು. ಇದೇ

ಮೇರೆಗೆ ಯೋಗಾಂಗಿಗಳೊಳಗೂ, ಹಲವರು ಸಮಾಜ ಹಿತೈಷಿಗಳು, ಬರೇ ವಿವಾಹವನ್ನಷ್ಟೇ ಏಕೆ! ಹೊನ್ನು ಮಣ್ಣುಗಳ ಆಶೆಯನ್ನೂ ಸಹ ತ್ಯಜಿಸಿ, ಕೇವಲ ತಮ್ಮ ಜನ್ಮವನ್ನೆಲ್ಲ ಸಮಾಜ ಸೇವೆಗೇನೇ—ಷಟ್‌ಸ್ಥಲಜ್ಞಾನವನ್ನು ಭಕ್ತರೆಲ್ಲರಲ್ಲಿ ಪ್ರಸಾರ ಮಾಡುವದಕ್ಕೇನೇ— ಧಾರೆ ಎರೆದು ನಿಃಸಂಗಿಗಳಾಗಿ ನಿಂತರು. ಇವರೇ ನಿರಾಭಾರಿಗಳು. ಇವರು ಪ್ರಪಂಚದ ಭಾರವನ್ನೆಲ್ಲ (ವಿಷಯಗಳಾಶೆಯನ್ನೆಲ್ಲ) ಬಿಟ್ಟವರು. ಇವರಲ್ಲಿ ಶೂನ್ಯಸಿಂಹಾಸನಾಧೀಶರೆಂಬ ಜಗದ್ಗುರುಗಳೂ ಉಂಟು. ಈ ಗುರು ವಿರಕ್ತರ ಹೊರತು ಉಳಿದ ಭಕ್ತರೆಲ್ಲರು ವಿವಾಹಿತರಾಗಿ ಪ್ರಪಂಚವನ್ನು ವಹಿಸಿದವರು. ಇವರ ಸಮೂಹ ದೊಡ್ಡದಿರುವದು. ಇವರು ಹೊರಗೆ ಪ್ರಪಂಚವನ್ನು ವಹಿಸಿದಂತೆ ಕಂಡರೂ, ಒಳಗೆ ಅಲಿಪ್ತರಾಗಿಯೇ ಅದರೊಡನೆ ವ್ಯವಹರಿಸುವರು. ಈ ಅಲಿಪ್ತತೆಯು ಒಮ್ಮೆಲೆ ನೆಲೆಗೊಳ್ಳದಿದ್ದರೂ, ಬರುಬರುತ್ತ ಶಿವಜ್ಞಾನದಿಂದ ಅದನ್ನು ಹೊಂದುವದು ಶಕ್ಯವದೆ. ಪ್ರಪಂಚದೊಳಗೆ ಒಮ್ಮೆ ಸಿಲುಕಿದ ಬಳಿಕ, ಅದರ ಹಿಡಿತದಿಂದ ಪಾರಾಗಿ ಅಲಿಪ್ತರಾಗುವದೇನು ಸುಲಭವಾದುದಲ್ಲೆಂಬುದು ನಿಜ. ಆದಾಗ್ಯೂ ಅದನ್ನು ಪಡೆಯದಿದ್ದರೆ, ಭಕ್ತತ್ವಕ್ಕೆ ಭಂಗಬಂದು ಅವನ ಜನ್ಮವೇ ವ್ಯರ್ಥವಾಗುವದು. ಆದಕಾರಣ ಭಕ್ತನು ಬಹು ಎಚ್ಚರದಿಂದ ವರ್ತಿಸಿ ಅದನ್ನು ಸಾಧಿಸುವವೇ ಅವನ ಕರ್ತವ್ಯ. ಹೀಗೆ ಪೂರ್ಣ ಅಲಿಪ್ತರಾದವರು ನಿರಾಭಾರಿಗಳಂತೆಯೇ ಸಮಾಜಕ್ಕೆ ವಂದ್ಯರು. ಸಂಸಾರಿಗಳೆಂದು ಅವರನ್ನು ತಿರಸ್ಕರಿಸಲಾಗದು. ಹಾಗೆ ಮಾಡುವದು ಕೇವಲ ಅಜ್ಞಾನ. ಅಷ್ಟೇ ಅಲ್ಲದೆ ಅವರ ಯೋಗ್ಯತೆಯು ಈಗಿನ ನಾಮ ಮಾತ್ರ ಜಂಗಮರಿಗಿಂತಲೂ ಬಹಳೇ ಹೆಚ್ಚೆನ್ನಲು ಅದಾವ ಅಡ್ಡಿಯೂ ಇಲ್ಲ.

ಇಷ್ಟಲಿಂಗ ಪೂಜೆಯ ಅಧಿಕಾರವು ನಿಜವಾಗಿ ಶಿವದೀಕ್ಷೆಯಿಂದ ಪ್ರಾಪ್ತವಾಗುತ್ತದೆ. ಅಗ್ಗೇ ಶ್ರೀಗುರುವು ಶಿಷ್ಯನಿಗೆ "ಈ ಲಿಂಗವು ನಿನ್ನ ಜ್ಞಾನದ ಕುರುಹು" ಎಂದು ಬೋಧಿಸುತ್ತಾನೆ. ಆದರೂ ಅನೇಕರು ಬರೇ ಜನ್ಮಲಿಂಗಧಾರಣದಿಂದಲೇ ತೃಪ್ತರಾಗಿ—ತಮ್ಮ ವಿವಿಧ ಕಾಯಕಗಳನ್ನು ನಿರ್ವಹಿಸುವ ಗೊಂದಲದೊಳಗೆ ಶಿವದೀಕ್ಷೆಯನ್ನೇ ತಿರಸ್ಕರಿಸಿ ಅದನ್ನೇ ಪೂಜಿಸುತ್ತ ನಡೆದಿರುವರು. ಇದು ಗೌಣ! ಬಲ್ಲವರು ಮಾತ್ರ ಶಿವದೀಕ್ಷೆಯನ್ನು ಹೊಂದುತ್ತಲೇ ಬರುತ್ತಾರೆ. ಈ ದೀಕ್ಷೆಗೊಂಡವರಲ್ಲಿ

ಕೆಲವರು ತಮ್ಮ ಕಾಯಕಕ್ಕೆ ಬಾಧೆಬರದಂತೆ ನೋಡಿಕೊಂಡು ಕೇವಲ ಶಿವಪೂಜಾನಂದವನ್ನೇ ಮುಂದಿಟ್ಟುಕೊಂಡು ನಡೆಯುತ್ತಿರುವರು. ಬೇರೆ ಹಲವರಾದರೋ ತಮ್ಮ ಉದರ ಪೋಷಣೆಗೆ ಸಾಧನೀಭೂತವಾಗಲೆಂದು ದೀಕ್ಷೆಗೆ ಅಯ್ಯಾಚಾರವೆಂಬ ಹೆಸರಿಟ್ಟು, ಅದನ್ನು ಹೊಂದುವರು. ಆಗ ಅವರಿಗೆ ಜೋಳಿಗೆ ಪೂಜ್ಯತೆಗಳು ಕೊಡಲ್ಪಡುವವು. ಇವರು ತಮ್ಮನ್ನು ಅಯ್ಯಗಳೆಂದು ಕರೆಯುವರು. ಇವರಲ್ಲಿ ಬಹು ಜನರು ಜೀವನೋಪಾಯಕ್ಕೆ ಸ್ವತಂತ್ರ ಕಾಯಕವನ್ನೇನೂ ಮಾಡದೆ, ತಮ್ಮ ಸಂಸಾರದ ಭಾರವನ್ನೆಲ್ಲ ಆ ಜೋಳಿಗೆಯ ಮೇಲೆಯೇ—ಅರ್ಥಾತ್ ಸಮಾಜದ ಮೇಲೆಯೇ—ಹಾಕುವರು. ಅದು ಅವರಿಗೆ ಎನಿತೆನಿತೂ ಹೇಯವೆನಿಸದೆ, ತಿರುಗಿ "ಭಿಕ್ಷಾಪತಿ ಲಕ್ಷಾಪತಿ, ನಮಗೇನು ಕಡಿಮೆ" ಎಂದು ಹೇಳಿಕೊಳ್ಳುತ್ತ, ಚಕ್ಕಂದದಿಂದಿರುವರು. ಇದು ವೀರಶೈವರ ಕಾಯಕ ತತ್ತ್ವವೃಕ್ಷದ ಬೊಡ್ಡೆಗೆ ಹಾಕಿದ ಬಲವಾದ ಕೊಡಲಿಯ ಪೆಟ್ಟೇ ಸರಿ! ಗುರುವು ತಮಗೆ ದೀಕ್ಷೆಯ ಕಾಲಕ್ಕೇಕೆ ಈ ಜೋಳಿಗೆಯನ್ನು ಕರುಣಿಸಿದನು? ಅದರ ಮರ್ಮವೇನು? ಅದನ್ನು ತಾವು ಯಾವ ಪ್ರತಿಜ್ಞೆಯಿಂದ ಸ್ವೀಕರಿಸಿದ್ದೇವೆ? ಈ ಮೊದಲಾದ ಅರಿವು ಇವರಿಗೆ ಎಷ್ಟು ಮಾತ್ರವೂ ಇಲ್ಲೇ ಇಲ್ಲ. ಇವರನ್ನು ಸಲಹುವ ಸಮಾಜಿಕರಿಗಂತೂ ಯಾವ ತರದ ಪರಿವೆಯೂ ಎಚ್ಚರವೂ ಉಳಿದೇ ಇಲ್ಲ. ಸಾರಾಸಾರ ವಿಚಾರವನ್ನಂತೂ ಎಂದೋ ಬಿಟ್ಟಿರುವರು. ಹೀಗೆ ಇವರು ಅಜ್ಞಾನದಿಂದ ಉದಾಸೀನರಾದುದೇ ನಮ್ಮ ಸಾಂಪ್ರತದ ಅವನತಿಯ ಮುಖ್ಯ ಕಾರಣವು.

## ಅಯ್ಯನವರು.

‘ಅಯ್ಯ’ ಎಂಬ ಪದವಿಯು ಇಲ್ಲವೆ ಯೋಗ್ಯತೆಯು ಸಾಧಾರಣವಾದುದಲ್ಲ. ಷಟ್‌ಸ್ಥಲ ಮಾರ್ಗದಲ್ಲಿ ತಕ್ಕ ಪ್ರಗತಿಯನ್ನು ಪಡೆದೇ ಅದನ್ನು ಸಂಪಾದಿಸುವದಿರುತ್ತದೆ. ಆದರೆ ಈಗ ಅದು ಬಲು ಅಗ್ಗ! ೮-೧೦ ವರ್ಷ ವಯದ ಸುಮಾರಿಗೆ ಒಮ್ಮೆ ಅಯ್ಯಾಚಾರವೆಂಬ ಸಂಸ್ಕಾರ ಪಡೆದರಾಯಿತು!! ಅಯ್ಯನೆಂದರೇನೋ? ಅಯ್ಯಾಚಾರವೆಂದರೇನೋ? ದೇವರಿಗೇಗೊತ್ತು! ಈ ಸಂಸ್ಕಾರ ಮಾಡಿದವರಿಗೂ ಮಾಡಿಸಿದವರಿಗೂ ಅದೆಷ್ಟರಮಟ್ಟಿಗೆ ತಿಳಿದದೆಯೋ ನಾನರಿಯೆ. ಇನ್ನು ಅದನ್ನು ಪಡೆದ ಆ ಹಸುಗೂಸುಗಳಿಗೇನುಗೊತ್ತು. ಮುಂದೆ ಸಹ ಆ ಶಿಕ್ಷಣವು

ಬಹು ಜನರಿಗೆ ಇಡಿ ಆಯುಷ್ಯದಲ್ಲಿ ಕೂಡ ಸಿಕ್ಕುವದೇ ಇಲ್ಲ. ಅಯ್ಯಾಚಾರ ಸಂಸ್ಕಾರಹೊಂದಿದ ಮಾತ್ರಕ್ಕೆ ತಾವು ಧನ್ಯರೂ ಪೂಜ್ಯರೂ ವಂದ್ಯರೂ ಆದೆವೆಂದು ನಂಬುತ್ತಾರೆ. ಇದು ಅಯ್ಯಗಳ ರೀತಿಯಾಯಿತು. ಇತ್ತ ಅಜ್ಞಾನಾಂಧಃಕಾರ ಮುಸುಕಿದ ಬಹು ಜನ ಸಮಾಜವಾದರೋ, ಅಂತಹರನ್ನೇ ಪುರಸ್ಕರಿಸಿ ಅಯ್ಯನವರೆಂದು ಮೂಢ ಭಕ್ತಿಯಿಂದ ಕರೆದು ಪೂಜಿಸಿ ಪಾದೋದಕ ಪ್ರಸಾದ ಪಡೆಯಲಿಕ್ಕೆ ಓಡಾಡುತ್ತದೆ. ಅಂತಹರಿಂದ ಪಡೆಯುವ ಪಾದೋದಕ ಪ್ರಸಾದದಿಂದ ಏನು ಪ್ರಯೋಜನವಾಗುವದೋ ತಿಳಿಯದು! ಇರಲಿ ಶ್ರೀಬಸವಣ್ಣನವರು ಅಯ್ಯನೆಂದು ಅದಾರಿಗೆ ಅನ್ನಬೇಕೆಂಬುದನ್ನು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆಃ—

"ಅಷ್ಟವಿಧಾರ್ಚನೆ ಷೋಡಶೋಪಚಾರವಲ್ಲದೆ ನಿಮ್ಮ ಮುಟ್ಟಲರಿಯದವರ ಕಂಡಡೆ ಅಯ್ಯ ಎಂತೆಂಬೆನವರ? ಅವಭಾವದಲ್ಲಿ ಅವ ಜ್ಞಾನದಲ್ಲಿ ಅವ ಮುಖದಲ್ಲಿ ನಿಮ್ಮ ನರಿವವರ ದಾರಯ್ಯಾ! ಏನೆಂಬೆ! ನಿಮ್ಮಲ್ಲಿ ಸಮ್ಯಕ್ಕರಾದ ಸತ್ಯ ಶರಣರ ಕಂಡು ಅವರನು 'ಅಯ್ಯ ಎಂಬೆನು ಕೂಡಲ ಸಂಗಮದೇವಾ."

ಇಷ್ಟಲಿಂಗಕ್ಕೆ ಬರೇ ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನು ಮಾತ್ರ ಬೇಕಾದಷ್ಟು ಆಡಂಬರದಿಂದ ಸಲ್ಲಿಸುತ್ತ, ನಿಜವಾದ ಶಿವಲಿಂಗದ (ಪ್ರಾಣಲಿಂಗ ಭಾವಲಿಂಗಗಳ) ಸಂಬಂಧವಿಲ್ಲದವರನ್ನು 'ಅಯ್ಯ' ಎಂದು ಹೇಗೆ ಅನ್ನಲಿ? ಅಯ್ಯಗಳೆಂದು ಕರಿಸಿಕೊಂಬುವವರಲ್ಲಿ ಕೂಡಲ ಸಂಗಮದೇವಾ! ನಿನ್ನನ್ನು ಸರ್ವತ್ರ (ಅವ ಮುಖದಲ್ಲಿ) ಸದ್ಭಾವದಿಂದಲೂ ಸ ಜ್ಞಾನದಿಂದಲೂ ಕಾಣುವವರು ಯಾರಿರುವರಯ್ಯಾ! ಎಂದು ಉದ್ಗಾರ ಹೊರಡಿಸಿರುವರು. ಕೊನೆಗೆ ತಮ್ಮಷ್ಟಕ್ಕೆ ತಾವೇ, ನಿಮ್ಮಲ್ಲಿ ಸಮ್ಯಕ್ಕರಾದ (ನಿರತರಾದ) ಸತ್ಯಶರಣರ ಕಂಡು ಅವರನು ಮಾತ್ರ 'ಅಯ್ಯ' ಎಂಬೆನು; ಎಂದು ತೀರ್ಮಾನಿಸಿರುವರು. ಈ ಒರೆಗಲ್ಲಿಗೆ ಈಗ ಅದೆಷ್ಟು ಜನ ಅಯ್ಯಗಳು ಹತ್ತುವರು? ಇಂತಹ ಅಯ್ಯಗಳಾದರೆ ಅವರು ಸಮಾಜಕ್ಕೆ ಪೂಜ್ಯರಾಗದೇನುಮಾಡಿಯಾರು! ಆ ಪವಿತ್ರ ಹೆಸರನ್ನು ಮಾತ್ರ ಇಟ್ಟುಕೊಂಡು ಏನೂ ಯೋಗ್ಯತೆಯಿಲ್ಲದೆ ಅಷ್ಟರಿಂದಲೇ "ನಾವು ಅಯ್ಯಗಳು" ಎಂದು ಅಭಿಮಾನಪಡುವದು ಸರಿಯೇ? ಇದೂ ಅಲ್ಲದೆ

ಹೀಗೆ ಅಯ್ಯಗಳೆಂದು ಹೆಸರಿಟ್ಟುಕೊಂಡವರು, ತಾವು ಭಕ್ತರಲ್ಲೆಂದು ಹೇಳಿಕೊಳ್ಳುವದಂತೂ ಬಹು ವಿಷಾದವೂ ಸೋಜಿಗವೂ ಆದುದು.

"ಭಕ್ತ ಎಂದರೆ ಕಡಿಮೆ" ಎಂದು ಅಯ್ಯಗಳಲ್ಲಿಯೂ ಗುರು ವಿರಕ್ತರಲ್ಲಿಯೂ ಬಹು ಜನರು ತಿಳಿದುಕೊಂಡಂತೆ ಕಾಣುತ್ತದೆ. ಇದು ಅವರ ಅಗಾಧ ಅಜ್ಞಾನ! 'ಭಜ್' ಎಂಬ ಸಂಸ್ಕೃತ ಧಾತುವಿನಿಂದ ಭಕ್ತ (ಭಜಿಸುವವ) ಎಂಬ ಶಬ್ದವುಂಟಾದುದು ಎಲ್ಲರಿಗೂ ವಿದಿತವದೆ. ಇಲ್ಲಿ ಭಜಿಸುವ ವಿಷಯ (ಕರ್ಮ) ಯಾವದು? ಎಂಬದೊಂದು ಪ್ರಶ್ನೆ ಬರುವದು. ಶಿವನ ಸ್ವರೂಪವನ್ನು ಎಂಬುದೇ ಅದಕ್ಕೆ ಉತ್ತರವು. ಆ ಶಿವನ ನಿಜಸ್ವರೂಪವನ್ನು ಅರಿತುಕೊಂಡು ಅದರ ಪ್ರಾಪ್ತಿಗೆ ಶಿವಾಚಾರ (ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ) ವಿಡಿದು ತಪ್ಪದೆ ನಡೆದು, ತಾನು ಶಿವಸ್ವರೂಪನಾಗಿ ಆ ಶಿವನಲ್ಲಿ ತಾದಾತ್ಮ್ಯ (ಸಮರಸ) ಹೊಂದುವವನೇ ಭಕ್ತನು. ಈ ಭಕ್ತತ್ವವು ಅದಾರಿಗೆ ಬೇಡ? ಅಯ್ಯ ಗುರು ಜಂಗಮರಿಗೆ ತಮ್ಮ ಜನ್ಮ ಸಾಫಲ್ಯ ಇದು ಬೇಡವೇ? ಹಾಗಾದರೆ ಅವರ ಜನ್ಮದ ಧ್ಯೇಯವೇನು? ತಾವು ಸಮಾಜದ ಗುರುತ್ವ ಜಂಗಮತ್ವಗಳೆಂಬ ಸಮಾಜಸೇವಾ (ಇಲ್ಲವೆ ಉದ್ಧಾರ) ರೂಪಕಾರ್ಯವನ್ನು ಹಿಡಿದಷ್ಟಕ್ಕೆ ಜನರು ತಮ್ಮನ್ನು ಪೂಜ್ಯರೆಂದು ಮನ್ನಿಸಿದಷ್ಟಕ್ಕೆ ಭಕ್ತತ್ವವನ್ನು ನಿರಾಕರಿಸುವದು ಬುದ್ಧಿವಂತಿಕೆಯೇ? ಭಕ್ತತ್ವವನ್ನು ತ್ಯಜಿಸಿದರೆ ಭವಿತ್ವದ ಹೊರತು ಬೇರೊಂದು ಸ್ಥಾನವೇ ಇಲ್ಲ. ಅವರೇನು ಅಧೋಗತಿಯನ್ನು ಬಯಸುವರೇ? ಲಿಂಗಾಂಗ ಸಾಮರಸ್ಯವು ಅವರ ಇಷ್ಟವಲ್ಲವೇ? ಅಂವಬಳಿಕ ಭಕ್ತವೆಂಬ ಶಬ್ದದ ಮೇಲೆ ಅದು ಕಡಿಮೆ ತರಗತಿಯದೆಂದು ಅಚ್ಚೊತ್ತಬಹುದೇ? ತಾವು ಭಕ್ತರಲ್ಲ ಅದಕ್ಕೂ ಶ್ರೇಷ್ಠವಾದ ಗುರುಜಂಗಮರು!" ಎಂದು ತಿಳಿಯುವದು ಅದೆಂತಹ ಅಕ್ಷಮ್ಯ ದೋಷವಾಗುವದು ನೋಡಿರಿ. ಭಕ್ತತ್ವಕ್ಕಿಂತಲೂ ಇನ್ನೊಂದು ಮಿಗಿಲಾದ ಪದವಿಯುಂಟೇ? ಹಾಗಿದ್ದರೆ "ಭಕ್ತಕಾಯೋ ಮಮಕಾಯಃ" ಎಂದು ಶಿವನೇಕೆ ಹೇಳಿಕೊಳ್ಳುತ್ತಿದ್ದನು ಅಭಿಮಾನದಿಂದ? ಗುರು ಜಂಗಮರು ವಹಿಸಿದ ಕಾರ್ಯವು ಭಕ್ತರ ಸೇವೆಯಲ್ಲವೇ? ತಂದೆ ತಾಯ್ಗಳು ಮಕ್ಕಳ ಸೇವಕರಲ್ಲವೇ? ಸೇವಕರಂತೆ ಸರ್ವದಾ ಅವರ ಹಿತಚಿಂತನ ಕಾರ್ಯದಲ್ಲಿಯೇ ನಿಮಗ್ನರಾಗಿ ದುಡಿಯುತ್ತಿದ್ದು, ಮತ್ತೆ ಭಕ್ತರನ್ನು ತಿರಸ್ಕರಿಸಿ ತಾವು ಹೆಚ್ಚಿನವರೆಂದು ಭಾವಿಸಿದರೆ,

ಈ ಅಜ್ಞಾನಕ್ಕೆ ಮೇರೆಯುಂಟೇ? ನಿಜವಾಗಿ ದೊಡ್ಡವರಾದವರು "ತಾವು ದೊಡ್ಡವರು" ಎಂಬ ಅಭಿಮಾನ ತಾಳರು. ಸಮಾಜವು ತಾನೇ ಅವರ ಉಪಕಾರ ಭಾರದಿಂದ ನಮ್ರವಾಗಿ ಅವರನ್ನು ಬೇಕಾದಷ್ಟು ದೊಡ್ಡವರೆಂದು ಹೊಗಳಬಹುದು. ಅದು ಯೋಗ್ಯ! ಇಂತಹ ಸ್ತುತಿಗೆ ಪಾತ್ರರಾಗುವಂತೆ ಅವರ ವರ್ತನವಾಗಲೆಂದು ನಾನು ಮನಃಪೂರ್ವಕವಾಗಿ ಆಶಿಸುವೆನು. ಇನ್ನು ಅವರೆಲ್ಲರು ವಿವೇಕವನ್ನು ತಂದುಕೊಂಡು ತಾವೂ ಭಕ್ತರೆಂಬುದನ್ನು ದೃಢವಾಗಿ ನಂಬಬೇಕು. ಒಣ ಅಹಂಕಾರವನ್ನು ತಳ್ಳಿ ಹಾಕಬೇಕು. ಅಹಂಕಾರವೇ ಭವದಬೀಜ. [ಇವರ ಭ್ರಾಂತಿಗೆ ಕಾರಣವಾಗದಂತೆ ಷಟ್‌ಸ್ಥಲದಲ್ಲಿ ಮೊದಲಿಗೇನೇ "ಈಶ್ವರ" ನೆನಬೇಕೆಂದು ನಾನು ಅನ್ನುವದು ಇದರ ಸಲುವಾಗಿಯೇ.]

ಇನ್ನು ಮತ್ತೊಂದು ಮಾತುಃ— ಈ ಅಯ್ಯಗಳು ತಮ್ಮನ್ನು ಸಹ ಗುರುವರ್ಗದಲ್ಲಿ ಸಮಾವೇಶ ಮಾಡಿಕೊಳ್ಳಲಿಕ್ಕೆ ಹೆಣಗಾಡುತ್ತಿರುವದು ಮಾತ್ರ ವಿಚಿತ್ರವೆನಿಸದೆ ಇರಲಾರದು. ಮೇಲಿನ ವಚನದಲ್ಲಿ ಹೇಳಿದಂತೆ ಯೋಗ್ಯತಾವಂತರಿದ್ದರೆ ಅವರಿಗೆ "ಬರೇ ಗುರುವೇಕೆ" ಅದಕ್ಕಿಂತಲೂ ಹೆಚ್ಚಾದ ಮಹತ್ವವು ಪ್ರಾಪ್ತವಾಗುವದು. ಇವರಿಗೆ ಸ್ವಾರ್ಥತ್ಯಾಗ ಬೇಡ, ಸಮಾಜ ಸೇವೆ ಬೇಡ, ಸುಜ್ಞಾನ ಸತ್ಕ್ರಿಯೆ ಸದಾಚಾರಗಳು ಬೇಡ! ಆದರೆ ಬರೇ ಪೂಜ್ಯತೆ, ಮಾನಮರ್ಯಾದೆ, ಸಮಾಜದಿಂದ ಸಂರಕ್ಷಣೆಗಳು ಒಳಿತಾಗಿ ಬೇಕಾಗಿದೆ. ಇದು ಹಿಂದಕ್ಕೆ ಸಮಾಜದ ಅಜ್ಞಾನ ದೆಸೆಯಲ್ಲಿ ನಡೆದಂತೆ, ಇನ್ನು ೨೦ನೆಯ ಶತಮಾನದ ಶಿಕ್ಷಣ ಕಾಲದಲ್ಲಿ-ಕಲಿಯುಗದಲ್ಲಿ-ಸಾಗುವದು ಶಕ್ಯವಿದೆಯೇ? ಇದನ್ನು ದಯಮಾಡಿ ಎಲ್ಲರೂ ಸಹಾನುಭೂತಿಪೂರ್ವಕ ಜಾಗ್ರತೆ ಗಮನಿಸುವರೆಂದು ಕೋರುವೆನು.

ಈಗ ಅಯ್ಯಗಳು ತಮ್ಮ ಮಕ್ಕಳಿಗೆ ಅಯ್ಯತನ ಮಾಡಿಸಲು ಉದ್ಯುಕ್ತರಾಗುವದಕ್ಕೆ ಮುಖ್ಯವಾಗಿ "ತಮ್ಮ ಮಕ್ಕಳಿಗೆ ಪೂಜ್ಯತೆಯುಂಟಾಗಿ ಭಿಕ್ಷಾಜೀವನಕ್ಕೆ ಸೌಕರ್ಯ ಒದಗುವದು" ಎಂಬ ಲೌಕಿಕ ಭಾವನೆಯು ಕಾರಣವಾಗಿರುವದೇ ಹೊರತು, ಅದರಿಂದ ಭಕ್ತೋದ್ಧಾರವೂ ಸಮಾಜಸೇವೆಯೂ ಘಟಿಸಿ ತಮ್ಮ ಮಕ್ಕಳ ಲಿಂಗಮಾರ್ಗ ಪ್ರಗತಿಗೆ ಒಳ್ಳೇ ಸಹಾಯವಾಗುವದೆಂಬ ಶ್ರೇಷ್ಠ ಕಲ್ಪನೆಯು, ಅವರ ಕನಸು

ಮನಸುಗಳಲ್ಲಿಯೂ ಕೂಡ ಇರುವದೇ ಇಲ್ಲ. ಇದು ಅವರಲ್ಲಿ ತೋರುವ ಬಹು ದೊಡ್ಡ ದೋಷ. ಅಯ್ಯತನದ ಬಿಗಿಯಾದ ಮಾರ್ಗದಲ್ಲಿ ತಮ್ಮಿಂದ ನಡೆಯುವದಾಗದಿದ್ದರೆ ಅದನ್ನೇಕೆ ಧರಿಸಿಕೊಳ್ಳಬೇಕು. "ಕೆಣಕಬಾರದು, ಕೆಣಕಿದ ಮೇಲೆ ಟಿಣಕಬಾರದು" ಎಂಬ ನಾಣ್ಣುಡಿಯಿರುವದು. ಹಿಡಿದು ಬತಗೆಡುವದೆಂದರೆ, ತಿಳಿದೂ ತಿಳಿದೂ ಭವಿತನಕ್ಕೆ ಸೇರಿ ಅಧೋಗತಿ ಹೊಂದುವದಲ್ಲವೇ? ಈಗ ಅಯ್ಯತನ ಹೊಂದಿದವರಲ್ಲಿ ೧೦೦ಕ್ಕೆ ೯೯ ಜನರು ಇಂತಹರೇ ಇರುವರು. ಇವರನ್ನವಲಂಬಿಸಿದ ಮುಗ್ಧ ಭಕ್ತರು ಸಹ, ಅಂಧಕನ ಕೈಯು ಅಂಧಕ ಹಿಡಿದಂತೆ ಆಗಿ, ಎಲ್ಲರೂ ಅಗಾಧ ವಾದ ಕರ್ತದಲ್ಲಿ ಬೀಳುವದರಲ್ಲಿ ಸಂದೇಹವಿಲ್ಲ. ಅಂತೇ ಈಗಿನ ದುರ್ಧರ ಸ್ಥಿತಿಯು ನಮ್ಮ ಸಮಾಜಕ್ಕೆ ಒದಗಿದೆ. ಅಯ್ಯಗಳ ವಿಷಯದಲ್ಲಿ ಮತ್ತು ಹೆಚ್ಚಿನ ವಿಚಾರಗಳು ಮುಂದೆ ಇದೇ ಲೇಖದಲ್ಲಿ ಪ್ರಸ್ತಾಪಿಸಲ್ಪಡು ವವು. ಇನ್ನು ಗುರು ಜಂಗಮರ ವಿಷಯಕ ಯಥಾರ್ಥ ಸ್ಥಿತಿಯನ್ನು ಅವಲೋಕಿಸುವಾ.

## ಗುರುಗಳು.

ಅರಿವು ಮುಂತಾಗಿ ಆಚಾರವಂತರಾದವರೇ ಗುರುಗಳು. ಇವರ ಶಿಷ್ಯಗಣವು ಬಹು ದೊಡ್ಡದಿರುವದು. ಅವರೇ ಇವರ ಮಕ್ಕಳು. ಅವರ ಉದ್ಧಾರ ಕಾರ್ಯವೇ ಇವರ ಪವಿತ್ರ ಕರ್ತವ್ಯವು. ಅವರಿಗೆ ಶಿವ ದೀಕ್ಷೆಯನ್ನು ಕರುಣಿಸಿ ಸದಾಚಾರನ್ನು ಬೋಧಿಸಿ, ಆಗಾಗ್ಗೆ ಅವರ ಮನೆಗಳಿಗೆ ಹೋಗಿ, ಮೇಲ್ವಿಚಾರಣೆ ಮಾಡುವದೂ ತಿದ್ದುವದೂ ಇವೇ ಇವರ ಕೆಲಸಗಳು. ಇದೇ ಮೇರೆಗೆ ಶಿಷ್ಯರ ಮನೆಗಳಲ್ಲಿ ಲಿಂಗಧಾ ರಣ ವಿವಾಹಾದಿ ಸಂಸ್ಕಾರಗಳನ್ನು ಮಾಡುವದಾದರೂ ಇವರದೇ ಕಾರ್ಯ. ಇದೆಲ್ಲಾ ಮೊದಲಿನಿಂದ ಇದ್ದ ಸಮಾಜದ ವಿಷಯವಾಗಿ ಅವರು ಮಾಡುವ ವ್ಯವಸ್ಥೆಯೇ ಆಯಿತು. ಇಷ್ಟರಿಂದಲೇ ಅವರ ಕರ್ತವ್ಯವು ಮುಗಿಯಲಿಲ್ಲ ವೀರಶೈವ ಸಮಾಜದ ಅಪ್ರತಿಮ ತತ್ವಗ ಳನ್ನೆಲ್ಲ ಅಲ್ಲಲ್ಲಿ ಬೋಧಿಸುತ್ತ, ಅನ್ಯ ಮತೀಯರ ಮನ ಒಲಿಸಿ, ಅವರ ನ್ನು ಶಿವಸಂಸ್ಕಾರಗೊಳಿಸಿ, ಲಿಂಗಾಯತರ ಮತ ವಿಸ್ತಾರವನ್ನು ಮಾಡ ತಕ್ಕದ್ದಿರುತ್ತದೆ. ಅವರು ಈಗ ತಮ್ಮ ಇದೆಲ್ಲಾ ಕರ್ತವ್ಯವನ್ನು ಸರಿ ಯಾಗಿ ಮಾಡದಿರುವದರಿಂದಲೇ, ಸಮಾಜವು ಹೀನಾವಸ್ಥೆಗಿಳಿದುದ

ಲ್ಲದೆ ಬಹು ಜನರು ಅಜ್ಞಾನಿಗಳಾಗಿ ಪರಧರ್ಮಗಳಿಗೆ ಆಹುತಿಯಾಗು ತ್ತಿರುವರು. ಇದರಿಂದ ಸಮಾಜವು ದಿನೇ ದಿನೇ ಕ್ಷೀಣಿಸುತ್ತ ನಡೆದದೆ.

ಗುರುವು ಸಾಮಾನ್ಯನಲ್ಲ. ಅವನ ಯೋಗ್ಯತೆಯೋ ಬಹು ದೊಡ್ಡದು. ಅದು 'ಗುರು' ಶಬ್ದದ ನಿರ್ವಚನದಿಂದಲೇ ವ್ಯಕ್ತವಾಗುತ್ತದೆ:—

"ಗುಕಾರಂ ಗುಣಾತೀತಂ ರೂಪಾತೀತಂ ರುಕಾರಕಂ।
ಗುಣಾತೀತ ಮರೂಪಂಚ ಯೋದದ್ಯಾತ್ ಸಗುರುಸ್ಮೃತಃ॥"

ಶಿಷ್ಯನಿಗೆ ಗುಣಾತೀತ (ನಿರ್ಗುಣ) ರೂಪಾತೀತ (ಅವ್ಯಕ್ತ) ಅವ ಸ್ಥೆಯನ್ನು ಒದಗಿಸಬೇಕಾದರೆ, ಅವನು ಮಹಾಜ್ಞಾನಿಯೂ ಶಿವಯೋಗಿಯೂ ಸಮರ್ಥನೂ ಇರಬೇಕೆಂಬದು ನಿರ್ವಿವಾದವು. ಗುರುವನ್ನು ಕುರಿತು ಸಿದ್ಧಾಂತ ಶಿಖಾಮಣಿಯಾದರೂ ಬಹುಪರಿಯಿಂದ ಶೋಧಿಸಿ ಹೀಗೆ ವರ್ಣಿಸಿರುತ್ತದೆ. ಅವನಲ್ಲಿ ೨೪ ಲಕ್ಷಣಗಳನ್ನು ಅದು ಹೇಳಿದೆ. ಅವು ಪದ್ಯರೂಪದಲ್ಲುಂಟು. ಅವುಗಳ ಮುಖ್ಯ ಸಾರಾಂಶವೆಂದರೆ— ಗುರುವು ೧ ಲೋಭ ಮೋಹ ವಿವರ್ಜಿತನೂ ೨ ಆತ್ಮತತ್ವ ವಿಚಾರ ಜ್ಞನೂ, ೩ ವಿಮುಕ್ತ ವಿಷಯ ಭ್ರಮನೂ, ೪ ಶಿವಸಿದ್ಧಾಂತ ತತ್ವ ಜ್ಞನೂ, ೫ ಧಾರ್ಮಿಕನೂ, ೬ ಸತ್ಯವಾದಿಯೂ, ೭ ಕುಮಾರ್ಗಾಚಾರ ವರ್ಜಿತನೂ, ೮ ಶಾಂತನೂ, ೯ ಶಿವತತ್ವವಿವೇಕಿಯೂ, ೧೦ ಲಿಂಗಧಾರಣ ಸಂಯುಕ್ತನೂ, ೧೧ ಲಿಂಗಾಂಗ ಯೋಗತತ್ವನೂ, ೧೨ ನಿರೂಢಾದ್ವೈತವಾಸನೂ, ೧೩ ಲಿಂಗಾಂಗ ಸ್ಥಲಭೇದಜ್ಞನೂ ಆಗಿರಬೇಕು. ಇವೇ ಸಿ.ಶಿ ಯು ಹೇಳಿದುದರಲ್ಲಿ ಮುಖ್ಯವಾದವುಗಳು. ಇನ್ನು ಶಿವಶರಣರು ಗುರುವನ್ನು ಕುರಿತು ಹೇಗೆ ಹೇಳಿರುವರೆಂಬವನ್ನು ನೋಡುವಾ. ಆ ವಚನಗಳು ಇವು:—

೧. "ಅಯ್ಯಾ ನೀನು ಎನಗೆ ಗುರುವಪ್ಪೊಡೆ, ನಾನು ನಿನಗೆ ಶಿಷ್ಯನಪ್ಪೊಡೆ, ಎನ್ನ ಕರಣಾದಿ ಗುಣಂಗಳ ಕಳೆದು, ಎನ್ನ ಕಾಯದ ಕರ್ಮವ ತೊಡೆದು, ಎನ್ನ ಪ್ರಾಣದ ಧರ್ಮವ ನಿಲಿಸಿ, ನೀನು ಎನ್ನ ಕರ್ಮವ ತೊಡೆದು, ಎನ್ನ ಪ್ರಾಣದ ಧರ್ಮವ ನಿಲಿಸಿ, ನೀನು ಎನ್ನ ಕಾಯದಲಡಗಿ, ನೀನೆನ್ನ ಪ್ರಾಣದಲಡಗಿ, ನೀನೆನ್ನ ಭಾವದಲಡಗಿ, ನೀನೆನ್ನ ಕರಸ್ಥಲಕೆ ಬಂದು ಕಾರುಣ್ಯವ ಮಾಡು ಗುಹೇಶ್ವರಾ"

ಅಯ್ಯಾ ಗುಹೇಶ್ವರಾ! ನೀನು ನನ್ನ ದೇಹದಲ್ಲಿ ನೆಲಿಸಿ, ಕರಣ ಗುಣ (ವಿಷಯಭೋಗೇಚ್ಛೆ) ಗಳನ್ನೂ, ಕಾಯದ ಸ್ವಾರ್ಥಪರ ಕರ್ಮಗಳನ್ನೂ ನಾಶಪಡಿಸು. ಮತ್ತು ಪ್ರಾಣದಲ್ಲಿದ್ದುಕೊಂಡು, ಅದರ (ದೇಹಾಭಿಮಾನ ಹಾಗು ಮೂಲ ರೂಪ) ಕರ್ಮಗಳನ್ನೂ ನಿವಾರಿಸು. ಮತ್ತು ನನ್ನ ಭಾವದಲ್ಲಿ ವಾಸಿಸಿ, ದುರ್ಭಾವನೆಗಳನ್ನು ಬಿಡಿಸಿ ಸದ್ಭಾವನೆಗಳನ್ನು ಕರುಣಿಸು. ಸಾರಾಂಶ-ದೇಹ ಕರಣ ಪ್ರಾಣ ಭಾವಗಳನ್ನೆಲ್ಲ ವ್ಯಾಪಿಸಿ ನಿನ್ನ ಸ್ವರೂಪವನಳವಡಿಸಿ, ಹೊರಗೆ ಕರದಲ್ಲಿದ್ದುಕೊಂಡು ಕೃಪೆಮಾಡು; ಅಂದರೆ ಬಹಿರಂಗ ಅಂತರಂಗ ಸ್ವರೂಪವೆಲ್ಲ ನೀನೇ ಆಗಿ, ಅಭಿನ್ನತೆಯಿಂದ ವರ್ತಿಸುವ ಸ್ಥಿತಿಯನ್ನೊದಗಿಸು; ಎಂದು ಗುಹೇಶ್ವರ ರೂಪ ಗುರುವನ್ನ ಶ್ರೀಪ್ರಭುದೇವರು ಪ್ರಾರ್ಥಿಸಿದ್ದಾರೆ.

೨. "ಸಕಲವನೆಲ್ಲ ಲಿಂಗದಲ್ಲಿ ತೋರಿದನು, ಆ ಲಿಂಗದ ಬೆಳಗ ಸಕಲದರೊಳಗೆ ತೋರಿದನು. ಎನ್ನ ಮನಕ್ಕೆ ಅತಿಶಯವಾಗಿ ತೋರಿ ರಕ್ಷಿಸಿದನು. ಎನ್ನೊಳು ತನ್ನ ತೋರಿದನು. ತನ್ನೊಳು ಎನ್ನ ತೋರಿದನು. ಮತ್ತೆ ಎರಡನು ಒಂದೆ ಮಾಡಿ ಎನ್ನೊಳಗೆ ಗುಹೇಶ್ವರನಾದನು. ಶ್ರೀಗುರು ಬಸವಣ್ಣನು."

ಸಕಲ (ಪ್ರಪಂಚ)ವನೆಲ್ಲ ಲಿಂಗದಲ್ಲಿ ತೋರಿದನು (ಲಿಂಗದ ಹೊರ್ತು ಜಗತ್ತಿನಲ್ಲಿ ಬೇರೊಂದು ವಸ್ತುವೇ ಇಲ್ಲೆಂಬ ಜ್ಞಾನವನ್ನು ಕರುಣಿಸಿದನು.) ಆ ಲಿಂಗದ ಬೆಳಗ (ಚೈತನ್ಯವನ್ನು) ಸಕಲ ಚರಾಚರ ವಸ್ತುಗಳಲ್ಲಿ ತೋರಿದನು. (ಲಿಂಗವು ಚೈತನ್ಯರೂಪದಿಂದ ಎಲ್ಲ ಪದಾರ್ಥಗಳಲ್ಲಿರುವದೆಂಬ ಅರಿವನ್ನುಂಟು ಮಾಡಿದನು.) ನನ್ನ ಮನಸ್ಸಿಗೆ ಅತ್ಯಂತ ಮಿಗಿಲಾಗಿ (ಜಗತ್ತಿನ ಮೂಲ ಕಾರಣವು ಲಿಂಗವೇ ಎಂಬದಾಗಿ) ಹೊಳೆದು, ನನ್ನನ್ನು ಉದ್ಧರಿಸಿದನು. ನನ್ನಲ್ಲಿ ತಾನಿರುವದನ್ನು, ತನ್ನಲ್ಲಿ ನಾನಿರುವದನ್ನು ಇಬ್ಬರೂ ಒಂದೇ ವಸ್ತುವೆಂಬದನ್ನೂ, ಅನುಭವಕ್ಕೆ ತಂದು ಕೊಟ್ಟು, ನನ್ನಲ್ಲಿ ಗುಹೇಶ್ವರನೂ (ಆತ್ಮ) ವಿಶ್ವದಲ್ಲಿ ಮಹಾಲಿಂಗ (ಪರಮಾತ್ಮ)ನೂ ಆಗಿ ಪ್ರಕಾಶಿಸಿದನು. ಶ್ರೀಗುರು ಬಸವಣ್ಣನು; ಎಂದು ಪ್ರಭುದೇವರು ಗುರುವಿನ ಕರ್ತೃತ್ವವನ್ನು ಹೊಗಳಿದ್ದಾರೆ.

ಈ ಮೇರೆಗೆ ಶಿಷ್ಯೋದ್ಧಾರವ ಮಾಡಿ, ಆತನ ಜನ್ಮ ಸಾಫಲ್ಯವನೊದಗಿಸುವ ಸಾಮರ್ಥ್ಯಶಾಲಿಯು ಆ ಗುರುವು! ಸಿ. ಶಿ. ಯಲ್ಲಿ ಹೇಳಿದ

ಮೇಲಿನ ಲಕ್ಷಣೋಪೇತನಾಗಿ ಗುರುದೇವನಿರಬೇಕೆಂಬುದೇನು ಅತಿಶಯೋಕ್ತಿಯಲ್ಲೆಂಬುದು. ಇದರಿಂದ ತಾನೇ ತೋರದಿರದು. ಇವೆಲ್ಲ ಯೋಗ್ಯ ಗುರುಗಳ ಲಕ್ಷಣಗಳು. ಮುಂದಿನ ವಚನಗಳಲ್ಲಿ ಶಿವಶರಣರು ತಾಮಸ (ನಿಂದ್ಯ) ಗುರುಗಳ ಇರವನ್ನು ವಿಸ್ತರಿಸುವರು:—

೩. "ಉಪಚಾರದ ಗುರುವಿಂಗೆ ಉಪಚಾರದ ಶಿಷ್ಯ, ಉಪಚಾರದ ಲಿಂಗ, ಉಪಚಾರದ ಜಂಗಮ, ಉಪಚಾರದ ಪ್ರಸಾದ ಇಂತಹ ಗುರುವಿಂಗೆ ಭವದ ಲೆಂಕನಾಗಿ ಅಂಧಕನ ಕೈಯ ಅಂಧಕ ಹಿಡಿದಂತೆ. ಇವರೆಲ್ಲರು ಹೊಲಬಗೆಟ್ಟರು ಕಾಣಾ ಗುಹೇಶ್ವರಾ."

ಗುರುತ್ವದ ಅದಾವ ಗುಣಗಳೂ ಇರದೆ, ಬರೇ ಹೆಸರಿಗೆ ಮಾತ್ರ ಡಾಂಭಿಕ ರೀತಿಯಿಂದ ಗುರುವೆಂದು ಕರಿಸಿಕೊಳ್ಳುವವನು, ಉಪಚಾರದ ಗುರುವೆಂದು ಹೇಳಲ್ಪಡುವನು. [ಈಗ ಬಹುಶಃ ಇಂತಹ ಗುರುಗಳೇ ಎಲ್ಲೆಲ್ಲಿಯೂ ತುಂಬಿರುವರೆಂಬುದು ವಿಷಾದಕರ ಸಂಗತಿಯು.] ಇಂತಹ ಗುರುವಿನಿಂದ ಪಡೆದ ಲಿಂಗವು ಸಹ ಉಪಚಾರದ್ದೇ ಆಗುವದು. (ಅಂದರೆ ನಿಮಿತ್ತ ಮಾತ್ರವೆನಿಸುವದು.) ಅದರಿಂದ ಧರಿಸಿಕೊಂಡವನ ಅದಾವ ಪ್ರಗತಿಯೂ ಆಗದೆ, ಬರೇ ದೇಹಕ್ಕೆ ಭಾರಭೂತವೇ ಆಗಿರುವದು. ಗುರುವೇ ಅರಣ್ಯಪಂಡಿತನಾಗಿದ್ದರೆ, ಶಿಷ್ಯನು ಮಹಾಘೋರಾರಣ್ಯ ಪಂಡಿತನಾಗಿರುವದೇನಚ್ಚರಿ! ಇದರಂತೆ ಆ ಶಿಷ್ಯನಿಗೆ ಜಂಗಮವೂ (ಸುಜ್ಞಾನವೂ), ಪ್ರಸಾದವೂ (ಲಿಂಗಾಂಗ ಸಾಮರಸ್ಯವೂ) ಉಪಚಾರದವೇ ಅಂದರೆ ದೊಡ್ಡ ಬಂಡಿಗಾಲಿ! ಇಂತಹ ಗುರುವಿಗೆ ಶಿಷ್ಯನಾಗುವದೆಂದರೆ, ಪ್ರತ್ಯಕ್ಷ ಭವರೋಗದ ಆಳಾಗುವದೇ ಸರಿ! ಅಂತೆಯೇ ಕುರುಡನ ಕೈಯ ಮತ್ತೊಬ್ಬ ಕುರುಡನು ಹಿಡಿದಂತಾಗಿ, ಇವರೀರ್ವರೂ ಹೊಲಬುಗೆಟ್ಟರು (ವೀರಶೈವದಿಂದ ಭ್ರಷ್ಟರಾದರು.) ನೋಡಯ್ಯಾ ಗುಹೇಶ್ವರಾ! ಎಂದು ಪ್ರಭುದೇವರು ವ್ಯಸನಪಟ್ಟಿದ್ದಾರೆ.

೪. "ತನ್ನ ಶಿಷ್ಯ ತನ್ನ ಮಗನೆಂಬದು ತಪ್ಪು, ಅದು ಅಲ್ಲ! ಇಲ್ಲಿ ಆತನ ಧನಕ್ಕೆ ತಂದೆಯಾದನಲ್ಲದೆ ಆತನ ಮನಕ್ಕೆ ತಂದೆಯಾಗಲಿಲ್ಲ. ಏಕೆ? ಆತನ ಮನವನರಿಯನಾಗಿ ಧನಕ್ಕೆ ತಂದೆಯಾದನು. ತನ್ನಲ್ಲಿದ್ದ ಭಕ್ತಿಯ ಮಾರಿಕೊಂಡುಂಬುವವರು ನಿಮ್ಮ ನಿಜಭಕ್ತರಲ್ಲವಯ್ಯಾ ಮಲ್ಲಿಕಾರ್ಜುನಾ."

ಇದರರ್ಥವು ಮೇಲೆಯೇ ತೋರುತ್ತಿದೆ. ಮನಕ್ಕೆ ತಂದೆಯಾಗುವದೆಂದರೆ ಮನದೊಡೆಯನಾದ ಶಿವಲಿಂಗ ಸ್ವರೂಪನಾಗಬೇಕೆಂಬರ್ಥ.

ಭಕ್ತಿಯ ಮಾರಿಕೊಂಬುದೆಂದರೆ, ತಾನು ಅರಿತ ಶಿವಭಕ್ತಿಯ ಮಾರ್ಗವನ್ನು ಶಿಷ್ಯನಿಗೆ ಅರುಹುವುದಕ್ಕೆ ಬೆಲೆಯನ್ನು ಬೇಡಿ ಪಡೆಯುವದೆಂದು ತಿಳಿಯಬೇಕು.

೫. "ತನ್ನ ಮನೆಯ ಹೊಗದ ಗುರುವಿನ ಅರಸಿಕೊಂಡು ಹೋಗುವರ ಶಿಷ್ಯನಲ್ಲವಯ್ಯಾ. ತಾನು ಹೊಗದ ಮನೆಗೆ ಉಪದೇಶ ಮಾಡುವವ ಗುರುವಲ್ಲವಯ್ಯಾ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ. ಲಿಂಗವಮಾರಿಕೊಂಡುಂಬ ಗುರು ಶಿವದ್ರೋಹಿ. ಈ ಗುರುಶಿಷ್ಯರಿಬ್ಬರು ದೇವ ಭಕ್ತ ಎಂದಡೆ ನಾಯಕನರಕ ತಪ್ಪದು ಕೂಡಲಸಂಗಮದೇವಾ"

ಈಗ ಎಷ್ಟೋಜನ ಗುರುಗಳೆಂಬುವವರು ತಮ್ಮ ಶಿಷ್ಯರ ಮನೆಗೆ ಹೋದಾಗ "ತಾವು ಕಟ್ಟಾ ಮಡಿಯವರು" ಮುಂತಾದ ಒಣ ಜಂಭವನ್ನು ಕೊಚ್ಚುತ್ತ ಅಜ್ಞಾನದಿಂದ ಸ್ವಜಾತೀಯ ಶಿಷ್ಯರಲ್ಲಿಯೂ ಕೂಡ ಉಲಪಿ ತೆಗೆದುಕೊಂಡು, ಬೇರೆ ಕಡೆಗೆ ಹೊಸ ಒಳಿಕೆಯ ಪಾಕಮಾಡಿಕೊಂಡು, ಉಂಡುಹೋಗುವದು ಕಂಡುಬರುತ್ತದೆ. ಇದೆಂತಹ ಮರುಳತನ! ವೀರಶೈವ ಮತದ ಕಲ್ಪನೆಯ ಲವಲೇಶವಾದರೂ ಇವರಲ್ಲಿದ್ದಂತೆ ಕಂಡುಬರುವದಿಲ್ಲ. ಈಗ ಹೊಸದಾಗಿ ಈ ಕಟ್ಟಾಮಡಿಯ ಸೋಂಕು ಪಿಡಗು ಬಳ್ಳೇ ಭರದಿಂದ ಹಬ್ಬಹತ್ತಿದೆ. ಈ ಒಣ ಡಾಂಭಿಕತನವು ಸರಿಯಾದುದಲ್ಲ. ಅಂತಹರು ಈ ವಚನದಿಂದ ಎಚ್ಚರಾಗುವರೆಂದು ಆಶಿಸುವೆನು. ಇವರೇ ಶಿವದ್ರೋಹಿಗಳು.

ಗುರುಗಳಾದರೂ ಸರಿಯಾದ ಕ್ರಿಯಾಚಾರಸಂಪನ್ನರೂ ಸಮ್ಯಕ್ ಜ್ಞಾನಯುಕ್ತರೂ ಆಗಿ, ತಮ್ಮ ಜನ್ಮ ಸಾಫಲ್ಯ ಹೊಂದುವ ಉದ್ದಿಶ್ಯ, ಪರಮಗುರು (ಗುರುವಿನ ಗುರು) ವಾದ ಜಂಗಮಮೂರ್ತಿಗೆ ಶರಣುಹೋಗಿ ಸಮಾರಾಧಿಸುವದು (ಪಾದೋದಕ ಪ್ರಸಾದಪಡೆವುದು) ಅವಶ್ಯವದೆ; ಅದರಿಂದ ಅವನು ಸದ್ಗುರುವೆನಿಸಿಕೊಂಡು ಲಿಂಗಾಂಗಸಾಮರಸ್ಯ ಹೊಂದುವನು. ಈಗ ಗುರುವರ್ಗದವರು ಜಂಗಮರಿಂದ ಅಲಿಪ್ತರಾಗಿ ಉಳಿದು, ಅತ್ಯಂತ ಅಹಂಕಾರಿಗಳಾಗಿ, ಬರೇ ಡಂಭಾಚಾರ ಬೆಳಸಿ, ಅದರ ಯೋಗದಿಂದಲೇ ದೊಡ್ಡವರೆನ್ನಿಸಿಕೊಳ್ಳಬೇಕೆಂಬ ದುರ್ಮೋಹಕ್ಕೆ ಒಳಗಾದುದು ತೀರ ಗರ್ಹ್ಯವಾಗಿದೆ. ಅವರು ಬೇಗ ಎಚ್ಚರಗೊಳ್ಳದಿದ್ದರೆ, ಸಮಾಜವು ಕಟುವಾದ ಸಾಧನ ಕೈಕೊಳ್ಳದೆ ಇರದು.

(ಮುಂದುವರಿವುದು.)

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೪.]

---

ನಾವು ಹಿಂದಿನ ಲೇಖಾಂಕದಲ್ಲಿ ಬಸವೇಶ್ವರನು ಸಂಗಮ ಕ್ಷೇತ್ರದಲ್ಲಿ ವಾಸಮಾಡಹತ್ತಿದ ಬಳಿಕ ಆವ ರೀತಿಯಿಂದ ಅವನು ಕಾಲ ಕಳೆಯಹತ್ತಿದನೆಂಬುದನ್ನು ಸಂಕ್ಷಿಪ್ತವಾಗಿ ವಿವೇಚಿಸಿದ್ದೇವೆ. ಅದರಲ್ಲಿ ನಾವು ಬಸವೇಶ್ವರನು ಕೇವಲ ಸಂಗಮೇಶ್ವರನ ದೇವಸ್ಥಾನದಲ್ಲಿ ದೇವರ ಭಜನೆಯನ್ನು ಮಾಡುತ್ತ ಅಥವಾ ನದೀತೀರದಲ್ಲಿದ್ದುಕೊಂಡು ಪರಮಾತ್ಮನನ್ನು ಧ್ಯಾನಿಸುತ್ತ ಏಕಾಕಿಯಾಗಿ ವಾಸಿಸದೆ ಜನರಲ್ಲಿ ಬೋಧ ಮಾಡುತ್ತ ಬುದ್ಧದೇವನಂತೆ ಉತ್ತರಕರ್ನಾಟಕ ಪ್ರಾಂತದಲ್ಲೆಲ್ಲ ಸಂಚರಿಸಿರಬೇಕೆಂದು ಊಹಿಸಿದ್ದೇವೆ. ಹೀಗೆ ಊಹಿಸಲು ಸಾಕಷ್ಟು ಪ್ರಮಾಣಗಳಿವೆಯೋ ಹೇಗೆಂಬುದಕ್ಕೆ ಅವುಗಳು ಅವನ ವಚನಗಳಲ್ಲಿಯೇ ದೊರೆಯುತ್ತವೆಂದು ನಮ್ಮ ಅಭಿಪ್ರಾಯವಿದೆ. ಅವುಗಳನ್ನು ನಾವು ಈಗಿನ ಲೇಖದಲ್ಲಿ ವಿವರಿಸಲು ಯತ್ನಿಸುತ್ತೇವೆ.

ಹೀಗೆ ಬಸವೇಶ್ವರನು ಸಂಗಮಕ್ಷೇತ್ರದಲ್ಲಿ ಕಾಲಕಳೆದ ಬಳಿಕ ಅವನು ಮಂಗಳವಾಡಕ್ಕೆ ಹೋಗಿ ಅಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಕೆಲವೊಂದು ನೌಕರಿಯನ್ನು ಸಂಪಾದಿಸಿ ಇರಲಿಕ್ಕೆ ಹತ್ತಿದನು. ಹೀಗೆ ನೌಕರಿಯಲ್ಲಿದ್ದಾಗ ಅವನು ಯಾವ ರೀತಿಯಿಂದ ಕಾಲ ಕಳೆದನೆಂಬದನ್ನು ಮುಂದೆ ವಿವೇಚಿಸುವೆವು. ಆಗ ಅವನು ಒಬ್ಬ ರಾಜಕೀಯ ಪುರುಷನಂತೆಯೇ ವ್ಯವಹರಿಸಿದ್ದಾನೆಂದು ನಮ್ಮ ಅಭಿಪ್ರಾಯವಿದೆ. ಈ ವಿಷವಾಗಿಯೂ ಅವನ ವಚನಗಳಲ್ಲಿ ಸಾಕಷ್ಟು ಆಧಾರಗಳು ನಮಗೆ ದೊರೆಯುತ್ತವೆ. ಅಲ್ಲಿ ಅವನು ತನ್ನ ಯೋಗ್ಯತೆಯನ್ನು ತೋರಿಸಿದ್ದರಿಂದಲೇ ಬಿಜ್ಜಳನಿಂದ ಅವನಿಗೆ ಆಡಳಿತೆಯಲ್ಲಿ ಒಂದು ಶ್ರೇಷ್ಠಾಧಿಕಾರವು ದೊರೆಯಿತು. ಆಗ ಬಿಜ್ಜಳನು ಸ್ವತಂತ್ರನಾಗಿ ಕಲ್ಯಾಣದಲ್ಲಿ ಚಕ್ರಾಧಿಪತ್ಯವನ್ನು ಹೊಂದಿದ್ದನು. ಅವನಲ್ಲಿ ಹೀಗೆ ಆರು ವರ್ಷಗಳ ವರೆಗೆ ಬಸವೇಶ್ವರನು ಇದ್ದು ಅನೇಕ ಮಹತ್ಕೃತ್ಯಗಳನ್ನು ಮಾಡಿದ್ದಾನೆ. ಅವುಗಳು ಪವಾಡರೂಪದಿಂದ ವೀರಶೈವವಾಙ್ಮಯದಲ್ಲಿ ಪ್ರಸಿದ್ಧಿಯನ್ನು ಹೊಂದಿವೆ.

ಭಕ್ತಿಯ ಮಾರಿಕೊಂಬುದೆಂದರೆ, ತಾನು ಅರಿತ ಶಿವಭಕ್ತಿಯ ಮಾರ್ಗ ವನ್ನು ಶಿಷ್ಯನಿಗೆ ಅರುಹುವುದಕ್ಕೆ ಬೆಲೆಯನ್ನು ಬೇಡಿ ಪಡೆಯುವದೆಂದು ತಿಳಿಯಬೇಕು.

೫. "ತನ್ನ ಮನೆಯ ಹೊಗದ ಗುರುವಿನ ಅರಸಿಕೊಂಡು ಹೋಗು ವರ ಶಿಷ್ಯನಲ್ಲವಯ್ಯಾ. ತಾನು ಹೊಗದ ಮನೆಗೆ ಉಪದೇಶ ಮಾಡು ವವ ಗುರುವಲ್ಲವಯ್ಯಾ. ಅಂಗವ ಮಾರಿಕೊಂಡುಂಬ ಶಿಷ್ಯ ಗುರು ದ್ರೋಹಿ. ಲಿಂಗವಮಾರಿಕೊಂಡುಂಬ ಗುರು ಶಿವದ್ರೋಹಿ. ಈ ಗುರುಶಿಷ್ಯ ರಿಬ್ಬರು ದೇವ ಭಕ್ತ ಎಂದಡೆ ನಾಯಕನರಕ ತಪ್ಪದು ಕೂಡಲಸಂಗಮ ದೇವಾ"

ಈಗ ಎಷ್ಟೋಜನ ಗುರುಗಳೆಂಬುವವರು ತಮ್ಮ ಶಿಷ್ಯರ ಮನೆಗೆ ಹೋದಾಗ "ತಾವು ಕಟ್ಟಾ ಮಡಿಯವರು" ಮುಂತಾದ ಒಣ ಜಂಭ ವನ್ನು ಕೊಚ್ಚುತ್ತ ಅಜ್ಞಾನದಿಂದ ಸ್ವಜಾತೀಯ ಶಿಷ್ಯರಲ್ಲಿಯೂ ಕೂಡ ಉಲಪಿ ತೆಗೆದುಕೊಂಡು, ಬೇರೆ ಕಡೆಗೆ ಹೊಸ ಒಳಿಕೆಯ ಪಾಕಮಾಡಿ ಕೊಂಡು, ಉಂಡುಹೋಗುವದು ಕಂಡುಬರುತ್ತದೆ. ಇದೆಂತಹ ಮರು ಳತನ! ವೀರಶೈವ ಮತದ ಕಲ್ಪನೆಯ ಲವಲೇಶವಾದರೂ ಇವರಲ್ಲಿದ್ದಂತೆ ಕಂಡುಬರುವದಿಲ್ಲ. ಈಗ ಹೊಸದಾಗಿ ಈ ಕಟ್ಟಾಮಡಿಯ ಸೋಂಕು ಪಿಡುಗು ಒಳ್ಳೇ ಭರದಿಂದ ಹಬ್ಬಹತ್ತಿದೆ. ಈ ಒಣ ಡಾಂಭಿಕತನವು ಸರಿಯಾದುದಲ್ಲ. ಅಂತಹರು ಈ ವಚನದಿಂದ ಎಚ್ಚರಾಗುವರೆಂದು ಆಶಿ ಸುವೆನು. ಇವರೇ ಶಿವದ್ರೋಹಿಗಳು.

ಗುರುಗಳಾದರೂ ಸರಿಯಾದ ಕ್ರಿಯಾಚಾರಸಂಪನ್ನರೂ ಸಮ್ಯಕ್ ಜ್ಞಾನಯುಕ್ತರೂ ಆಗಿ, ತಮ್ಮ ಜನ್ಮ ಸಾಫಲ್ಯ ಹೊಂದುವ ಉದ್ದಿಶ್ಯ, ಪರಮಗುರು (ಗುರುವಿನ ಗುರು) ವಾದ ಜಂಗಮಮೂರ್ತಿಗೆ ಶರಣು ಹೋಗಿ ಸಮಾರಾಧಿಸುವದು (ಪಾದೋದಕ ಪ್ರಸಾದಪಡೆವುದು) ಅವಶ್ಯ ವದೆ; ಅದರಿಂದ ಅವನು ಸದ್ಗುರುವೆನಿಸಿಕೊಂಡು ಲಿಂಗಾಂಗಸಾಮರಸ್ಯ ಹೊಂದುವನು. ಈಗ ಗುರುವರ್ಗದವರು ಜಂಗಮರಿಂದ ಅಲಿಪ್ತರಾಗಿ ಉಳಿದು, ಅತ್ಯಂತ ಅಹಂಕಾರಿಗಳಾಗಿ, ಬರೇ ಡಂಭಾಚಾರ ಬೆಳಿಸಿ, ಅದರ ಯೋಗದಿಂದಲೇ ದೊಡ್ಡವರೆನ್ನಿಸಿಕೊಳ್ಳಬೇಕೆಂಬ ದುರ್ಮೋಹಕ್ಕೆ ಒಳ ಗಾದುದು ತೀರ ಗರ್ಹ್ಯವಾಗಿದೆ. ಅವರು ಬೇಗ ಎಚ್ಚರಗೊಳ್ಳದಿದ್ದರೆ, ಸಮಾಜವು ಕಟುವಾದ ಸಾಧನ ಕೈಕೊಳ್ಳದೆ ಇರದು.

(ಮುಂದುವರಿವುದು.)

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೪.]

---

ನಾವು ಹಿಂದಿನ ಲೇಖಾಂಕದಲ್ಲಿ ಬಸವೇಶ್ವರನು ಸಂಗಮ ಕ್ಷೇತ್ರದಲ್ಲಿ ವಾಸಮಾಡಹತ್ತಿದ ಬಳಿಕ ಆವ ರೀತಿಯಿಂದ ಅವನು ಕಾಲ ಕಳೆಯಹತ್ತಿದನೆಂಬುದನ್ನು ಸಂಕ್ಷಿಪ್ತವಾಗಿ ವಿವೇಚಿಸಿದ್ದೇವೆ. ಅದರಲ್ಲಿ ನಾವು ಬಸವೇಶ್ವರನು ಕೇವಲ ಸಂಗಮೇಶ್ವರನ ದೇವಸ್ಥಾನದಲ್ಲಿ ದೇವರ ಭಜನೆಯನ್ನು ಮಾಡುತ್ತ ಅಥವಾ ನದೀತೀರದಲ್ಲಿದ್ದುಕೊಂಡು ಪರಮಾತ್ಮನನ್ನು ಧ್ಯಾನಿಸುತ್ತ ಏಕಾಂಕಿಯಾಗಿ ವಾಸಿಸದೆ ಜನರಲ್ಲಿ ಬೋಧಮಾಡುತ್ತ ಬುದ್ಧದೇವನಂತೆ ಉತ್ತರಕರ್ನಾಟಕ ಪ್ರಾಂತದಲ್ಲೆಲ್ಲ ಸಂಚರಿಸಿರಬೇಕೆಂದು ಊಹಿಸಿದ್ದೇವೆ. ಹೀಗೆ ಊಹಿಸಲು ಸಾಕಷ್ಟು ಪ್ರಮಾಣಗಳಿವೆಯೋ ಹೇಗೆಂಬುದಕ್ಕೆ ಅವುಗಳು ಅವನ ವಚನಗಳಲ್ಲಿಯೇ ದೊರೆಯುತ್ತವೆಂದು ನಮ್ಮ ಅಭಿಪ್ರಾಯವಿದೆ. ಅವುಗಳನ್ನು ನಾವು ಈಗಿನ ಲೇಖದಲ್ಲಿ ವಿವರಿಸಲು ಯತ್ನಿಸುತ್ತೇವೆ.

ಹೀಗೆ ಬಸವೇಶ್ವರನು ಸಂಗಮಕ್ಷೇತ್ರದಲ್ಲಿ ಕಾಲಕಳೆದ ಬಳಿಕ ಅವನು ಮಂಗಳವಾಡಕ್ಕೆ ಹೋಗಿ ಅಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಕೆಲವೊಂದು ನೌಕರಿಯನ್ನು ಸಂಪಾದಿಸಿ ಇರಲಿಕ್ಕೆ ಹತ್ತಿದನು. ಹೀಗೆ ನೌಕರಿಯಲ್ಲಿದ್ದಾಗ ಅವನು ಯಾವ ರೀತಿಯಿಂದ ಕಾಲ ಕಳೆದನೆಂಬದನ್ನು ಮುಂದೆ ವಿವೇಚಿಸುವೆವು. ಆಗ ಅವನು ಒಬ್ಬ ರಾಜಕೀಯ ಪುರುಷನಂತೆಯೇ ವ್ಯವಹರಿಸಿದ್ದಾನೆಂದು ನಮ್ಮ ಅಭಿಪ್ರಾಯವಿದೆ. ಈ ವಿಷವಾಗಿಯೂ ಅವನ ವಚನಗಳಲ್ಲಿ ಸಾಕಷ್ಟು ಆಧಾರಗಳು ನಮಗೆ ದೊರೆಯುತ್ತವೆ. ಅಲ್ಲಿ ಅವನು ತನ್ನ ಯೋಗ್ಯತೆಯನ್ನು ತೋರಿಸಿದ್ದರಿಂದಲೇ ಬಿಜ್ಜಳನಿಂದ ಅವನಿಗೆ ಆಡಳಿತೆಯಲ್ಲಿ ಒಂದು ಶ್ರೇಷ್ಠಾಧಿಕಾರವು ದೊರೆಯಿತು. ಆಗ ಬಿಜ್ಜಳನು ಸ್ವತಂತ್ರನಾಗಿ ಕಲ್ಯಾಣದಲ್ಲಿ ಚಕ್ರಾಧಿಪತ್ಯವನ್ನು ಹೊಂದಿದ್ದನು. ಅವನಲ್ಲಿ ಹೀಗೆ ಆರು ವರ್ಷಗಳ ವರೆಗೆ ಬಸವೇಶ್ವರನು ಇದ್ದು ಅನೇಕ ಮಹತ್ಕೃತ್ಯಗಳನ್ನು ಮಾಡಿದ್ದಾನೆ. ಅವುಗಳು ಪೊವಾಡರೂಪದಿಂದ ವೀರಶೈವವಾಙ್ಮಯದಲ್ಲಿ ಪ್ರಸಿದ್ಧಿಯನ್ನು ಹೊಂದಿವೆ.

ಈ ಪ್ರವಾದಗಳು ಲಿಂ ಇವೆ ಎಂದು ಆಖ್ಯಾಯಿಕೆ ಇದೆ. ಇವುಗಳ ನಿಜಸ್ವರೂಪ ವನ್ನು ಐತಿಹಾಸಿಕ ದೃಷ್ಟಿಯಿಂದ ಮುಂದೆ ವಿವೇಚಿಸಲೆಣಿಸಿದ್ದೇವೆ. ಹೀಗೆ ಆರು ವರ್ಷಗಳು ಗತಿಸಿದ ನಂತರ ದೇಶದಲ್ಲಿ ಒಂದು ಅತ್ಯದ್ಭುತ ಕ್ರಾಂತಿಯು ಒದಗಿತು. ಅದು ಕಡೆಗೆ ಉಳವಿಯ ಸಂಗ್ರಾಮ ದಲ್ಲಿ ಪರ್ಯವಸಾನವನ್ನು ಹೊಂದಿತು. ಈ ಕಡೆಯ ವಿಷಯದ ನಿರೂಪಣೆಯು ಈ ವರೆಗೆ ಎಲ್ಲಿಯೂ ಬಂದಿರುವದಿಲ್ಲ. ಈ ಕ್ಷೇತ್ರ ವನ್ನು ನಾವು ಸಮಕ್ಷಮ ಕಂಡಾಗ ನಮಗೆ ತೋರಿಬಂದ ಅನೇಕ ಮಹ ತ್ವದ ಸಂಗತಿಗಳನ್ನು ವಾಚಕರೆದುರಿಗೆ ಇಡುವೆವು. ಈ ಪ್ರಕಾರ ಬಸವೇ ಶ್ವರನ ಚರಿತ್ರೆಯಲ್ಲಿ ಕೆಲವು ಭಾಗಗಳನ್ನು ಮಾಡಿ ನಾವು ಅವುಗಳನ್ನು ಕ್ರಮಶಃ ವಿವರಿಸುತ್ತ ಹೋಗುವೆವು.

ಬಸವೇಶ್ವರನು ಕೇವಲ ನದಿಯ ತಟಾಕದಲ್ಲಿದ್ದುಕೊಂಡು ಧ್ಯಾನ ಮಾಡುತ್ತ ಕುಳ್ಳಿರುವುದನ್ನು ತನ್ನ ವಚನಗಳಲ್ಲಿ ಬಹು ಕಡುತರವಾದ ರೀತಿಯಿಂದ ಟೀಕಿಸಿದ್ದಾನೆ. ಅವನು ಒಂದು ವಚನದಲ್ಲಿ 'ಮೀಂ ಬುಲಿಗನ ಹಕ್ಕಿಯಂತೆ ನೀರ ತಡೆಯಲಿದ್ದು ಮೂಗ ಹಿಡಿದು ಧ್ಯಾನವ ಮಾಡುವರಯ್ಯಾ' ಎಂದು ಹೀಗೆ ವರ್ತಿಸುವವರನ್ನು ಹಾಸ್ಯ ಮಾಡಿ ದ್ದಾನೆ. (ನಂ. ೫೪೦) ಮತ್ತೊಂದು ಕಡೆಯಲ್ಲಿ 'ನೀರ ಕಂಡಲ್ಲಿ ಮುಳು ಗುವರಯ್ಯಾ, ಮರನ ಕಂಡಲ್ಲಿ ಸುತ್ತುವರಯ್ಯಾ' ಎಂದು ಹೇಳಿ ಬತ್ತುವ ಜಲವನ್ನು ಮೆಚ್ಚಬೇಡವೆಂದು ಹೇಳುತ್ತಾನೆ. (ನಂ. ೫೩೮) ಮತ್ತೊಂದು ಕಡೆಗೆ ದುರ್ಜನತೆಗಳನ್ನು ತೊರೆಯದೆ ಹೋಗಿ 'ತೊರೆಯ ಮಿಂದರೆ ಬರುದೊರೆ ಹೋಹುದು' ಎಂದು ಹೇಳುತ್ತಾನೆ. (ನಂ. ೫೩೯) ಈ ಪ್ರಕಾರ ಯಾವ ಬಸವೇಶ್ವರನು ಅತಿ ಸ್ಪಷ್ಟ ರೀತಿಯಿಂದ ಇಂಥ ವರ್ತನೆಯನ್ನು ಹಳಿಯುತ್ತಾನೋ, ಅವನು ಕೂಡಲಸಂಗಮದಲ್ಲಿ ಕೃಷ್ಣಾ ನದೀ ತೀರದಲ್ಲಿ ಧ್ಯಾನಮಾಡುತ್ತ ಕುಳ್ಳಿರುವ ಸಂಭವವಿರಲಾರದು. ಅವನು ಹೀಗೆ ಮಾಡದೆ ಸಾಮಾನ್ಯ ಜನರಲ್ಲಿ ಬೆರೆದು ಅವರ ರೀತಿ ನಡೆಗಳನ್ನು ಲಕ್ಷಿಸುತ್ತ ಅವರಿಗೆ ಸದಾಚಾರವನ್ನು ಬೋಧಿಸುತ್ತ ಅವ ರನ್ನು ಹಾದಿಗೆ ತರುತ್ತ ಕಾಲಕಳೆದಿದ್ದಾನೆಂದು ನಮಗೆ ತೋರುತ್ತದೆ. ಬಸವೇಶ್ವರನಿದ್ದುದು ಹರ್ದೆನಾಡಿ (ವಿಜಾಪುರ ಜಿಲ್ಲೆಯ ಉತ್ತರಭಾಗ) ನಾಡು. ಇದು ಕೇವಲ ಒಕ್ಕಲುತನ ಪ್ರಾಧಾನ್ಯವಾದ ದೇಶವು. ಆದ್ದರಿಂದ ಬಸವೇಶ್ವರನು ಸ್ವಾಭಾವಿಕವಾಗಿ ಒಕ್ಕಲಿಗರಿಗೆ ಸಂಬಂಧಿಸಿಯೇ ನಾನಾರೀತಿ

ಯಿಂದ ತನ್ನ ವಚನಗಳಲ್ಲಿ ಬೋಧಿಸಿದ್ದಾನೆ. ಇಂಥವುಗಳ ಸಂಖ್ಯೆಯು ಬಹಳ ದೊಡ್ಡದಿದೆ. ಅವನು ಒಕ್ಕಲಿಗರ ಜೀವನಕ್ಕೆ ಸಂಬಂಧಿಸಿದ ಸಂಗತಿಗಳನ್ನು ಉದಹರಿಸಿ ಉಚ್ಚ ಧಾರ್ಮಿಕ ತತ್ವಗಳನ್ನು ಅವರಿಗೆ ಬೋಧಿಸಿದ್ದಾನೆ. ಅವರಿಗೆ ತೀವ್ರವಾಗಿ ಗೊತ್ತಾಗುವಂಥ ಸಾಮ್ಯಗಳನ್ನೇ ತೆಗೆದುಕೊಂಡು ವಚನಗಳನ್ನು ರಚಿಸಿದ್ದಾನೆ. ಷಡಕ್ಷರಿ, ಪಂಪ, ರನ್ನ ಮೊದಲಾದ ಕವಿಗಳ ರಚನೆಯಲ್ಲಿ ಎಷ್ಟು ರೀತಿಯ ಅಲಂಕಾರಗಳು ಪ್ರತಿಯೊಂದು ಶ್ಲೋಕದಲ್ಲಿ ತುಂಬಿಹೋಗಿವೆಂಬುದು ಕನ್ನಡ ವಾಙ್ಮಯ ವಿಶಾರದರಿಗೆ ಬಹು ಚನ್ನಾಗಿ ಗೊತ್ತಿದೆ. ಅವರು ಅವುಗಳನ್ನು ಓದಿ ಆನಂದಿಸುತ್ತಾರೆ. ಆದರೆ ಬಸವನ ಶ್ರೋತೃವರ್ಗವು ಇಂಥ ವಾಙ್ಮಯ ವಿಶಾರದರಿದ್ದಿದ್ದಿಲ್ಲ. ಅವರು ಕೇವಲ ಒಕ್ಕಲಿಗರು. ಬಹುಶಃ ನಿರಕ್ಷರಿಗಳು. ಇಂಥವರನ್ನು ಉದ್ಧಾರ ಮಾಡಲು ಬಸವೇಶ್ವರನು ಮುಂದಾಗಿದ್ದಾನೆ. ಆದ್ದರಿಂದ ಅವರಿಗೆ ತಟ್ಟನೆ ತಿಳಿಯುವಂಥ ಮತ್ತು ಒಕ್ಕಲತನಕ್ಕೆ ಸಂಬಂಧಿಸಿದಂಥ ಸಾಮ್ಯಗಳನ್ನು ಅವನು ತನ್ನ ವಚನಗಳಲ್ಲಿ ಉಪಯೋಗಿಸಿದ್ದಾನೆ. ಅವನು ಕೇವಲ ವಿದ್ವಾಂಸರಿಗಾಗಿ ವಚನಗಳನ್ನು ರಚಿಸಿದ್ದರೆ ಅವನು ಹೀಗೆ ಎಂದೂ ಮಾಡುತ್ತಿದ್ದಿಲ್ಲ. ಈ ಸಾಮ್ಯಗಳನ್ನು ನಾವು ನಿರೀಕ್ಷಿಸಿದರೆ ಅವನು ಒಕ್ಕಲಿಗರ ಜೀವನದಲ್ಲಿ ಬೆರೆತು ಅವರೊಡನಾಡಿದವನಾಗಿದ್ದನೆಂಬುದು ಸ್ಪಷ್ಟವಾಗಿ ಕಂಡುಬರುತ್ತವೆ. ಈ ದೃಷ್ಟಿಯಿಂದ ವಾಚಕರು ಕೆಳಗೆ ಕಾಣಿಸಿದ ವಚನಗಳನ್ನು ಚನ್ನಾಗಿ ಲಕ್ಷಿಸಬೇಕೆಂದು ನಾವು ಅವರಿಗೆ ಸೂಚಿಸುತ್ತೇವೆ.

ಒಕ್ಕಲಿಗರಿಗೆ ಭೂಮಿ, ಬೆಳೆ, ಎತ್ತು, ಆಕಳು, ಬಣಿವೆ, ಹುಲ್ಲು, ಏತ (ಯಾತ ಅಥವಾ ಮಟ್ಟಿ) ಬಿಸಿಲು, ನದಿ, ಕೊಳ್ಳ, ನೇಗಿಲು, ಗಿಳಿ, ಕೋಳಿ, ಕೆರೆ, ಕೋಡಗ, ಕುರಿ, ಹಾವು, ಮಾವು, ಬೇವು, ಬೆರಣಿ (ಕುಳ್ಳು), ಸೆಗಣಿ ಇಂಥವುಗಳ ಸಹವಾಸವೇ ಸಹವಾಸವು. ಅವರ ಬಾಳುವೆ ಸೃಷ್ಟಿ ಅಥವಾ ನಿಸರ್ಗದಲ್ಲಿರುವುದು. ಕೃತ್ರಿಮ ಜೀವನವು ಅವರಿಗೆ ತಿಳಿಯದು. ಬಸವೇಶ್ವರನು ಅವರ ಈ ರೀತಿಯನ್ನು ಚನ್ನಾಗಿ ಕಂಡಿದ್ದಾನೆಂಬುದನ್ನು ಅವನ ವಚನಗಳಲ್ಲಿ ನಾವು ಕಾಣುತ್ತೇವೆ. ಅವನು ಒಕ್ಕಲಿಗರಿಗೆ ತಿಳಿಯುವಂಥ ಸಂಗತಿಗಳನ್ನೇ ತೆಗೆದುಕೊಂಡು ಬಹು ಉದಾತ್ತವಾದ ತತ್ವಗಳನ್ನು ತನ್ನ ವಚನಗಳಲ್ಲಿ ನಿರೂಪಿಸಿದ್ದಾನೆ. ಅವುಗಳಿಂದ ಅವನು ಒಕ್ಕಲಿಗರ ಮನೋಭಾವನೆಗಳನ್ನು

ಚೆನ್ನಾಗಿ ಅರಿತವನಾಗಿದ್ದನೆಂದು ನಮಗೆ ತೋರುತ್ತದೆ. ಯಾಕೆಂದರೆ ಈ ಭಾವನೆಗೆಗೆ ಅನುಸರಿಸಿಯೇ ಅವನು ತನ್ನ ನುಡಿಗಳನ್ನು ನುಡಿದಿದ್ದಾನೆ. ಕೇವಲ ಏಕಾಂತವಾಸದಲ್ಲಿರುವವನಿಗೆ ಇಂಥ ಸಂಗತಿಗಳನ್ನು ಅರಿಯುವದು ಶಕ್ಯವಿಲ್ಲ. ಬಸವೇಶ್ವರನ ಮಾರ್ಮಿಕ ನುಡಿಗಳನ್ನು ನಾವು ಪರೀಕ್ಷಿಸಿದಲ್ಲಿ ಅವನು ಬಹುಜನ ಸಮಾಜದಲ್ಲಿದ್ದುಕೊಂಡೇ ಕಾಲ ಕಳೆದಿದ್ದಾನೆಂದು ತೋರಿ ಬರದೆ ಇರಲಾರದು. ಅರಣ್ಯಗಳು ಅವನಿಗೆ ಪ್ರೀತಿಯ ವಸ್ತುಗಳಾಗಿರಲಿಲ್ಲ. ಅವುಗಳನ್ನು ಅವನು ಕೆಲವೆಡೆಗಳಲ್ಲಿ ಹೀಯಾಳಿಸಿ ನುಡಿದಿದ್ದಾನೆ. 'ಲಿಂಗದೇವನಿಲ್ಲದ ಠಾವು ನರವಿಂಧ್ಯ' ಎಂದು ಹೇಳುತ್ತಾನೆ. (೯೯೪) ನರವಿಂಧ್ಯ ಅಂದರೆ ಗಿಡಗಳ ಬದಲು ಜನಗಳುಳ್ಳ ಅಡವಿ ಎಂದು ಇಲ್ಲಿ ಅರ್ಥವಾಗುತ್ತದೆ. ಮತ್ತೊಂದು ಕಡೆಯಲ್ಲಿ 'ನಮ್ಮ ಕೂಡಲ ಸಂಗನ ಶರಣರಿಲ್ಲದ ಊರು, ದೇಶ, ವನವಾಸ, ನರವಿಂಧ್ಯ ಕಾಣಿರಣ್ಣಾ' ಎಂದು ಹೇಳುತ್ತಾನೆ. (೭೪೭) ಇದರ ಮೇಲಿಂದ ಬಸವೇಶ್ವರನು ಎಲ್ಲಾದರೂ ಪರ್ವತ ಪ್ರದೇಶದಲ್ಲಿದ್ದುಕೊಂಡು ಏಕಾಕಿಯಾಗಿ ವಾಸಮಾಡುವದನ್ನು ಪ್ರೀತಿಸುತ್ತಿದ್ದಿಲ್ಲೆಂದು ಕಂಡು ಬರುತ್ತದೆ. ಸಮಾಜ ಸುಧಾರಕನು ಸಮಾಜದಲ್ಲಿದ್ದುಕೊಂಡೇ ತೀರಬೇಕಲ್ಲದೆ, ಅದರಿಂದ ದೂರಿದ್ದರೆ ಅವನ ಕಾರ್ಯಗಳು ಹೇಗೆ ಸಾಧ್ಯವಾಗುವವು ? ಆದ್ದರಿಂದ ಬಸವ, ಬುದ್ಧ, ಜೀಜಸ ಕ್ರೈಸ್ತ, ಇಂಥ ಧರ್ಮೋದ್ಧಾರಕರು ಜನರಲ್ಲಿಯೇ ಇದ್ದುಕೊಂಡು ಕಾಲಕಳೆದಿದ್ದಾರೆ. ಅವರು ತಮಗೆ ಮಾಡಿದ ಹಿಂಸೆಗಳನ್ನೂ ಆಡಿದ ನಿಂದೆಗಳನ್ನೂ ಸೈರಿಸಿಕೊಂಡು ಅವರನ್ನು ಉದ್ಧರಿಸಿದ್ದಾರೆ. ಇಂಥ ಮಹಾನುಭವರ ಪಂಕ್ತಿಯಲ್ಲಿ ಬಸವೇಶ್ವರನಿದ್ದಾನೆ.

ನಾವು ಕೆಳಗೆ ಕಾಣಿಸಿದ ವಚನಗಳನ್ನು ಸ್ಥಳಾಭಾವದ ಮೂಲಕ ಬಹು ಸಂಕ್ಷಿಪ್ತವಾಗಿ ವಿವರಿಸಬೇಕಾದ್ದರಿಂದ ವಾಚಕರು ಮೂಲ ಗ್ರಂಥವನ್ನು ತೆಗೆದುಕೊಂಡು ನಾವು ಮುಂದೆ ನಿರ್ದೇಶಿಸುವ ವಚನಗಳನ್ನು ಸ್ವತಂತ್ರವಾಗಿಯೇ ವಿವೇಚಿಸಬೇಕೆಂದು ನಮ್ಮ ನಮ್ರ ಸೂಚನೆ ಇದೆ.

ಬಸವೇಶ್ವರನು ತನ್ನ ವಚನದಲ್ಲಿ, ಸಿಟ್ಟಿಗೆದ್ದು ತನ್ನ ಮೈಮೇಲೆ ಬಂದವರನ್ನು ಕಂಡು "ಓಸರಿಸುವೆ, ಓಡಿದೆನೆಂಬ ಭಂಗವಾದಡಾಗಲಿ. ನಮ್ಮ ಕೂಡಲಸಂಗನ ಶರಣರ ಹೊಲಮೇರೆಯ ಹೊದ್ದೆ. ಹೊಲನ ಬಿಟ್ಟೋಡುವೆ.' ಎಂದು ಹೇಳುತ್ತಾನೆ. ಒಕ್ಕಲಿಗರನ್ನುದ್ದೇಶಿಸಿಯೇ ಹೇಳಿದ ವಚನವು ಇದಾಗಿದೆ. ಒಕ್ಕಲಿಗರು ತಮ್ಮನ್ನು ಕೆಣಕಿದವರನ್ನು ಕಂಡು

ಸುಮ್ಮನಿರುವುದೆಂದರೆ ಅವರಿಗಾಗದು. ಇದು ಅವರ ಸ್ವಭಾವವು. ಬಸವೇಶ್ವರನು ಅವರ ಈ ರೀತಿಯನ್ನು ತಿಳಿದು ಅಪಮಾನವಾದರೂ ಚಿಂತೆ ಇಲ್ಲ. ಸಿಟ್ಟಿಗೆದ್ದು ಮೈಮೇಲೆ ಬಂದವರನ್ನು ಎದುರಿಸದೆ ಓಡಿ ಹೋಗಬೇಕೆಂದು ಅವರಿಗೆ ಹೇಳುತ್ತಾನೆ. ಅವನು ಬಹು ಸುಂದರವಾದ ಭಾಷೆಯಲ್ಲಿ ಬಹು ರಸವತ್ತಾಗಿ ಈ ವಚನವನ್ನು ನುಡಿದಿದ್ದಾನೆ.

ಜೋಳದ ದಂಟನ್ನು ಕೊಯ್ದು ಗೂಡು ಹಾಕಿದ ಬಳಿಕ ಜೋಳದ ಕೊಯಿಲೆಗಳು ಹೊಲದ ತುಂಬೆಲ್ಲ ಉಳಿಯುವವು. ಅಲ್ಲಿ ಹಾದಾಡಿದಲ್ಲಿ ಅವು ಕಾಲಿಗೆ ತಾಕಿ ಬಹಳ ಗಾಯವಾಗುವದುಂಟು. ಈ ಕೊಯಿಲೆಗಳ ವಿಷಯವಾಗಿ ಬಸವಣ್ಣನು 'ಜಗವೆಲ್ಲವ ಕಾಂಬ ಕಣ್ಣು ತನ್ನ ಕೊಂಬ ಕೊಯಿಲೆಯ ಕಾಣಲರಿಯದು. ಇದಿರ ಗುಣವ ಬಲ್ಲೆವೆಂಬರು. ತಮ್ಮ ಗುಣವ ತಾವರಿಯರು' ಎಂದು ಹೇಳುತ್ತಾನೆ. ಮನುಷ್ಯನು ತನ್ನನ್ನು ತಾನು ಅರಿಯಬೇಕೆಂಬ ಉಚ್ಚ ತತ್ವನ್ನು ಬಸವೇಶ್ವರನು ಇಲ್ಲಿ ಬೋಧಿಸಿದ್ದಾನೆ.

ಯಾರು ತನ್ನನ್ನು ಪ್ರೀತಿಸುವದಿಲ್ಲವೋ, ಅವರ ಮುಂದೆ ತನ್ನ ದುಃಖವನ್ನು ಹೇಳಿಕೊಳ್ಳಬಾರದೆಂದು ಬಸವೇಶ್ವರನು ಕರಲ ಭೂಮಿಯ ಉಪಮೆಯನ್ನು ಕೊಟ್ಟು ಇದನ್ನು ಹೇಳಿದ್ದಾನೆ. (೨೨೪) ಕರಲು ಭೂಮಿಯಲ್ಲಿ ಎಷ್ಟು ಮಳೆಯಾದರೂ ಹೇಗೆ ನೀರು ಒಳಗೆ ಇಂಗುವದಿಲ್ಲವೋ ಹಾಗೆ ಇಂಥವರ ಸ್ಥಿತಿಯಾಗುತ್ತದೆಂದು ಹೇಳುತ್ತಾನೆ ಒಕ್ಕಲಿಗರು ಗ್ರಹಿಸಲು ಇದು ಒಂದು ಅತ್ಯುತ್ತಮ ಸಾಮ್ಯವಾಗಿರುತ್ತದೆ.

'ಹಡೆದ ಕಾಯ ಬೀಯವಾಗದ ಮುನ್ನ ಬೆರಣಿಯುಳ್ಳಲ್ಲಿ ಹೊತ್ತು ಹೋಗದ ಮುನ್ನ ಅಟ್ಟುಣ್ಣುವೋ. ಮರಳಿ ಭವಕ್ಕೆ ಬಹೆ, ಬಾರದಿಹೆ. ಕರ್ತು ಕೂಡಲಸಂಗಂಗೆ ಶರಣೆನ್ನುವೋ' ಇದರಲ್ಲಿ ಮನುಷ್ಯನು ಸಕಾಲದಲ್ಲಿ ಜಾಗ್ರತೆ ಹೊಂದಿ ಭಕ್ತಿಯಿಂದ ನಡೆಯಬೇಕೆಂದು ಬೋಧಿಸುತ್ತಾನೆ.

ಬಿಯ್ಯವಾಗು = ವ್ಯಯವಾಗು; ಬೆರಣಿ = ಕುಳ್ಳು

ಇದೇ ರೀತಿಯಾಗಿ ಬಸವೇಶ್ವರನು ಒಕ್ಕಲಿಗರಿಗೆ ಸಂಬಂಧಿಸಿ ಅನೇಕ ವಚನಗಳನ್ನು ನುಡಿದಿದ್ದಾನೆ. ಒಕ್ಕಲಿಗರೊಡನೆ ಇದ್ದು ಅವರ ಜೀವನವು ಅವನಿಗೆ ಗೊತ್ತಿಲ್ಲದಿದ್ದರೆ ಅವನು ಅಂಥ ವಚನಗಳನ್ನು ನುಡಿ

ಯುತ್ತಿದ್ದಿಲ್ಲೆಂದು ವಾಚಕರಿಗೆ ಕೂಡಲೆ ಗೋಚರವಾಗದೆ ಇರದು. ಆ ವಚನಗಳ ಭಾವವನ್ನು ಸ್ಥಳಾಭಾವದ ಮೂಲಕ ವಿಸ್ತೃತವಾಗಿ ವಿವರಿಸದೆ ಅವುಗಳಲ್ಲಿಯ ಆವಶ್ಯಕ ಭಾಗಗಳನ್ನಷ್ಟೇ ಇಲ್ಲಿ ಕೊಡುವೆವು. ಅವುಗಳನ್ನು ವಾಚಕರು ತಾವೇ ನೋಡಿ ವಿಚಾರ ಮಾಡಿ ನಮ್ಮ ಅಭಿಪ್ರಾಯದ ಸತ್ಯತೆಯನ್ನು ಪರೀಕ್ಷಿಸಬೇಕೆಂದು ಅವರಿಗೆ ನಮ್ಮ ಸೂಚನೆ ಇದೆ. ಇದರಲ್ಲಿ ನಮ್ಮ ಅಭಿಪ್ರಾಯವು ಬಸವೇಶ್ವರನು ಒಂದೆಡೆಯಲ್ಲಿ ಸುಮ್ಮನೆ ಕುಳಿತು ಕಾಲಕಳೆಯದೆ ಬಹುಜನ ಸಮಾಜದಲ್ಲಿ ಬೆರೆದು ಅವರಿಗೆ ಧರ್ಮ ಬೋಧೆ ಮಾಡುತ್ತ ಸಂಚರಿಸುತ್ತಿದ್ದನೆಂದು ಹೇಳುವದೇ ಮುಖ್ಯವಾಗಿರುತ್ತದೆ. ಈ ವಚನಗಳಲ್ಲಿ ನಾವು ದಪ್ಪ ಅಕ್ಷರ ಹಾಕಿದ ಶಬ್ದಗಳನ್ನು ಲಕ್ಷಿಸಬೇಕು. ಇವುಗಳು ಒಕ್ಕಲತನ, ಒಕ್ಕಲಿಗ, ಒಕ್ಕಲಿಗನಿಗೆ ಸಂಬಂಧಿಸಿದ ವಸ್ತುಗಳನ್ನು ನಿರ್ದೇಶಿಸುತ್ತಿವೆ. ಅವು ಯಾವವೆಂದರೆ:—

'ಹರಸೀವ ಕಾಲಕ್ಕೆ ಸಿರಿಯು ಜೆನ್ನಲಿ ಬಕ್ಕು. **ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯ**'...... ಪರವು ನಿರಂಜನ ಮರೆದ ಕಾಲಕ್ಕೆ **ತುಂಬಿದ ಹರವಿಯು ಕಲ್ಲು ಕೊಂಡಂತೆ** ಕೂಡಲಸಂಗಮದೇವ. (೩೩೮)

**ಹೆದ್ದೊರೆ** = ದೊಡ್ಡ ನದಿ

"**ಒಲೆ ಹತ್ತಿ ಉರಿದಡೆ** ನಿಲಬಹುದಲ್ಲದೆ, **ಧರೆ ಹತ್ತಿ ಉರಿದಡೆ** ನಿಲಬಹುದೆ? **ಏರಿ** ನೀರುಂಬಡೆ **ಬೇಲಿ ಕೆಯ್ಯ** ಮೇವಡೆ...... ಇನ್ನಾರಿಗೆ ದೂರುವೆ ಕೂಡಲಸಂಗಮದೇವ? (೩೫೦)

ಏರಿ = ಒಡ್ಡು, ಕೆಯ್ಯ = ಸಣ್ಣ ಹೊಲ

"ನೀನೊಲಿದರೆ **ಕೊರಡು ಕೊನರುವದಯ್ಯ.** ನೀನೊಲಿದರೆ **ಬರಡು ಹಯನಹುದಯ್ಯ**...... ಕೂಡಲಸಂಗಮದೇವ. (೩೮೫)

ಕೊನರು = ಚಿಗಿಯು.

"ಅಕಟಕಟಾ ಶಿವ ನಿನಗಿನಿತು ಕೃಪೆ ಇಲ್ಲ. ಏಕೆ ಹುಟ್ಟಿಸಿದೆ ಇಹ ಲೋಕದುಃಖಿಯ?...ಎನಗಾಗಿ ಮತ್ತೊಂದು **ತರು ಮರಾದಿಗಳದ್ದಿಲ್ಲವೇ?** (೩೮೮)

'ಎನ್ನ ಪೂರ್ವ ಲಿಖಿತ **ಬರಣಿಯು** ನಾಯುಲಲ್ಲದೆ ಅಟ್ಟುಣ್ಣ ತೆರಹಿಲ್ಲೆನಗೆ. ನೀ ಕರುಣಿಸು ಕೂಡಲಸಂಗಮದೇವ.' (೩೫೪)

'**ಸಕ್ಕರೆಯ ಕೊಡನ** ತುಂಬಿ ಹೊರಗೆ ಸವಿನಡೆ ರುಚಿಯುಂಟೇ? ತರ್ಕೈಸಿ ಭುಜ ತುಂಬಿ ಲಿಂಗ ಸ್ಪರ್ಶನವ ಮಾಡದೆ, ಅಕಟಕಟಾ ಸಂಸಾರ ವೃಥಾ ಹೋಯಿತ್ತಲ್ಲಾ' (೩೫೭)

'ಬಸಿರ ಬಾಳುವೆಗೆ ನಿಮ್ಮಲ್ಲಿ ಮಸಿಯು ಹೂಸಿ **ನೇರಿಲ ಹಣ್ಣ ಮಾರುವಂತೆ** ಕಾಲ ಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮರೆವೊಕ್ಕೆನಯ್ಯಾ.' (೩೭೧)

'**ಬೆಳೆಯು ಭೂಮಿಯೊಂದು** ಪ್ರಳಯದ **ಕಸ** ಹುಟ್ಟಿ ತಿಳಿಯಲೀಯ್ಯದು, ಎಚ್ಚರಲೀಯ್ಯದು. ಎನ್ನವಗುಣವೆಂಬ **ಕಸವ** ಕಿತ್ತು ಸಲಹಯ್ಯ ಲಿಂಗ ತಂದೆ. **ಸುಳಿದೆಗೆದು ಬೆಳೆವೆನು** ಕೂಡಲಸಂಗಮದೇವ.' (೩೭೪)

'ಎನಿಸು ಕಾಲ ಲಿಂಗಾರ್ಚನೆಯ ಮಾಡಿ ಏವೆನಯ್ಯಾ, ಮನದಲ್ಲಿ ಧೃಡವಿಲ್ಲದನ್ನಕ್ಕ? **ಕೊಡನ** ತುಂಬಿದ **ಹಾಲನೆಡಹಿ** ಉಡುಗಲೆನ್ನಳವೇ ಕೂಡಲಸಂಗಮದೇವ? (೪೧೮)

'**ಹಾವಸೆಗಲ್ಲ** ಮೆಟ್ಟಿ ಹಂದು ಗೊತ್ತ ಮುಟ್ಟಬಾರದಯ್ಯಾ. ನುಡಿದಂತೆ ನಡೆಯಬಾರದಯ್ಯ.' (೪೨೯)

'ಹೊರಿಸಿಕೊಂಡು ಹೋದ **ನಾಯಿ ಮೊಲನೇನ** ಹಿಡಿವುದಯ್ಯಾ? ಇರಿಯದ ವೀರ ಇಲ್ಲದ ಸೊಬಗವ ಹೇಳುವುದೇ ನಾಚಿಕೆ. ಆನು ಭಕ್ತನೆಂತಂಬೆನಯ್ಯಾ?' (೪೩೮)

'**ಒಡೆದೋಡು** ಎನ್ನ ಮನೆಯಲಿಲ್ಲದಂತೆ ಮಾಡಯ್ಯ. ಕೊಡು ದೇವ ಎನ್ನ ಕೆಯ್ಯಲೊಂದು **ಕರಿಕೆಯನು.**' (೪೪೨)

ಓಡು = **ಗಡಿಗೆ**

'ಅರು ಮುನಿದು ನಮ್ಮನೇನ ಮಾಡುವರು? ನಮ್ಮ **ಕುನ್ನಿಗೆ ಕೂಸ** ಕೊಡಬೇಡ. ನಮ್ಮ **ಸೊಣಗಂಗೆ ತಳಿಗೆಯಲಿಕ್ಕಬೇಡ.**' (೪೪೧)

'**ಹಗೆಯಲ್ಲಿ** ಬಿದ್ದವರ ಮೇಲೆ **ಒರಳ** ನೂಂಕುವರೇ.' (೪೬೨)

'ಹಲವು **ಕೊಂಬೆಗೆ** ಹಾಯಲು ಬೇಡ...... **ಆಚಾರವೆಂಬುದು ಹಾವಸೆಗಲ್ಲು.** ಭಾವ ತಪ್ಪಿದ ಬಳಿಕ ಏಗೈದಡಾಗದು.' (೪೬೯)

'ಬಿದಿರಲಿಯು ಮೆಲಿವರೆ ಮೆಲಿದಂತಲ್ಲದೆ, ರಸವನು ಹಡೆಯಲು ಬಾರದು. ನೀರಕಡೆದರೆ ಕಡೆದಂತಲ್ಲದೆ ಬೆಣ್ಣೆಯು ಹಡೆಯಲು ಬಾರದು. ಮಳಲಹೊಸೆದರೆ ಹೊಸೆದಂತಲ್ಲದೆ ಸರವೆಯು ಹಡೆಯಲು ಬಾರದು... ನಮ್ಮ ಕೂಡಲ ಸಂಗಮದೇವನಲ್ಲದೆ, ಅನ್ಯ ದೈವಕ್ಕೆರಗಿದರೆ ಹೊಳ್ಳ ಕುಟ್ಟಿ ಕೈ ಹೊಟ್ಟಾದಂತಾಯಿತ್ತಯ್ಯಾ.' (೪೭೩)

ಸರವೆ = ದಾರ, ಹಗ್ಗ;

'ಮಾಣದೆ ಅರಳೆಯು ಮರಸ ಶಿಟ್ಟನೆ ತಿರುಗುವ ಗಾಣದೆತ್ತಿನಂತೆ ಪೂರ್ವಲಿಖಿತ ಮುಂದುಗಾಣಲೀಯದು.' (೫೫೩)

'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತ್ತೆನ್ನ ಭಕ್ತಿ.' (೬೨೭)

'ಕೋಣನ ಹೇರಿಂಗೆ ಕುನ್ನಿ ಬಸುಗುತ್ತ ಬಡಿವಂತೆ ತಾವು ನಂಬರು.' (೬೩೬)

'ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು.'(೬೬೨)

ಆರಂಬ = ಒಕ್ಕಲುತನ

'ಹಲವು ಕಾಲ ಭಾವತಿಗೊಂಡು ಒಟ್ಟೆರ್ದ ಹಿದಿರೆಯೊಂದು ಮುಡಿ ಕಿಡಿಯಲಿ ಬೇವಂತೆ ಶರಣನ ಭಕ್ತಿ ಒಂದನಾಯತದಿಂದ ಕೆಡುವುದು.' (೬೬೫)

ಹಿದಿರೆ = ಬಣವಿ

'ಮರನ ಹುಳ್ಳ ಕೊಯಿದು ಮರಕ್ಕೇರಿಸಿ ನದಿಯುದಕವ ನದಿಗರ್ಪಿತವ ಮಾಡಿ ಕರುವನಗಲಿಸಿ ತಾಯ ಮೊಲೆವಾಲ ಮರುಗಿಸಿ ಕರೆದುಣಬೇಡವೋ.' (೬೯೧)

'ಮಾಲೆಗಾರನ ಕೇಳಿ ವನೆಯೊರಳುವದೇ.' (೭೩೩)

'ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು ನಗಣಕ್ಕೆ ಸಾಸಿರಹುಳು ಹುಟ್ಟವೇ ಹೇಳಾ ದೇವಾ.' (೭೪೭)

ಏತ ತಲೆವಾಗಿದರೇನು? ಗುರುಭಕ್ತನಾಗಬಲ್ಲುದೇ? ಇಕ್ಕುಳ ಕೈ ಮುಗಿದರೇನು? ಭೃತ್ಯಾಚಾರಿ ಆಗಬಲ್ಲುದೇ.' (೭೪೮)

'ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು ...... ಕೂಡಲಸಂಗಮದೇವ ನಿಮ್ಮ ಶರಣರು.' (೭೫೦)

'ಹಾವಿನ ಡೊಂಕು ಹುತ್ತಕ್ಕೆ ಸಸಿನ. ನದಿಯ ಡೊಂಕು ಸಮುದ್ರಕ್ಕೆ ಸಸಿನ. ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.' (೭೫೧)

ಸಸಿನ = ಸರಳತೆ

'ಹಾಲ ಕಂದಲು ತುಪ್ಪದ ಮಡಕೆಯ ಬೋಡ ಮುಕ್ಕ ನೆನಬೇಡ. ಹಾಲು ಸಿಹಿ, ತುಪ್ಪ ಕಮ್ಮಗೆ. ಲಿಂಗಕ್ಕೆ ಬೋನ. (೭೬೮)

ಕಂದಲು = ಸಣ್ಣಗಡಿಗೆ, ಕುಡಿಕೆ;

'ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗೊಳ್ಳೆ ಗೊರಜೆ ಚಿಪ್ಪು ಕಾಣಬಾಹವು .....ಕೂಡಲಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಾಹುದು.' (೭೬೯)

'ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ ಕೂಡಲಸಂಗಮದೇವ.' (೭೮೨)

'ಮಣ್ಣ ಮಡಿಕೆ ಮಣ್ಣಾಗದು. ಕ್ರಿಯುಳಿದು ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ...ಕೂಡಲಸಂಗನ ಶರಣನಾಗಿ ಮರಳಿ ಮಾನವನಾಗ ಕ್ರಿಯುಳಿದು.' (೭೮೩)

'ಭಕ್ತಿ ಎಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ ಕಾಯಾಯಿತ್ತು. ನಿಷ್ಪತ್ತಿಯೆಂಬ ಹಣ್ಣಾಯಿತ್ತು. ನಿಷ್ಪತ್ತಿ ಎಂಬ ಹಣ್ಣು ತೊಟ್ಟುಬಿಟ್ಟು ಕಳಚಿಬೀಳುವಲ್ಲಿ ಕೂಡಲಸಂಗಮದೇವ ತನಗೆ ಬೇಕೆಂದೆತ್ತಿಕೊಂಡನು.' (೮೧೭)

'ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರನೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ. ಲಿಂಗದ ಬಾಯಿ ಜಂಗಮವೆಂದು ಪಡಿ ಪದಾರ್ಥವ ನೀಡಿದಡೆ ಮುಂದೆ ಸಕಳಾರ್ಥವನೀವನು. ' (೮೪೫)

'ಉದಯದ ಮಾಗಿಯ ಬಿಸಿಲು ಅಂಗಕ್ಕೆ ಕರ ಹಿತವಾಯಿತ್ತು. ಮಧ್ಯಾಹ್ನದ ಬಿಸಿಲು ಅಂಗಕ್ಕೆ ಕಠಿಣವಾಯಿತ್ತು. ಮೊದಲಲ್ಲಿ ಲಿಂಗಭಕ್ತಿ ಹಿತವಾಯಿತ್ತು. ಕಡೆಯಲ್ಲಿ ಜಂಗಮಭಕ್ತಿ ಕಠಿಣವಾಯಿತ್ತು.' (೮೯೮)

‘ಹೊಸ ಶಿಲವ ಪೂಜಿಸಿ ಹೊರವೊಂಟು ಹೋದ ಒಕ್ಕಲಿಕೆಯಂತಾಯಿತ್ತಯ್ಯ ಎನ್ನ ಭಕ್ತಿ.’ (೯೧೬)

‘ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೇ? ಕರ್ಪೂರದ ಮರನ ಕಡಿದು ಕಳ್ಳಿಗೆ ಬೇಲಿಯನಿಕ್ಕುವರೇ? ಶ್ರೀಗಂಧದ ಮರವ ಕಡಿದು ಬೇವಿಂಗಡೆಯ ನಿಕ್ಕುವರೇ?’ (೯೧೮)

ಅಡೆ = ಬೇಲಿ.

ಮೇಲೆ ಕಾಣಿಸಿದ ವಚನಗಳಿಂದ ಬಸವೇಶ್ವರನು ಬಹು ಜನ ಸಮಾಜವಾದ ಒಕ್ಕಲಿಗರ ಜೀವನದಲ್ಲಿ ಬೆರೆದು ಅವರ ಕುಂದುಗಳನ್ನು ತಿಳಿದುಕೊಂಡು ಅವುಗಳನ್ನು ದೂರಮಾಡಿ ಅವರಲ್ಲಿ ಶ್ರೇಷ್ಠ ವಿಚಾರಗಳನ್ನು ತುಂಬಲು ಪ್ರಯತ್ನಿಸಿದ್ದಾನೆಂದು ಕಂಡುಬರುವದು. ಅವರ ಸ್ವಾಭಾವಿಕ ಒಲವುಗಳನ್ನು ಅವನು ಅವಲೋಕಿಸಿದ್ದಾನೆ. ಅವರ ಆ ಒಲವುಗಳನ್ನು ಯೋಗ್ಯ ಹಾದಿಗೆ ತರುವದಕ್ಕೋಸ್ಕರ ಅವರ ಮನಸ್ಸಿಗೆ ಬಿಂಬಿಸುವಂತೆ ಅವರ ಜೀವನಕ್ಕೆ ಸಂಬಂಧಿಸಿದ ನಾನಾತರದ ಸಾಮ್ಯಗಳನ್ನೂ ಉದಾಹರಣೆಗಳನ್ನೂ ಆಗಿಂದಾಗ್ಗೆ ಕೊಡುತ್ತಿದ್ದಾನೆ. ಸಾಮಾನ್ಯವಾಗಿ ಒಕ್ಕಲಿಗರಿಗೆ ಭೂಮಿ, ಕೆರೆ, ಬೇಲಿ, ಬೆರಣಿ, ಕಣಿಕೆ, ಎತ, ನೇಗಿಲು, ಬೀಜ, ಕಾಯಿ ಇವುಗಳೇ ಪರಿಚಯ ವಸ್ತುಗಳು. ಅವುಗಳ ಮೂಲಕವೇ ಬಸವೇಶ್ವರನು ಅವರಲ್ಲಿ ಉಚ್ಚ ಧಾರ್ಮಿಕ ತತ್ವಗಳನ್ನು ಬೋಧಿಸುತ್ತಾನೆ. ಮೇಲಿನ ವಚನಗಳಲ್ಲಿ ವಿವರಿಸಿದ ತತ್ವಗಳ ಮಹತ್ವವನ್ನು ವಿವರಿಸುವದಕ್ಕೋಸ್ಕರ ನಮಗೆ ಅನೇಕ ಸ್ವತಂತ್ರ ಲೇಖಗಳೇ ಬೇಕಾಗಬಹುದು. ಮೇಲೆ ಹೇಳಿದ ಅವನ ಸಾಮ್ಯಗಳು ಅಲ್ಪವೆಂದು ತೋರಿದರೂ ಅವುಗಳಲ್ಲಿ ಅಷ್ಟು ಅರ್ಥವಿದೆಂಬದನ್ನು ವಾಚಕರು ತಿಳಿಯಬೇಕು. ಅವು ಗಾದೆಯ ಮಾತುಗಳಂತೆ ಭಾಸವಾಗುತ್ತವೆ. ಹಿಂದುಸ್ಥಾನದಲ್ಲಿರುವ ಇತರ ಧಾರ್ಮಿಕ ವಾಙ್ಮಯಗಳಲ್ಲಿ ಭಕ್ತಿಪೂರ್ಣವಾದ ಗ್ರಂಥಗಳೂ ಉಚ್ಚ ಅಧ್ಯಾತ್ಮಿಕ ವಿಚಾರಗಳೂ ಇದ್ದುದು ತೋರಿಬರುತ್ತದೆ. ಆದರೆ ಅವುಗಳಲ್ಲಿರುವ ಭಕ್ತಿಯ ವಿವರಣೆಯಲ್ಲಿ ಸಂಸಾರವು ದುಃಖಮಯವು, ಅದನ್ನು ತ್ಯಜಿಸು, ಇಂದ್ರಿಯಗಳನ್ನು ಜಯಿಸು, ಎಂದು ಹೇಳುತ್ತ ಪರಮಾತ್ಮನ ಬಗ್ಗೆ ಮತ್ತು ಶಿವ, ವಿಷ್ಣು, ರಾಮ, ಕೃಷ್ಣ, ಪಾರ್ವತಿ, ಲಕ್ಷ್ಮೀ, ಗಣಪತಿ ಮೊದಲಾದ ದೇವತೆಗಳ ಬಗ್ಗೆ ಪುರಾಣಗಳಲ್ಲಿರುವ ಸಂದರ್ಭಗಳನ್ನೆತ್ತಿ ಸ್ತುತಿಸುತ್ತಿರುವದು ಕಂಡುಬರುತ್ತದೆ. ಆದರೆ ಬಸವೇಶ್ವರನು ಹಾಗೆ ಮಾಡದೆ

ಒಕ್ಕಲಿಗರ, ಉದ್ಯೋಗಸ್ಥರ, ನಿತ್ಯದ ಜೀವನವನ್ನು ಉತ್ತಮಗೊಳಿಸುವ ದಕ್ಕೋಸ್ಕರ ಅವರ ಮನಸ್ಸಿಗೆ ಬಿಂಬಿಸುವಂತೆ ಅವರ ವ್ಯವಹಾರದಲ್ಲಿಯ ಸಂದರ್ಭಗಳನ್ನೇ ತೆಗೆದುಕೊಂಡು ತನ್ನ ವಚನಗಳ ಮೂಲಕ ಅವನು ಬೋಧೆ ಮಾಡುತ್ತಾನೆ. ಬಸವೇಶ್ವರನ ವಚನಗಳ ವೈಶಿಷ್ಟ್ಯವು ಇದೇ ಇರುತ್ತದೆ. ಬಸವೇಶ್ವರನು ಜನರೊಡನಾಡಿ ಅವರಲ್ಲಿ ಬೆರೆದು ಇದ್ದದ್ದರ ಪರಿಣಾಮವಿದು. ಅವನು ಸಂಗಮಕ್ಕೆ ಹೋದ ಬಳಿಕ ಧ್ಯಾನಾಸಕ್ತನಾಗಿ ನದೀ ತೀರದಲ್ಲಿ ಕಾಲಕಳೆದಿಲ್ಲ. ಅವನು ನಾಡಿನಲ್ಲೆಲ್ಲ ಸಂಚರಿಸಿದ್ದಾನೆ. ಸಂಚರಿಸುತ್ತ ಜನರಲ್ಲಿದ್ದು ತನ್ನ ಉದಾತ್ತ ತತ್ವಗಳನ್ನು ಅವರಿಗೆ ಬೋಧಿಸಿದ್ದಾನೆ. ಬಸವನ ಜೀವಿತವು ಇದೇ ಇರುತ್ತದೆಂದು ನಮಗೆ ತೋರುತ್ತದೆ.

ನಾವು ಈ ವರೆಗೆ ಮೇಲೆ ಉದಹರಿಸಿದ ಉಕ್ತಿಗಳು ಕೇವಲ ಒಕ್ಕಲತನಕ್ಕೆ ಸಂಬಂಧಿಸಿದವುಗಳು. ಆದರೆ ಒಕ್ಕಲಿಗನು ಒಕ್ಕಲತನ ಮಾತ್ರವಲ್ಲದೆ ಪಶುಪಕ್ಷಿಗಳ ಮತ್ತು ಅನೇಕತರದ ಪ್ರಾಣಿಗಳ ಕೂಡ ವ್ಯವಹರಿಸಬೇಕಾಗುತ್ತದೆ. ಆದ್ದರಿಂದ ಅವುಗಳ ಜೀವನದ ಪರಿಚಯವು ಸಹ ಅವನಿಗೆ ಚನ್ನಾಗಿ ಇರುತ್ತದೆ. ಬಸವೇಶ್ವರನು ಬಹುಜನ ಸಮಾಜದಲ್ಲಿ ಇದ್ದವನಾದ್ದರಿಂದ ಅವನು ಪಶುಪಕ್ಷಿಗಳ ರೀತಿಯನ್ನು ಚನ್ನಾಗಿ ಬಲ್ಲವನಾಗಿದ್ದಾನೆ. ಆದ್ದರಿಂದ ಅವನು ಅವುಗಳ ಉದಾಹರಣೆಯನ್ನು ಕೊಟ್ಟು ಅನೇಕ ವಚನಗಳನ್ನು ನುಡಿದಿದ್ದಾನೆ. ಅವನ ಇಂಥ ವಚನಗಳು ನಾವು ಮೇಲೆ ಹೇಳಿದ ವಿಧಾನಗಳನ್ನೇ ಸಮರ್ಥನೆ ಮಾಡುತ್ತವೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾವು ಕೆಳಗೆ ವಿವರಿಸುತ್ತೇವೆ.

'**ಉಡುಹಿನ** ಭಾವದಲ್ಲಿ ಹಡೆದರಮ್ಮವರು. **ಉಸಿರುವಳ್ಳಿ**ಯಂತೆನ್ನ ಇರವು. **ಬಾವುಲ ಬಾಳುವೆಯು** ತೆರನಂತೆ... ಅನು ಭಕ್ತಿಯು ಬಯಸಿದರಹುದೇ ಕೂಡಲಸಂಗಮದೇವ.' (೭೨)

ಎಂದು ಈ ಪ್ರಾಣಿಗಳ ಉದಾಹರಣೆಗಳನ್ನು ಕೊಟ್ಟು ಇಲ್ಲಿ ತನ್ನ ವಿಚಾರಗಳನ್ನು ಹೊರಪಡಿಸಿದ್ದಾನೆ. ಬಸವೇಶ್ವರನ ಪ್ರಾಣಿಗಳ ಜ್ಞಾನವು ಎಷ್ಟು ಆಳವಾಗಿತ್ತೆಂಬುದನ್ನು ಈ ವಚನದಿಂದ ನಾವು ಊಹಿಸಬಹುದಾಗಿದೆ.

ಮೇಲಿನ ವಚನದಂತೆಯೇ ಕೆಳಗಿನ ವಚನವೂ ಇರುತ್ತದೆ. 'ಓತಿ ಬೇಲಿವರಿದಂತೆ ಎನ್ನ ಮನವಯ್ಯ. ಹೊತ್ತಿಗೊಂದು ಪರಿಯಪ್ಪಗೋ

**ಸುಂಟಿಯಂತೆನ್ನ** ಮನವು. **ಬಾವುಲ ಬಾಳುವೆಯಂತೆನ್ನ** ಮನವು... **ಎನಗಿಲ್ಲದ ಭಕ್ತಿಯ** ಬಯಸಿದರುಂಟೇ? (೧೨೮) ಎಂದು ಹೇಳುತ್ತಾನೆ. ಇದರ ಭಾವವು ಮೇಲಿನ ವಚನದಂತೆಯೇ ಅದೆ.

‘**ಚೇಳಿಂಗೆ** ಬಸಿರಾಯಿತ್ತೇ ಕಡೆ. **ಬಾಳಿಗೆ** ಫಲವಾಯಿತ್ತೇ ಕಡೆ ನೋಡಾ... ಮಾಡುವ **ಭಕ್ತಂಗೆ** ಮನ ಹೀನವಾದರೆ ಅದೇ ಕಡೆ’ (೧೨೭)

ಎಂದು ಬಹು ಯೋಗ್ಯವಾದ ಉದಾಹರಣೆಗಳಿಂದ ಮನಹೀನನಾದವನನ್ನು ಇಲ್ಲಿ ವಿವರಿಸಿದ್ದಾನೆ.’

‘ಬಳಿದಪ್ಪಿದ **ಪಶು** ತನ್ನ ಹಿಂಡನರಸುವಂತೆ ಬಯಸುತಿರ್ದೆನಯ್ಯಾ. ನಿಮ್ಮ ಶರಣರ ಬರವನು.’ (೧೨೨) ಈ ವಚನದಲ್ಲಿ ಪಶುವಿಗಾಗುವ ದೀನಸ್ಥಿತಿಯನ್ನು ಹೇಳಿ ಬೋಧೆ ಮಾಡುತ್ತಾನೆ.

‘ಹುಲಿಯ ಹಾಲು ಹುಲಿಗಲ್ಲದೆ **ಹೊಲದ ಹುಲ್ಲೆಗೆ** ಉಣಬಾರದು.’ (೧೨೯) ಇಲ್ಲಿ ಬಸವೇಶ್ವರನು ಹುಲ್ಲೆಗಳಲ್ಲಿರುವ ದೌರ್ಬಲ್ಯವನ್ನು ಹೇಳಿ ಬೋಧೆಮಾಡುತ್ತಾನೆ.

‘ಮರನನೇರಿದ **ಮರ್ಕಟನಂತೆ** ಹಲವು ಕೊಂಬಿಂಗೆ ಹಾರುತಲಿದ್ದೇನೆ.’ (೧೪೧) ಇಲ್ಲಿ ಮನಸ್ಸನ್ನು ಮರ್ಕಟನಿಗೆ ಹೋಲಿಸುತ್ತಾನೆ.

‘ಹಂಜರ ಬಲ್ಲಿತ್ತೆಂದು ಅಂಜದೆ ಓದುವ **ಗಿಳಿಯೇ** ಎಂದೆಂದು ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ ನಿನ್ನ ಮನದಲ್ಲಿ! ಮಾಯಾಮಂಜರ ಕೊಲುವರೆ ನಿನ್ನ ಹಂಜರ ಕಾಯ್ವುದೆ.’ (೧೪೬) ಇಲ್ಲಿ ಪಂಜರದಲ್ಲಿದ್ದ ಗಿಳಿಯೂ ಕೂಡ ಸುರಕ್ಷಿತವಲ್ಲೆಂದು ಮನುಷ್ಯನನ್ನು ಎಚ್ಚರಿಸುತ್ತಾನೆ.

“**ಕಂಬಳಿಯಲ್ಲಿ ಕಣಕವ ನಾದಿದಂತೆ** ಕಾಣಿರೇ ಎನ್ನ ಮನ (೧೫೧) ಇದರಲ್ಲಿ ಒಕ್ಕಲಿಗರಿಗೆ ತೀವ್ರ ತಿಳಿಯುವಂಥ ಒಂದು ಸ್ವಾರಸ್ಯಪೂರ್ಣವಾದ ಉದಾಹರಣೆಯಿಂದ ಮನಸ್ಸಿನ ಚಾಂಚಲ್ಯವನ್ನು ಹೇಳುತ್ತಾನೆ.

‘**ಓಡೆತ್ತ** ಬಲ್ಲುದು ಅವಲಕ್ಕಿಯ ಸವಿಯ? **ಕೋಡಗನೆತ್ತ** ಬಲ್ಲುದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದರೇನು, ಕೋಗಿಲೆಯಾಗಬಲ್ಲುದೆ ಹೇಳಾ? **ಕೊಳನ** ತಡೆಯಲೊಂದು **ಬಕ**

ಕುಳಿತಿದ್ದರೇನು, ಕಳಹಂಸನಾಗಬಲ್ಲುದೇ ಕೂಡಲಸಂಗಮದೇವಾ ? (೧೯೪) ಇದರಲ್ಲಿ ಕೇವಲ ಪ್ರಾಣಿಗಳ ಉದಾಹರಣೆಗಳಿಂದ ತನ್ನ ವಿಚಾರಗಳನ್ನು ಪ್ರಕಟಪಡಿಸಿದ್ದಾನೆ.

'ಕೀಳಿಂಗಲ್ಲದೆ ಹಯುನು ಕರೆವುದೇ ? ಮೇಲಾಗಿ ನರಕದಲೋಲಾಡಲಾರೆನು' (೨೬೯) ಇಲ್ಲಿ ಆಕಳನ್ನು ಹಿಂಡುವ ರೀತಿಯಿಂದ ಮನುಷ್ಯನು ಸಭ್ಯತೆಯಿಂದ ವರ್ತಿಸಬೇಕೆಂದು ಬೋಧಿಸಿದ್ದಾನೆ.

'ಕಾಗೆ ಒಂದಗಳ ಕಂಡರೆ ಕರೆಯದೆ ತನ್ನ ಬಳಗವನು ? ಕೋಳಿ ಒಂದು ಕುಟುಕ ಕಂಡರೆ ಕರೆಯದೆ ತನ್ನ ಕುಲವೆಲ್ಲವ' (೩೦೪) ಈ ಪಕ್ಷಿಗಳ ಸ್ವಭಾವವನ್ನು ಉದಹರಿಸಿ ಮನುಷ್ಯನು ದಾನಿಯಾಗಿರಬೇಕೆಂದು ಬೋಧಿಸುತ್ತಾನೆ.

"ಕೆಸರಲ್ಲಿ ಬಿದ್ದ ಪಶುವಿನಂತೆ ಆನು ದೆಸೆದೆಸೆಗೆ ಬಾಯಬಿಡುತಿದ್ದೆನಯ್ಯಾ' (೩೪೨)

"ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬೇ ಅಂಬೇ ಎಂದು ಕರೆಯುತಲಿದ್ದೇನೆ." (೩೪೩) ಈ ಎರಡು ವಚನಗಳಲ್ಲಿ ಒಕ್ಕಲಿಗನು ಆಕಳಿನ ಪರಿಸ್ಥಿತಿಯನ್ನು ಲಕ್ಷಕ್ಕೆ ತಂದು ಭಕ್ತಿ ಹೇಗಿರಬೇಕೆಂದು ಅವನಿಗೆ ಬೋಧಿಸಿದ್ದಾನೆ.

"ಶಿವಚಿಂತೆ ಶಿವಜ್ಞಾನವಿಲ್ಲದ ಮನುಜರು ಸಗಣಕ್ಕೆ ಸಾಸಿರ ಹುಳು ಹುಟ್ಟವೇ ಹೇಳಾ ದೇವಾ." (೭೪೭) ಇದರಲ್ಲಿ ಸಗಣಿಯಲ್ಲಿ ಹುಟ್ಟುವ ಹುಳಗಳಿಗೆ ಭಕ್ತಿಯಿಲ್ಲದವರನ್ನು ಹೋಲಿಸಿ ನುಡಿಯುತ್ತಾನೆ. ಅಂಥ ಹುಳಗಳು ಹೇಗಿರುತ್ತವೆಂಬುದು ಒಕ್ಕಲಿಗನಿಗೆ ಚನ್ನಾಗಿ ಗೊತ್ತುಂಟು.

"ಕುರಿವಿಂಡು ಕಬ್ಬಿನ ತೋಟವ ಹೊಕ್ಕು ತಿರನನರಿಯದೆ ತನಿರಸದ ಹೊರಗಣ ಎಲೆಯನೆ ಮೆಲಿದವು" (೭೭೧) ಇಲ್ಲಿ ಅಜ್ಞಾನಿಗಳನ್ನು ಕುರಿಗಳಿಗೆ ಹೋಲಿಸಿ ನುಡಿದಿದ್ದಾನೆ.

"ಹುತ್ತಕ್ಕೇಸು ಬಾಯಾದೊಡೇನು ? ಸರ್ಪನಿಪ್ಪುದು ಒಂದೇ ಸ್ಥಾನ. ಭಾವ ಭಾವಿಸಿ ಭ್ರಮೆಯಳಿದುದು ನೋಡಾ. ಆ ಭಾವ ಭಾವಿಸಲು ನಿರ್ಭಾವ ನೋಡಾ... ಕೂಡಲಸಂಗಮದೇವಾ." (೮೧೧)

ಇದರಲ್ಲಿ ಬಸವೇಶ್ವರನು ಜೀವನು ಎಲ್ಲಿ ಮತ್ತು ಹೇಗೆ ಇದ್ದಾನೆ, ಮುಂದೆ ಪರಮೈಕ್ಯಸ್ಥಿತಿಯನ್ನು ಹೇಗೆ ಅವನು ಹೊಂದುತ್ತಾನೆ ಎಂಬುದನ್ನು ಸರ್ಪನ ಉದಾಹರಣೆಯನ್ನು ತೆಗೆದುಕೊಂಡು ಹೇಳಿದ್ದಾನೆ.

ಬಸವೇಶ್ವರನು ಒಕ್ಕಲಿಗರ ಮತ್ತು ಸಾಮಾನ್ಯ ಜನರ ಜೀವನದಲ್ಲಿ ಬೆರೆದವನಾದ್ದರಿಂದ ಪ್ರಾಣಿಗಳ ರೀತಿಗಳನ್ನು ಚನ್ನಾಗಿ ಬಲ್ಲವನಾಗಿದ್ದಾನೆ. ಮತ್ತು ಆ ರೀತಿಗಳಿಗನುಸರಿಸಿ ಉಚ್ಚ ತತ್ವಗಳನ್ನು ಬಹು ಸುಂದರವಾದ ಶಬ್ದಗಳಿಂದ ಅವರಿಗೆ ತೀವ್ರ ತಿಳಿಯುವಂತೆ ವಿವರಿಸಿದ್ದಾನೆ. ಈ ಸಂಗತಿಯು ವಾಚಕರಿಗೆ ಗೋಚರವಾಗದಿರದೆಂದು ನಾವು ಭಾವಿಸಿದ್ದೇವೆ.

ಬಸವೇಶ್ವರನು ಧರ್ಮ ತತ್ವಗಳನ್ನು ಕೇವಲ ಬರೆದಿಡುವದರಲ್ಲಿ ಮಾತ್ರ ಮಗ್ನನಾಗಿರಲಿಲ್ಲ. ಅಥವಾ ವಿದ್ವಾಂಸರೊಡನೆ ಅವುಗಳನ್ನು ಚರ್ಚಿಸುತ್ತ ಕುಳಿತಿರಲೂ ಇಲ್ಲ. ಅವನು ಬಿಜ್ಜಳನಲ್ಲಿ ನೌಕರಿಯನ್ನು ಹಿಡಿಯುವ ಪೂರ್ವದಲ್ಲಿ ಅವನು ಯಾವ ಶ್ರೀಮಂತರ, ಅಧಿಕಾರಿಗಳ ಪ್ರಾಂತಾಧಿಪತಿಗಳ ಅಥವಾ ಅರಸರ ಒಲುಮೆಯನ್ನು ಹಿಡಿಯಲಿಕ್ಕೆ ಪ್ರಯತ್ನಿಸಿಲ್ಲ. ಈ ಸಂಗತಿಯು ಅವನ ವಚನಗಳಲ್ಲಿಯೇ ತಿಳಿದು ಬರುವಂತೆ ಇದೆ. ಮೇಲೆ ನಾವು ಉದಹರಿಸಿದ ವಚನಗಳಿಂದ ಅವನು ಬಡವರು, ಒಕ್ಕಲಿಗರು, ಇಂಥ ಸಾಮಾನ್ಯ ಜನರಲ್ಲಿ ಬೆರೆದು ಅವರನ್ನು ಉದ್ಧರಿಸಲಿಕ್ಕೆ ಪ್ರಯತ್ನಿಸಿದ್ದಾನೆಂದು ತಿಳಿದುಬರುತ್ತದೆ. ಈ ಕಾರ್ಯದಲ್ಲಿ ಅವನು ದೇಶದಲ್ಲಿ ಸಂಚಾರ ಮಾಡಿದ್ದಾನೆ. ಇದಕ್ಕೆ ಅವನ ವಚನಗಳಲ್ಲಿಯೇ ಕೆಲವು ಆಧಾರಗಳು ದೊರೆಯುತ್ತವೆ. ಹೀಗೆ ಬಸವೇಶ್ವರನು ವರ್ತಿಸಿದ್ದರಿಂದ ಅವನು ಅತ್ಯಂತ ಜನ ಪ್ರಿಯನಾದನು. ಅವನು ಬಹು ಧರ್ಮಿಷ್ಠನಾದ್ದರಿಂದ ಧರ್ಮ ಸ್ವರೂಪನೆಂದು ತಿಳಿಯಲ್ಪಟ್ಟಿರುವ ನಂದಿಯ ಅವತಾರವೆಂದು ಭಾವಿಸಲ್ಪಟ್ಟನು. ಇಷ್ಟೇ ಅಲ್ಲ, ಅವನು ದ್ವಿತೀಯ ಶಂಭುವೆಂತಲೂ ಕರೆಯಲ್ಪಟ್ಟನು.

[ಮುಂದುವರಿಯುವದು.]

---

# ಶಿವಶರಣರ ಶಿವದೀಕ್ಷಾಕಾಲ.

[ಲೇಖಾಂಕಃ—೪.]

(ಲೇ:— ಶ್ರೀಗುರುಮೂರ್ತಿದೇವರು ಜಗದ್ಗುರು ಶ್ರೀಮುನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.)

---

ಮೂರನೆಯ ಲೇಖಾಂಕದಲ್ಲಿ 'ದೀಕ್ಷಾಧಿಕಾರಿಯು ಜನನವೆಂದರೆ ಯಾವುದು?' ಎಂಬುದಕ್ಕೆ ನೈಜಾರ್ಥವನ್ನು ಉಕ್ತಿಗಳಿಂದ ವ್ಯಕ್ತಗೊಳಿಸಿದ್ದಾಯಿತು. ಇನ್ನು ಅದೇ ವೀರಶೈವ ಮಕ್ಕಳು ಮಾತೃಗರ್ಭದಿಂದ ಹುಟ್ಟಲೊಡನೆ ಏನು (ಯಾವ ಸಂಸ್ಕಾರ) ಮಾಡಬೇಕು? ಆಗ ಸಂಪೂರ್ಣ ಶಿವದೀಕ್ಷೆಯ ಮಾಡಬಹುದೆ? ಮಾಡಿದರೆ ಫಲವಿಹುದೆ? ಎಂಬಂಶಗಳನ್ನು ವಚನಗಳ ಮುಖಾಂತರವೆ ವಿಚಾರಿಸೋಣ!

ಮಾತೃಗರ್ಭದಿಂದ ಜನನವಾದ ದಿನವೆ ಶಿವದೀಕ್ಷೆಯ ಮಾಡಬೇಕೆಂದು ಕೆಲವರ ವಾದ. ಈ ವಿಚಾರದಲ್ಲಿ ವಾದಿಗಳಲ್ಲಿಯೇ ಐಕ್ಯಮತ್ಯವಿಲ್ಲ. ಒಬ್ಬರು ಜನನಕ್ಕೆ ಎಂದು ವಾದಿಸಿದ್ದರೆ, ಇನ್ನೊಬ್ಬರು ಗರ್ಭಕ್ಕೆ ಎಂದು ಪ್ರತಿಪಾದಿಸುತ್ತಿದ್ದಾರೆ. ಅವರ ಏಕೈಕ ಸಂಸ್ಕಾರದ ಗುರಿಗೆ ಇದು ಮೂಲಕುಠಾರ. ಅಲ್ಲದೆ ಇವರು ಗರ್ಭ ಅಥವಾ ಜನ್ಮ ಶಿವದೀಕ್ಷೆಯನ್ನು ಪ್ರತಿಪಾದಿಸುವ ಪ್ರಬಲವಾದ ಸೂಕ್ತವಾದ ಒಂದು ವಚನ ಪ್ರಮಾಣವನ್ನೂ ಸಹ ಇಂದಿನ ವರೆಗೂ ಉದಹರಿಸಲಿಲ್ಲ. ಶಿವದೀಕ್ಷೆಯ ವಿಚಾರದಲ್ಲಿ ಇವರು ಗೂಢಾರ್ಥ ಮತ್ತು ರೂಢಾರ್ಥಗಳಿರ ಡನ್ನೂ ಎಷ್ಟೂ ಗಮನಿಸದೆ ವಾದಕ್ಕೆ ನಿಂತುದು ಇದಕ್ಕೆ ಮೂಲಕಾರಣವಾಯ್ತು. ಇನ್ನಾದರೂ ಇವರು ಶಿವಶರಣರ ವಚನಗಳಲ್ಲಿ ಉಕ್ತವಾದ ಈಗ ರೂಢವಾದ ಗರ್ಭ ಅಥವಾ ಜನ್ಮ ಸಂಸ್ಕಾರವು ಬರೀ "ಲಿಂಗಧಾರಣೆ" ಮಾತ್ರವೆಂಬ ಗೂಢಾರ್ಥವನ್ನು ತಿಳಿಯಲೆಂದು ಈ ಲೇಖಾಂಕಕ್ಕೆ ತೊಡಗಲಾಗಿದೆ.

## ಜನ್ಮ ಶಿಶುವಿಗೆ ಲಿಂಗಧಾರಣಮಾತ್ರ.

ವೀರಶೈವರ ಗರ್ಭ ಶಿಶುವಿಗಾಗಲಿ ಅಥವಾ ಜನ್ಮ ಶಿಶುವಿಗಾಗಲಿ ಶಿವಶರಣರು ಪ್ರತಿಪಾದಿಸಿರುವುದು ಶಿವದೀಕ್ಷೆಯಲ್ಲ; ಲಿಂಗಧಾರಣ ಮಾತ್ರ. ಈ ವಿಚಾರವಾಗಿ—

"...ತನ್ನ ಸತಿಗೆ ಗರ್ಭ ತಲೆದೋರಿದಲ್ಲಿಯೆ
ಮುಖವ ಕಾಂಬುದಕ್ಕೆ ಮುನ್ನವೆ ಲಿಂಗಧಾರಣ ಮಾಡಿ,
ಮತ್ತೆ ಗಣ ಸಾಕ್ಷಿಯಾಗಿ ವಿಭೂತಿ ಪಟ್ಟವ ಕಟ್ಟಿ,
ಇಪ್ಪುದೇ ವ್ರತ ಶೀಲ ನೇಮ..."

ಎಂದು ರೇವಣ್ಣಸಿದ್ಧೇಶ್ವರರು ಗರ್ಭ ಲಿಂಗಧಾರಣವನ್ನು ಮಾತ್ರ ಹೇಳುತ್ತಾರೆ. ಮತ್ತು

"ಶಿವಭಕ್ತರಲ್ಲಿ ಗರ್ಭೋತ್ಪತ್ತ್ಯವಾದ ಶಿಶುವಿಂಗೆ
ಪಾದೋದಕದಿಂದೆ ಜಳಕವ ಮಾಡಿಸುವುದು
ವಿಭೂತಿಯ ಪಟ್ಟವ ಕಟ್ಟಿ, ಕೊರಳಲ್ಲಿ ಲಿಂಗಸಾಹಿತ್ಯವ ಮಾಡಿ,
ಪ್ರಸಾದದ ಎಣ್ಣೆ ಬೆಣ್ಣೆ-ಹಾಲು ತುಪ್ಪವ ನೆರೆದು
ಸಲಹುವದೇ ಆಚಾರ."

ಎಂಬುದಾಗಿ ಷಟ್‌ಸ್ಥಲಜ್ಞಾನಿಯಾದ ಚನ್ನಬಸವಣ್ಣನು ಈಗ ರೂಢಿಯಲ್ಲಿರುವಂತೆ ಜನನಲಿಂಗಧಾರಣವನ್ನು ಮಾತ್ರ ಹೇಳಿದ್ದಾನೆ. ಈ ಎರಡು ವಚನಗಳ ರೂಢಾರ್ಥವಾಗಲಿ ಗೂಢಾರ್ಥವಾಗಲಿ ಬರೀ ಲಿಂಗಧಾರಣ ಪ್ರತಿಪಾದನವಿದೆಯೆ ಹೊರತು ಶಿವದೀಕ್ಷಾ ಸಂಸ್ಕಾರದ ಪ್ರತಿಪಾದನೆಯಿಲ್ಲ. (ಈ ಎರಡು ವಚನಗಳ ನಿಜಾರ್ಥದ ವಿಮರ್ಶೆಯ ವಿವರವು, ಇದೇ "ಶಿವಾನುಭವ" ಸಂಪುಟ ೧೬, ಸಂಚಿಕೆ ೨ "ಲಿಂಗ ಧಾರಣೆ ಅರ್ಥಾತ್ ಶಿವದೀಕ್ಷೆಯೆಂಬ ಸಾಧನೆ" ಎಂಬ ಶಿರೋಲೇಖದಲ್ಲಿ ಪ್ರತಿಪಾದಿತವಾಗಿದೆ. ಈ ಲೇಖವನ್ನು ಯಾರೂ ಖಂಡಿಸಿಲ್ಲ. ಬೇಕಾದವರು ನೋಡಬಹುದು.) ಆದ್ದರಿಂದ ವೀರಶೈವರಲ್ಲಿ ಮಾತೃಗರ್ಭಕ್ಕಾಗಲಿ ಇಲ್ಲವೆ ಜನನಶಿಶುವಿಗಾಗಲಿ ಬರೀ ಲಿಂಗಧಾರಣೆಯನ್ನೇ ಮಾಡಬೇಕು. ಶಿವದೀಕ್ಷೆಯನ್ನು ಸಂಪೂರ್ತಿಯಾಗಿ ಆ ದಿನವೇ ಮಾಡಬಾರದು. ಮಾಡಿದರೂ ಕಾರ್ಯಕಾರಿಯಾಗಲಾರದು.

ಶಿವದೀಕ್ಷೆಯನ್ನು ಮಾಡಿದರೆ ಶಿಷ್ಯನ ಕಾಯ, ಕರಣ, ಪ್ರಾಣ, ಭಾವಗಳೆಲ್ಲವೂ ಪರಿಶುದ್ಧವಾಗಬೇಕು; ಪರಿಣಾಮಗೊಳ್ಳಬೇಕು; ಹಾಗಾದರೇನೆ ಅದು ದೀಕ್ಷೆ; ಅದು ಬೋಧೆ. ಅದಿಲ್ಲದೆ:—

"ಬೋಧವೆಂದರೆ ಕರ್ಣವನೂದಿ ಮಂತ್ರವ ಹೇಳಿದ್ದು ಬೋಧವೆ?
ಅಲ್ಲಲ್ಲ. ಬೋಧವೆಂದರೆ ತನುತ್ರಯ ಸಾಕ್ಷಿ ನೀನೇ ಪರವಸ್ತು
ಎಂಬುವುದೇ ನಿಜಬೋಧ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ"

ಎಂಬ ಈ ವಚನವೂ ಸಹ ಎಳೆಮಕ್ಕಳ ಕಿವಿಯಲ್ಲಿ ಮಾತ್ರ (ಕರಣ ಪ್ರಾಣ ಭಾವಗಳು ಬಲಿಯದೆ ಬೆರೆಯದೆ) ಊದಿದರೆ ಅದು ಬೋಧವಲ್ಲ. ಅದರಿಂದ ಯಾವ ಫಲವೂ ಇಲ್ಲ ಎಂದು ಹೇಳಿ ಜನ್ಮ ಶಿವದೀಕ್ಷೆಯು ಸಲ್ಲದೆಂದು ಎಲ್ಲರಿಗೂ ತಿಳಿವಂತೆ ಅರುಪಿದೆ. ತನುತ್ರಯ ಸಾಕ್ಷಿಯಾಗಿ ಪರವಸ್ತುವನ್ನು ಪ್ರತ್ಯಕ್ಷಿಸುವುದೆ ನಿಜಬೋಧ (ದೀಕ್ಷೆ) ವೆಂಬುದಾಗಿ ಸಿದ್ಧಮಾಡಿದೆ. ಇದೇ ಅಭಿಪ್ರಾಯವನ್ನೇ ಇನ್ನೊಂದು ವಚನದಲ್ಲಿ ಶ್ರೀ ಸಿದ್ಧರಾಮ ಶಿವಯೋಗಿಯು ಮನಂಬುಗುವಂತೆ ಹೀಗೆ ಹೇಳಿದ್ದಾನೆ. ಅದಿದು—

"ಅಯ್ಯಗಳು ಅನುಭಾವಕ್ಕಲ್ಲದೆ, ನಿನ್ನ ಪಾಪಕ್ಕೆ ಅವರು ಅಯ್ಯಗಳೆ?
ಅಯ್ಯಗಳನುಭಾವ-ನಿನ್ನ ಮನೋಭಾವ ಏಕವಾದರೆ,
ಅಯ್ಯತನವೇರಿತ್ತಯ್ಯ ಕಪಿಲಸಿದ್ಧಮಲ್ಲಿಕಾರ್ಜುನ!"

ಈ ವಚನವನ್ನು ಚನ್ನಾಗಿ ದಿಟ್ಟಿಸಬೇಕು. ಗುರುವಿನ ಅನುಭಾವ-ಶಿಷ್ಯನ ಅಂದರೆ ದೀಕ್ಷಾಧಿಕಾರಿಯ ಮನೋಭಾವ ಏಕವಾದರೇನೆ 'ಅಯ್ಯತನ' ಅಂದರೆ ದೀಕ್ಷೆಯು ಶಿಷ್ಯನಲ್ಲಿ ಪ್ರವೇಶಿಸುತ್ತದೆ; ಪರಿಣಮಿಸುತ್ತದೆ. ಇಲ್ಲದಿದ್ದರಿಲ್ಲ ಎಂದು ನಿಜನಿರ್ಣಯವನ್ನು ನಿಸ್ಸಂದೇಹವಾಗಿ ಸಿರೂಪಿಸಿದ್ದಾನೆ. ಅನುಭಾವದಲ್ಲಿ ಮನೋಭಾವ ಅಥವಾ ಮನ-ಭಾವಗಳು ಬೆರೆಯಬೇಕಾದರೆ ಎಳೆಯಮಗುವಿಗೆ ಸಾಧ್ಯವೆ? ಗರ್ಭಕ್ಕೆ ಅಳವೆ? ಹುಟ್ಟಿದ ದಿನದ ಮಗುವಿಗೆ ಅನುಭಾವದಲ್ಲಿ ಮುಳುಗುವಂಥ ಮನ, ಬೆರೆಯುವಂಥ ಭಾವ ಇವೆಯೆ? ಇಲ್ಲೆಂದರೆ ಶಿವಶರಣರ ಅಭಿಪ್ರಾಯದಲ್ಲಿ ಅಯ್ಯತನ ಶಕ್ಯವೆ? ಇದರಿಂದಲೂ ಸಹ ಶಿವಶರಣರ ಶಿವದೀಕ್ಷಾ ಕಾಲವು ಯಾವುದೆಂಬುದು ಮತ್ತು ಧಾರಣದೀಕ್ಷೆಗಳು ವಿಭಿನ್ನ ಸಂಸ್ಕಾರಗಳೆಂಬುದು ನಿಶ್ಚಯವಾಗುವದು, ನಿಸ್ಸಂಶಯವಾಗುವದು.

## ಮಾರ್ಗಕ್ರಿಯಾ-ಮೀರಿದಕ್ರಿಯಾ.

ಧಾರಣ-ದೀಕ್ಷೆ ಇವೆರಡೂ ವಿಭಿನ್ನ ಸಂಸ್ಕಾರಗಳು. ಲಿಂಗಧಾರಣವು ಮಾತೃಗರ್ಭದಿಂದ ಜನನವಾದಾಗ ನಡೆಯತಕ್ಕದು. ಶಿವದೀಕ್ಷೆಯು ೮—೧೦ ವರುಷ ಕಳೆದು ಗುರುಕರಕಮಲ ಸಂಜಾತರಾದಾಗ ಮಾಡಬೇಕಾದ ಸಂಸ್ಕಾರವು. ಇವುಗಳಲ್ಲಿ ಲಿಂಗಧಾರಣವು ಮಾರ್ಗಕ್ರಿಯಾ ಎಂತಲೂ—ಶಿವದೀಕ್ಷೆಯು ಮೀರಿದಕ್ರಿಯಾ ಎಂತಲೂ ವೀರ

ಶೈವರ ಸಿದ್ಧಾಂತ. ಇವೆರಡೂ ಘಟಿಸುವುದೇ ವೀರಶೈವತ್ವದ ಲಕ್ಷಣ. ಮಾತೃಗರ್ಭದಿಂದ ಹುಟ್ಟಿದೊಡನೆಯೆ ವೀರಿದ ಕ್ರಿಯೆಯನ್ನು ಬೋಧಿಸಲಾಗದು. ಬೋಧಿಸಿದರೂ ಆಚರಿಸಲಿಕ್ಕಾಗದು. ಪ್ರತಿಯೊಬ್ಬ ವೀರಶೈವನು ಮೊದಲು ಮಾರ್ಗಕ್ರಿಯೆಯಲ್ಲಿದ್ದು ಅಂದರೆ ಕೇವಲ ಲಿಂಗಧಾರಿಯಾಗಿ ನಂತರ (ಮನೋಭಾವ ಬಲಿತ ಮೇಲೆ) ವೀರಿದ ಕ್ರಿಯೆಗೆ ಅರ್ಹನಾಗುವದೆ ಸಹಜವಾದುದು, ಸರ್ವಸಾಮಾನ್ಯವಾದುದು. ಈ ವಿಚಾರದಲ್ಲಿ —

> "ಮಾರ್ಗಕ್ರಿಯಾ ಸಮಯದಲ್ಲಿ ಶಿವಭಕ್ತಿ ಸಂಪನ್ನನಾಗಿ
> ವೀರಿದಕ್ರಿಯಾಸಮಯದಲ್ಲಿ ಶಿವಲಿಂಗಸಂಪನ್ನನಾಗಿ
> ಭಾವನೆಲೆಗೊಂಡಲ್ಲಿ ಮನಲಿಂಗಸಂಗದಿ-ಮನಲಿಂಗಲೀಯವಾದಲ್ಲಿ
> ತೆರಹಿಲ್ಲದೆ ಕುರುಹಳಿದ ಲಿಂಗೈಕ್ಯ; ಸುತ್ತಿರ್ದ ಪ್ರಪಂಚ-
> ವೆಲ್ಲವೆಲ್ಲನೆ ಅಚ್ಚಳಿದು ಹಿಂಗಿದವು, ಕೂಡಲ ಚನ್ನಸಂಗಮದೇವಾ
> ನಿಮ್ಮ ಲಿಂಗೈಕ್ಯಂಗೆ."

ಎಂಬೀ ವಚನದಲ್ಲಿ ಚನ್ನಬಸವಣ್ಣನು ಸಂಶಯಕ್ಕಾಸ್ಪದವಿಲ್ಲದಂತೆ, ವಿವಾದಕ್ಕೆ ವಿಷಯವಿಲ್ಲದಂತೆ, ವಿವರಿಸಿ ವಚಿಸಿದ್ದಾನೆ. ಮಾರ್ಗಕ್ರಿಯೆಯಲ್ಲಿ ಸಮರಸಕ್ಕೆ ಎಡೆಯಿಲ್ಲ. ಕಾಯ-ಕರಣ, ಮನ-ಪ್ರಾಣ, ಭಾವಗಳನ್ನು ವ್ಯೂಹಕಟ್ಟಿ ಲಿಂಗದಲ್ಲಿ ಸಂಗಿಸಲು ಶಕ್ತಿಸಾಲದು. ಮಾರ್ಗಕ್ರಿಯೆಯು ವೀರಿದಕ್ರಿಯೆಯ ಸಂಪಾದಿಸುವ ಸಾಧನ.

ಈ ಎರಡು ಕ್ರಿಯೆಗಳು ಹಿಂದಿನಿಂದ ಇಂದಿನ ವರೆಗೂ ವಿಭಿನ್ನವಾಗಿಯೆ ರೂಢಿಯಲ್ಲಿ ಬಂದಿವೆ. ನಮಗೆ ತಿಳಿದಮಟ್ಟಿಗೆ ಎಲ್ಲೆಲ್ಲಿಯೂ — ಎಂತೆಂತಹ ಮಹಾತ್ಮರೂ ಸಹ ಕೇವಲ ಲಿಂಗಧಾರಿಯಾದ ವೀರಶೈವ ವಟುವಿಗೆ (ದೀಕ್ಷೆಯಿಲ್ಲದವನಿಗೆ) ಸಾಮರಸ್ಯದ ಗುಟ್ಟನ್ನು ಹೇಳುವದಿಲ್ಲ. ಮಂತ್ರೋಚ್ಚಾರವನ್ನು ತಿಳಿಸುವದಿಲ್ಲ. ಕ್ರಿಯಾ ಮತ್ತು ಜಂಗಮ ಪಾದೋದಕಗಳನ್ನು ಕೊಡುವದಿಲ್ಲ. ಪಾದಪೂಜೆಗೂ ಸಹ ಆತನು ಅರ್ಹನಲ್ಲ ಎಂದು ನುಡಿಯುತ್ತಾರೆ. ಅದರಂತೆ ನಡೆಯಲ್ಲಿಯೂ ಇಟ್ಟುಕೊಂಡಿದ್ದಾರೆ. ತ್ರಿವಿಧ ದೀಕ್ಷೆಯಿಲ್ಲದೆ ಬರೀ ಲಿಂಗಧಾರಿಯಾದವರಿಗೆ ಮಂತ್ರ, ಪಾದಪೂಜೆ, ಕ್ರಿಯಾ ಮತ್ತು ಜಂಗಮಪಾದೋದಕ ಸ್ವೀಕಾರ, ಪ್ರಸಾದ ಸ್ವೀಕಾರ, ಇವುಗಳಲ್ಲಿ ಅಧಿಕಾರವಿಲ್ಲವೆಂಬ ಸಂಗತಿಯನ್ನು ಇಂದಿನವರೆ

ನಡೆಯಲ್ಲಿಯೆ ಅಲ್ಲದೆ ಹಿಂದಿನ ಶಿವಶರಣರ ನುಡಿಯಲ್ಲಿಯೂ ನೋಡ ಬಹುದು. ಇವೆಲ್ಲಕ್ಕೂ ಒಂದೊಂದು ವಚನವನ್ನು ಉದಹರಿಸೋಣ!

೧. ಮಂತ್ರಕ್ಕೆಃ—

"ಕ್ರಿಯಾದೀಕ್ಷೆ ಹೀನರಿಗೆ ಮಂತ್ರೋಪದೇಶವ
ಹೇಳುವನೊಬ್ಬ ಮಂತ್ರದ್ರೋಹಿ ನೋಡಾ,
ಕೂಡಲಚನ್ನಸಂಗಮದೇವಾ."

೨. ಜಂಗಮಪಾದೋದಕಕ್ಕೆಃ—

"ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆ ಹೀನರಿಗೆ
ಜಂಗಮ ಪಾದೋದಕ ಪ್ರಸಾದವ ಕೊಡುವನೊಬ್ಬ
ಜಂಗಮದ್ರೋಹಿ ನೋಡಾ ಗುಹೇಶ್ವರ."

೩. ಪ್ರಸಾದಕ್ಕೆಃ—

"ಅಚ್ಚಪ್ರಸಾದ ನಿಚ್ಚಪ್ರಸಾದ ಸಮಯಪ್ರಸಾದವನರಿಯದ
ಮೂಢಂಗೆ ಷಡ್ವಿಧಲಿಂಗಾಂಗ ಪ್ರಸಾದ ಪಾದೋದಕವ
ಹೇಳುವವನೊಬ್ಬ ಪ್ರಸಾದದ್ರೋಹಿ ನೋಡಾ,
ಕಪಿಲಸಿದ್ಧಮಲ್ಲಿಕಾರ್ಜುನ."

೪. ಸಾಮರಸ್ಯಕ್ಕೆ ಅಥವಾ ವೀರದಕ್ರಿಯೆಗೆಃ—

"ಅಂತರಂಗ ಬಹಿರಂಗದಲ್ಲಿ ಸರ್ವಾಚಾರ ಸಂಪತ್ತಿನ
ಆಚರಣೆಯನರಿಯದ ಮೂಢಾತ್ಮಂಗೆ,
ಲಿಂಗಾಂಗ ಸಾಮರಸ್ಯವ ಹೇಳಿ, ಸರ್ವಾಂಗಸ್ನಾನ
ಧೂಳನ ೪೮ ಸ್ಥಾನಂಗಳಲ್ಲಿ ಕ್ರಿಯಾಭಸಿತವ
ಧರಿಸುವ ನಿರ್ಣಯವ ಹೇಳಿ, ಅಂತರಂಗ ಜಪವ
ಹೇಳುವನೊಬ್ಬ ಆಚಾರದ್ರೋಹಿ ನೋಡಾ ರಾಮನಾಥ."

ಈ ಶಿವಶರಣರ ವಚನಗಳು ಏನನ್ನು ಪ್ರತಿಪಾದಿಸುತ್ತವೆ. ದೀಕ್ಷೆಯಿಲ್ಲದೆ ಲಿಂಗಧಾರಿಯಾದ ವಟುವು ಅನಧಿಕಾರಿಯಷ್ಟೇ ಅಲ್ಲ, ಆತನಿಗೆ ವೀರದ ಕ್ರಿಯೆಗಳನ್ನು ಹೇಳಿಕೊಡುವವನೂ ಆ ದ್ರೋಹಿಯೆಂಬುದಾಗಿ ಪ್ರತಿಪಾದಿಸಿದ್ದಾರೆ. ಈ ವಚನಗಳಿಂದ ತ್ರಿವಿಧದೀಕ್ಷೆಯಿಲ್ಲದೆ ಬರೀ ಲಿಂಗಧಾರಿಗಳಾದ ವೀರಶೈವರೂ ಇರುವರೆಂದು ಅವರಿಗೆ ಮಾರ್ಗಕ್ರಿಯೆ

ಅಂದರೆ ಶಿವಭಕ್ತಿ, ಗುರುಪಾದೋದಕ, ಸಾಮಾನ್ಯಜಪ, ಸಾಮಾನ್ಯಭಸಿತ ಇವು ಯೋಗ್ಯವೆಂದೂ ಪ್ರತಿಪಾದಿಸಿದಂತಾಯ್ತು. ಇದರಿಂದಲಾದರೂ ಧಾರಣದೀಕ್ಷೆಗಳು ವಿಭಿನ್ನಸಂಸ್ಕಾರಗಳೆಂದು ವ್ಯಕ್ತವಾಗುವದಲ್ಲದೆ ಶಿವಶರಣರ ಶಿವದೀಕ್ಷಾಕಾಲವೂ ಸುವ್ಯಕ್ತವಾಗುತ್ತದೆ.

ಧಾರಣದೀಕ್ಷೆಗಳೆರಡು ತತ್ವದಿಂದ ಅಭಿನ್ನಗಳೆಂಬುದು ಹೊಸಶೋಧವೆಂದು ವಾದಿಗಳು ಹೆಮ್ಮೆಪಡಬಹುದು; ಆದರದು ಹಳೆಯದು. ಏಕೈಕಸಂಸ್ಕಾರವಾದದಿಂದ ಸಮಾಜಕ್ಕೆ ಉಪಕಾರವಾದೀತೆಂದು ಊಹಿಸಿರಬಹುದು; ಆದರವರಿಂದ ಅಪಾರ ಅಪಕಾರವೇ ಫಲ. ಈ ಅಭಿಪ್ರಾಯವನ್ನು ಪೂರ್ವಜರು ತಿಳಿದೇ ವಿಭಿನ್ನಸಂಸ್ಕಾರಗಳನ್ನಾಗಿ ಏರ್ಪಡಿಸಿದ್ದಾರೆ; ಸಮಾಜದ ಸರ್ವಸಾಮಾನ್ಯರನ್ನೂ ಬದುಕಿಸಿದ್ದಾರೆ. ಸಂಸ್ಕಾರ ವಿಭಿನ್ನವಾದಾಗ್ಯೂ ತತ್ವೈಕ್ಯಕ್ಕೆ ಯಾವ ಕೊರತೆಯಿಲ್ಲ. ವಿದ್ಯೆಯು ವರ್ಗೀಕರಿಸಲ್ಪಟ್ಟಿದ್ದರೂ ವಿದ್ಯೆಯು ಅಖಂಡತ್ವಕ್ಕೆ ಯಾವ ಕೊರತೆಯಿದೆ? ಯಾವ ಹಾನಿಯಿದೆ? ಆ ವರ್ಗೀಕರಣದಿಂದ ವ್ಯಕ್ತಿಗಳಿಗೆ ಮಾತ್ರ ಪ್ರಯೋಜನವಿದೆ; ಫಲವಿದೆ.

ಯಾವನಾದರೊಬ್ಬ ಮಹಾವ್ಯಕ್ತಿಯು ತನ್ನ ಪೂರ್ವಸಂಸ್ಕಾರ ಬಲದಿಂದ ಪ್ರಾಥಮಿಕ ಅಭ್ಯಾಸಮಾತ್ರದಿಂದ ಸಂಪೂರ್ಣ ವಿದ್ಯಾವಂತನಾಗಿ ಆದರ್ಶ ಕವೀಶ್ವರನಾಗಬಹುದು. ಆದ ಮಾತ್ರಕ್ಕೆ ಆತನೊಬ್ಬನನ್ನೆ ನಿದರ್ಶನಕ್ಕಿಟ್ಟುಕೊಂಡು ಉಳಿದವರಿಗೆಲ್ಲರಿಗೂ ಪ್ರಾಥಮಿಕಾಭ್ಯಾಸವೇ ಸಾಕು. ಮಾಧ್ಯಮಿಕ, ಪ್ರೌಢಾಭ್ಯಾಸಗಳು ಅನಾವಶ್ಯಕವಾದವುಗಳು. ಪ್ರಾಥಮಿಕದಲ್ಲಿಯೆ ಅವೆರಡೂ ಸಮಾವೇಶವಾಗುತ್ತದೆ. ಅವನ್ನು ಬೇರೆಯಾಗಿ ಕಲಿಸುವದು ಪಿಷ್ಟಪೇಷಣ ನ್ಯಾಯ. ವಿದ್ಯೆಯನ್ನು ವಿಭಾಗಿಸುವದು ಸಂಬಳವನ್ನು ಸಂಪಾದಿಸಿ ಹೊಟ್ಟೆಹೊರೆವ ಸಾಧನ; ಅಥವಾ ಸಾಹಸ. ಎಂದು ಮುಂತಾಗಿ ಲೇಖನಿಯ ಕತ್ತಿಯನ್ನೆತ್ತಿದರೆ ಆದರಿಂದಾಗತಕ್ಕ ಪ್ರಯೋಜನವೇನೆಂಬುದನ್ನು ಪ್ರಾಜ್ಞರೇ ಪರ್ಯಾಲೋಚಿಸಬೇಕು. ಇದರಂತೆಯೆ ದೀಕ್ಷೆಯ ವಿಚಾರ. ದೀಕ್ಷೆಧಾರಣಗಳು ತತ್ವತಃ ಒಂದಾಗಿದ್ದರೂ ಸಂಸ್ಕಾರದಲ್ಲಿ ವಟುಗಳ ಪ್ರಯೋಜನಕ್ಕಾಗಿ ಧಾರಣ-ದೀಕ್ಷೆಗಳೆಂಬದಾಗಿ ವಿಭಾಗಿಸಿಯೆ ಆಗಬೇಕು. ಇದರಿಂದ ಸರ್ವಸಾಮಾನ್ಯರಿಗೆಲ್ಲರಿಗೂ ಪ್ರಯೋಜನವಾದೀತು? ಸಮಾಜ ತನ್ನ ಸಂಸ್ಕೃತಿಯಿಂದ ತಲೆಯೆತ್ತಿ ಬದುಕೀತು?

ವ್ಯಕ್ತಿಯ ಜೀವನಕ್ಕೆ ಪುಟವೇರದ— ಸಮಾಜದ ಸಂಸ್ಕೃತಿಗೆ ಕಳೆ ಏರದ ಏಕೈಕ ಸಂಸ್ಕಾರದ ಸಾಧನೆಯಿಂದ ಏನು ಪ್ರಯೋಜನ! ನಿರ್ವಹಿಸದ ಭಾರವನ್ನು ಹೊರಿಸಿದರೆ ನಿರಸಲಾದೀತೆ ? ಎಳೆ ಮಕ್ಕಳಿಗೆ ಹೊರಲಾರದ ಹೊರೆಯನ್ನು ಹೊರಿಸಿದರೆ ಅವು ಹೊರಬಲ್ಲವೆ ? ಆ ಹೊರೆ ಗಮ್ಯ ಸ್ಥಾನವನ್ನು ಸೇರಬಲ್ಲುದೆ ? ಪ್ರಾಥಮಿಕ ವಿದ್ಯಾರ್ಥಿಗಳಿಗೆ ಪ್ರೌಢ ಶಿಕ್ಷಣವು ಅಂಟೀತೆ ? ಪ್ರಬುದ್ಧರಾದಾರೆ ? ನಿದಾನವಾದರೂ ನಿರ್ಬಂಧವಿಲ್ಲ. ಒಂದೊಂದಾಗಿ ಹಂತಗಳನ್ನು ಹತ್ತಿದರೆ ಎತ್ತರದ ಮಹಡಿಯನ್ನು ಸುಖವಾಗಿ ಸೇರಬಹುದು. ಹತ್ತುವ ಹಂತಗಳು ಬೇರೆ ಬೇರೆಯಾಗಿ ಕಂಡರೂ ಮಹಡಿಯೊಂದೆ. ಹಾಗೆ ಧಾರಣ ದೀಕ್ಷೆಗಳು ಸಂಸ್ಕಾರಗಳಲ್ಲಿ ವಿಭಿನ್ನವಾದರೂ "ಲಿಂಗಾಂಗ ಸಾಮರಸ್ಯ" ಒಂದೇ. ಇವೆರಡು ಸಂಸ್ಕಾರಗಳಲ್ಲಿ ನಾವೆಷ್ಟು ಮೆಲ್ಲಗೆ ಹೆಜ್ಜೆಯನ್ನಿಕ್ಕುವೆವೋ ಅಷ್ಟು ಸುಖವಾಗಿ ಸಪ್ರಯೋಜನವಾಗಿ ಆ ಸಾಮರಸ್ಯವನ್ನು ನಾವು ನಿರಾತಂಕವಾಗಿ ನಿರ್ವಹಿಸಬಲ್ಲೆವು. ಆಗ ಅದು ಸಾಮಾಜಿಕರೆಲ್ಲರ ಸೊತ್ತಾದೀತು ? ಆಗ ಮಾರ್ಗ ಮೀರಿದ ಕ್ರಿಯೆಗಳ ವಿಭಾಗವಾದರೂ ಸಾರ್ಥಕವಾದೀತು ? ಹನುಮಂತನಂತಹ ಮಹಾವೀರನೊಬ್ಬನು ಜಲಧಿಯನು ಜಿಗಿದನೆಂದರೆ ಉಳಿದವುಗಳೂ ಜಿಗಿಯಬಲ್ಲುವೆ ? ಜಿಗಿಯಬೇಕೆಂದು ವಾದಿಸಿದರೆ ಸಾಧಿಸೀತೆ ? ಹಾಗೆ ಯಾವನೊಬ್ಬ ವರಿಷ್ಠನು ಒಂದು ವೇಳೆ ಏಕೈಕ ಸಂಸ್ಕಾರ; (ವಾದಿಗಳ ಅಭಿಪ್ರಾಯದಲ್ಲಿ, ನಮ್ಮ ಅಭಿಪ್ರಾಯದಲ್ಲಿ ಏಕೈಕ ಸಂಸ್ಕಾರವೇ ಇಲ್ಲ. ಯಾವ ಶಾಸ್ತ್ರದಲ್ಲಿಯೂ ಹೇಳಿಲ್ಲ.) ದಿಂದ ಸಾಮರಸ್ಯ ಸುಖವನ್ನು ಸಂಪಾದಿಸಿದ್ದರೆ ಅದು ಸರ್ವ ಸಾಮಾನ್ಯವಾದೀತೆ ? ಮೆಲ್ಲ ಮೆಲ್ಲನೆ ಭಕ್ತ, ಮೆಲ್ಲ ಮೆಲ್ಲನೆ ಮಹೇಶ, ಮೆಲ್ಲ ಮೆಲ್ಲನೆ ಪ್ರಸಾದಿ " ಎಂದು ಮುಂತಾಗಿ ಪ್ರತಿಪಾದಿಸುವ ಶಿವಶರಣರ ವಚನಗಳ ಅಂತರಾರ್ಥವೇನಿರಬಹುದೆಂಬುದನ್ನು ನಾವು ಗಮನಿಸಬೇಕು; ಅದರಂತೆ ಸಮನಿಸಿಕೊಳ್ಳಬೇಕು. ಆಗ ಸಾಮರಸ್ಯವು ಸರ್ವರಿಗೂ ದಕ್ಕಬಲ್ಲುದು. "ಲಿಂಗಾಂಗ ಸಾಮರಸ್ಯ" ದಂತಹ ಅಸಾಧಾರಣ ಆನಂದವು ಒಂದು ಸಮಾಜದ ಸೊತ್ತಾಗಬೇಕಾದರೆ ಧಾರಣ-ದೀಕ್ಷೆಗಳು ವಿಭಿನ್ನ ಸಂಸ್ಕಾರಗಳಾಗಿ ಪೂರ್ವಜರಂತೆ ಪ್ರಯೋಗಿಸಿಯೇ ಆಗಬೇಕು.

ಯಾವುದಾದರೊಂದು ತತ್ವ ಬರೀ ತತ್ವವಾಗಿ ನಿಲ್ಲಬಾರದು. ಅದು ತತ್ವವೂ ಅಲ್ಲ. ತತ್ವವಾದ ಬಳಿಕ ಅದು ಸಮಾಜಕ್ಕೆ ಅಂಟಿಕೊಳ್ಳುವಂ

ತಹದಾಗಬೇಕು. ಸಮಾಜವನ್ನು ಹಬ್ಬಿಸುವಂತಹದಾಗಬೇಕು. ಆಗ ಆ ತತ್ವವು ಬದುಕಿ ಬೆಳಕ ಕಂಡೀತು ? "ಅದ್ವೈತ" ದಂತಹ ತತ್ವವು ಬರಿ ಅದ್ವೈತವಾಗಿಯೆ ನಿಂತರೆ ಅದರಿಂದ ಯಾರಿಗೆ ಏನು ಪ್ರಯೋಜನ ? ಅದು ಹೇಳಿಕೆ ಮತ್ತು ಕೇಳಿಕೆಯ ರೂಪದಲ್ಲಿ ಮೊದಲು ದ್ವೈತಕ್ಕೆ ಬಂದರೇನೆ ಅದಕ್ಕೊಂದು ಸಾರ್ಥಕ್ಯ. ಅದರಿಂದ ಅದ್ವೈತ ಸಮಾಜಕ್ಕೂ ಒಂದು ಉಪಕಾರ. ಹೇಳಿಕೆ ಕೇಳಿಕೆಗಳು ಅದ್ವೈತ ತತ್ವಕ್ಕೆ ವಿರೋಧಗಳೆಂದು ಸಾಧಿಸಿ ಬಚ್ಚಿಡಲು ಪ್ರಯತ್ನಿಸಿದರೆ ಪರ್ಯವಸಾನವೇ ಅದಕ್ಕೆ ಫಲ. ಇದರಂತೆ ಧಾರಣ-ದೀಕ್ಷೆಗಳ ವಿಚಾರದಲ್ಲಿಯೂ ಏಕೈಕ ಸಂಸ್ಕಾರದ ಸಾಧನೆಯನ್ನು ಮಾಡಿದರೆ ಇದಕ್ಕೂ ಅದೇ ಫಲ; ಅದೇ ಪ್ರಯೋಜನ. ಇದನ್ನೆಲ್ಲ ಅರಿತೆ ಪೂರ್ವಜರು ಧಾರಣ-ದೀಕ್ಷೆಗಳ ಸಂಸ್ಕಾರಗಳನ್ನೂ ವಿಭಿನ್ನವಾಗಿಯೆ ಹೇಳಿದರು. ಮತ್ತು ಅದರಂತೆ ಆಚರಿಸಿದರು. ಹಾಗೆ ಮಾಡುವದರಿಂದ ದೀಕ್ಷೆಯು ಸಾಮಾಜಿಕರೆಲ್ಲರನ್ನೂ ಚೆನ್ನಾಗಿ ಸಂಸ್ಕರಿಸಿ ಅವರಲ್ಲಿ ಸಮಸುಖ, ಸಮಕಳೆಗಳನ್ನು ಹುಟ್ಟಿಸಬಲ್ಲುದು. ಆಗ ಅದೊಂದು ತತ್ವವಾಗಿ ಸತ್ವಯುತವಾಗಿ ಬದುಕಬಲ್ಲುದು, ಬದುಕುವದು.

ಈ ಎಲ್ಲ ವಿಚಾರಗಳಿಂದ ವೀರಶೈವರ ಹೊಟ್ಟೆಯ ಮಕ್ಕಳಿಗೆ ಅಥವಾ ಆದೆ ಹುಟ್ಟಿದ ಮಕ್ಕಳಿಗೆ ಮೀರಿದ ಕ್ರಿಯೆಯನ್ನು ಬೋಧಿಸುವ ಶಿವದೀಕ್ಷೆಯನ್ನು ಮಾಡುವ ಅವಶ್ಯಕತೆಯಿದೆಯೆ ? ಮಾಡಿದರೆ ಒಳ್ಳೆಯದೆ ? ಮಾಡಲು ಸಾಧ್ಯವೆ ? ಎಂಬಂಶವನ್ನು ನಿಷ್ಪಕ್ಷಪಾತಿಗಳು ನಿರ್ಮಲಾಂತಃಕರಣದಿಂದ ನಿರೀಕ್ಷಿಸಬೇಕು; ನಿಶ್ಶಂಕಿತ ಬುದ್ಧಿಯಿಂದ ನಿರ್ಣಯಕ್ಕೆ ಬರಬೇಕು.

---

# ಅಷ್ಟಾವರಣ. (ವಾರ್ಧಿಕ)

ಸಂಗ್ರಾಹಕರು:- ಶ್ರೀ ಪುರಾಣಿಕ ಬುದ್ಧಯ್ಯ ಸ್ವಾಮಿಗಳು ಧಾರವಾಡ.

ಶ್ರೀ ಗುರುವೆ ಚಿನ್ನಾದ ಶ್ರೀ ಗುರುವೆ ಚಿದ್ಬಿಂದು ।
ಶ್ರೀ ಗುರುವೆ ಚಿತ್ಕಳೆಯು ಸರ್ವಸೂತ್ರಾಧಾರಿ ।
ಶ್ರೀ ಗುರುವೆ ತೇಜಕ್ಕೆ ಅಧಿಕ ನೋಡಾ ನಾಲ್ಕು ವೇದಕ್ಕತೀತನು ॥ಪ॥

ಗುರುದರ್ಶನಂ ಬಿಟ್ಟು ಅನ್ಯ ಭವಿಸಂಗದಿಂ ।
ಗುರುವ್ಯಸನವುಂ ಮರೆದು ಅನ್ಯರಾ ವ್ಯಸನದಿಂ ।
ಗುರುವಾಕ್ಯವುಂ ಮೀರಿ ಗರ್ವದಲಿ ತಿರುಗುವರು ಸುನಿ ಸೂಕರದಿ ಬಪ್ಪರು ॥
ಗುರುಪಾದ ನಂಬಿದನು ಗುರುಭಕ್ತ ತಾಂಡಯ್ಯ ।
ಗುರುಪಾದ ನಂಬಿದನು ಗೊಗ್ಗಿ ಭಕ್ತನು ತಾನು ।
ಗುರುವಾಕ್ಯ ನಡೆಸಿದನು ಉರಿಲಿಂಗಪೆದ್ದಯ್ಯ ಗುರುವಿನೊಳು ನನ್ನಯ್ಯನು ॥೧॥

ಲಿಂಗವನು ಮರೆದು ಕುಲಛಲಕಾಗಿ ತಿರುಗುವನು ।
ಲಿಂಗಪೂಜೆಯು ಬಿಟ್ಟು ಅನ್ಯಸ್ಥಾವರ ಹರಕೆ ।
ಲಿಂಗಕ್ಕೆ ಕೂಡದೆಯೆ ತನ್ನಂಗದಿಚ್ಛೆಯ ತಿಂಬ ಮನುಜನಿಗೊಲಿದನೆ॥
ಲಿಂಗವನು ನಂಬಿದನು ನುಲಿಯ ಚೆಂದಯ್ಯನು ।
ಲಿಂಗವನು ನಂಬಿದನು ಕಲಿಗಣಾನಾಥಯ್ಯ ।
ಲಿಂಗವನು ನಂಬಿದನು ಎಲೆಶ್ವರದ ಕೇತಯ್ಯ ಲಿಂಗವಮಾಣದ ಕನ್ನನು ॥೨॥

ಜಂಗಮವ ಜರಿದನ್ಯ ಅಲ್ಲೆ ವಾರದ ನೇಮ ।
ಜಂಗಮವು ಜಂಗಟ್ಟಿ ಬಂದೊಡಂ ನೀಡದೆ ।
ಜಂಗುಳಿಯ ದನದಂತೆ ಹಲವು ದೇಗುಲ ತಿರುಗಿ ನೆಲೆಯಗಾಣದೆ ಪೋದರು ॥
ಜಂಗಮಕೆ ನೀಡಿದನು ಸಿಂಧುಬಲ್ಲಳರಾಯ ।
ಜಂಗಮಕೆ ನೀಡಿದನು ಮೋಳಿಗೆಯ ಮಾರಯ್ಯ ।
ಜಂಗಮಕೆ ನೀಡಿದಳು ಶ್ರೀಯಾಳ ಚೆಂಗುಳಿಯು ಮಗನ ಬಾಣಸದಿಂದಲಿ ॥೩॥

ಪಾದತೀರ್ಥವ ಜರೆದು ಅನ್ಯ ತೀರ್ಥಕೆ ಹೋಗಿ ।
ಬಾಧೆ ಯಮಗೊಂಡದೊಳು ಮುಳುಮುಳುಗಿ ಏಳುವರು ।
ಹೋದಿತೆಂದೆಮ್ಮ ಪಾಪವು ಎಂದು ನಿಶ್ಚಯಿಸುವರು ಬಾಧೆ
ಯಮಪುರದ ॥

ಪಾದೋದಕದಿಂ ಶೇಷಗೆ ಮುಕ್ತಿಯಾಯಿತ್ತು ।
ಪಾದೋದಕದಿಂ ಚೋರಗೆ ಮುಕ್ತಿಯಾಯಿತ್ತು ।
ಪಾದೋದಕವೆ ಸರ್ವ ತೀರ್ಥಕ್ಕೆ ಮಿಗಿಲೆನಿಪ ಪಾದತೀರ್ಥವು
ಸತ್ಯವು ॥೪॥

ಪ್ರಸಾದವೇ ಮದ್ದು ಸರ್ವ ಮೂಲಿಕೆಗಳಿಗೆ ।
ಪ್ರಸಾದವೇ ಸಿದ್ಧಿ ಸರ್ವ ರೋಗಂಗಳಿಗೆ ।
ಪ್ರಸಾದವಂ ಮರೆದು ಮೂಲಿಕೆಯ ತಿಂಬ ಕುಲಗೇಡಿಗೆಂತ ವ್ರತವು॥

ಪ್ರಸಾದವಂ ನಂಬಿದನು ಬಸವ ದಂಡಾಧೀಶ ।
ಪ್ರಸಾದವಂ ನಂಬಿದನು ಮರುಳ ಶಂಕರದೇವ ।
ಪ್ರಸಾದವಂ ನಂಬಿದರು ಬಿಬ್ಬಿ ಬಾಚಯ್ಯಗಳು ಪ್ರಸಾದಂ ಪ್ರಮಥ
ಗಣಕೆ ॥೫॥

ವಿಭೂತಿ ಮರೆದವರು ಹುಣ್ಣು ತದ್ದುಗಳಾಗಿ ।
ವಿಭೂತಿ ಧರಿಸಲೊಲ್ಲದ ಪಾಪಿಗಳ ಮುಖವು ।
ವಿಭೂತಿಯಂ ಬಿಟ್ಟು ಎಚ್ಚರಂ ಮರೆತು ತಿರುಗುವ ಪಿರಿಯ
ಭೂತಗಳು ॥

ವಿಭೂತಿ ನೇಮದಿಂದಲೆ ನಡೆದ ಗುಂಡಯ್ಯ ।
ವಿಭೂತಿಯಾ ಶರಣ ಘಟ್ಟಿವಾಳಯ್ಯನು ।
ವಿಭೂತಿ ನಿತ್ಯ ಸರ್ವಾಂಗದಲಿ ಧರಿಸಲು ಭೂತ ರಾಕ್ಷಸ
ನಿಲ್ಲವು ॥೬॥

ರುದ್ರಾಕ್ಷಿಯಂ ಮರೆದು ಛಾಯದುಡಿಗೆಯನುಟ್ಟು ।
ರುದ್ರಾಕ್ಷಿಯಂ ಬಿಟ್ಟು ಚಿನ್ನ ಚಿಗರವನುಟ್ಟು ।
ರುದ್ರಾಕ್ಷಿ ಮುಟ್ಟಿ ನೆನೆಯದ ಭ್ರಷ್ಟ ಮನುಜರಿಗೆ ರುದ್ರಾಕ್ಷಿ
ಸಿದ್ಧಿಯಹುದೆ ॥

ರುದ್ರಾಕ್ಷಿ ನಂಬಿ ಧರಿಸಿದನು ಚಾರವುಂರಾಯ ।
ರುದ್ರಾಕ್ಷಿ ನಂಬಿ ಗಾರ್ದಭ ಶುನಕ ಕೈಲಾಸ ।
ರುದ್ರಾಕ್ಷಿ ನಂಬಿ ಧರಿಸಿದಳು ಮಹನಂದಿ ತಾ ಶಿವನೊಳಗೆ ಲಯ
ವಾದಳು ॥೭॥

ಮಂತ್ರವನು ಮರೆದೆಂತ್ರ ತಂತ್ರಗಳ ಕಟ್ಟುವರು ।
ಮಂತ್ರವುಂ ಸಿದ್ಧಿಸದೆ ಅನ್ಯ ಕುಲ ಜಾತಿಯಲಿ ।
ಮಂತ್ರಿಸಿ ಮುಖದ ಮೇಲುಗುಳಿಸಿಕೊಳುತಿಹರು ಎಂಥ ಶಿವ
ಭಕ್ತರಿವರು ॥
ಮಂತ್ರವನೆ ನಂಬಿದನು ಮಂತ್ರ ಜಾತಯ್ಯಗಳು ।
ಮಂತ್ರವನೆ ನಂಬಿದನು ಅಜಗಣ್ಣ ತಂದೆಗಳು ।
ಮಂತ್ರದಿಂ ಯಮಪುರದಲಿರ್ದ ಜೀವಿಗಳು ಶಿವಮಂತ್ರದಿಂದಲಿ
ಪೋದರು ॥೮॥

ಅಷ್ಟಾವರಣ ಪಂಚ ಆಚಾರ ಕೇಳ್ದಗೆ ।
ಇಷ್ಟಾರ್ಥವುಂ ಸಿದ್ಧಿ ದೊರಕೊಂಬುವುದು ಸತ್ಯ ।
ಶಿಷ್ಟ ಭಕ್ತರಿಗೆ ಯುಕ್ತರಿಗೆ ಮುಕ್ತರಿಗೆ ಸತ್ಯರಿಗೆ ಸಾಧಕರಿಗೆ ।
ಇಷ್ಟ ಲಿಂಗದೊಳು ಪಂಚೈದು ವದನಗಳರಿತು ।
ಶ್ರೇಷ್ಠರೆಂದೆನಿಸುವರು ಷಟ್ಸ್ಥಲದ ಮಾರ್ಗದೊಳು ।
ಕಷ್ಟ ಜನ್ಮವ ಕಳೆದು ಗುರುದೀಕ್ಷೆಯುಂ ಪಡೆದು ವೀರಶೈವವ
ಬೆರೆಯಲು ॥೯॥

— ಓಂ ಸತ್ಯಂ ಶಿವಂ —

---

# ಲಿಂಗಧಾರಣ ಅರ್ಥಾತ್ ಶಿವದೀಕ್ಷೆ.

(ಲೇಖಕರು:— ಶ್ರೀ. ಜೀರಗೆ ಕ. ಬಸವಪ್ಪ ಬಿ. ಎ., ಬೆಂಗಳೂರು.)

(ಲೇಖಾಂಕ ೩.)

ಲಿಂಗಧಾರಣ ಅರ್ಥಾತ್ ಶಿವದೀಕ್ಷೆಯು ವಾದವು ಹುಟ್ಟಿ ಈಗ್ಯೆ ಸುಮಾರು ಎರಡು ವರ್ಷಗಳಾದರೂ ಈ ವಿಚಾರದಲ್ಲಿ ಸತ್ಯವಾದ ಮತ್ತು ಸಹಜವಾದ ನಿರ್ಣಯುವೇನೆಂಬುದನ್ನು ತಿಳಿಯಲು ಹಲವರು ಇನ್ನೂ ಶ್ರಮಪಡುತ್ತಿರುವರೆಂಬುದು ಶೋಚನೀಯುವೇ ಸರಿ. ಆದರೆ ಇದಕ್ಕೆ ಕಾರಣವಿಲ್ಲದೆ ಇಲ್ಲ. ಶರಣರ ಅನುಭಾವದ ವಚನಗಳ ಅಭ್ಯಾಸ ಮತ್ತು ಅನುಷ್ಠಾನಗಳು ಬಹಳ ದಿವಸಗಳ ಹಿಂದೆಯೇ ನಿಂತುಹೋಗಿ ವೀರಶೈವಕ್ಕೆ ವಿರುದ್ಧವಾದ ಹಲವು ವೈದಿಕ ಆಚರಣೆಗಳು ರೂಢಿಗೆ ಬಂದು ಜನರ ಕಣ್ಣಿಗೆ ಒಂದು ಮುಬ್ಬು ಕವಿದುದೇ ಇದಕ್ಕೆ ಕಾರಣವಾಗಿದೆ. ಈ ಮುಬ್ಬನ್ನು ಪರಿಹರಿಸಲು ಸೂಕ್ಷ್ಮವಾದ ಮತ್ತು ಚುರುಕಾದ ವಿಚಾರ ಕಿರಣಗಳು ನಾಡಿನ ಮೇಲೆ ಬೀಳಬೇಕಾಗಿದೆ. ಇಂತಹ ವಿಚಾರ ಕಿರಣಗಳನ್ನು ಬೀಳಿಸುವ ಮಹತ್ಕಾರ್ಯದಲ್ಲಿ ನಮ್ಮ ರಾವಬಹದ್ದೂರ ಹಳಕಟ್ಟಿಯವರು ಬಹಳವಾಗಿ ದುಡಿಯುತ್ತಿದ್ದಾರೆ. ಅವರು ತಮ್ಮ ಜೀವತ ಕಾಲವನ್ನು ಮೀಸಲಾಗಿ ಮಾಡಿಕೊಂಡು ಶರಣರ ಅನಂತ ವಚನಗಳನ್ನು ಬೆಳಕಿಗೆ ತಂದಿರುತ್ತಾರೆ. ಇಂಥ ಕಾರ್ಯವನ್ನು ನಮ್ಮ ಹಳಕಟ್ಟಿಯವರು ಕೈಕೊಳ್ಳದೇ ಹೋಗಿದ್ದಲ್ಲಿ ನಾವು ಇನ್ನೂ ಹೆಚ್ಚಿನ ಮುಬ್ಬಿನಲ್ಲಿ ಅಲೆಯಬೇಕಾಗುತ್ತಿತ್ತು. ಆದರೆ ವೀರಶೈವ ಸಮಾಜದ ಪುಣ್ಯದ ಫಲದಿಂದಲೋ ಅಥವಾ ಹಿಂದಿನ ಶಿವಶರಣರ ಕ್ರಿಯಾಸಿದ್ಧಿಯ ಬಲದಿಂದಲೋ ಶ್ರೀ ಹಳಕಟ್ಟಿಯವರು ವೀರಶೈವದ ಉದ್ಧಾರಕ್ಕಾಗಿ ಕಂಕಣ ತೊಟ್ಟು ನಿಂತಿದ್ದಾರೆ. ವೀರಶೈವ ಆಚರಣೆಯ ಸತ್ಯಾನ್ವೇಷಣೆಗೆ ಶ್ರೀ ಹಳಕಟ್ಟಿಯವರ ಶ್ರಮವೇ ಮೂಲ ಆಧಾರವಾಗಿದೆಯೆಂದರೆ ಅದು ತಪ್ಪಾಗದು ಈ ರೀತಿಯಲ್ಲಿ ಶಿವಶರಣರ ಸತ್ಯ ತತ್ವನಿರ್ಧಾರಕ್ಕೆ ಮೂಲ ಕಾರಣವಾಗಿರತಕ್ಕ ಶ್ರೀ ಹಳಕಟ್ಟಿಯವರನ್ನು ಕೆಲವರು ಯಾವುದೋ ಒಂದು ಉದ್ದೇಶದಿಂದ ಮನಬಂದಂತೆ ಟೀಕಿಸಿ ನುಡಿಯುವುದು ನ್ಯಾಯುವೂ ಅಲ್ಲ. ಧರ್ಮವೂ ಅಲ್ಲ. ಇಷ್ಟನ್ನು ಪ್ರಾಸ್ತಾವಿಕವಾಗಿ ಹೇಳಿ ಮುಂದೆ ವಿಷಯಕ್ಕೆ ಬರುತ್ತೇನೆ.

ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆಯ ವಾದವು ಬೆಳೆದುಕೊಂಡು ಹೋಗಿ ಬರಬರುತ್ತಾ ಮೂಲಚರ್ಚೆಯು ಹಾದಿಯೇ ತಪ್ಪಿ ವಿಷಯಾಂತರಗಳಿಗೆ ಎಡೆಯಾಗಿ ಓದುಗರಿಗೆ ದಿಗ್ಭ್ರಮೆಯುಂಟಾಗಿರುವುದಲ್ಲದೆ ಮೂಲ ವಿಷಯದ ನಿಜತತ್ವನಿರ್ಣಯವು ಯಶಸ್ವಿಯಾಗಿ ನಡೆಯದೆ ಹೋಗಿದೆ. ಇನ್ನು ಮುಂದೆ ಈ ರೀತಿಯ ವಿಷಯಾಂತರಗಳ ಅವಾಂತರಗಳಿಗೆ ಎಡೆಗೊಡದೆ ಲೇಖಕರು ಮೂಲತತ್ವ ವಿಚಾರವನ್ನೇ ಪ್ರಸ್ತಾಪಿಸುವರೆಂದು ನಂಬಿ ಪ್ರಕೃತ ಶ್ರೀ ಗುರುಮೂರ್ತಿದೇವರು ಜಗದ್ಗುರು ಶ್ರೀ ನಿಡುಮಾಮಿಡಿ ಇವರ ಮೊದಲನೆಯ ಲೇಖನದ ಕೆಲವು ಸಂದೇಹಗಳಿಗೆ ಉತ್ತರ ಕೊಡುತ್ತೇನೆ.

## ದೀಕ್ಷಾಕಾಲ.

ಶ್ರೀ ಗುರುಮೂರ್ತಿದೇವರು ದೀಕ್ಷಾಕಾಲದ ವಿಚಾರವನ್ನು ಪ್ರಸ್ತಾಪಿಸುತ್ತಾ "ಶಿವಶರಣರ ನುಡಿಗಳಿಂದ ಜ್ಞಾನೋದಯವಾದ ನಂತರ ಎಂದರೆ ಎಂಟು ವರ್ಷದ ಮೇಲೆ ದೀಕ್ಷೆ ಮಾಡಬೇಕೆಂದು **ಸುಸ್ಪಷ್ಟವಾಗಿ** ತಿಳಿದುಬರುತ್ತದೆ" ಎಂದು ಹೇಳಿರುತ್ತಾರೆ. ಎಂಟನೆಯ ವರ್ಷದ ಮೇಲೆ ದೀಕ್ಷೆ ಮಾಡಬೇಕೆಂದು **ಸುಸ್ಪಷ್ಟವಾಗಿ** ಯಾವ ಶರಣರು ಯಾವ ವಚನದಲ್ಲಿ ಹೇಳಿರುತ್ತಾರೆ? ಆ ಶರಣರ ಹೆಸರನ್ನೂ ಮತ್ತು ಅವರ ವಚನವನ್ನೂ ಶ್ರೀಗುರುಮೂರ್ತಿದೇವರು ತಮ್ಮ ಮುಂದಿನ ಲೇಖದಲ್ಲಿ ಪ್ರಕಟಿಸಬಲ್ಲರೆ?

ಇನ್ನು ಶ್ರೀ ಗುರಮೂರ್ತಿಯವರು ರೇವಣಸಿದ್ಧರ ಮಗನಾದ ರುದ್ರಮುನಿಗೂ ಮತ್ತು ಹಾವಿನಹಾಳ ಕಲ್ಲಯ್ಯನಿಗೂ ಎಂಟನೆಯ ವರ್ಷದಲ್ಲಿ **ಶೈವದೀಕ್ಷೆ**ಯನ್ನು ಕೊಡಿಸಲಾಯಿತೆಂದು ಹೇಳಿ ಅವರಿಗೆ ಗರ್ಭದಲ್ಲಾಗಲೀ ಜನನದಲ್ಲಿಯಾಗಲೀ ಶಿವದೀಕ್ಷೆಯಾಗಲಿಲ್ಲವೆಂದು ಆಕ್ಷೇಪಿಸಿದ್ದಾರೆ. ಎಂಟನೆಯ ವರ್ಷದಲ್ಲಿ ಮಾಡುವ ಶೈವದೀಕ್ಷೆಗೂ ಗರ್ಭದಲ್ಲಿಯೇ ಅಥವಾ ಜನನವಾದ ಕೂಡಲೇ ಮಾಡತಕ್ಕ ಲಿಂಗಧಾರಣ ಅರ್ಥಾತ್ ವೀರಶೈವದೀಕ್ಷೆಗೂ ಗಂಟುಹಾಕಿ ಹಗ್ಗವನ್ನೇ ಹಾವೆಂದು ಭ್ರಮಿಸುವಂತೆ ಹಿಂದಿನ ಶೈವಸಂಪ್ರದಾಯದ ಶೈವದೀಕ್ಷೆಯನ್ನು ವೀರಶೈವ ದೀಕ್ಷೆಯೆಂದು ಭ್ರಮಿಸಿದರೆ ಅದು ಭ್ರಮಣೆಯೇ ವಿನಹ ಸತ್ಯಾಂಶವಾಗುವುದಿಲ್ಲ. ಬಸವಾದಿ ಪ್ರಮಥರ ಹಿಂದೆ ಆಚರಣೆಯಲ್ಲಿದ್ದ ಶೈವದೀಕ್ಷೆಗೂ

ಬಸವಾದಿ ಪ್ರಮಥರ ಅನಂತರ ಆಚರಣೆಗೆ ಬಂದ ವೀರಶೈವದೀಕ್ಷೆಗೂ ಅಜಗಜಾಂತರವಿರುತ್ತದೆ. ರುದ್ರಮುನಿ, ಹಾವಿನಹಾಳಕಲ್ಲಯ್ಯ ಮತ್ತು ಗೋರಕ್ಷ ಇವರುಗಳು ಶೈವದೀಕ್ಷೆಯನ್ನು ಪಡೆದ ಮೇಲೆ ಮತ್ತೊಮ್ಮೆ ಶಿವಶರಣರ ಕೈಯ್ಯಲ್ಲಿ ಹೊಸದಾಗಿ ವೀರಶೈವ ದೀಕ್ಷೆಯನ್ನು ಪಡೆದ ರೆಂಬ ಅಂಶವು ಅನೇಕ ಆಧಾರಗಳಿಂದ ಕಂಡುಬರುತ್ತದೆ ನಿಜಚರಿತ್ರೆಯು ಹೀಗಿರುವಲ್ಲಿ ಶೈವ ದೀಕ್ಷೆಯೇ ವೀರಶೈವ ದೀಕ್ಷೆಯೆಂದು ಥಟಕ್ಕನೆ ನುಡಿಯುವುದು ಹೆಚ್ಚಿನ ಅನರ್ಥಗಳಿಗೆ ಕಾರಣವಾಗುತ್ತದೆ.

## ಕರಸ್ಥಲ.

ಇನ್ನು ಶ್ರೀಗುರುಮೂರ್ತಿದೇವರು ಕರಸ್ಥಲ ವಿಚಾರವನ್ನು ಪ್ರಸ್ತಾಪಿಸುತ್ತ ಶಿವಶರಣರ ವಚನಗಳಲ್ಲಿ ಕರಸ್ಥಲದ ವಿಚಾರವು ಬರುತ್ತದೆಯೆಂದೂ, ಇದರಿಂದಲಾದರೂ ಶಿವಶರಣರ ಶಿವದೀಕ್ಷಾಕಾಲವನ್ನು ಸುಲಭವಾಗಿ ಗುರ್ತಿಸಬಹುದಾಗಿದೆ ಎಂದೂ, ಗರ್ಭಲಿಂಗಧಾರಣೆಯುಲ್ಲಾಗಲೀ ಜನನದಿನದಲಿಂಗಧಾರಣೆಯುಲ್ಲಾಗಲೀ ಲಿಂಗವನ್ನು ಕರಸ್ಥಲದಲ್ಲಿ ಕೊಡಲು ಅದೆಂದಿಗೂ ಸಾಧ್ಯವಿಲ್ಲವೆಂದೂ, ನುಡಿದು ಗಣದಾಸಿ ವೀರಣ್ಣ, ಉರಿಲಿಂಗಪೆದ್ದಿ, ಸಿದ್ಧರಾಮ ಶಿವಯೋಗಿ ಮತ್ತು ಬಸವಣ್ಣ ಇವರ ಕೆಲವು ವಚನಗಳನ್ನು ಉದಹರಿಸಿ ಶಿವದೀಕ್ಷೆಯಲ್ಲಿ ಕರಸ್ಥಲದ ಆಚರಣೆಯೇ ಮುಖ್ಯವಾದುದೆಂದು ಒಂದು ಅರ್ಥವನ್ನು ಉಂಟುಮಾಡಿ ಹೇಳಿದ್ದಾರೆ. ಕರಸ್ಥಲದ ಆವಶ್ಯಕತೆ ಮತ್ತು ಅದರ ಸ್ಥಾನ ಏನೆಂಬುದನ್ನು ಶ್ರೀ ಗುರುಮೂರ್ತಿಗಳು ಅರ್ಥಮಾಡಿಕೊಂಡಂತೆ ಕಾಣುವುದಿಲ್ಲ. ಗಣದಾಸಿ ವೀರಣ್ಣ, ಉರಿಲಿಂಗಪೆದ್ದಿ, ಸಿದ್ಧರಾಮ ಶಿವಯೋಗಿ, ಬಸವಣ್ಣ ಇವರೇ ಮೊದಲಾದ ಶರಣರು ಕರಸ್ಥಲದ ವಿಚಾರವನ್ನು ಎತ್ತಿಕೊಂಡಿರುವುದು ಲಿಂಗಯೋಗ ಅಥವಾ ಶಿವಯೋಗದ ಆಚರಣೆಯ ಸಂಬಂಧದಲ್ಲಿ. ದೀಕ್ಷೆಯ ಸಂಬಂಧದಲ್ಲಲ್ಲ. ಶ್ರೀ ಗುರುಮೂರ್ತಿಗಳು ಮತ್ತೊಮ್ಮೆ ಈ ವಚನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿ ಇವು ಯಾವ ಸಂಬಂಧದಲ್ಲಿ ಹಾಡಿದ ವಚನಗಳೆಂಬುದನ್ನು ಅರ್ಥಮಾಡಿಕೊಳ್ಳಬೇಕು. ದೀಕ್ಷೆಯಲ್ಲಿ ಗುರುವು ಲಿಂಗವನ್ನು ಸ್ಥಾಪಿಸುವುದು ಕರಸ್ಥಲಕ್ಕಲ್ಲ. ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಶರೀರಗಳಿಗೆ. ಈ ರೀತಿ ತ್ರಿವಿಧ ಶರೀರಗಳಲ್ಲಿ ತ್ರಿವಿಧಲಿಂಗಗಳನ್ನು ಸ್ಥಾಪನೆ ಮಾಡಿದ ಮೇಲೆ ಗುರುವು ಶಿಷ್ಯನಿಗೆ ಆ ಲಿಂಗವನ್ನು ಹೇಗೆ ಕರಸ್ಥಲಕ್ಕೆ ತಂದುಕೊಂಡು

ಶಿವಪೂಜೆ, ಶಿವಯೋಗಾಚರಣೆಗಳನ್ನು ನಡೆಸಬೇಕೆಂಬುದನ್ನು ಅನುಭವಕ್ಕೆ ತಂದುಕೊಡುತ್ತಾನೆ. ಈ ಅನುಭವವನ್ನು ಶಿಷ್ಯನು ಕ್ರಮಕ್ರಮೇಣ ಶಕ್ತಿ ಬಂದಂತೆಲ್ಲಾ ಯಶಸ್ವಿಯಾಗಿ ಮಾಡುತ್ತ ಹೋಗಬೇಕು. ಈ ಅನುಭವವು ಶ್ರೀಗುರುಮೂರ್ತಿಗಳು ಹೇಳುವಂತೆ ದೀಕ್ಷೆ ಎನಿಸಿಕೊಳ್ಳುವುದಿಲ್ಲ. ಈ ಅನುಭವವು ದೀಕ್ಷೆಯ ಫಲ ಅಥವಾ ಪ್ರಯೋಜನ. ಇಂಥ ಫಲ ಅಥವಾ ಪ್ರಯೋಜನವನ್ನು ಪಡೆಯಲು ಒಂದು ಅಧಿಕಾರ ಬೇಕು. ಈ ಅಧಿಕಾರವನ್ನು ಉಂಟುಮಾಡಿಕೊಡಲು ಗುರುವು ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಇಷ್ಟಪ್ರಾಣಭಾವಲಿಂಗಗಳನ್ನು ಸ್ಥಾಪಿಸುತ್ತಾನೆ. ಈ ಸ್ಥಾಪನೆಯೇ ಅರ್ಥಾತ್ ಅಧಿಕಾರ ಪ್ರದಾನವೇ ದೀಕ್ಷೆ ಎನಿಸಿಕೊಳ್ಳುತ್ತದೆ. ವಿಚಾರವು ಹೀಗಿರುವಲ್ಲಿ ದೀಕ್ಷೆ ಮತ್ತು ಅನುಭಾವಗಳನ್ನು (ಅಧಿಕಾರ ಮತ್ತು ಫಲಗಳನ್ನು) ಕಲಬೆರಕೆಮಾಡಿ ಶ್ರೀ ಗುರುಮೂರ್ತಿದೇವರು ತಾವೂ ಭ್ರಾಂತರಾಗಿರುವರಲ್ಲದೆ ಉಳಿದವರನ್ನೂ ಭ್ರಾಂತರನ್ನಾಗಿ ಮಾಡಹತ್ತಿದ್ದಾರೆ. ಈಗಲಾದರೂ ಶ್ರೀ ಗುರುಮೂರ್ತಿದೇವರು ಈ ವಿಚಾರವನ್ನು ಕೂಲಂಕಷವಾಗಿ ಅರ್ಥಮಾಡಿ ನೋಡಬಹುದಾಗಿದೆ. ಕರ, ಮನ ಮತ್ತು ಭಾವಗಳು ಲಿಂಗಪೂಜೆಯ ಎಂದರೆ ಲಿಂಗಾನುಸಂಧಾನದ ಸ್ಥಾನಗಳೇ ವಿನಹ ದೀಕ್ಷೆಯ ಸ್ಥಾನಗಳಲ್ಲ. ಸ್ಥೂಲ, ಸೂಕ್ಷ್ಮ ಮತ್ತು ಕಾರಣಶರೀರಗಳೇ ದೀಕ್ಷೆಯ ಸ್ಥಾನಗಳು. ಈ ತಾರತಮ್ಯವನ್ನು ಹೆಚ್ಚಿನ ಅನುಭವದಿಂದ ಅರ್ಥ ಮಾಡಿಕೊಳ್ಳಬೇಕಾಗಿದೆ.

ಇನ್ನು ಶ್ರೀಗುರುಮೂರ್ತಿಗಳು ದೀಕ್ಷಾಪೇಕ್ಷಿಗಳ ಆಚಾರವಿಚಾರಗಳನ್ನು ಪ್ರಸ್ತಾಪಿಸುತ್ತಾ ಶಿವದೀಕ್ಷೆಯಾಗಲು ಸನ್ನದ್ಧನಾಗುವವನು ಯಾವನೇ ಇರಲಿ ಅವನು ಆಚಾರವಿಚಾರಗಳೆರಡರಿಂದಲೂ ಪರಿಣತನಾಗಿರಬೇಕೆಂದೂ, ಇಲ್ಲದಿದ್ದರೆ ಶಿವದೀಕ್ಷೆಯು ಸಾಧ್ಯವಿಲ್ಲವೆಂದೂ, ಆಚಾರವಿಹೀನನಿಗೆ ದೀಕ್ಷೆಯನ್ನು ಮಾಡಲೂಕೂಡದೆಂದೂ, ಹೇಳಿ ಶ್ರೀಚನ್ನಬಸವಣ್ಣನವರ ಒಂದು ವಚನವನ್ನು ಉದಹರಿಸಿದ್ದಾರೆ ಈ ವಚನವು ಯಾರ ದೀಕ್ಷೆಯ ವಿಚಾರದಲ್ಲಿ ಹಾಡಿದುದೆಂಬುದನ್ನು ಶ್ರೀಗುರುಮೂರ್ತಿಗಳು ಮರೆತು ಬಿಟ್ಟಂತೆ ಕಾಣುತ್ತದೆ. ಚನ್ನಬಸವಣ್ಣನವರು ಹೇಳಿರುವ ಈ ವಚನವು ಭವಿಗಳಿಗೆ ಅನ್ವಯಿಸಿ ಹೇಳಿದುದು. ಭವಿಗಳಿಗೆ ಶಿವದೀಕ್ಷೆಯನ್ನು ಕೊಡಬೇಕಾದರೆ ಅವರ ಆಚಾರವಿಚಾರಗಳನ್ನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿ ಶಿವದೀಕ್ಷೆಯನ್ನು ಕೊಡಬೇಕೇ ಹೊರತು

ಸಿಕ್ಕ ಸಿಕ್ಕ ಹಾಗೆ ಅನಾಚಾರವುಳ್ಳವರಿಗೆ ದೀಕ್ಷೆಯನ್ನು ಕೊಡಬಾರದೆಂದು ಭವಿಗಳ ಶಿವದೀಕ್ಷೆಯ ವಿಚಾರದಲ್ಲಿ ಒಂದು ಎಚ್ಚರಿಕೆಯನ್ನು ಶ್ರೀಚನ್ನಬಸವಣ್ಣನವರು ನಮ್ಮೆಲ್ಲರಿಗೂ ಕೊಟ್ಟಿರುತ್ತಾರೆ. ಇದರಲ್ಲಿ ತಪ್ಪೇನು? ಭವಿಗಳ ದೀಕ್ಷೆಯ ವಿಚಾರದಲ್ಲಿ ಕೊಟ್ಟ ಈ ಎಚ್ಚರಿಕೆಯನ್ನು ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ಅನ್ವಯಿಸಿ ನುಡಿಯುವುದು ದಡ್ಡತನ. ಏಕೆಂದರೆ ಶ್ರೀಚನ್ನಬಸವಣ್ಣನವರು ಭವಿಗಳ ಶಿವದೀಕ್ಷೆಯ ವಿಚಾರದಲ್ಲಿ ಎಚ್ಚರಿಕೆಯನ್ನು ಕೊಟ್ಟಂತೆಯೇ ಶಿವಭಕ್ತರ ಶಿಶುಗಳ ಶಿವದೀಕ್ಷೆಯ ವಿಚಾರದಲ್ಲಿಯೂ ಸಹ ಒಂದೆರಡು ಎಚ್ಚರಿಕೆಗಳನ್ನು ಕೊಟ್ಟಿರುತ್ತಾರೆ. ಆ ಎಚ್ಚರಿಕೆಗಳು ಯಾವುವೆಂಬುದನ್ನು ಪರಿಶೀಲಿಸಿ ನೋಡಿದ್ದಾದರೆ ಶ್ರೀಗುರುಮೂರ್ತಿಗಳು ಮಾಡಿರುವ ತಪ್ಪು ಎಷ್ಟು ಗುರುತರವಾದುದೆಂದು ಯಾರಿಗಾದರೂ ಅರ್ಥವಾಗಲೇಬೇಕು.

## ಎರಡು ಎಚ್ಚರಿಕೆಗಳು.

ಶ್ರೀ ಚನ್ನಬಸವಣ್ಣನವರು ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳ ವಿಚಾರದಲ್ಲಿ ಕೊಟ್ಟಿರುವ ಎಚ್ಚರಿಕೆಗಳು ಎರಡು ವಿಧವಾಗಿವೆ. ಅವು ಯಾವುವೆಂದರೆ:—

(೧) ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳು ಯಾವ ಕಾಲದಲ್ಲಿಯೂ ಭವಿಗಳಾಗಿರತಕ್ಕದ್ದಲ್ಲ.

(೨) ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳು ಗುರುಕರಜಾತರಾಗಿಯೇ ಹುಟ್ಟಬೇಕು.

ಈ ಎರಡು ಎಚ್ಚರಿಕೆಗಳನ್ನು ಶಿವಭಕ್ತರು ತಮ್ಮ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳ ವಿಚಾರದಲ್ಲಿ ಸದಾ ಪರಿಪಾಲಿಸಬೇಕಾಗುತ್ತದೆ. ಶ್ರೀಚನ್ನಬಸವಣ್ಣನವರ ಮಾತುಗಳನ್ನೇ ಇಲ್ಲಿ ಉದಹರಿಸುತ್ತೇನೆ:—

"ಸದ್ಭಕ್ತರ ಬಸಿರಲ್ಲಿ ಹುಟ್ಟಿದ ಮಕ್ಕಳು ಭವಿಯ
ನಾಚರಿಸಿದೊಡೆ ಪಂಚಮಹಾಪಾತಕವೆಂದುದು
ಗುರುವಚನ.........ಇದು ಕಾರಣ ಕೂಡಲಚನ್ನಸಂಗಯ್ಯ
ನಿಮ್ಮ ಶರಣನಿಗೆ ಸಂತಾನವಿಲ್ಲದೆ ಹೋಗಲಿ."

ಈ ವಚನದಲ್ಲಿ ಎರಡು ಭಾಗಗಳಿವೆ. ಆ ೨ ಭಾಗಗಳಲ್ಲಿ ಶ್ರೀ ಚನ್ನಬಸವಣ್ಣನವರು ೨ ಎಚ್ಚರಿಕೆಗಳನ್ನು ಕೊಟ್ಟಿರುತ್ತಾರೆ. "ಸದ್ಭಕ್ತರ ಬಸಿರಲ್ಲಿ ಹುಟ್ಟಿದ ಮಕ್ಕಳು ಭವಿಯನಾಚರಿಸಿದೊಡೆ ಪಂಚಮಹಾಪಾತಕವೆಂದುದು ಗುರುವಚನ" ಇದು ಮೊದಲನೆಯ ಭಾಗ. ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಶಿಶುಗಳು ಭವಿಯನಾಚರಿಸಬಾರದು. ಎಂದರೆ ಭವಿಗಳಾಗಿ ಇರಬಾರದು. ಒಂದುವೇಳೆ ಹಾಗೆ ಇರುವುದಾದರೆ ಅದು ಮಹಾಪಾತಕವಾಗುವುದು. ಈ ಎಚ್ಚರಿಕೆ ಗುರುಕೊಟ್ಟ ಎಚ್ಚರಿಕೆ ಎಂದು ಚನ್ನಬಸವಣ್ಣನವರು ಸ್ಪಷ್ಟವಾಗಿ ನುಡಿದು ಶಿಶುಗಳು ಯಾವ ಕಾಲದಲ್ಲಿಯೂ ಭವಿಗಳಾಗಿ ಇರಕೂಡದೆಂದು ಕಟ್ಟಪ್ಪಣೆ ಮಾಡಿದ್ದಾರೆ. ಇನ್ನು ವಚನದ ಎರಡನೆಯ ಭಾಗವನ್ನು ನೋಡುವಾ. "ಇದು ಕಾರಣ ಕೂಡಲಚನ್ನಸಂಗಯ್ಯ ನಿಮ್ಮ ಶರಣರಿಂಗೆ ಸಂತಾನವಿಲ್ಲದೆ ಹೋಗಲಿ." ಇದು ೨ನೆಯ ಭಾಗ. ಈ ಭಾಗವನ್ನು ನೋಡಿ ಯಾರಾದರೂ ಇದೇನು! ಶರಣರಿಗೆ ಸಂತಾನವೇ ಬೇಡವೆಂದು ಚನ್ನಬಸವಣ್ಣನವರು ಶಾಪಕೊಟ್ಟಿರುವರು! ಎಂದು ದುಡುಕಿ ಮಾತನಾಡಬಹುದು. ಆದರೆ ಇದರ ಗೂಢಾರ್ಥ ಬೇರೆಯಾಗಿದೆ. ಶಿವಶರಣರ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳೆಲ್ಲರೂ ಗುರುಕರಜಾತರಾಗಿಯೇ ಹುಟ್ಟಬೇಕೆಂಬುದೇ ಇದರ ಗೂಢಾರ್ಥ. ಇದೇ ಶುದ್ಧ ಶರಣಮಾರ್ಗ.

"ಅಸಮ ಶ್ರೀ ಗುರುವಿನ ಎಸೆವ ಕರಸೀಠವೊಳು ಪುಟ್ಟಿ।
ವಸುಧೆಯೊಳು ಪಿತನ ಪೆಸರನ್ನು ಪೇಳುವ।
ಹುಸಿಕಗೆಲ್ಲಿಯದೋ ಶಿವಯೋಗ"॥

ಎಂಬ ಶಿವಯೋಗಾಚರಣೆಯ ಭಾವವಾದರೂ ಇದೇ.

ಈ ರೀತಿಯಲ್ಲಿ ಚನ್ನಬಸವಣ್ಣನವರು ಶಿವಭಕ್ತರ ಹೊಟ್ಟೆಯ ಶಿಶುಗಳ ಶಿವದೀಕ್ಷೆಯ ವಿಚಾರದಲ್ಲಿ ಕೊಟ್ಟಿರತಕ್ಕ ಎಚ್ಚರಿಕೆಯ ಪರಿಣಾಮವೇನೆಂಬುದನ್ನು ನಾವು ವಿಚಾರಮಾಡಬೇಕಾಗುತ್ತದೆ. ಈ ಎಚ್ಚರಿಕೆಯ ಪರಿಣಾಮವು ಎರಡು ರೀತಿಗಳಲ್ಲಿ ಪ್ರವಹಿಸುತ್ತದೆ. ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟತಕ್ಕ ಮಕ್ಕಳು ಜನನಕ್ಕೆ ಪೂರ್ವವೇ ಅಥವಾ ಜನನವಾದ ಕ್ಷಣವೇ:—

(ಅ) ಗುರುಕರಜಾತರಾಗಿ ಗುರುಕರುಣೆಯನ್ನು ಪಡೆಯಬೇಕು.
(ಆ) ಭಕ್ತರಾಗಬೇಕು.

ಈ ರೀತಿ ಗುರುಕರಜಾತರಾಗಿ ಗುರುಕರುಣೆ ಪಡೆದು ಭಕ್ತರಾಗಬೇಕಾದರೆ ದೀಕ್ಷೆಯೊಂದೇ ಮಾರ್ಗ. ದೀಕ್ಷೆಯನ್ನು ಬಿಟ್ಟು ಬೇರೆ ಯಾವ ಮಾರ್ಗದಲ್ಲಿಯೂ ಚನ್ನಬಸವಣ್ಣನವರ ಕಟ್ಟಪ್ಪಣೆಯನ್ನು ಪಾಲಿಸುವುದಕ್ಕೆ ಬರುವುದಿಲ್ಲ. ಆದಕಾರಣ ಜನನಕ್ಕೆ ಮುಂಚೆ ಎಂದರೆ ಗರ್ಭದ ಎಂಟನೆಯ ತಿಂಗಳಲ್ಲಿ ಅಥವಾ ಜನನವಾದ ಕ್ಷಣವೇ ಶಿಶುಗಳಿಗೆ ಶಿವದೀಕ್ಷೆಯನ್ನು ಗುರುಕರುಣದಿಂದ ಕೊಡಿಸಿ ಅವರನ್ನು ಭಕ್ತರನ್ನಾಗಿ ಮಾಡುವುದೇ ಶರಣಮಾರ್ಗ. ಇದೇ ಶುದ್ಧ ಸಂಪ್ರದಾಯ. ಇದೇ ಷಟ್‌ಸ್ಥಲಾಚರಣೆ. ಇಂಥ ಶುದ್ಧ ಆಚರಣೆಯನ್ನು ಬಿಟ್ಟು ಅರ್ಧಂಬರ್ಧವಾಗಿ ಕೊಡಲೋ ಬಿಡಲೋ, ಭಕ್ತನೋ ಭವಿಯೋ ಎಂದು ಸಂಧಿಗ್ಧವಾಗಿ ಮಾಡುವ ಆಚರಣೆಗಳು ಸಂಪೂರ್ಣವಾಗಿ ತ್ಯಾಜ್ಯವೆನಿಸಿಕೊಳ್ಳುವುವು. ಇಂಥ ಅರ್ಧಂಬರ್ಧದ, ಸಂಧಿಗ್ಧದ ಆಚರಣೆಗಳನ್ನು ಶಿವಶರಣರು ಕಟುವಾಗಿ ವಿಡಂಬಿಸಿದ್ದಾರೆ. ಅವರ ಒಂದೆರಡು ವಚನಗಳನ್ನು ವಾಚಕರ ಅವಗಾಹನೆಗಾಗಿ ಉದ್ಧರಿಸಿ ಬರೆಯುತ್ತೇನೆ:—

"ಲಿಂಗಪ್ರಾಣಿಯ ಲಿಂಗವಂತನ ಉದರದಲ್ಲಿ ಒಂದು ಲಿಂಗಪಿಂಡ ನಿಂದು ಉದಿಸಿದೊಡೆ ಆಕ್ಷಣವೇ ಲಿಂಗಸ್ವಾಯತವ ಮಾಡಿ ಆ ಶಿಶುವ ತನ್ನ ಶಿಶುವೆಂದು ಮುಖವ ನೋಡುವುದು ಸದಾಚಾರವಲ್ಲದೆ ಬರಿಯ ವಿಭೂತಿಪಟ್ಟವ ಕಟ್ಟಿ ಗುರುಕಾರುಣ್ಯವಾಯಿತ್ತೆಂದು ಅನುಸರಣೆಯಲ್ಲಿ ಆಡಿಕೊಂಬುದು ಕ್ರಮವಲ್ಲ........."

ಮತ್ತು

"ಶಿವಭಕ್ತರ ಶಿಶುವು ಧರಣಿಯ ಮೇಲೆ ಬಿದ್ದಾಗಲೇ ಕೊರಳಲ್ಲಿ ಲಿಂಗಸ್ವಾಯತವ ಮಾಡಿ ಪಾದೋದಕದಿಂದ ಮಜ್ಜನವ ಮಾಡಿಸಿ ಪ್ರಸಾದದೆಣ್ಣೆ ಬೆಣ್ಣೆಯ ಹಾಲ ನೆರೆದು ಸಲುಹುವುದು ಸದಾಚಾರ............"

ಮತ್ತು

"ಖಂಡಿತ ವ್ರತದ ನಿರಂಗನ ವ್ರತವೆಂತುಟು ಎಂದರೆ ತನ್ನ ಸತಿಗೆ ಗರ್ಭತಲೆದೋರಿದಲ್ಲಿಯೇ ಮುಖವ ಕಾಂಬುವುದಕ್ಕೆ ಮುನ್ನವೇ ಲಿಂಗಧಾರಣವ ಮಾಡಿ, ನೋಡಿದ ಮತ್ತೆ, ಗಣಸಾಕ್ಷಿಯಾಗಿ ವಿಭೂತಿ ಪಟ್ಟವ ಕಟ್ಟಿ ಇಪ್ಪುದೇ ವ್ರತಶೀಲನೇಮ. ಹಾಗ

ಲ್ಲದೆ ದಿಂಡೆಯುತನದಲ್ಲಿ ಮಕ್ಕಳಿಗೆ ಸಂದೇಹದ ವ್ರತವ ಕಟ್ಟಬಹುದೇ?
ಬುದ್ಧಿಯಾದಂದಿಂಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು..."

ಇವೇ ಮೊದಲಾದ ವಚನಗಳಲ್ಲಿ ಶಿವಭಕ್ತರ ಶಿಶುಗಳ ದೀಕ್ಷೆಯ ವಿಚಾರವು ಯಾವ ಅನುಮಾನವೂ ಹುಟ್ಟದಂತೆ ಸ್ಪಷ್ಟಪಡಿಸಲ್ಪಟ್ಟಿದೆ- "ಬುದ್ಧಿಬಂದಂದಿಂಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು" ಎಂದು ಹೇಳುವ ರೆಮ್ಮವ್ವೆಯ ವಚನವಂತೂ ನಮ್ಮ ಈ ದೀಕ್ಷಾವಾದಕ್ಕೆ ನೇರ ವಾದ, ಸಮರ್ಪಕವಾದ ಮತ್ತು ಸ್ಪಷ್ಟವಾದ ಉತ್ತರವನ್ನು ಕೊಡತಕ್ಕು ದಾಗಿದೆ.

ಇನ್ನು ಶ್ರೀಗುರುಮೂರ್ತಿಗಳು ಭವಿಗಳ ಶಿವದೀಕ್ಷೆಯ ವಿಚಾರ ದಲ್ಲಿ ಚನ್ನಬಸವಣ್ಣನವರು ಹೇಳಿರತಕ್ಕ ೫೦ ಆಚಾರಗಳ ಪ್ರಸ್ತಾಪವನ್ನು ಎತ್ತಿಕೊಂಡು ಆ ಆಚರಣೆಗಳನ್ನು ಗರ್ಭದಿಂದೀಚೆಗೆ ಬಂದು ಸರ್ವಾಂಗ ಸೌಸ್ಥತೆಯನ್ನು ಪಡೆಯದೆ ಆಚರಿಸಲು ಸಾಧ್ಯವೇ ಎಂದು ಪ್ರಶ್ನಿ ಮಾಡಿದ್ದಾರೆ. ಚನ್ನಬಸವಣ್ಣನವರು ಹೇಳಿರುವ ಈ ಆಚಾರಗಳು ಬಹುಮಟ್ಟಿಗೆ ಭವಿಗಳಿಗಾಗಿ ಹೇಳಲ್ಪಟ್ಟವುಗಳಾಗಿವೆ. ಇವುಗಳನ್ನು ವಯಸ್ಕರಾದ ಶಿವಭಕ್ತರೂ ಸಹ ಅನುಸರಿಸಬಹುದಾಗಿದೆ. ಏಕೆಂದರೆ ಇವು ಸರ್ವಸಾಮಾನ್ಯವಾದ ಆಚರಣೆಗಳು. ಇವು ದೀಕ್ಷೆಗೆ ಮಾತ್ರವೇ ಸಂಬಂಧ ಪಟ್ಟವುಗಳಲ್ಲ. ಈ ಆಚರಣೆಗಳಲ್ಲಿ "ಹುಟ್ಟಿದ ಶಿಶುವಿಗೆ ಲಿಂಗಧಾರಣ ಮಾಡದೆ ತಾಯ ಮೊಲೆಹಾಲು ಜೇನುತುಪ್ಪ ಮುಟ್ಟಿಸದಿಹುದೇ ೨ನೆಯ ಆಚಾರ" ಎಂಬ ದೀಕ್ಷೆಗೆ ಸಂಬಂಧಪಟ್ಟ ಒಂದು ಆಚಾರವೂ ಸೇರಿದೆ. ಎಂದಮೇಲೆ ಇವುಗಳೆಲ್ಲಾ ಒಟ್ಟಿನಲ್ಲಿ ಹೇಳಿದ ಸರ್ವಸಾಮಾನ್ಯವಾದ ಆಚರಣೆಗಳು. ಒಂದುವೇಳೆ ಗುರುಮೂರ್ತಿಗಳು ಹೇಳುವಂತೆ ಈ ಆಚಾರಗಳು ದೀಕ್ಷೆಗೆ ಮಾತ್ರ ಸಂಬಂಧಪಟ್ಟ ಆಚಾರಗಳಾದರೆ ಇವುಗಳು ಎಂಟನೆಯ ವರ್ಷದ ಬಾಲಕನಿಗೆ ಅನ್ವಯಿಸುವುದೆಂತು? ಒಂದನೆಯ ಆಚಾರದಲ್ಲಿ ಪರರ ಹೆಣ್ಣಿನ ಮಾತಿದೆ. ಎಂಟು ವರ್ಷದ ಬಾಲಕನಿಗೆ ಪರರ ಹೆಣ್ಣಿನ ಮೇಲೆ ಕಣ್ಣು ಬೀಳುವ ಸಂಭವವಿದೆಯೆ? ೨ನೆಯ ಆಚಾರದಲ್ಲಿ ಹುಟ್ಟಿದ ಶಿಶುವಿಗೆ ಲಿಂಗಧಾರಣ ಮಾಡುವ ಮಾತಿದೆ. ಎಂಟನೆಯ ವರ್ಷದ ಬಾಲಕನು ತಂದೆಯಾಗಿ ಮಕ್ಕಳನ್ನು ಹಡೆಯುವ ಸಂಭವವಿದೆಯೆ? ಮುಂದೆ ಮತ್ತೊಂದು ವಚನದಲ್ಲಿ ೨ನೆಯ ಆಚಾರದಿಂದ ಧನವಂತನಾಗುವನು ಎಂದು ಬರೆದಿದೆ. ಇದನ್ನು ಶ್ರೀಗುರು

ಮೂರ್ತಿಗಳ ಅಭಿಪ್ರಾಯದಂತೆ ಎಂಟನೆಯ ವರ್ಷದ ಬಾಲಕನಿಗೆ ಅನ್ವಯಿಸಲು ಹೋದರೆ ಆ ಬಾಲಕನು ತನ್ನ ವಿದ್ಯಾಭ್ಯಾಸಕ್ಕೆ ತಿಲಾಂಜಲಿಯನ್ನಿತ್ತು ಧನವನ್ನು ಸಂಪಾದಿಸಲು ಪ್ರಾರಂಭಿಸಬೇಕಾಗುತ್ತದೆ. ಇನ್ನು ಶ್ರೀಗುರುಮೂರ್ತಿಗಳು "೭ನೆಯ ಆಚಾರದಿಂದ ವೀರಶೈವನಾಗುವನು" ಎಂಬ ವಾಕ್ಯಕ್ಕೆ ಏಳನೆಯ ಆಚಾರಕ್ಕೆ ವೀರಶೈವತ್ವವು ಘಟಿಸಬೇಕಾದರೆ ಹಿಂದಿನ ೬ ಆಚರಣೆಗಳು ಮುಗಿಯುವವರೆಗೂ ಮಗುವು ಶುದ್ಧ ಶೈವನಾಗಿರಬೇಕಾಗುವುದೆಂದು ಒಂದು ಭಾಷ್ಯವನ್ನು ಬರೆದಿದ್ದಾರೆ. ಮಗುವು ಹಿಂದಿನ ೬ ಆಚರಣೆಗಳನ್ನು ಆಚರಿಸುವುದು ಹೇಗೆಂಬುದನ್ನು ಗುರುಮೂರ್ತಿಗಳು ದಯಮಾಡಿ ತೋರಿಸಿಕೊಡುವರೇ? ಮಗುವಿನ ಮಾತು ಹೋಗಲಿ ಎಂಟು ವರ್ಷದ ಬಾಲಕನಾದರೂ ದೀಕ್ಷೆಯನ್ನು ಪಡೆಯುವುದಕ್ಕೆ ಮುಂಚೆ ಶೀಲವಂತನಾಗುವುದೆಂತು? ಧನವಂತನಾಗುವುದೆಂತು? ಕೀರ್ತಿವಂತನಾಗುವುದೆಂತು? ಸತ್ಪುರುಷನಾಗುವುದೆಂತು? ಶ್ರೀಗುರುಮೂರ್ತಿಗಳು ಈ ಪ್ರಶ್ನೆಗಳಿಗೆ ಉತ್ತರ ಕೊಡುವರೆ? ಒಂದು ವೇಳೆ ದೀಕ್ಷಾಪೇಕ್ಷೆಯು ಇಷ್ಟೆಲ್ಲಾ ಆಗಿರಲೇಬೇಕಾದರೆ ಅವನು ಕನಿಷ್ಟ ಪಕ್ಷ ೨೦—೨೫ ವರ್ಷಗಳ ಪ್ರಾಯಸಮರ್ಥನಾಗಿರಬೇಕಾಗುತ್ತದೆ. ಎಂದಮೇಲೆ ಎಂಟನೆಯ ವರ್ಷದ ದೀಕ್ಷೆಯು ಸೊಂಟವನ್ನು ಮುರಿದಂತಾಗುವುದಿಲ್ಲವೇ?

## ಜ್ಞಾನಾವಸ್ಥೆಯ ದೀಕ್ಷೆ ಮತ್ತು ಅಜ್ಞಾನಾವಸ್ಥೆಯ ದೀಕ್ಷೆ.

ಇನ್ನು ಶ್ರೀಗುರುಮೂರ್ತಿಗಳು ಅಜ್ಞಾನಾವಸ್ಥೆಯ ದೀಕ್ಷೆಯು ಸಲ್ಲದು ಎಂದು ಹೇಳಿರುತ್ತಾರೆ. ಇದು ನ್ಯಾಯವೇ. ಇದಕ್ಕೆ ಅಭ್ಯಂತರ ಮಾಡಿದವರಾರು? ಅಲ್ಲದೆ ಶಿವಶರಣರೇ ಅಜ್ಞಾನಾವಸ್ಥೆಯ ದೀಕ್ಷೆ ಸಲ್ಲದೆಂದು ತಮ್ಮ ವಚನಗಳಲ್ಲಿ ಖಂಡಿಸಿದ್ದಾರೆ. ಆದರೆ ಅಜ್ಞಾನಾವಸ್ಥೆಯ ಕಾಲವೆಂದರೆ ಏನು ಯಾವಾಗ ಮತ್ತು ಜ್ಞಾನಾವಸ್ಥೆಯ ಕಾಲವೆಂದರೆ ಏನು ಯಾವಾಗ ಎಂಬುದನ್ನು ನಾವು ಅರ್ಥಮಾಡಿಕೊಳ್ಳದಿದ್ದರೆ ದೀಕ್ಷಾ ವಿಚಾರವನ್ನು ಬಗೆಹರಿಸುವುದಕ್ಕಾಗುವುದಿಲ್ಲ. ಜ್ಞಾನಾವಸ್ಥೆಯು ಮಾನವನಿಗೆ ೨ ಸಂದರ್ಭಗಳಲ್ಲಿ ಉಂಟಾಗುವುದೆಂದು ಶಿವಶರಣರೂ ಅನುಭಾವಿಗಳೂ, ಶಾಸ್ತ್ರಜ್ಞರೂ ನಿರ್ಣಯಿಸಿದ್ದಾರೆ. ಗರ್ಭದಲ್ಲಿ ಶಿಶುವು ಬೆಳೆದು ಎಂಟನೆಯ ತಿಂಗಳನ್ನು ಮುಟ್ಟಿದಾಗ ಒದಗುವ ಕಾಲ ಒಂದು. ಭವಿತನದಲ್ಲಿ ಬೆಳೆದು ಪ್ರಪಂಚದ ಕಷ್ಟ ಸುಖಗಳನ್ನು ಅನುಭವಿಸಿ ಸಂಸಾ

ರದಲ್ಲಿ ಹೇಯ ಹುಟ್ಟಿದಾಗ ಒದಗುವ ಕಾಲ ಮತ್ತೊಂದು. ಆದರೆ ಈ ಎರಡು ಕಾಲಗಳಲ್ಲಿ ಎರಡನೆಯ ಕಾಲವು ಮೊದಲನೆಯ ಕಾಲದಂತೆ ನಿರ್ದಿಷ್ಟವಾದ ಕಾಲವಲ್ಲ. ಈ ಎರಡನೆಯ ಕಾಲವು ಯಾವಾಗ ಪ್ರಾಪ್ತವಾಗುತ್ತದೆಂಬುದನ್ನು ಯಾರೂ ಹೇಳುವುದಕ್ಕಾಗುವುದಿಲ್ಲ. ಕೆಲವರಿಗೆ ಚಿಕ್ಕ ವಯಸ್ಸಿನಲ್ಲಿಯೇ ಪ್ರಾಪ್ತವಾಗಬಹುದು. ಮತ್ತೆ ಕೆಲವರಿಗೆ ಯೌವನದಲ್ಲಿ ಪ್ರಾಪ್ತವಾಗಬಹುದು. ಮತ್ತೆ ಕೆಲವರಿಗೆ ವೃದ್ಧಾಪ್ಯದಲ್ಲಿ ಪ್ರಾಪ್ತವಾಗಬಹುದು. ಮತ್ತೆ ಕೆಲವರಿಗಾದರೂ ಅದು ಪ್ರಾಪ್ತವಾಗದೆಯೇ ಹೋಗಬಹುದು. ಈ ರೀತಿಯಲ್ಲಿ ಜ್ಞಾನೋದಯದ ಎರಡನೆಯ ಕಾಲವು ಎಂದರೆ ಭವಿಗಳ ಜ್ಞಾನೋದಯ ಕಾಲವು ನಿರ್ದಿಷ್ಟವಾದ ಕಾಲವಾಗುವುದಿಲ್ಲ. ಆದುದರಿಂದಲೇ ಭವಿಗಳ ಜ್ಞಾನೋದಯದ ಪರಿಪೂರ್ಣತೆಯನ್ನು ಕಂಡುಹಿಡಿಯಲು ಶಿವಶರಣರು ಹಲವು ಕಟ್ಟುಪಾಡುಗಳನ್ನು ಮಾಡಿದ್ದಾರೆ. ಆದಕ್ಕಾಗಿಯೇ ಅವರು ಮೇಲೆ ಹೇಳಿದ ೫೦ ಆಚಾರಗಳನ್ನೂ ಮತ್ತು ಇನ್ನೂ ಕೆಲವು ವಿಶೇಷ ಆಚರಣೆಗಳನ್ನೂ ನಿರ್ಮಿಸಿದ್ದಾರೆ. ಅಲ್ಲದೆ ಶಿವಶರಣರು ಭವಿಗಳ ಜ್ಞಾನೋದಯದ ಕಾಲವನ್ನು ನಿರ್ಣಯಿಸಲು ಕೆಲವು ಕಾಲಾವಧಿಗಳನ್ನೂ ಸಹ ನಿಯಮಿಸಿದ್ದಾರೆ. ಬ್ರಾಹ್ಮಣನಿಗೆ ಮೂರುವರ್ಷಗಳಂತೆಯೂ, ಕ್ಷತ್ರಿಯನಿಗೆ ಆರುವರ್ಷಗಳಂತೆಯೂ ವೈಶ್ಯರಿಗೆ ಒಂಭತ್ತುವರ್ಷಗಳಂತೆಯೂ, ಶೂದ್ರರಿಗೆ ಹನ್ನೆರಡು ವರ್ಷಗಳಂತೆಯೂ, ಕಾಲಾವಧಿಗಳನ್ನು ಗೊತ್ತುಪಡಿಸಿದ್ದಾರೆ. ಆದರೆ ಶಿವಭಕ್ತರ ಹೊಟ್ಟೆಯಲ್ಲಿ ಹುಟ್ಟಿದ ಶಿಶುಗಳ ವಿಚಾರದಲ್ಲಿ ಇಂತಹ ಯಾವ ಕಾಲಾವಧಿಯನ್ನೂ ಶಿವಶರಣರು ಗೊತ್ತುಮಾಡಿಲ್ಲ. ಶಿಶುಗಳಿಗೆ ಗರ್ಭದ ಎಂಟನೆಯ ತಿಂಗಳಲ್ಲಿ ನಿರ್ದಿಷ್ಟವಾಗಿಯೂ ಮತ್ತು ಅನಾಯಾಸವಾಗಿಯೂ ಜ್ಞಾನೋದಯವಾಗುವುದೇ ಇದಕ್ಕೆ ಕಾರಣ. ಶ್ರೀ ಗುರುಮೂರ್ತಿಗಳು ಉದಹರಿಸಿರುವ ಅಂಬಿಗರ ಚೌಡಯ್ಯನ, ಚನ್ನಬಸವಣ್ಣನ, ಸಂಗನಬಸವೇಶ್ವರನ ಮತ್ತು ಅಖಂಡೇಶ್ವರನ ವಚನಗಳೆಲ್ಲವೂ ಭವಿಗಳ ದೀಕ್ಷೆಗೆ ಸಂಬಂಧಪಟ್ಟವುಗಳೇ ವಿನಹ ಶಿವಭಕ್ತರ ಶಿಶುಗಳ ದೀಕ್ಷೆಗೆ ಸಂಬಂಧಪಟ್ಟವುಗಳಲ್ಲ. ಶಿವಭಕ್ತರ ಶಿಶುಗಳ ದೀಕ್ಷೆಗೆ ಸಂಬಂಧಪಟ್ಟ ವಚನಗಳು ಬೇರೆ ಇವೆ. ಅವುಗಳಲ್ಲಿ ಕೆಲವನ್ನು ಮೇಲೆ ಉದ್ಧರಿಸಿರುತ್ತೇನೆ.

ನಾನು ವಾಚಕರಲ್ಲಿ ಬಿನ್ನೈಸಿಕೊಳ್ಳುವುದಿಷ್ಟೆ ಮುಖ್ಯವಾಗಿ ಶ್ರೀ ಚನ್ನಬಸವಣ್ಣನವರು ಶಿಶುಗಳ ದೀಕ್ಷೆಯ ವಿಚಾರದಲ್ಲಿ ಕೊಟ್ಟಿರತಕ್ಕ ಮೇಲೆ ಕಂಡ ಎರಡು ಎಚ್ಚರಿಕೆಗಳನ್ನು ಎಲ್ಲರೂ ಎಚ್ಚತ್ತು ಆಚರಿಸಿದಲ್ಲಿ ಸಮಾಜಕ್ಕೆ ಹೆಚ್ಚಿನ ಹಿತವಾಗುತ್ತದೆ.

[ಮುಂದುವರಿಯುವುದು.]

---

## ಸ್ಫುಟ ವಿಷಯಗಳು.

**ಶಿವಾನುಭವ ಪತ್ರಿಕೆಯಲ್ಲಿಯ ವಾದ ವಿಷಯಗಳು:** - ಹೋದ ೨-೩ ವರ್ಷಗಳಿಂದ ಶಿವಾನುಭವ ಪತ್ರಿಕೆಯಲ್ಲಿ ಕೆಲವು ವಾದ ವಿಷಯಗಳು ಚರ್ಚಿಸಲ್ಪಡುತ್ತಿದ್ದದ್ದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಇದರಲ್ಲಿ ಸತ್ಯಾನ್ವೇಷಣವೇ ನಮ್ಮ ಮುಖ್ಯೋದ್ದೇಶವಾಗಿದೆ. ವೀರಶೈವ ಸಮಾಜದಲ್ಲಿ ಕೆಲವು ಮಹತ್ವದ ವಿಷಯಗಳ ಬಗ್ಗೆ ಮತಭೇದಗಳಿದ್ದು ಅವುಗಳನ್ನು ನಿರ್ಧರಿಸುವದು ಅವಶ್ಯವಿದೆ. ಗುರು ಲಿಂಗ ಜಂಗಮಗಳು, ಪಾದೋದಕ ಪ್ರಸಾದಗಳು, ದೀಕ್ಷೆ ಮತ್ತು ಲಿಂಗಧಾರಣಗಳು, ೫೧ ದೀಕ್ಷೆಗಳ ಪ್ರಯೋಜನ, ದೀಕ್ಷೆಗಳ ಸ್ಥಾನ, ಸಾಮಾನ್ಯ, ವಿಶೇಷ, ನಿರಾಭಾರಿ ಎಂಬ ಭೇದಗಳು ಇದ್ದವೋ ಹೇಗೆ, ಇದ್ದರೆ ಅವು ಎಂದಿನಿಂದ, ವೀರಶೈವರಲ್ಲಿ ದಶಕರ್ಮಗಳಿವೆಯೋ ಹೇಗೆ, ಅವರಲ್ಲಿ ಕರ್ಮಗಳಿದ್ದರೆ ಅವು ಯಾವವು, ವೀರಶೈವರಲ್ಲಿ ಪ್ರಚಲಿತವಿರುವ ಧಾರ್ಮಿಕ ವಿಧಿಗಳಲ್ಲಿ ಸರಿಯಾದವುಗಳು ಅವವು, ಈ ಎಲ್ಲ ವಿಷಯಗಳ ಬಗ್ಗೆ ಭಿನ್ನ ಭಿನ್ನ ಮತಗಳಿವೆ. ವೀರಶೈವ ಸಮಾಜದವರು ಅವುಗಳನ್ನು ಚರ್ಚಿಸಿ ಸರಿಯಾದವುಗಳಾವವೆಂಬದನ್ನು ನಿರ್ಧರಿಸುವದು ಬಹಳ ಅಗತ್ಯವಿದೆ. ಆದ್ದರಿಂದ ಈ ವಿಷಯಗಳನ್ನು ಅಭ್ಯಾಸಿಸಿ ಬರೆದ ಲೇಖಗಳಿಗೆಲ್ಲ ನಾವು ಶಿವಾನುಭವ ಪತ್ರಿಕೆಯಲ್ಲಿ ಸ್ಥಾನವನ್ನು ಕೊಟ್ಟಿದ್ದೇವೆ. ಇದರಿಂದ ಕೆಲವು ದಿವಸಗಳಲ್ಲಿಯೇ ಈ ಭಿನ್ನ ಮತಗಳಲ್ಲಿ ಸರಿಯಾದವುಗಳಾವವೆಂಬುದನ್ನು ನಿರ್ಧರಿಸಲು ಬಹಳ ಅನುಕೂಲವಾಗುವದು.

## ವೀರಶೈವ ಸಮಾಜದ ಇತಿಹಾಸ ಮತ್ತು ಶಿವಶರಣರ ಚರಿತ್ರೆಗಳು.

ಈ ವಿಷಯದ ಚರ್ಚೆಯನ್ನು ನಾವು ಕೈಕೊಂಡಿದ್ದು ವಾಚಕರ ಲಕ್ಷಕ್ಕೆ ಬಂದಿರಬಹುದು. ಇದಾದರೂ ಬಹು ವಾದಗ್ರಸ್ತವಿಷಯವಾಗಿರುತ್ತದೆ. ಈ ಬಗ್ಗೆ ನಮ್ಮ ಅಭಿಪ್ರಾಯಗಳನ್ನು ಈ ಪತ್ರಿಕೆಯಲ್ಲಿ ವಿವರಿಸುತ್ತ ಬಂದಿದ್ದೇವೆ. ನಮ್ಮ ವಿಧಾನಗಳಲ್ಲಿ ದೋಷಗಳಿರಬಹುದು. ಅವು ವಾಚಕರಿಗೆ ತೋರಿದಲ್ಲಿ ಅವರು ಅವುಗಳನ್ನು ಅವಶ್ಯವಾಗಿ ಮುಂದಿಡಬೇಕೆಂದು ನಮ್ಮ ವಿನಂತಿ ಇದೆ. ವೀರಶೈವ ನಿಜೇತಿಹಾಸವು ಪ್ರಕಟವಾದಲ್ಲಿ ಅದರಿಂದ ಸಮಾಜದ ಯೋಗ್ಯತೆಯು ಬೆಳೆಯದೆ ಇರಲಾರದು.

## ಶಿವಾನುಭವ ಪತ್ರಿಕೆಗೆ ಸಹಾಯ.

ಶಿವಾನುಭವ ಪತ್ರಿಕೆಯು ಮಾಡಿದ ಮತ್ತು ಮಾಡುತ್ತಿರುವ ಕಾರ್ಯಗಳನ್ನು ಅನೇಕರು ಶ್ಲಾಘಿಸುತ್ತಿದ್ದರೂ ಜನ ಸಹಾಯವು ಮಾತ್ರ ಅದಕ್ಕೆ ಅತ್ಯಲ್ಪವಾಗಿದೆಂದು ಹೇಳಲು ನಾವು ಬಹಳ ವಿಷಾದಪಡುತ್ತೇವೆ. ಪಟ್ಟಣಗಳಲ್ಲಿರುವ ಶ್ರೀಮಂತ ವ್ಯಾಪಾರಸ್ತರೂ ವಿದ್ಯಾವಂತರೂ ಮಠಾಧಿಕಾರಿಗಳೂ ನಮಗೆ ಎಷ್ಟು ಮಾತ್ರವೂ ಯಾವಾಗಲೂ ಸಹಾಯವನ್ನು ಮಾಡಿಲ್ಲ. ಇವರಲ್ಲಿ ಕೆಲವರು ಮಾತ್ರ ಅಪವಾದಾತ್ಮಕನಾಗಿದ್ದಾರೆ. ಇವರ ಮತ್ತು ಅಲ್ಲಲ್ಲಿಯ ಗ್ರಾಮಗಳಲ್ಲಿ ಶಿವಾನುಭವ ಪ್ರೇಮಿಗಳಿದ್ದು ಅಂಥವರ ಸಹಾಯದಿಂದ ಈ ಪತ್ರಿಕೆಯು ಹೇಗಾದರೂ ಬದುಕಿಕೊಂಡಿದೆ. ಇಂಥವರ ಸಂಖ್ಯೆಯು ಸುಮಾರು ೨೦೦ ಜನರು ಇರಬಹುದು. ಹೀಗೆ ನಮಗೆ ಸಹಾಯ ಮಾಡಿದ ಈ ಎಲ್ಲ ಮಹಾನುಭಾವರಿಗೆ ನಾವು ಅತ್ಯಂತ ಋಣಿಯಾಗಿದ್ದೇವೆ. ಆದರೆ ಈಚೆಗೆ ಪ್ರಿಂಟಿಂಗಿನ ಖರ್ಚು ಮಿತಿಮೀರಿ ಹೆಚ್ಚಾದ್ದರಿಂದ ವೀರಶೈವ ಮಹಾಜನರಿಂದ ಈ ಪತ್ರಿಕೆಗೆ ಸಹಾಯವು ಅತ್ಯವಶ್ಯವಾಗಿ ಬೇಕಾಗಿದೆ. ಅವರು ೩ ರೂ. ೬ ಆಣೆ ನಮಗೆ ಕಳಿಸಿ ವರ್ಗಣೀದಾರರಾಗಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ. ಗದಗಿನಲ್ಲಿ ಮೊದಲು ನಾಲ್ಕು ಜನ ಮಾತ್ರ ವರ್ಗಣೀದಾರರಿದ್ದರು. ಆದರೆ ಅಲ್ಲಿಯ ಪ್ರಮುಖರಿಗೆ ನಾವು ವಿನಂತಿ ಮಾಡಿಕೊಳ್ಳಲಾಗಿ ಅವರು ಬಹು ಶ್ರಮ ವಹಿಸಿ ೨೦ ಜನ ವರ್ಗಣಿದಾರರನ್ನು ಹೆಚ್ಚಿಗೆ ಮಾಡಿಕೊ

ಟ್ಟಿರು. ಹೀಗೆ ಶ್ರಮಪಟ್ಟವರ ಹೆಸರುಗಳನ್ನು ಪತ್ರಿಕೆಯಲ್ಲಿ ನಾವು ಪ್ರಸಿದ್ಧಿಸುವೆವೆಂದು ಅವರಿಗೆ ತಿಳಿಸಲಾಗಿ ಅವರು ಹಾಗೆ ಪ್ರಕಟಿಸಬೇಡವೆಂದು ನಮಗೆ ತಿಳಿಸಿದರು. ಅವರ ಈ ವರ್ತನೆಯು ನಿಜವಾಗಿ ಉಜ್ವಲವೂ ಅನುಕರಣೀಯವೂ ಇದೆ. ಇವರಂತೆಯೇ ಉಳಿದ ಮುಖ್ಯ ಪಟ್ಟಣಗಳಲ್ಲಿರುವವರು ಈ ಪತ್ರಿಕೆಗೆ ಸಹಾಯಮಾಡಬೇಕೆಂದು ಅವರಿಗೆ ನಮ್ಮ ಸವಿನಯ ವಿನಂತಿ ಇದೆ.

ಮುಖ್ಯ ಪಟ್ಟಣಗಳಲ್ಲಿರುವ ಚಂದಾದಾರರ ಸಂಖ್ಯೆಯನ್ನು ನಾವು ಕೆಳಗೆ ಕಾಣಿಸಿದ್ದೇವೆ. ಅದರ ಮೇಲಿಂದ ಈ ಸ್ಥಳಗಳಲ್ಲಿ ಚಂದಾದಾರರ ಸಂಖ್ಯೆಯು ಎಷ್ಟು ಅತ್ಯಲ್ಪವಾಗಿದೆಂಬದು ತಿಳಿದುಬರುತ್ತದೆ.

ಪಟ್ಟಣಗಳಲ್ಲಿಯ ಚಂದಾದಾರರ ಸಂಖ್ಯೆಯು ಕೆಳಗೆ ಕಾಣಿಸಿದಂತೆ ಇವೆ. ಹುಬ್ಬಳ್ಳಿ ೧೦, ಹಾವೇರಿ ೪, ಬ್ಯಾಡಿಗಿ ೨, ಧಾರವಾಡ ೧೩, ಗದಗ ೨೪, ರಾಣೇಬೆನ್ನೂರ ೩, ಬೆಳಗಾವಿ ೩, ಬೈಲಹೊಂಗಲ ೧, ಸವದತ್ತಿ ೧, ಗೋಕಾಕ ೪, ಅಥಣಿ ೨, ಚಿಕ್ಕೋಡಿ ೧, ನಿಪ್ಪಾಣಿ ೦, ಹುಕ್ಕೇರಿ ೦, ನರಗುಂದ ೧, ನವಲಗುಂದ ೧, ಶಿರ್ಶಿ ೧, ಸಿದ್ದಾಪುರ ೦ ಬಳ್ಳಾರಿ ೧, ಹೊಸಪೇಟೆ ೧, ಹರಪನಹಳ್ಳಿ ೦, ಕೊಟ್ಟೂರು ೦, ಆದವಾನಿ ೧, ಬೆಂಗಳೂರು ೧೭, ತುಮಕೂರು ೨, ತಿಪಟೂರ ೧, ಶಿವಮೊಗ್ಗಾ ೧, ದಾವಣಗೆರೆ ೩, ಮೈಸೂರು ೯, ಅರಸಿಕೆರೆ ೦, ಶಿಕಾರಿಪುರ ೧, ನ್ಯಾಮತಿ ೧, ರಾಯಚೂರು ೧, ಯಾದಗಿರಿ ೦, ಕಲಬುರ್ಗಿ ೧, ಬೀದರ ೦, ಸೊಲ್ಲಾಪುರ ೩, ಬಾಗಲಕೋಟೆ ೧೭, ಗುಳೇದಗುಡ್ಡ ೪, ಇಳಕಲ್ಲ ೨, ರಬಕವಿ ೧, ಬನಹಟ್ಟಿ ೦, ಜಮಖಂಡಿ ೦.

ಮೇಲಿನ ಪಟ್ಟಣಗಳು ವೀರಶೈವರ ಕೇಂದ್ರಸ್ಥಾನಗಳೆಂದೆಣಿಸಿಕೊಳ್ಳಲ್ಪಡುತ್ತಿವೆ. ಆದರೆ ಅಲ್ಲಿಯ ನಮ್ಮ ವರ್ಗಣೀದಾರರ ಸಂಖ್ಯೆಯನ್ನು ನೋಡಿದಲ್ಲಿ ನಾವು ಮೇಲೆ ಹೇಳಿದ ಸಂಗತಿಯ ನಿಜತ್ವವು ವಾಚಕರಿಗೆ ಗೋಚರವಾಗದೆ ಇರದು. ಆದ್ದರಿಂದ ಅಲ್ಲಿಯ ಮಹನೀಯರು ತಮ್ಮಲ್ಲಿ ಪ್ರಯತ್ನಮಾಡಿ ಚಂದಾದಾರರ ಸಂಖ್ಯೆಯನ್ನು ಹೆಚ್ಚಿಸಿದಲ್ಲಿ ಅವರಿಗೆ ನಾವು ಬಹಳ ಉಪಕೃತರಾಗುವೆವು.

---

ಯುರೂ ಆಗಿಹೋಗಿದ್ದಾರೆ. ಅವರಲ್ಲನೇಕರು ಕೇವಲ ಜನತೆಯಲ್ಲಷ್ಟೇ ಅಲ್ಲ, ಅರಸರಲ್ಲಿಯೂ ಕೂಡ ಪ್ರಸಿದ್ಧರಾಗಿದ್ದಾರೆ. ಅಂಥವರಲ್ಲಿ ಕನ್ನಾದೇವಿ ಒಬ್ಬಳಿದ್ದಾಳೆ. ಈಕೆಯು ಗುತ್ತರಸರ ಕಾಲದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರ ವಿಷಯವಾಗಿ ಚೌಡದಾನಪುರ ಶಿಲಾಶಾಸನಗಳಲ್ಲಿ ಉಲ್ಲೇಖಗಳು ಉಪಲಬ್ಧವಿವೆ. ಇವಳು ಪೂರ್ಣ ವೀರಶೈವಳು. ಆಕೆಯ ಗಂಡನ ಹೆಸರು ಕಲಿದೇವರಸನು. ಅವನು ಒಂದು ರಾಜಮನೆತನಕ್ಕೆ ಸೇರಿದವನಾಗಿದ್ದು ಅವನು ತೀರಿಕೊಂಡ ಬಳಿಕ ಕನ್ನಾದೇವಿಯಲ್ಲಿ ವಿರತಿಯು ಹುಟ್ಟಿ ಮುಕ್ತೇಶ್ವರ ಕ್ಷೇತ್ರದಲ್ಲಿದ್ದ ಶಿವದೇವನಲ್ಲಿಗೆ ಬಂದು ವೀರಶೈವ ಧರ್ಮಾಸಕ್ತಳಾಗಿ ಲಿಂಗಜಂಗಮಾರ್ಚನೆಯನ್ನು ಮಾಡುತ್ತ ವಾಸಮಾಡಹತ್ತಿದಳು. ಅವಳು ಅಲ್ಲಿ ಕಲ್ಲಿದೇವರ ದೇವಸ್ಥಾನವನ್ನು ಕಟ್ಟಿಸಲಾಗಿ ಅದಕ್ಕೆ ಗುತ್ತರಸನು ೧೨೬೨ ರಲ್ಲಿ ಒಂದು ಉಂಬಳಿಯನ್ನು ಹಾಕಿಕೊಟ್ಟನು. ಕನ್ನಾದೇವಿಗೆ ವಿರತಿಯುತ್ಪನ್ನವಾದದ್ದು 'ಪರಮಗುರು ಸಿದ್ಧರೇವಣನಿಂದ' ಎಂದು ತಿಳಿದುಬರುತ್ತದೆ. ಈ ರೇವಣನಾರೆಂಬುದು ನಮಗೆ ತಿಳಿದುಬಂದಿಲ್ಲ. ಆದರೆ ಅವನು 'ಸಿರಿಗಿರಿ' ಎಂದರೆ ಶ್ರೀಶೈಲದಲ್ಲಿ ಇರುತ್ತಿದ್ದದ್ದರ ಉಲ್ಲೇಖವು ಇದೇ ಶಿಲಾಶಾಸನದಲ್ಲಿದೆ. ಇವನ ಆಜ್ಞೆಯಿಂದ ಚೌಡದಾನಪುರ ಗ್ರಾಮದಲ್ಲಿದ್ದ ಶಿವದೇವನಲ್ಲಿಗೆ ಕನ್ನಾದೇವಿಯು ಬಂದು ವಾಸಮಾಡಹತ್ತಿದಳು. ಶಿಲಾಶಾಸನದಲ್ಲಿ ಹೇಳಲ್ಪಟ್ಟಿರುವದೇನಂದರೆಃ— †

ಕರ್ಮಾತಿಶಯದಿ ನಿಜಪತಿ। ಧರ್ಮಧ್ವಜ ದೇವಲೋಕವನೆ ತಾನೈದಲ್॥ ಧರ್ಮಜ್ಞದೇವಿ ಕೌಂಸರೆ। ಕರ್ಮರಿಯಂ ಪರಿಯಲುಜ್ಜುಗಂಗೈವನ್ನಂ॥ ಪರಮಗುರು ಸಿದ್ಧರೇವಣನ ಸಿರಿಗಿರಿಯ ನಿವಾಸನಾಜ್ಞೆಯಿಂಬೆಸಸಿದನ। ಚ್ಚರಿಯ ಮನೆಯಪ್ಪ ಮುಕ್ತೇಶ್ವರ ಲಿಂಗದೊಳಲ್ಲಿ ತುಂಗಭದ್ರೆಯ ತಡೆಯೊಳ್॥

ತನ್ನ ಗಂಡನು ದೇವಲೋಕಕ್ಕೆ ಹೋಗಲು ರೇವಣನಾಜ್ಞೆಯಿಂದ ಮುಕ್ತೇಶ್ವರ ಲಿಂಗದ ದೇವಾಲಯಕ್ಕೆ ಬಂದದ್ದು ಇದರಲ್ಲಿ ಹೇಳಲ್ಪಟ್ಟಿದೆ.

ಕೆಳಗಿನ ಶ್ಲೋಕದಲ್ಲಿ ಈಕೆಯು ಕನ್ನಾದೇವಿಯೆಂದೂ ಕಲ್ಲರಸನರಸಿಯೆಂದೂ ಹೇಳಲ್ಪಟ್ಟಿದೆ.

---

† ಶಿವಾನುಭವ ೪-೩-೧೯೦

ಒದವಿದ ಶಿವಭಕ್ತಿಯುಸಂ। ಪದವುಂ ಕಲ್ಲರಸನರಸಿ ಕನ್ನಾದೇವಿಗೆ। ಮುದದಿಂದಲಿತ್ತಬಲ್ಲಾ। ಳ ದೇವಂ ಜಂಗಮ ಮುಖ್ಯೈಕ ಗುಣಸದ್ಭಾವಂ। ಆ ಸತಿ ಕನ್ನಾದೇವಿಯು। ಶ್ರೀಸುಖಸಂಪದವಿಳಾಸ ವಿಭವಾದಿಗಳಂ। ಬಾಸಣಿಸದೆ ಶಿವಗಣಂಗಳ। ಗೋಸರಿಸದೆ ಮಾಡಿ ನೋಡಿ ಸುಖಿಸು ತ್ತಿರ್ಪಳ್॥ ‡

ವೀರಶೈವ ಧರ್ಮವು ಈ ಪ್ರಕಾರ ಕೇವಲ ಜನತೆಯ ಮೇಲಷ್ಟೇ ಅಲ್ಲ, ರಾಜರ ಮೇಲೆಯೂ, ಅವರ ಮನೆತನದಲ್ಲಿಯ ಸ್ತ್ರೀಯರ ಮೇಲೆಯೂ ಪರಿಣಾಮ ಮಾಡಿದ್ದರ ಉಲ್ಲೇಖಗಳು ನಮಗೆ ಆಗಿಂದಾಗ್ಗೆ ದೊರೆಯು ತ್ತವೆ. ಮೋಳಿಗೆಯ ಮಾರಯ್ಯ, ವಚನಕಾರನಾದ ಸಕಲೇಶಮಾದರಸ, ಉಡುತಡಿಯ ಮಹಾದೇವಿ ಇವರೆಲ್ಲರೂ ಈ ವರ್ಗದಲ್ಲಿ ಬರುತ್ತಾರೆ. ಹಾಗೆಯೇ ಕನ್ನಾದೇವಿಯು ರಾಜಮನೆತನದವಳಿದ್ದರೂ ಕೂಡ ರಾಜ್ಯ ಭೋಗವನ್ನು ತೊರೆದು ಒಬ್ಬ ಸಾಮಾನ್ಯ ಸ್ತ್ರೀಯಳಂತೆ ಶಿವದೇವನ ಲ್ಲಿಗೆ ಬಂದು ವಾಸಮಾಡಿದ್ದಾಳೆ. ಅವಳು ರಾಜಮನೆತನಕ್ಕೆ ಸಂಬಂಧಿ ಸಿದವಳಾಗಿ ವೈಭವಸಂಪನ್ನಳಾದ್ದರಿಂದ ಅಲ್ಲಿ ಅವಳು ಒಂದು ದೇವಾಲಯ ವನ್ನು ಕಟ್ಟಿಸಿದಳು. ಅದಕ್ಕೆ ಆ ನಾಡಿನ ಅಧಿಪತಿಯಾದ ಗುತ್ತರಸನು ೧೨೬೨ ರಲ್ಲಿ ಒಂದು ಉಂಬಳಿಯನ್ನು ಹಾಕಿಕೊಟ್ಟು ಅವಳನ್ನು ಬಹಳ ಮನ್ನಿಸಿದ್ದಾನೆ.

ಈ ಪ್ರಕಾರ ಪುರಾತನ ರಾಜವಂಶಗಳಲ್ಲಿ ಗುತ್ತರಸರು ವೀರಶೈವ ಧರ್ಮವನ್ನು ಸ್ವೀಕರಿಸಿ ಶಿವಶರಣರನ್ನು ಪ್ರೋಷಿಸುವವರಾಗಿದ್ದರೆಂದು ಕಂಡುಬರುತ್ತದೆ.

---

‡ ಶಿವಾನುಭವ ೪–೩–೧೬೦

## ೩ ನೇ ಪ್ರಕರಣ.

# ದೇವಗಿರಿ ಯಾದವರು.

ದೇವಗಿರಿಯ ಯಾದವರು ಕಲಚೂರ್ಯರು ಮತ್ತು ಚಾಲುಕ್ಯ ರಾಜರು ಕರ್ನಾಟಕದಲ್ಲಿ ಆಳಿದ ಬಳಿಕ ಇಲ್ಲಿ ರಾಜ್ಯಭಾರ ಮಾಡಹತ್ತಿದರು. ಅವರ ವಂಶಾವಳಿಯು ಕೆಳಗೆ ಕಾಣಿಸಿದಂತೆ ಇದೆ:—




### ಯಾದವರಾಜರ ಸೇನಾಪತಿಗಳು.

ಯಾದವರಾಜನಾದ ಭಿಲ್ಲಮನು ೧೧೮೭ರಿಂದ ೧೧೯೧ರ ವರೆಗೆ ರಾಜ್ಯವಾಳಿದನು. ಅವನು ಚಾಲುಕ್ಯ ರಾಜ್ಯದ ಉತ್ತರ ಮತ್ತು ಪೂರ್ವದ ಭಾಗಗಳನ್ನೆಲ್ಲ ಕೈವಶಮಾಡಿಕೊಂಡನು. ಆದರೆ ಉಳಿದ ಭಾಗಗಳನ್ನು ಆಳುತ್ತಿದ್ದ ರಟ್ಟರು, ಶಿಲಾಹಾರರು, ಕದಂಬರು, ಗುತ್ತರಸರು, ಈ ಪ್ರಾಂತಾಧಿಪತಿಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವದು ಅವನಿಂದಾಗಲಿಲ್ಲ. ಈ ಕಾರ್ಯವನ್ನು ಮಾಡಿದವನು ೧೨೧೦ರಿಂದ ೧೨೪೭ರ ವರೆಗೆ ಆಳಿದ ಸಿಂಘಣನು. ಇವನು ಬಹು ಪರಾಕ್ರಮಶಾಲಿಯು. ಇವನು ನರ್ಮದಾ ನದಿಯಿಂದ ತುಂಗಭದ್ರಾ ತೀರದ ವರೆಗೂ ಅನೇಕ ರಾಜರನ್ನು ಗೆದ್ದು ತನ್ನ ರಾಜ್ಯವನ್ನು ವಿಸ್ತರಿಸಿದನು. ಅವನು ಇಡೀ ಉತ್ತರ ಕರ್ನಾಟಕ ಪ್ರಾಂತವನ್ನು ಗೆದ್ದು ಅಲ್ಲಿ ತನ್ನ ಸೇನಾಪತಿಗಳನ್ನು ಇಟ್ಟು ರಾಜ್ಯಭಾರ ನಡಿಸಿದನು. ಈ ಸೇನಾಪತಿಗಳಲ್ಲಿ ಪ್ರಬಲ

ದಾವವರು ಮಲ್ಲ ಅಥವಾ ಮಲ್ಲಿಶೆಟ್ಟಿ ಮತ್ತು ಅವನ ತಮ್ಮ ಬೀಚುಗಿ ಇವರು ಇದ್ದಾರೆ. ಮಲ್ಲನು ಮುದಗಲ್ಲನ್ನು ತನ್ನ ಠಾಣ್ಯವನ್ನಾಗಿ ಮಾಡಿ ಕೊಂಡು ಕರ್ನಾಟಕದ ಪೂರ್ವಭಾಗವನ್ನೂ, ಬೀಚುಗಿಯು ಲಕ್ಷ್ಮೇಶ್ವರ ವನ್ನು ತನ್ನ ಠಾಣ್ಯವನ್ನು ಮಾಡಿ ಪಶ್ಚಿಮ ಮತ್ತು ದಕ್ಷಿಣ ಭಾಗಗಳನ್ನೂ ಆಳುತ್ತಿದ್ದರು. ಇವರಲ್ಲಿ ಬೀಚುಗಿಯು ಬಹು ಶೂರನು. ಅವನು ಕದಂಬ, ರಟ್ಟ ಮೊದಲಾದ ಮಾಂಡಲಿಕರನ್ನು ಗೆದ್ದು ತನ್ನ ಅಧೀ ನದಲ್ಲಿರಿಸಿಕೊಂಡನು. ಮಲ್ಲಿಶೆಟ್ಟಿಯ ಮಗನು ಚಾವುಂಡನು. ಅಥವಾ ಚೌಡಿಶೆಟ್ಟಿಯು. ಬೀಚುಗಿಯ ತರುವಾಯ ಚೌಡಿಶೆಟ್ಟಿಯು ಕರ್ನಾಟಕ ಭಾಗವನ್ನು ಬಹು ದಿವಸ ಆಳಿದನು. ಮಲ್ಲಶೆಟ್ಟಿ, ಬೀಚುಗಿ ಮತ್ತು ಚೌಡಿಶೆಟ್ಟಿ ಇವರ ಶಿಲಾಶಾಸನಗಳು ಕರ್ನಾಟಕದಲ್ಲೆಲ್ಲ ಬಹಳ ಕಡೆಗೆ ದೊರೆಯುತ್ತವೆ. ಇವರು ಪೂರ್ಣ ಕನ್ನಡಿಗರು. ಆದ್ದರಿಂದ ದೇವಗಿರಿ ಯಾದವರು ಕೊಟ್ಟ ಇಲ್ಲಿಯ ಶಿಲಾಶಾಸನಗಳೆಲ್ಲ ಕನ್ನಡ ಭಾಷೆಯಲ್ಲಿವೆ.

ಈ ಮೂವರು ಸೇನಾಪತಿಗಳು ಶಿವಭಕ್ತರಾಗಿದ್ದರು. ಈ ಕಾಲದ ಶಿಲಾಶಾಸನಗಳಲ್ಲಿ ಶಿವಭಕ್ತ, ಲಿಂಗವಂತ, ವೀರಶೈವ ಈ ಶಬ್ದಗಳು ಸಾಮಾನಾರ್ಥದಲ್ಲಿ ಉಪಯೋಗಿಸಲ್ಪಡುತ್ತಿದ್ದುದು ಕಂಡುಬರುತ್ತದೆ. ಆದ್ದ ರಿಂದ ಈ ಮೂವರು ಸೇನಾಪತಿಗಳು ವೀರಶೈವರಿರಬೇಕೆಂದು ನಮ್ಮ ಅನುಮಾನವಿದೆ. ಆದರೆ ಇದಕ್ಕೆ ಪೂರ್ಣ ಆಧಾರಗಳು ನಮಗೆ ಇನ್ನೂ ದೊರೆತಿಲ್ಲ. ಇವರಲ್ಲಿ ಚಾವುಂಡನು 'ಶಿವಭಕ್ತನೆಂತ'ಲೂ 'ಮಂತ್ರಾಂಗವಿ ದ್ಯಾಸಮುದ್ರ'ನೆಂತಲೂ ಶಾಸನಗಳಲ್ಲಿ ಹೇಳಲ್ಪಟ್ಟಿದ್ದಾನೆ.§ ಇವನು ಅನೇಕ ಶಿವಶರಣರಿಗೆ ದಾನಗಳನ್ನು ಕೊಟ್ಟು ಅವರನ್ನು ಪೋಷಿಸಿದ್ದಾನೆ. ಈ ಸೇನಾಪತಿಗಳ ವರ್ಚಸ್ಸಿನಿಂದ ಯಾದವ ರಾಜರೂ ಕೂಡ ಶಿವಶರಣರಿಗೆ ಉತ್ತೇಜನ ಕೊಟ್ಟಿದ್ದು ಈ ಶಾಸನಗಳಲ್ಲಿ ಕಂಡುಬರುತ್ತದೆ. ಈ ಶತಮಾ ನದಲ್ಲಿ ಅನೇಕ ಶಿವಶರಣರೂ ಅಸಂಖ್ಯ ವಚನಕಾರರೂ ಆಗಿಹೋಗಿ ವೀರಶೈವಧರ್ಮವನ್ನು ಪ್ರಸಾರ ಮಾಡಿದ್ದಾರೆ. ಅವರಲ್ಲನೇಕರು ಯಾದವ ರಾಜರಿಂದಲೂ ಅವರ ಸೇನಾಪತಿಗಳಿಂದಲೂ ಮನ್ನಣೆಯನ್ನು ಹೊಂದಿದ್ದು ಕಂಡುಬರುತ್ತದೆ.

---

§ ಶಿವಾನುಭವ ೧೩—೭—೨೬೯

,, ೧೩—೮,೯—೨೯೪

## ಸಿಂಘಣ.

ಅಮುಗಿದೇವ:—ಸಿಂಘಣನು ಯಾದವ ರಾಜರಲ್ಲಿ ಬಹು ಪ್ರತಾಪಶಾಲಿಯಾದ ರಾಜನಾಗಿದ್ದನು. ಅವನು ತನ್ನ ತಂದೆಯಾದ ಜೈತುಗಿಯು ಆಳಿಕೆಯಲ್ಲಿಯೂ ಕೂಡ ದಿಗ್ವಿಜಯಕ್ಕೆ ಹೊರಡುತ್ತಿದ್ದನೆಂದು ತೋರುತ್ತದೆ. ಒಂದು ದಿನ ಅವನು ಭೀಮಾ ತೀರದಲ್ಲಿರುವ ಪುಳುಜ ಎಂಬ ಗ್ರಾಮದಲ್ಲಿ ತನ್ನ ಸೈನ್ಯದೊಂದಿಗೆ ತಳುವಿರಲು ಅಲ್ಲಿ ಶಿವಶರಣರಲ್ಲಿ ಅತ್ಯಂತ ಪ್ರಖ್ಯಾತಿಯನ್ನು ಹೊಂದಿದ ಅಮುಗಿದೇವನನ್ನು ಕಾಣುವ ಪ್ರಸಂಗವು ಅವನಿಗೆ ಒದಗಿತು. ಅಮುಗಿದೇವನು ಬಸವೇಶ್ವರನ ಸಮಕಾಲೀನನು. ಶಿವಾನುಭವ ಮಂಟಪದಲ್ಲಿದ್ದು ಅಲ್ಲಿ ನಡೆಯುತ್ತಿದ್ದ ಅನುಭವಗೋಷ್ಠಿಗಳಲ್ಲಿ ಅಂಗವಹಿಸಿದವನು, ಒಳ್ಳೇ ಜ್ಞಾನಿಯು. ಅವನು ತನ್ನ ಇಷ್ಟದೇವತೆಯಾದ 'ಸಿದ್ಧಸೋಮನಾಥ' ಎಂಬ ಮುದ್ರಿಕೆಯನ್ನಿಟ್ಟುಕೊಂಡು ಬಹು ಸುಂದರವಾದ ವಚನಗಳನ್ನು ರಚಿಸಿದ್ದಾನೆ. ಸಿದ್ಧಸೋಮನಾಥ ದೇವಾಲಯವು ಈ ಪುಳುಜ ಗ್ರಾಮದಲ್ಲಿಯೇ ಇದೆ. ಸಿಂಘಣನು ಇಲ್ಲಿಗೆ ಬರಲು ಅವನು ಅಮುಗಿದೇವನನ್ನು ಕಂಡು ಅವನಿಗೋಸ್ಕರ ಅತ್ಯಂತ ಭಕ್ತಿಭಾವವನ್ನು ತಾಳಿದವನಾಗಿ ಸಿದ್ಧಸೋಮನಾಥನಿಗೋಸ್ಕರ ಅವನಿಗೆ ಇಥ್ಥೆ ಎಂಬ ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಈ ಉಲ್ಲೇಖವಿದ್ದ ಶಿಲಾಶಾಸನವು ಈ ದೇವಾಲಯದ ಬಳಿಯಲ್ಲಿಯೇ ಈಗಲೂ ಇದೆ. × ಇದರಲ್ಲಿ ಹೇಳಿರುವದೇನಂದರೆ:—

"ಶ್ರೀ ಸಿಂಘಣರಸ ದೇವರು ಸರ್ವಸಿದ್ಧಾರ್ಥಿ ಸಂವತ್ಸರದ ಮಾಘ ಶುದ್ಧ ೧೧ ಸೋಮವಾರ ವ್ಯತೀಪಾತದಿಂದ ಪೂರ್ಣಜಗೆ ಬಂದಲ್ಲಿ ದೇವತಾರ್ಚನೆಯ ಸಮಯದಲ್ಲು ಶ್ರೀ ಸ್ವಯಂಭು ಸಿದ್ಧಸೋಮನಾಥ ದೇವರ್ಗೆಂದಾ ಇಥ್ಥೆಯವನು ಸರ್ವ ಸಮಸ್ಯವಾಗಿ ಅಮ್ಮುಗಿದೇವರ ಸರ್ಗೆ ಆಕರಪರಿಹಾರವಾಗಿ ಧಾರಾಪೂರಕಂ ಮಾಡಿಕೊಟ್ಟರು." ಇತ್ಯಾದಿ.

## ಸಿಂಘಣನ ಸೇನಾಪತಿಗಳು.

ಈ ಶಾಸನದಲ್ಲಿ ಸಿಂಘಣನೊಡನೆ ಏಳು ಜನ ಸೇನಾಪತಿಗಳಿದ್ದು ಅವರೂ ಕೂಡ ಅಮುಗಿದೇವನಿಗೆ ಕಾಣಿಕೆಗಳನ್ನು ಅರ್ಪಿಸಿದ್ದಾರೆ. ಅವರ

---

× ಶಿವಾನುಭವ ಸಂಪುಟ ೯ ಸಂಚಿಕೆ ೫ ಪುಟ ೬೧೪ ನೋಡಿ.

ಹೆಸರುಗಳು ಯಾವವೆಂದರೆ:—ಸಾಹಸಿಕ ಮಾರ, ಸೋಗಿದೇವ, ಗಂಗಿದೇವ, ಸಂಕಮದೇವ, ಬಿಜ್ಜಪಾಣ, ರವಿಯದೇವ, ಜೋಗಿದೇವ, ಎಂದಿರುತ್ತವೆ.

ಈ ಶಾಸನದಲ್ಲಿ ಅಮುಗಿದೇವನು ಶಿವಾಚಾರ್‍ಯೈಕನಿರತ, ಲಿಂಗೈಕ್ಯದೇಹಿ, ಶರಣ ಸಂತಾನ, ಈ ಶಬ್ದಗಳಿಂದ ವರ್ಣಿಸಲ್ಪಟ್ಟಿದ್ದಾನೆ. ಈ ಶಬ್ದಗಳೆಲ್ಲವೂ ವೀರಶೈವ ಧರ್ಮಕ್ಕೆ ಸಂಬಂಧಪಟ್ಟವಿರುತ್ತವೆ. ಇದರಿಂದ ಇಲ್ಲಿ ವರ್ಣಿಸಲ್ಪಟ್ಟ ಅಮುಗಿದೇವನು ವೀರಶೈವನಿದ್ದುದು ಸ್ಪಷ್ಟವಿದೆ.

ವೀರಶೈವ ಗ್ರಂಥಗಳಲ್ಲಿ ಅಮುಗಿದೇವನ ಸಾಂಗತ್ಯವಿದೆ. ಅವನ ರಗಳೆ ಇದೆ. ಭೈರವೇಶ್ವರ ಕಥಾಮಣಿ ಸೂತ್ರ ರತ್ನಾಕರದಲ್ಲಿ ಅವನ ಚರಿತ್ರೆಯೂ ಇದೆ. ಅವುಗಳಿಂದ ತಿಳಿಯುವದೇನಂದರೆ:—

ಸೊಲ್ಲಾಪುರದಲ್ಲಿ ಅಮುಗಿದೇವನು ತನ್ನ ನೇಗಿಯ ಕಾಯಕವನ್ನು ಮಾಡುತ್ತಾ ಇರುವಲ್ಲಿ ಸಿದ್ಧರಾಮೇಶ್ವರನೂ ಕೂಡ ಅಲ್ಲಿಯೇ ಆ ಪಟ್ಟಣದ ಪ್ರಭುವಾಗಿ ಬಹು ಪ್ರಸಿದ್ಧನಾಗಿದ್ದನು. ಅಮುಗಿದೇವನ ಹೆಂಡತಿಯ ಹೆಸರು ವರದಾನಿಯಮ್ಮೆಂದು. ಒಂದು ದಿವಸ ಸಿದ್ಧರಾಮನು ಕ್ಷೇತ್ರ ಪೂಜೆಯನ್ನು ಮಾಡಬೇಕೆಂದು ಬಯಸಿರಲು ಈ ಕಾರ್‍ಯ ಮಾಡುವವಕ್ಕೋಸ್ಕರ ಅವನ ಸೇವಕರು ಅಮುಗಿದೇವನ ನಿಳಯದ ಮುಂದೆ ೧೦ ಕೊಳಗ ಬತ್ತವನ್ನು ಕುಟ್ಟಲು ಇಟ್ಟುಹೋದರು. ಆದರೆ ಅಮುಗಿದೇವನು ಸ್ಥಾವರಲಿಂಗಪೂಜಕನ ಸೇವೆಯನ್ನು ಮಾಡಲಾರೆನೆಂದು ಬತ್ತವನ್ನು ಕುಟ್ಟದೆ ಬಿಸುಡಿಬಿಟ್ಟನು. ಆಗ ಉಭಯತರಲ್ಲಿ ಮನಸ್ತಾಪವು ಉಂಟಾಗಲು ಬಹಳ ಬಡವನಾದ ಅಮುಗಿದೇವನು ಇನ್ನುಮೇಲೆ ಸೊಲ್ಲಾಪುರದಲ್ಲಿ ಇರಲಾಗದೆಂದು ತನ್ನ ನೇಗಿಯ ಸಾಮಾನುಗಳನ್ನೆಲ್ಲ ಹೊರೆ ಕಟ್ಟಿ ಪಟ್ಟಣವನ್ನು ಬಿಟ್ಟು ಕಲ್ಯಾಣಕ್ಕೆ ಹೋಗಿ ಅಲ್ಲಿ ಇರಹತ್ತಿದನು. ಅಲ್ಲಿ ಅವನು ತನ್ನ ನೇಗಿಯ ಕಾಯಕವನ್ನು ಮಾಡುತ್ತಾ ತನ್ನ ಜೀವನವನ್ನು ನಡಿಸುತ್ತಾ ಇದ್ದನು. ಅವನು ಬಹು ಜ್ಞಾನಿಯಾದ್ದರಿಂದ ಶಿವಾನುಭವ ಮಂಟಪದಲ್ಲಿ ಸೇರಿಕೊಂಡು ಅಲ್ಲಿ ನಡೆಯುತ್ತಿದ್ದ ಅನುಭವ ಗೋಷ್ಠಿಗಳಲ್ಲಿ ಯಾವಾಗಲೂ ಅಂಗವಹಿಸುತ್ತಿದ್ದನು. ಸಿದ್ಧರಾಮೇಶ್ವರನು ಅಮುಗಿದೇವನು ಸೊಲ್ಲಾಪುರವನ್ನು ಬಿಟ್ಟು ಹೋಗಲಿಕ್ಕೆ ತಾನು ಕಾರಣನಾದೆನೆಂದು ಬಹಳ ಪಶ್ಚಾತ್ತಾಪ

ಒಟ್ಟನು. ಆದರೆ ಅಮುಗಿದೇವನು ಸೊಲ್ಲಾಪುರಕ್ಕೆ ತಿರುಗಿ ಎಂದೂ ಹೋಗಲಿಲ್ಲ. ಮುಂದೆ ಕಲ್ಯಾಣ ಪಟ್ಟಣದಲ್ಲಿ ಬಿಜ್ಜಳನು ಘಾತಿಸಲ್ಪಟ್ಟ ಬಳಿಕ ಅಲ್ಲಿ ಅನೇಕ ಅನಾಹುತಗಳು ಸಂಭವಿಸಲು ಶಿವಶರಣರೆಲ್ಲರು ಕಲ್ಯಾಣವನ್ನು ಬಿಟ್ಟು ಹೋಗಬೇಕಾಯಿತು. ಆಗ ಅಮುಗಿದೇವನು ತನ್ನ ಇಷ್ಟದೇವತೆ ಸಿದ್ಧಸೋಮನಾಥನಿದ್ದ ಪುಣಜೆ ಈ ಗ್ರಾಮದಲ್ಲಿ ಬಂದು ಅಲ್ಲಿಯೇ ವಾಸಮಾಡಹತ್ತಿದನು. ಅಮುಗಿದೇವನು ಪ್ರಸಿದ್ಧ ವಚನಕಾರರಲ್ಲಿ ಒಬ್ಬನಾಗಿದ್ದಾನೆ. ಅವನ ವಚನಗಳು ಅನೇಕ ಕಡೆಗೆ ಉದಹರಿಸಲ್ಪಟ್ಟಿವೆ. ಆದ್ದರಿಂದ ಅವನು ಈ ಭಾಗದಲ್ಲೆಲ್ಲ ಬಹಳ ಪ್ರಸಿದ್ಧಿಯನ್ನು ಹೊಂದಿದ್ದನು. ಆದ್ದರಿಂದ ಸಿಂಘಣನು ಅತ್ಯಂತ ಬಲಿಷ್ಠನಾದ ರಾಜನಾಗಿದ್ದರೂ ಅವನು ಅಮುಗಿದೇವನ ದರ್ಶನವನ್ನು ತೆಗೆದುಕೊಂಡು ಅವನನ್ನು ಬಹಳ ಮನ್ನಿಸಿ ಅವನಿಗೆ ಒಂದು ಗ್ರಾಮವನ್ನು ಉಂಬಳಿಹಾಕಿ ಕೊಟ್ಟನು. ಈ ಸಂಗತಿಯಿಂದ ಸಿಂಘಣನು ಶಿವಶರಣರಿಗೋಸ್ಕರ ಎಷ್ಟು ಆದರಭಾವವನ್ನು ವಹಿಸಿದವನಾಗಿದ್ದನೆಂಬುದು ವ್ಯಕ್ತವಾಗುತ್ತದೆ.

ಹೀಗೆ ಒಬ್ಬ ಪ್ರಬಲನಾದ ರಾಜನು ಶಿವಶರಣರನ್ನು ಆದರಿಸುತ್ತಿದ್ದುದರಿಂದ ಅವನ ಮಾಂಡಲಿಕರೂ ಸೇನಾಪತಿಗಳೂ ಅವರನ್ನು ಆದರಿಸಹತ್ತುವದು ಸ್ವಾಭಾವಿಕವು. ಈ ಕಾಲದಲ್ಲಿ ಅಮುಗಿದೇವನೊಬ್ಬನೇ ಅಲ್ಲ, ನಾವು ಹಿಂದೆ ವಿವರಿಸಿದ ಶಿವದೇವನೂ ಕೂಡ ಬಹು ಪ್ರಸಿದ್ಧನಾಗಿದ್ದನು. ಅವನು ೧೨೩೬ ರಲ್ಲಿ ಅಂದರೆ ಸಿಂಘಣ ನೃಪಾಲನು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿಯೇ ಕರ್ನಾಟಕದಲ್ಲಿ ಉದಯಿಸಿ ವಚನಕಾರರ ವಿಚಾರಗಳನ್ನು ಬಹಳವಾಗಿ ಪ್ರಸಾರಗೊಳಿಸಹತ್ತಿದ್ದನು. ಆದರಿಂದ ಅವನು ಎರಡನೇ ಬಸವನೆಂಬ ಹೆಸರನ್ನು ಸಹ ಪಡೆದವನಾಗಿದ್ದನು. * ಅವನ ಪ್ರಭಾವದಿಂದ ಗುತ್ತರಸರು ವೀರಶೈವ ಧರ್ಮವನ್ನು ಸ್ವೀಕರಿಸಿದರೆಂಬುದನ್ನು ಹಿಂದಿನ ಪ್ರಕರಣದಲ್ಲಿಯೇ ಹೇಳಿದ್ದೇವೆ. ಈ ಎಲ್ಲ ಸಂಗತಿಗಳಿಂದ ಸಿಂಘಣರಾಜನೂ ಅವನ ಸೇನಾಪತಿಗಳೂ, ಅವನ ಮಂಡಲೇಶ್ವರರೂ ಶಿವಶರಣರನ್ನು ಬಹಳ ಮನ್ನಿಸುವವರಾಗಿದ್ದರೆಂಬದು ಗೊತ್ತಾಗುತ್ತದೆ.

---

* ಶಿವಾನುಭವ ೪—೪—೧೬೭.

## ಕನ್ನರ.

(೧೨೪೭-೧೨೬೦)

ಸಿಂಘಣ ಅರಸನು ೧೨೪೭ ರಲ್ಲಿ ಮರಣಹೊಂದಿದನು. ಅವನ ತರುವಾಯು ಅವನ ಮೊಮ್ಮಗನಾದ ಕನ್ನರ ಅಥವಾ ಕೃಷ್ಣನು ದೇವ ಗಿರಿಯಲ್ಲಿ ರಾಜ್ಯವಾಳಹತ್ತಿದನು. ಅವನ ಕಾಲದಲ್ಲಿಯೂ ಕೂಡ ಶಿವಶರಣರ ವರ್ಚಸ್ಸು ಅಚ್ಚಳಿಯದೆ ಬೆಳೆಯುತ್ತ ಹೋದದ್ದು ಕಂಡು ಬರುತ್ತದೆ. ಅವನ ಆಡಳಿತೆಯಲ್ಲಿ ದೇವಗಿರಿಯಾದವರ ಮೊದಲಿನ ಪ್ರಸಿದ್ಧ ಸೇನಾನಾಯಕರಾದ **ಬೀಚುಗಿ** ಮತ್ತು ಚಾವುಂಡ ಇವರೇ ಕರ್ನಾಟಕದಲ್ಲಿ ರಾಜ್ಯವಾಳುತ್ತಿದ್ದರು. ಇವರು ವೀರಶೈವ ಧರ್ಮಕ್ಕೋ ಸ್ಕರ ಪ್ರೀತಿಯನ್ನು ವಹಿಸಿದವರಾಗಿದ್ದರು. ಅವರು ಅನೇಕ ಶಿವಾಲ ಯಗಳಿಗೆ ಉಂಬಳಿಯನ್ನು ಹಾಕಿಕೊಟ್ಟಿದ್ದಾರೆ. ಈ ಸಂಗತಿಯಿಂದಲೂ ಇವರಲ್ಲಿ ಚಾವುಂಡನು ಚೌಡಿಸೆಟ್ಟಿಯೆಂತಲೂ ಅವನ ತಂದೆಯಾದ ಮಲ್ಲನು ಮಲ್ಲಸೆಟ್ಟಿಯೆಂತಲೂ ಕರೆಯಲ್ಪಟ್ಟಿರುವದರಿಂದಲೂ ಅವರು ನಾವು ಹಿಂದೆ ಹೇಳಿದಂತೆ ಬಹುಶಃ ವೀರಶೈವ ಧರ್ಮವನ್ನು ಪ್ರತಿಪಾ ಲಿಸುತ್ತಿರಬೇಕೆಂದು ನಮ್ಮ ಅನುಮಾನವಿದೆ. ಇವರಲ್ಲಿ ಚಾವುಂಡನು ಅಥವಾ ಚೌಡಿಸೆಟ್ಟಿಯು ಬಸವೇಶ್ವರನ ಬಂಧುವಾದ ಹಾಲಬಸವಿ ದೇವನನ್ನು ಬಹಳ ಆದರಿಸಿ ಅವನಿಗೆ ದಾನಕೊಟ್ಟದ್ದು ಅರ್ಜುನ ವಾಡ ಶಿಲಾಶಾಸನದಲ್ಲಿ ನಿರೂಪಿಸಲ್ಪಟ್ಟಿದೆ. ::

**ಚಾವುಂಡ ಸೇನಾಪತಿ**:—ಹಾಲಬಸವಿದೇವನು ಬೆಳಗಾವ ಜಿಲ್ಲಾ ಹುಕ್ಕೇರಿ ಬದಿಯಲ್ಲಿರುವ ಅರ್ಜುನವಾಡದಲ್ಲಿದ್ದು ವೀರಶೈವಧರ್ಮನಿ ರತನಾಗಿ ಈ ಕಾಲಕ್ಕೆ ಬಹು ಪ್ರಸಿದ್ಧಿಯನ್ನು ಹೊಂದಿದ್ದನು. ದಕ್ಷಿಣ ದೇಶದಲ್ಲಿ ಹೇಗೆ ಶಿವದೇವನು ಉದಯನಾಗಿ ಧರ್ಮಜಾಗ್ರತಿಯ ಕಾರ್ಯಗಳನ್ನು ನಡಿಸಿದ್ದನೋ ಅದೇ ಪ್ರಕಾರ ಮಧ್ಯಕರ್ನಾಟಕ ದಲ್ಲಿದ್ದ ಹುಕ್ಕೇರಿಯ ಪ್ರದೇಶದಲ್ಲಿ ಹಾಲಬಸವಿದೇವನು ಶಿವಶರ ಣರ ತತ್ವಪ್ರಚಾರಕನಾಗಿದ್ದನು. ಈ ಶಿಲಾಶಾಸನದ ವರ್ಷ ೧೨೬೦ ಇದೆ. ಇದಕ್ಕೂ ಮೊದಲು ಸುಮಾರು ನೂರುವರ್ಷಗಳ ಹಿಂದೆ ಬಸ ವೇಶ್ವರನು ಬ್ರಾಹ್ಮಣ ಧರ್ಮವನ್ನು ಬಿಟ್ಟು ವೀರಶೈವ ಧರ್ಮವನ್ನು

---

:: **ಶಿವಾನುಭವ ಸಂ. ೧೩—೯—೯೩ ನೋಡಿರಿ.**

೧೮ ಶ್ರೀ ಮಾಳ್ಕಣ್ಣ ಗುರಸಂಗಪ್ಪ ಧವಳಗಿ ೫-೦-೦

೧೯ ,, ಶ್ರೀಗುರುಲಿಂಗಸ್ವಾಮಿಗಳು ಮಹಾಲಿಂಗಪುರ ೫-೦-೦

೨೦ ,, ಸಿದ್ಧಲಿಂಗಪ್ಪ ಅಷ್ಟಗಿ ಮಹಾಲಿಂಗಪುರ ೫-೦-೦

೨೧ ,, ಎಸ್. ಎಂ. ಪಾಟೀಲ ಒಷ್ಠರಸಿಅರ ಮುದ್ದೇಬಿಹಾಳ ೭-೦-೦

೨೨ ,, ಮಡಿವಾಳಪ್ಪ ಆ್ಯಂಡ ಬ್ರದರ್ಸ ಗದಗ ೫-೦-೦

೨೩ ,, ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು ೬-೦-೦
ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಗೂಳೂರ

೨೪ ,, ವೀರಶೈವ ತರುಣ ಸಂಘ ಹಳ್ಳೀಕೇರಿ ೫-೦-೦

ಮೇಲ್ಕಂಡ ಮಹಾಶಯರ ಧನಸಹಾಯವನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

ಕೆ. ಡಿ. ಬ್ಯಾಳಿ,
ಸೆಕ್ರೆಟರಿ ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿ
ವಿಜಾಪುರ.




**ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.**

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೬] ಫೆಬ್ರುವರಿ ೧೯೪೩. [ಸಂಚಿಕೆ

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೨೧೩ |
| ೨ ಶಿವಶರಣರ ಜೀವನ | ಶಿವಮೂರ್ತಿ | ೨೨೧ |
| ೩ ಶಿವಾನುಭವ | ವಿದ್ವಾನ್ ಸಿದ್ಧವೀರ ಶಾಸ್ತ್ರಿ ಯಾದಗಿರಿ | ೨೨೫ |
| ೪ ಗುರುಲಿಂಗಜಂಗಮ | [illegible] ತೆ. [illegible]ಪ್ರೇದ ವಂಟಮೂರಿ | ೨೨೯ |
| ೫ ಸಂಪಾದಕೀಯ ಟಿಪ್ಪಣಿಗಳು | ಸಂಪಾದಕರು | ೨೩೬ |
| ೬ ವೀರಶೈವ ರಾಜಮನೆತನಗಳ ಚರಿತ್ರೆ | ಸಂಪಾದಕರು | ೨೯—೪೦ |

# ಶಿವಾನುಭವ.

| ವರ್ಷ ೧೭ | ಫೇಬ್ರುವರಿ ೧೯೪೩. | ಸಂಚಿಕೆ ೫ |
|---|---|---|

## ಬಸವೇಶ್ವರನ ಚರಿತ್ರೆ.

(ರಾ। ಬಾ। ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ — ೧೭]

### ಬಸವೇಶ್ವರನು ಆರಂಭದಲ್ಲಿ ಅಪ್ರಸಿದ್ಧನಾಗಿ ಧರ್ಮಬೋಧೆ ಮಾಡಿದ್ದು.

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನು ತನ್ನ ಗ್ರಾಮವನ್ನು ತೊರೆದು ಕೂಡಲಸಂಗಮೇಶ್ವರ ದೇವಸ್ಥಾನದಲ್ಲಿ ವಾಸಮಾಡಹತ್ತಿದ ಬಳಿಕ ಅವನು ಬಹುಜನ ಸಮಾಜದಲ್ಲಿ ಧರ್ಮಬೋಧೆಯನ್ನು ಮಾಡುತ್ತ ಕಾಲಕಳೆದನೆಂಬುದನ್ನು ಕುರಿತು ಅವನ ಅನೇಕ ವಚನಗಳ ಆಧಾರದಿಂದ ಸಮರ್ಥಿಸಿದ್ದೇವೆ. ಅವುಗಳಿಂದ ಅವನು ಏಕಾಂತವಾಸಿಯಾಗಿ ವ್ಯರ್ಥ ಕಾಲ ಕಳೆದಿರುವದಿಲ್ಲೆಂದು ತೋರಬರುವದು. ಒಂದು ವೇಳೆ ಅವನು ಹೀಗೆ ಕಾಲಕಳೆದಿದ್ದರೆ ಅವನಿಂದ ಸಮಾಜ ಸುಧಾರಣೆಯ ಮಹತ್ವದ ಕಾರ್ಯಗಳು ಎಂದಿಗೂ ಜರಗುತ್ತಿದ್ದಿಲ್ಲ ಮತ್ತು ಅವನು ಪ್ರಸಿದ್ಧಿಗೂ ಬರುತ್ತಿದ್ದಿಲ್ಲ. ಅವನ ಪ್ರಚಾರ ಕಾರ್ಯಗಳು ಅವನು ಪಿತೃಗ್ರಾಮವನ್ನು ತೊರೆದ ಬಳಿಕ ಅವನ ಅಂತ್ಯದ ವರೆಗೂ ನಡೆದಿದ್ದವೆಂಬುದಕ್ಕೆ ಆಧಾರಗಳಿವೆ. ಅವುಗಳನ್ನು ನಾವು ಕ್ರಮೇಣ ವಿಸ್ತರಿಸುತ್ತ ಹೋಗುವೆವು. ಆದರೆ ಆರಂಭದಲ್ಲಿ ಅವನ ಈ ಕಾರ್ಯವು ಜನರಿಂದ ವಿಶೇಷವಾಗಿ ಗಣಿಸಲ್ಪಡಲಿಲ್ಲೆಂದು ನಮಗೆ ತೋರುತ್ತದೆ. ಮಹತ್ವದ ಕಾರ್ಯಗಳ ಆರಂಭವನ್ನು ಜನರು ಮೊದಲು ಏನೂ ಲಕ್ಷಿಸುವದಿಲ್ಲ. ಆದರೆ ಅವುಗಳ ಪರಿಣಾಮಗಳು ಮುಂದೆ ಸಮಾಜದಲ್ಲಿ ತಲೆದೋರಿದ ಹಾಗೆ

ಅವುಗಳಿಗೋಸ್ಕರ ದುಡಿದವರ ಯೋಗ್ಯತೆಯೂ ಬೆಳೆಯುತ್ತ ಹೋಗಿ ಮುಂದೆ ಇಂಥವರು ಮಹಾಪುರುಷರೆಂದು ಗಣಿಸಲ್ಪಡುವರು. ಹೀಗೆ ಗಣಿಸಲ್ಪಟ್ಟ ಬಳಿಕ ಅವರ ವಾಸಸ್ಥಳಗಳೂ ಜನ್ಮಸ್ಥಾನಗಳೂ ಪವಿತ್ರವಾದವುಗಳೆಂದು ಭಾವಿಸಲ್ಪಡುತ್ತವೆ. ಆದರೆ ಬಸವೇಶ್ವರನಿಗೆ ಆರಂಭದಲ್ಲಿ ಈ ಸ್ಥಿತಿಯುಂಟಾಗದೆ. ಅಪ್ರಸಿದ್ಧನಾಗಿ ಅವನು ಧರ್ಮಬೋಧೆ ಮಾಡುತ್ತ ಹೋದನೆಂದು ನಮಗೆ ತೋರುತ್ತದೆ.

ವಿಜಾಪುರ ಜಿಲ್ಲೆಯಲ್ಲಿ ಮತ್ತು ಬೆಳಗಾವ ಜಿಲ್ಲೆಯ ಉತ್ತರ ಭಾಗದಲ್ಲಿ ರೇವಣಸಿದ್ಧೇಶ್ವರನ ಮತ್ತು ಪ್ರಭುದೇವರ ಸ್ಥಾನಗಳು ಈಗಲೂ ಬಹು ಪ್ರಸಿದ್ಧವಾಗಿವೆ. ಈ ಮಹಾನುಭಾವರು ಕೀರ್ತಿಸಂಪನ್ನರಾದ ಬಳಿಕ ಅವರು ಆ ಸ್ಥಾನಗಳಲ್ಲಿ ಬಂದಿದ್ದರ ಅಥವಾ ವಾಸಮಾಡಿದ್ದರ ಮೂಲಕ ಅವುಗಳಿಗೆ ಇಂಥ ಮಹತ್ವವು ಪ್ರಾಪ್ತವಾಗಿರಬೇಕೆಂದು ನಮಗೆ ತೋರುತ್ತದೆ. ಆದರೆ ವಿಜಾಪುರ ಜಿಲ್ಲೆಯಲ್ಲಿ ಬಸವೇಶ್ವರನು ಜನಿಸಿ ಅಲ್ಲಿಯೂ ಅದರ ನೆರೆ ಜಿಲ್ಲೆಯಲ್ಲಿಯೂ ಸಂಚರಿಸಿದರೂ ಕೂಡ ಇಲ್ಲಿ ಅವನ ಹೆಸರಿನ ಮಹತ್ವದ ದೇವಾಲಯಗಳಾವವೂ ಇರುವದಿಲ್ಲ. ಇದು ಆಶ್ಚರ್ಯಕರವಾಗಿರುತ್ತದೆ. ಇದು ಯಾರ ಲಕ್ಷ್ಯಕ್ಕಾದರೂ ಬರದೆ ಇರಲಾರದು. ಮುದ್ದೇಬಿಹಾಳಕ್ಕೆ ಸಮೀಪವಿರುವ ಕುಂಟೋಜಿ ಬಸವ, ತಾಳೀಕೋಟೆಗೆ ಸಮೀಪವಿರುವ ಕೊಡೇಕಲ್ಲ ಬಸವ ಮತ್ತು ಜಮಖಂಡಿಗೆ ಸಮೀಪವಿರುವ ಕಡಪಟ್ಟಿ ಬಸವ ಇವುಗಳು ಮಾತ್ರ ಉತ್ತರ ಕರ್ನಾಟಕದಲ್ಲಿ ಬಸವೇಶ್ವರನ ಹೆಸರಿನಿಂದಿರುವ ಮಹತ್ವದ ಸ್ಥಾನಗಳು. ಆದರೆ ಅವುಗಳ ಸ್ಥಾನಿಕ ಐತಿಹ್ಯಗಳನ್ನು ಪರೀಕ್ಷಿಸಿದಲ್ಲಿ, ಅವುಗಳು ಬಾಗೇವಾಡಿಯಲ್ಲಿ ಜನಿಸಿದ ಬಸವೇಶ್ವರನಿಗೆ ಏನೂ ಸಂಬಂಧಪಡುವದಿಲ್ಲ. ಹೇಗೆ ರೇವಣಸಿದ್ಧ ಮತ್ತು ಅಲ್ಲಮಪ್ರಭುವಿನ ಸ್ಥಾನಗಳು ಈ ಭಾಗದಲ್ಲಿ ದೊರೆಯುತ್ತವೆಯೋ ಹಾಗೆ ಅತ್ಯಂತ ಮಹತ್ವಿಕನಾದ ಬಸವೇಶ್ವರನ ಸ್ಥಾನಗಳು ಇಲ್ಲಿ ದೊರೆಯಬಾರದೆಂಬುದು ಆಶ್ಚರ್ಯವನ್ನುಂಟುಮಾಡದಿರದು. ಇದರ ಕಾರಣವು ನಮಗೆ ತೋಚುವದೇನೆಂದರೆ, ರೇವಣಸಿದ್ಧನು ಚೋಳದೇಶದಲ್ಲಿ ಆರಂಭದಲ್ಲಿದ್ದು ಅಲ್ಲಿ ಪ್ರಖ್ಯಾತಿಯನ್ನು ಹೊಂದಿದ ಬಳಿಕ ಈ ಭಾಗದಲ್ಲಿ ಅವನು ಬಂದಿದ್ದರ ಮೂಲಕ ಅವನ ಹೆಸರಿನ ದೇವಾಲಯಗಳು ಇಲ್ಲಿ ಆಗಿರಬೇಕು. ಅವನಂತೆಯೇ ಅಲ್ಲಮಪ್ರಭುವು ಪ್ರಖ್ಯಾತಿಯನ್ನು ಹೊಂದಿದ ಬಳಿಕ ಅವನು ಇಲ್ಲಿ ವಾಸವಾಗಿದ್ದರಿಂದ ಅವನ ಸ್ಮರಣಾರ್ಥವಾಗಿ ಗುಡಿಗಳು ತಲೆ

ದೋರಿರಬೇಕು. ಆದರೆ ಬಸವೇಶ್ವರನಿಗೆ ಈ ಸ್ಥಿತಿಯುಂಟಾಗಿರುವದಿಲ್ಲ. ಅವನು ಕೂಡಲಸಂಗಮದಲ್ಲಿ ಸ್ಥಾಯಿಕನಾದರೂ ಕೂಡ ವಿಜಾಪುರ ಜಿಲ್ಲೆಯ ಯಾವ ಭಾಗದಲ್ಲಿಯೂ ಕೂಡ ಅವನ ಹೆಸರಿನ ಸುಂದರವಾದ ಮತ್ತು ಮಹತ್ವದ ಕಟ್ಟಡಗಳು ಕಂಡುಬರದೆ ಇದ್ದದ್ದಕ್ಕೆ ಒಂದೇ ಒಂದು ಕಾರಣವಿರುತ್ತದೆಂದು ನಮಗೆ ತೋರುತ್ತದೆ. ಬಸವೇಶ್ವರನು ಬಾಗೇವಾಡಿಯಿಂದ ಹೊರಗೆ ಹಾಕಲ್ಪಟ್ಟ ಬಳಿಕ ಅವನು ತನ್ನ ಧರ್ಮಬೋಧೆಯ ಕಾರ್ಯಗಳನ್ನು ನಡಿಸಿದ್ದು ಅಜ್ಞ ಜನರಲ್ಲಿ. ಆಗ ಅವನನ್ನು ಹಿಂಬಾಲಿಸಿದವರು ಕೇವಲ ಬಡವರು ಮತ್ತು ಅವನತ ಸ್ಥಿತಿಯಲ್ಲಿದ್ದವರು. ಅವನನ್ನು ಬ್ರಾಹ್ಮಣ ಜೈನ ಮೊದಲಾದ ಶ್ರೇಷ್ಠ ವರ್ಗದವರು ಹಿಂಸಿಸಿದ್ದಾರೆ. ಇಂಥ ಸ್ಥಿತಿಯಲ್ಲಿ ಅವನ ಹೆಸರಿನ ದೇವಾಲಯಗಳು ಇಲ್ಲಿ ಉಂಟಾಗುವ ಸಂಭವವೇ ಇಲ್ಲ. ಮುಂದೆ ಅವನು ಕಲ್ಯಾಣಕ್ಕೆ ಹೋದ ಬಳಿಕ ಅವನು ಅನೇಕ ಮಹತ್ವದ ಕೃತ್ಯಗಳನ್ನು ಮಾಡಿದರೂ ಕೂಡ ಅವನು ಆ ಕಾಲದಲ್ಲಿ ವಿಜಾಪುರ ಮತ್ತು ಬೆಳಗಾವ ಜಿಲ್ಲೆಗಳಲ್ಲಿ ಸಂಚರಿಸಿದಂತೆ ತೋರುವದಿಲ್ಲ. ಆದುದರಿಂದ ಈ ಭಾಗದಲ್ಲಿ ಅಲ್ಲಮಪ್ರಭು ಮತ್ತು ರೇವಣಸಿದ್ಧೇಶ್ವರ ಇವರ ದೇವಾಲಯಗಳಾಗಿರುವಂತೆ ಅವನ ಸ್ಮಾರಕಕ್ಕೋಸ್ಕರ ಇಲ್ಲಿ ದೇವಾಲಯಗಳಾಗಿರುವದಿಲ್ಲೆಂದು ನಮಗೆ ತೋರುತ್ತದೆ.

ಈ ವಿವರಣೆಯಿಂದ ಬಸವೇಶ್ವರನು ಸ್ವಗ್ರಾಮದಿಂದ ಹೊರಗೆ ಹಾಕಲ್ಪಟ್ಟ ಬಳಿಕ ಈ ಭಾಗದಲ್ಲಿ ಅವನು ತನ್ನ ಪ್ರಚಾರಕಾರ್ಯ ನಡಿಸಿದರೂ ಕೂಡ ಅವನು ಆಗಿನ ಮುಖ್ಯ ಸಮಾಜಗಳಿಂದ ಲಕ್ಷಿಸಲ್ಪಡದೆ ಅಪ್ರಸಿದ್ಧನಾಗಿ ಕಾರ್ಯ ನಡಿಸಿದನೆಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಿರುತ್ತದೆ. ನಮ್ಮ ಈ ಅನುಮಾನವು ಬಸವೇಶ್ವರನಿಗೋಸ್ಕರ ಮಾತ್ರ ಅನ್ವಯಿಸುತ್ತದೆಂದು ತಿಳಿಯಕೂಡದು. ಈ ಸಂಗತಿಯು ಬಹುತರ ಎಲ್ಲ ಧರ್ಮಸ್ಥಾಪಕರಿಗೆ ಅನ್ವಯಿಸುತ್ತದೆ. ಜೀಜಸ ಕ್ರೈಸ್ತ, ಬುದ್ಧ ಮೊದಲಾದವರು ಆರಂಭದಲ್ಲಿ ಯಾರ ತಿಳುವಳಿಕೆಗೂ ಬಂದವರಾಗಲಿಲ್ಲ. ಅವರ ಖ್ಯಾತಿಯು ಅವರ ತರುವಾಯ ಅನೇಕ ವರ್ಷಗಳು ಕಳೆದುಹೋದ ಬಳಿಕ ಉಂಟಾಗಿರುತ್ತದೆ. ಬಸವನ ಸ್ಥಿತಿಯಾದರೂ ಹೀಗೆಯೇ ಆದಂತೆ ತೋರುತ್ತದೆ. ಆರಂಭದಲ್ಲಿ ಜೈನ, ಬ್ರಾಹ್ಮಣರೂ ವ್ಯಾಪಾರಸ್ಥ ಮೊದಲಾದ ಶ್ರೀಮಂತರೂ

ಅವನನ್ನು ಪೀಡಿಸುವವರಾದರು. ಮಂತ್ರಿಯಾದ ಬಳಿಕ ಸಹ ಅವನಿಗೆ ಅನೇಕರು ಕಡು ವೈರಿಗಳಾದರು. ಮತ್ತು ಅವನ ಅಂತ್ಯವು ಸಹ ಸ್ವಾಭಾವಿಕವಾದ ರೀತಿಯಿಂದ ಆಗಿರುವದಿಲ್ಲ. ಆದರೆ ಅವನ ಕೀರ್ತಿಯು ಅವನು ಕಳೆದುಹೋದ ಬಳಿಕ ಬಹುಶಃ ೫೦—೧೦೦ ವರ್ಷಗಳ ತರುವಾಯ ಜನರಲ್ಲಿ ಹೆಚ್ಚಿ ಅವನ ವಿಷಯವಾಗಿ ಅನೇಕ ದಂತಕಥೆಗಳು ಆದವು, ಪುರಾಣಗಳಾದವು, ಮತ್ತು ಕಡೆಗೆ ನಂದಿಯ ಅವತಾರವೆಂದು ಭಾವಿಸಲ್ಪಟ್ಟನು.

**ಬಿಜ್ಜಳ ರಾಜನಲ್ಲಿ ಬಸವೇಶ್ವರನು ನೌಕರೀ ಹಿಡಿದಿದ್ದು.**

ಬಸವೇಶ್ವರನು ತನ್ನ ಪ್ರಚಾರಕಾರ್ಯ ನಡಿಸುತ್ತಿರುವಲ್ಲಿ ಅವನು ಮುಂದೆ ಬಿಜ್ಜಳ ರಾಜನಲ್ಲಿ ಅಧಿಕಾರಿಯಾದನೆಂಬುದು ಸುಸ್ಪಷ್ಟವಾದದ್ದು. ಆರಂಭದಲ್ಲಿ ಅವನು ಒಬ್ಬ ಗುಮಾಸ್ತನಾದನೆಂದು ಹರಿಹರ ಕವಿಯು ತನ್ನ ರಗಳೆಯಲ್ಲಿ ಹೇಳಿದ್ದಾನೆ. ಅಲ್ಲದೆ ಅವನು ಒಬ್ಬ ಭಂಡಾರಿ ಅಂದರೆ ಖಜೀನದಾರನಾಗಿಯೂ, ದಂಡಾಧಿಪತಿಯಾಗಿಯೂ, ಮಂತ್ರಿಯಾಗಿಯೂ. ಸಹ ಕೆಲಸಮಾಡಿದನೆಂದು ಅವನ ಪುರಾಣಗಳಲ್ಲಿ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಜೈನ ಗ್ರಂಥಕಾರರೂ ಕೂಡ ಅವನು ಒಬ್ಬ ಅಧಿಕಾರಿಯಾಗಿದ್ದನೆಂದು ತಮ್ಮ ಗ್ರಂಥಗಳಲ್ಲಿ ಹೇಳುತ್ತಾರೆ. ಆದ್ದರಿಂದ ಬಸವೇಶ್ವರನು ಬಿಜ್ಜಳ ರಾಜನಲ್ಲಿ ನೌಕರಿಗೆ ನಿಂತನೆಂಬ ಸಂಗತಿಯನ್ನು ನಾವು ಒಪ್ಪಲೇಬೇಕಾಗುತ್ತದೆ. ಆದರೆ ಅನೇಕರು ಯಾವ ಬಸವೇಶ್ವರನು ಧರ್ಮಬೋಧೆಯನ್ನು ಮಾಡುತ್ತಲಿದ್ದನೋ ಅಂಥವನು ತನ್ನ ಧಾರ್ಮಿಕ ಕಾರ್ಯಗಳಿಗೋಸ್ಕರ ರಾಜಕಾರಣದಲ್ಲಿ ಸೇರಿದ್ದು ಉಚಿತವಾಗಲಿಲ್ಲೆಂದು ಆಕ್ಷೇಪಿಸುವದನ್ನು ನಾವು ಕೇಳಿದ್ದೇವೆ. ಈ ಆಕ್ಷೇಪಣೆಯು ಸರಿಯಲ್ಲವೆಂದು ನಮಗೆ ತೋರುತ್ತದೆ. ಯಾವ ಕಾರಣದ ಮೂಲಕ ಬಸವನು ಬಿಜ್ಜಳನಲ್ಲಿ ನೌಕರಿಯನ್ನು ಹಿಡಿದನೆಂಬುದನ್ನು ನಿಶ್ಚಿತವಾಗಿ ತಿಳಿಯಲು ಶಕ್ಯವಿಲ್ಲದಿದ್ದರೂ, ಆ ಕಾಲಕ್ಕಿನ ಕರ್ನಾಟಕದ ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ನಾವು ನಿರೀಕ್ಷಿಸಿದಲ್ಲಿ ಧಾರ್ಮಿಕ ಪುರುಷರು ರಾಜಕಾರಣದಲ್ಲಿ ಸೇರುವದು ಆ ಕಾಲಕ್ಕೆ ವಾಡಿಕೆಯಾಗಿತ್ತೆಂದು ನಮಗೆ ತೋರುತ್ತದೆ.

ಪಂಪ ಮಹಾಕವಿಯು ಆದಿಪುರಾಣ ಮೊದಲಾದ ಗ್ರಂಥಗಳನ್ನು ಬರೆದು ಜೈನ ಧರ್ಮದಲ್ಲಿ ಪಾರಂಗತನಾದವನೆಂದು ಹೆಸರ್ಗೊಂಡನು.

ಇಂಥವನು ಪುಲಿಗೆರೆಯ ರಾಜನಾದ ಅರಿಕೇಸರಿಯಲ್ಲಿ ದಂಡನಾಯಕ ನಾಗಿದ್ದನೆಂದು ಅವನ ಗ್ರಂಥದಿಂದಲೇ ತಿಳಿದುಬರುತ್ತದೆ. ತಾನು 'ಚತು ರಂಗಬಳ ಭಯಂಕರಣಂ' ಎಂತಲೂ 'ನಿಜಾದಿನಾಥನಾಹವದೊಳ ರಾತಿ ನಾಯಕರ ಪಟ್ಟವೆ ಸಾರಿಸೆ ಸಂದ ಪೆಂಪು......... ಸಂದನೇಂ ಕಲಿಯೋ' ಎಂತಲೂ ಹೇಳಿಕೊಂಡಿದ್ದಾನೆ. ಇದರ ಮೇಲಿಂದ ಅವನು ಬಹು ಶೂರನಾಗಿದ್ದನೆಂದು ಕಂಡುಬರುತ್ತದೆ. ಹಾಗೆಯೇ ಅನೇಕ ಜೈನ ಮಹಾ ಕವಿಗಳೂ ಜೈನಧರ್ಮಪಾರಂಗತರೂ ಕೂಡ ರಾಜರೂ ಶೂರರೂ ಆಗಿದ್ದರೆಂಬುದು ತಿಳಿದು ಬರುತ್ತದೆ. ವೀರಶೈವರಲ್ಲಿ ಕೊಂಡಗುಳಿಯ ಕೇಶಿರಾಜನು ಪೆರ್ಮಾಡಿರಾಯನಲ್ಲಿ ಮಂತ್ರಿಯಾಗಿಯೂ, ವಚನಕಾರ ರಾದ ಸೊಡ್ಡಳ ಬಾಚರಸ, ಮಧುವರಸರು ಬಿಜ್ಜಳನ ಸೈನ್ಯದಲ್ಲಿ ದಂಡಾಧಿ ಪತಿಗಳಾಗಿಯೂ ಇದ್ದರು. ವಿದ್ಯಾರಣ್ಯರು ರಾಜಕಾರಣಿಗಳಾಗಿದ್ದರೆಂದು ತಿಳಿಯಲ್ಪಟ್ಟಿದೆ. ಆದರೆ ಅವರ ಸಹೋದರನಾದ ಸಾಯಣನು ವಿಜಯನಗ ರದ ರಾಜರ ಆಸ್ಥಾನದಲ್ಲಿ ಮಂತ್ರಿಯಾಗಿದ್ದನು. ಆದರೆ ಕೇವಲ ಪಾರ ಮಾರ್ಥ ಸಾಧನೆಯಲ್ಲಿ ತೊಡಗಿ ನಿವೃತ್ತಿ ಮಾರ್ಗದಲ್ಲಿದ್ದ ತುಕಾರಾಮ, ಜ್ಞಾನೋಬಾ ಅಥವಾ ಕನಕದಾಸ, ಪುರಂದರದಾಸ ಇಂಥವರು ಸೈನ್ಯಾ ಧಿಕಾರ ಅಥವಾ ರಾಜಕಾರಣದಲ್ಲಿ ಸೇರಿರಲಿಕ್ಕಿಲ್ಲ. ಆದರೆ ಕಾಯಕವೇ ಮಹತ್ವವಾದುದೆಂದು ಭಾವಿಸಿ ಷಟ್‌ಸ್ಥಲ ಮಾರ್ಗಾನುಯಾಯಿಗಳಾದ ವೀರಶೈವರಿಗೆ ಇದು ಅಸಮ್ಮತವಾದುದಲ್ಲ. ಅದುದರಿಂದ ವೀರಶೈವರ ಸಮಾಜೇತಿಹಾಸದಲ್ಲಿ ಲಕ್ಕಣ್ಣ ದಂಡೇಶನಂಥ ಸೇನಾಪತಿಗಳೂ ಜಕ್ಕ ಣಾರ್ಯನಂಥ ಮಂತ್ರಿಗಳೂ ಆಗಿಂದಾಗ್ಗೆ ಆದುದು ಕಂಡುಬರುತ್ತದೆ. ಆದ್ದರಿಂದ ಬಸವೇಶ್ವರನು ತನ್ನ ಧಾರ್ಮಿಕ ಕಾರ್ಯವನ್ನು ಮಾಡುತ್ತಿ ದ್ದರೂ ಅವನು ಬಿಜ್ಜಳನ ಆಡಳಿತೆಯಲ್ಲಿ ಸೇರಿದ್ದರಲ್ಲಿ ಆಕ್ಷೇಪಾರ್ಹ ವಾದುದು ಏನೂ ಇರುವದಿಲ್ಲೆಂದು ನಾವು ಭಾವಿಸುತ್ತೇವೆ. ಇನ್ನು ಮೇಲೆ ಬಿಜ್ಜಳನಲ್ಲಿ ಅವನು ಯಾವ ಯಾವ ಉದ್ಯೋಗಗಳನ್ನು ಕೈಕೊಂ ಡನೆಂಬುದನ್ನು ನಾವು ಇಲ್ಲಿ ಸಂಕ್ಷಿಪ್ತವಾಗಿ ವಿವೇಚಿಸುತ್ತೇವೆ.

(೧) ಗುಮಾಸ್ತ:— ಹರಿಹರ ಕವಿಯು ಬಸವೇಶ್ವರನು ಆರಂಭ ದಲ್ಲಿ ಬಿಜ್ಜಳನ ಆಡಳಿತೆಯಲ್ಲಿ ಒಬ್ಬ ಗುಮಾಸ್ತನಾಗಿ ನೌಕರಿಯನ್ನು ಪ್ರಾರಂಭಿಸಿದನೆಂದು ತನ್ನ ಬಸವರಾಜ ರಗಳೆಯ ಜನೆಯ ಸ್ಥಲದಲ್ಲಿ ಹೇಳಿದ್ದಾನೆ. ಬಸವೇಶ್ವರನು ಮಂಗಳವಾಡಕ್ಕೆ ಬಂದಿರಲು ಅಲ್ಲಿಯ

‘ಗಣಕಸಾಲೆ’ ಅಂದರೆ ಲೆಕ್ಕಿಗರ ಕಚೇರಿಯಲ್ಲಿ ಒಂದು ವರುಷಕ್ಕೆ ನೂರು ಹೊನ್ನಿನ ಸಂಬಳದ ಒಂದು ಉದ್ಯೋಗವನ್ನು ಸ್ವೀಕರಿಸಿದನೆಂದು ಹೇಳುತ್ತಾನೆ. ಆದರೆ ಈ ವಿಷಯವನ್ನು ಸಮರ್ಥಿಸುವ ಯಾವ ವಚನವೂ ಅವನ ವಚನಗ್ರಂಥದಲ್ಲಿ ನಮಗೆ ದೊರಕಿರುವದಿಲ್ಲ. ಹರಿಹರ ಕವಿಯು ಬಸವನಿಗೋಸ್ಕರ ಅತ್ಯಂತ ಭಕ್ತಿಭಾವವುಳ್ಳವನು. ಇಂಥವನು ಅವನ ವಿಷಯವಾಗಿ ಸುಳ್ಳು ಸಂಗತಿಗಳನ್ನು ಹುಟ್ಟಿಸಿ ಹೇಳುವ ಸಂಭವ ತೋರುವದಿಲ್ಲ. ಅವನು ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಐತಿಹ್ಯಗಳನ್ನೇ ಹೇಳುತ್ತಿರಬೇಕು. ಆದ್ದರಿಂದ ಈ ಸಂಗತಿಯು ಅಗ್ರಾಹ್ಯವಾದುದೆಂದು ತತ್ಕ್ಷಣವೇ ಹೇಳಲಿಕ್ಕೆ ನಮಗೆ ಬರಲಾರದು. ಇದು ಸುಳ್ಳೆಂದು ಸಿದ್ಧವಾಗುವ ವರೆಗೆ ಇದನ್ನು ನಾವು ನಂಬುವುದು ಯುಕ್ತವಾದುದೆಂದು ನಮಗೆ ತೋರುತ್ತದೆ.

(೨) ಭಂಡಾರಿ:— ಈ ಪ್ರಕಾರ ಬಸವೇಶ್ವರನು ಗಣಕನ ಸ್ಥಾನವನ್ನು ಸಂಪಾದಿಸಿದ ಬಳಿಕ ಅವನು ಮುಂದೆ ಅದಕ್ಕೂ ಉಚ್ಚಸ್ಥಾನವಾದ ಭಂಡಾರಿಯ ಸ್ಥಳವನ್ನು ಪಡೆದಿರಬೇಕೆಂದು ನಮಗೆ ತೋರುತ್ತದೆ. ಈ ಸ್ಥಳದಲ್ಲಿ ಅವನು ನೌಕರೀ ಮಾಡಿದ್ದರ ವಿಷಯವಾಗಿ ಬಸವೇಶ್ವರನ ವಚನಗಳಲ್ಲಿ ಕೆಲವು ಆಧಾರಗಳು ನಮಗೆ ದೊರೆಯುತ್ತವೆ. ಅವು ಯಾವವೆಂದರೆ—

(೧) "ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯ, ಅಯ್ಯ ಎನಲಾರೆನಯ್ಯ. ಚೆನ್ನಯ್ಯನೆಮ್ಮಯ್ಯನು. ಚೆನ್ನಯ್ಯನ ಮಗ ನಾನು. ಕೂಡಲಸಂಗನ ಮಹಾ ಮನೆಯಲ್ಲಿ ಧರ್ಮಸಂತಾನದ **ಭಂಡಾರಿ ಬಸವಣ್ಣನು**" (ನಂ। ೫೮೮)

(೨) "ಊರ ಮುಂದೆ ಹಾಲ ಹಳ್ಳ ಹರಿವುತಿರಲು ವಾಳಿಯಾವಿನ ಬೆನ್ನಲಿ ಹರಿಯಲೇಕಯ್ಯ? ಲಜ್ಜೆಗೆಡಲೇಕೆ? ನಾಣುಗೆಡಲೇಕೆ? ಕೂಡಲಸಂಗಮದೇವನುಳ್ಳನ್ನಕ್ಕ **ಬಿಜ್ಜಳನ ಭಂಡಾರ ನಮಗೇಕಯ್ಯ?**" (ನಂ। ೩೧೮)

ಮೊದಲನೆಯ ವಚನದಲ್ಲಿ ‘ಭಂಡಾರಿ ಬಸವಣ್ಣನು’ ಎಂದು ಬಸವೇಶ್ವರನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಈ ವಚನವನ್ನು ಅವನು ರಚಿಸಿದ ಕಾಲದಲ್ಲಿ ಅವನು ಇನ್ನೂ ಮಂತ್ರಿಯಾಗಿರದೆ ಒಬ್ಬ ಖಜೀನ

ದಾರನಾಗಿದ್ದನೆಂದು ತೋರುತ್ತದೆ. ಮತ್ತು ಎರಡನೆಯ ವಚನದಲ್ಲಿಯೂ ಕೂಡ ಭಂಡಾರವು ಬಸವೇಶ್ವರನ ಕಯ್ಯಲ್ಲಿದ್ದದ್ದು ಧ್ವನಿತವಾಗುತ್ತದೆ. ಆರಂಭದಲ್ಲಿ ಲೆಕ್ಕಿಗನ ಅಥವಾ ಗಣಕನ ಕಾರ್ಯವನ್ನು ಅವನು ಮಾಡುತ್ತಿದ್ದು ಮುಂದೆ ಅದೇ ಖಾತೆಯಲ್ಲಿ ಮೇಲಿನ ಅಧಿಕಾರವಾದ ಭಂಡಾರಿಯಾಗಿದ್ದನೆಂಬ ಊಹೆಯಲ್ಲಿ ನಿಜತ್ವವಿರಬಹುದೆಂದು ತೋರುತ್ತದೆ.

(೩) ದಂಡಾಧಿಪಃ— ಹೀಗೆ ಭಂಡಾರಿಯ ಸ್ಥಳವನ್ನು ಹೊಂದಿದ ಬಳಿಕ ಬಸವೇಶ್ವರನು ದಂಡಾಧಿಪನಾದಂತೆ ತೋರುತ್ತದೆ. 'ಬಸವ ದಂಡಾಧಿಪ' 'ಬಸವದಂಡೇಶ' 'ಬಸವರಸ' ಎಂದು ಬಸವೇಶ್ವರನು ಪುರಾಣ ಗ್ರಂಥಗಳಲ್ಲಿ ಆಗಿಂದಾಗ್ಗೆ ಹೇಳಲ್ಪಡುತ್ತಾನೆ. ಮಂತ್ರಿಯಾಗುವ ಮೊದಲು ಅವನು ಸೈನ್ಯಾಧಿಪತಿಯಾಗಿರಬಹುದು. ಬಿಜ್ಜಳನ ಕಾಲದಲ್ಲಿ ಅತಿ ಸಮರ್ಥರಾದ ಮಹಾಮಂಡಲೇಶ್ವರರು ಉತ್ತರ ಕರ್ನಾಟಕ ಭಾಗವನ್ನು ಆಳುತ್ತಿದ್ದರು. ಅತಿ ಪ್ರಬಲನಾದ ಬರ್ಮದೇವನೂ, ಕೇಶಿರಾಜ ದಂಡಾಧಿಪತಿಯೂ, ಅತಿ ಶೂರನಾಗಿ ಹೊಯಿಸಳ ಅರಸನನ್ನು ಗೆದ್ದ ಸಿಂದವಂಶದ ರಾಜನಾದ ಪೆರ್ಮಾಡಿಯೂ ಹೀಗೆ ಅನೇಕರು ಬಿಜ್ಜಳನಿಗೆ ಅಧೀನರಾಗಿ ತಮ್ಮ ತಮ್ಮ ಭಾಗಗಳಲ್ಲಿ ರಾಜ್ಯವಾಳುತ್ತಿದ್ದರು. ಇವರೆಲ್ಲರೂ ಬಹು ಸಾಹಸಿಗಳು ಮತ್ತು ಸಮರ್ಥರು. ಬಸವೇಶ್ವರನು ಯುದ್ಧಕಲೆಯನ್ನು ಅರಿತವನಾಗದೇ ಇದ್ದಿದ್ದರೆ ಇವರೆಲ್ಲರ ಮೇಲೆ ಅವನು ತನ್ನ ವರ್ಚಸ್ಸನ್ನು ಉಂಟುಮಾಡುವದು ದುಸ್ತರವೇ ಸರಿ. ಅದ್ದರಿಂದ ವೀರಶೈವ ಗ್ರಂಥಗಳು ಹೇಳುವಂತೆ ಬಸವೇಶ್ವರನು ದಂಡಾಧಿಪತಿಯಾಗಿ ಬಿಜ್ಜಳನಲ್ಲಿ ಕಾರ್ಯಮಾಡಿರಬಹುದು. ಇದರಲ್ಲಿ ನಿಜತ್ವವಿರಬೇಕೆಂದು ನಮಗೆ ತೋರುತ್ತದೆ ಯಾಕಂದರೆ ಬಸವೇಶ್ವರನಿಗೆ ಯುದ್ಧಕಲೆಯ ಜ್ಞಾನವಿತ್ತೆಂಬುದಕ್ಕೆ ಅವನ ವಚನಗಳಲ್ಲಿ ಅನೇಕ ಆಧಾರಗಳು ನಮಗೆ ದೊರೆಯುತ್ತವೆ. ಅವುಗಳನ್ನು ನಾವು ಮುಂದಿನ ಲೇಖಗಳಲ್ಲಿ ಸವಿಸ್ತಾರವಾಗಿ ನಿರೂಪಿಸುವೆವು.

ಬಸವೇಶ್ವರನು ಈ ಅವಧಿಯಲ್ಲಿ ಬಹುಜನ ಸಮಾಜದ ಬೆಂಬಲವನ್ನು ಚನ್ನಾಗಿ ಹೊಂದಿದವನಾಗಿರಬೇಕು. ಅವನು ಬಿಜ್ಜಳನ ಆಡಳಿತೆಯನ್ನು ಸೇರಿದ ಬಳಿಕ ಅವನು ಯುದ್ಧಕಲೆಯ ಜ್ಞಾನವನ್ನು ಸಹ ಹೊಂದಿ ಆಗ ಕಲ್ಯಾಣವನ್ನು ಆಳುತ್ತಿದ್ದ ಚಾಲುಕ್ಯ ರಾಜನಾದ ಸೋಮೇಶ್ವರನನ್ನು ಪದಚ್ಯುತ ಮಾಡುವ ಕಾರ್ಯದಲ್ಲಿ ಬಿಜ್ಜಳನಿಗೆ

ವಿಶೇಷ ಸಹಾಯ ಮಾಡಿರಬೇಕು. ಹೀಗೆ ಬಿಜ್ಜಳನು ಬಸವೇಶ್ವರ ಸಹಾಯದಿಂದ ಚಕ್ರಾಧಿಪತ್ಯವನ್ನು ಹೊಂದಿದವನಾಗಿ ಅವನಲ್ಲಿ ಪ್ರೀತಿಯನ್ನು ವಹಿಸಿ ಅವನಿಗೆ ಮಂತ್ರಿಪದವನ್ನು ಕೊಟ್ಟಿರಬೇಕು. ಈ ಪ್ರಕಾರ ಘಟನೆಗಳು ನಡೆದಿರಬೇಕೆಂದು ನಮಗೆ ತೋರುತ್ತದೆ.

(೪) ಮಂತ್ರಿಪದಃ— ಬಸವೇಶ್ವರನು ದಂಡಾಧಿಪತಿಯಾದ ಬಳಿಕ ಮಂತ್ರಿಯ ಸ್ಥಾನವನ್ನು ಹೊಂದಿರಬೇಕು. ಬಸವೇಶ್ವರನು ಬಿಜ್ಜಳನಲ್ಲಿ ಮಂತ್ರಿಯಾಗಿದ್ದದ್ದು ೧೧೬೨ರಿಂದ ೧೧೬೮ರ ವರೆಗೆ. ಈ ಕಾಲದಲ್ಲಿ ಬಿಜ್ಜಳನು ಕಲ್ಯಾಣದಲ್ಲಿ ಚಕ್ರವರ್ತಿಯಾಗಿ ರಾಜ್ಯವಾಳಿದನೆಂದು ಶಿಲಾಶಾಸನಗಳಿಂದ ಕಂಡುಬರುತ್ತದೆ. ಈ ವಿಷಯವಾಗಿಯೂ ಬಸವೇಶ್ವರನ ವಚನಗಳಲ್ಲಿ ಕೆಲವು ಆಧಾರಗಳಿವೆ. ಅವುಗಳನ್ನು ನಾವು ಮುಂದೆ ವಿವರಿಸುವೆವು.

ಈ ಪ್ರಕಾರ ಬಸವೇಶ್ವರನ ಜೀವಿತದಲ್ಲಿ ಅನೇಕ ಮಹತ್ವದ ಸಂಗತಿಗಳು ಸಂಭವಿಸಿರುತ್ತವೆ. ಅವನು ಆರಂಭದಲ್ಲಿ ಸಾಮಾನ್ಯ ಬೋಧಕನಾಗಿದ್ದರೂ ಕೂಡ ಅವನು ಅತ್ಯಂತ ಉಜ್ವಲವೃತ್ತಿಯವನೂ, ಮೇಧಾವಿಯೂ, ವಿದ್ವಾಂಸನೂ, ಆಗಿ ಜನಸಮುದಾಯದಲ್ಲಿ ಮೊದಲಿನಿಂದಲೂ ಬೆರೆತುಕೊಂಡು ಕರ್ನಾಟಕ ದೇಶದಲ್ಲಿ ಒಂದು ಮಹತ್ವದ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನು ಮಾಡಿದವನಾಗಿದ್ದಾನೆ. ಅವನ ಕೃತಿಗಳು ಬಹುಮುಖವಾದವುಗಳು. ಆದರೂ ಅವುಗಳಲ್ಲೆಲ್ಲ ಅವನು ತನ್ನ ವಿಲಕ್ಷಣ ಕರ್ತೃತ್ವಶಕ್ತಿಯನ್ನು ತೋರಿಸಿದ್ದಾನೆ. ಬಹುಜನ ಸಮಾಜದ ಅಂತಃಕರಣವನ್ನು ತನ್ನ ಸರಳಸ್ವಭಾವದಿಂದ ತನ್ನ ಕಡೆಗೆ ಸೆಳೆದು ಸಮಾಜವನ್ನು ಶ್ರೇಷ್ಠತರಗತಿಗೆ ಎಳೆದಿದ್ದಾನೆ. ರಾಜಕಾರಣಚತುರನಾಗಿ ಅರಸನನ್ನೂ ಬಲಾಢ್ಯರಾದ ಮಂಡಲಾಧೀಶ್ವರರನ್ನೂ ಶಕ್ಯವಿದ್ದಷ್ಟುಮಟ್ಟಿಗೆ ತನ್ನ ಕಾರ್ಯದಲ್ಲಿ ವಿರೋಧಿಗಳನ್ನಾಗಿ ಮಾಡಿಕೊಳ್ಳದೆ ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡಿದ್ದಾನೆ. ಈ ತೆರದ ವ್ಯಕ್ತಿಯು ಹಿಂದುಸ್ತಾನ ದೇಶದಲ್ಲಿ ಆಗಿಹೋದ ಧಾರ್ಮಿಕ ಪುರುಷರಲ್ಲಿ ಬಹು ವಿರಳರೆಂದು ಹೇಳಲು ಅವ ಪ್ರತ್ಯವಾಯವಿರುವದಿಲ್ಲ.

[ಮುಂದುವರಿಯುವದು ]

# ಶಿವಶರಣರ ಜೀವನ.

(ಲೇಖಕ:— ಶಿವಮೂರ್ತಿ)

ಶಿವಶರಣರ ಜೀವನವು ಜಗತ್ತಿಗೆ ಒಳ್ಳೆ ಮಾರ್ಗದರ್ಶಿಯಾಗಿದೆ. ಮನುಷ್ಯರಾಗಿ ಹುಟ್ಟಿ ದೇವರಾಗಿ ಬಾಳುವದೇ ಶರಣರ ಮಾರ್ಗವು. ಮನುಷ್ಯರು ಮನುಷ್ಯರಂತೆ ಆಚರಿಸಿದರೆ ಅಷ್ಟು ಮಹತ್ವ ಬರಲಾರದು. ಮನುಷ್ಯತ್ವದಲ್ಲಿ ದೇವತ್ವವನ್ನು ಕಂಡುಕೊಳ್ಳುವದೇ ಜೀವನದ ಅಂತಿಮ ಧ್ಯೇಯವು. ಜಗತ್ತಿನಲ್ಲಿ ಎಷ್ಟೋ ಜನಗಳು ರಾಕ್ಷಸೀವೃತ್ತಿಯಿಂದ ಇಲ್ಲವೆ ಪಶುವೃತ್ತಿಯಿಂದ ಜೀವಿಸುವದುಂಟು. ಅವರು ಲೋಕಕಂಟಕರು, ಪಾಪಿಗಳು, ಕ್ರೂರಕರ್ಮಿಗಳು, ತಾಮಸಗುಣಿಗಳು. ಅಂಥವರು ಇಹ ಲೋಕಕ್ಕೂ ದೂರ, ಪರಲೋಕಕ್ಕೂ ದೂರ. ಕೆಲವರು ಮನುಷ್ಯರಂತೆ ಆಚರಿಸಿದರೂ ಅವರಲ್ಲಿ ಕುಲಮದ, ಅಧಿಕಾರ ಮದ, ಸಂಪತ್ತಿನ ಮದ, ವಿಷಯ ವ್ಯಾಮೋಹ, ಸ್ವಾರ್ಥಪರಾಯಣತೆ ಮೊದಲಾದ ರಜೋ ಗುಣಗಳು ನೆಲಿಸಿರುವದರಿಂದ ಅಂಥವರು ಐಹಿಕ ಸುಖವನ್ನು ಯಥೇಷ್ಟವಾಗಿ ಭೋಗಿಸಿದರೂ ಪಾರಲೌಕಿಕ ಸುಖಕ್ಕೆ ಎರವಾಗುತ್ತಾರೆ. ಆದರೆ ಕೆಲವರು ಸತ್ವಗುಣಶಾಲಿಗಳಾಗಿ ತಮಗೆ ಕಷ್ಟಗಳೊದಗಿದರೂ ಜಗತ್ತಿಗೆ ಹಿತವಾಗಲೆಂದು ಬಯಸುವರು. ಲೋಕಸಂಗ್ರಹಕ್ಕಾಗಿ ತಮ್ಮ ತನು-ಮನ-ಧನಗಳನ್ನು ಸೂರೆಮಾಡುವರು. ತಮ್ಮ ಉದ್ಧಾರವನ್ನಷ್ಟೇ ಮಾಡಿಕೊಳ್ಳದೆ ಸಮಾಜ, ರಾಷ್ಟ್ರ, ಜಗತ್ತುಗಳ ಕಲ್ಯಾಣವನ್ನೂ ಮಾಡಲೆಳಿಸುವರು. ಅಂಥವರು ಮಹಾತ್ಮರು, ಮಾನವಪ್ರಪಂಚದ ದೇವರು. ಶಿವಶರಣರು ಇಂಥ ಮಾದರಿಯವರು.

ಶಿವಶರಣರಿಗೆ ಬಡತನವೇ ಭಾಗ್ಯ. ಕಾಯಕವೇ ಕೈಲಾಸ. ಸಾದಾ ಸರಳ ಜೀವನವೇ ಸೌಖ್ಯದಾಗರ. ಉನ್ನತವಾದ ಆಚಾರವಿಚಾರಗಳೇ ಅವರ ಇಡಿಗಂಟು. ಲೋಕದಲ್ಲಿ ಕೆಲವರು ಬಡತನದ ಭೂತವನ್ನು ಶಪಿಸುವರು. ಹೊಟ್ಟೆಬಟ್ಟೆಗಿಲ್ಲದಿದ್ದರೆ ತಮ್ಮ ಪೂರ್ವಜನ್ಮದ ಪಾಪವೆಂದು ನೊಂದುಕೊಳ್ಳುವರು. ತಮ್ಮ ಸೊತ್ತನ್ನು ಹೀರುವ ಬಾಂಡವಳಶಾಹಿಯ ಹೆಸರಿಗೆ ಕಲ್ಲು ಒಡೆಯುವರು. ಆದರೆ ಶಿವಶರಣರು ಇಂಥ ಸಾಮಾನ್ಯ

ಬಡವರಲ್ಲ ಅವರ ಬಡತನವು ಭಾಗ್ಯದಧಿದೇವತೆಯು. ಎಷ್ಟೋ ಶರಣರು
ಹಣಜಿಯ ರಸವನ್ನು ಸಂತೋಷದಿಂದ ಕುಡಿದು ಜೀವಿಸಿದ್ದಾರೆ. ತರ
ಗೆಲೆಗಳನ್ನು ತಿಂದು ಸುಖವಾಗಿ ಬಾಳಿದ್ದಾರೆ. ಕಾಡಸೊಪ್ಪನ್ನು ಬೇಯಿಸಿ
ಶಾಂತಮನಸ್ಸಿನಿಂದ ಊಟಮಾಡಿದ್ದಾರೆ. ತಮ್ಮ ಬಡತನಕ್ಕಾಗಿ ಅವರು
ಶಿವನನ್ನು ಶಪಿಸಿಲ್ಲ. ಶಿವಂತರನ್ನು ಜರೆದಿಲ್ಲ ಆ ಬಗ್ಗೆ ಚಳವಳಿಯ
ನ್ನೆಬ್ಬಿಸಿಲ್ಲ. ಶಿವನಾಮಸ್ಮರಣೆ, ಶಿವಧ್ಯಾನಗಳೇ ಅವಂಗೆ ಮಿಷ್ಟಾನ್ನ
ಭೋಜನ. ಕತುಸೊಕ್ಕಿನ, ಒಣಬಡಿವಾರದ ಸಿರಿವಂತಿಕೆಗೆ ದೇವರು
ದೂರವಾದಾನೆಂದು ಹೆದರಿ "ಬಡತನವ ಕೊಡು ಶಿವನೆ, ಒಡೆತನವ
ನಾನೊಲ್ಲೆ" ಎಂದು ಶರಣರು ಹಾಡಿಕೊಂಡಿದ್ದಾರೆ.

ಶರಣರು ತಮ್ಮ ಹೊಟ್ಟೆಯ ಪಾಡಿಗಾಗಿ ಬಿಕ್ಕೆ ಬೇಡುವವರಲ್ಲ.
ಹಂಗಿನ ಅನ್ನವನ್ನು ತಿಂದು ಜೀವಿಸುವ ಲಜ್ಜೆಗೇಡಿಗಳಲ್ಲ. ಹೆರವರ
ಬಾಗಿಲ ಕಾಯ್ದು ನೌಕರಿಗಾಗಿ ಆಶೆಮಾಡುವ ಕ್ಷುದ್ರಜೀವಿಗಳಲ್ಲ.
ಅಧಿಕಾರ, ದೊಡ್ಡಸ್ತನಗಳ ಬೆನ್ನು ಹತ್ತಿ ತಿರುಗುವ ಪಾಮರರಲ್ಲ. ಹೊಲ
ಮನೆ, ಸಂಪತ್ತು ಸೌಭಾಗ್ಯಕ್ಕಾಗಿ ಹಂಬಲಿಸುವ ಆಶೆಬುರುಕರಲ್ಲ. ಅವೆ
ಲ್ಲವು ತಾವಾಗಿಯೇ ದೊರೆತರೆ ಶಿವನ ಅನುಗ್ರಹವೆನ್ನುವರು. ಸಿಗದಿ
ದ್ದರೆ ಒಂದಿಲ್ಲೊಂದು ಕಾಯಕವನ್ನು ಮಾಡಿ ಜೀವನಯಾತ್ರೆಯನ್ನು
ಸಾಗಿಸುವರು. ಕಾಯಕದಲ್ಲಿ ಕೀಳು-ಮೇಲುಗಳನ್ನು ಭಾವಿಸರು. ಶರ
ರಿಗೆ ಸುಂದರವಾದ ಅರಮನೆಗಳು ಬೇಡ; ಸಣ್ಣ ಮಾಟದ ಗುಡಿಸ
ಲುಗಳಿದ್ದರೆ ಸಾಕು. ಊಟ-ಉಡಿಗೆಗಳ ಆಡಂಬರ ಬೇಡ; ಅವರಿಗೆ
"ಅಂಬಲಿ ಕಂಬಳಿ ರಾಸ್ತು ಮಿಕ್ಕಿದ್ದೆಲ್ಲ ಜಾಸ್ತು" ಅವರ ಜೀವನವು ಇಷ್ಟು
ಸರಳವಾಗಿದ್ದರೂ ಅವರ ವಿಚಾರಗಳು ಮಾತ್ರ ಬಹು ಉದಾತ್ತವಾ
ದವುಗಳು. ಅವರಿಗೆ ಐಹಿಕ ಪಾರಮಾರ್ಥಗಳೆಂಬ ಎರಡು ಭೇದಗ
ಳಿಲ್ಲ. ಐಹಿಕವನ್ನೇ ಪಾರಮಾರ್ಥವನ್ನಾಗಿ ಮಾಡುವ ಕುಶಲಮತಿಗ
ಳವರು. ಅವರಿಗೆ ಮೃತ್ಯುಲೋಕವೇ ಸತ್ಯಲೋಕ. ಅವರ ಪ್ರಪಂಚ
ದಲ್ಲಿಯೇ ಪಾರಮಾರ್ಥವುಂಟು.

ಶಿವಶರಣರು ಏಕಾಂತವಾಸಿಗಳಲ್ಲ; ಸಮಾಜಪ್ರಾಣಿಗಳು. ಎಷ್ಟೋ
ಜನಗಳು ಪ್ರಪಂಚದಲ್ಲಿ ಸುಖವಿಲ್ಲೆಂದು ಅದನ್ನು ತ್ಯಾಗಮಾಡಿ ಅರ
ಣ್ಯದ ಏಕಾಂತವಾಸದಲ್ಲಿದ್ದು ಸುಖಶಾಂತಿಯನ್ನು ಪಡೆಯುತ್ತಿದ್ದಾರೆ.
ಅವರು ಹೇಡಿಗಳು. ಸಂಸಾರಕ್ಕೆ ಹೆದರಿ ಓಡಿಹೋಗುವಂಥವರು. ಶರ

ಣರು ಧೀರರು. ಪ್ರಪಂಚದಲ್ಲಿದ್ದುಕೊಂಡೇ ಯೋಗಿಗಳು ಪಡೆಯುವ ಸುಖಶಾಂತಿಯನ್ನು ತಾವು ಪಡೆಯುವರು. ಅವರಿಗೆ ಏಕಾಂತವಾಸವು ರುಚಿಸದು. ಅವರಿಗೆ ಸತ್ಸಂಗವು ಬೇಕು. ಶರಣರ ಬಳಗವು ಬೇಕು. ಅವರು ಏಕಾಂತದಲ್ಲಿ ಲಿಂಗಪೂಜೆ ಅನುಷ್ಠಾನಗಳನ್ನು ಮಾಡಿದರೂ ಬಹಿರಂಗದಲ್ಲಿ ಪರಸ್ಪರರು ಕೂಡಿಕೊಂಡು ಜಗದುದ್ಧಾರದ ಮತ್ತು ಜೀವಪರಮರ ದಿವ್ಯತತ್ತ್ವಗಳ ಬಗ್ಗೆ ಚರ್ಚೆ ಮಾಡುವರು. ಸಮಾಜದಲ್ಲಿ ಸದ್ಭಕ್ತಿ ಸದಾಚಾರಗಳು ನೆಲೆಗೊಳ್ಳುವಂತೆ ವಿಶ್ವಪ್ರಯತ್ನ ಮಾಡುವರು. ದುರ್ಗುಣ ದುರಾಚಾರಗಳನ್ನು ದೂರೀಕರಿಸುವರು. ಪತಿತರಾದ ಪ್ರಾಪಂಚಿಕ ಜೀವಿಗಳ ತೊಳಲಾಟವನ್ನು ನೀಗಿ ಅವರಿಗೆ ಸುಖಶಾಂತಿಯ ನೆಲೆಯನ್ನು ತೋರಿಸುವರು. ತಮ್ಮವರ ತಪ್ಪುಗಳನ್ನು ಖಂಡಿಸುತ್ತಲೂ ತಮ್ಮ ತಪ್ಪುಗಳನ್ನು ಒಪ್ಪುತ್ತಲೂ ನಿರ್ಮಲಮನಸ್ಸಿಂದ ಪರಮಾರ್ಥಸಾಧನೆಯ ಸೋಪಾನವನ್ನೇರುತ್ತ ಹೋಗುವರು.

ಕೇವಲ ಓದುಬರಹ ಕಲಿತವರೇ ಸುಶಿಕ್ಷಿತರೂ ಒಳ್ಳೇ ನಾಗರಿಕರೂ ಎಂದು ಹೇಳಲಿಕ್ಕಾಗುವದಿಲ್ಲ. ಶಿವಶರಣರು ಅಕ್ಷರಜ್ಞರಲ್ಲ. ನಿರಕ್ಷರ ಕುಕ್ಷಿಗಳು. ವೇದಾಗಮ ಶಾಸ್ತ್ರಗಳನ್ನು ಕಲಿತ ಪಂಡಿತರಲ್ಲ. ಏನೂ ಅರಿಯದ ಅಪಂಡಿತರು. ಆದಾಗ್ಯೂ ಶರಣರು "ಕುರಿತೋದದೆ ಪರಿಣತಮತಿ"ಗಳಾಗಿದ್ದರು. ಶರಣರು ಪ್ರಪಂಚದಲ್ಲಿ ತೀರ ಸಾಮಾನ್ಯರಾದ ಜೀವಿಗಳು. ಅಗಸರು, ಕುಂಬಾರರು, ಬಡಿಗರು, ಹಡಪಿಗರು, ಢೋರರು, ಕಟ್ಟಿಗೆ ಮಾರುವವರು ಮೊದಲಾದ ಕುಲಹದಿನೆಂಟು ಜಾತಿಯ ಜನಸಾಮಾನ್ಯರು ದೊಡ್ಡ ಶಿವಶರಣರಾಗಿ ಹೋದರು. ಮನುಷ್ಯನು ದೊಡ್ಡವನಾಗಲಿಕ್ಕೆ ಸ್ಕೂಲ ಕಾಲೇಜಗಳು ಬೇಡ. ಅದಕ್ಕಾಗಿ ಸಾವಿರಾರು ರೂಪಾಯಿಗಳನ್ನು ವೆಚ್ಚ ಮಾಡುವದು ವ್ಯರ್ಥ. ಸಜ್ಜನರ ಸಹವಾಸದಿಂದ ಸದ್ಭಕ್ತಿ ಸುಜ್ಞಾನಗಳು ನಮಗೆ ದೊರೆತರೆ ಸಾಕು. ಅದರಿಂದ ನಮ್ಮ ಉದ್ಧಾರವು ಬೇಕಾದಷ್ಟು ಆಗುವದು. ನಮ್ಮ ಮಾನಸಿಕ ಶಕ್ತಿಗಳನ್ನು ಹರಣಮಾಡುವ ಶಿಕ್ಷಣದಿಂದೇನು ಪ್ರಯೋಜನ? ಬಸವ, ಚೆನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ದಿವ್ಯಜ್ಞಾನಿಗಳ ಸಂಸರ್ಗದಿಂದ ಆ ಜನಸಾಮಾನ್ಯರಲ್ಲಿಯೂ ಕೂಡ ಉದಾತ್ತ ತತ್ವಗಳು ಹರಡಿ ಅವರೂ ಸಹ ಪರುಷ ಸೋಂಕಿದ ಕಬ್ಬುಣದಂತೆ ಸುವರ್ಣಮಯರಾದರು. ಪತಿತ

ರನ್ನುದ್ಧಾರ ಮಾಡುವ ಶಕ್ತಿಯು ಕೂಡ ಅವರ ರಕ್ತನಾಳಲ್ಲಿ ಬೆರೆತು ಹೋಯಿತು. ಶಿವಾನುಭವ ಮಂಟಪದಲ್ಲಿ ನಿತ್ಯ ನಡೆಯುವ ಶಿವಗೋಷ್ಠಿಗಳನ್ನು ಕೇಳಿ ಕೇಳಿ ತಾವೂ ತನ್ಮಯರಾಗಿ ಪ್ರತಿವಚನಗಳನ್ನು ಸೃಷ್ಟಿಸಲು ಸಮರ್ಥರಾದರು ಅವರ ವಚನಗಳು ವ್ಯಾಕರಣ ದೃಷ್ಟಿಯಿಂದ ದೋಷಯುಕ್ತವಾಗಿದ್ದರೂ ಪರಿಶುದ್ಧವಾದ ಭಾವದಿಂದ ಹೊರಹೊಮ್ಮಿದ್ದರಿಂದ ಅವರ ವಾಣಿಯಲ್ಲಿ ಪ್ರಸಾದ, ಓಜಸ್ಸು, ಜೀವಕಳೆಗಳು ತುಂಬಿ ತುಳುಕುತ್ತಿವೆ. ಅಂತೆಯೇ ಶರಣರ ವಚನಗಳು ಋಷಿಗಳ ಉಪನಿಷದ್ವಾಕ್ಯಗಳನ್ನು ಮೀರಿಹೋಗಿರುತ್ತವೆಂದು ಸುಜ್ಞರು ಅಭಿಪ್ರಾಯಬಟ್ಟಿದ್ದಾರೆ. "ಶಿವಪಥವನರಿವೊಡೆ ಶರಣರ ಸಂಗವೇ ಮೊದಲು ಕೂಡಲ ಸಂಗಮದೇವಾ" ಎಂದು ಬಸವಣ್ಣನವರು ಹಾಡಿಕೊಂಡಿದ್ದಾರೆ. ಸತ್ಸಂಗತಿಯಲ್ಲಿಯೂ ಸತ್‌ಶ್ರವಣದಲ್ಲಿಯೂ ಎಂಥ ಅಗಾಧವಾದ ಶಕ್ತಿಯಿರುತ್ತದೆಂಬದನ್ನು ಶರಣರ ಜೀವನದಿಂದ ಕಂಡುಕೊಳ್ಳಬಹುದಾಗಿದೆ.

ಈಗಿನ ವೀರಶೈವರ ಜೀವನವು ಶರಣರ ಮಾರ್ಗದಿಂದ ಬಹು ಭಿನ್ನವಾಗಿದೆ. ನಮ್ಮಲ್ಲಿ ಸ್ವಾರ್ಥ, ಒಣಹೆಮ್ಮೆ, ಡಂಭಾಚಾರ, ಧರ್ಮಾಂಧತೆ, ಧರ್ಮಶೂನ್ಯತೆ ಮುಂತಾದ ದೋಷಗಳು ಮನೆ ಮಾಡಿಕೊಂಡಿವೆ. ಈ ದೋಷಗಳನ್ನು ಕಳೆದುಕೊಳ್ಳಬೇಕಾದರೆ ನಾವು ಶರಣರ ಮಾರ್ಗವನ್ನು ಅನುಸರಿಸಲೇ ಬೇಕು. ಇಲ್ಲದಿದ್ದರೆ ನಮ್ಮ ಸಂಸ್ಕೃತಿಯು ನಮ್ಮ ಪಾಲಿಗೆ ಎರವಾಗುತ್ತದೆ. ಆಧುನಿಕ ಜಗತ್ತಿನ ಪ್ರವಾಹಕ್ಕೆ ಸಿಲುಕಿದರೆ ನಾವು ಎತ್ತೋ ಗತಿಗಾಣದೆ ಹೋಗಿಬಿಡುವೆವು. ಈಗ ನಾವು ಆಧುನಿಕ ಜಗತ್ತಿನ ಐಹಿಕ ಭೋಗದಾಶೆಗೆ ಶಿಲುಕಿ ಬಹು ಗಾಸಿಯಾಗಿದ್ದೇವೆ. ನಮ್ಮ ಹೃದಯಕ್ಕೆ ಆಧ್ಯಾತ್ಮಿಕ ಶಾಂತಿಯಿಲ್ಲ. ಆ ಶಾಂತಿಯನ್ನು ಪಡೆಯಲಿಕ್ಕೆ ನಾವು ಆ ಶರಣರ ವಚನಗಳಿಗೆ ಮರೆಹೋಗಲೇ ಬೇಕು. ಅಲ್ಲಲ್ಲಿ ಶಿವಾನುಭವ ಸಂಘಗಳು ಹೊರಟು ಆ ಮುಖಾಂತರ ಜನತೆಯಲ್ಲಿ ವಚನಗಳ ಪ್ರಸಾರವಾಗಬೇಕು. ಮನೆಮನೆಯಲ್ಲಿಯೂ ಕೂಡ ಸಣ್ಣದೊಡ್ಡವರ ಬಾಯಿಯಲ್ಲಿ ಶರಣರ ವಚನಗಳು ನಲಿದಾಡಬೇಕು. ಅಂದರೆ ನಮ್ಮ ಸಂಸ್ಕೃತಿ ಸುಧಾರಣೆಗಳಿಗೆ ಪ್ರಾರಂಭದ ಪಾಠವಾದಂತಾಗುವದು. ನಮ್ಮಲ್ಲಿ ಸುಖಶಾಂತಿಗಳು ಲಭಿಸುವವು. ಎಲ್ಲಿಯ ವರೆಗೆ ನಾವು ಆಧುನಿಕ ಜಗತ್ತಿನ ಬೆನ್ನುಹತ್ತುವೆವೋ ಅಲ್ಲಿಯ ವರೆಗೆ ನಮಗೆ ಅಶಾಂತತೆ, ಆತುರತೆ, ಭಯಭೀತಿಗಳು ತಪ್ಪಿದ್ದಲ್ಲ.

ನಾವು ಶರಣರ ವಚನಗಳನ್ನಾಶ್ರಯಿಸುವದೊಂದೇ ತಡ ನಮ್ಮ ಆಧ್ಯಾತ್ಮಿಕ ಬೆಳವಣಿಗೆಯು ಹೇಗೆ ಸಾಗುತ್ತದೆಂಬದನ್ನು ನಾವು ಸ್ವಲ್ಪ ದಿವಸಗಳಲ್ಲಿಯೇ ಕಂಡುಕೊಳ್ಳಬಹುದು. ಶರಣರ ಜೀವನವೇ ನಮಗೆ ಆದರ್ಶ.

---

## ಶಿವಾನುಭವ.

(ಲೇಖಕ:- ವಿದ್ವಾನ್ ಸಿದ್ಧವೀರಶಾಸ್ತ್ರೀ ಕಾವ್ಯತೀರ್ಥ ಹಿರೇವಡ್ಡಟ್ಟಿ
ಅಧ್ಯಾಪಕ-ಶಂಕರ ಸಂಸ್ಕೃತ ಕಾಲೇಜ ಯಾದಗಿರಿ.)

ಶಿವ ಅಂದರೆ ಮಂಗಲ, ಅನುಭವವೆಂದರೆ ಅನುಭವಿಸು, ಶಿವಾನುಭವ ಅಂದರೆ ಮಂಗಲವನ್ನು ಪಡೆ ಎಂದು ಒಂದು ಅರ್ಥ. ಮಂಗಳಮಯನಾದ ಪರಮಾತ್ಮನೊಡನೆ ವಿನೋದಪಡು ಎಂಬುವದು ಮತ್ತೊಂದರ್ಥ— "ಸರ್ವಂ ಶಿವಮಯಂ" "ಶಿವಮಯಮಿದಂಜಗತ್" ಎಂದರೆ ಶಿವನು ಸರ್ವವ್ಯಾಪಿಯು. ಸಕಲ ಚರಾಚರ ವಸ್ತುಗಳ ಸಂಗಡ ಆನಂದ ಪಡುವದೆ ಶಿವಾನುಭವವೆಂಬುವದು ಇನ್ನೊಂದರ್ಥ. ಈ ಶಿವಾನುಭವದಲ್ಲಿ "ತತ್ವಮಸಿ" ಎಂಬುವ ವಾಕ್ಯದ ಗೂಢಾರ್ಥ ಅಡಕವಾಗಿದೆ. ಹೇಗಂದರೆ ತತ್— ಪ್ರಸಿದ್ಧವಾದ ಇಷ್ಟಲಿಂಗವೇತ್ವಂ=ನೀನು ಅಸಿ=ಇರುತ್ತಿಯೆಂದು ಶಕ್ತಿವಿಶಿಷ್ಟಾದ್ವೈತಿಗಳ ಸಿದ್ಧಾಂತವಿದೆ. ಶಿಕ್ತಿಶ್ಚ-ಶಕ್ತಿಶ್ಚ ಶಕ್ತೀ ಶಕ್ತಿಭ್ಯಾಂರ್ವ ವಿಶಿಷ್ಟೌಶಕ್ತಿ ವಿಶಿಷ್ಟೌ ಶಕ್ತಿವಿಶಿಷ್ಟಯೋಃ ಅದ್ವೈತಂ ಶಕ್ತಿ ವಿಶಿಷ್ಟಾದ್ವೈತಂ ಅಂತೆಯೇ ಶಿವಾಚ-ಶಿವಶ್ಚ ಶಿವೌ ಅನುಸೃತ್ಯಭವತೀತಿ ಅನುಭವಃ ಶಿವಯೋಃ ಅನುಭವಃ ಶಿವಾನುಭವಃ ಎಂದು ವಿದಿತವಾಗುತ್ತದೆ. ಈ ಪ್ರಕಾರ ಶಿವನ ಆನಂದವನ್ನು ಹೊಂದಿದವರಿಗೆ ಶಿವಾನುಭಾವಿಯೆಂಬುವ ಉಪನಾಮವು ಪ್ರಾಪ್ತವಾಗುತ್ತದೆ.

ಇನ್ನು ಮೇಲೆ ಇದರ ರಹಸ್ಯದ ಬಗ್ಗೆ ವಿಚಾರಿಸುವಾ ಭವವೆಂಬುವದಕ್ಕೆ ಸಂಸಾರ ಅರ್ಥಾತ್ ಜಗತ್ತು ಎಂದು ಅರ್ಥವಾಗುತ್ತದೆ. ಸಕಲ ಜಗತ್ತು ಶಿವಸ್ವರೂಪವಾದದ್ದೆಂದು ನಮ್ಮ ಶರಣರ ಅನುಭವದ ನುಡಿಗಳಿಂದ ತಿಳಿಯುತ್ತದೆ.

"ವನವೆಲ್ಲಾ ನೀನೇ ದೇವಾ, ವನದೊಳಗಿರುವ ತರುವೃಗಗಳೆಲ್ಲ ನೀನೇ ದೇವಾ, ವಿಶ್ವತೋ ಚಕ್ಷು ನೀನೇ ದೇವಾ, ಎನ್ನ ದೇವ ಚನ್ನ ಮಲ್ಲಿಕಾರ್ಜುನಾ ಸರ್ವತೋ ಮುಖವಾಗಿ ಎನಗೆ ಮುಖದೋರು." ಎಂದು ಅಕ್ಕನ ವಾಣಿಯಿಂದ ಸ್ಪಷ್ಟವಾಗುತ್ತದೆ.

ಆದ್ದರಿಂದ ನಾವು ಸಮಸ್ತ ಪ್ರಾಣಿಗಳಲ್ಲಿ ದಯಾಪರರಾಗಿ ಶಕ್ಯ ವಿದ್ದಷ್ಟುಮಟ್ಟಿಗೆ ತನುಮನಧನಗಳಿಂದ ಅವುಗಳ ದುಃಖಗಳಲ್ಲಿ ಭಾಗಿ ಗಳಾಗಿ ಪರಿಹರಿಸಿದನಂತರ ಅವುಗಳ ಆನಂದದಲ್ಲಿ ಭಾಗಿಗಳಾಗಬೇಕು. ಹೇಗೆಂದರೆ ಯಾವದಾದರೊಂದು ಸ್ಥಳಕ್ಕೆ ಹೋಗುವ ಕಾಲಕ್ಕೆ ದಾರಿ ಯಲ್ಲಿ ಒಂದು ಕುದುರೆಯು ನೀರಡಿಸಿ ನೀರು ಕುಡಿಯಲಿಕ್ಕೆಂದು ಒಂದು ಕೆರೆಯಲ್ಲಿ ಹೋಗಿ ಕೆಸರಿನಲ್ಲಿ ಶಿಕ್ಕು ಸಂಕಟಪಡುತ್ತಿದ್ದುದನ್ನು ನಾವು ಅದರ ಕಷ್ಟವನ್ನು ಪರಿಹರಿಸಿ ರಕ್ಷಿಸಬೇಕು. ಹಸಿದು ಬಂದವರಿಗೆ ಅನ್ನವನ್ನು ಕೊಡಬೇಕು. ಎಲ್ಲ ರೀತಿಯಿಂದಲೂ ನಾವು ಅನ್ಯ ಪ್ರಾಣಿ ಗಳಿಗೆ ಹಿಂಸೆಯಾಗದಂತೆ ವರ್ತಿಸಬೇಕು. ಇದನ್ನೇ ಶರಣರು ತಮ್ಮ ವಚನಗಳಿಂದ ಉದಾಹರಿಸಿದ್ದಾರೆ.

"ನುಡಿವಲ್ಲಿ ಕಿಂಕರತ್ವವನರಿದು ಕರವ ಬೀಸುವಲ್ಲಿ ತುಷಾರ ಕೀಟ ವನರಿದು. ಅಡಿ ಇಡುವಲ್ಲಿ ಪೊಡವಿಯಲ್ಲಿ ಜೀವನ ಚೇತನವರಿದು. ಮತ್ತೆ ಗಿಡವ ಹಿಡಿವಲ್ಲಿ ಮುತ್ತೊಂದು ಒಡಗೂಡುವಲ್ಲಿ ಒಂದುಗೂಡಿ ಬಿಡುವಲ್ಲಿ ಸರ್ವ ದಯಕ್ಕೆ ಪುದಿಮುಚ್ಚವಿಲ್ಲದಿರಬೇಕು. ಇಂತೀ ಸಡಗ ರದ ಚಿತ್ತದ ಸಕಳೇಶ್ವರ ಲಿಂಗದೇವರನೊಡಗೂಡುವ ಭಕ್ತಿ"

ಅಂದರೆ ಪ್ರಪಂಚದಲ್ಲಿ ಒಬ್ಬರ ಕೂಡ ವ್ಯವಹಾರ ಮಾಡುವಾಗ್ಗೆ ಯಾವಾಗಲೂ ಅನ್ಯರಿಗೆ ಹಿಂಸೆಯಾಗಬಾರದೆಂದು ಸ್ವಾಮಿಭೃತ್ಯರಂತೆ ಕಿಂಕರತ್ವದಿಂದ ಮಾತನಾಡಬೇಕು. ಮತ್ತು ಕುಳಿತಾಗ ಅಥವಾ ಹೋಗು ವಾಗ ಕೈಯನ್ನು ಬೀಸಬೇಕಾದರೆ ಸೊಳ್ಳೆ ನೊಣ ಮೊದಲಾದ ಪ್ರಾಣಿಗ ಳಿಗೆ ನೋವಾಗಬಾರದು. ಹೋಗುವಾಗ ಅಡಿ ಇಡುವಲ್ಲಿ ಇರುವೆ ಮೊದ ಲಾದ ಸಣ್ಣ ಪ್ರಾಣಿಗಳ ಹಿಂಸೆಯಾಗದಂತೆ ಎಚ್ಚರಿಸಬೇಕು. ಯಾವದಾದ ರೊಂದು ಉದ್ದೇಶದಿಂದ ಗಿಡವೇರಿದಲ್ಲಿ ಗಿಡಕ್ಕು ಗಿಡದಲ್ಲಿರತಕ್ಕ ಪ್ರಾಣಿಗ ಳಿಗೂ ಧಕ್ಕೆಯಾಗಬಾರದು. ಪತ್ರಿಪುಷ್ಪಗಳನ್ನು ಕೊಯ್ಯುವಾಗ್ಗೆ ಅಲ್ಲಿರತಕ್ಕ ಸಣ್ಣ ಸಣ್ಣ ಕೀಟಗಳಿಗೆ ಹಿಂಸೆಯಾಗಬಾರದು. ಅಂತೆಯೇ ನಮ್ಮ ಪುರಾ

ತನರೂ, ಶರಣರೂ ಗಿಡಗಳನ್ನು ಹತ್ತದೆ ಬಿದ್ದ ಪತ್ರಿಗಳನ್ನು ಪುಷ್ಪಗಳನ್ನೂ ಫಲಗಳನ್ನೂ ತರುತ್ತಿದ್ದರು ಅಂದರೆ ಯಾವ ರೀತಿಯಿಂದಲೂ ಅನ್ಯರಿಗೆ ದುಃಖವಾಗದಂತೆ ವರ್ತಿಸಬೇಕು ಇದೂ ಮುಖ್ಯ ಕರ್ತವ್ಯವಿರುತ್ತದೆ. ಈ ಪ್ರಕಾರ ನಡೆಯುದವರಿಗೆ ನಮ್ಮ ಶರಣರು ಚನ್ನಾಗಿ ಟೀಕಿಸಿದ್ದಾರೆ.

"ಜಾಲಗಾರನೊಬ್ಬ ಜಾಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿದಾಡುವ ತನ್ನ ಮನೆಯಲ್ಲೊಂದು ಶಿಶು ಸತ್ತರೆ ಅದಕೆ ಮರಗುವಂತೆ ಅವಕೇಕೆ ಮರುಗನು? ಇದು ಕಾರಣ ಚನ್ನ ಮಲ್ಲಿಕಾರ್ಜುನಯ್ಯನ ಭಕ್ತನಾಗಿದ್ದು ಜೀವ ಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯಾ."

"ಜನಮೆಚ್ಚು ಶುದ್ಧನಲ್ಲದೆ ಮನಮೆಚ್ಚು ಶುದ್ಧನಲ್ಲವಯ್ಯಾ ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯಾ. ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯಾ. ಧನದೊರಕದೆ ನಿಸ್ಪೃಹನಲ್ಲದೆ ಧನದೊರಕಿನಿಸ್ಪೃಹನಲ್ಲವಯ್ಯಾ ಏಕಾಂತದ್ರೋಹಿ, ಗುಪ್ತಘಾತಕಿ ಯುಕ್ತಿಶೂನ್ಯರಿಗೆ ಸಕಳೇಶ್ವರದೇವ ಒಲಿ, ಒಲಿ, ಎಂದರೆ ಎಂತೊಲಿವನಯ್ಯಾ."

ಆದ್ದರಿಂದ ಶಿವಾನುಭಾವಿಗಳಾಗಬೇಕಾದರೆ ಈ ಪ್ರಪಂಚದಲ್ಲಿ ಶಿವನನ್ನು ಕಾಣುವದು ದುರ್ಲಭವಲ್ಲ. ಅವನು ಕ್ಷಣಕ್ಷಣಕ್ಕೆ ನಮ್ಮೆದುರಿಗೆ ಬರುವನು. ಇದಕ್ಕಾಗಿ ಹಿಂದಿಯ ಒಬ್ಬ ಕವಿಯು ಹೀಗೆ ಹೇಳಿದ್ದಾನೆ.

ದೀನ ದ್ವಗೊಸೆ ನಿಕಲ ಪಡಾತೂ
ಬಡಾಸರಸ ಥಾ ವಿಕಲ ಪಡಾತೂ
ಗಲಿತ ಅಂಗ ದರ್ಗಂಧ ಸನಾ ತೂ
ಆಯಾ ವ್ಯಾಕುಲ ವ್ಯಥಿತ ಬನಾ ತೂ
ಆರ್ಥಗಿರಾ ಕಾನೋಮೆ ಭಾಯಿ
ವಹರಿಧೀತೇರೀ ಆಹಟಲಾಯಿ
ಪೀಡಿತೊಂಕೊ ನಿಸ್ವಾಸ ಅರೀ ಕಿ
ವ್ಯೈಕ್ಯಾ ಜಾನುಕರ ಥೆ ತೆರೆ!
ಮುರ್ಝಪರಕಿತನಾಮುದಥಾ ಭಾಯಾ ಬಾರಬಾರ ತೂ ಆಯಾ.

ಅಂದರೆ ಎಲೋ ದೇವರೇ ನೀನು ದೀನರ ಅವಸ್ಥೆಯಿಂದಲೂ, ಅಂಗಹೀನನಾಗಿಯೂ, ದುರ್ಗಂಧವುಳ್ಳವನಾಗಿಯೂ, ಒಳ್ಳೆ ಕಷ್ಟವನ್ನು

ಪ್ರಸರಿಸುತ್ತಲೂ, ದೀನವಾದ ಧ್ವನಿಯಿಂದ ಬಿಕ್ಕೆಬೇಡುತ್ತಲೂ, ದುಃಖಿತರ ರೂಪದಿಂದ ನೀನು ಅನೇಕ ಸಾರೆ ನನ್ನೆದುರಿಗೆ ಬಂದಿ ಆದರೆ ನಾನು ನನ್ನ ಮದದಲ್ಲಿ ಮರೆತುಬಿಟ್ಟೆನು ಎಂದು ಹೇಳಿದ್ದಾನೆ. ಅಂದರೆ ಅಹಂಕಾರವನ್ನು ತೆಗೆದುಹಾಕಿದರೆ ಶಿವನು ಕಾಣಿಸುವನು. ಈ ಪ್ರಕಾರ ಶಿವನು ಸರ್ವವ್ಯಾಪಿಯಿರುವದರಿಂದಲೇ ಆವನು ಸಕಲ ಪ್ರಾಣಿಗಳ ಯೋಗಕ್ಷೇಮವನ್ನು ನೋಡುತ್ತಾನೆ. ಅವನು ದೊಡ್ಡ ಪ್ರಾಣಿಗಳನ್ನು ಸಣ್ಣ ಪ್ರಾಣಿಗಳ ರಕ್ಷಣೆಗಾಗಿ ನಿರ್ಮಿಸಿದ್ದಾನೆ. ಆ ರಕ್ಷಣದ ಶಕ್ತಿಯು ಮಾನವನಿಗಿರುತ್ತದೆ. ಆದ್ದರಿಂದಲೇ ಮಾನವನು ಪರೋಪಕಾರಾಯ ಮಿದಂ ಶರೀರಂ ಎಂಬುವಂತೆ ಅನ್ಯಪ್ರಾಣಿಗಳ ಹಿತಕ್ಕೋಸ್ಕರವಾಗಿ ತಾನು ಹಗಲೂ ರಾತ್ರಿಯು ತ್ರಿಕರಣ ಶುದ್ಧನಾಗಿ ಭೇದಭಾವವಿಲ್ಲದೆ ಯಾವ ಪ್ರಕಾರದ ಸಂಕೋಚವನ್ನು ತಾಳಲಾರದೆ ಹೊನ್ನು ಕ್ಷಣಕವಾದದ್ದು ಶರೀರವು ಅನಿತ್ಯವಾದದ್ದು ಅನ್ಯಪ್ರಾಣಿಗಳ ಆನಂದವೇ ಶಿವಾನಂದವೆಂದು ತಿಳಿಯಬೇಕು.

"ಲಿಂಗದ ಗುಣದಿಂದ ಲಿಂಗೈಕ್ಯವೆಂಬರು ಲಿಂಗದ ಗುಣದಿಂದ ಲಿಂಗೈಕ್ಯವಿಲ್ಲ ನೋಡಾ "ಭಾವಾದ್ವೈತಂ ಪರಹಿತಂ" ಕೂಡಲ ಚನ್ನಸಂಗಾ ಲಿಂಗೈಕ್ಯವು."

"ಕಾಗಿ ಬಂದಗಳು ಕಂಡಡೆ ಕರೆಯದೆ ತನ್ನ ಬಳಗವೆಲ್ಲವ ಕೋಳಿ ಒಂದು ಗುಟುಗು ಕಂಡಡೆ ಕೂಗಿ ಕರೆಯದೆ ತನ್ನ ಕುಲವೆಲ್ಲವ."

"ದಯವಿರಬೇಕು ಸಕಲ ಪ್ರಾಣಿಗಳಲ್ಲಿ ಸ್ವಯವಿರಬೇಕು ಸಕಲ ಗುಣಗಳಲ್ಲಿ ನಯವಿರಬೇಕು ನುಡಿಗಡಣದಲ್ಲಿ."

ಎಂಬುವಂತೆ ಸರ್ವವಿಧದಿಂದಲೂ ಸತ್ಕರ್ಮ ಸದಾಚಾರಗಳನ್ನಾಚರಿಸುತ್ತ ಸರ್ವ ಪ್ರಾಣಿಗಳು ಶಿವನ ಸ್ವರೂಪವೆಂದು ಅವುಗಳ ದುಃಖವೇ ನಮ್ಮ ದುಃಖ ಅವುಗಳ ಸುಖವೇ ನಮ್ಮ ಸುಖವೆಂದು ತನಗೆ ಸಿಕ್ಕ ಅಲ್ಪಸ್ವಲ್ಪ ದ್ರವ್ಯವನ್ನು ಸಾರ್ವಜನಿಕ ಹಿತಕ್ಕಾಗಿ ಉಪಯೋಗಿಸಬೇಕು. ಅಂದರೆ ಯಾರು ಸಾರ್ವಜನಿಕ ಕಾರ್ಯಗಳಲ್ಲಿ ದುಡಿಯುವರೋ ಅವರು ಶಿವಾನುಭವಿಗಳೆಂದರೆ ಏನೂ ತಪ್ಪಾಗಲಾರದು. ಅಂದರೆ ಪರಹಿತವೇ ತಮ್ಮ ಹಿತವೆಂದು ಯಾವನು ವರ್ತಿಸುವನೋ ಅವನೇ ಶಿವಾನುಭಾವಿ-ಲಿಂಗಾನುಭಾವಿ ಇದನ್ನು ತಿಳಿಸಿಕೊಡುವದೇ ಈ ಪತ್ರಿಕೆಯ ಉದ್ದೇಶವಿರುತ್ತದೆ.

---

# ಗುರು ಲಿಂಗ ಜಂಗಮ.

(ಲೇಖಕ:— ಬಸವಪ್ಪ ಚನ್ನಪ್ಪ ಪಟ್ಟೇದ-ವಂಟಮುರಿ.)

[ಸಂಪುಟ ೧೭, ಸಂಚಿಕೆ ೨ ರಿಂದ ಮುಂದುವರೆದದ್ದು.]

ಇದೊಂದು ಉದಾಹರಣೆಗೆ ತೋರಿಸಿತು ಮಾತ್ರ. ಇಲ್ಲಿಯೇ ಹೀಗಾಯಿತು. ಬೇರೆ ಕಡೆಗೆ ಈ ಜನರು ತಿಳಿದವರಂತೆ ವರ್ತಿಸುತ್ತಾರೆಂತಲ್ಲ! ಎಲ್ಲಿ ನೋಡಿದರೂ ಬಹುಶಃ ಹೀಗೆಯೇ ಸರಿ! ಇವರು ಪ್ರಭುದೇವರ ಸಾಂಪ್ರದಾಯಕರಂತೆ! ಪ್ರಭುವು ಬಸವ, ಚನ್ನಬಸವಾದಿ ಭಕ್ತರೊಡನೆ ಹೀಗೆಯೇ ವರ್ತಿಸುತ್ತಿದ್ದನೇ? ಗುರುವರ್ಗದವರಂತೂ ಇತ್ತಿತ್ತ ತೀರ ತಾಳಬಿಟ್ಟಿರುವರು. ಅವರು ಒಣ ಮಡಿವೈಲಿಗೆಯ ಡಂಭಾಚಾರಕ್ಕೆ ಬಹಳವಾಗಿ ಮೈಗೊಟ್ಟಿದ್ದಾರೆ. ತಾವೇನೋ ಕೇವಲ ಕೈಲಾಸದಿಂದ ಬಿದ್ದವರಂತೆ ತಿಳಿದಿದ್ದಾರೆ. ಇದೆಲ್ಲ ಭವಿತನದ ಹಿರಿದೆವ್ವ ಬಡೆದುದರ, ಲಕ್ಷಣ. ತಾವು ವಿರಕ್ತರಿಗಿಂತಲೂ ಮೇಲಾದವರೆಂದು ಬಡಬಡಿಸುವದಾದರೂ ಎಂತಹ ಅತಿರೇಕ ನೋಡಿರಿ. ಈ ಗುರುವಿರಕ್ತರು ತಮ್ಮ ನಿಜಗುಣಗಳನ್ನು ಕಳೆದುಕೊಂಡು, ಎಲ್ಲರೂ ಒಂದೇ ಮಾಲೆಯ ಮಣಿಗಳಾದುದರಿಂದಲೇ ಈ "ನಾ ಹೆಚ್ಚು ನೀ ಹೆಚ್ಚು" ಎಂಬುದು ಬಂದು ಕುಳಿತಿದೆ. ಜಂಗಮರು ತಮ್ಮ ಸುಜ್ಞಾನಾತಿಶಯದಿಂದ ಬೆಳಗ ಹತ್ತಿದರೆ, ಅವರ ಮುಂದೆ "ನಾನು ಹೆಚ್ಚಿನವ" ಎಂದು ನುಡಿಯುವ ಧೈರ್ಯ ಅದಾರಿಗಿರುವದು?! ಇನ್ನಾದರೂ ಅವರು ತಮ್ಮ ತಮ್ಮ ಗುಣಕ್ರಿಯಾಚಾರ ಶುದ್ಧತೆಯುಳ್ಳವರಾಗುವರೇ? ಇದರಲ್ಲಿ ಯಾರ ನಿಂದೆಯನ್ನೂ ಮಾಡುವ ಹೇತುವಿಲ್ಲ. ಬರೇ ಶುದ್ಧಿಯಿಸುವದಿದೆ; ಎಂದು ತಿಳಿದು ಅವರು ತಮ್ಮ ತಲೆಯನ್ನು ಶಾಂತವಿಡುವರೆಂದು ನಂಬಿದ್ದೇನೆ.

## ದಾನಪದ್ಧತಿ.

ಲಿಂಗಾಯತರಲ್ಲಿ ದಾನ ಪರೋಪಕಾರಗಳು, ಸದ್ಗುಣವೆಂದೂ ಅವಶ್ಯಕರ್ತವ್ಯವೆಂದೂ ಹೇಳಿರುತ್ತವಷ್ಟೇ. ಆದರೆ ಅದು ಸತ್ಪಾತ್ರದಲ್ಲೇ ಜರಗಬೇಕೆಂದು ಅದರೊಡನೆಯೇ ನಿರೂಪಿಸಿದ್ದಾರೆ. ಅದರ ಕಡೆಗೆ ನಾವು ದುರ್ಲಕ್ಷ್ಯ ಮಾಡಿ, ಬಂದವರಿಗೆಲ್ಲ ಟೊಣಪರಿಗೂ ಕೂಡ

ಸಡಿಲುಗೈಯಿಂದ ದಾನಮಾಡಲಿಕ್ಕೂ ಭಿಕ್ಷೆ ನೀಡಲಿಕ್ಕೂ ಹಿಂದೆಮುಂದೆ ನೋಡುವದಿಲ್ಲ. ಇದರಿಂದಲೇ ನಾವು ಅಧೋಗತಿಗಿಳಿಯಹತ್ತಿದ್ದೇವೆ. ಇನ್ನು ಮೇಲೆ ಸತ್ಪಾತ್ರವನ್ನು ನೋಡಿಯೇ ದಾನ ಮಾಡಬೇಕು. "ಸತ್ಪಾತ್ರವೆಂದರೆ ಅದು ಹೇಗೆ" ಎಂಬುದೇ ಬಹುಜನರಿಗೆ ತಿಳಿಯುವದಿಲ್ಲ. ಮೋಸಗಾರರಂತೂ ಮತ್ತಿಷ್ಟು ದಿಕ್ಕು ತಪ್ಪಿಸುವರು ಅವರು— "ಅಯ್ಯಾಚಾರ ಹೊಂದಿದವರೂ ಹೆಂಡಿರುಮಕ್ಕಳುಗಳುಳ್ಳವರೂ ಅಕ್ಷರಜ್ಞರೂ ಓದಿಕೊಂಡವರೂ ಇದ್ದರಾಯಿತು; ಅವರೇ ಸತ್ಪಾತ್ರರು." ಎಂದು ಹೇಳಲಿಕ್ಕೆ ಯತ್ಕಿಂಚಿತವೂ ಹಿಂದುಮುಂದಾಗುವದಿಲ್ಲ! ಆದರೆ ಇದು ತಪ್ಪು. ಇಷ್ಟರಿಂದಲೇ ದಾನಕೊಂಡುವ ಅಥವಾ ಭಿಕ್ಷೆಬೇಡುವ ಹಕ್ಕು, ವೀರಶೈವರಲ್ಲಿ ಯಾರಿಗೂ ಬರುವದಿಲ್ಲ. ನಮ್ಮಲ್ಲಿ ಸಕಲರೂ (ಗುರುಜಂಗಮರು ಸಹ) ಕಾಯಕ-ಉದ್ಯೋಗದಿಂದಲೇ ಜೀವಿಸಬೇಕೆಂದು, ಬಿಗಿಯಾದ ಕಟ್ಟುಹಾಕಿದ್ದಾರೆ ಇದು ಸಮಾಜದ ಆರ್ಥಿಕೋನ್ನತಿಗೆ ಅತ್ಯವಶ್ಯವಾದ ಸಂಗತಿಯು ಎಲ್ಲರೂ ಒಂದಿಲ್ಲೊಂದು ಕಾಯಕ ಮಾಡಿ ದಾಸೋಹವೃತ್ತಿಯಿಂದಲೇ ಜೀವಿಸುವದಿರುತ್ತದೆ. ಅಹಂಕಾರವಿರಹಿತರಾಗಿ ಎಲ್ಲರನ್ನು ಶಿವಭಾವನೆಯಿಂದ ಕಾಂಬುವದೇ ದಾಸೋಹವೃತ್ತಿ. ತನುಮನಧನಗಳನ್ನು ಗುರುಲಿಂಗಜಂಗಮಕ್ಕೆ ನೀಡುವದೇ ದಾಸೋಹವೃತ್ತಿ. ಗುರುಜಂಗಮರು ತಮ್ಮ ಭಕ್ತೋದ್ಧಾರದ ಕಾರ್ಯವನ್ನು ಯಥೋಚಿತವಾಗಿ ಜರಗಿಸಿದರೆ, ಅದೇ ಅವರ ಕಾಯಕವೆಂದರಿಯಬಹುದು. ಬೇರೆ ಕಾಯಕ ಮಾಡದಿದ್ದರೂ ಅವರಿಗೆ ಸಾಗುವದು. ಅತ್ತ ಭಕ್ತೋದ್ಧಾರವೂ ಇಲ್ಲ, ಇತ್ತ ಸ್ವತಂತ್ರ ಕಾಯಕವೂ ಇಲ್ಲ. ಇಂತಹರಿಂದಲೇ ಈ ವರ್ಗವು ತುಂಬಿರುವದು ಮಾತ್ರ ಸರಿಯಲ್ಲ. ಇರಲಿ, ಹಾಗಾದರೆ ಸತ್ಪಾತ್ರವೆಂದರೆ ಯಾವದು? ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸುತ್ತದೆ. ಯಾವ ರೀತಿಯಿಂದಲೂ ದುಡಿಯಲಾರದ ಅನಾಥರೂ, ಅಂಗಹೀನರೂ, ವಿದ್ಯಾರ್ಜನ ಮಾಡುವ ಬಡ ವಿದ್ಯಾರ್ಥಿಗಳು, ಔಷಧಾಲಯಗಳು, ಅನಾಥಾಶ್ರಮಗಳೂ, ಔದ್ಯೋಗಿಕ ಶಾಲೆಗಳೂ, ವಿದ್ಯಾರ್ಥಿ ಭೋಜನಗೃಹಗಳೂ, ವಾಚನಾಲಯ ಗ್ರಂಥಭಾಂಡಾರಗಳು ಇತ್ಯಾದಿ ಸಾರ್ವಜನಿಕ ಸಂಸ್ಥೆಗಳು, ನಿಜವಾದ ಜ್ಞಾನಿಗಳೂ, ಲೋಕೋದ್ಧಾರದ ಸತ್ಪುರುಷ ಶಿವಯೋಗಿಗಳೂ; ಇವರೇ ಮೊದಲಾದವರು ಸತ್ಪಾತ್ರವೆಂದು ತಿಳಿಯಬೇಕು. ಎಷ್ಟೋ ಕಡೆಗೆ ವಿದ್ಯಾರ್ಥಿಯಾದ ಬಡಹುಡುಗರು ಅವರು ಅಯ್ಯರಲ್ಲೆಂಬ

ದಿಷ್ಟೇ ಕಾರಣದಿಂದ ನಿರಾಕರಿಸಿದ್ದು ಕಂಡುಬರುತ್ತದೆ. ಇದಂತೂ ತೀರ ನಿಂದ್ಯವು. ಹೀಗೆ ಎಂದೂ ಯಾರೂ ಮಾಡಕೂಡದು. ತಾವು ಮಾಡುವ ದಾನವು ಯೋಗ್ಯವ್ಯಕ್ತಿಗೆ, ಹಾಗು ಅವನನ್ನು ಸ್ವಾವಲಂಬಿಯನ್ನು ಮಾಡುವದಕ್ಕೆ, ಇಲ್ಲವೆ ಸಮಾಜದ ಅತ್ಯಾವಶ್ಯಕ ಕಾರ್ಯಕ್ಕೆ ಸಲ್ಲುತ್ತದೆಯೋ ಇಲ್ಲವೋ, ಎಂಬದನ್ನಿಷ್ಟೇ ನೋಡತಕ್ಕದ್ದಿರುತ್ತದೆ.

ಅನೇಕ ಜನ ಅಯ್ಯಗಳು, ತಾವು ದಾಸೋಹ ಮಠದವರೆಂದು ಹೇಳಿಕೊಳ್ಳುತ್ತ. ಒಳ್ಳೆ ಆಢ್ಯತೆಯಿಂದ ಪ್ರತಿಷ್ಠಿತರಾಗಿ ಭಿಕ್ಷೆಗೆ ಬರುವರು. ಇವರು ಸಮಾಜದ ಮೇಲೆ ಸಾಗಿಬರುವ ಸತ್ವಹಾರಕರ ವರ್ಗವೆಂದೇ ತಿಳಿಯಬೇಕು. ಇವರ ದಾಸೋಹದಿಂದ ಸಮಾಜಕ್ಕೆ ಹೇಳತಕ್ಕಂತಹ ಹಿತವಾವುದೂ ಆಗುವದಿಲ್ಲ. ದುಡಿಯಲಾರದ ಕೆಲವು ಕೂಳಬಕ್ಕರನ್ನು ಮಾತ್ರ ಸಲಹುವರು. ಅವರು ನಿಶ್ಚಿಂತೆಯಿಂದ ಉಂಡು ತಿಂದು ಪರಿಪರಿಯ ವ್ಯಸನಗಳಿಗೆ ಮಾತ್ರ ಬೀಡಾಗುವರು. ಇದರ ಬದಲು, ವಿದ್ಯಾರ್ಥಿನಿಲಯಗಳನ್ನು ಸಮಿತಿಯ ಮುಖಾಂತರ ಸಾಗಿಸುವದಕೊಸ್ಕೋಸ್ಕರ, ಅದರ ವಿನಿಯೋಗವಾಗುವದು ಈಗಿನ ಕಾಲದಲ್ಲಿ, ಅತ್ಯಂತಾವಶ್ಯವಾಗಿರುವದು. ಇದರಂತೆಯೇ ಜಗದ್ಗುರುಗಳೆಂದು ಹೇಳಿಕೊಳ್ಳುತ್ತ, ಗುರುಪೀಠದವರೂ ವಿರಕ್ತರೂ, ಶೂನ್ಯಸಿಂಹಾಸನ ಮಠಾಧಿಪತಿಗಳೂ ಅಟ್ಟಹಾಸದೊಡನೆ ಬಂದು, ಅಪರಮಿತ ಸುಲಿಗೆಯನ್ನು ಮಾಡಿಕೊಂಡು ಹೋಗಿ, ತಮ್ಮ ಗೌರವವನ್ನೂ ಸುಖಭೋಗವಿಲಾಸಗಳನ್ನೂ ಹೆಚ್ಚಿಸಿಕೊಳ್ಳುವದರಲ್ಲೇ, ಅದನ್ನೆಲ್ಲ ಇಲ್ಲದಿದ್ದರೂ ಅದರ ಬಹುಭಾಗವನ್ನು ವೆಚ್ಚಮಾಡುವರು. ಇವರೆಲ್ಲರಿಗೆ ಜೋಳಿಗೆಯನ್ನು ಈ ತರದ ಸ್ವಾರ್ಥಸಾಧನೆಗೆ ಕೊಟ್ಟಿಲ್ಲ. ಅವರು ಸಮಾಜೋದ್ಧಾರಕರೆಂದೂ ಅದಕ್ಕೆ ಸಹಾಯ.ವಾಗಲೆಂದೂ ಜೋಳಿಗೆಯನ್ನು ಕೊಟ್ಟಿದೆ. ಇದನ್ನು ಸಮಾಜವು ಒಳಿತಾಗಿ ನೆನಪಿಟ್ಟು, ಆ ಹಣವನ್ನು ಅವರು ಒಯ್ದು ಏನು ಮಾಡುತ್ತಾರೆಂಬದನ್ನು ನಿರೀಕ್ಷಿಸುತ್ತಿರಬೇಕು. ಅದರ ಅಪವ್ಯಯವಾದದ್ದು ಕಂಡರೆ, ಮತ್ತೊಮ್ಮೆ ಅವರನ್ನು ಮುಟ್ಟಿಸಿಕೊಳ್ಳಬಾರದು ಸಹ! ಇಂತಹ ಕುರುಡ ದಾನದಿಂದ ಅದಾವ ಪುಣ್ಯಬರುವದು? ಪುಣ್ಯಾಗುಡುವ ಮಹಿಮೆಯಾದರೂ ಇಂತಹ ಸ್ವಾರ್ಥಿ ಗುರುಜಂಗಮ ವೇಷಧಾರಿಗಳಲ್ಲಿ ಅದೆಲ್ಲಿಂದ ಬರುವದು? "ಆಚಾರವಿಲ್ಲದ ಗುರು ನರ, ಆಚಾರವಿಲ್ಲದ ಜಂಗಮ ಭೂತಪ್ರಾಣಿ'' ಎಂದು ಹೇಳಿದ್ದಾರೆ. ಇರಲಿ, ಈ ಜಗದ್ಗುರುಗಳೆನಿಸುವ

ಪಂಚಾಚಾರ್ಯರೂ ಶೂನ್ಯಸಿಂಹಾಸನಪತಿಗಳೂ ಇನ್ನು ಮೇಲೆ ತಾವು ಸಮಾಜದಲ್ಲಿ ಎತ್ತಿದ ಕಾಣಿಕೆಯ ಹಣದಿಂದ, ಯೋಗ್ಯ ಗುರುಜಂಗಮರನ್ನುಂಟು ಮಾಡುವ ಶಾಲೆಕಾಲೇಜುಗಳನ್ನು ಸ್ಥಾಪಿಸುವ ಎತ್ತುಗಡೆ ಮಾಡಬೇಕು. ಸಂಸ್ಕೃತ ಪಾಠಶಾಲೆಗಳನ್ನೇ ತೆಗೆಯಬೇಕೆಂಬ ಹಳೆ ಕಲ್ಪನೆಯನ್ನು ಇನ್ನು ಬಿಟ್ಟುಬಿಡಬೇಕು. ಜನರಾದರೂ ದಾನಮಾಡುವಾಗ, ಕಾಣಿಕೆ ಸಲ್ಲಿಸುವಾಗ, ಅದು ಸತ್ಪಾತ್ರವ್ಯಯವಾಗುವದೋ ಇಲ್ಲವೋ ಎಂಬದನ್ನು ಯಾವಾಗಲೂ ಸ್ಮರಿಸುತ್ತಿರಬೇಕು.

## ಯೋಗ್ಯ ಅಯ್ಯ ಗುರುಜಂಗಮರನ್ನು ಅದು ಹೇಗೆ ಉಂಟುಮಾಡಬೇಕು?

ವೀರಶೈವರು ತಾವು ಭವಿಗಳಲ್ಲ ಭಕ್ತರೆಂಬುದನ್ನು ಸತತವಾಗಿ ನೆನಸಿಟ್ಟು ಅದರಂತೆ ಆಚರಣೆ ಮಾಡುತ್ತ ಹೋಗುವದು ಅತ್ಯವಶ್ಯವು. ಇಲ್ಲದಿದ್ದರೆ, "ತತ್ವ ಮಾತ್ರ ಭಕ್ತರದು ಆಚರಣೆ ಭವಿಗಳದು" ಎಂಬಂತೆ ಆಗುವದು. ಅದೇನು ಉಪಯೋಗ? ಈಗ ನೋಡಿದರೆ ಎತ್ತನೋಡಿದತ್ತೆಲ್ಲ ವೀರಶೈವರ ಆಚರಣೆ ಸಾಮಾನ್ಯರಲ್ಲಿ ಗುರುಜಂಗಮರಲ್ಲಿ ೧೦೦ಕ್ಕೆ ೯೦ ಅಥವಾ ಅದಕ್ಕೂ ಹೆಚ್ಚು ಭವಿಗಳದೇ ಆಗಿರುತ್ತದೆ. ಪಂಚಾಚಾರ್ಯರೂ ಅವರ ಅನುಯಾಯಿಗಳಾದ ಪಟ್ಟ ಚರಮೂರ್ತಿಗಳೂ, ಕೇವಲ ಭವಿಗಳ (ಬ್ರಾಹ್ಮಣರ) ಆಚರಣೆಗಳನ್ನೇ ಮಾದರಿಗಾಗಿ ಮುಂದಿಟ್ಟುಕೊಂಡು ನಡೆಯುತ್ತಾರೆ. ಇನ್ನು ಇತರರನ್ನು ಭಕ್ತಮಾರ್ಗ ಹಿಡಿಸುವವರಾರು? ಅಯ್ಯಗಳೆನಿಸುವವರಲ್ಲಿ ಅನೇಕರು ಕಾಶಿಯ ಶಾಸ್ತ್ರಿಗಳಾಗಿ, ಅಲ್ಲಿಯ ಬ್ರಾಹ್ಮಣರಲ್ಲಿ ಓದಿ, ಅವರ ಗ್ರಂಥಗಳನ್ನು ನೋಡಿ, ಅವರಂತೆಯೇ ನಟಿಸಿ, ಅವರ ಆಚಾರ ವಿಚಾರಗಳನ್ನೇ ಅನುಸರಿಸುವರು. ಚತುರ್ವರ್ಣಗಳನ್ನೂ, ಶಿಖಾಸೂತ್ರಗಳನ್ನೂ, ಹೋಮಹವನಾದಿಗಳನ್ನೂ, ಹುಟ್ಟು ಮುಟ್ಟು ಮುಂತಾದ ಸೂತಕಗಳನ್ನೂ ಅತಿವರ್ಣಾಶ್ರಮಿಗಳಾದ ಲಿಂಗಾಂಗಿಗಳಲ್ಲಿ ಬಳಕೆಗೆ ತರಲಿಕ್ಕೆ ಅನೇಕ ಕಡೆ ಪ್ರಯತ್ನ ನಡಿಸಿದ್ದಾರೆ. ಇಂತಹ ಹಸಿಬಿಸಿ ಪಂಡಿತರೇ ಗುರುಜಂಗಮ ಸ್ಥಳಗಳಿಗೆ ಆರಿಸಲ್ಪಡುತ್ತಾರೆ. ಇವರಿಗೆ ಸಂಸ್ಕೃತ ಬರುತ್ತಿರಬಹುದು, ಆದರೆ ವೀರಶೈವ ಮತದ ಹಾಗು ತಮ್ಮ ಕರ್ತವ್ಯದ ಜ್ಞಾನವು ಬಹುಮಟ್ಟಿಗೆ ಅಲ್ಪವೇ ಇರುವದು. ಈಗಂತೂ ಗುರುವರ್ಗದವರ ಚೇಷ್ಟೆಗಳು ಮತ್ತಿಷ್ಟು ಹೆಚ್ಚುತ್ತಲೇ ನಡೆದಿರುವವು. ಇಂತಹ ಅಯ್ಯ

ಗುರುಜಂಗಮರಿಂದ ವೀರಶೈವರ ಉದ್ಧಾರವಾಗುವದೇ? ಅವರು ಮಾಡಿದ್ದೇ ಸರಿ, ಎಂದು ಭಕ್ತರು ಕಣ್ಣುಮುಚ್ಚಿ ಕೈ ಕಟ್ಟಿಕೊಂಡು ಕುಳಿತರೆ ನಮ್ಮ ಮತವು ಇತ್ತೋ ಇಲ್ಲವೋ, ಎಂಬಂತೆ ಅದರ ಗತಿಯಾಗದೆ ಬಿಡದು. ಆದುದರಿಂದ ಇತ್ತ ಲಕ್ಷ್ಯಗುಡುವದು ಪ್ರಸ್ತುತದ ಮುಖ್ಯ ಕರ್ತವ್ಯವು.

ನಮ್ಮ ಸುಧಾರಣೆಯು ಮುಖ್ಯವಾಗಿ ನಿಜವಾದ ಅಯ್ಯಗಳು ಉತ್ಪನ್ನವಾಗುವದರ ಮೇಲೆಯೇ ಅವಲಂಬಿಸಿರುವದು. ಇನ್ನು ಮೇಲೆ ತಕ್ಕ ಅಯ್ಯಗಳನ್ನೂ ಗುರುಜಂಗಮರನ್ನೂ ನಿರ್ಮಿಸಿಕೊಳ್ಳಲಿಕ್ಕೆ ಸಮಾಜವು ಅಂತಹ ಸ್ವತಂತ್ರ ಸಂಸ್ಥೆಗಳನ್ನು ನಿರ್ಮಿಸಬೇಕು. ಜಗದ್ಗುರುಗಳೆಂಬವರೇ ಈ ಬಗ್ಗೆ ಮುಂದಾಳುಗಳಾಗಬೇಕು. ಆ ಸಂಸ್ಥೆಯ ಮೇಲ್ವಿಚಾರಕರೂ ವ್ಯವಸ್ಥಾಪಕರೂ ಅಧ್ಯಾಪಕರೂ ಮುಂತಾದವರನ್ನೆಲ್ಲ, ನಿರಾಲಸತೆಯಿಂದ ಮನಮುಟ್ಟಿ ದುಡಿದು, ಸಮಾಜೋನ್ನತಿಗೆ ಯತ್ನಿಸುವವರನ್ನೇ ನಿಯಮಿಸಬೇಕು. ಅಲ್ಲಿ ಪ್ರವೇಶವು, ಅವರಿವರೆನ್ನದೆ ಶಾಯಕದ ಕಡೆ ನೋಡದೆ ಸಮಾಜದೊಳಗಿನ ಯೋಗ್ಯ ಸತ್ವಸ್ಥ ಮನೆತನಗಳೊಳಗಿಂದ ವಟುಗಳನ್ನಾರಿಸಿ ಕಳಿಸಿದಂತಹರಿಗೇ ದೊರೆಯಬೇಕು. ಮುಂದೆ ತಾವು ಮಾಡಬೇಕಾದ ಕರ್ತವ್ಯದ ಬಗ್ಗೆ ಚೆನ್ನಾಗಿ ಒಲವುಳ್ಳವರೇ ಅವರು ಇರಬೇಕು. ಆ ಸಂಸ್ಥೆಯಲ್ಲಿ ಅವರಿಗೆ ವಚನಶಾಸ್ತ್ರವು ಆವಶ್ಯಕ ವಿಷಯವಾಗಿ, ಬಹು ಜಾಗ್ರತೆಯಿಂದ ಪರಿಣಾಮಕಾರಕವಾಗಿ ಕಲಿಸಲ್ಪಡಬೇಕು. ವಟುಗಳ ಆಚಾರದ ಕಡೆಗೆ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸುತ್ತಿರಬೇಕು. ಹೆಚ್ಚಿನ ವಿದ್ಯಾವಂತಿಕೆಗಿಂತಲೂ ಮೇಲಾದ ಆಚಾರವಂತಿಕೆಯೇ ಮಿಗಿಲಾದುದು. ದುರ್ನಡತೆಯ ಹಾಗು ಅಭ್ಯಾಸದ ಕಡೆ ಅಲಕ್ಷ್ಯಮಾಡುವ ಹುಡುಗರನ್ನು ಕೂಡಲೆ ಸಂಸ್ಥೆಯಿಂದ ಹೊರಗಟ್ಟಬೇಕು. ಸಂಸ್ಕೃತವನ್ನೇನೋ ತಕ್ಕಮಟ್ಟಿಗೆ ಕಲಿಸಬಹುದು. ಅದರಲ್ಲಿಯೇ ಹೆಚ್ಚು ಆಯುಷ್ಯ ಕಳೆಯುವದು ವಿಹಿತವಲ್ಲ. ಈಗ ಸಂಸ್ಕೃತ ಪಾಠಶಾಲೆಗಳು ಇಟ್ಟುಕೊಂಡ ಧೋರಣವು ಸರಿಯಾಗಿಲ್ಲ ವಚನವಾಙ್ಮಯವಿಶಾರದರನ್ನೂ ಆಮೇಲೆಗೆ ಆಚಾರತೆಯುಳ್ಳವರನ್ನೂ ನಿರ್ಮಿಸುವದರ ಕಡೆಗೇ ಆ ಸಂಸ್ಥೆಗಳು ಹೆಚ್ಚಾಗಿ ಗಮನಿಸಬೇಕು.

ಮೇಲೆ ಹೇಳಿದಂತೆ ನೂತನ ಸಂಸ್ಥೆಗಳ ಮೂಲಕವಾಗಿ ಯೋಗ್ಯ ವಟುಗಳನ್ನು ಸಿದ್ಧಪಡಿಸಿ, ತೆರವಾದ ಗುರುವಿರಕ್ತ ಮಠಗಳಿಗೆ ಅಧಿಕಾ

ರಿಗಳನ್ನು ಮಾಡಬೇಕು. ಆಗ ಸಮಾಜಹಿತವೊಂದನ್ನೇ ಲಕ್ಷಿಸಬೇಕಲ್ಲದೆ, ಯಾರೂ ವ್ಯಕ್ತಿಸ್ವಾರ್ಥಕ್ಕಾಗಲಿ ಒಣದಾಕ್ಷಿಣ್ಯಕ್ಕಾಗಲಿ ಎಷ್ಟು ಮಾತ್ರವೂ ಒಳಗಾಗಬಾರದು. ಅವರು ಮುಂದೆ ಆಚಾರಭ್ರಷ್ಟರಾದರೆ, ಇಲ್ಲವೆ ಕರ್ತವ್ಯವಿಮುಖರಾದರೆ, ಅವರನ್ನು ತೆಗೆದು ಹಾಕಿ ಬೇರೆಯವರನ್ನು ನಿಯಮಿಸಲಿಕ್ಕೆ ತಿಲಮಾತ್ರವೂ ಹಿಂಜರಿಯಬಾರದು. ಪ್ರತಿಯೊಂದು ಮಠದಲ್ಲಿ ಇಂತಹ ಯೋಗ್ಯರಾದ ಒಬ್ಬಿಬ್ಬರು ಮರಿಗಳು ಸಹ ಇರಬೇಕು. ಈ ಗುರು ಜಂಗಮರಿಗೆ ಜೋಳಿಗೆಯನ್ನು ಕರುಣಿಸಬೇಕು. ಅವರೆಲ್ಲರು ತಮ್ಮ ಹಾಗು ಸಮಾಜದ ಪ್ರಗತಿಯನ್ನೇ ಲಕ್ಷಿಸಬೇಕಲ್ಲದೆ, ಮಠದ ಕಾರಭಾರ, ಉತ್ಪನ್ನ ಮುಂತಾದ ಬಾಬುಗಳ ಕಡೆಗೆ ಎಷ್ಟು ಮಾತ್ರವೂ ಮನಸ್ಸು ಹಾಕಬಾರದು. ಅದನ್ನೆಲ್ಲ ಊರವರೇ ಒಂದು ಸಮಿತಿಯ ಮುಖಾಂತರ ನೋಡಿಕೊಳ್ಳತಕ್ಕದ್ದು. ಗುರುವರ್ಗದ ಮಠಗಳಲ್ಲಿ ಶಿವಶರಣರ ಪುರಾಣ ಕೀರ್ತನಗಳೂ ವಿರಕ್ತರ ಮಠಗಳಲ್ಲಿ ಶಿವಾನುಭವವೂ, ಯಾವಾಗಲೂ ಇಲ್ಲವೆ ಆಗಾಗ್ಗೆ, ನಡೆಯುತ್ತಿರಲೇಬೇಕು. ಇದರ ವಿಪರೀತ ಸ್ಥಿತಿಯೇ ಈಗ ಕಂಡುಬರುತ್ತದೆ. ಅಧಿಕಾರಿಗಳಾಗತಕ್ಕವರು ದೊಡ್ಡ ದೊಡ್ಡ ಉತ್ಪನ್ನವಿದ್ದ ಮಠಗಳನ್ನೇ ಹುಡುಕುತ್ತಾರೆ. ಮುಂದೆ ತಾವು ಸ್ವೇಚ್ಛೆಯಿಂದ ವಿಲಾಸ ಭೋಗಿಸಲಿಕ್ಕೆ ಹವಣಿಸುತ್ತಾರೆ ತಾವು ಪ್ರಾಪಂಚಿಕರಲ್ಲ. ಸಮಾಜ ಸಮಾಜಸೇವಕರೂ, ಉದ್ಧಾರಕರೂ ಆದ ಸ್ವಾರ್ಥತ್ಯಾಗಿಗಳೆಂಬದನು ತೀರ ಮರೆತೇ ಬಿಡುವರು. ಭವಿಗಿಂತಲೂ ಕಡೆಯಾಗಿ ವರ್ತಿಸುವರು. ತಾವು ಪೂಜ್ಯರಾಗಿ ನಿಜವಾಗಿ ಪೂಜ್ಯರಾಗಿ ಸಮಾಜೋದ್ಧಾರದೊಡನೆ ತಾವೂ ಕೃತಕೃತ್ಯರಾಗಬೇಕೆಂಬದನ್ನು ನೆನಿಸುವದೇ ಇಲ್ಲ. ಸಾಮಾನ್ಯ ನೆನಿಸುವ ಪ್ರಾಪಂಚಿಗಳಂತೆಯೇ ತಾವೂ ಲೌಕಿಕ ಮೋಹಜಾಲದಲ್ಲಿ ಬಿದ್ದು ಹೊರಳಾಡಲಿಕ್ಕೆ ಹವಣಿಸುವರು. ಅದೇ ತಮ್ಮ ಜನ್ಮದ ಇತಿ ಕರ್ತವ್ಯವೆಂದು ಭಾವಿಸಿದ್ದಾರೆ. ಧರ್ಮಜ್ಞಾನ, ಶಿವಶರಣರ ಪುರಾಣ ಶಿವಾನುಭವಾದಿಗಳ ನೆನಪನ್ನೇ ಅವರು ಮಾಡರು. ಈ ಸ್ಥಿತಿಯು ಸಂಪೂರ್ಣ ಬದಲಾಗಲೇ ಬೇಕು.

ಭಕ್ತತ್ವದ ಅರಿವು ಹುಟ್ಟಿ ಆ ಮಾರ್ಗದಲ್ಲಿ ನಡೆಯಬೇಕಾದರೆ, ವೀರಶೈವ ಮತತತ್ವಗಳ ಪ್ರಸಾರವು ಒಳ್ಳೇ ರಭಸದಿಂದ ಸಾಗುವದು ಅವಶ್ಯವದೆ. ಪ್ರತಿಯೊಂದು ಊರಲ್ಲಿ ಶಿವಾನುಭವ ಸಂಘಗಳಾಗಿ ಮಠ

ತತ್ವಗಳು ಎಲ್ಲರಿಗೆ ಅವಗತವಾಗಬೇಕು. ಅವುಗಳನ್ನು ಮೇಲಿಂದ ಮೇಲಿ ಕೂಡಿ ಚರ್ಚಿಸುವದೂ ಊರಲ್ಲೆಲ್ಲ ಪ್ರಚಾರಗೊಳಿಸುವದೂ ಒತ್ತರದಿಂದ ಜರಗಬೇಕು. ಇದಲ್ಲದೆ ಅಲ್ಲಲ್ಲಿಗೆ ಮಹಾಸಂಸ್ಥೆಗಳಾಗಿ ಅಲ್ಲಿ, ಶಿವಾನುಭವವು ಶಾಸ್ತ್ರೀಯ ದೃಷ್ಟಿಯಿಂದಲೂ ಒಳ್ಳೇ ವ್ಯವಸ್ಥಿತವಾಗಿಯೂ ನಡೆಯಬೇಕು. ತಕ್ಕ ಪಥ್ಯ ಪುಸ್ತಕಗಳಾಗಬೇಕು. ಇವೆಲ್ಲವುಗಳ ಕೇಂದ್ರ ಸಂಸ್ಥೆಯೊಂದಿದ್ದು, ಅದರಿಂದ ನಿರಿತ ಪ್ರಚಾರಕರು ದೇಶದಲ್ಲೆಲ್ಲ ಸಂಚರಿಸಿ, ಆ ಸಂಘಗಳಿಗೆ ಹೆಚ್ಚಾಗಿ ಚಾಲನೆ ಕೊಡಬೇಕು. ಹೀಗಾಗಲಿಕ್ಕೆ ದ್ರವ್ಯನಿಧಿಯು ಹೆಚ್ಚಾಗಿಯೇ ಬೇಕು: ಅದನ್ನು ಮುಖ್ಯವಾಗಿ ಗುರುಜಂಗಮರ ಜೋಳಿಗೆಯಿಂದಲೂ ಧನಿಕರ ಕೊಡಗೈಯಿಂದಲೂ ಕೂಡಿಸಬೇಕು.

ಅಯ್ಯಾಚಾರದಿಂದ ಹುರುಳಿಲ್ಲದ ಅಯ್ಯಗಳು ವಿನಾಕಾರಣ ಹೆಚ್ಚಾಗಿ, ಸಮಾಜಕ್ಕೆ ಪೀಡಾಕಾರರೂ ತಲೆಭಾರರೂ ಆಗಿ ನಿಂತಿರುವದು ಈಗ ಎಲ್ಲ ಕಡೆಗೂ ಕಂಡು ಬರಹತ್ತಿದೆ. ಇವರಿಗೆ ಗದ್ದಿಗೆಯ ಅಧಿಕಾರ-ಜೋಳಿಗೆಗಳು ದೊರೆಯುವದು ಯಾರಿಗೂ ಇಷ್ಟವಲ್ಲ. ಗದ್ದಿಗೆಯನೇರಿ ಪಾದೋದಕವೀವ ಅಧಿಕಾರವು ಆರಿಗುಂಟೆಂಬುದನ್ನು ಕೆಳಗಿನ ಶ್ರೀ ಸಿದ್ಧರಾಮೇಶ್ವರರ ವಚನದಲ್ಲಿ ಕಾಣಬೇಕುಃ—

"ಭಕ್ತಂಗೆ ಜಂಗಮಂಗೆ ರೂಪದಲ್ಲಿ ಭೇದವೇ? ಆಚಾರದಲ್ಲಿ ಭೇದವೇ? ಅಲ್ಲಲ್ಲ! ಭಕ್ತನಾದಡೆ ಮೂರಕ್ಕೆ ಒಳಗು, ಜಂಗಮನಾದಡೆ ಮೂರಕ್ಕೆ ಹೊರಗು. ಒಳಗಾದವರ ಪಾದೋದಕ ಸಲ್ಲದು. ಕೊಟ್ಟವರಿಗೆ ನರಕ ತಪ್ಪದು. ಕೊಂಡವರಿಗೆ ಭವ ಹಿಂಗದು, ಕಪಿಲಸಿದ್ಧಮಲ್ಲಿಕಾರ್ಜುನಾ"

ಈ ವಚನದಿಂದ ನೋಡಿದರೆ, ಮೂರಕ್ಕೆ (ಹೊನ್ನು ಹೆಣ್ಣು ಮಣ್ಣುಗಳಿಗೆ ಅರ್ಥಾತ್ ಸಂಸಾರಕ್ಕೆ) ಒಳಗಾದವರು ಇಲ್ಲವೆ ಮನಸೋತವರು—ಅವರು ಗೃಹಸ್ಥರಿರಲಿ ಬ್ರಹ್ಮಚಾರಿ ವಿರಕ್ತರಿರಲಿ— ಪಾದೋದಕವೀಯಲಿಕ್ಕೆ ಅಪಾತ್ರರೆಂದೂ, ಹಾಗೆ ಕೊಟ್ಟವರಿಗೂ ಕೊಂಡವರಿಗೂ ಅಧೋಗತಿ ಎಂದೂ, ಸ್ಪಷ್ಟವಾಗಿ ಗೊತ್ತಾಗುತ್ತದೆ. ಪಾದೋದಕಾಧಿಕಾರವಿಲ್ಲದಿದ್ದರೆ ಪ್ರಸಾದವಂತೂ ದೂರೇ ಉಳಿಯಿತು. ಆದುದರಿಂದ ಸಾಮಾನ್ಯರೆನಿಸುವ ಸಂಸಾರಿ ಅಯ್ಯಗಳನ್ನು ಕರುಣಾಮೃತವೀಯಲು ಅಯೋಗ್ಯರೆಂದು ಹೇಳಿದಂತಾಗಲಿಲ್ಲವೇ?

ಇದೇ ಮೇರೆಗೆ ಜೋಳಿಗೆಯನ್ನು ಕೊಡುವದಾದರೂ ಅನರ್ಥಕರವು. ಅಯ್ಯಗಳು ಪ್ರಪಂಚುಗಳು. ಯಾವದೊಂದು ಯೋಗ್ಯ ಕಾಯಕದಿಂದಲೇ ಉಪಜೀವಿಸುವದು ವಿಹಿತ. ಬೇಡುವವ ಭಕ್ತನಲ್ಲ (ವೀರಶೈವನಲ್ಲ) ಎಂದು ಹೇಳಿದ್ದಾರೆ. ಪಶು-ಪಕ್ಷಿ-ಕ್ರಿಮಿ-ಕೀಟಕಗಳೆಲ್ಲ ಸ್ವಾವಲಂಬನದಿಂದ ತಮ್ಮ ಉಪಜೀವನ ಸಾಗಿಸಿಕೊಳ್ಳುತ್ತಿರುವಾಗ, ಜ್ಞಾನವಂತನೂ ಶಾರೀರ ಪೂರ್ಣತೆಯುಳ್ಳವನೂ ಆದ ಮಾನವನು ಸ್ವಾವಲಂಬನದಿಂದ ಜೀವಿಸುವದು ಅಸಾಧ್ಯವೇ? ತನ್ನ ಹೊಟ್ಟೆಗಾಗಿ ಇನ್ನೊಬ್ಬರ ಬಳಿಗೆ ಹೋಗೆ ಹೋಗಿ ನಾಣ್ಗೆಟ್ಟು ಭಿಕ್ಷೆ ಬೇಡುವದೇನು ಭೂಷಣವೇ? ಇದಕ್ಕಿಂತ ಮಿಗಿಲಾದ ಕೀಳ್ತನವಿನ್ನಾವುದಿರುವುದು? ಸುಭಾಷಿತಕಾರರು ಹೇಳುವದೇನಂದರೆ:—

॥ಕಂದ॥ "ಎಲ್ಲಕ್ಕೆ ಹುಲ್ಲು ಹಗುರದು।
ಹುಲ್ಲಿಂದಂ ಹಗುರವತ್ತೆ ಬೂರಲದರಳಿ॥
ಹುಲ್ಲಿಂ ಬೂರಲಕಿಂದಂ।
ನಿಲ್ಲದೇ ಎಲ್ಲರಲಿ ಬೇಡುವಾತನೆ ಹಗುರಂ" ॥೧॥

ಅಂತೇ ವೀರಶೈವರು ಅದನ್ನು ಹೆಚ್ಚಾಗಿ ತಿರಸ್ಕರಿಸಿದ್ದಾರೆ. ಇದೇ ಮೇರೆಗೆ ಎಲ್ಲ ಶಿವಜ್ಞಾನಿಗಳೂ ಬಹುಪರಿಯಿಂದ ಅದನ್ನು ತೆಗಳಿದ್ದಾರೆ. ಲಿಂಗಾಂಗಿಗಳೆಲ್ಲರೂ ಕಾಯಕದಿಂದಲೇ ಜೀವಿಸಬೇಕೆಂದು ಆಜ್ಞಾಪಿಸಿದ್ದಾರೆ.

---

# ಸಂಪಾದಕೀಯ ಟಿಪ್ಪಣಿಗಳು.

(೧) **ಆತ್ಮನಿವೇದನೆ:—** ನಾವು ಅನಿವಾರ್ಯ ಕಾರಣಕ್ಕೋಸ್ಕರ ೬೪ ಪುಟಗಳುಳ್ಳ ಮೊದಲಿನ ಶಿವಾನುಭವ ಪತ್ರಿಕೆಯನ್ನು ೪೦ ಪುಟಕ್ಕೆ ಈ ತಿಂಗಳು ತರಬೇಕಾದುದಕ್ಕೋಸ್ಕರ ಬಹಳ ವಿಷಾದಿಸುತ್ತೇವೆ. ಹೋದ ಹದಿನಾರು ವರ್ಷಗಳ ಕಾಲದಲ್ಲಿ ನಮಗೆ ಅನೇಕ ತೊಂದರೆಗಳು ಬಂದಿದ್ದರೂ ನಾವು ಪತ್ರಿಕೆಯ ಪುಟಗಳನ್ನು ಯಾವಾಗಲೂ ಕಡಿಮೆಮಾಡಿಲ್ಲ. ಮಧ್ಯದಲ್ಲಿ ಸಂಚಿಕೆಗಳು ನಿಂತರೂ ಕೂಡ ವರ್ಷಾಂತ್ಯದಲ್ಲಿ ಅವುಗಳನ್ನು ಪೂರ್ತಿಮಾಡಿದ್ದೇವೆ. ಆದರೆ ಈಗ ನಾವು ಪತ್ರಿಕೆಗೆ ಉಪಯೋಗಿಸುತ್ತಿರುವ ಕಾಗದದ ಬೆಲೆಯು ಮೊದಲು ೪—೫ ರೂಪಾಯಿ ಇದ್ದದ್ದು ಈ ಕಾಲದಲ್ಲಿ ೪೦ ರೂಪಾಯಿಗಳಿಗೆ ಬಂದಿರುತ್ತದೆ. ಮತ್ತು ಅದನ್ನು ದೊರಕಿಸುವದೂ ಬಹಳ ಕಷ್ಟವಾಗಿದೆ. ಈ ಸ್ಥಿತಿಯಲ್ಲಿ ೬೪ ಪುಟಗಳನ್ನು ಇಡುವದರಿಂದ ನಾವು ತುಂಬಾ ಹಾನಿಗೆ ಒಳಗಾಗುತ್ತೇವೆ. ಈಗಿನ ನಮ್ಮ ಚಂದಾದಾರರ ಸಂಖ್ಯೆಗೆ ಅನುಗುಣವಾಗಿ ೪೦ ಪುಟಗಳನ್ನು ಮಾತ್ರ ಇಡಬೇಕಾಗಿ ಬಂದುದರಿಂದ ಅವರು ನಮ್ಮನ್ನು ಕ್ಷಮಿಸುವರೆಂದೂ ಅವರು ಅದನ್ನು ಎಂದಿನಂತೆ ಪೋಷಿಸುವರೆಂದೂ ನಮ್ಮ ವಿನಂತಿ ಇದೆ.

(೨) **ಶಿವಾನುಭವ ಪತ್ರಿಕೆಯಲ್ಲಿಯ ಲೇಖಗಳು:—** ನಾವು ಪತ್ರಿಕೆಯಲ್ಲಿ ವೀರಶೈವೇತಿಹಾಸ ಮತ್ತು ವೀರಶೈವ ಮಹಾಪುರುಷರ ಚರಿತ್ರೆಗಳು ಈ ವಿಷಯಗಳಿಗೆ ನಾವು ಹೆಚ್ಚಿಗೆ ಮಹತ್ವ ಕೊಡುತ್ತಿರುವದು ವಾಚಕರ ಲಕ್ಷಕ್ಕೆ ಬಂದಿರಬಹುದು. ಇದರಲ್ಲಿ ಈಗ (೧) ಬಸವೇಶ್ವರನ ಚರಿತ್ರೆ ಈ ವಿಷಯವು ಬರುತ್ತಾ ಇದೆ. ಇದು ಇನ್ನೂ ೮—೧೦ ಲೇಖಗಳ ವರೆಗೆ ಹೋಗಬಹುದು. ಅನೇಕರು ಅದರ ಹಿಂದಿನ ಲೇಖಗಳನ್ನು ಬೇಡುತ್ತಾರೆ. ಆದರೆ ನಾವು ಸ್ವತಂತ್ರ ಗ್ರಂಥಮಾಡುವ ಉದ್ದಿಶ್ಯವಾಗಿ ಆ ಲೇಖಗಳನ್ನು ಬರೆಯುತ್ತಿರುವದಿಲ್ಲ. ಆದ್ದರಿಂದ ಹೆಚ್ಚಿನ ಪ್ರತಿಗಳನ್ನು ನಾವು ಹೊಡಿಸಿರುವದಿಲ್ಲಾದ್ದರಿಂದ ಅವು ದೊರಿಯುವದಿಲ್ಲ. ಆದರೆ ಲೇಖಗಳು ಮುಗಿದ ಬಳಿಕ ನಾವು ಇದರ ಸ್ವತಂತ್ರ ಗ್ರಂಥವನ್ನು ಪ್ರಸಿದ್ಧಿಸುವೆವು. (೨) ವೀರಶೈವ ರಾಜಮನೆತನಗಳ ಇತಿ

ಹಾಸವು. ಇದು ಪತ್ರಿಕೆಯಲ್ಲಿ ಮುಗಿಯುವ ವರೆಗೂ ಮುಂದುವರಿಸಲ್ಪಡುವದು. ಅದು ಗ್ರಂಥರೂಪವಾಗಿದೆ. (೩) ಶಿವಾನುಭವ ಶಬ್ದಕೋಶ ಇದು ಅತ್ಯಂತ ಮಹತ್ವದ ಗ್ರಂಥವಾಗಿ ಪರಿಣಮಿಸಿರುತ್ತದೆ. ಅದು ವೀರಶೈವ ಮತತತ್ವಗಳ ಸಾರವೆಂದು ಹೇಳಬಹುದು. ಅದು ತೀವ್ರವೇ ಮುಗಿಸಲ್ಪಡುವದು. (೪) ವರ್ಷಾಂತ್ಯದಲ್ಲಿ ಈ ಗ್ರಂಥಗಳನ್ನು ನಾವು ಮುಗಿಸಿ 'ಶಿವಶರಣರ ಚರಿತ್ರೆಗಳು' ಎಂಬ ಗ್ರಂಥವನ್ನು ಹೊಸದಾಗಿ ಪ್ರಾರಂಭಿಸುವೆವು. ವೀರಶೈವ ಸಮಾಜದಲ್ಲಿ ಶಿವಶರಣರ ಸಂಖ್ಯೆಯು ಬಹಳ ದೊಡ್ಡದಿದೆ. ಆದರೆ ಸಮಾಜದ ದುರ್ದೈವದಿಂದ ಅವರ ಚರಿತ್ರೆಗಳ ಪರಿಚಯವು ಜನರಿಗೆ ಏನೂ ಗೊತ್ತಿರುವದಿಲ್ಲ. ಈ ಮೂರು ನಾಲ್ಕು ಗ್ರಂಥಗಳಿಗೋಸ್ಕರ ಪತ್ರಿಕೆಯಲ್ಲಿ ೧೬ರಿಂದ ೨೪ರ ವರೆಗೆ ಪುಟಗಳನ್ನು ಕಾದಿಟ್ಟು ಉಳಿದ ಪುಟಗಳನ್ನು ಶಿವಾನುಭವದ ವಿಷಯದ ಬಗ್ಗೆ ಸಣ್ಣ ಸಣ್ಣ ಲೇಖಗಳಿಗೋಸ್ಕರ ಉಪಯೋಗಿಸುವೆವು. ಇನ್ನು ಮುಂದೆ ಮೊದಲಿನಂತೆ ಪತ್ರಿಕೆಯಲ್ಲಿ ದೊಡ್ಡ ದೊಡ್ಡ ಲೇಖಗಳನ್ನು ಅಥವಾ ವಚನ ಅಥವಾ ಕಾವ್ಯಗಳನ್ನು ಪ್ರಸಿದ್ಧಿಸಲು ಶಕ್ಯವಾಗುವ ಹಾಗೆ ತೋರುವದಿಲ್ಲ. ವಾಚಕರು ಇದಕ್ಕೋಸ್ಕರ ನಮ್ಮನ್ನು ಕ್ಷಮಿಸಬೇಕು. ಈ ನಮ್ಮ ಪ್ರಯತ್ನದಲ್ಲಿ ಅವರು ನಮ್ಮೊಡನೆ ಸಹಕರಿಸಬೇಕೆಂದು ನಾವು ಅವರಿಗೆ ಬಿನ್ನವಿಸಿಕೊಳ್ಳುತ್ತೇವೆ.

(೩) **ಶಿವಾನುಭವ ಸಂಘಗಳುಃ—** ಶಿವಾನುಭವ ಸಂಘಗಳ ಸ್ಥಾಪನೆಯ ವಿಷಯವಾಗಿ ನಮ್ಮ ಪತ್ರಿಕೆಯು ಯಾವಾಗಲೂ ಪ್ರೋತ್ಸಾಹಿಸುತ್ತ ಬಂದಿರುತ್ತದೆ. ಆದರೆ ಈಚೆಗೆ ಸಂಘಗಳ ವಿವರಣೆಗಳನ್ನು ನಾವು ಕೆಲವು ವಿಶೇಷ ಕಾರಣಗಳ ಮೂಲಕ ಪತ್ರಿಕೆಯಲ್ಲಿ ಕೊಡುತ್ತ ಬರಲಿಲ್ಲ. ಇನ್ನು ಮುಂದೆ ಅವುಗಳ ವಿಷಯವಾಗಿ ಪತ್ರಿಕೆಯಲ್ಲಿ ಹೆಚ್ಚಿಗೆ ಗಮನ ಕೊಡಬೇಕೆಂದು ಮಾಡಿದ್ದೇವೆ. ಈ ಛಟುವಟಿಕೆಗೆ ಮೊದಲು ಉತ್ತೇಜನ ಕೊಟ್ಟದ್ದು ನಮ್ಮ ಪತ್ರಿಕೆಯೇ ಇರುತ್ತದೆ. ಅದರಲ್ಲಿ ಕಾಲಕಾಲಕ್ಕೆ ಮಾಡಿದ ಸೂಚನೆಗಳಿಗನುಸಾರವಾಗಿ ಅನೇಕ ಶಿವಾನುಭವ ಸಂಘಗಳು ದೇಶದಲ್ಲಿ ಉತ್ಪನ್ನವಾಗಿವೆ. ಅವುಗಳಲ್ಲಿ ಕೆಲವು ಸಂಘಗಳು ಉತ್ತಮರೀತಿಯಿಂದ ಈಗಲೂ ಕಾರ್ಯಮಾಡುತ್ತಿವೆ. ಆದರೆ ಅವುಗಳ ಸಭೆಗಳಲ್ಲಿ ಓದಲಿಕ್ಕೆ ಪಠ್ಯ ಪುಸ್ತಕಗಳಿಲ್ಲದಿರುವದು ನಮಗೆ ಮಧ್ಯದಲ್ಲಿ ತೋರಿಬಂದಿತು. ಆದ್ದರಿಂದ ಈ ತೊಂದರೆಯನ್ನು

ಕೆಲಮಟ್ಟಿಗೆ ದೂರಮಾಡುವದಕ್ಕೋಸ್ಕರ ನಾವು 'ಹೊಸಪದ್ಧತಿಯ ಬಸವೇಶ್ವರನ ವಚನಗಳು' ಎಂಬ ಗ್ರಂಥವನ್ನು ಈಗ ಪ್ರಸಿದ್ಧಿಸಿದ್ದೇವೆ. ಶಿವಾನುಭವ ಮಂಟಪಗಳಲ್ಲಿ ಸಭಾಸದರು ಅದರ ಉಪಯೋಗವನ್ನು ಮಾಡಿಕೊಳ್ಳಬೇಕೆಂದು ಅವರಿಗೆ ನಮ್ಮ ಸೂಚನೆ ಇದೆ

(೪) **ಶ್ರೀಸಿದ್ಧರಾಮೇಶ್ವರ ಜಯಂತಿ:**— ತುಮಕೂರ ಜಿಲ್ಹೆಯಲ್ಲಿಯ ಅನೇಕ ಗ್ರಾಮಗಳಲ್ಲಿ ಶ್ರೀಸಿದ್ಧರಾಮೇಶ್ವರನ ಜಯಂತಿಗಳು ಹೋದತಿಂಗಳು ಮಕರಸಂಕ್ರಮಣದ ಕಾಲದಲ್ಲಿ ಆಚರಿಸಲ್ಪಟ್ಟಿರುತ್ತವೆ. ತಿಪಟೂರ ಗ್ರಾಮದಿಂದ ೧೮ ಮೈಲು ದೂರವಿರುವ ಗೋಡೇಕೆರೆ ಎಂಬಲ್ಲಿ ಈ ಜಯಂತಿಯು ರಾ। ಬ। ಪಿ. ಜಿ. ಹಳಕಟ್ಟಿ ಇವರ ಅಧ್ಯಕ್ಷತೆಯಲ್ಲಿ ಜರಗಿಸಲ್ಪಟ್ಟಿತು. ಈ ಎಲ್ಲ ಗ್ರಾಮಗಳಲ್ಲಿ ಇರುವ ಕುರುಹುಗಳ ಮೇಲಿಂದ ಸೊಲ್ಲಾಪುರದ ಶಿದ್ಧರಾಮೇಶ್ವರರೇ ಈ ಭಾಗಗಳಲ್ಲಿ ಸಂಚಾರ ಮಾಡಿರಬೇಕೆಂದು ತೋರುತ್ತದೆ. ವೀರಶೈವ ಧರ್ಮದ ಆದ್ಯ ಪ್ರವರ್ತಕರು ಧರ್ಮೋಪದೇಶ ಮಾಡುತ್ತ ಹೀಗೆ ಸಂಚರಿಸಿರಬೇಕೆಂದು ಕಂಡು ಬರುತ್ತದೆ. ಅವರು ವಚನಗಳನ್ನು ರಚಿಸಿ ಅವುಗಳ ಮೂಲಕ ಜನರಿಗೆ ಬೋಧಮಾಡಿದ್ದಾರೆ. ರಾ. ಬ. ಹಳಕಟ್ಟಿಯವರು ತಮ್ಮ ಭಾಷಣದಲ್ಲಿ ಅಲ್ಲಲ್ಲಿ ಶಿವಾನುಭವಮಂಟಪಗಳನ್ನು ಸ್ಥಾಪಿಸಿ ಶಿವಶರಣರ ವಚನಗ್ರಂಥಗಳನ್ನು ಓದುವ ಉಪಕ್ರಮವನ್ನು ಅನುಸರಿಸಬೇಕೆಂದು ಒತ್ತಿಹೇಳಿದರು. ಒಂದು ಗ್ರಾಮದಲ್ಲಿ ಶಿವಾನುಭವ ಮಂಟಪವು ಸರಿಯಾಗಿ ನಡಿಯಬೇಕಾದರೆ ವಚನಶಾಸ್ತ್ರವನ್ನು ಅಭ್ಯಾಸ ಮಾಡಲಿಚ್ಛಿಸುವ ಒಬ್ಬಿಬ್ಬರಾದರೂ ಇರುವದು ಅವಶ್ಯವು. ಅವರು ತಾವು ಅಭ್ಯಾಸ ಮಾಡುವದಲ್ಲದೆ ತಮಗೆ ತಿಳಿದಿದ್ದನ್ನು ಇತರರಿಗೆ ತಿಳಿಸಲಿಕ್ಕೂ ಪ್ರವೃತ್ತರಾಗತಕ್ಕದ್ದು. ವಾರಕ್ಕೆ ಒಂದಾವರ್ತಿಯಾದರೂ ಎಲ್ಲರೂ ಗ್ರಾಮದಲ್ಲಿ ಕೂಡತಕ್ಕದ್ದು. ಬಾಲಕರಲ್ಲಿಯೂ ಸ್ತ್ರೀಯರಲ್ಲಿಯೂ ಈ ಕಾರ್ಯವನ್ನು ಹೆಚ್ಚಾಗಿ ಮುಂದುವರಿಸತಕ್ಕದ್ದು. ವಚನವಾಙ್ಮಯದ ಅಭ್ಯಾಸಕ್ಕೋಸ್ಕರ ಸ್ಪರ್ಧೆಗಳನ್ನು ಏರ್ಪಡಿಸತಕ್ಕದ್ದು. ವಚನಗಾಯನವನ್ನು ಹೆಚ್ಚಾಗಿ ಪ್ರಚಾರದಲ್ಲಿ ತರತಕ್ಕದ್ದು. ಒಂದು ಅನುಕೂಲವಾದ ಗ್ರಾಮದಲ್ಲಿ ಧಾರ್ಮಿಕ ಗ್ರಂಥಾಲಯವನ್ನು ಏರ್ಪಡಿಸತಕ್ಕದ್ದು. ಧಾರ್ಮಿಕ ಗ್ರಂಥವಾಚನದಲ್ಲಿ ಮುಂದುವರೆದವರು ಈ ಗ್ರಂಥಾಲಯದ ಉಪಯೋಗ ಮಾಡಿ ಷಟ್‌ಸ್ಥಲದ ತತ್ವಗಳನ್ನು ಅರಿಯಲು ತಾವು ಪ್ರಯತ್ನಿಸುವದಲ್ಲದೆ ಗ್ರಾಮಾಂ

ತರಗಳಲ್ಲಿ ಬೋಧಿಸಮಾಡಲೂ ಮುಂದಾಗತಕ್ಕದ್ದು. ಅವರ ಪ್ರವಾಸ ವೆಚ್ಚಕ್ಕೋಸ್ಕರ ಒಂದು ನಿಧಿಯ ಏರ್ಪಾಡನ್ನು ಮಾಡತಕ್ಕದ್ದು. ಈ ಪ್ರಕಾರ ಪ್ರಯತ್ನಿಸಿದಲ್ಲಿ ಜನತೆಯಲ್ಲಿ ತೀವ್ರವಾಗಿ ಮಹತ್ವದ ಪರಿಣಾಮ ಗಳಾಗದೆ ಇರಲಾರವೆಂದು ನಾವು ಭಾವಿಸಿದ್ದೇವೆ.

(೫) **ಶಿವಾನುಭವಕ್ಕೆ ಸಹಾಯಃ**--- ಈಗಿನ ಕಠಿಣ ಪರಿಸ್ಥಿತಿ ಯಲ್ಲಿ ಶಿವಾನುಭವ ಪತ್ರಿಕೆಗೆ ಸಹಾಯವು ಅತ್ಯಾವಶ್ಯಕವಾಗಿಬೇಕಾ ಗಿರುತ್ತದೆ. ಈ ಸಂಗತಿಯನ್ನು ನಾವು ಹಿಂದಿನ ಸಂಚಿಕೆಗಳಲ್ಲಿ ನಿವೇ ದಿಸಲು ಕೆಲ ಮಹನೀಯರು ತಮ್ಮ ಮಿತ್ರರನ್ನು ಪ್ರೋತ್ಸಾಹಿಸಿ ನಮಗೆ ಹೆಚ್ಚಿಗೆ ಚಂದಾದಾರರನ್ನು ಮಾಡಿಕೊಟ್ಟಿದ್ದಾರೆ. ಅವರ ಉಪಕಾರವನ್ನು ನಾವು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತೇವೆ. ಅವರು ಯಾರೆಂದರೆ— (೧) ಶ್ರೀಯುತ ಚನಮಲ್ಲಪ್ಪಾ ಅಬಕಾರ ಮು. ಬನಹಟ್ಟಿ ಸಂ. ಜಮ ಖಂಡಿ ಇವರ ಪ್ರಯತ್ನದಿಂದ ೧೨ ಜನ ವರ್ಗಣೀದಾರರು ಆಗಿದ್ದಾರೆ. (೨) ಶ್ರೀಯುತ ಲಲಾಟಪ್ಪ ಗುರುಪಾದಪ್ಪ ಮಿರ್ಜಿ ಮು. ಸವಣೂರು ಇವರ ಪ್ರಯತ್ನದಿಂದ ೧೭ ಜನ ವರ್ಗಣೀದಾರರು ಆಗಿದ್ದಾರೆ. (೩) ರಾ. ರಾ. ಶ್ರೀ. ಎಸ್. ಪ್ಹಿ. ಹಂಜಿ ಎಮ್. ಏ. ಮು. ಬೈಲಹೊಂಗಲ ಇವರ ಪ್ರಯತ್ನದಿಂದ ೬ ಜನರು, (೪) ಶ್ರೀಗುರುಸಂಗನಬಸವ ಸ್ವಾಮಿ ಗಳು ಬಂಥನಾಳ ಇವರ ಪ್ರಯತ್ನದಿಂದ ೭ ಜನರು, (೫) ರಾ|| ರಾ|| ಶಿವಪ್ಪ ಸಂಗನಬಸಪ್ಪ ಕಲ್ಯಾಣಶೆಟ್ಟಿ ಮು. ಲೋಣಿ ಇವರ ಪ್ರಯತ್ನ ದಿಂದ ೬ ಜನರು, (೬) ರಾ|| ರಾ|| ಮಲ್ಲಪ್ಪ ಪರಪ್ಪ ಪಟ್ಟೇದ ಮು. ಸಂಪಗಾವ ಇವರಿಂದ ಇಬ್ಬರು, (೭) ರಾ|| ರಾ|| ರೇವಣಸಿದ್ದಪ್ಪ ನಂಜಪ್ಪ ಹಿಪ್ಪರಿಗಿ ಮು. ಅಥಣಿ ಇವರಿಂದ ಒಬ್ಬರು, (೮) ರಾ|| ರಾ|| ಚಂದ್ರ ಶೇಖರಪ್ಪ ನಾಗಠಾಣ ಮು. ಹುಬ್ಬಳ್ಳಿ ಇವರ ಮುಖಾಂತರ ೭ ಜನರು ವರ್ಗಣೀದಾರರು ಆಗಿದ್ದಾರೆ. ಇದೇ ಮೇರೆಗೆ ಗೋಕಾಕದಲ್ಲಿಯ ಒಬ್ಬ ಮಹನೀಯರು ೧೦ ಜನರನ್ನು ವರ್ಗಣೀದಾರರನ್ನು ಮಾಡಿದ್ದಾರೆ. ಅವರು ಇನ್ನೂ ವಿಶೇಷ ಪ್ರಯತ್ನ ಮಾಡುವವರಾಗಿದ್ದಾರೆ. ಇವರೆಲ್ಲರಿಗೂ ನಾವು ಅತ್ಯಂತ ಆಭಾರಿಯಾಗಿದ್ದೇವೆ. ಇದೇ ಮೇರೆಗೆ ಬೇರೆ ಪ್ರಮುಖ ಪಟ್ಟಣಗ ಳಲ್ಲಿಯವರು ಈ ಕಾಲದಲ್ಲಿ ನಮಗೆ ಸಹಾಯ ಮಾಡಿದಲ್ಲಿ ಶಿವಾನುಭವ ಪತ್ರಿಕೆಗೆ ಒದಗಿದ ಕಠಿಣ ಪರಿಸ್ಥಿತಿಯು ದೂರಾಗುವದೆಂದು ನಾವು ಭರವಸೆ ತಾಳಿದ್ದೇವೆ.

---




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಮಾರ್ಚ ೧೯೪೩. [ಸಂಚಿಕೆ ೬

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಶಿವಭಕ್ತ ವಕಲಿಹರ್ | ಹುಬ್ಬಳ್ಳಿಯ ಶ್ರೀ ಸಿದ್ಧವೀರ ದೇವರು | ೨೪೧ |
| ೨ ಶರಣರ ಸಂದೇಶ | ಶ್ರೀ. ಎನ್. ರಾಚೊಟಿಯ್ಯ ಕಾನಕಾನಹಳ್ಳಿ | ೨೪೫ |
| ೩ ಶಿವಶರಣರ ಸದಾಚಾರ ಸದ್ಭಕ್ತಿಗಳು | ಶ್ರೀ. ಶಿವಮೂರ್ತಿ | ೨೪೭ |
| ೪ ನೀತಿಯ ಮಾತುಗಳು | ಶ್ರೀ. ಜಿ. ಎಸ್. ಕನ್ನೂರ ವಿಜಾಪೂರ | ೨೫೨ |
| ೫ ಮೋಕ್ಷದ ಸ್ವರೂಪ ಅದನ್ನು ಹೊಂದುವ ಸುಲಭೋಪಾಯ | ಶ್ರೀ. ಎಂ. ಎಲ್. ನಾಗಣ್ಣ ಮೈಸೂರ | ೨೫೪ |
| ೬ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೨೫೭ |
| ೭ ಶಿವಾನುಭವ ಶಬ್ದಕೋಶ | ... ... ... | ೧೭೩–೧೮೦ |
| ೮ ವೀರಶೈವ ರಾಜಮನೆತನಗಳ ಚರಿತ್ರೆ | ... ... | ೪೧–೪೮ |

# ಶಿವಾನುಭವ.

| ವರ್ಷ ೧೭ | ಮಾರ್ಚ ೧೯೪೩. | ಸಂಚಿಕೆ ೬ |
| --- | --- | --- |

## ಶಿವಭಕ್ತ ವಕಲಿಹರ್.

(ಬರಹಗಾರರು:— ಹುಬ್ಬಳ್ಳಿಯ ಶ್ರೀಸಿದ್ಧ[illegible]ದೇವರು.)

ತಮಿಳುನಾಡಿನಲ್ಲಿ 'ಶಿವಭಕ್ತ ವಕ್ಕಲಿಹರ್' ಎಂಬ ಒಂದು ಸಂಗಡ ವಿದೆ. ಆ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಾವಿರಾರು ಜನರು ಚಿಕ್ಕ ಚಿಕ್ಕ ಗುಂಪುಗಳಾಗಿ ನೆಲಸಿದ್ದಾರೆ. ವ್ಯವಸಾಯವೇ ಅವರ ಉದ್ಯೋಗ. ಸಾಮಾನ್ಯವಾಗಿ ಎಲ್ಲರು ಜಮೀನದಾರರು. ಕೆಲವರು ಹಣಗಾರರಾಗಿಯೂ, ಮತ್ತೆ ಕೆಲವರು ಸಾಮಾನ್ಯ ಜೀವಿಗಳಾಗಿಯೂ ಇದ್ದಾರೆ. ವಿದ್ಯೆಯಲ್ಲಿ ಅಷ್ಟೊಂದು ಮುಂದುವರಿದಿಲ್ಲ. ಸರಕಾರಿಯ ನೌಕರಿಯಲ್ಲಿ ಇಲ್ಲವೆಂದರೂ ಸಲ್ಲುವುದು. ಆದರೂ ಒಳ್ಳೆಯ ನಾಗರಿಕರಾಗಿ ತೋರುತ್ತಾರೆ. ಅವರ ಮನೆಯ ಮಾತು ಕನ್ನಡ. ಹೆಂಗಸರು ಮಕ್ಕಳೆಲ್ಲರು ಕನ್ನಡದ ನುಡಿಯನ್ನೇ ನುಡಿಯುತ್ತಾರೆ. ನಾವು ಅಚ್ಚ ಕನ್ನಡಿಗರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಎತ್ತೆತ್ತ ನೋಡಿದತ್ತ ಕನ್ನಡದ ಶಬ್ದವೇ ಇಲ್ಲದ ನಾಡಿನಲ್ಲಿ ಹುಟ್ಟಿಬೆಳೆದು ಎಲ್ಲ ಬದುಕು ತಮಿಳು ಭಾಷೆಯಲ್ಲಿಯೇ ನಡೆಯುತ್ತಿರುವಾಗ ಕನ್ನಡವನ್ನು ಮರೆಯದೆ ಕನ್ನಡದ ಮಾತನ್ನು ಮನೆಯಲ್ಲಾದರೂ ಉಳಿಸಿಕೊಂಡು ಬಳಸುತ್ತ ಬಂದಿರುವದು ಒಂದು ಬಗೆಯ ಹೆಮ್ಮೆಯ ಮಾತೇ ಸರಿ.

ಇವರೆಲ್ಲರೂ ವೀರಶೈವರೆಂದು ಉತ್ಸಾಹದಿಂದ ಹೇಳಿಕೊಳ್ಳುತ್ತಾರೆ. ಅಂಗದ ಮೇಲೆ ಲಿಂಗ ಮಾತ್ರ ಇರುವದಿಲ್ಲ. ಸಾಮಾನ್ಯವಾಗಿ ಲಿಂಗವಂತರ ಸಾಂಪ್ರದಾಯದ ಆಚಾರವಿಚಾರ ನಡೆನುಡಿಗಳು ಆಚರಣೆಯ

ಲ್ಲಿವೆ. ಇವರು ಕೇವಲ ಶಾಖಾಹಾರಿಗಳು, ವಿಭೂತಿ ರುದ್ರಾಕ್ಷಧಾರಕರು, ಬಸಪ್ಪ, ಚೆನ್ನಬಸಪ್ಪ, ಶಿವಪ್ಪ, ನಂಜಪ್ಪ, ಪಾರ್ವತಮ್ಮ, ಗೌರಮ್ಮ, ಶಿವಮ್ಮ, ಬಸಮ್ಮ, ನೀಲಮ್ಮ ಎಂಬ ಹೆಸರುಗಳಿಂದ ಕರೆದುಕೊಳ್ಳುತ್ತಾರೆ. ತಮಗಿಂತ ಅನ್ಯರನ್ನು ಭವಿಗಳೆಂದು ಸಂಬೋಧಿಸುತ್ತಾರೆ. ತಮ್ಮ ಪಂಗಡದವರು ಅನ್ಯರಲ್ಲಿ ಊಟೋಪಚಾರ ಮಾಡಿದರೆ, ಒಡಗೂಡಿದರೆ ಅವರನ್ನು ಕೊನೆಯವರೆವಿಗೂ ತಮ್ಮ ಪಂಗಡದಲ್ಲಿ ಸೇರಿಸಿಕೊಳ್ಳುವದಿಲ್ಲ. ಎಲ್ಲ ವಿಧದಿಂದಲೂ ಅವರ ಸಂಬಂಧವನ್ನು ಬಿಟ್ಟುಬಿಡುತ್ತಾರೆ. ಆ ಪಂಗಡದವರಿಗೆ ಮನೆಗೊಂದು ಲಿಂಗದಂತ ಎಲ್ಲರ ಮನೆಯಲ್ಲಿಯೂ ಒಂದೊಂದು ಲಿಂಗವಿರುತ್ತದೆ. ಅದೊಂದು ಲಿಂಗವೇ ಎಲ್ಲರಿಗೂ ಲಿಂಗ. ಅದಕ್ಕೆ ಲಿಂಗವಂತರ ಲಿಂಗದಂತೆ ಕಂತೆಯನ್ನು ಧರಿಸಿವೆ. ಲಿಂಗದ ಆಕೃತಿಯನ್ನು ಬೆಳ್ಳಿಯ ಕರಡಿಗೆಯಲ್ಲಿ ಇರಿಸಿರುತ್ತಾರೆ. ಇದನ್ನು ಯಾರೂ ಯಾವಾಗಲೂ ಧರಿಸುವದಿಲ್ಲ. ಮದುವೆಯ ಸಮಯದಲ್ಲಿ ಮಾತ್ರ ವರನ ಕೊರಳಿಗೆ ಹಾಕುತ್ತಾರೆ. ಅದಿಲ್ಲದೆ ಮದುವೆಯು ನಡೆಯುವದೇ ಇಲ್ಲ. ಲಿಂಗ ದೇವನು ಭದ್ರವಾದ ಪೆಟ್ಟಿಗೆಯಲ್ಲಿಯೇ ಉಳಿದ ಸಮಯವನ್ನೆಲ್ಲ ಕಳೆಯಬೇಕು. ಮೇಲಾಗಿ ಭದ್ರವಾದ ಬೀಗ ಪೂಜೆಯ ಸಮಯದಲ್ಲಾದರು ಹೊರಗೆ ಬಂದ ಸ್ವೀಕರಿಸುವ ಯೋಗ್ಯ ಲಿಂಗದೇವನಿಗಿದೆಯೇ ? ಇಲ್ಲ. ಪೆಟ್ಟಿಗೆಯ ಮೇಲೆಯೇ ಪೂಜೆ ಪುರಸ್ಕಾರ ನಮಸ್ಕಾರಗಳಾಗಬೇಕು.

ಇವರಿಗೆ ವೀರಶೈವ ಗುರುಗಳೇ ಗುರುಗಳು. ಮದುವೆ ದಾನ ಧರ್ಮ ವಿಶೇಷ ಕಾರ್ಯಗಳಲ್ಲಿ ಗುರುಗಳನ್ನು ಬರಮಾಡಿಕೊಂಡು ವೀರಶೈವ ಸಾಂಪ್ರದಾಯದಂತೆ ಕಾರ್ಯವನ್ನು ನೆರವೇರಿಸಿಕೊಳ್ಳುತ್ತಾರೆ. ಗುರುಗಳನ್ನು ಪೂಜಿಸಿ ಪಾದೋದಕ ಪ್ರಸಾದಗಳನ್ನು ತೆಗೆದುಕೊಳ್ಳುತ್ತಾರೆ. ಕಾಲವಾದ ಸಮಯದಲ್ಲಿ ಇವರೆ ಬಂದು ಅಂತ್ಯ ಕ್ರಿಯೆಯನ್ನು ಪೂರೈಸಬೇಕು. ಅವರ ಲೆಕ್ಕ ಪತ್ರಗಳ ಆರಂಭದಲ್ಲಿ " ಶಿವಾಯ ನಮಃ " ಎಂಬ ಮಂಗಲ ಸೂಚಕ ಮಂತ್ರವನ್ನು ಬರೆದುಕೊಳ್ಳುವ ಪದ್ಧತಿಯಿದೆ. ರಿಕಾರ್ಡುಗಳಲ್ಲಿಯೂ, ಸರಕಾರಿಯ ವ್ಯವಹಾರದಲ್ಲಿಯೂ 'ಶಿವಭಕ್ತವಕ್ಕಲಿಹರ್' ಎಂಬ ಶಬ್ದವನ್ನು ಎಂದಿನಿಂದಲೂ ಬಳಸುತ್ತ ಬಂದಿದ್ದಾರೆ

ತೆಲುಗು, ತಮಿಳು ನಾಡುಗಳಲ್ಲಿ ಲಿಂಗಧಾರಿಗಳಾದ ' ಶಿವಭಕ್ತವಕ್ಕಲಿಹರ್ ' ಎಂದು ಹೇಳಿಕೊಳ್ಳುವ ಪಂಗಡವಿದೆ ಎಂದು ಕೇಳುತ್ತೇವೆ.

ಅವರೂ ಶಾಖಾಹಾರಿಗಳಾಗಿ ವೀರಶೈವರ ಆಚಾರದಂತೆ ನಡೆನುಡಿ ಉಳ್ಳವರಾಗಿರುವಂತೆ ಕಾಣುತ್ತದೆ.

ಇವರೆಲ್ಲರು ವಿಶೇಷವಾಗಿ ಮೊದಲು ಮೈಸೂರು ಪ್ರಾಂತವಾಸಿಗಳೆಂದು ಗೊತ್ತಾಗುತ್ತದೆ. ಮೈಸೂರಿನ ಮೇಲೆ ಮಹಮ್ಮದೀಯರು ಪ್ರಬಲದಾಳಿ ಇಟ್ಟಾಗ ರಾಜ್ಯಭಾರ ನಡೆಯಿಸುವಾಗ ಹಿಂದುಗಳು ತಮಗೆ ಬಂದೊದಗಿದ ತೊಡಕು ತೊಂದರೆಗಳಿಂದ ತಾಳಲಾರದೆ ಬಾಳಲಾರದೆ ದಿಕ್ಕೋರಿದತ್ತ ಧಾವಿಸಿದಂತೆ ತೋರುತ್ತದೆ.

ಆ ದಶೆಯು ವೀರಶೈವ ಜನಾಂಗಕ್ಕೆ ತಪ್ಪಲಿಲ್ಲ. ಆಗ ವೀರಶೈವ ಜನಾಂಗವು ವಿಶೇಷ ನೊಂದಂತೆ, ಬೆಂದಂತೆ, ಕಂದಿದಂತೆ ಕುಂದಿದಂತಾಗಿರಬೇಕು. ತಮ್ಮ ಮಾನವನ್ನು, ಮತವನ್ನು, ಪ್ರಾಣವನ್ನು, ಉಳಿಸಿಕೊಳ್ಳಲು ನುಸುಳಿಕೊಂಡು ಕಂಡ ಕಂಡೆಡೆಗೆ ಪಲಾಯನವಾಗಿಂಬೇಕು. ತಮಿಳುನಾಡು ಶಿವಭಕ್ತಿಯ ಉಗಮಸ್ಥಾನ, ಶಿವಭಕ್ತರಬೀಡು, ನಾಡೆಂದ್ಯ ಬಗೆದು ಬಹಳ ಶಿವಭಕ್ತರು ತಮಿಳು ನಾಡನ್ನೆ ಹೊಕ್ಕಿರಬೇಕು.

ಕನ್ನಡ ನಾಡನ್ನು ಬಿಟ್ಟು ಪರಪ್ರಾಂತದಲ್ಲಿ ನೆಲೆಯಾಗಿ ನಿಲ್ಲಲು ಆ ಪ್ರಾಂತದ ದೇಶ ಭಾಷೆಗಳನ್ನು ಅನುಸರಿಸಬೇಕಲ್ಲವೆ! ಅನುಕರಿಸಬೇಕಲ್ಲವೆ! ಮೇಲಾಗಿ ಬಹಳ ದಿನಗಳಿಂದ ವೀರಶೈವರ ಸಂಪರ್ಕಯಿಲ್ಲದಿರುವಾಗ, ಗುರುಗಳ ಬೋಧೆ ದೊರೆಯದಿರುವಾಗ, ತಮ್ಮ ತತ್ವ ಸಂಸ್ಕೃತಿಗಳನ್ನ ಮರೆತಿರಲು ಸಾಕು. 'ಕಾಯಕವೇ ಕೈಲಾಸ' ಎಂದು ಹೇಳುವ ವೀರಶೈವರು ಯಾವದಾಗರೆ ಎಂದು ಕಾಯಕವನ್ನೆಸಗಲೇಬೇಕಲ್ಲವೇ? ಅಲ್ಲಲ್ಲಿ ನೆಲೆಯಾಗಿ ನಿಂತವರು ಆ ಪ್ರಾಂತ ಭಾಷೆಯಲ್ಲಿಯೇ ತಮ್ಮ ಕಾಯಕದ ಹೆಸರನ್ನು ಹೆಸರಿಸುವದು ಸಹಜವಾದ ಸಂಗತಿ.

ನಮ್ಮ ನೆರೆ ಹೊರೆಯ ಪ್ರಾಂತಗಳನ್ನ ಹೊಕ್ಕು ಕೊಂಚ ಸಂಶೋಧನ ದೃಷ್ಟಿಯಿಂದ ಕಂಡರೆ ವೀರಶೈವ ಜನಾಂಗವು ಯಾವ ಸ್ಥಿತಿಯಲ್ಲಿದೆ, ಹೇಗೆ ಕಳೆಗುಂದಿದೆ, ಕಳೆಗುಂದುತ್ತಲಿದೆ, ಹೇಗೆ ಕರಗಿದೆ, ಕರಗುತ್ತಲಿದೆ, ಮುಂತಾದ ಸಂಗತಿಗಳು ನಿಚ್ಚಳವಾಗಿ ತಿಳಿಯುತ್ತದೆ, ಹೊಳೆಯುತ್ತದೆ. ಇದೆಲ್ಲವನ್ನು ಕಂಡರೆ ವೀರಶೈವ ಜನಾಂಗವು ೮೦ ಲಕ್ಷವಿತ್ತೆಂದು ಸಂಶೋಧಕರು ಹೇಳುವ ಸಂಖ್ಯೆಯಿಂದ ಇನ್ನೂ ಮಿಗಿಲಾಗಿದ್ದಿರಬೇಕಲ್ಲವೆ? ಎಂದು ಸಂದೇಹವಾಗುತ್ತದೆ.

ವೀರಶೈವ ಜನಾಂಗವು ಅಪಾರವಾದ ಅವನತಿಯ ಅವಸ್ಥೆಗೆ ಇಳಿದಿರಬೇಕಾಗಿದ್ದರೆ, ಇಳಿಯುತ್ತಲೂ ಇರಬೇಕಾಗಿದ್ದರೆ, ವೀರಶೈವ ಗುರುಜಂಗಮರ ಗುರುತರವಾದ ಕರ್ತವ್ಯಲೋಪದೋಷ, ವೀರಶೈವ ಮಹಾಸಭೆಯವರ ಅನಾದರ, ಆಲಸ್ಯ, ಅನೈಕ್ಯಮತ್ಯ, ಸಮಾಜ ಮುಖಂಡರ ಮರವೆಗಳಿಂದೇ ಹೇಳಬೇಕು.

ಕನ್ನಡನಾಡಿನ ಅಕ್ಕ ಪಕ್ಕದ ತೆಲುಗು, ತಮಿಳು, ಕೊಡಗು, ಮಹಾರಾಷ್ಟ್ರ, ನೈಜಾಮ ಪ್ರಾಂತಗಳನ್ನು ಸುತ್ತಬೇಕು. ಅಲ್ಲಿಯ ವೀರಶೈವರ ಸ್ಥಿತಿಗತಿಯನ್ನು, ರೀತಿ ನೀತಿಯನ್ನು ಲಕ್ಷಿಸಬೇಕು. ಅವರ ಕನ್ನಡದ ಮಾತನ್ನು, ಮತವನ್ನು, ತತ್ವವನ್ನು ಸಂಸ್ಕೃತಿಯನ್ನು ಉಳಿಸುವ, ಬಳಸುವ, ಬೆಳೆಸುವ, ಬೆಳಕಿಗೆ ತರುವ, ಉದಾತ್ತ ಉಪಾಯದತ್ತ ಎಲ್ಲರು ಮನಸ್ಸು ಮಾಡಬೇಕು. ಎಲ್ಲರು ಒಂದಾಗಿ ಒಮ್ಮೆಯಾಗಿ ಒಂದು ಸುವ್ಯವಸ್ಥಿತ ಕಾರ್ಯಕ್ಕೆ ಬರಬೇಕೆಂಬ ನನ್ನ ಕೋರಿಕೆ, ಹಾರೈಕೆ.

ಈಗ ತಮಿಳು ನಾಡಿನ 'ಶಿವಭಕ್ತ ವಕ್ಕಲಿಹರ್' ಎಂಬ ಪಂಗಡದವರು ಶಿವದೀಕ್ಷೆಯನ್ನು ಹೊಂದಬೇಕು. ವೀರಶೈವದ ತತ್ವ ಸಂಸ್ಕೃತಿಗಳನ್ನು ತಿಳಿಯಬೇಕು. ನಿಜ ವೀರಶೈವರಾಗಬೇಕೆಂದು ಬಯಸುತ್ತಾರೆ. ಸಮಾಜದ ಗುರುಗಳ ಆಗಮನವನ್ನು ನಿರೀಕ್ಷಿಸುತ್ತಲೂ ಇದ್ದಾರೆ.

---

# ಶರಣರ ಸಂದೇಶ.

(ಶ್ರೀಯುತ ಎನ್. ರಾಚೋಟಿಯ್ಯ-ಕಾನಕಾನಹಳ್ಳಿ)

ಧಾರುಣಿಯು ಸುಜನರತಿ ವರಪುರಾತನ ಶರಣ
ಸಂದೇಶವನು ಕಾದು ಕಾತರಿಸರು,
ಕಾತರಿಪ ಜನಗಣದ ಮನದುಲಿವ ನಾಲಿಸುತ
ಶರಣಜನಹಿತಬಂಧು ಬೆಳಗುತಿಹನು ॥೧॥

ಕೃತ್ತಿವಾಸನ ಪುಣ್ಯಚರಿತರಾದ ಪ್ರಮಥರತ್ತ
ತಿರುಗಿಪರೇನು ಜಗದ ಜನರು?
ಕತ್ತಲೆಯ ಕಳೆಯುದಲೆ ಕರ್ತ್ಯವನು ಕರದೊ
ಳಗದೆತ್ತ ಪೂಜಿಪರದನು ತಿಳಿಯದಿಹೆನು ॥೨॥

ಅಂಗಗುಣವವರಲ್ಲಿ ತುಂಬಿ ತುಳು
ಕುತಲಿರಲು ಲಿಂಗವವರಂಗದೊಳಗೆಲ್ಲಿರ್ಪುದು?
ಮಂಗಮನುಜರ ನೋಡಿ ಲಿಂಗದೇಹಿ
ಗಳೆಂದು ಸಂಗಸಮರಸಕೆನ್ನ ಮನವೆಳಸದು ॥೩॥

ಆರು ಭ್ರಮೆಗಳಲಳಲಿ ಬಳಲಿ ಬೆಂಡಾ
ಗುತಲಿ ಏಳು ವ್ಯಸನಗಳೊಳಗೆ ಉರುಳುರುಳಿ ತಾವು
ಮೇಲೆನಿಪ ಗುರುರೇವಣಾರಾಧ್ಯ ನೆನಿಪವಗೆ
ಈ ಮಹಿಯ ಹುಲು ಮನುಜರವರು ಸರಿಯೆ? ॥೪॥

ಜಾತಿಸೂತಕವಿರಲು ಆತ ತಾ ಗುರುವಹನೆ
ಮಾತುಮಾತಿಗೆ ನೋಡೆ ತೋರ್ಪುದದು ತಾನೆ
ನೀತಿ ಶೂನ್ಯತೆಯಿಂದ ಪಾತಕವ ಗಳಿಸುತಿಹ
ಪಾಪಾತ್ಮರಿಗದುಂಟೆ ವಿಮಲ ಬಕುತಿ? ॥೫॥

ಮಂಡೆ ಬೋಳಾದವರಪಾರ ವಿರುತಿಹರೆಂದು
ಕಂಡು ನಂಬುವದೆಂತು ಕಡುಕಷ್ಟವಮಮಾ!

ಕಂಡು ನಂಬಲುಬೇಕು ಕಡುವಿರಕ್ತಿಯೊಳಪ್ಪ
ಖಂಡ ಮೂರುತಿ ನಮ್ಮ ಪ್ರಭುವರ್ಯನ ॥೬॥

ಶರಣರನುಭಾವವನು ಜಗದಿ ಪಸರಿಸು
ತಿರುವ ವಚನಶಾಸ್ತ್ರಪಿತಾಮಹನು ಎನಿಸಿ
ನಡೆನುಡಿಯೊಳೊಂದಾದ ಹಳಕಟ್ಟಿ ವಿಬುಧ ವರ
ರಚಿಸಿಹರು ಶರಣರನುಭವದ ಮಂಟಪವ ॥೭॥

ಅದನೋಡಿ ನಾವಿನ್ನು ಮುದದಿಂದ ಸಾರಿಹೆವು
ಸದು ಹೃದಯ ಶರಣರಾ ಅನುಭಾವಕೆ
ಎಡರೇನು ಬಂದೊಡೆಯು ಅದ ನೀಗುತಿರ್ಪನು
ಸದುಚನ್ನಸಂಗನಾ ಬಸವಣ್ಣನು. ॥೮॥

ಭಕ್ತನೇ ಮೊದಲಿಗನು ಭಕ್ತನೇ ಗುರುವಹನು
ಭಕ್ತನೇ ಶಕ್ತನಹ ಕಡೆ ಜಂಗಮ,
ಬಕುತಿಯಾ ಖನಿಯಾಗಿ ಬೆಳಕಿನಾ ಮಣಿ
ಯಾಗಿ ಚಿನುಮಯಾತ್ಮಕನೊಡನೆ ಕೂಡಿ ಮೆರೆವ ॥೯॥

ಅಂದಿನ ಶರಣರಂತಿಂದಿನಾ ಭಕ್ತರೂ
ಅನುಭಾವದೊಳು ಕೂಡಿ ಮನವ ನಿಲಿಸಿ,
ಲಿಂಗ ದೇಹಿಯು ಚನ್ನಸಂಗನಾ ಬಸವಣ್ಣ
ನಂಘ್ರಿಕಮಲವ ನಂಬಿ ನೆನೆದು ಬದುಕಿ, ॥೧೦॥

ವರಪುರೀ ರಾಚೂಟಿ ಪ್ರಭುವರ್ಯನೊಳು
ಬೆರಸಿ, ಗುರುಲಿಂಗಜಂಗಮದ ರೂಪು ತಾವಾಗಿ,
ಜಗದ ಜೀವರು ಶರಣ ಮಾರ್ಗದನು
ಅರಿಯುತಲಿ ಪರಮನಾ ನಿರ್ಮಯಲ ಗತಿವಡೆಯಲಿ ॥೧೧॥

# ಶಿವಶರಣರ ಸದಾಚಾರ ಸದ್ಭಕ್ತಿಗಳು.

( ಲೇಖಕ:— ಶಿವಮೂರ್ತಿ )

'ಸದಾಚಾರ ಸದ್ಭಕ್ತಿಯಿಲ್ಲದವರ ನಾನೊಲ್ಲೆನಯ್ಯ. ಅವರ ಆರಾಧನೆ ದಂಡ. ನಿಚ್ಚನಿಚ್ಚ ಪ್ರಾಯಶ್ಚಿತ್ತರ ನಾನೊಲ್ಲೆನಯ್ಯ ಕೂಡಲ ಸಂಗಮದೇವಾ ಭೂಮಿಭಾರಕರ' ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. ಶಿವಶರಣರು ಲೌಕಿಕ ಪಾರಮಾರ್ಥಗಳನ್ನು ಸುಗಮವಾಗಿ ಸಾಗಿಸಿಕೊಂಡು ಹೋಗುವ ಕುಶಲರು. ಲೌಕಿಕ ವ್ಯವಹಾರದಲ್ಲಿ ನೀತಿಯನ್ನೂ ಪಾರಮಾರ್ಥ ಸಾಧನೆಯಲ್ಲಿ ಭಕ್ತಿ ಮಾರ್ಗವನ್ನೂ ಅವಲಂಬಿಸಿ ತಾವು ಸುಖ ಶಾಂತಿಯನ್ನು ಹೊಂದುವುದಲ್ಲದೆ ಜನತೆಯನ್ನೂ ಉದ್ಧಾರ ಮಾಡಿದರು. ಮನುಷ್ಯನು ಲೌಕಿಕದಲ್ಲಿ ಸದಾಚಾರ ಸಂಪನ್ನನಾಗಿದ್ದು ದೇವರಲ್ಲಿ ಭಕ್ತಿ ಇಲ್ಲದಿದ್ದರೆ ನಿಷ್ಪ್ರಯೋಜನ. ಅಂಥವನಲ್ಲಿ ದಿವ್ಯವಾದ ತೇಜಸ್ಸೂ ಅಘಟಿತ ಘಟನಾ ಸಾಮರ್ಥ್ಯವೂ ಉಂಟಾಗಲಾರವು. ಮನುಷ್ಯನು ಒಳ್ಳೇ ಭಕ್ತಿವಂತನಾಗಿದ್ದುಕೊಂಡು ನೀತಿಭ್ರಷ್ಟನಾಗಿ ನಡೆದರೂ ಸಾಗದು. ಜಗತ್ತು ಅನಾಚಾರಿಗಳನ್ನು ದೂಷಿಸುವದು ಮತ್ತು ಹಿಂಸಿಸುವದು. ಲೌಕಿಕವನ್ನು ಬಿಟ್ಟು ಪಾರಮಾರ್ಥವಿಲ್ಲ. ನೀತಿಯನ್ನು ಬಿಟ್ಟು ಭಕ್ತಿಯಿಲ್ಲ. ಆದುದರಿಂದ ಮನುಷ್ಯನಿಗೆ ಲೌಕಿಕ ಪಾರಮಾರ್ಥ ಸಾಧನೆಗಾಗಿ ನೀತಿ ಭಕ್ತಿಗಳು ಅತ್ಯಾವಶ್ಯಕವಾಗಿ ಬೇಕು.

ನೀತಿ ಭಕ್ತಿಗಳು ಒಂದು ನಾಣ್ಯದ ಎರಡು ಮಗ್ಗಲುಗಳಿದ್ದಂತೆ. ಒಂದನ್ನು ಬಿಟ್ಟು ಒಂದು ನಡೆಯುವದಿಲ್ಲ. ನಾಸ್ತಿಕನು ಬೇಕಾದಷ್ಟು ದಾನ ಧರ್ಮ ಪರೋಪಕಾರ ಮುಂತಾದ ಸದಾಚಾರಗಳನ್ನು ಆಚರಿಸಬಹುದು. ಪರಸ್ತ್ರೀ ಪರಧನಗಳ ಆಶೆಯಿಂದ ದೂರವಾಗಿರಬಹುದು. ಒಳ್ಳೆ ಆಚಾರವಂತನೆಂದು ಹೆಸರಾಗಿರಬಹುದು. ಆದರೆ ಜಗನ್ನಿಯಾಮಕನಾದ ಪರಮಾತ್ಮನ ಅಸ್ತಿತ್ವವನ್ನು ಅವನು ಮನ್ನಿಸದಿದ್ದರೆ ಆ ಪರವಸ್ತುವಿನ ಅನಂತ ಉಪಕಾರಗಳನ್ನು ಅವನು ಸ್ಮರಿಸದಿದ್ದರೆ ಅವನ ಜನ್ಮ ವ್ಯರ್ಥ.

ಸರ್ವ ಶಕ್ತಿದಾಯಕನು ಪರಮಾತ್ಮನೆಂದು ಭಾವಿಸದೆ ಯಾರು ಕೇವಲ ತಮ್ಮ ಶಾರೀರಕ ಬೌದ್ಧಿಕ, ನೈತಿಕ ಶಕ್ತಿಗಳ ಮೇಲೆ ಕೈಯ್ಯೂರಿ ನಿಲ್ಲುವರೋ ಅವರು ಒಂದು ವೇಳೆ ಜಯಶಾಲಿಗಳಾದರೂ ಮಹಿಮಾಶಾಲಿಗಳಾಗಲಾರರು. ಈ ವಿಷಯದಲ್ಲಿ ಸ್ವಾಮಿ ರಾಮಕೃಷ್ಣರು ಇಬ್ಬರು ಜಟ್ಟಿಗಳ ಒಂದು ಸಣ್ಣ ದೃಷ್ಟಾಂತವನ್ನು ಕೊಟ್ಟಿದ್ದಾರೆ. ಒಬ್ಬನು ದೇವರಲ್ಲಿ ಸ್ವಲ್ಪ ಭಕ್ತಿಯಿಲ್ಲದೆ ಪುಷ್ಟವಾದ ಆಹಾರವನ್ನು ತಿಂದು ಚೆನ್ನಾಗಿ ಅಂಗಸಾಧನೆಮಾಡಿ ಶರೀರವನ್ನು ಕೋಣನಂತೆ ಕೊಬ್ಬಿಸಿದ್ದನು. ಇನ್ನೊಬ್ಬನು ಪರಮಾತ್ಮನಲ್ಲಿ ಭಕ್ತಿಯನ್ನಿರಿಸಿ ಸಾದಾ ಅನ್ನವನ್ನುಂಡು ತಕ್ಕಮಟ್ಟಿಗೆ ಅಂಗಸಾಧನೆ ಮಾಡಿದ್ದನು. ಒಮ್ಮೆ ಇವರಿಬ್ಬರಿಗೂ ಆಖಾಡದಲ್ಲಿ ಕುಸ್ತಿಯಾಗುವ ಪ್ರಸಂಗ ಬರಲು ನೆರೆದ ಜನರು ಮೊದಲನೆಯವನು ಎರಡನೆಯವನನ್ನು ಸಹಜವಾಗಿ ಕೆಡುಹುವನೆಂದು ತರ್ಕಿಸಿದರು. ಆದರೆ ಕೆಲವು ನಿಮಿಷಗಳಲ್ಲಿ ದೈವೀ ಶಕ್ತಿಯುಳ್ಳ ೨ನೇ ಜಟ್ಟಿಯು ಮೊದಲನೆಯವನನ್ನು ನೆಲಕ್ಕುರುಳಿಸಲು ಎಲ್ಲರೂ ಆಶ್ಚರ್ಯಚಕಿತರಾದರು. ತಾತ್ಪರ್ಯವಿಷ್ಟೇ. ಯಾವನು ದೇವರಲ್ಲಿ ವಿಶ್ವಾಸವಿಡದೆ ಕೇವಲ ತನ್ನ ಶರೀರದ ಮೇಲಷ್ಟೇ ವಿಶ್ವಾಸವಿಡುವನೋ ಅವನಿಗೆ ಎಂಥ ಶಕ್ತಿಯಿದ್ದರೂ ವ್ಯರ್ಥ. ಸಾಮಾನ್ಯ ಶಕ್ತಿಯುಳ್ಳವರು ಕೂಡ ದೇವರಲ್ಲಿ ಶ್ರದ್ಧೆಯಿಟ್ಟಿದ್ದಾದರೆ ಅವರಲ್ಲಿಯೂ ಹೆಚ್ಚಿನ ಶಕ್ತಿಯುಂಟಾಗುವದೆಂಬದು ನಿಜ.

ಇದೇ ಮೇರೆಗೆ ದೇವಭಕ್ತಿ ಶೂನ್ಯರೂ ವಿದ್ಯಾಗರ್ವಿಷ್ಠರೂ ಆದ ಅನೇಕ ದಿಗ್ವಿಜಯ ಪಂಡಿತರು ತಮ್ಮ ವಿಜಯ ದುಂದುಭಿಯನ್ನು ಮೊರೆಸುತ್ತ ಸಂಚರಿಸಿದರೂ ಅಕಸ್ಮಾತ್ ದೈವಭಕ್ತಿಯುಳ್ಳ ಸಾಮಾನ್ಯ ಜನರಿಂದ ಈ ಗರ್ವಿಷ್ಠ ಪಂಡಿತರು ಸೋಲಿಸಲ್ಪಟ್ಟ ಎಷ್ಟೋ ಉದಾಹರಣೆಗಳು ನಮ್ಮ ನಿದರ್ಶನಕ್ಕೆ ಬರುತ್ತವೆ. ಅದರಂತೆಯೇ ದೇವರ ಬೆಂಬಲವಿಲ್ಲದೆ ಕೇವಲ ತನ್ನ ನೈತಿಕ ಶಕ್ತಿಯಿಂದಲೇ ಹೊಡೆದಾಡುವ ಮನುಷ್ಯನಿಗೆ ವಿಪತ್ತು ಸಂಕಟಗಳೊದಗಿದರೆ ಆತನು ಮುಗ್ಗರಿಸಿ ಬೀಳುವ ಸಂಭವವುಂಟು. ಆದರೆ ದೇವಭಕ್ತನಿಗೆ ಚ್ಯುತಿಯಿಲ್ಲ. ನೈತಿಕ ಬಲಶಾಲಿಗೆ ಭಕ್ತಿಯ ಬೆಂಬಲವುಂಟಾದರೆ ಬಂಗಾರಕ್ಕೆ ಸುಗಂಧವು ಕೂಡಿದಂತಾಗುವದು. ನಮ್ಮ ಶಿವಶರಣ ನೀತಿವಂತರಿದ್ದಷ್ಟೇ ಭಕ್ತಿವಂತರೂ ಆಗಿದ್ದರು.

ಮನುಷ್ಯನು ದೇವರಲ್ಲಿ ಭಕ್ತಿಯುಳ್ಳವನಿದ್ದು ನೀತಿಭ್ರಷ್ಟನಾಗಿದ್ದರೆ ಜನರು ಮೆಚ್ಚರು. ದೇವರೂ ಮೆಚ್ಚನು. “ಲಿಂಗಮುಟ್ಟಿದ ಕೈ

ಗಾಪಲು" ಎಂದು ಶರಣರು ಹೇಳಿರುವದರಿಂದ ಲಿಂಗಾಂಗಿಯ ಆಚಾರವು ಪರಿಶುದ್ಧವಾಗಿರಲೇಬೇಕು. 'ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ಪ ಲಿಂಗ ಘಟಸರ್ಪ ನೋಡಾ' ಎಂದು ಹೇಳಿರುವುದರಿಂದ ನಡೆನುಡಿ ಶುದ್ಧವಿಲ್ಲದವರು ಎಷ್ಟು ಲಿಂಗಪೂಜೆ ಮಾಡಿದರೂ ವ್ಯರ್ಥವೆಂದು ಸಿದ್ಧವಾಗುತ್ತದೆ. 'ನೂರನೋದಿ ನೂರ ಕೇಳಿದರೇನು? ಆಶೆ ಹರಿಯದು ರೋಷ ಬಿಡದು ಮಜ್ಜನಕ್ಕೆರೆದು ಫಲವೇನು? ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ.' ಎಂಬ ನುಡಿಯಿಂದ ಸದಾಚಾರವಿಲ್ಲದ ಲಿಂಗ ಪೂಜೆಯು ನಿರರ್ಥಕವೆಂದು ಸ್ಪಷ್ಟವಾಗುತ್ತದೆ. 'ಅಂತರಂಗ ಶುದ್ಧವಿಲ್ಲದವರು ಬಹಿರಂಗದಲ್ಲಿ ಜನಮೆಚ್ಚು ಲಿಂಗಪೂಜೆ ಮಾಡುತ್ತಿದ್ದರೇನು? ಅದು ಲೋಕರಂಜನೆಯಲ್ಲದೆ ಶಿವಮೆಚ್ಚ. ಶರಣರು ಮೆಚ್ಚರು. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ' ಈ ವಚನದಲ್ಲಿ ಅಂತರಂಗ ಶುದ್ಧವಿಲ್ಲದೆ ಬಹಿರಂಗದಲ್ಲಿ ಜನರಂಜನೆಗಾಗಿ ಲಿಂಗಭಕ್ತಿಯನ್ನು ತೋರಿಸುವವರು ಶಿವಕೃಪೆಗೆ ಪಾತ್ರರಾಗುವದಿಲ್ಲವೆಂದು ಹೇಳಿದೆ. 'ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ. ಪಾಪಿ ಹೂವನೇರಿಸಿದರೆ ಮಸೆದಾಯುಧದ ಘಾಯ' ಎಂಬ ನುಡಿಯಿಂದ ಸದಾಚಾರಿಯಾಗದೆ ಸದ್ಭಕ್ತಿಯಿಂದೇನು ಪ್ರಯೋಜನವಿಲ್ಲೆಂದು ಸಿದ್ಧವಾಗುತ್ತದೆ. 'ಮೊಟ್ಟೆ ಮೊಟ್ಟೆ ಪುಷ್ಪ ಪತ್ರೆಯ ತಂದು ಒಟ್ಟೆ ಒಟ್ಟೆ ಪೂಜಿಸಿದೊಡೇನು? ಹುಸಿ ಕಳವು ಪರದಾರ ವ್ಯಾಪಾರದಲ್ಲಿ ಹಂದಾಡುವ ಮರುಳು ಬುದ್ಧಿಯ ದುರಾಚಾರಿಗಳಿಗೆ ದೂರವಾಗಿಪ್ಪನು ನೋಡಾ ನಮ್ಮ ಅಖಂಡೇಶ್ವರಾ.' ಎಂದು ಷಣ್ಮುಖಸ್ವಾಮಿಗಳು ಅಪ್ಪಣೆಕೊಡಿಸಿದ್ದಾರೆ. ಈ ವಚನದಲ್ಲಿ ಅನಾಚಾರಿಯಾಗಿದ್ದು ಲಿಂಗಪೂಜೆ ಮಾಡಿದರೆ ಶಿವನು ಮೆಚ್ಚಲಾರನೆಂದು ಹೇಳಿದೆ. ಆದುದರಿಂದ ಮನುಷ್ಯನಿಗೆ ನೀತಿಯೂ ಬೇಕು, ಭಕ್ತಿಯೂ ಬೇಕು.

ದೇವರೊಲ್ಮೆಗೆ ಬರೀ ಸದಾಚಾರವಷ್ಟೇ ಸಾಲದು. ಸದ್ಭಕ್ತಿಯೂ ಬೇಕು. 'ನಾದಪ್ರಿಯ ಶಿವನೆಂಬರು. ನಾದಪ್ರಿಯ ಶಿವನಲ್ಲವಯ್ಯಾ. ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯಾ. ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು. ವೇದವನೋದಿದ ಬ್ರಹ್ಮನ ಶಿರಹೋಯಿತ್ತು. ನಾದಪ್ರಿಯನೂ ಅಲ್ಲ. ವೇದಪ್ರಿಯನೂ ಅಲ್ಲ.

ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.' ದೇವರನ್ನು ಮೆಚ್ಚಿಸಲು ಅನೇಕರು ಗಾನ, ನೃತ್ಯ, ಬಾಹ್ಯಪೂಜೆ, ತತ್ವವಿಮರ್ಶೆ ಮುಂತಾದ ಸಾಧನೆಗಳನ್ನು ಪ್ರಯೋಗಿಸುವದುಂಟು. ಆದರೆ ಭಕ್ತಿಯೊಂದಿಲ್ಲದಿದ್ದರೆ ಅವೆಲ್ಲವೂ ವ್ಯರ್ಥವೇ.

ಭಕ್ತಿಯಲ್ಲಿ ಅಂಧಭಕ್ತಿ, ಡಾಂಭಿಕಭಕ್ತಿ, ಶುದ್ಧಭಕ್ತಿಯೆಂದು ಮೂರು ಪ್ರಕಾರಗಳುಂಟು. ತನಗೆ ಏನೂ ತಿಳಿಯದೆ ಎರಡನೆಯವರು ಮಾಡುವ ಭಕ್ತಿಯನ್ನು ನೋಡಿ ತಾನೂ ಮೂಕ ಕುರಿಯಂತೆ ಅನುಕರಣ ಮಾಡುವದು ಅಂಧ ಭಕ್ತಿಯೆನಿಸುವದು. ಜನರ ಮೆಚ್ಚುಗೆಗಾಗಿ ಮಾಡುವ ಭಕ್ತಿಯು ಡಾಂಭಿಕ ಭಕ್ತಿಯು. ಆದರೆ ಪರಮಾತ್ಮನ ಅಸ್ತಿತ್ವದಲ್ಲಿ ಅಪಾರವಾದ ಶ್ರದ್ಧೆಯನ್ನಿಟ್ಟು ಅಂತರಂಗ ವೃತ್ತಿ ಆತನ ಕೃಪೆಗೆ ಹಂಬಲಿಸುವದೇ ಶುದ್ಧ ಭಕ್ತಿಯು. ಶಿವಶರಣರು ಅಂಧ ಭಕ್ತರಲ್ಲ, ಡಾಂಬಿಕ ಭಕ್ತರಲ್ಲ, ಶುದ್ಧಭಕ್ತರು. 'ಅರುಹ ಹಿಡಿದು ಕುರುಹ ಪೂಜಿಸಲೆಂದು ಇಷ್ಟವ ಕೊಟ್ಟರೆ ಆ ಅರುಹನ್ನೇ ಮರೆತು ಕುರುಹನ್ನು ಪೂಜಿಸುವ ಹೆಡ್ಡರ ನೋಡಾ' ಎಂಬ ವಚನವು ಜ್ಞಾನವಿಲ್ಲದೆ ಅಂಧ ಶ್ರದ್ಧೆಯಿಂದ ಮಾಡುವ ಇಷ್ಟಲಿಂಗ ಪೂಜೆಯು ನಿರರ್ಥಕವೆಂದು ಸಾರುತ್ತದೆ.

ಡಾಂಭಿಕ ಭಕ್ತಿಯ ವಿಷಯವಾಗಿ ಸರ್ಪ ಭೂಷಣ ಶಿವಯೋಗಿಗಳು ತಮ್ಮ ಒಂದು ಪದದಲ್ಲಿ ಹಾಡಿದ ಸಾರಾಂಶವೇನಂದರೆ ' ಬಾಹ್ಯದಲ್ಲಿ ಡಂಭವನ್ನು ಬಿಡು. ಮನಸ್ಸಿನಲ್ಲಿ ಶಂಭುವಿನ ಅಡಿಯನ್ನು ಹಿಡಿ. ಒಳಗೆ ವಂಚಿಸಿ ಹೊರಗೆ ನೀ ಕೀರ್ತಿ ಪಡೆದರೆ ಮರುಳೇ, ನಿನಗೆ ಶಿವನು ಒಲಿಯುವನೇ ? ಲೋಕದಲ್ಲಿ ಜನಮೆಚ್ಚು ನಡಕೊಂಡರೇನುಂಟು ? ಮನಮೆಚ್ಚು ನಡೆಕೊಂಬುವದೇ ಚಂದವು. ನಾವು ಒಳಗಿಂದೊಳಗೆ ಮಾಡುವ ಪಾಪಗಳನ್ನು ಜನರೇನು ಬಲ್ಲರು ? ನಮ್ಮ ಕಳ್ಳತನವು ನಮ್ಮ ಮನಸಿಗೆ ಅರಿಯದಿರುವುದೇ ? ಜನರು ನಿನ್ನನ್ನು ಮೆಚ್ಚಿದರೆ ನಿನಗೆ ಕೈಲಾಸ ದೊರಕುವದೇ ? ವಂಚನೆಯಿಂದ ಜನರಲ್ಲಿ ನೀನು ದೊಡ್ಡವನೆನಿಸಿಕೊಂಡರೆ ಅದು ಶಿವನಿಗೆ ಗುರುತಾಗಲಿಕ್ಕಿಲ್ಲವೇ ? ನಿನ್ನ ಮನಸ್ಸಿನಲ್ಲಿಯೇ ಶಿವನು ಮನೆಮಾಡಿಕೊಂಡಿರುವನು. ಮನಮೆಚ್ಚಿ ನಡೆದರೆ ಶಿವನು ಮೆಚ್ಚುವನು. ಮನಕಂಜಿ ನಡೆಯದೆ ಜನಕಂಜಿ ನಡೆದರೆ ಮನದೊಡೆಯನಾದ ಪರಮಾತ್ಮನು ದೂರವಾಗಿಪ್ಪನು ' ಇದರಿಂದ ಮನ

ರಂಜನೆಗಲ್ಲದೆ ಜನರಂಜನೆಗಾಗಿ ಮಾಡುವ ಡಾಂಭಿಕ ಭಕ್ತಿಯು ನಿರರ್ಥಕವೆಂದು ಸಿದ್ಧವಾಗುವದಿಲ್ಲವೇ?

ನಿಜವಾದ ಭಕ್ತಿಯು ಎಂಥಹದಿರಬೇಕೆಂಬ ವಿಷಯವಾಗಿ ಶಿವಶರಣರು ಒಳ್ಳೇ ಸುಗಮವಾಗಿ ಹೇಳಿದ್ದಾರೆ. ಅಂಥ ಸುಂದರವಾದ ಒಂದೆರಡು ವಚನಗಳನ್ನು ಇದರಡಿಯಲ್ಲಿ ಹೇಳಬಯಸುತ್ತೇನೆ:—

ನಿಮ್ಮ ನೋಟವನಂತಸುಖ, ಕೂಟ ಪರಮ ಸುಖವಯ್ಯಾ. ಅಷ್ಟ ಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು. ಕೂಡಲಸಂಗಮದೇವಾ ನಿಮ್ಮ ನೋಡಿ ಮನದಲ್ಲಿ ರತಿಹುಟ್ಟಿ ನಿಮಿರ್ದವೆನ್ನ ಕಂಗಳು.

ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ ಕೂಡಲಸಂಗಮದೇವಾ ನಿಮ್ಮ ಚರಣಕಮಲದೊಳು ನಾನು ತುಂಬಿ.

ಅಡಿಗಡಿಗೆ ಲಿಂಗವನಡರಿಯಡರಿ ಕಂಗಳು ಕಡೆ ಗೋಡಿವರಿದವಯ್ಯಾ. ಎನ್ನಶ್ರುಜಲಂಗಳು ಆಲಿಗಲ್ಲ ರೂಹಿನಂತೆ. ತನು ಪುಲಕಿತವಾಗೆ ಅರಗಿನ ಪುತ್ಥಳಿಯಂತೆ. ಬೆವರು ಬಿಂದುಗಳೆಲ್ಲ ಭಕ್ತಿರಸದ್ರವವಯ್ಯಾ ಕೂಡಲಸಂಗಮದೇವಯ್ಯಾ ನಿಮ್ಮ ದರ್ಶನ ಸ್ಪರ್ಶನದಿಂದೆ ಮನವೊಲಿದು ನೆರೆವ ಭರವನಾನೆಂಬೆನಯ್ಯಾ.

ಮನಮನ ಬೆರಸಿದಲ್ಲಿ ತನು ಕರಗದಿರ್ದೊಡೆ, ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದೊಡೆ ಕಂಗಳಶ್ರುಜಲಂಗಳು ಸುರಿಯದಿರ್ದೊಡೆ ನುಡಿವಲ್ಲಿ ಗದ್ಗದಂಗಳು ಹೊರಹೊಣ್ಮದಿರ್ದೊಡೆ ಕೂಡಲಸಂಗಮದೇವರ ಭಕ್ತಿಯ ಚಿಹ್ನವೇ?

ಈ ವಚನಗಳು ನಿಜವಾದ ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿವೆ.

ಶರಣರದು ನಿಜವಾದ ಭಕ್ತಿಯು. ಪತಿವ್ರತಾ ಶಿರೋಮಣಿಯಾದ ಸತಿಯು ಪತಿಯೊಡನೆ ರಮಿಸಿ ತಣಿವಂತೆ ಶರಣಸತಿಯು ಲಿಂಗಪತಿಯಲ್ಲಿ ಗುಪ್ತ ಭಕ್ತಿಯನ್ನಾಚರಿಸಿ ಸುಖಿಸುವಳು. ಶರಣರ ಭಕ್ತಿಯು ವ್ಯಕ್ತಿಗತವಾದುದು. ಸಾಮೂಹಿಕವಲ್ಲ ಶರಣರ ಭಕ್ತಿ ಭಿಕ್ಷೆಯನ್ನುಂಡು ಅನಂತ ಜೀವಿಗಳು ಸುಖಿಸಿದ್ದಾರೆ ಸುಖಿಸುತ್ತಲಿದ್ದಾರೆ. ಅವರ ಭಕ್ತಿ

ಮಾರ್ಗವನ್ನು ಅನೇಕ ಪಂಗಡಗಳು ಅನುಕರಿಸಿ ಈಗಲೂ ಶಾಂತಿಸುಖವನ್ನು ಪಡೆಯುತ್ತಲಿವೆ. ಶರಣರು ನೀತಿಯಲ್ಲಿಯೂ ಬಲ್ಲಿದರು. ಭಕ್ತಿಯಲ್ಲಿಯೂ ಬಲ್ಲಿದರು. ಉದಾತ್ತ ನೀತಿ ಭಕ್ತಿಗಳಿಂದ ಜಗತ್ತಿಗೇ ಮಾರ್ಗದರ್ಶಿಗಳು. ಅಂಥ ಸದಾಚಾರ ಸದ್ಭಕ್ತಿಗಳನ್ನು ಲಿಂಗಾಂಗಿಗಳು ಆಚರಿಸಿದ್ದಾದರೆ ವೀರಶೈವತ್ವದ ಬೆಳಕು ಹೊರಹೊಮ್ಮಲು ವಿಲಂಬವಾಗಬಹುದೇ ?

---

## ನೀತಿಯ ಮಾತುಗಳು.

(ಲೇಖಕ:— ಜಿ. ಎಸ್. ಕನ್ನೂರ ಮು. ವಿಜಾಪುರ.)

೧. ಅನ್ಯರ ದೋಷಗಳನ್ನು ಹುಡುಕಿ ತೆಗೆಯುವದೆಂದರೆ ಆ ದೋಷಗಳಿಗೆ ತನ್ನ ಮನೆಗೆ ಬರಲಿಕ್ಕೆ ನಿಮಂತ್ರಣ ಕೊಟ್ಟಂತೆ ಇರುತ್ತದೆ. ಯಾವ ಹೀನ ಗುಣಕ್ಕಾಗಿ ಅನ್ಯರನ್ನು ನಿಂದಿಸುತ್ತೇವೆಯೋ ಅದೇ ದುರ್ಗುಣವನ್ನು ನಾವು ಸಂಗ್ರಹಿಸುವ ಉಪಾಯ ಮಾಡಹತ್ತಿರುವೆವೆಂಬ ಮಾತು ದುರ್ದೈವದಿಂದ ಯಾರ ಲಕ್ಷಕ್ಕೂ ಬರುವದಿಲ್ಲ.

೨. ಪರರ ದೋಷಗಳನ್ನು ಆಡುವದರಲ್ಲಿ ಮೊದಲು ತಾನು ದೋಷೋಚ್ಚಾರಣೆ ಮಾಡಬೇಕಾಗುತ್ತದೆ. ದೃಷ್ಟಾಂತಕ್ಕಾಗಿ ಹೆರವನಿಗೆ ಜೋಡಿನಿಂದ ಹೊಡೆಯಬೇಕೆಂದರೆ ಮೊದಲು ತಾನು ಜೋಡನ್ನು ಕೈಯ್ಯಲ್ಲಿ ತಕ್ಕೊಳ್ಳಬೇಕಾಗುವದು.

೩. ಎರಡನೆಯವರು ಆಡಿದ ಹೀನ ಮಾತುಗಳನ್ನು ಅಥವಾ ಅನ್ಯರ ಹೀನ ವರ್ತನೆಯನ್ನು ಇನ್ನೊಬ್ಬರೆದುರಿಗೆ ಹೇಳುವದರಲ್ಲಿ ಹೇಳುವವನ ಪಾಲೂ ಇರುತ್ತದೆ. ದೋಷದ ನಿರೀಕ್ಷಣೆ ಹಾಗೂ ಉಚ್ಚಾರಣೆಗಳಿಂದ ಸುಖವೆನಿಸದ ಹೊರತು ಅವನು ಅದನ್ನು ಸಾದ್ಯಂತವಾಗಿ ನೋಡುವ ಹಾಗೂ ಹೇಳುವ ಗೊಡವೆಗೇ ಹೋಗುವದಿಲ್ಲ. ಸಾರಾಂಶ ಉಪೇಕ್ಷಿಸಿ ಬಿಡಬೇಕಾದ ಒಂದು ಸಂಗತಿಯ ನೆವವನ್ನು ಮುಂದು ಮಾಡಿ ಸಬಲ ವಿಷಯಗಳ ಅವಾರದಲ್ಲಿ ಸುಳಿದಾಡುವ ತನ್ನ ಹೀನ ಅಪೇಕ್ಷೆಯನ್ನು ತೀರಿಸಿಕೊಳ್ಳುತ್ತಾನೆ.

ಆದ್ದರಿಂದ ಸತ್ಯದ ಹೆಸರಿನಿಂದ ಇಲ್ಲವೆ ಸಭ್ಯತನದ ಸೋಗಿನಿಂದ ಈ ದುರ್ಗುಣಕ್ಕೆ ಆಹುತಿಯಾಗದಿರುವದು ಅವಶ್ಯವಿರುತ್ತದೆ.

೪. ಅನ್ಯರ ಟೀಕೆ ಮಾಡುವದರ ಉದ್ದೇಶವು ಪ್ರಾಮುಖ್ಯವಾಗಿ ತನ್ನಲ್ಲಿಯ ದೋಷಗಳ ಸಮರ್ಥನೆ ಮಾಡಿಕೊಳ್ಳುವದೇ ಇರುತ್ತದೆ. 'ನನ್ನಲ್ಲಿಯೂ ಆ ದೋಷವು ಇಲ್ಲವೆಂದಲ್ಲ' ಎಂದು ಪ್ರಾರಂಭಕ್ಕೆ ಒಪ್ಪಿಕೊಂಡಂತೆ ತೋರಿಸಿದರೂ ಅನ್ಯನಲ್ಲಿ ಅದು ಮಿತಿಮೀರಿದ ಪ್ರಮಾಣದಲ್ಲಿ ಇರುತ್ತದೆಂದೂ ಹಾಗೂ ತನ್ನಲ್ಲಿ ಕ್ಷನ್ಯವಿರುತ್ತವೆಂದೂ ಹೇಳಿ ತಾನು ಒಳ್ಳೆಯವನೆಂದು ಸಿದ್ಧ ಮಾಡುವದರ ಕಡೆಗೆಯೇ ಅವನ ಮಾತಿನ ಒಲವು ಇರುತ್ತದೆ. ಅಲ್ಲದೆ ತನ್ನ ದೋಷವು ಉಪಕಾರಕವಿರುತ್ತದೆಂದು ಪೋಟಿಸು ಜೋಡಿಸಲಿಕ್ಕೂ ಅವನು ಮರೆಯುವದಿಲ್ಲ.

ನಿಂದೆಯನ್ನು ಕೇಳುವವನಲ್ಲಿ ಕೂಡ ಆ ನಿಂದಾಸ್ಪದ ದೋಷಗಳು ದೋಷ ರೂಪದಿಂದ ಇರುವದಿಲ್ಲವೆಂದು ಅವನು ಅನುವಾದಕ್ಕಾಗಿ ವಿಧಾನ ಮಾಡುತ್ತಾನೆ. ಸಾರಾಂಶ ತನ್ನ ಹಾಗೂ ಎದುರಿನವನ ದೋಷಗಳು ಪ್ರಸಂಗಕ್ಕೆ ತಕ್ಕ ಹಾಗೂ ಬಾಧೆರಹಿತ ದೋಷಗಳೆಂದೂ ಮೂರನೆಯವನವು ಮಾತ್ರ ಅವನ ದುಷ್ಟತನವೆಂದೂ ಇಬ್ಬರು ಮಾತನಾಡಿಕೊಳ್ಳುವದು ತಮ್ಮಲ್ಲಿಯ ದೋಷಗಳನ್ನು ವಜ್ರಲೇಪ ಮಾಡಿದಂತಾಗುವದಿಲ್ಲವೆ ?

೫. 'ನಾನು ಹೇಳುವ ಮಾತುಗಳು ನಿಮಗೆ ನಿಂದೆಯನಿಸಬಹುದು. ಆದರೆ ಇದ್ದ ಮಾತು ಇದ್ದಂತೆ ಆಡಿದರೆ ಅದು ನಿಂದೆಯಾಗುವದಿಲ್ಲ.' ಎಂದು ಪ್ರಸಕ್ತಿ ಮಾಡಿ ಅನ್ಯರ ದೋಷಗಳನ್ನು ಯಥೇಚ್ಛವಾಗಿ ಆಡಹತ್ತುವರು. 'ಬೇಕಾದರೆ ಇದನ್ನು ನಾನು ಅವನ ಮೋರೆಯ ಎದುರಿಗೆ ಸಹ ಹೇಳಲಿಕ್ಕೆ ಸಿದ್ಧನಿದ್ದೇನೆ.' ಎಂದು ಕೆಲವರು ನಿಂದೆಗೆ ತಮ್ಮದೇ ಪ್ರಶಸ್ತಿಪತ್ರ ಪಡಕೊಳ್ಳುತ್ತಾರೆ.

ಆದರೆ ನಿಜವಾಗಿ ಅನ್ಯರಲ್ಲಿ ಇದ್ದ ದೋಷಗಳನ್ನು ಆಡುವದೇ ನಿಂದೆ ಇರುತ್ತದೆ. ಇಲ್ಲದ ದೋಷ ಹೊರಿಸಿ ಅವರನ್ನು ಹಳಿಯುವದಂತೂ ಅತ್ಯಂತ ಗರ್ಹ್ಯವಾದ ದೂಷಣೆಯಾಗುತ್ತದೆ. ದೋಷದೃಷ್ಟಿ ಹಾಗೂ ದೋಷೋಚ್ಚಂಣೆಗಳಿಂದ ತನಗೇ ಹಾನಿಯಿರುತ್ತದೆ.

---

# ಮೋಕ್ಷದ ಸ್ವರೂಪ ಮತ್ತು ಅದನ್ನು ಹೊಂದುವ ಸುಲಭೋಪಾಯ.

(ಮೈಸೂರು ಡಿವೈನ್ ಲೈಫ್ ಸೊಸೈಟಿ ಪ್ರೆಸಿಡೆಂಟರಾದ ಶ್ರೀ. ಎಂ. ಎಲ್. ನಾಗಣ್ಣನವರಿಂದ.)

ಹುಟ್ಟುವುದು ಸಾಯುವುದು ಮುಂತಾದ ಸರ್ವ ದುಃಖಗಳಿಂದಲೂ ಬಿಡುಗಡೆ ಹೊಂದಿ ಶಿವಾನಂದ (ಅಂದರೆ ಬ್ರಹ್ಮಾನಂದ) ವನ್ನು ಹೊಂದುವುದಕ್ಕೆ ಮೋಕ್ಷವೆಂದು ಹೆಸರು. ಶಿವಾನಂದವನ್ನು ಇಷ್ಟೇ ಎಂದು ನಿರ್ಣಯಿಸಿ ತಿಳಿಯಬೇಕಾದರೆ ನಾವು ಮನುಷ್ಯಾನಂದದ ಸ್ವರೂಪವನ್ನು ಮೊದಲು ತಿಳಿಯಬೇಕು. ಒಬ್ಬನು ತಾನೇ ಭೂಮಂಡಲಕ್ಕೆಲ್ಲಾ ಚಕ್ರವರ್ತಿಯಾಗಿಯೂ, ಅವನಿಗೆ ಯಾವ ವಿಧವಾದ ರೋಗವೂ ಇಲ್ಲದೆ ಒಂದು ನೂರು ವರ್ಷಗಳ ವರೆಗೆ ಜೀವಿಸಿಯೂ, ಅವನು ಅಪೇಕ್ಷಿಸತಕ್ಕ ಎಲ್ಲ ವಿಷಯಗಳು ಅವನಿಗೆ ಪ್ರಾಪ್ತವಾಗಿ ಅವನಿಗೆ ಯಾವ ಚಿಂತೆ ಇಲ್ಲದೆಯೂ, ಅವನ ಜೀವಿತ ಕಾಲದಲ್ಲಿ ಅವನಿಗೆ ಪ್ರೀತಿಪಾತ್ರರಾದ ಹೆಂಡತಿ, ಮಕ್ಕಳು ಮುಂತಾದವರ ಮರಣದ ದುಃಖವನ್ನು ಹೊಂದದೆಯೂ ಇದ್ದರೆ ಇದಕ್ಕೆ ಮನುಷ್ಯಾನಂದವೆಂದು ಹೆಸರು. ಈ ಮನುಷ್ಯಾನಂದಕ್ಕಿಂತ ಮನುಷ್ಯಗಂಧರ್ವ, ದೇವಗಂಧರ್ವ, ಅಜಾನುದೇವತೆ, ಪಿತೃದೇವತೆ, ದೇವೇಂದ್ರ, ಬೃಹಸ್ಪತ್ಯಾಚಾರ್ಯ, ಸೃಷ್ಟಿಕರ್ತ ಬ್ರಹ್ಮ, ವಿಷ್ಣು ಮತ್ತು ರುದ್ರ ಇವರುಗಳ ಆನಂದವು ಒಬ್ಬರದಕ್ಕಿಂತ ಒಬ್ಬರದು ನೂರ್ಮಡಿ ಹೆಚ್ಚಾಗಿರುವದು. ಅಂದರೆ ಮನುಷ್ಯಾನಂದಕ್ಕಿಂತ ರುದ್ರನ ಆನಂದವು ಒಂಬೈನೂರು ಪಾಲು ಜಾಸ್ತಿಯಾಗಿರುತ್ತದೆ. ಈ ರುದ್ರನ ಆನಂದಕ್ಕಿಂತಲೂ ಶಿವನ ಆನಂದವು ಅಸಂಖ್ಯಾಕವಾಗಿ ಹೆಚ್ಚಾಗಿರುತ್ತದೆ.

ಇಂಥ ನಿರತಿಶಯವಾದ ಶಿವಾನಂದವು ನಮಗೆ ಲಭ್ಯವಾಗುವ ವಿಷಯದಲ್ಲಿ ನಾವು ಸಂದೇಹಪಡಬೇಕಾದುದಿಲ್ಲ. ಏತಕ್ಕೆಂದರೆ ತಂದೆಯಾದವನು ತನ್ನಲ್ಲಿ ನಿಜವಾದ ಭಕ್ತಿಯನ್ನಿಟ್ಟು ತನ್ನ ಆಜ್ಞಾನಸಾರವಾಗಿ ನಡೆಯತಕ್ಕ ತನ್ನ ಮಗನಿಗೆ ತನ್ನ ಆಸ್ತಿಯನ್ನು ಸಂತೋಷದಿಂದ ಕೊಡುತ್ತಾನೆ. ಅದರಂತೆ ಸರ್ವ ಪ್ರಾಣಿಗಳಿಗೂ ತಂದೆಯಾಗಿರ

ತಕ್ಕ ಶಿವನು ತನ್ನಲ್ಲಿ ಯಾರು ಸಹಜವಾದ ಭಕ್ತಿಯನ್ನಿಟ್ಟು ತಾನು ಶಾಸ್ತ್ರರೂಪದಿಂದ ಮಾಡಿರತಕ್ಕ ಆಜ್ಞೆಗಳ ಪ್ರಕಾರ ನಡೆಯುತ್ತಾರೋ ಅವರಿಗೆ ತನ್ನ ಶಿವ ಪದವಿಯನ್ನು ಅಂದರೆ ಶಿವಾನಂದವನ್ನು ಬಹಳ ಸಂತೋಷದಿಂದ ಕೊಡುತ್ತಾನೆ. ಆದರೆ ನಾವು ಹೆಂಡತಿ, ಮಕ್ಕಳು ಮತ್ತು ಐಶ್ವರ್ಯವನ್ನು ಪಡೆಯುವುದಕ್ಕಾಗಿ ಶಿವನನ್ನು ಪ್ರಾರ್ಥಿಸುವುದು ಭಕ್ತಿಯಲ್ಲ. ಭಕ್ತಿಯೆಂದರೆ ಪ್ರೀತಿ ವಿಶೇಷ. ಹೇಗೆಂದರೆ ನಾವು ನಮ್ಮ ಸಮಾನರಾಗಿರತಕ್ಕ ಸ್ನೇಹಿತರಲ್ಲಿ ಇಡತಕ್ಕ ಪ್ರೀತಿಗೆ ಸ್ನೇಹವೆಂತಲೂ, ಹೆಂಡತಿ ಮಕ್ಕಳಲ್ಲಿ ಇಡತಕ್ಕ ಪ್ರೀತಿಗೆ ಅನುರಾಗವೆಂತಲೂ ನಮ್ಮ ಸೇವಕರಲ್ಲಿ ನಾವು ಇಡತಕ್ಕ ಪ್ರೀತಿಗೆ ದಯೆಯೆಂತಲೂ ಹೆಸರು. ಇದರಂತೆ ಗುರು ಹಿರಿಯರಲ್ಲಿಯೂ, ಶಿವನಲ್ಲಿಯೂ, ಮಾತಾಪಿತೃಗಳಲ್ಲಿಯೂ, ನಾವು ಮಹತ್ವ ಬುದ್ಧಿಯೊಡನೆ (ಅಂದರೆ ನಮಗಿಂತಲೂ ಉತ್ಕೃಷ್ಟರು ಎಂಬ ಭಾವನೆಯಿಂದ) ಇಡತಕ್ಕ ಪ್ರೀತಿಗೆ ಭಕ್ತಿಯೆಂದು ಹೆಸರು.

ಬೇರೊಬ್ಬರಿಂದ ನಮಗೆ ಉಪಕಾರವಾಗಿ ಅದನ್ನು ನಾವು ಸ್ಮರಿಸುತ್ತಿದ್ದರೇನೇ ಅವರಲ್ಲಿ ನಮಗೆ ಪ್ರೀತಿಯುಂಟಾಗುತ್ತದೆ. ಏತಕ್ಕೆಂದರೆ ನಮ್ಮ ಸುಖಕ್ಕೆ ಸಾಧಕರಾದ್ದರಿಂದ ನಮ್ಮ ಹೆಂಡರುಮಕ್ಕಳಲ್ಲಿಯೂ, ನಮ್ಮ ಕಷ್ಟಕಾಲದಲ್ಲಿ ಸಹಾಯ ಮಾಡುವುದರಿಂದ ಸ್ನೇಹಿತರಲ್ಲಿಯೂ, ನಂಬಿಕೆಯಾಗಿ ನಮ್ಮ ಸೇವೆಯನ್ನು ಮಾಡುವುದರಿಂದ ಸೇವಕರಲ್ಲಿಯೂ ನಮಗೆ ಪ್ರೀತಿಯಿರುತ್ತದೆ. ಇದೇ ರೀತಿಯಾಗಿ ಒಬ್ಬ ತಾಯಿತಂದೆಗಳಿಗೆ ಅನೇಕ ಮಕ್ಕಳಿದ್ದು ಆ ಮಕ್ಕಳುಗಳ ಪೈಕಿ ಯಾರು ತಾವು ಹುಟ್ಟಿದಲಾಗಾಯಿತು ತಮಗೆ ವಿವೇಕ ಬರುವ ವರೆಗೆ ತಾಯಿತಂದೆಗಳು ಬಹಳ ಕಷ್ಟಪಟ್ಟು ತಮ್ಮನ್ನು ಕಾಪಾಡಿದ್ದಾರೆ ಎಂದು ತಿಳಿಯುವರೋ ಅವರೇನೇ ತಾಯಿತಂದೆಗಳಲ್ಲಿ ಭಕ್ತಿಯನ್ನಿಡುವವರಾಗುತ್ತಾರೆ. ಉಳಿದ ಮಕ್ಕಳುಗಳಿಗೆ ಭಕ್ತಿಯಿರುವುದಿಲ್ಲ. ಇದೇ ರೀತಿಯಾಗಿ ಯಾರು ಎಲ್ಲರಿಗೂ ನಿಜವಾದ ತಾಯಿತಂದೆಯಾಗಿ ಎಲ್ಲರನ್ನೂ ಎಲ್ಲ ಜನ್ಮಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಎಲ್ಲ ವಿಧದಿಂದಲೂ ಕಾಪಾಡತಕ್ಕವನು ಶಿವನು. ನಮಗೆ ಆಗಾಗ್ಗೆ ಸುಖವನ್ನು ಕೊಡತಕ್ಕವನು ಶಿವನು, ನಮ್ಮ ಭೋಗಕ್ಕೋಸ್ಕರವೇ ಪ್ರಪಂಚವನ್ನು ಸೃಷ್ಟಿಸಿರುವವನು ಶಿವನು, ನಮ್ಮನ್ನು ಸರ್ವ ದುಃಖಗಳಿಂದಲೂ ಬಿಡುಗಡೆ ಮಾಡಿ ನಿತ್ಯವಾಗಿರತಕ್ಕ ತನ್ನ ಆನಂದ

ವನ್ನು ಕೊಡತಕ್ಕವನು ಶಿವನು ಎಂಬುದಾಗಿ ತಿಳಿಯುತ್ತಾರೋ ಅವ ರಿಗೆ ಈಶ್ವರನಲ್ಲಿ ಕೃತಜ್ಞತೆಯುಂಟಾಗಿ ಆ ಕೃತಜ್ಞತೆಯೇ ನಿರತಿಶಯ ವಾದ ಭಕ್ತಿಯಾಗಿ ಪರಿಣಮಿಸುತ್ತದೆ.

ಆ ಕಾರಣದಿಂದ ನಮಗೆ ಶಿವನಲ್ಲಿ ಸುಲಭವಾಗಿ ಭಕ್ತಿಯುಂಟಾ ಗಬೇಕಾದರೆ ನಮಗೆ ಪ್ರತಿನಿತ್ಯವೂ ಉಂಟಾಗತಕ್ಕ ವಿಷಯ ಸುಖಗಳು ಮತ್ತು ಲಾಭಗಳು ಅಲ್ಪವಾದರೂ ಅವುಗಳು ಅವನ ಕೃಪೆಯಿಂದ ಬಂದವೆಂದು ತಿಳಿದು ಈ ಉಪಕಾರವನ್ನು ಪುನಃ ಪುನಃ ಸ್ಮರಿಸಿಕೊ ಳ್ಳುತ್ತಿದ್ದರೆ ಶಿವನಲ್ಲಿ ನಮಗೆ ಸಹಜವಾದ ಭಕ್ತಿಯುಂಟಾಗುತ್ತದೆ. ಶಿವ ನಲ್ಲಿ ನಮಗೆ ಸಹಜವಾದ ಕೃತಜ್ಞತೆಯು ಮತ್ತು ಭಕ್ತಿಯು ಹೆಚ್ಚಿದ ಹಾಗೆಲ್ಲ ನಮಗೆ ಸುಖಗಳೂ ಮತ್ತು ಲಾಭಗಳೂ ಹೆಚ್ಚುತ್ತ ಹೋಗುತ್ತವೆ. ಇದರಿಂದ ನಮಗೆ ಶಿವನಲ್ಲಿ ಕೃತಜ್ಞತೆಯೂ ಮತ್ತು ಭಕ್ತಿಯೂ ಹೆಚ್ಚು ತ್ತವೆ. ಹೀಗೆ ಶಿವನಲ್ಲಿ ನಮಗೆ ಪೂರ್ಣ ಭಕ್ತಿಯುಂಟಾಗಿ ನಮಗೆ ಶಿವನು ತನ್ನ ಪೂರ್ಣವಾದ ಆನಂದವನ್ನು ಕೊಡುತ್ತಾನೆ. ಇತರ ಜತೆಗೆ ಶಿವನ ಅತ್ಯದ್ಭುತ ಮಹಿಮೆಗಳನ್ನು ತಿಳಿದವರಿಂದ ಕೇಳುತ್ತ ಬಂದರೆ ಅದರಿಂದ ಶಿವನಲ್ಲಿ ಭಕ್ತಿಯು ಮತ್ತೂ ಹೆಚ್ಚುತ್ತದೆ. ಹಾಗಲ್ಲದೆ ನಮಗೆ ಸುಖಗಳು ಮತ್ತು ಲಾಭಗಳು ಉಂಟಾದಾಗ ಅವೆಲ್ಲವೂ ನಮ್ಮ ಪ್ರಯತ್ನಗಳಿಂದಾ ದವೆಂದೂ, ನಮಗೆ ಕಷ್ಟನಷ್ಟಗಳು ಉಂಟಾದಾಗ ಅವುಗಳು ಶಿವ ನಿಂದಾದವೆಂದೂ ತಿಳಿದರೆ ಅದು ಭಕ್ತಿಯೂ ಆಗುವುದಿಲ್ಲ, ಮತ್ತು ಇದ ರಿಂದ ಶಿವನ ಕೃಪೆಯೂ ಉಂಟಾಗುವದಿಲ್ಲ.

ಶಿವನು ಶಾಸ್ತ್ರರೂಪವಾಗಿ ಅನೇಕ ಆಜ್ಞೆಗಳನ್ನು ಮಾಡಿರಬಹುದು. ಅವುಗಳೆಲ್ಲವನ್ನೂ ನಡೆಸುವುದು ನಮ್ಮಿಂದ ಸಾಧ್ಯವಿಲ್ಲವೆಂಬುದಾಗಿ ನಾವು ಯೋಚಿಸಬೇಕಾಗಿಲ್ಲ. ಏತಕ್ಕೆಂದರೆ ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದು ಕ್ತಂ ಗ್ರಂಥಕೋಟಿಭಿಃ। ಪರೋಪಕಾರಃ ಪುಣ್ಯಾಯ ಪಾಪಾಯ ಪರ ಪೀಡನಂ॥ ಎಂದಿರುವುದರಿಂದ ಇತರರಿಗೆ ಉಪಕಾರವನ್ನು ಮಾಡು ಮತ್ತು ಯಾರಿಗೂ ದುಃಖವನ್ನುಂಟುಮಾಡಬೇಡ ಎಂಬಿವೆರಡನ್ನು ಮಾತ್ರ ಶಾಸ್ತ್ರರೂಪವಾಗಿ ಶಿವನು ಆಜ್ಞೆಯನ್ನು ಮಾಡಿರುತ್ತಾನೆ. ಆದ್ದರಿಂದ ನಾವು ನಮ್ಮ ಕೈಲಾದಮಟ್ಟಿಗೆ ದುಃಖದಲ್ಲಿರುವವರಿಗೆ ಕೇವಲ ಕರುಣೆ ಯಿಂದ ಯಾವ ಪ್ರತಿಫಲದ ಆಶೆಯೂ ಇಲ್ಲದೆ ಸಹಾಯವನ್ನು ಮಾಡುತ್ತಾ

ಮತ್ತು ಯಾರಿಗೂ, ಯಾವಾಗಲೂ, ಯಾವ ವಿಧವಾಗಿಯೂ ತೊಂದರೆಯನ್ನು ಕೊಡದೆ ಇರುತ್ತಾ ಇದ್ದರೆ ಶಿವನ ಆಜ್ಞೆಗಳ ಅನುಸಾರವಾಗಿ ನಾವು ನಡೆದಂತೆ ಆಗುತ್ತದೆ. ಆದ್ದರಿಂದ ಶಿವನಲ್ಲಿ ಭಕ್ತಿಯನ್ನಿಟ್ಟು ಅವನ ಆಜ್ಞೆಯ ಪ್ರಕಾರ ನಡೆಯುವುದು ಸುಲಭವೆಂಬುದು ಮತ್ತು ಶಿವಾನಂದವನ್ನು ಹೊಂದುವುದು ಅಸಾಧ್ಯವಲ್ಲವೆಂಬುದು ಸಿದ್ಧವಾಗುವದು. ಶಿವನಲ್ಲಿ ಭಕ್ತಿ ಇಡುವುದರ ಮತ್ತು ಶಿವನ ಆಜ್ಞಾನುಸಾರ ನಡೆಯುವುದರ ಜತೆಗೆ ಶಿವನ ಸಗುಣಸ್ವರೂಪವನ್ನು ಮೊದಲು, ನಿರ್ಗುಣಸ್ವರೂಪವನ್ನು ಅನಂತರ ಮನಸ್ಸಿನಲ್ಲಿ ಭಾವಿಸಿ ಸದಾ ಶಿವನ ಹೆಸರಾದ ಪಂಚಾಕ್ಷರೀ ಮಂತ್ರವನ್ನು ಪ್ರಣವಸಹಿತವಾಗಿ ನಾಲಿಗೆಯಿಂದ ಮೊದಲು, ಮನಸ್ಸಿನಿಂದ ಅನಂತರ ಜಪವನ್ನು ಮಾಡುತ್ತಾ ಬಂದರೆ ಶಿವಾನಂದವು ಬಹಳ ಶೀಘ್ರದಲ್ಲಿಯೇ ಲಭಿಸುವದು. ಆದ್ದರಿಂದ ಸತ್ಪುರುಷರಾದವರು ಮೇಲ್ಕಂಡಂತೆ ಆಚರಿಸಿ ಪರಮ ಪುರುಷಾರ್ಥವಾದ ಮೋಕ್ಷವನ್ನು ಪಡೆಯಬೇಕೆಂದು ಆಶಿಸುತ್ತೇವೆ.

---

## ಬಸವೇಶ್ವರನ ಚರಿತ್ರೆ.

(ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೮]

---

### ಬಸವೇಶ್ವರನು ಮಂತ್ರಿಯಾದದ್ದು.

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನು ಮೊದಲು ಬಿಜ್ಜಳನಲ್ಲಿ ಗುಮಾಸ್ತನಾಗಿಯೂ ಮುಂದೆ ಕ್ರಮೇಣ ಭಂಡಾರಿಯಾಗಿಯೂ ಆಮೇಲೆ ದಂಡಾಧಿಪತಿಯಾಗಿಯೂ ಅಧಿಕಾರಗಳನ್ನು ಪಡೆಯುತ್ತಾ ಕಡೆಗೆ ಮಂತ್ರಿಪದವನ್ನು ಹೊಂದಿರಬಹುದೆಂದು ವಿವರಿಸಿದ್ದೇವೆ. ಅವನು ಗುಮಾಸ್ತನಾಗಿದ್ದರ ವಿಷಯವಾಗಿ ಅವನ ವಚನಗಳಲ್ಲಿ ಆಧಾರಗಳು ದೊರೆಯದಿದ್ದರೂ ಅವನು ಭಂಡಾರಿಯಾಗಿದ್ದಕ್ಕೆ ಕೆಲವು ವಚನಗಳ ಆಧಾರಗಳು ದೊರೆಯುತ್ತವೆ. ಅವುಗಳನ್ನು ನಾವು ಹಿಂದೆ ಕೊಟ್ಟಿದ್ದೇವೆ. ಅವನು ದಂಡಾಧಿಪ ಅಂದರೆ ಸೇನಾಪತಿಯಾಗಿದ್ದರ ವಿಷಯವಾಗಿ ಅವನ ವಚನಗಳಲ್ಲಿ ಅನೇಕ ಆಧಾರಗಳಿವೆ. ಅವುಗಳನ್ನು ವಿವರಿ

ಸುವ ಪೂರ್ವದಲ್ಲಿ ಅವನು ಮಂತ್ರಿಯಾಗಿದ್ದನೆಂಬ ವಿಷಯದಲ್ಲಿ ಏನಾದರೂ ಆಧಾರಗಳು ಅವನ ವಚನಗಳಲ್ಲಿ ಇವೆಯೋ ಹೇಗೆ ಎಂಬುದನ್ನು ವಿವೇಚಿಸುವೆವು. ನಮಗೆ ಈ ವಿಷಯವಾಗಿ ಖಂಡಿತ ಆಧಾರಗಳು ದೊರೆಯದಿದ್ದರೂ ಕೆಳಗಿನ ವಚನಗಳಿಂದ ಅವನು ಮಂತ್ರಿಯಾಗಿದ್ದನೆಂದು ನಾವು ಊಹಿಸಬಹುದಾಗಿದೆ. ಅವು ಯಾವವೆಂದರೆ:-

"ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದಡೆ ಎನ್ನ ಮನಕ್ಕೆ ಮನವೇ ಸಾಕ್ಷಿ 'ಆಸನೆ, ಶಯನೆ, ಯಾನೆ, ಸಂಪರ್ಕೆ, ಸಹ ಭೋಜನೆ, ಸಂಚರಂತಿ, ಮಹಾಘೋರೆ ನರಕೆ ಕಾಲಮಕ್ಷಯಂ' ಎಂಬ ಶ್ರುತಿಯ ಬಸವಣ್ಣನೋದುವನು. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ ಕೊಡಲಮ್ಮೆನು. ಹೊಲೆಹೊಲೆಯರ ಮನೆಯ ಹೊರ್ಕ್ಕಾಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ ತಲೆದಂಡ ಕೂಡಲ ಸಂಗಮದೇವಾ" (೬೪೧)

ಈ ವಚನದಲ್ಲಿ 'ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನು' ಎಂಬ ಶಬ್ದಗಳು ಬಹು ಮಹತ್ವವಾದವುಗಳು. ಅವು ಬಿಜ್ಜಳನ ಪ್ರತ್ಯಕ್ಷ ಸಾನ್ನಿಧ್ಯವನ್ನು ಸೂಚಿಸುತ್ತವೆ. ಒಬ್ಬ ಮಂತ್ರಿಯು ಅರಸನ ನೆರೆಯಲ್ಲಿ ಯಾವಾಗಲೂ ಇದ್ದುಕೊಂಡು ಅವನ ಸಲಹೆಯನ್ನು ಹೊಂದಿ ಆಡಳಿತೆಯನ್ನು ನಡಿಸುವದುಂಟು. ಆದರೆ ಒಬ್ಬ ಗುಮಾಸ್ತನು ಅಥವಾ ಖಜೀನದಾರ ಅಥವಾ ಸೇನಾಪತಿಯು ಅರಸನ ಗದ್ದುಗೆಯ ಕೆಳಗೆ ಕುಳಿತು ಕೆಲಸ ಮಾಡುವವನೆಂದು ಹೇಳಲಿಕ್ಕೆ ಬರಲಾರದು. ಅವರು ಅವನಿಗೆ ಅಪ್ರತ್ಯಕ್ಷ ಸಂಬಂಧವುಳ್ಳವರು. ಅಲ್ಲದೆ ಈ ನೌಕರರ ಮೇಲೆ ಅನೇಕ ಅಧಿಕಾರಿಗಳಿರುತ್ತಾರೆ. ಸೇನಾಪತಿಗೂ ಈ ಶಬ್ದಗಳು ಅನ್ವಯಿಸುವದಿಲ್ಲ. ಆದರೆ ಮಂತ್ರಿಸ್ಥಳವು ಹೀಗಿರದೆ ಅವನು ಅರಸನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸುವವನೆಂಬ ಭಾವವು ಹೆಚ್ಚಿಗೆ ಅನ್ವಯಿಸುತ್ತದೆ. ಆದ್ದರಿಂದ ಬಸವೇಶ್ವರನು ಬಿಜ್ಜಳನ ಮಂತ್ರಿಯಾಗಿದ್ದದ್ದು ನಿಜವೆಂದು ನಮಗೆ ತೋರುತ್ತದೆ. ಅವನು ಮಂತ್ರಿಯಾಗಿದ್ದಾಗ್ಗೆ ಅವನು ಈ ವಚನವನ್ನು ಬರೆದಿರಬೇಕೆಂದು ತೋರುತ್ತದೆ. ಇನ್ನೊಂದು ವಚನವು ಕೆಳಗೆ ಕಾಣಿಸಿದಂತೆ ಇದೆ.

“ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಂಟು. ಹಾಸಿ ದುಡಿ ವರೆ ತನಗುಂಟು. ಪ್ರಮಥರಿಗುಂಟು. ಮಾರಿತಂದೆಗಳಂತೆ ಎನಗೇಕಹು ದಯ್ಯಾ? ರತ್ನದ ಸಂಕೋಲೆಯಸಿಕ್ಕಿ ಕಾಡಿಹ ಕೂಡಲಸಂಗಮದೇವ ಶಿವಧೋ ಶಿವಧೋ” (೬೯೯)

ಈ ವಚನದ ಮೇಲಿಂದ ಬಸವೇಶ್ವರನು ಸಿರಿವಂತನಾಗಿದ್ದನೆಂ ಬುದು ಸ್ಪಷ್ಟವದೆ. ಅವನಿಗೆ ಬಿಜ್ಜಳನಿಂದ ಹೆಚ್ಚಿನ ತರದ ಪಾಶನವು ದೊರೆಯುತ್ತಿತ್ತೆಂದು ತೋರುತ್ತದೆ. ಈ ವಚನವು ಸಣ್ಣ ಸಂಬಳವಿದ್ದ ನೌಕರನಿಗೆ ಅನ್ವಯಿಸುವದಿಲ್ಲ. ಬಸವೇಶ್ವರನು ಪ್ರಧಾನಿಯಾಗಿ ಹೆಚ್ಚಿನ ಸಂಬಳವನ್ನು ಪಡೆಯುತ್ತಿದ್ದನೆಂಬುದನ್ನು ಈ ವಚನವು ಸೂಚಿಸುತ್ತದೆ.

ಚಾಲುಕ್ಯ, ರಾಷ್ಟ್ರಕೂಟರ ರಾಜ್ಯಗಳಲ್ಲಿ ಅರಸನಿಗೆ ಅನೇಕ ತರದ ಮಂತ್ರಿಗಳಿದ್ದದ್ದು ಇತಿಹಾಸದಿಂದ ತಿಳಿದು ಬರುತ್ತದೆ. ಆದರೆ ಬಸವೇ ಶ್ವರನು ಇಂಥ ಮಂತ್ರಿಗಳಲ್ಲಿ ಯಾವ ಕಾರ್ಯಗಳನ್ನು ಮಾಡುತ್ತಿದ್ದ ನೆಂಬದನ್ನು ತಿಳಿಯಲು ನಮಗೆ ಸ್ಪಷ್ಟ ಆಧಾರಗಳು ಅವನ ವಚನಗ ಳಲ್ಲಿ ದೊರೆಯುವದಿಲ್ಲ.

ಭೀಮ ಕವಿಯು ತನ್ನ ಬಸವ ಪುರಾಣದಲ್ಲಿ ಬಿಜ್ಜಳನಿಗೆ ಬಲ ದೇವನೆಂಬ ಮಂತ್ರಿಯು ಇದ್ದನೆಂತಲೂ ಅವನು ಬಸವೇಶ್ವರನನ್ನು ಕಲ್ಯಾಣಕ್ಕೆ ಬರಮಾಡಿಕೊಂಡು ಅವನಿಗೆ ತನ್ನ ಮಗಳನ್ನು ಕೊಟ್ಟು ಲಗ್ನಮಾಡಿದನೆಂತಲೂ ಬಲದೇವನು ತೀರಿಕೊಂಡ ಬಳಿಕ ಬಿಜ್ಜಳನು ಅವನ ಸ್ಥಾನದಲ್ಲಿ ಬಸವೇಶ್ವರನನ್ನು ನೇಮಿಸಿದನೆಂತಲೂ ಹೇಳಿರು ತ್ತಾನೆ. ಹರಿಹರನು ತನ್ನ ಬಸವರಾಜ ರಗಳೆಯಲ್ಲಿ ಬಿಜ್ಜಳನಿಗೆ ಸಿದ್ಧಣ್ಣ ಮಂತ್ರಿ ಎಂಬ ಮಂತ್ರಿ ಇದ್ದನೆಂತಲೂ ಅವನು ತನ್ನ ಮಗಳನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿದನೆಂತಲೂ ಅವನು ತೀರಿದ ಬಳಿಕ ಬಿಜ್ಜಳನು ಅವನ ಸ್ಥಾನದಲ್ಲಿ ತನ್ನ ಮಂತ್ರಿಯಾಗಿ ನೇಮಿಸಿ ಕೊಂಡನೆಂತಲೂ ಹೇಳಿದ್ದಾನೆ. ಈ ಉಭಯತರು ತಮ್ಮ ಹೆಣ್ಣು ಮಕ್ಕಳನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿರಬಹುದು. ಆದರೆ ಇಷ್ಟು ಮಾತ್ರದಿಂದಲೇ ಬಿಜ್ಜಳನು ಬಸವೇಶ್ವರನಿಗೆ ಮಂತ್ರಿಪದವನ್ನು ಕೊಟ್ಟನೆಂಬುದು ನಂಬಲರ್ಹವಾದುದಲ್ಲ. ಈ ಸ್ಥಾನವು ಯಾವಾಗಲೂ ಯೋಗ್ಯತೆಯ ಮೇಲೆ ಅವಲಂಬಿಸಿರುತ್ತದೆ. ಬಸವೇಶ್ವರನು ತನ್ನ ಯೋಗ್ಯತೆಯಿಂದಲೇ ಮುಂದೆ ಬಂದಿದ್ದಾನೆಂದು ನಮಗೆ ತೋರುತ್ತದೆ.

ಕಠಿಣ ಪರಿಸ್ಥಿತಿಯಲ್ಲಿ ಬಿಜ್ಜಳನು ಮುಂದೆ ಬಂದಿದ್ದಾನೆ. ಅವನು ಮೊದಲು ರಾಜನಾಗಿದ್ದಿಲ್ಲ. ಇಂಥವನ ಸೇವೆಯಲ್ಲಿ ಬಸವೇಶ್ವರನಿದ್ದು ಅವನಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾನೆ. ಇದಾಗಬೇಕಾದರೆ ಬಸವೇಶ್ವರನಲ್ಲಿ ಬಿಜ್ಜಳನಿಗೆ ಸಹಾಯ ಮಾಡುವಷ್ಟು ಹೆಚ್ಚಿನ ಯೋಗ್ಯತೆಯು ಇರಲಿಕ್ಕೆಬೇಕು. ಆದ್ದರಿಂದ ಅವನ ಆಡಳಿತೆಯಲ್ಲಿ ಯಾರು ಯಾರ್ರು ಉಚ್ಚ ಸ್ಥಾನದಲ್ಲಿದ್ದರು, ಆಗಿನ ಪರಿಸ್ಥಿತಿಯು ಹೇಗೆ ಇವುಗಳನ್ನು ನಾವು ವಿವೇಚಿಸುವದು ಅವಶ್ಯವಿರುತ್ತದೆ.

ಈ ಕಾಲದಲ್ಲಿ ಚಾಲುಕ್ಯ ರಾಜನಾದ ನೂರ್ಮಡಿ ತೈಲಪನು ಚಕ್ರಾಧಿಪತಿಯಾಗಿದ್ದನೆಂಬುದನ್ನು ನಾವು ಮೊದಲು ಲಕ್ಷಿಸುವದು ಅವಶ್ಯವದೆ. ಅವನ ಕಾಲದಲ್ಲಿ ಬಿಜ್ಜಳನು ಮಂಗಳವಾಡದಲ್ಲಾಗಲಿ ಇಲ್ಲವೆ ಬನವಾಸಿ ನಾಡಿನಲ್ಲಾಗಲಿ ಮಹಾಮಂಡಲೇಶ್ವರ ಅಂದರೆ ಮಾಂಡಲಿಕನಾಗಿದ್ದನೆಂಬುದು ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಮುಂದೆ ಬಿಜ್ಜಳನು ಈ ಚಾಲುಕ್ಯರಾಜನನ್ನು ೧೧೬೩ ಇಸ್ವಿಯಲ್ಲಿ ತಳ್ಳಿ ೬ ವರ್ಷ ಸ್ವತಂತ್ರನಾಗಿ ರಾಜ್ಯವಾಳಿದನು. ಇದಕ್ಕು ಪೂರ್ವದಲ್ಲಿಯೇ ರೇವಣಸಿದ್ಧೇಶ್ವರನೂ ಆಮೇಲೆ ಬಸವೇಶ್ವರನೂ ಬಿಜ್ಜಳನ ಆಸ್ಥಾನದಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದರು. ಬಸವೇಶ್ವರನೂ ಅವನ ಸೊದರಮಾವಂದಿರೂ ಬಿಜ್ಜಳನಲ್ಲಿ ನೌಕರರಾಗಿದ್ದದರಿಂದ ಬಿಜ್ಜಳನು ಚಾಲುಕ್ಯ ರಾಜನನ್ನು ತಳ್ಳುವ ಕಾರ್ಯದಲ್ಲಿ ಅವರೆಲ್ಲ ಅವನಿಗೆ ಸಹಾಯಕರಾಗಿ ವರ್ತಿಸಿಲಿಕ್ಕೆಬೇಕು. ಮತ್ತು ಬಸವೇಶ್ವರನಾದರೂ ಅದೇ ಧೋರಣವನ್ನು ಅನುಸರಿಸಿರಲಿಕ್ಕೆಬೇಕು.

ಬಿಜ್ಜಳನು ಮಂಡಳಾಧೀಶ್ವರನಾಗಿದ್ದಾಗ್ಗೆ ಅನೇಕ ಪ್ರಸಿದ್ಧ ದಂಡನಾಯಕರೂ ಬೇರೆ ಮಹಾಮಂಡಲೇಶ್ವರರೂ ಅವನಿಗೆ ಸಮಕಾಲೀನರಾಗಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿದ್ದದ್ದು ಕಂಡುಬರುತ್ತದೆ. ದಂಡನಾಯಕರಲ್ಲಿ ಕೇಶಿರಾಜನೂ ಬರ್ಮದೇವನೂ ಬಹು ಪ್ರಮುಖರಾಗಿದ್ದರು. ಅವರ ಶಿಲಾಶಾಸನಗಳು ಕರ್ನಾಟಕದಲ್ಲಿ ವಿಪುಲವಾಗಿ ದೊರೆಯುತ್ತವೆ. ಅವುಗಳಿಂದ ಇವರಿಬ್ಬರೂ ನಾಡಿನಲ್ಲಿ ಬಹು ಪ್ರಬಲರಾಗಿದ್ದದ್ದು ಸ್ಪಷ್ಟವಾಗುತ್ತದೆ. ಬಿಜ್ಜಳನು ಮರಣಹೊಂದಿದ ಬಳಿಕ ಸಹ ಅವರು ತಮ್ಮ ತಮ್ಮ ಭಾಗಗಳಲ್ಲಿ ರಾಜ್ಯವಾಳುತ್ತಿದ್ದರು. ಇಂಥ ಸಮರ್ಥರನ್ನು ಬಿಟ್ಟುಕೊಟ್ಟು ಬಿಜ್ಜಳನು ಬಸವೇಶ್ವರನನ್ನು

ತನ್ನ ಮಂತ್ರಿಯಾಗಿ ನೇಮಿಸಿಕೊಳ್ಳಬೇಕಾದರೆ ಅವನಲ್ಲಿ ಒಂದು ವಿಶೇಷತರದ ಯೋಗ್ಯತೆ ಇದ್ದದ್ದರಿಂದಲೇ ಅವನಿಗೆ ಈ ಉಚ್ಚ ಪದವಿಯನ್ನು ಕೊಟ್ಟಿರಬೇಕೆಂದು ತಿಳಿಯಲು ಆಸ್ಪದವಿದೆ.

ಬಿಜ್ಜಳನ ಕಾಲದಲ್ಲಿ ಮೇಲೆ ಹೇಳಿದ ಸೇನಾಪತಿಗಳಲ್ಲದೆ ಬಹು ಪ್ರಬಲರಾದ ಮಂಡಲಾಧೀಶ್ವರರು ತಮ್ಮ ತಮ್ಮ ಭಾಗಗಳಲ್ಲಿ ರಾಜ್ಯವಾಳುತ್ತಿದ್ದದ್ದು ಕಂಡುಬರುತ್ತದೆ. ಶಿಲಾಹಾರ ವಂಶದ ರಾಜರು ಕಂಪ್ಪಡದಲ್ಲಿಯೂ ರಟ್ಟರಾಜರು ಸವದತ್ತಿಯಲ್ಲಿಯೂ ಸಿಂದ ವಂಶದ ರಾಜರು ಎರೆಯಂಬರಾಗೆಯಲ್ಲಿಯೂ ಕದಂಬ ವಂಶದ ಒಂದು ಮನೆತನದವರು ಗೋವೆಯಲ್ಲಿಯೂ ಇನ್ನೊಂದು ಮನೆತನದವರು ಹಾನಗಲ್ಲಿನಲ್ಲಿಯೂ ರಾಜ್ಯವಾಳುತ್ತಿದ್ದರು. ಇವರಲ್ಲಿ ಶಿಲಾಹಾರ ವಂಶದ ವಿಜಯಾದಿತ್ಯನು, ರಟ್ಟ ವಂಶದ ಮೂರನೇ ಕಾರ್ತವೀರ್ಯನು, ಸಿಂದ ವಂಶದ ಮೊದಲನೇ ಪೆರ್ಮಾಡಿಯು ಮತ್ತು ಅವನ ತಮ್ಮ ಚಾವುಂಡನು ಬಹು ಶೂರರೂ ಯೋಗ್ಯತೆಯುಳ್ಳವರೂ ಆಗಿದ್ದರು. ಆದರೆ ಇವರೆಲ್ಲರೂ ಬಿಜ್ಜಳನಿಗೆ ಅಧೀನರಾಗಿ ವರ್ತಿಸುತ್ತಿದ್ದರು. ಇದಕ್ಕೆ ಚಾಲುಕ್ಯ ರಾಜನ ಅಯೋಗ್ಯತೆ ಮತ್ತು ದೌರ್ಬಲ್ಯ ಇವುಗಳೇ ಕಾರಣವಾಗಿರಬೇಕು.

ಬಿಜ್ಜಳನ ರಾಜ್ಯಕ್ಕೆ ಹೊಂದಿ ಹೊಯಿಸಳ ರಾಜ್ಯವಿದ್ದು ಅದನ್ನು ಅತ್ಯಂತ ಪ್ರಸಿದ್ಧನಾದ ವಿಷ್ಣುವರ್ಧನನ ಮಗನಾದ ಮೊದಲನೇ ನರಸಿಂಹನು ಆಳುತ್ತಿದ್ದನು ಈ ರಾಜ್ಯದ ಕೆಳಗೆ ಚೋಳರ ರಾಜ್ಯವಿದ್ದು ಅದನ್ನು ಮೂರನೇ ಕುಲೋತ್ತುಂಗ ಚೋಳನು ಅಥವಾ ವೀರರಾಜೇಂದ್ರ ಚೋಳನು ಆಳುತ್ತಿದ್ದನು. ಈ ಉಭಯ ರಾಜ್ಯಗಳು ಆಗ ಬಹು ಪ್ರಬಲವಾಗಿದ್ದವು. ಮಧ್ಯದಲ್ಲಿ ೧೧೪೪ ರಲ್ಲಿ ಚಾಲುಕ್ಯರಿಗೂ ಹೊಯಿಸಳರಿಗೂ ಯುದ್ಧಗಳುಂಟಾಗಲು ಸಿಂದರಾಜನಾದ ಪೆರ್ಮಾಡಿಯು ಹೊಯಿಸಳರನ್ನು ಗೆದ್ದು ದ್ವಾರಸಮುದ್ರಕ್ಕೆ ಮುತ್ತಿಗೆ ಹಾಕಿದ್ದು ಶಿಲಾಶಾಸನದಿಂದ ತಿಳಿದುಬರುತ್ತದೆ. ಇವನು ಗೋವೆಯ ಕದಂಬ ರಾಜನನ್ನು ಸೋಲಿಸಿದ್ದಾನೆ. ಮತ್ತು ಬಿಜ್ಜಳನು ತನ್ನ ಮಗಳಾದ ಸಿರಿಯಾದೇವಿಯನ್ನು ಅವನ ತಮ್ಮನಾದ ಚಾವುಂಡನಿಗೆ ಕೊಟ್ಟು ಲಗ್ನ ಮಾಡಿದ್ದಾನೆ. ಈ ಎಲ್ಲ ಸಂಗತಿಗಳು ಶಿಲಾಶಾಸನಗಳಿಂದ ಸಿದ್ಧವಾಗಿರುತ್ತವೆ. ಇದರಿಂದ ಬಿಜ್ಜಳನು ಒಬ್ಬ ರಾಜ್ಯಕಾರಣಿಯಾಗಿದ್ದನೆಂಬುದು ಗೊತ್ತಾಗುತ್ತದೆ.

ಇಂಥ ರಾಜಕೀಯ ಪರಿಸ್ಥಿತಿಯಲ್ಲಿ ಬಸವೇಶ್ವರನಿಗೆ ಬಿಜ್ಜಳನು ಮಂತ್ರಿಯ ಸ್ಥಾನವನ್ನು ಕೊಡಬೇಕಾದರೆ ಅವನಲ್ಲಿ ಯೋಗ್ಯತೆಯು ಇರದ ಹೊರತು ಅದನ್ನು ಅವನಿಗೆ ಕೊಡುವ ಸಂಭವವಿರುವದಿಲ್ಲ. ಬಿಜ್ಜಳನಾದರೂ ಒಬ್ಬ ಸಾಮಾನ್ಯ ರಾಜನಾಗಿರಲಿಲ್ಲ. ಅವನು ಶೂರನೂ ಅತ್ಯಂತ ಯೋಗ್ಯತೆಯುಳ್ಳವನೂ ಆಗಿದ್ದನೆಂದು ತೋರುತ್ತದೆ. ಅವನ ಶಿಲಾಶಾಸನಗಳು ಉತ್ತರ ಕರ್ನಾಟಕದಲ್ಲಿಯೂ ಮೈಸೂರ ಪ್ರಾಂತದಲ್ಲಿಯೂ ವಿಪುಲವಾಗಿ ದೊರೆಯುತ್ತವೆ. ಅವುಗಳಿಂದ ಅವನು ಧರ್ಮಿಷ್ಠನೂ ಪ್ರಬಲನೂ ಆಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವನು ಪ್ರಬಲರಾದ ದಂಡಾಧಿಕಾರಿಗಳನ್ನೂ ಬೇರೆ ಮಾಂಡಲಿಕರನ್ನೂ ತನ್ನ ಅಂಕಿತದಲ್ಲಿಟ್ಟುಕೊಂಡು ರಾಜ್ಯವಾಳಿದ್ದಾನೆ. ನೆರೆ ರಾಜ್ಯಗಳಾದ ಹೊಯಿಸಳರೂ ಚೋಳರೂ ಅವನ ಮೇಲೆ ದಂಡೆತ್ತಿ ಬಂದಿಲ್ಲ. ಅವನು ಯೋಗ್ಯತೆಯುಳ್ಳವನಾದ್ದರಿಂದ ಆರಂಭದಲ್ಲಿ ಚಾಲುಕ್ಯರಾಜನನ್ನು ಸುಮಾರು ೧೦—೧೨ ವರ್ಷ ಅಂದರೆ ೧೧೫೬ ರಿಂದ ೧೧೬೨ ರ ವರೆಗೆ ಹೆಸರಿಗೆ ಮಾತ್ರ ರಾಜನನ್ನಾಗಿ ಮಾಡಿ ತಾನೇ ರಾಜ್ಯವಾಳಿದನು. ಅವನನ್ನು ಪಟ್ಟದಿಂದ ತಪ್ಪಿ ಮುಂದೆ ೬ ವರ್ಷ ಅಂದರೆ ೧೧೬೨ ರಿಂದ ೧೧೬೭ ರ ವರೆಗೆ ಚಕ್ರಾಧಿಪತ್ಯವನ್ನು ವಹಿಸಿದನು. ಈ ಕಾರ್ಯದಲ್ಲಿ ಅವನು ವೀರಶೈವರಲ್ಲಿ ಆಗ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ರೇವಣಸಿದ್ಧೇಶ್ವರ ಮತ್ತು ಅವನ ತರುವಾಯ ಬಸವೇಶ್ವರ ಇವರ ಸಹಾಯವನ್ನು ಹೊಂದಿರಲಿಕ್ಕೆ ಬೇಕು. ಇವರಲ್ಲಿ ಬಸವೇಶ್ವರನು ವೀರಶೈವ ಧರ್ಮವನ್ನು ಸ್ವೀಕರಿಸಿದ ಬಳಿಕ ಅವನು ಧರ್ಮಬೋಧೆಯನ್ನು ಮಾಡುತ್ತ ದೇಶದಲ್ಲಿ ಸಂಚರಿಸಿದ್ದಾನೆ. ಈ ವಿಷಯವಾಗಿ ನಾವು ಹಿಂದೆ ಅನೇಕ ಆಧಾರಗಳನ್ನು ಕೊಟ್ಟಿದ್ದೇವೆ. ಇದರಿಂದ ಅವನು ಸ್ವಾಭಾವಿಕವಾಗಿ ಜನತೆಯ ಪ್ರೀತಿಯನ್ನು ಹೊಂದಿರಲಿಕ್ಕೆ ಬೇಕು. ಅದರಿಂದ ಬಿಜ್ಜಳನು ತನ್ನ ರಾಜ್ಯಾಧಿಪತ್ಯದ ಕಾರ್ಯದಲ್ಲಿ ಬಸವೇಶ್ವರನ ಸಹಾಯವನ್ನು ಅಪೇಕ್ಷಿಸಿರಬೇಕು ಅವನನ್ನು ತನ್ನ ಸೈನ್ಯಾಧಿಪತಿಯಾಗಿಯೂ ಕೂಡ ಮಾಡಿರಲಿಕ್ಕೆ ಬೇಕು ಆದ್ದರಿಂದ ಬಸವದಂಡಾಧಿಪತಿ ಎಂಬ ಹೆಸರು ಬಸವೇಶ್ವರನಿಗೆ ಪ್ರಾಪ್ತವಾಗಿದೆ. ಮುಂದೆ ಬಿಜ್ಜಳನು ಕಲ್ಯಾಣದಲ್ಲಿ ಪಟ್ಟವೇರಿದ ಬಳಿಕ ಬಸವೇಶ್ವರನು ತನಗೆ ಮಾಡಿದ ಸಹಾಯಕ್ಕೋಸ್ಕರ ಅವನಿಗೆ ಪ್ರಧಾನಿ ಪಟ್ಟವನ್ನು ಕೊಟ್ಟಿರಲಿಕ್ಕೆ ಬೇಕು ಹೀಗೆ ಘಟನೆಗಳು ನಡಿದಿರಬೇಕೆಂದು ತೋರುತ್ತದೆ. ಅನೇಕರು ಸಿದ್ಧಣ್ಣ ಮಂತ್ರಿ ಅಥವಾ ಬಲದೇವ ಮಂತ್ರಿ

ಇವರು ಸೇರಿದ ಬಳಿಕ ಬಲು ಹಗುರಾಗಿ ಬಸವೇಶ್ವರನಿಗೆ ಮಂತ್ರಿಪದ ದೊರೆಯಿತೆಂದು ತಿಳಿದ ಹಾಗೆ ನಮಗೆ ತೋರುತ್ತದೆ. ಆದರೆ ಆಗಿನ ಕರ್ನಾಟಕ ಇತಿಹಾಸವನ್ನು ನಾವು ಚನ್ನಾಗಿ ನಿರೀಕ್ಷಿಸಿದಲ್ಲಿ ಇದು ಶಕ್ಯವಾಗುವ ಪರಿಸ್ಥಿತಿ ಇದ್ದಿಲ್ಲೆಂದು ಮೇಲಿನ ವಿವರಣೆಗಳಿಂದ ಗೊತ್ತಾಗುತ್ತದೆ. ವೀರಶೈವ ಸಮಾಜದವರು ಬಸವೇಶ್ವರನ ನಿಜವಾದ ಯೋಗ್ಯತೆಯನ್ನು ಇನ್ನು ಅರಿತಿಲ್ಲ. ಅವನು ಅತ್ಯಂತ ಯೋಗ್ಯತೆಯ ಪುರುಷನಾದ್ದರಿಂದಲೇ ಅವನಿಗೆ ಈ ಶ್ರೇಷ್ಠಸ್ಥಾನವು ಪ್ರಾಪ್ತವಾಗಿರುತ್ತದೆಂಬುದನ್ನು ಅವರು ಲಕ್ಷಿಸತಕ್ಕದ್ದಾಗಿದೆ.

ಬಸವೇಶ್ವರನಿಗೋಸ್ಕರ ಅಂಥ ಶ್ರದ್ಧೆವಹಿಸಿದ ವೀರಶೈವರು ಮತ್ತು ಅವನ ಪುರಾಣಕರ್ತರು ಅವನನ್ನು ಒಬ್ಬ ಪವಾಡ ಪುರುಷನನ್ನಾಗಿ ಮಾಡಿದ್ದಾರೆ. ಆದರೆ ಬಸವೇಶ್ವರನು ಕಾರ್ಯಕ್ಕೆ ಮಹತ್ವದ ಸ್ಥಾನವನ್ನು ಕೊಟ್ಟಿರುವದು ಅವನ ವಚನಗಳ ವೈಶಿಷ್ಟ್ಯವಾಗಿದೆ. ಬಸವನ ಕಾಲದ ಶಿವಶರಣರು ಅನೇಕ ಉದ್ಯೋಗಗಳನ್ನು ಮಾಡುತ್ತ ಇದ್ದು ಕಾರ್ಯಕ್ಕೆ ಮಹತ್ವ ಕೊಟ್ಟಿದ್ದಾರೆ. ಈ ದೃಷ್ಟಿಯಿಂದ ನಾವು ವಿಚಾರ ಮಾಡಿದಲ್ಲಿ ಬಸವೇಶ್ವರನು ಬಿಜ್ಜಳನ ಆಡಳಿತೆಯಲ್ಲಿ ಅನೇಕ ಅಧಿಕಾರಗಳನ್ನು ಸಂಪಾದಿಸಿ ತನ್ನ ಯೋಗ್ಯತೆಯಿಂದಲೇ ತಾನು ಮಾಡಿದ ಕಾರ್ಯಗಳಿಂದಲೇ ಮುಂದೆ ಬಂದಿದ್ದಾನೆಂದು ನಮಗೆ ತೋರುತ್ತದೆ.

ಜೈನ ಗ್ರಂಥಕಾರರು ಬಸವೇಶ್ವರನು ತನ್ನ ತಂಗಿಯಾದ ಪದ್ಮಾವತಿಯನ್ನು ಬಿಜ್ಜಳನಿಗೆ ಕೊಟ್ಟು ಅವನನ್ನು ಮೋಹಪರವಶನನ್ನಾಗಿ ಮಾಡಿ ತಾನು ಮಂತ್ರಿಪದಾರೂಢನಾದನೆಂದು ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ. ಆದರೆ ಬಸವೇಶ್ವರನು ಸ್ತ್ರೀಯರ ವಿಷಯವಾಗಿ ಅತ್ಯಂತ ಆದರ ಬುದ್ಧಿಯುಳ್ಳವನಾಗಿದ್ದನೆಂಬುದನ್ನು ಅವನ ಅನೇಕ ವಚನಗಳಿಂದ ಸಿದ್ಧಮಾಡಬಹುದು. ಹಾಗೆಯೇ ಅವನು ಜಾರತನವನ್ನು ಬಹಳ ರೀತಿಯಿಂದ ನಿಷೇಧಿಸಿದ್ದಾನೆ. ಆದ್ದರಿಂದ ಇಂಥ ಕಥೆಗಳು ಕೇವಲ ಮಾತ್ಸರ್ಯ ಬುದ್ಧಿಯಿಂದ ಹೊರಟಂಥವೇ ಹೊರತು ನಂಬಲರ್ಹವಾದುವಲ್ಲ. ಬಸವೇಶ್ವರನು ಸಣ್ಣ ಮಗುವು ಇದ್ದಾಗಳೇ ಅವನ ತಂದೆತಾಯಿಗಳು ತೀರಿಹೋದರು. ಆದ್ದರಿಂದ ಅವನಿಗೆ ಒಬ್ಬ ತಂಗಿ ಇರುವದು ಸಂಭವವೇ ಇರುವದಿಲ್ಲ. ಪದ್ಮಾವತಿಯು ಜೈನರು ನಿರ್ಮಿಸಿದ

ಒಬ್ಬ ಕಾಲ್ಪನಿಕ ಸ್ತ್ರೀಯಳೆಂದು ನಮಗೆ ತೋರುತ್ತದೆ. ಈ ವಿಷಯವಾಗಿ ನಾವು ಹಿಂದೆ ೧೩ನೇ ಲೇಖಾಂಕದಲ್ಲಿ ಸವಿಸ್ತಾರವಾಗಿ ವಿವೇಚಿಸಿದ್ದೇವೆ. (ಶಿವಾನುಭವ ಸಂಪುಟ ೧೬, ಸಂಚಿಕೆ ೧೧, ಪುಟ ೫೬೫ ನೋಡಿರಿ.)

ಇನ್ನು ಮುಂದೆ ಬಸವೇಶ್ವರನು ಸೈನ್ಯಾಧಿಕಾರಿಯಾಗಿದ್ದನೇ ಹೇಗೆ ಮತ್ತು ಅವನು ಆಗ ಹೇಗೆ ವರ್ತಿಸಿದನು ಎಂಬುದನ್ನು ವಿವೇಚಿಸುವೆವು. ಈ ವಿಷಯವಾಗಿ ನಾವು ಅನೇಕ ವಚನಗಳನ್ನು ಕೆಳಗೆ ಉದಹರಿಸುವೆವು. ಅವುಗಳ ಮೇಲಿಂದ ಬಸವೇಶ್ವರನು ಯುದ್ಧಕಲೆಯ ರೀತಿಗಳನ್ನು ಚನ್ನಾಗಿ ಬಲ್ಲವನಾಗಿದ್ದನೆಂತಲೂ ಇಷ್ಟೇ ಅಲ್ಲ, ಅವನು ಯುದ್ಧಗಳಲ್ಲಿ ಸಹ ಭಾಗವಹಿಸಿರಬೇಕೆಂತಲೂ ಊಹಿಸಬಹುದಾಗಿದೆ. ಹೀಗೆ ಅವನು ಸೇನಾಪತಿಯಾಗಿದ್ದರೂ ಕೂಡ ಅವನು ತನ್ನ ಧಾರ್ಮಿಕ ವೃತ್ತಿಯನ್ನು ಬಿಡದೆ ಧರ್ಮಬೋಧೆಯನ್ನು ಹಾಗೆಯೇ ನಡೆಸಿದ್ದನೆಂತಲೂ ನಮಗೆ ತೋರುತ್ತದೆ. ಕೆಳಗೆ ಕಾಣಿಸಿದ ವಚನಗಳಿಂದ ಅವನು ತನ್ನ ಸೈನಿಕರಲ್ಲಿಯೂ ಕೂಡ ಧಾರ್ಮಿಕ ಉಚ್ಚ ವಿಚಾರಗಳನ್ನು ಉಪದೇಶಿಸುತ್ತಿದ್ದನೆಂದು ನಮಗೆ ಭಾಸವಾಗುತ್ತಿದೆ. ಬಸವೇಶ್ವರನು ಒಕ್ಕಲಿಗರಲ್ಲಿ ಬೆರೆದು ಹೇಗೆ ಉಪದೇಶ ಮಾಡುತ್ತಿದ್ದನೆಂಬುದನ್ನು ನಾವು ಅನೇಕ ವಚನಗಳನ್ನು ಉದಹರಿಸಿ ಸಮರ್ಥಿಸಿದ್ದೇವೆ. ಹಾಗೆಯೇ ಅವನು ಸೈನಿಕರಲ್ಲಿಯೂ ವರ್ತಿಸಿದ್ದಾನೆ. ಬಸವೇಶ್ವರನು ತಾನು ಮಂತ್ರಿಯಾದದ್ದರ ಉದ್ದೇಶವನ್ನು ತನ್ನ ವಚನದಲ್ಲಿ ಬಹು ಸ್ಪಷ್ಟವಾಗಿ ಹೇಳಿದ್ದಾನೆ. ಅದು ಏನಂದರೆ— "ಹೊಲೆ ಹೊಲೆಯರ ಮನೆಯು ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದೊಡೆ ತಲೆದಂಡ ತಲೆದಂಡ" ಎಂದು ಹೇಳಿದ್ದಾನೆ. ಬಸವೇಶ್ವರನು ದಂಡಾಧಿಪತಿ ಅಥವಾ ಪ್ರಧಾನಿಯಾದಾಗ ಸಹ ತಾನು ಇಟ್ಟುಕೊಂಡ ಈ ಧ್ಯೇಯವನ್ನು ಬಿಟ್ಟಿಲ್ಲ. ಅವನು ಅದನ್ನು ಅಕ್ಷರಶಃ ಪಾಲಿಸಿದ್ದಾನೆ. ಇದಕ್ಕೆ ನಾವು ಮುಂದೆ ಕೊಡುವ ವಚನಗಳೇ ಸಾಕ್ಷಿಯಾಗಿವೆ.

(ಮುಂದುವರಿಯುವದು.)

---

# ಶಿವಾನುಭವ

ವರ್ಷ ೧೭ | ಮೇ ೧೯೪೩. | ಸಂಚಿಕೆ ೮

## ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ, ಬಿ. ಎ., ಎಲ್. ಎಲ್. ಬಿ., ವಿಜಾಪುರ.)

ಲೇಖಾಂಕ: ೨೦.

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನು ದಂಡನಾಯಕನಾಗಿದ್ದನೆಂತಲೂ ಅವನು ಯುದ್ಧಕಲಾ ಜ್ಞಾನವನ್ನು ಹೊಂದಿದವನಾಗಿದ್ದನೆಂತಲೂ ಅನೇಕ ವಚನಗಳ ಆಧಾರದಿಂದ ಸಮರ್ಥಿಸಿದ್ದೇವೆ. ಈ ಪ್ರಕಾರ ಅವನು ರಾಜನ ಆಸ್ಥಾನದಲ್ಲಿದ್ದುಕೊಂಡು ಅಲ್ಲಿಯ ರೀತಿ ನಡೆಗಳನ್ನು ಚನ್ನಾಗಿ ಅರಿತವನಾಗಿದ್ದನೆಂದು ಅವನ ವಚನಗಳಿಂದ ಕಂಡುಬರುತ್ತದೆ. ಅವನು ಅಲ್ಲಿ ಅನೇಕ ತರದ ಜನರ ಒಡನಾಡಿಯಾಗಿ ಕಾಲಕಳೆಯಬೇಕಾದದ್ದು ಸ್ವಾಭಾವಿಕವಾಗಿದೆ. ಆದ್ದರಿಂದ ಅಲ್ಲಿಯವರಂತೆ ಅವನು ಗಾಯನಪ್ರಿಯನಾಗಿದ್ದನೆಂದು ತೋರುತ್ತದೆ. ಯಾಕಂದರೆ ಗಾಯನಕ್ಕೆ ಸಂಬಂಧಿಸಿದ ವಿಷಯಗಳು ಅವನ ವಚನಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಅವನು ಒಂದು ವಚನದಲ್ಲಿ ನನ್ನ 'ಕಾಯವನ್ನು ದಂಡಿಗೆಯ ಮಾಡಯ್ಯ. ಎನ್ನ ಸಿರವ ಸೋರೆಯ ಮಾಡಯ್ಯ' ಎಂದು ಹೇಳುತ್ತ 'ಉರದಲೊತ್ತಿ ನನ್ನನ್ನು ಬಾರಿಸು' ಎಂದು ಪರಮಾತ್ಮನನ್ನು ಕುರಿತು ಬೇಡಿಕೊಳ್ಳುತ್ತಾನೆ. ಇನ್ನೊಂದು ವಚನದಲ್ಲಿ ಮಾಯೆಯನ್ನು ಕುರಿತು ಹೇಳುವಾಗ, 'ದಿಟಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ ಟೇವಕ ಟಂಬಕ ನಾಡಿಸುತ್ತಿದ್ದಿತಯ್ಯ ನಿನ್ನ ಮಾಯೆ' ಎಂದು ದುಃಖಿತನಾಗಿ ನುಡಿಯುತ್ತಿದ್ದಾನೆ. ಮತ್ತೊಮ್ಮೆ ಅವನು 'ತಾಳಮಾನ ಸರಿಸವನರಿಯೆ. ಕೂಡಲಸಂಗಮದೇವ ನಿನಗೆ ಕೇಡಿಲ್ಲವಾಗಿ ಆನು ಒಲಿ

ದಂತೆ ಹಾಡುವೆ' ಎಂದು ಹೇಳುತ್ತಾನೆ . ಗಾಯನಕ್ಕೆ ಸಂಬಂಧಿಸಿದ ಬಸವೇಶ್ವರನ ಇಂಥ ವಚನಗಳು ಅನೇಕವಿರುತ್ತವೆ. ಅದರಂತೆ ಅವನು ನೃತ್ಯವನ್ನು ಸಹ ಪ್ರೀತಿಸುವವನಾಗಿದ್ದನೆಂದು ತೋರುತ್ತದೆ. ಅವನ ವಚನದಲ್ಲಿ 'ಏನೂ ಅರಿಯನೆಂದು ಮೌನಗೊಂಡಿರಬೇಡ. ಕೂಡಲ ಸಂಗಮದೇವರ ಮುಂದೆ ದಂದಣ ದತ್ತಣ ಎನ್ನಿ' ಎಂದು ಹೇಳುತ್ತಾನೆ. ಇನ್ನೊಂದು ವಚನದಲ್ಲಿ ಅವನು ನಿಮ್ಮ 'ಶರಣರ ಪ್ರಸಾದದಲ್ಲಿ ನಿರಂತರ ಆಡಿ ಹಾಡಿ ಪರಿಣಾಮಿಸುವಂತೆ' ಮಾಡು ಎಂದು ಬೇಡಿಕೊಳ್ಳುತ್ತಾನೆ. ಇಂಥ ವಚನಗಳೂ ಅನೇಕವಾಗಿವೆ.

ಕರ್ನಾಟಕವು ಈ ಕಾಲದಲ್ಲಿ ಗಾಯನದಲ್ಲಿಯೂ ನೃತ್ಯದಲ್ಲಿಯೂ ಬಹಳ ಹೆಸರುಗೊಂಡಿತ್ತು. ಬಸವೇಶ್ವರನು ಒಬ್ಬ ಅರಸನ ಆಸ್ಥಾನದಲ್ಲಿದ್ದದರಿಂದ ಅವನು ಈ ಕಲೆಗಳನ್ನು ಚನ್ನಾಗಿ ಅರಿತವನಾಗಿದ್ದನೆಂಬುದು ಸ್ವಾಭಾವಿಕವಾಗಿದೆ ಆದರೆ ಅವನು ವಿಷಯಲೋಲುಪತೆಗೆ ಒಳಗಾಗದೆ ಕಲೆಗಳ ಉಪಯೋಗವನ್ನು ಪಾರಮಾರ್ಥಕ್ಕೋಸ್ಕರ ಹೇಗೆ ಉಪಯೋಗಮಾಡಿಕೊಂಡನೆಂಬದನ್ನು ನಾವು ಇಲ್ಲಿ ಲಕ್ಷಿಸುವದು ಬಹಳ ಅವಶ್ಯವಾಗಿದೆ. ವೀರಶೈವ ಧರ್ಮದ ಪ್ರಕಾರ ಇಂದ್ರಿಯಗಳ ಒಲವುಗಳನ್ನು ಅಳಿದುಬಿಡುವುದು ಸರಿಯಾದುದಲ್ಲ. ಅದು ಜೈನ ಬೌದ್ಧರಲ್ಲಿ ಮತ್ತು ಯೋಗಾಭ್ಯಾಸಿಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಆದರೆ ಬಸವೇಶ್ವರನು ಇಂದ್ರಿಯಭೋಗವನ್ನು ಪ್ರಸಾದರೂಪವಾಗಿ ಗ್ರಹಿಸಬೇಕೆಂದು ತನ್ನ ವಚನಗಳಲ್ಲಿ ಯಾವಾಗಲೂ ಒತ್ತಿ ಹೇಳುತ್ತಾನೆ.

ರಾಜರ ಆಸ್ಥಾನದಲ್ಲಿ ಬೇಟೆಯಾಡುವ ಪದ್ಧತಿಯು ಹೆಚ್ಚಾಗಿ ತೋರುವದುಂಟು. ಬಸವೇಶ್ವರನು ಆಸ್ಥಾನದಲ್ಲಿದ್ದವನಾದ್ದರಿಂದ ಬೇಟೆಯಾಟಕ್ಕೆ ಸಂಬಂಧಿಸಿ ಅನೇಕ ವಚನಗಳನ್ನು ಅವನು ನುಡಿದದ್ದು ನಾವು ಕಾಣುತ್ತೇವೆ. ಇಂಥ ವಚನಗಳ ಸಂಖ್ಯೆಯು ಗಾಯನಕ್ಕೆ ಸಂಬಂಧಿಸಿದ ವಚನಗಳಿಗಿಂತಲೂ ಬಹಳ ಹೆಚ್ಚು ಇದೆ. ಆದರೆ ಅವನು ಇದಕ್ಕೆ ಸಂಬಂಧಿಸಿದ ಸಂಗತಿಗಳನ್ನು ಅವನು ಪಾರಮಾರ್ಥಕ್ಕೆ ಮಾತ್ರ ತಂದು ಹಚ್ಚುತ್ತಾನೆ. ಅವನು ಒಂದು ವಚನದಲ್ಲಿ 'ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯ. ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ. ಮೊಲನಿಂದ ಕರಕಷ್ಟ ನರನ ಬಾಳುವೆ' ಎಂದು ಹೇಳುತ್ತಾನೆ. ಮತ್ತೊಂದು ವಚನದಲ್ಲಿ 'ಒಂದು ಮೊಲಕ್ಕೆ

ನಾಯನೊಂಬತ್ತ ಬಿಟ್ಟಂತೆ ಎನ್ನ ಬಿಡು ತನ್ನ ಬಿಡೆಂಬುದು ಕಾಯ ವಿಕಾರ. ಎನ್ನ ಬಿಡು ತನ್ನ ಬಿಡೆಂಬುದು ಮನವಿಕಾರ. ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ ಮನ ನಿಮ್ಮ ನೈದುಗೆ' ಎಂದು ಹೇಳುತ್ತಾನೆ. ಮತ್ತೊಂದು 'ವಚನದಲ್ಲಿ ಕುಳ್ಳಿದ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯ. ಜಿಳ್ಳೆತ್ತಿನ ಮರೆಯಲಿದ್ದು ಹುಲ್ಲೆಗಂಬ ತೊಡುವಂತೆ' ಎಂಬ ಬೇಟೆಯ ಉದಾಹರಣೆಯನ್ನು ಕೊಟ್ಟು ಭಕ್ತಿ ಇಲ್ಲದೆ ಲಿಂಗಪೂಜೆಯ ಮಾಡುವವರನ್ನು ಹಳಿದಿದ್ದಾನೆ. ಇನ್ನೊಂದು ವಚನದಲ್ಲಿ 'ತಲೆ ಇಲ್ಲದ ಕೋಲು ಹೊಳ್ಳು ಹಾರುವದಲ್ಲದೆ ಗುರಿಯ ತಾಗಬಲ್ಲದೇ' ಎಂದು ಬೇಟೆಗಾರರ ಬೀಸುಗೋಲಿನ ಉದಾಹರಣೆಯನ್ನು ಕೊಟ್ಟು ಮಾಯಾಪ್ರಪಂಚವನ್ನು ಅದಕ್ಕೆ ಹೋಲಿಸಿದ್ದಾನೆ. ಜನರು 'ನರವಿಂಧ್ಯ'ದೊಳಗೆ ಇದ್ದು ವ್ಯರ್ಥವಾಗಿ ಕಾಲಕಳೆಯುತ್ತಾರೆಂದು ಮೇಲಿಂದ ಮೇಲೆ ಹೇಳುತ್ತಾನೆ ಈ ತರದ ಅನೇಕ ವಚನಗಳು ಬಸವೇಶ್ವರನ ವಚನಗಳಲ್ಲಿ ದೊರಕುತ್ತವೆ. ಲೇಖ ವಿಸ್ತಾರದ ಭಯಕ್ಕಾಗಿ ಅವುಗಳನ್ನೆಲ್ಲ ನಾವು ಇಲ್ಲಿ ಉದಹರಿಸಿಲ್ಲ.

ರಾಜರ ಆಡಳಿತೆಯಲ್ಲಿ ಅನೇಕ ಲೋಪದೋಷಗಳು ಕಂಡುಬರುವದುಂಟು. ಬಸವೇಶ್ವರನು ಅಂಥವುಗಳನ್ನು ಸಹ ಕಂಡುಹಿಡಿದು ತನ್ನ ವಚನಗಳಲ್ಲಿ ಜನರಿಗೆ ಬೋಧೆ ಮಾಡಿದ್ದಾನೆ. ಅಧಿಕಾರಿಗಳು ರೈತರನ್ನು ಅನೇಕ ರೀತಿಯಾಗಿ ಬಿಟ್ಟಿ ಹಿಡಿಯುತ್ತಾರಷ್ಟೇ. ಇದನ್ನುದ್ದೇಶಿಸಿ ಬಸವೇಶ್ವರನು ಒಂದು ವಚನದಲ್ಲಿ 'ನಿಜವನರಿಯದ ಭಕ್ತ ಬಳಲುವನಲ್ಲದೆ ಲಿಂಗ ಬಳಲುವುದೆ? ಕೂಡಲಸಂಗಮದೇವ ಅರಸರಿಯದ ಬಿಟ್ಟಿಯೋ ಎಂದು ಉಲ್ಲೇಖಿಸಿ ನುಡಿದಿದ್ದಾನೆ. ವ್ಯವಹಾರದಲ್ಲಿ ಖೊಟ್ಟಿ ನಾಣ್ಯಗಳು ಪ್ರಚಾರದಲ್ಲಿರುತ್ತವೆ. ಬಸವೇಶ್ವರನು ಒಂದು ವಚನದಲ್ಲಿ ಇವುಗಳನ್ನು ಉದ್ದೇಶಿಸಿ 'ಸಲ್ಲದ ಹೊನ್ನು ಮತ್ತೆಲ್ಲಿದ್ದರೇನು ಕೂಡಲಸಂಗನ ಶರಣರ ಅನುಭಾವವಿಲ್ಲದವರು ಎಲ್ಲಿದ್ದರೇನು ಎಂತಾದರೇನು' ಎಂದು ದುರ್ಜನರನ್ನು ಕುರಿತು ನುಡಿಯುತ್ತಾನೆ.

ಬಸವೇಶ್ವರನು ವ್ಯವಹಾರದಲ್ಲಿ ತೋರುವ ಕಪಟ ರೀತಿಯ ಭಕ್ತಿಯ ಆಚರಣೆಗಳನ್ನು ಚನ್ನಾಗಿ ನಿರೀಕ್ಷಿಸಿದವನಿದ್ದಾನೆ. ಅವುಗಳನ್ನು ಅವನು ಬಹು ಮಾರ್ಮಿಕ ರೀತಿಯಿಂದ ತನ್ನ ವಚನಗಳಲ್ಲಿ ಖಂಡಿಸಿದ್ದಾನೆ. ಬಸವೇಶ್ವರನು ಜಂಗಮರಿಗೋಸ್ಕರ ಅಂಧ ಶ್ರದ್ಧೆಯುಳ್ಳವನೆಂದು ಬಹು

ಜನರು ಈಗ ಭಾವಿಸಿದ್ದಾರೆ. ಆದರೆ ಅವನು ಹಾಗೆ ಆಚರಿಸಿಲ್ಲೆಂಬುದು ಅವನ ಅನೇಕ ವಚನಗಳಿಂದ ತಿಳಿದುಬರುತ್ತದೆ ಅವನು ಒಂದು ವಚನದಲ್ಲಿ ಜಂಗಮರು ಕುದುರೆಯ ಮೇಲೆ ಹತ್ತಿದವರನ್ನು ಮನ್ನಿಸುತ್ತಾರೆ, ಅವರು ಇತರರನ್ನು ಮನ್ನಿಸುವದಿಲ್ಲ. 'ಅತ್ತದೊಡ್ಡ ನಾನಲ್ಲ' ಎಂದು ಮೊದಲಾಗಿ ಅವರನ್ನುದ್ದೇಶಿಸಿ ಚೇಷ್ಟೆಯ ನುಡಿಗಳನ್ನು ಆಡುತ್ತಾನೆ. ವೇದಪಠಣ ಮಾಡುವವರು ಭಾರಹೊರುವ ಕತ್ತೆಗಳೆಂದು ಸಂಬೋಧಿಸಿದ್ದಾನೆ. ಸುಳ್ಳಾಡುವ ವರ್ತಕರನ್ನು ತನ್ನ ವಚನಗಳಲ್ಲಿ ಅತ್ಯಂತವಾಗಿ ಟೀಕಿಸಿದ್ದಾನೆ. ಬತ್ತಲೆ ಇರುವ ಜೈನರನ್ನೂ ವಿಷ್ಣುವಿನ ಹೆಸರಿನಿಂದ ದೇಹವನ್ನು ಸುಡಿಸಿಕೊಳ್ಳುವ ಬ್ರಾಹ್ಮಣರನ್ನೂ ಚೇಷ್ಟೆ ಮಾಡಿ ನುಡಿದಿದ್ದಾನೆ.

ಮೇಲೆ ಹೇಳಿದ ಸಂಗತಿಗಳ ಮೇಲಿಂದ ಸಮಾಜದಲ್ಲಿರುವ ನ್ಯೂನತೆಗಳನ್ನು ಬಸವೇಶ್ವರನು ಕಂಡುಹಿಡಿದು ಅವುಗಳನ್ನು ದೂರ ಮಾಡಲಿಕ್ಕೆ ಬಹಳ ಪ್ರಯತ್ನಿಸುತ್ತಿದ್ದಾನೆಂಬುದು ಸ್ಪಷ್ಟವಾಗುತ್ತದೆ. ಅವನು ಲಿಂಗಧಾರಣವನ್ನು ಹೊಂದಿದ ಬಳಿಕ ಎಲ್ಲಿಯೋ ಒಂದು ಏಕಾಂತ ಸ್ಥಳವನ್ನು ಆರಿಸಿ ಸ್ವಸ್ಥವಾಗಿ ಕುಳಿತುಕೊಂಡಿಲ್ಲ. ಅವನು ದೇಶದಲ್ಲಿ ಧರ್ಮಬೋಧ ಮಾಡುತ್ತ ಪ್ರವಾಸ ಮಾಡಿದ್ದಾನೆ. ಜನರಲ್ಲಿ ಬೆರೆದು ಅವರಲ್ಲಿರುವ ತಪ್ಪು ರೂಢಿಗಳನ್ನು ನಿರೀಕ್ಷಿಸುತ್ತ ಅವುಗಳನ್ನು ದೂರ ಮಾಡಲು ಪ್ರಯತ್ನಿಸಿದ್ದಾನೆ ಇದು ನಿಜವಾದ ಧರ್ಮಬೋಧಕನ ಕಾರ್ಯವು. ಬಸವೇಶ್ವರನು ಹೀಗೆಯೇ ಆಚರಿಸಿದ್ದಾನೆ

ಬಸವೇಶ್ವರನು ನಾವು ಹಿಂದಿನ ಸಂಚಿಕೆಗಳಲ್ಲಿ ವಿವರಿಸಿದಂತೆ ಬಿಜ್ಜಳನ ಆಸ್ಥಾನದಲ್ಲಿ ಮೊದಲು ಒಬ್ಬ ಕರಣಿಕನಾಗಿ, ಆಮೇಲೆ ಬೊಕ್ಕಸದ ಅಧಿಕಾರಿಯಾಗಿ, ಆಮೇಲೆ ಸೇನಾಪತಿಯಾಗಿ, ಕಡೆಗೆ ಮಂತ್ರಿಯಾಗಿ, ಉದ್ಯೋಗಗಳನ್ನು ಮಾಡುತ್ತಹೋದನೆಂದು ಹೇಳಿದ್ದೇವೆ. ಈ ಕಾಲದಲ್ಲಿ ಅವನು ತನ್ನ ಪಿತೃಗೃಹವನ್ನು ಹೊಂದಲು ಅಪೇಕ್ಷಿಸಿರುವದಿಲ್ಲ. ಅವನಿಗೆ ಬಾಗೇವಾಡಿಯಲ್ಲಿ ಪುರಾತನ ಆಸ್ತಿಯು ಇದ್ದಿತು. ಆದರೆ ಅವನು ಅದನ್ನು ಮರಳಿ ಪಡೆಯಲಿಕ್ಕೆ ಇಚ್ಛಿಸಿರುವದಿಲ್ಲ. ಅವನು ಅಧಿಕಾರ ಹೊಂದಿದ ಬಳಿಕ ಬಾಗೇವಾಡಿಯ ಬ್ರಾಹ್ಮಣರು ಪಶ್ಚಾತ್ತಾಪಪಟ್ಟವರಾಗಿ ಅವನ ಕೃಪೆಯನ್ನು ಹೊಂದಲಿಕ್ಕೆ ಪ್ರಯತ್ನಪಟ್ಟರೂ ಕೂಡ ಅವನು ಅವರನ್ನು ಲಕ್ಷಿಸಿಲ್ಲ. ಇದು ಕೆಳಗಿನ ವಚನದಿಂದ ಕಂಡುಬರುತ್ತಿದೆ.

'ಒಡೆಯರು ಬಂದರೆ ಗುಡಿತೋರಣವ ಕಟ್ಟಿ, ನೆಂಟರು ಬಂದರೆ ಸಮಯವಿಲ್ಲೆನ್ನಿ. ಅಂದೇಕೆ ಬಾರರು, ನೀರಿಂಗೆ ನೇಣಿಂಗೆ ಹೊರಗಾದಂದು, ಸಮಯಾಚಾರಕ್ಕೆ ಒಳಗಾದಂದು? ಪರುಷ ಮುಟ್ಟಲು ಕಬ್ಬಿನ ಸುವರ್ಣವಾಯಿತ್ತು. ಬಳಿಕ ಬಂಧುಗಳುಂಟೇ?' ಎಂದು ಹೇಳುತ್ತಾನೆ.

ಬಸವೇಶ್ವರನು ಈ ವಚನವನ್ನು ತನ್ನ ಬಂಧುಗಳನ್ನುದ್ದೇಶಿಸಿ ನುಡಿದಿದ್ದು ಸ್ಪಷ್ಟವದೆ. ಬಸವೇಶ್ವರನು ಅಧಿಕಾರವನ್ನು ಹೊಂದಿದ ಬಳಿಕ ಅವರು ಅವನ ಕಡೆಗೆ ಹೋಗಿರಲು ಅವನು ಅವರನ್ನು ಲಕ್ಷಿಸಿಲ್ಲೆಂಬುದು ಸ್ಪಷ್ಟವದೆ. ಉಚ್ಚ ಧ್ಯೇಯವುಳ್ಳವನಾಗಿ ಧರ್ಮಬೋಧೆ ಮಾಡುತ್ತ ಬಿಜ್ಜಳನಲ್ಲಿಯೇ ಕಾಲಕಳೆದಿದ್ದಾನೆ.

ಬಸವೇಶ್ವರನು ಮೊದಲು ಕಲ್ಯಾಣಪಟ್ಟಣಕ್ಕೆ ಹೋಗದೆ ಬಿಜ್ಜಳನು ಪ್ರಾಂತಾಧಿಪತಿಯಾದ ಕಾಲಕ್ಕೆ ಮಂಗಳವಾಡಕ್ಕೆ ಮೊದಲು ಹೋಗಿದ್ದಾನೆಂಬುದಕ್ಕೆ ಅನೇಕ ಆಧಾರಗಳಿವೆ. ಬಿಜ್ಜಳನು ಈ ಗ್ರಾಮದಲ್ಲಿದ್ದನೆಂಬುದು ೧೧೪೭ ಇಸ್ವಿಯ ಮ್ಹಸವಡ ಗ್ರಾಮದಲ್ಲಿಯ ಶಿಲಾಶಾಸನದಿಂದ ಕಂಡುಬರುತ್ತದೆ. ೧೧೫೧ ರಲ್ಲಿ ಸಹ ಬಿಜ್ಜಳನು ತರ್ದವಾಡಿಯಲ್ಲಿಯೇ ಮಹಾಪ್ರಧಾನನಾಗಿಯೂ ಸೇನಾಧಿಪತಿಯಾಗಿಯೂ ಆಳುತ್ತಿದ್ದನೆಂಬುದು ವಿಜಾಪುರ ಶಿಲಾಶಾಸನದಲ್ಲಿ ಹೇಳಲ್ಪಟ್ಟಿರುತ್ತದೆ. ಈ ವಿಷಯವಾಗಿ ವಿಸ್ತೃತ ಲೇಖಗಳು ಶಿವಾನುಭವ ಪತ್ರಿಕೆಯ ಹಿಂದಿನ ಎರಡು ಸಂಚಿಕೆಗಳಲ್ಲಿ ಬಂದಿರುತ್ತವೆ. ಅವುಗಳನ್ನು ವಾಚಕರು ನೋಡತಕ್ಕದ್ದು. ೧

ಈ ಪ್ರಕಾರ ಬಸವೇಶ್ವರನು ಮಂಗಳವಾಡದಲ್ಲಿ ಬಿಜ್ಜಳನಲ್ಲಿ ಒಬ್ಬ ಅಧಿಕಾರಿಯಾಗಿ ಕಾರ್ಯಮಾಡುತ್ತಿದ್ದಾಗ ಬಿಜ್ಜಳನು ಮುಂದೆ ಬನವಾಸಿಯ ಪ್ರಾಂತದಲ್ಲಿ ಮಾಂಡಲಿಕನಾಗಿ ರಾಜ್ಯವಾಳಹತ್ತಿದನು. ಶಿವ

---

(೧) ಟೀಪು:—

(ಅ) ಶಿವಾನುಭವ ೧೩-೯,=೧೦-೪೨೪.

ಬಸವನು ಮೊದಲು ಹೋದದ್ದು ಕಲ್ಯಾಣಕ್ಕೋ ಮಂಗಳವಾಡಕ್ಕೋ?

(ಬ) ಶಿವಾನುಭವ ೧೬-೯,-೪೮೯.

ಮಂಗಳವಾಡವು ಬಿಜ್ಜಳನ ರಾಜಧಾನಿಯಾಗಿತ್ತೇ?

ಶಿವಮೊಗ್ಗಾ ಜಿಲ್ಲೆಯಲ್ಲಿಯ ಅನೇಕ ಗ್ರಾಮಗಳಲ್ಲಿ ಅವನ ಅನೇಕ ಶಿಲಾಶಾಸನಗಳು ಈಗಲೂ ಉಪಲಬ್ಧವಿವೆ.[೧] ಈ ಎಲ್ಲ ಗ್ರಾಮಗಳು ಹಿಂದಿನ ಕಾಲದಲ್ಲಿ ಬನವಾಸಿ ಪ್ರಾಂತದಲ್ಲಿ ಸಮಾವೇಶವಾಗಿದ್ದವು ಬಿಜ್ಜಳನು ಈ ಭಾಗದಲ್ಲಿ ರಾಜ್ಯವಾಳುತ್ತ ಇದ್ದಾಗ್ಗೆ ಅವನು ಬಸವೇಶ್ವರನನ್ನು ತನ್ನೊಡನೆ ಕರೆದುಕೊಂಡು ಹೋಗಿರಬೇಕೆಂದು ಊಹಿಸಲಿಕ್ಕೆ ಬಸವೇಶ್ವರನ ವಚನಗಳಲ್ಲಿ ಕೆಲವು ಪ್ರಮಾಣಗಳು ಇವೆ. ಬಸವೇಶ್ವರನು ಮಲೆನಾಡಿನವರಿಗೋಸ್ಕರ ಬಿದಿರಿನ ಉದಾಹರಣೆಯನ್ನು ಕೊಟ್ಟು ಅದು ಹೇಗೆ ಎಲ್ಲರಿಗೂ ಉಪಯೋಗವುಳ್ಳದ್ದು ಆಗಿರುತ್ತದೆಯೋ ಹಾಗೆ ಜನರು ವರ್ತಿಸಬೇಕೆಂದು ಹೇಳಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಮಲೆನಾಡಿನಲ್ಲಿದ್ದದರಿಂದ ಬಿದರಿನ ವಿಷಯವನ್ನು ಬಸವನು ಚನ್ನಾಗಿ ಅರಿತವನಾಗಿ ಈ ನುಡಿಯನ್ನು ನುಡಿದಿದ್ದಾನೆ. ಇದು ಬಸವೇಶ್ವರನು ಈ ಭಾಗದಲ್ಲಿದ್ದನೆಂಬದಕ್ಕೆ ಬಲವಾದ ಆಧಾರವಾಗಿದೆ ಅಲ್ಲದೆ ವೀರಶೈವ ಪುರಾಣಗಳಲ್ಲಿ ಈ ವಿಷಯವನ್ನು ಸಮರ್ಥಿಸಲಿಕ್ಕೆ ಇನ್ನೊಂದು ವಿಶೇಷ ಸಂಗತಿಯು ಇರುತ್ತದೆ. ಅದು ಕೆಳಗೆ ಹೇಳಲ್ಪಟ್ಟಿದೆ.

ಶಿವಶರಣರಲ್ಲಿ ಅನುಮಿಷದೇವನು ಬಹು ಪ್ರಸಿದ್ಧನಾಗಿದ್ದಾನೆ. ಅವನ ವಾಸಸ್ಥಳವು ಬಳ್ಳಿಗಾವಿಯು. ಅಲ್ಲಿ ಬಸವೇಶ್ವರನು ಈತನಿಗೆ ಲಿಂಗಧಾರಣ ಮಾಡಿದನೆಂದು ವೀರಶೈವ ಪುರಾಣಗಳಲ್ಲಿಯೂ ಕೆಲವು ವಚನಗಳಲ್ಲಿಯೂ ಹೇಳಲ್ಪಟ್ಟಿರುತ್ತದೆ. ಬಸವೇಶ್ವರನು ಬಿಜ್ಜಳನೊಡನೆ ಬನವಾಸಿಗೆ ಬಂದಿದ್ದನೆಂದು ನಾವು ತಿಳಿದರೆ ಈ ಐತಿಹ್ಯವು ಅಸಂಭಾವ್ಯವಾದುದಲ್ಲ. ಬಳ್ಳಿಗಾವಿಯು ಬನವಾಸೆಯಿಂದ ೨೦—೨೫ ಮೈಲು ದೂರವಾಗಿದೆ. ಅದು ಬಹು ಪ್ರಸಿದ್ಧ ಕ್ಷೇತ್ರಸ್ಥಾನವು. ಅನೇಕ ಶಿವಶರಣರ ಆವಾಸಸ್ಥಳವು. ಆದ್ದರಿಂದ ಈ ಭಾಗಕ್ಕೆ ಬಸವೇಶ್ವರನು ಹೋದ ಕಾಲದಲ್ಲಿ ಅವನು ಧರ್ಮಬೋಧೆ ಮಾಡುತ್ತಿರಲು ಅನುಮಿಷಯ್ಯನು ಅವನಿಂದ ದೀಕ್ಷೆಯನ್ನು ಹೊಂದಿರಬೇಕೆಂದು ನಮಗೆ ತೋರುತ್ತದೆ.

ಅನುಮಿಷಯ್ಯನು ಪ್ರಭುದೇವರಿಗೆ ದೀಕ್ಷೆಯನ್ನು ಕೊಟ್ಟಿದ್ದಾನೆಂದು ಇನ್ನೊಂದು ಐತಿಹ್ಯವಿದೆ. ಇದು ನಿಜವಿದೆ. ಆದರೆ ಆಗ ಪ್ರಭುದೇವರು

---

(೨) ಟೀಪು:—

ಕರ್ನಾಟಿಕಾ ಎಪಿಗ್ರಾಫಿಕಾ— ಶಿಕಾರಿಪುರ ನಂ॥ ೧೮, ೧೦೪, ೧೦೮, ೧೨೩, ೧೨೯. ಈ ಶಿಲಾಶಾಸನಗಳನ್ನು ನೋಡಿರಿ.

ಬಸವೇಶ್ವರನಿಗೆ ಅಪರಿಚಿತನಾಗಿರಬೇಕೆಂದು ನಮಗೆ ತೋರುತ್ತದೆ. ಒಂದು ವೇಳೆ ಪರಿಚಿತನಾಗಿದ್ದರೆ, ಬಸವೇಶ್ವರನು ಅನುಮಿಷಯ್ಯನಿಗೆ ಲಿಂಗ ಧಾರಣ ಮಾಡಿದಂತೆ ಪ್ರಭುದೇವರಿಗೂ ಲಿಂಗಧಾರಣ ಮಾಡುತ್ತಿದ್ದನು. ಆದರೆ ಅವನು ಆಗ ಹರಿಹರನು ಹೇಳಿದಂತೆ ಕಾಮಲತೆಯೊಡನೆ ವಿಷಯ ಲಂಪಟನಾಗಿ ವಿಹರಿಸುತ್ತಿರಬೇಕು. ಈ ಸ್ಥಿತಿಯಲ್ಲಿ ಅವನು ಬಸವೇಶ್ವರನೊಡನೆ ಇರುವ ಸಂಭವವಿಲ್ಲ. ಮುಂದೆ ಬಿಜ್ಜಳನು ಚಾಲುಕ್ಯ ರಾಜನನ್ನು ತಳ್ಳಿ ಕಲ್ಯಾಣದಲ್ಲಿ ಚಕ್ರಾಧಿಪತಿಯಾಗಿ ಆಳಹತ್ತಿದನು. ಆಗ ಬಸವೇಶ್ವರನು ಅವನೊಡನೆ ಹೋಗಿರಬೇಕು. ಮುಂದೆ ಕಾಮಲತೆಯು ಸತ್ತಬಳಿಕ ಪ್ರಭುದೇವರಿಗೆ ವೈರಾಗ್ಯವು ಉತ್ಪನ್ನವಾಯಿತು. ಆಗ ಅವನು ಅನುಮಿಷಯ್ಯನಿಂದ ಲಿಂಗಧಾರಣಹೊಂದಿದ್ದಾನೆ. ಆದರೆ ಸ್ವತಃ ಅನುಮಿಷಯ್ಯನು ಬಸವೇಶ್ವರನಿಂದ ಲಿಂಗಧಾರಣವನ್ನು ಹೊಂದಿದವನು. ಆದ್ದರಿಂದ ಪ್ರಭುದೇವರು ಬಸವೇಶ್ವರನ ಮಹತ್ವವನ್ನು ಅನುಮಿಷಯ್ಯನಿಂದ ತಿಳಿದವನಾಗಿ ಕಲ್ಯಾಣ ಪಟ್ಟಣಕ್ಕೆ ಹೊರಟಿರಬೇಕೆಂದು ನಮಗೆ ತೋರುತ್ತದೆ. ಆದರೆ ಅದಕ್ಕೂ ಪೂರ್ವದಲ್ಲಿ ಅವನು ಈ ಬಳ್ಳಿಗಾವಿ ಪ್ರಾಂತದಲ್ಲಿದ್ದ ಶಿವಾನುಭವಿಗಳೊಡನೆ ಧರ್ಮಜ್ಞಾನ ಸಂಪಾದನೆ ಮಾಡುತ್ತ ಕೆಲಕಾಲ ಕಳೆದಿರಬೇಕು. ಮುಂದೆ ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನು ಶಿವಾನುಭವಮಂಟಪದಲ್ಲಿ ಪ್ರಸಿದ್ಧಿಗೆ ಬರಲು ಅವನನ್ನು ಕಾಣಲಿಕ್ಕೆ ಮತ್ತು ಅಲ್ಲಿ ನಡೆದ ಶಿವಾನುಭವ ಗೋಷ್ಠಿಗಳನ್ನು ತಿಳಿಯಲಿಕ್ಕೆ ಅತ್ತಕಡೆಗೆ ಪ್ರಭುದೇವರು ಹೊರಟಿರಬೇಕೆಂದು ನಮಗೆ ತೋರುತ್ತದೆ. ಈ ಪ್ರಕಾರ ಘಟನೆಗಳು ಈ ಕಾಲದಲ್ಲಿ ನಡೆದಿರಬೇಕೆಂದು ನಮಗೆ ತೋರುತ್ತದೆ.

ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಪ್ರಭುದೇವರು ಎಂದೂ ಮಾಯೆಗೆ ಸಿಲ್ಕಿಲ್ಲೆಂದು ಹೇಳಲ್ಪಟ್ಟಿದೆ. ಹೀಗಿದ್ದರೆ ಬಸವೇಶ್ವರನು ಬಳ್ಳಿಗಾವಿ ನಾಡಿನಲ್ಲಿ ಇದ್ದಾಗ್ಗೆ ಅನುಮಿಷಯ್ಯನು ಅವನನ್ನು ಕಂಡಂತೆ ಪ್ರಭುದೇವರು ಅವನನ್ನು ಏಕೆ ಕಾಣಲಿಲ್ಲ. ಒಂದು ವೇಳೆ ಕಂಡಿದ್ದರೆ ಬಸವೇಶ್ವರನು ಹೇಗೆ ಅನುಮಿಷಯ್ಯನಿಗೆ ಲಿಂಗಧಾರಣ ಮಾಡಿದನೋ ಹಾಗೆಯೇ ಪ್ರಭುದೇವರಿಗೂ ಲಿಂಗಧಾರಣ ಮಾಡುತ್ತಿದ್ದನು. ಆದರೆ ಈ ಸ್ಥಿತಿಯು ಇರದೆ ಪ್ರಭುದೇವರಿಗೆ ಹಿಂದುಗಡೆ ಅನುಮಿಷಯ್ಯನಿಂದ ಲಿಂಗಧಾರಣವಾಗಿದೆ. ಆದ್ದರಿಂದ ಹರಿಹರನ ಹೇಳಿಕೆಯಂತೆ ಪ್ರಭು

ದೇವರು ವಿಷಯಕ್ಕೆ ಒಳಗಾಗಿ ಕಾಲಕಳೆಯುತ್ತಿರಬೇಕೆಂದು ನಮಗೆ ತೋರುತ್ತದೆ. ಆದರೆ ಮುಂದೆ ಪ್ರಭುದೇವರು ಅತ್ಯಂತ ಜ್ಞಾನಿಯಾಗಿ ಧರ್ಮಕಾರ್ಯ ಮಾಡಲಿಕ್ಕೆ ಹತ್ತಿದ್ದರಿಂದ ಬಸವೇಶ್ವರನು ಅವರನ್ನು ಬಹಳ ಮನ್ನಿಸಲಿಕ್ಕೆ ಹತ್ತಿರಬೇಕು. ಮತ್ತು ಅವರನ್ನು ತನ್ನ ಗುರು ಸಮಾನನೆಂತಲೂ ಭಾವಿಸಿರಬೇಕು. ಹೀಗೆ ಗ್ರಹಿಸಿದಲ್ಲಿ ಅವ ತಪ್ಪಿಲ್ಲೆಂದು ನಮಗೆ ತೋರುತ್ತದೆ.

(ಮುಂದುವರಿಯುವದು.)

---

## ೫೦ ತೆರದ ಆಚಾರಗಳು.

೧. ಆಚಾರವೆಂಬುದು ಕೂರಲಗು. ತಪ್ಪಿ ಬಂದರೆ ಪ್ರಾಣವ ತಗಲುವದು. ಅದುಕಾರಣ ಅರಿದರಿದು ಆಚರಿಸಬೇಕು. ಆಚಾರ ವಿಚಾರ ಉಭಯದ ವಿಚಾರವ ನೋಡದೆ ಶಿವದೀಕ್ಷೆಯು ಮಾಡಲಾಗದು. ಅದೆಂತೆಂದೊಡೆ:—

ಪರರ ಹೆಣ್ಣಿಗೆ ಕಣ್ಣಿಡದಿಹುದೇ ೧ನೇ ಆಚಾರ ಪರರ ದ್ರವ್ಯವ ಅಪಹಾರ ಮಾಡದಿಹುದೇ ೨ನೇ ಆಚಾರ. ಸುಳ್ಳಾಡದಿಹುದೇ ೩ನೇ ಆಚಾರ. ವಿಶ್ವಾಸ ಘಾತವ ಮಾಡದಿಹುದೇ ೪ನೇ ಆಚಾರ. ಪ್ರಾಣ ಹಿಂಸೆಯು ಮಾಡದಿಹುದೇ ೫ನೇ ಆಚಾರ. ಸಕಲ ಶಿವಗಣರ್ಗೆ ಸಂತೋಷವಂ ಪುಟ್ಟಿಸುವದೇ ೬ನೇ ಆಚಾರ. ಸ್ವೀಕರಿಸುವ ನೇಮವಂ ಪ್ರಾಣಾಂತ್ಯವಾಗಿ ಬಿಡೆನೆಂಬುದೇ ೭ನೇ ಆಚಾರ. ಷಟ್‌ಸ್ಥಲದವರ ಧಿಕ್ಕರಿಸುವ ಜನರ ಸೀಳುವೆನೆಂಬುವ ವ್ರತವೇ ೮ನೇ ಆಚಾರ. ಕೇಡು ಜನರ ಸಹವಾಸ ಮಾಡದಿಹುದೇ ೯ನೇ ಆಚಾರ. ಸಜ್ಜನಸಂಗತಿಯು ಬಿಡದಿಹುದೇ ೧೦ನೇ ಆಚಾರ. ಅನ್ಯ ದೇವತಾಭಜನೆಗೆ ವಿಮುಖನಾಗುವುದೇ ೧೧ನೇ ಆಚಾರ. ಶಿವನೇ ಸರ್ವದೇವಶಿಖಾಮಣಿ ಎಂದು ಮನದಲ್ಲಿ ಅಚ್ಚೊತ್ತಿರ್ಪುದೇ ೧೨ನೇ ಆಚಾರ. ಶಿವನಿಗೆ ಶಿವಗಣಂಗಳಿಗೆ ಭೇದ ಮಾಡದಿಹುದೇ ೧೩ನೇ ಆಚಾರ. ಸಕಲ ಜೀವಿಗಳಿಗೆ ಹಿತವ ಬಯಸುವುದೇ ೧೪ನೇ ಆಚಾರ. ಸರ್ವರಿಗೆ ಹಿತವ ಮಾಡುವುದೇ ೧೫ನೇ ಆಚಾರ.

ಕಡ್ಡಿಯ ಲಿಂಗಕ್ಕೆ ತೋರಿ ದಂತಧಾವನೆ ಮಾಡುವುದೇ ೧೬ನೇ ಆಚಾರ. ಸರ್ವಾವಯವ ಸ್ವಚ್ಛವಾಗಿ ಪ್ರಕ್ಷಾಳಿಸುವುದೇ ೧೭ನೇ ಆಚಾರ. ಲಿಂಗ ಮುದ್ರೆ ಇಲ್ಲದ ಗುಡಿಯಲ್ಲಿ ಪಾಕವ ಮಾಡದಿಹುದೇ ೧೮ನೇ ಆಚಾರ. ಪ್ರಣವ ಮುದ್ರೆ ಇಲ್ಲದ ವಸ್ತ್ರವ ಹೊದೆಯದಿಹುದೇ ೧೯ನೇ ಆಚಾರ. ಹುಟ್ಟಿದ ಶಿಸುವಿಗೆ ಲಿಂಗಧಾರಣವ ಮಾಡದೆ ತಾಯ ಮೊಲೆಹಾಲು ಜೇನುತುಪ್ಪ ಮುಟ್ಟಿಸದಿಹುದೇ ೨೦ನೇ ಆಚಾರ. ಆಡಿದ ಭಾಷೆಯಂ ಕಡೆಪೂರೈಸುವುದೇ ೨೧ನೇ ಆಚಾರ. ಸತ್ಯವನ್ನು ನುಡಿದು ತಪ್ಪದಿಹುದೇ ೨೨ನೇ ಆಚಾರ. ತುರುಗಳಂ ಕಟ್ಟಿ ರಕ್ಷಿಸುವುದೇ ೨೩ ನೇ ಆಚಾರ. ತುರುಗಳಿಗೆ ಲಿಂಗಮುದ್ರೆಯನಿಕ್ಕಿ ಹಾಲು ಕರೆವುದೇ ೨೪ನೇ ಆಚಾರ. ಮಂತ್ರಸಹಿತ ಗೋಮಯಮಂ ಹಿಡಿದು ಮಂತ್ರಸಹಿತ ಪುಟವಿಕ್ಕಿ ಭಸ್ಮದ ರಾಶಿಯಂ ಮಾಡುವುದೇ ೨೫ನೇ ಆಚಾರ. ಆ ಭಸ್ಮದ ರಾಶಿಯಂ ಪಾದೋದಕದೊಡನೆ ಉಂಡಿಯಂ ಕಟ್ಟುವುದೇ ೨೬ನೇ ಆಚಾರ. ವಿಧಿಯರಿತು ಸ್ನಾನವರಿತು ರುದ್ರಾಕ್ಷಿಗಳಂ ಧರಿಸುವುದೇ ೨೭ನೇ ಆಚಾರ. ಶಿವಾನುಭವ ಶಾಸ್ತ್ರವಂ ವಿಚಾರಿಸುವುದೇ ೨೮ನೇ ಆಚಾರ. ಮನವ ನೋಯಿಸಿ ಮಾತನಾಡದಿಹುದೇ ೨೯ನೇ ಆಚಾರ. ಲಿಂಗದ ಕಳೆಯರಿತು ಲಿಂಗನ್ನು ಪೂಜಿಸುವುದೇ ೩೦ನೇ ಆಚಾರ. ಗುರುಮುಖದಿಂ ತಾನಾರು ತನ್ನ ನಿಜವೇನೆಂದು ಬೆಸಗೊಳ್ಳುವುದೇ ೩೧ನೇ ಆಚಾರ. ಷಡ್ವರ್ಗಂಗಳಂ ಮೆಟ್ಟಿ ಷಟ್‌ಸ್ಥಲವನಿಂಬುಗೊಂಡುದೇ ೩೨ನೇ ಆಚಾರ. ಅವಿಚ್ಛಿನ್ನ ವಾಗಿ ಅಂಗತ್ರಯದಲ್ಲಿ ಮನ ಓಕರಿಸಿಕೊಂಡುದೇ ೩೩ನೇ ಆಚಾರ. ಲಿಂಗದಲ್ಲಿ ಸಿಲೆಯ ಭಾವವನರಸದಿಹುದೇ ೩೪ ನೇ ಆಚಾರ. ಜಂಗಮ ದಲ್ಲಿ ಕುಲವನರಸದಿಹುದೇ ೩೫ನೇ ಆಚಾರ. ವಿಭೂತಿಯಲ್ಲಿ ಭೇದವ ಮಾಣ್ಬದಿಹುದೇ ೩೬ನೇ ಆಚಾರ. ರುದ್ರಾಕ್ಷಿಯ ಶುದ್ಧವ ಮಾಡಿ ಮಣಿ ಗಳ ಅರಸುವುದೇ ೩೭ನೇ ಆಚಾರ. ಪಾದೋದಕದಲ್ಲಿ ಉಚ್ಛಿಷ್ಟವಳಿ ದುದೇ ೩೮ನೇ ಆಚಾರ. ಪ್ರಸಾದದಲ್ಲಿ ರುಚಿಯ ನೋಡದಿಹುದೇ ೩೯ನೇ ಆಚಾರ. ಮಂತ್ರದಲ್ಲಿ ಕುತ್ಸಿತ ಕಲ್ಪನೆಯ ಮಾಡದಿಹುದೇ ೪೦ ನೇ ಆಚಾರ. ಲಿಂಗಾರ್ಚನೆ ವಿರಹಿತ ಭೋಜನ ಮಾಡದಿಹುದೇ ೪೧ನೇ ಆಚಾರ. ಐಕ್ಯರಂ ಸಮಾಧಿಗೊಳಿಸಿ ತಾನು ಲಿಂಗಪೂಜೆಯ ಮಾಡುವುದೇ ೪೨ನೇ ಆಚಾರ. ಲಿಂಗದ್ರೋಹವಂ ಕೇಳಿ ತಾನು ಪ್ರಾಣ ಬಿಡುವುದೇ ೪೩ನೇ ಆಚಾರ. ಜಂಗಮದ್ರೋಹವಂ ಕೇಳಿ ತಾನು ಐಕ್ಯ

ನಾಗುವುದೇ ೪೪ನೇ ಆಚಾರ. ಲಿಂಗದ್ರೋಹವಂ ಮಾಡಿದವನ ಪ್ರಾಣವಂ ಭೇದಿಸುವುದೇ ೪೫ನೇ ಆಚಾರ. ಜಂಗಮ ದ್ರೋಹ ಮಾಡಿದವನ ಶಿರವನೀಡಾಡುವುದೇ ೪೬ನೇ ಆಚಾರ. ಅಷ್ಟಾವರಣವ ಸಂಗವ ಮಾಡುವ ಭೇದವಂ ತಿಳಿಯುವುದೇ ೪೭ನೇ ಆಚಾರ. ತಾನಾರು ಲಿಂಗವಾರು ಎಂಬ ಭೇದವು ತಿಲಮಾತ್ರವಿಲ್ಲದಿಹುದೇ ೪೮ನೇ ಆಚಾರ. ತನ್ನ ನಿಜ ವಿಚಾರವಂ ತಾ ಮರೆಯದೆ ಷಟ್‌ಸ್ಥಲವವರಿಗೆ ಅರುಹಿ ತನ್ನಂತೆ ಮಾಡುವುದೇ ೪೯ನೇ ಆಚಾರ. ಇಂತಿಷ್ಟು ಆಚಾರಂಗಳ ಕಡೆ ಮುಟ್ಟಿಸುವುದೇ ಕೂಡಲಚನ್ನಸಂಗಮದೇವರಲ್ಲಿ ೫೦ನೇ ಆಚಾರ ನೋಡಾ ಸಿದ್ಧರಾಮಯ್ಯ.

೧. ಒಂದನೇ ಆಚಾರದಿಂದ ಶೀಲವಂತನಾಗುವನು. ೨ ನೇ ಆಚಾರದಿಂದ ಧನವಂತನಾಗುವನು. ೩ನೇ ಆಚಾರದಿಂದ ಕೀರ್ತಿವಂತನಾಗುವನು. ೪ನೇ ಆಚಾರದಿಂದ ವಿಶ್ವಾಸವಂತನಾಗುವನು. ೫ನೇ ಆಚಾರದಿಂದ ಸತ್ಪುರುಷನಾಗುವನು. ೬ನೇ ಆಚಾರದಿಂದ ಭಕ್ತಿವಂತನೆನಿಸುವನು. ೭ನೇ ಆಚಾರದಿಂದ ವೀರಶೈವನೆನಿಸುವನು. ೮ನೇ ಆಚಾರದಿಂದ ವೀರ ಮಾಹೇಶ್ವರನೆನಿಸುವನು. ೯ನೇ ಆಚಾರದಿಂದ ಸಾತ್ವಿಕನೆನಿಸುವನು. ೧೦ನೇ ಆಚಾರದಿಂದ ವಿವೇಕಿ ಎನಿಸುವನು. ೧೧ನೇ ಆಚಾರದಿಂದ ವೀರವ್ರತಿ ಎನಿಸುವನು. ೧೨ನೇ ಆಚಾರದಿಂದ ವೀರ ಭಕ್ತನೆನಿಸುವನು. ೧೩ನೇ ಆಚಾರದಿಂದ ಶರಣನೆನಿಸುವನು. ೧೪ನೇ ಆಚಾರದಿಂದ ಸದಾಚಾರಿ ಎನಿಸುವನು. ಇನ್ನು ಮೇಲೆ ಹೇಳಿದ ೫೦ ಆಚಾರವುಳ್ಳವನೇ ಪ್ರಮಥನೆನಿಸುವನು, ಪುರಾತನರ ಲಲಾಟ ಲಲಾಮನೆನಿಸುವನು, ಕೂಡಲಚನ್ನಸಂಗಯ್ಯ ನಿಮ್ಮಡಿ ಮುಮ್ಮಡಿ ಸಹಸ್ರ ಮಡಿ ಮಹಿಮನೆನಿಸುವನು ಕೇಳು ಸಿದ್ಧರಾಮಯ್ಯ.

---

# ಶಿವಶರಣರ ೧ನೇ ಆಚಾರವು.

( ಲೇಖಕ:— ಶಿವಮೂರ್ತಿ )

---

## ಪರರ ಹೆಣ್ಣಿಗೆ ಕಣ್ಣಿಡದಿಹುದೇ ೧ನೇ ಆಚಾರ.

(ವೀರಶೈವರಲ್ಲಿ ೫೦ ತೆರದ ಆಚಾರಗಳಿವೆ. ಇವು ವಚನಶಾಸ್ತ್ರ ಸಾರ ಭಾಗ ೩ (ಪೂರ್ವಾರ್ಧ) ಪುಟ ೬೩ರಲ್ಲಿ ಹೇಳಲ್ಪಟ್ಟಿವೆ. ಅವು ಹಿಂದಿನ ಪುಟದಲ್ಲಿ ಕೊಡಲ್ಪಟ್ಟಿವೆ. ಅವುಗಳಲ್ಲಿ ಮೊದಲನೆಯ ಆಚಾರವು, "ಪರರ ಹೆಣ್ಣಿಗೆ ಕಣ್ಣಿಡದಿಹುದೇ ೧ನೇ ಆಚಾರ" ಎಂದಿರುತ್ತದೆ. ಆದರ ವಿವರವನ್ನು ಈ ಕೆಳಗಿನ ಲೇಖದಲ್ಲಿ ಹೇಳಿದೆ.)

ಪರಸ್ತ್ರೀಯರನ್ನು ಈ ರೀತಿ ನೋಡಬಾರದೆಂದು ಹೇಳುವದೇನೋ ಸುಲಭ. ಆದರೆ ಆದರಂತೆ ಆಚರಿಸುವದು ಕಠಿಣ. ಜಗತ್ತಿನಲ್ಲಿ ಪರ ಸ್ತ್ರೀಯರ ರೂಪಲಾವಣ್ಯಗಳನ್ನು ಕಂಡು ಮರುಳಾಗದ ಅಣ್ಣಗಳು ಬಹು ವಿರಳ. ಪರಸತಿಯರ ಸ್ಪರ್ಶಸಂಗಗಳಷ್ಟೇ ಪಾಪವಲ್ಲ. ಕಾಮವಾಸನೆ ಯಿಂದ ಅವರ ಕಡೆಗೆ ನೋಡುವದೂ ಮನಸ್ಸಿನಲ್ಲಿ ಅವರ ಬಗ್ಗೆ ಹಂಬ ಲಿಸುವದೂ ಪಾಪವೇ ಸರಿ. ಶಿವಶರಣರಿಗೆ ಇಂಥ ಪಾಪದ ದೃಷ್ಟಿ ಯಿರಲಿಲ್ಲ.

ಪರಸ್ತ್ರೀಯರನ್ನು ನೋಡಬಾರದೆಂದರೆ ಅವರನ್ನು ಕಂಡಕೂಡಲೆ ಕಣ್ಣುಮುಚ್ಚಿಕೊಳ್ಳಬೇಕೆಂಬರ್ಥವಲ್ಲ. ಅವರನ್ನು ನೋಡಿ ದಿಕ್ಕೆಟ್ಟು ಓಡ ಬೇಕೆಂತಲೂ ಅಲ್ಲ. ಹಾಗೆ ಮಾಡುವವರು ದುರ್ಬಲಾತ್ಮರೇ ಸರಿ. ಆದರೆ ಪಾಪದೃಷ್ಟಿಯಿಂದ ಅವರ ಕಡೆಗೆ ನೋಡಬಾರದೆಂಬದಿಷ್ಟೇ ಅದ ರರ್ಥ. ಆಜನ್ಮ ಬ್ರಹ್ಮಚಾರಿಯಾಗಿರಬೇಕೆಂತಲೂ ಅದರ ಅರ್ಥಮಾಡ ಬಾರದು. ಮನುಷ್ಯನು ವಿವಾಹಿತನಾಗಿ ಪ್ರಪಂಚ ಪಾರಮಾರ್ಥಗಳೆ ರಡನ್ನೂ ಸಾಧಿಸಬಹುದು. ಶರಣರು ವಿವಾಹಿತರು. ಬ್ರಹ್ಮಚಾರಿಗ ಳಲ್ಲ. ಹೆಣ್ಣಿಗೆ ಅಂಜಿ ಓಡಿಹೋಗುವ ಹೇಡಿಗಳೂ ಅಲ್ಲ.

ಕಣ್ಣೇ ಪಾಪದ ಮೂಲವು. ಅದು ಪರಸ್ತ್ರೀಯರನ್ನು ಮೊದಲು ನೋಡಿದ ನಂತರವೇ ಮನಸ್ಸು ಪಾಪದ ಕಡೆಗೆ ಹರಿಯುತ್ತದೆ. ಅಂತೆಯೇ

ಕ್ರೈಸ್ತನು ಹೇಳಿದ್ದೇನಂದರೆ, "Whosoever looketh on a woman to lust after her hath committed adultery with her already in hi heart" ಅಂದರೆ ಪರಸ್ತ್ರೀಯರ ಮೇಲೆ ಯಾವನು ಕಾಮವಾಸನೆಯಿಂದ ಕಣ್ಣಿಡುವನೋ ಅವನು ಆ ಸ್ತ್ರೀಯೊಡನೆ ಮನ ದಲ್ಲಿ ವ್ಯಭಿಚಾರ ಮಾಡಿದ ದೋಷಕ್ಕೆ ಗುರಿಯಾಗುತ್ತಾನೆ. ಅದರಂತೆ ಕ್ರೈಸ್ತನು ಬೇರೊಂದೆಡೆಯಲ್ಲಿ ಹೇಳಿದ್ದೇನಂದರೆ, "If thy right eye offend thee, pluck it out and cast it from thee, for it is profitable for thee that one of thy members should perish and not that thy whole body should be cast into hell." ಅಂದರೆ ನಿನ್ನ ಬಲಗಣ್ಣು ಪಾಪಕ್ಕೆಳಿಸಿದರೆ ಅದನ್ನು ಕಿತ್ತು ಬಿಸಾಡಿಬಿಡು. ಯಾಕಂದರೆ ನಿನ್ನ ಅವಯವಗಳ ಲ್ಲೊಂದು ನಾಶವಾದರೆ ಅಷ್ಟೇನೂ ಕೆಡಕಲ್ಲ. ಆದರೆ ನಿನ್ನ ಇಡೀ ದೇಹವು ನರಕಕುಂಡದಲ್ಲಿ ಮಾತ್ರ ಬೀಳಬಾರದು. ಇದೇ ವಿಷಯದಲ್ಲಿ ಸರ್ವಜ್ಞನು ಹೇಳಿರುವದೇನಂದರೆ, 'ಕಣ್ಣು ನಾಲಿಗೆ ಮನವು। ನಿನ್ನ ವೆಂದೆನಬೇಡ। ಅನ್ಯರು ಕೊಂದರೆನಬೇಡ। ಇವು ಮೂರು। ನಿನ್ನನೇ ಕೊಲ್ಲುವವು ಸರ್ವಜ್ಞ'॥ ನಮ್ಮ ಕಣ್ಣೇ ನಮ್ಮನ್ನು ನಾಶಮಾಡುತ್ತ ವಾದ್ದರಿಂದ ಪರಸ್ತ್ರೀಯರ ವಿಷಯದಲ್ಲಿ ನಮ್ಮ ಕಣ್ಣನ್ನು ಒಳ್ಳೇ ಜಾಗರೂ ಕವಾಗಿಡುವದು ನಮ್ಮ ಕರ್ತವ್ಯವಾಗಿದೆ. ಶಿವಶರಣರು ಪರಸ್ತ್ರೀಯರ ವಿಷಯದಲ್ಲಿ ಕಣ್ಣು ಎಂದೂ ತಪ್ಪಿ ನೋಡುವವರಲ್ಲ.

ಕಣ್ಣು ಪರಸ್ತ್ರೀಯರನ್ನು ಒಮ್ಮೆ ನೋಡಿದರೆ ಸಾಕು, ಮನಸ್ಸು ಯಾವಾಗಲೂ ಆ ಸ್ತ್ರೀಯ ಧ್ಯಾನವನ್ನೇ ಮಾಡಲಾರಂಭಿಸುತ್ತದೆ. ಧ್ಯಾನ ಮಾಡುತ್ತ ಹೋದಂತೆ ಕಾಮವಾಸನೆಯು ಬೆಳೆಯುತ್ತ ಸಾಗು ತ್ತದೆ. ಕಾಮದಿಂದ ಕ್ರೋಧ, ಕ್ರೋಧದಿಂದ ಮೋಹ, ಮೋಹದಿಂದ ಸ್ಮೃತಿವಿಭ್ರಮ, ಸ್ಮೃತಿವಿಭ್ರಮದಿಂದ ಬುದ್ಧಿನಾಶ, ಬುದ್ಧಿನಾಶದಿಂದ ಮನುಷ್ಯನು ಪತನ ಹೊಂದುತ್ತಾನೆಂದು ಭಗವದ್ಗೀತೆಯು ಸಾರುತ್ತದೆ. ಆದುದರಿಂದ ಯಾರ ಕಣ್ಣುಗಳು ಪವಿತ್ರವಾಗಿರುವವೋ ಅವರೇ ಪವಿ ತ್ರಾತ್ಮರು. ಶಿವಶರಣರ ಕಣ್ಣುಗಳು ಪವಿತ್ರವಾಗಿದ್ದುದರಿಂದ ಅವರ ಹೃದಯವೂ ಪವಿತ್ರವಾಗಿದ್ದಿತು. ಅಂತೆಯೇ ಅವರು ಒಳ್ಳೆ ಸುಶೀಲ ರೆನಿಸಿಕೊಂಡರು.

ಮನುಷ್ಯನ ಶೀಲವು ಒಳಿತೋ ಕೆಡಕೋ ಎಂಬದನ್ನು ನಿರ್ಧರಿಸಬೇಕಾದರೆ ವಿಶೇಷತಃ ಅವನು ವ್ಯಭಿಚಾರಿಯಿರುವನೋ ಹೇಗೆಂಬದನ್ನು ತಿಳಿದುಕೊಳ್ಳಬೇಕಾಗುತ್ತದೆ. ಮನುಷ್ಯನು ವ್ಯಭಿಚಾರಿಯಿದ್ದರೆ ದುಷ್ಟನೆಂದೂ ಇಲ್ಲದಿದ್ದರೆ ಶಿಷ್ಟನೆಂದೂ ತಿಳಿಯುವದು ಲೋಕರೂಢಿಯಾಗಿದೆ. ಜನರಿಗೆ ಗೊತ್ತಾಗದಂತೆ ಪರಸ್ತ್ರೀಯರ ಸಂಗಮಾಡಿ ಸಂಭಾವಿತರೆನಿಸಿಕೊಳ್ಳುವ ಪಾಪಿಗಳೆಷ್ಟೋ ಇರಬಹುದು. ಆದರೆ ಅವರ ಪಾಪವು ಜನಕ್ಕೆ ತಿಳಿಯದಿದ್ದರೇನಾಯಿತು? ಅವರ ಮನಕ್ಕೆ ತಿಳಿಯದಿರುವದೇ? ಪರಮಾತ್ಮನಿಗೆ ಅರಿವಾಗಲಿಕ್ಕಿಲ್ಲನೇ? ಈ ದುರ್ನಡತೆಯು ಒಮ್ಮಿಲ್ಲೊಮ್ಮೆ ಬೈಲಿಗೆ ಬೀಳದಿರುವದೇ? ಬೈಲಿಗೆ ಬಿದ್ದ ಮೇಲೆ ಎಂಥ ಅನಿಷ್ಟ ಒದಗುವದೆಂಬದನ್ನು ಹೇಳಬೇಕೇ? ಪರಸ್ತ್ರೀ ಸಂಗಮಾಡಿದವರಿಗೆ ನ್ಯಾಯಕೋರ್ಟಿನಲ್ಲಿ ಕಠಿಣ ಶಿಕ್ಷೆಯು ವಿಧಿಸಲ್ಪಡುವದು. ಅದಕ್ಕಾಗಿ ಹೊಲಮನೆ ಹಾಳಾದ ಉದಾಹರಣೆಗಳೂ ಕೊಲೆಯಾದ ಸಂಗತಿಗಳೂ ಅನೇಕವುಂಟು. ಪರಸ್ತ್ರೀ ಸಂಗದಿಂದ ಅರ್ಥಹಾನಿ, ಪ್ರಾಣಹಾನಿ, ಮಾನಹಾನಿಯಾಗುವದರಿಂದ ಸುಶೀಲರು ಅಂಥ ಪಾಪಕ್ಕೆಂದಿಗೂ ಎಳಸರು. 'ಪರಸ್ತ್ರೀಯರ ಬೇಟೆ ಬೇಡ ಕಾಣಿರೋ. ಟಗರ ಬೆನ್ನ ಸೊಣಗ ಹರಿಯುವಂತೆ ಬೇಡ ಕಾಣಿರೋ' ಎಂದು ಶರಣರು ಎಚ್ಚರಕೊಟ್ಟಿದ್ದಾರೆ. ಈ ವಿಷಯದಲ್ಲಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ "ಹರಿವ ಹಾವಿಂಗಂಜೆ, ಉರಿಯ ನಾಲಿಗೆಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜುವೆ, ಒಂದಕ್ಕಳಕುವೆ. ಪರಸ್ತ್ರೀಯೆಂಬ ಜೂಜಿಂಗಂಜುವೆ. ಮುನ್ನಂಜದ ರಾವಣನೇನು ವಿಧಿಯಾದ? ನಾನಂಜುವೆನಯ್ಯಾ ಕೂಡಲಸಂಗಮದೇವಾ."

ಅನೇಕರು ತಾವು ಅಜನ್ಮಬ್ರಹ್ಮಚಾರಿಗಳಿರುವವೆಂದು ಜಂಭಕೊಚ್ಚುವರು. ಅಂಥವರು ಷಂಡರಿರಬಹುದು. ಇಲ್ಲವೆ ಡಂಭಾಚಾರಿಗಳಿರಬಹುದು. ಅಥವಾ ದಿವ್ಯ ಜ್ಞಾನಿಗಳಿರಬಹುದು. ಷಂಡರು ಲಗ್ನವಾಗದೆ ಒಂಟಿಗರಾಗಿರುವದು ಕ್ಷೇಮ. ಡಾಂಭಿಕರು ಬ್ರಹ್ಮಚಾರಿಗಳ ಸೋಗು ಹಾಕಿಕೊಂಡು ಕಳ್ಳತನದಿಂದ ವ್ಯಭಿಚಾರ ಮಾಡುವದಕ್ಕಿಂತಲೂ ಲಗ್ನವಾಗುವದು ಲೇಸು. ದಿವ್ಯಜ್ಞಾನಿಗಳು ಲಗ್ನವಾಗಬಹುದು ಇಲ್ಲವೆ ಬಿಡಬಹುದು. ಅದು ಅವರವರ ಇಚ್ಛೆ. ಶರಣರಲ್ಲಿ ಲಗ್ನವಾಗದವರು ತೀರ ಸ್ವಲ್ಪ ಜನರು.

ಈ ಪ್ರಪಂಚದಲ್ಲಿ ಎಷ್ಟೋ ವಿವಾಹಿತರೂ ಕೂಡ ಪರಸ್ತ್ರೀಯ ರನ್ನು ನೋಡಿ ಮೋಹಗೊಳ್ಳುತ್ತಿರುವದು ಅತಿ ನಿಂದ್ಯವಾದ ಸಂಗತಿಯು. ಹೆಣ್ಣು ಕಾಣದ ಅಣ್ಣಗಳ ಕಣ್ಣೆಲ್ಲ ಒಂದು ವೇಳೆ ಪರಸತಿಯರ ಚಲ್ವಿಕೆಗೆ ತಲ್ಲಣಗೊಳ್ಳಬಹುದು. ಆದರೆ ಹೆಣ್ಣಿದ್ದ ಅಣ್ಣಗಳೇಕೆ ಪರಸತಿಯರ ಸಂಗವನ್ನು ಬಯಸಬೇಕು? ಪರದೇಶಗಳಲ್ಲಂತೂ ಸ್ವಸ್ತ್ರೀ ಇದ್ದರೂ ಪರಸ್ತ್ರೀಯರಿಗೆ ಅಳಸುವ ರೂಢಿಯು ದಿನಚರ್ಯೆಯಾಗಿ ಬಿಟ್ಟಿದೆ. ಎಲ್ಲಿ ನೋಡಿದರೂ ಬಹುಜನ ಸಮಾಜವು ಪರಸ್ತ್ರೀಯರ ಕಡೆಗೆ ಕಟಾಕ್ಷವನ್ನು ಚಲ್ಲದೆ ಇಲ್ಲ. ಅಂಥ ಪಾಪಿಗಳನ್ನು ಕುರಿತು ದೇವರ ದಾಸಿಮಯ್ಯನವರು ಅಪ್ಪಣೆ ಕೊಡಿಸಿದ್ದೇನಂದರೆ— "ಅಡಗ ತಿಂಬುವರು ಕಣಕದ ಅಡಿಗೆಯಿರಲ್ಕೆ, ಸುರೆಯ ಕುಡಿಯುವರು ಹಾಲಿರಲ್ಕೆ, ಮುಕ್ಕುವರು ಭಂಗಿಯ ಸಕ್ಕರೆಯಿರಲ್ಕೆ, ಸ್ವಸ್ತ್ರೀಯಿರಲು ಪರಸ್ತ್ರೀಯರಿಗೆ ಅಳುಪುವರು. ಸತ್ತ ನಾಯ ಭಕ್ಷಿಸುವ ಹಡಕಿಗರನೇನೆಂಬೆನಯ್ಯಾ ರಾಮನಾಥಾ." "ಗಂಡನುಳ್ಳಮ್ಮನ ಕಂಡು ಅಳುಪದಿರಾ ಎಲೆ ಮನವೇ. ಉದ್ದಂಡ ವೃತ್ತಿಯಲಿ ನಡೆವ ಬಂಡರನು ಹುಳುಗೊಂಡದಲ್ಲಿಕ್ಕದೆ ಬಿಡುವನೇ ನಮ್ಮ ದೇವರಾಯ ಸೊಡ್ಡಳಾ." ಎಂಬುದಾಗಿ ಮತ್ತೊಬ್ಬ ಶರಣರು ಅಪ್ಪಣೆ ಕೊಡಿಸಿದ್ದಾರೆ. ಶರಣರು ಬ್ರಹ್ಮಚಾರಿಗಳಲ್ಲ. ವಿವಾಹಿತರು ಆದರೆ ಪರಸ್ತ್ರೀಯರ ವಿಷಯದಲ್ಲಿ ಮಾತ್ರ ಒಳ್ಳೇ ಪಾಪಭೀರುಗಳು.

ಪರಸ್ತ್ರೀಯರನ್ನು ಕಣ್ಣೆತ್ತಿ ನೋಡಬಾರದು. ಅದು ಮಹಾಪಾಪವೆಂದು ಬೊಗಳುವ ಮರುಳ ವೇದಾಂತಿಗಳು ಅನೇಕರುಂಟು. "ಹೇಳುವದು ಶಾಸ್ತ್ರ ತಿನ್ನುವದು ಬದನೇಕಾಯಿ" ಎಂಬಂತೆ ಈ ಡಾಂಭಿಕ ವೃತ್ತಿಯ 'ಬುವಾಬಾಜಿಗಳು' ನಾನಾ ವೇಷಗಳನ್ನು ಹಾಕಿಕೊಂಡು ಪರಸ್ತ್ರೀಯರನ್ನು ಮೋಸಗೊಳಿಸಿ ತಮ್ಮ ಲಾಲಸೆಯನ್ನು ತೃಪ್ತಿಗೊಳಿಸುತ್ತಿರುವರು. ಇಂಥವರನ್ನು ಕುರಿತು ಅಂಬಿಗರ ಚೌಡಯ್ಯನವರು ಹೇಳಿರುವದೇನಂದರೆ "ಬ್ರಹ್ಮದ ಮಾತನಾಡಿ ಕನ್ನೆಯರ ಕಾಲದೆಶೆಯಲ್ಲಿ ಕುಳಿತಾಗ ಪರಬೊಮ್ಮದ ಮಾತು ಅಲ್ಲಿಯೇ ನಿಂತಿತೆಂದಾತ ನಮ್ಮ ಅಂಬಿಗರ ಚೌಡಯ್ಯನು.

ಈ ಪಾಪಿಯಾದ ಕಣ್ಣಿನ ದುಷ್ಟ ಪ್ರವೃತ್ತಿಯನ್ನು ನಷ್ಟಪಡಿಸಲಿಕ್ಕಂದೇ ಇಷ್ಟಲಿಂಗದ ಪೂಜೆಯು ನೇರ್ಪಟ್ಟಿದೆ. ಹೀಗಿರಲು ಎಷ್ಟೋ

ಜನ ಡಾಂಭಿಕ ಭಕ್ತರೂ ಕಳ್ಳ ಶರಣರೂ ಪರಸ್ತ್ರೀಮೋಹಕ್ಕೆ ಸಿಲುಕಿ ಅಧೋಗತಿಗೆ ಹೋಗುತ್ತಿರುವರು. ಅಂಥವರ ಬಗ್ಗೆ ದೇವರದಾಸಿಮಯ್ಯನವರು ಹೇಳಿದ್ದೇನಂದರೆ— "ಶಿವಪೂಜೆಯೆತ್ತ? ವಿಷಯದ ಸವಿಯೆತ್ತ? ಆ ವಿಷಯದ ಸವಿಯು ತಲೆಗೇರಿ ಶಿವಪೂಜೆಯ ಬಿಟ್ಟು ವೇಶಿಯರ ಎಂಜಲ ಹೇಸದೆ ತಿಂಬ ದೋಷಿಗಳಿಗೇನೆಂಬೆನೈ ರಾಮನಾಥಾ." ಭಕ್ತನು ವೇಶಿಯ ಮುಟ್ಟಿದೊಡೆ, ವೇಶಿಯ ಎಂಜಲ ತಿಂದು ಈಶ ಪ್ರಸಾದವನು ಭುಂಜಿಸಿದೊಡೆ ಹಂದಿ ಮಲವ ಮೂಸಿದಂತೆ. ಅಂಥವನು ಭವಭವಾಂತರದಲ್ಲಿ ಬಳಲುವನು. ಪರಶಿವನು ಅವನ ಭಕ್ತಿಗೆ ಮೆಚ್ಚಲಾರನು ಎಂದು ಶರಣರು ಎಚ್ಚರಕೊಟ್ಟಿದ್ದಾರೆ.

ಹಿಂದೂ ಧರ್ಮದಲ್ಲಿ ಸ್ತ್ರೀಯೆಂದರೆ ದೊಡ್ಡದೊಂದು ತೊಡಕಿನ ವಿಷಯವಾಗಿದೆ. ಸ್ತ್ರೀಯರ ಮೋಹಕ್ಕಂಜಿ ಎಷ್ಟೋ ಋಷಿಗಳು ಅರಣ್ಯ ಸೇರಿದ್ದುಂಟು. "ವಿಶ್ವಾಮಿತ್ರ ಪರಾಶರಃ ಪ್ರಭೃತಯಃ ವಾತಾಂಬು ಪರ್ಣಾಶನಃ...........ಅಂದರೆ ಗಾಳಿ ನೀರಿನಿಂದ ಜೀವಿಸಿ ತಪಸ್ಸು ಮಾಡಿದ ವಿಶ್ವಾಮಿತ್ರ ಪರಾಶರ ಮೊದಲಾದ ಋಷಿಗಳು ಸ್ತ್ರೀಯರ ಪಾಶದಲ್ಲಿ ಸಿಕ್ಕಿರುವಾಗ ನಮ್ಮಂಥವರ ಪಾಡೇನು? ಎಂದು ಕೆಲವು ವಿಷಯಾಸಕ್ತರು ಸಾರುತ್ತಿರುವರು. ತಮ್ಮ ರಕ್ತವೀರ್ಯವನ್ನು ಸೆಳೆಯುವ ನಾರಿಯು ಮಾಯಾವಿನಿಯೆಂದೂ ಹಳಿದವರುಂಟು. ಎಲವು, ಚರ್ಮ, ರಕ್ತ, ಮಾಂಸ, ಮಜ್ಜೆಗಳ ಮುದ್ದೆಗೇಕೆ ಆಶೆಬಡಬೇಕೆಂಬ ಭೀಬತ್ಸದ ಮಾತುಗಳನ್ನಾಡಿ ವೈರಾಗ್ಯ ತಾಳಿದವರುಂಟು. ಹೆಣ್ಣನ್ನು ನೋಡಿ ಇಂದ್ರಿಯನಿಗ್ರಹವು ಶಕ್ಯವಿಲ್ಲೆಂದು ಪರದಾ ಪದ್ಧತಿಯು ನಿರ್ಮಾಣವಾಯಿತು. ಸಕೇಶಿಯಾದ ವಿಧವೆಗೆ ಮನವು ಸೋಲಬಹುದೆಂಬ ದೌರ್ಬಲ್ಯದ ಮೂಲಕ ಕೇಶಛೇದನವುಂಟಾಯಿತು.

ಆದರೆ ಶಿವಶರಣರು ಜಿತೇಂದ್ರಿಯರಾದುದರಿಂದ ಸ್ತ್ರೀಸಮಾಜದ ಮೇಲೆ ಯಾವ ನಿರ್ಬಂಧಗಳನ್ನೂ ಇರಿಸಲಿಲ್ಲ. ಅವರಿಗೆ ರಾಕ್ಷಸಿ ಮೋಹಿನಿಯೆಂದು ಕರೆಯಲಿಲ್ಲ. ಸ್ತ್ರೀಯರನ್ನು ಜರೆದು ವೈರಾಗ್ಯ ತಾಳಿ ಅರಣ್ಯ ಸೇರಲಿಲ್ಲ. ಅವರು ಸ್ತ್ರೀಯರನ್ನು ಒಳ್ಳೇ ಗೌರವದಿಂದ ಕಂಡಿದ್ದಾರೆ. ಸಿದ್ಧರಾಮದೇವರು ಹೇಳಿದ್ದೇನಂದರೆ— "ತಾ ಮಾಡಿದ ಹೆಣ್ಣು (ಗಂಗಾ) ಶಿವನ ತಲೆಯನೇರಿತ್ತು. ತಾ ಮಾಡಿದ ಹೆಣ್ಣು (ಪಾರ್ವತಿ)

ಶಿವನ ತೊಡೆಯನೇರಿತ್ತು. ತಾ ಮಾಡಿದಹೆಣ್ಣು (ಲಕ್ಷ್ಮಿ) ನಾರಾಯಣನ ಎದೆಯನೇರಿತ್ತು. ತಾಮಾಡಿದ ಹೆಣ್ಣು (ಸರಸ್ವತಿ) ಬ್ರಹ್ಮನ ನಾಲಿಗೆಯನೇರಿತ್ತು. ಅದು ಕಾರಣ ಹೆಣ್ಣು ಹೆಣ್ಣಲ್ಲ. ಹೆಣ್ಣು ರಕ್ಕಸಿಯಲ್ಲ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ." ಹೆಣ್ಣು ಬಿಟ್ಟು ಅರಣ್ಯ ಹೋಗುವದಕ್ಕಿಂತ ಹೆಣ್ಣು ಗೂಡಿ ಒಳ್ಳೇ ನಾಗರಿಕನಾಗಿ ಪ್ರಪಂಚಮಾಡುವದು ಒಳಿತಲ್ಲವೇ? 'ನಾರಿ ಸ್ವರ್ಗಕೆ ದಾರಿ' ಎಂದು ಸರ್ವಜ್ಞನು ಹೇಳಿದ್ದಾನೆ. "ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ಹೊನ್ನಮ್ಮನು ಹಾಡಿಕೊಂಡಿದ್ದಾಳೆ. ಆದುದರಿಂದ ಶಿವಶರಣರು ಪರಸ್ತ್ರೀಯರಿಗೆ ಗೌರವವನ್ನು ಕೊಡುತ್ತಿದ್ದರೇ ವಿನಾ ಎಂದೂ ಜರೆಯಲಿಲ್ಲ.

ಪರವಧುವಿನ ಬಗ್ಗೆ ಶಿವಶರಣರು ಒಳ್ಳೇ ಪೂಜ್ಯಭಾವವನ್ನು ತಾಳಿದ್ದಾರೆ. ಬಸವಣ್ಣನವರು ಅಪ್ಪಣೆ ಕೊಡಿಸಿರುವದೇನಂದರೆ— "ಎಲ್ಲಿ ನೋಡಿದಲ್ಲಿ ಮನವೆಳಸಿದೊಡೆ ಆಣೆ. ನಿಮ್ಮಾಣೆ. ನಿಮ್ಮ ಪ್ರಮಥರಾಣೆ. ಪರವಧುವನು ಮಹಾದೇವಿಯೆಂದು ಕಾಂಬೆನು ಕೂಡಲಸಂಗಮದೇವಾ." ಪರಸ್ತ್ರೀಯರನ್ನು ರಕ್ಕಸಿಯರೆಂದು ಜರೆದು ಅವರಿಂದ ದೂರಾಗಲೆತ್ನಿಸುವದಕ್ಕಿಂತಲೂ ಅವರು ದೇವಿಯರೆಂದು ಮನ್ನಿಸುವದು ಶ್ರೇಯಸ್ಕರವಲ್ಲವೇ? ಪರವಧುವು ಎದುರಿಗೆ ಬಂದರೆ ಅವಳ ಮುಖದ ಕಡೆಗೆ ನೋಡಿ ಪಾದ ದೃಷ್ಟಿಯಿಡಬೇಕೆಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಅದರಿಂದ ನಮ್ಮ ಭಾವನೆಯು ಪವಿತ್ರವಾಗುವದು. ಲಕ್ಷ್ಮಣನು ೧೪ ವರ್ಷ ಸೀತಾರಾಮರೊಂದಿಗೆ ವನವಾಸದಲ್ಲಿದ್ದರೂ ಸೀತೆಯ ಪಾದಸೇವೆ ಮಾಡಿದನೇ ಹೊರತು ಅವಳ ಮುಖಾವಲೋಕನ ಮಾಡಲಿಲ್ಲ. ರಾವಣನು ಸೀತೆಯನ್ನು ಸೆಳೆದೊಯ್ಯುವಾಗ ಅವಳು ಚಲ್ಲಿದ ಆಭರಣಗಳಲ್ಲಿ ಲಕ್ಷ್ಮಣನು ಅವಳ ಕಾಲ್ಪೊಡಿಗೆಯನ್ನು ಗುರ್ತಿಸಿದನೇ ಹೊರತು ಕಂಠಾಭರಣಗಳನ್ನು ತಿಳಿಯದಾದನು. ಜಿತೇಂದ್ರಿಯ ಸಾಧನೆಗೆ ಇಂಥ ಕಠೋರ ವ್ರತವೇನೂ ಬೇಡ. ಶಿವಶರಣರು ಸ್ತ್ರೀಯರನ್ನು ಕಣ್ತುಂಬ ನೋಡಿ, ನುಡಿಸಿ, ನುಡಿದು ಕೂಡಿಕೊಂಡಿದ್ದರೂ ಅವರ ಆತ್ಮವು ಪವಿತ್ರವಾಗಿದ್ದಿತು. ಶಿವಶರಣರು ನಿಜವಾದ ಜಿತೇಂದ್ರಿಯರು. ಪರಸ್ತ್ರೀಯರ ಬಗ್ಗೆ ಆಚರಿಸಿದ ಅವರ ಶೀಲವು ಜಗತ್ತಿಗೆ ಆದರ್ಶಪ್ರಾಯವಾಗಿದೆ.

ಸರ್ವ ಶೀಲಗಳಿಗಿಂತಲೂ ಪರಸ್ತ್ರೀಯರನ್ನು ನೋಡದಿರುವ ಶೀಲವೇ ಹೆಚ್ಚಿನದೆಂದು ಅದಕ್ಕೆ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ಮಡಿ ಹುಡಿ, ಜಳಕ ಪೂಜೆ ಮಾಡಿದರೆ ಅದು ಶೀಲವಲ್ಲ. ನಿಜವಾದ ಶೀಲವಾವುದೆಂದರೆ, "ಶೀಲ ಶೀಲವೆಂದು ಗರ್ವಿಸಿ ನುಡಿಯುತಿರ್ಪಿರಿ. ಶೀಲವಾವುದೆಂದರಿಯಿರಿ ಕೇಳಿರಣ್ಣಾ, ಪರಸ್ತ್ರೀಯರ ನೋಡದಿರ್ಪುದೇ ಶೀಲ, ಪರಧನ ಮುಟ್ಟದಿರ್ಪುದೇ ಶೀಲ, ಪರದೈವ ಪರಸಮಯಕ್ಕೆಳಸದಿರ್ಪುದೇ ಶೀಲ, ಇದ್ದುದ ವಂಚನೆಯ ಮಾಡದಿರ್ಪುದೇ ಶೀಲ. ಇಲ್ಲದಿದುಕೆ ಕಡನ ಮಾಡದಿರ್ಪುದೇ ಶೀಲ. ಕೂಡಲಚೆನ್ನಸಂಗನ ಶರಣರಿಗೆ ವೈಯಾಂತುದೇ ಅಚ್ಚಶೀಲ." ಎಂದು ಚೆನ್ನಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ.

---

# ವೀರಶೈವ ಸಮಾಜಕ್ಕೆ ಶಿವಾನುಭವದ ಎಚ್ಚರಿಕೆ.

(ಲೇಖಕ:--- ಶ್ರೀ. ಸದಾಶಿವಪ್ಪ ತೆನೆಹಳ್ಳಿ, ವಿಜಾಪುರ.)

ಭರತಖಂಡದ ಧರ್ಮ ಸಂಸ್ಕೃತಿ ಸಾಹಿತ್ಯಗಳನ್ನು ಕುರಿತು ಬರೆಯಲು ಉದ್ದೇಶಿಸಿದ ಗ್ರಂಥಗಳಲ್ಲಿ ಶಿವಾನುಭವ ಮಾಸಿಕವೂ ಒಂದೆಂಬುದನ್ನು ಧೈರ್ಯವಾಗಿ ಹೇಳಬಹುದು. ರಾಜಕೀಯ ಪ್ರಪಂಚದಲ್ಲಿದ್ದಂತೆಯೇ ಧರ್ಮಪ್ರಪಂಚದಲ್ಲಿಯೂ ಸಂಕುಚಿತ ಭಾವಗಳೂ ಕುಂದು ಕೊರತೆಗಳೂ ಒಡುಕು ಬುಡುಕುಗಳೂ ಯಥೇಚ್ಛವಾಗಿರುವವು. ಸರ್ವಧರ್ಮಗರ್ಭಿತವಾದ ವೇದಾಂತದರ್ಶನವು ಜನಸಮುದಾಯವನ್ನು ತ್ಯಜಿಸಿ, ವಾದಪ್ರಿಯರಾದ ಕೆಲವು ಪಂಡಿತ ವರ್ಗದವರ ಕೈಸೇರಿದ್ದರಿಂದಲೇ ಆತ್ಮೀಯ ಅಂಧಾನುಕರಣವು ಜನಸಾಮಾನ್ಯರೊಳಗೆ ಮೂಡಿತು. ಸಾವಿರಾರು ವರುಷಗಳ ಪೂರ್ವದಲ್ಲಿ ಬಸವಣ್ಣನವರೇ ಮೊದಲಾದ ಶರಣಸಮುದಾಯವು ಮಾಡಿದ ಕಾರ್ಯವು ಮಹತ್ತರವಾದುದು. ಈ ಮಹತ್ಕಾರ್ಯವನ್ನು ಅವರು ಮಾಡಿದ ಆತ್ಮತ್ಯಾಗ, ಸ್ವಾರ್ಥತ್ಯಾಗಗಳನ್ನು ಇತಿಹಾಸವು ಎಂದೂ ಮರೆಯಲಿಕ್ಕಿಲ್ಲ.

ತರುವಾಯ ವಿಜಯನಗರ ರಾಜ್ಯಸ್ಥಾಪನೆಯ ವರೆಗೆ, ಸಮಾಜವು ದೀವಿಗೆಯನ್ನು ಕೂಡ ಕಾಣದ ಕಾರ್ಗತ್ತಲೆಯಲ್ಲಿಯೇ ತನ್ನ ಕಾಲವನ್ನು ಕಳೆಯಿತು. ವಿಜಯನಗರದ ಅರಸರಾಳಿಕೆಯಲ್ಲಿ ಹಿಂದೂ ಸಂಸ್ಕೃತಿ ಸಾಹಿತ್ಯಗಳಿಗೆ ಹೊಸ ಕಳೆಯು ಬಂದಿತು. ಆಗಿನ ಕಾಲದ ವೀರಶೈವ ಕವಿಗಳೂ ಸಾಹಿತಿಗಳೂ ರಾಷ್ಟ್ರಪೋಷಕವಾದ ಆಚಾರ ವಿಚಾರಗಳನ್ನು ತುಂಬಿದರು. ಸನಾತನಿಗಳ ದೌರ್ಜನ್ಯವೃತ್ತಿಯ ಧರ್ಮ ಸಂಕೋಲೆಗಳಿಗೆ ಬೇಸತ್ತ ಜನಾಂಗವು ಇತರ ಧರ್ಮಗಳ ಪಾಶದಿಂದ ಪಾರಾಯಿತು. ಮುಂದೆ ವಿಜಯನಗರದ ರಾಜ್ಯವು ಸಾಮ್ರಾಜ್ಯ ವೈಭವದ ಶಿಖರಕ್ಕೆ ಮುಟ್ಟಿತು. ಈ ವೈಭವವನ್ನು ಸಹಿಸದ ಪರಕೀಯರು ಒಬ್ಬೊಬ್ಬರಾಗಿಯೇ ಅದನ್ನು ಎದುರಿಸದೆ ತಮ್ಮ ಎಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ವಿಜಯನಗರವನ್ನು ಪಾದಾಕ್ರಾಂತ ಮಾಡಿದರು. ಆ ಯುದ್ಧದಲ್ಲಿ ಅಸಂಖ್ಯ ಯೋದ್ಧರು ರಣದೇವತೆಗೆ ಬಲಿಯಾದರು. ಕರ್ನಾಟಕ ಶಿಲ್ಪಿಗರು ಕೊರೆದ ಕಲ್ಲಿನ ಮೂರ್ತಿಗಳು

ಪುಡಿಪುಡಿಯಾದವು. ಕಾವ್ಯ ಪುರಾಣಗಳು ತಾಡವಾಲೆಗಳು ತುಂಗಭದ್ರೆಯ ತಳವನ್ನು ಕಂಡವು. ಅಂತು ವಿಜಯನಗರದ ಪತನಾನಂತರ ವೀರಶೈವರ ವೈಭವವು ಮಣ್ಣುಪಾಲಾಯಿತು.

ಮುಂದೆ ಹತ್ತೊಂಬತ್ತನೆಯ ಶತಮಾನದ ಆದಿ ಭಾಗದಲ್ಲಿ ವೀರಶೈವ ಸಾಹಿತ್ಯ ವನದಲ್ಲಿ ತಿಳಿನೀರಿನಸಂಚಯುವಾಗತೊಡಗಿತು. ಅಲ್ಲೊಂದು ಇಲ್ಲೊಂದು ಪುಷ್ಪಗಳು ಕಾಣತೊಡಗಿದವು. ಬಸವಣ್ಣನವರ ಕಾಲದ ಸಾಹಿತ್ಯ ಭಾಂಡಾರವು ಬೈಲಿಗೆ ಬರತೊಡಗಿತು. ಮನೆ ಮಠಾಧಿಗಳಲ್ಲಿ ಮೂಲೆ ಗುಂಪಾಗಿದ್ದ ತಾಡವಾಲೆಗಳು ಹೊರಬಿದ್ದವು. ಹರಿಹರಾದಿ ಕವಿಗಳು ಬರೆದಿಟ್ಟ ಪ್ರೌಢ ಕಾವ್ಯಗಳು ಪುನಃ ತಲೆಯೆತ್ತಿನಿಂತವು. ಇವೆಲ್ಲವುಗಳಿಗೂ ಜನ್ಮಕೊಟ್ಟ ಶಿವಾನುಭವ ಪತ್ರಿಕೆಯು ವೀರಶೈವ ಸಮಾಜಕ್ಕೆ ಪರಮಸೇವೆಯನ್ನು ಸಲ್ಲಿಸಿದೆ. ಆದರೆ ನಾವು ಮುಂದಿನ ಧ್ಯೇಯಗಳನ್ನು ತಿಳಿದುಕೊಂಡು ಪ್ರಯತ್ನಿಸುವ ಕಾಲವು ಬಂದಿದೆ. ಅತ್ತಕಡೆಗೆ ವೀರಶೈವ ಮಹಾನುಭಾವರು ತಮ್ಮ ಲಕ್ಷವನ್ನು ಹೊರಳಿಸಬೇಕು. ಅವು ಯಾವವೆಂದರೆ:—

೧. ಪ್ರಚಾರಕಾರ್ಯ— ಆಶಾಜನಕವೂ ಬಲಕಾರಿಯೂ ಆಗಿರುವ ಶರಣರ ಧೀರಸಂದೇಶವನ್ನು ಮನೆಮನೆಗೂ ಗುಡಿಸು ಗುಡಿಸಿಲಿಗೂ ಸಾರಬೇಕು. ಅದು ಜನಗಳ ಹೃದಯದಲ್ಲಿ ನವಚೈತನ್ಯವನ್ನು ತುಂಬಿ ಮನುಷ್ಯರನ್ನಾಗಿ ಮಾಡುವದರಲ್ಲಿ ಸಂದೇಹವಿಲ್ಲ.

೨. ಸಂಘಟನೆ— ಸಂಕುಚಿತಭಾವವನ್ನು ತೊರೆದುಹಾಕಿ ಸಾರ್ವಜನಿಕರಲ್ಲಿ ವಿಶಾಲದೃಷ್ಟಿಯನ್ನು ತಂದುಕೊಡುವದು ಬಹಳ ಅವಶ್ಯವು. ಭರತಖಂಡದ ಅವನತಿಗೆ ಭಿನ್ನಬುದ್ಧಿಯೇ ಮೂಲ ಕಾರಣವಾಗಿದೆ. ವೀರಶೈವರು ಈ ಧೋರಣವುಳ್ಳರಾಗಿ ಪ್ರಯತ್ನಿಸಬೇಕು.

೩. ಸಮಾಜ ಸುಧಾರಣೆ— ವಿವೇಕಪೂರ್ಣವಾದ ಮತ್ತು ಆರ್ಯಸಂಸ್ಕೃತಿಗೆ ಹಾನಿಕರವಲ್ಲದ ಸಮಾಜಸುಧಾರಣೆಯನ್ನು ಕೈಕೊಳ್ಳಬೇಕು. ಕ್ರಾಂತಿಯ ಉಪಾಯಗಳಿಗಿಂತಲೂ ಬೆಳವಣಿಗೆಯೇ ಹಿತಕರವಾದದ್ದು. ಸಂಪ್ರದಾಯ ಶರಣರನ್ನು ನಿಂದಿಸಿ ಅವರ ವೈರಭಾವವನ್ನು ಉಂಟು ಮಾಡಿಕೊಳ್ಳದೆ ಪ್ರೀತಿಯಿಂದಲೂ ಎಚ್ಚರಿಕೆಯಿಂದಲೂ ಅವರ ತಪ್ಪು ತಿಳುವಳಿಕೆಗಳನ್ನು ದೂರಮಾಡಿ ಅವರನ್ನು ಹಾದಿಗೆ ಹಚ್ಚಬೇಕು.

೪. ಆತ್ಮಜ್ಞಾನ ಇದಿಲ್ಲದೇ ದೇಶಕ್ಕೆ ಹಿತವಿಲ್ಲ. ಮಾನವನಲ್ಲಿ ಹುದುಗಿಕೊಂಡಿದ್ದ ಆತ್ಮಜ್ಞಾನವನ್ನು ಜಾಗ್ರತೆಪಡಿಸುವದೇ ಶಿವಾನುಭವದ ಮುಖ್ಯಗುರಿಯಾಗಿದೆ.

೫. ಮಹಿಳಾಜಾಗ್ರತಿ— ಆಧ್ಯಾತ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರಿಗೂ ಒಂದು ಮಹತ್ವದ ಸ್ಥಾನವನ್ನು ಕಲ್ಪಿಸಿಕೊಡಬೇಕು. ಸ್ತ್ರೀ-ಪುರುಷರೆಂದರೆ, ಒಂದೇ ಜೀವನದ ಎರಡು ದೇಹಗಳು. ಇದು ಶಿವಾನುಭವದ ಮುಖ್ಯ ತಿರುಳು.

ಈ ಪ್ರಕಾರ ಸರ್ವಸಾಮಾನ್ಯವಾಗಿ ಮುಖ್ಯ ಧ್ಯೇಯಗಳನ್ನಿಟ್ಟುಕೊಂಡಿದ್ದರೂ ಕೂಡ ಮಾನ್ಯರ ಬೇರೆ ಸೂಚನೆಗಳನ್ನು ನಾವು ಅನುಸರಿಸಬೇಕು. ರಾವಬಹಾದ್ದೂರ ಹಳಕಟ್ಟಿಯವರ ಪ್ರಯತ್ನದಿಂದ ಶಿವಾನುಭವವು ಇಲ್ಲಿಯವರೆಗೆ ಬಂದು ಮುಟ್ಟಿದೆಯಾದರೂ ಅವರ ತರುವಾಯದಲ್ಲಿ ಶಿವಾನುಭವದ ಗತಿಯೇನು? ಸಾವಿರಾರು ವರುಷಗಳಿಂದ ಅನೇಕ ಆಪತ್ತುಗಳನ್ನು ಸಹಿಸಿಕೊಂಡು ಬಂದ ನಮ್ಮ ಸಾಹಿತ್ಯ ಸಂಸ್ಕೃತಿಗಳ ಗತಿಯೇನು? ಈ ಕಾರ್ಯಕ್ಕೋಸ್ಕರ ಜವಾಬುದಾರರು ಯಾರು? ಇವೇ ಮೊದಲಾದ ವಿಷಯಗಳು ಸಮಾಜದ ಮುಂದೆ ಇರುವವು. ವೀರಶೈವ ಸಮಾಜಕ್ಕೆ ಸ್ವತಂತ್ರ ಸಂಸ್ಕೃತಿ ಬೇಕಾಗಿದ್ದರೆ, ಬಸವಾದಿ ಪ್ರಮುಥರ ಕಾಲದಿಂದ ಬಂದ, ನೂತನ ಸಾಹಿತ್ಯವು ಸಮಾಜದಲ್ಲಿ ನಿರಂತವಾಗಿ ಉಳಿಯಬೇಕಾದರೆ, ಕೂಡಲೇ ವೀರಶೈವರೆಲ್ಲರೂ ಕಂಕಣಬದ್ಧರಾಗಿ ಕಾರ್ಯರಂಗಕ್ಕಿಳಿಯಬೇಕು. ಇಲ್ಲವಾದರೆ ಶತಶತಮಾನವರ್ಷಗಳ ವರೆಗೆ ಅವರು ಅವನತ ಸ್ಥಿತಿಯಲ್ಲಿಯೇ ಉಳಿಯಬೇಕಾದೀತು.

3೬-೦೦

## (೩) ಗದ್ಯ ಗ್ರಂಥಗಳು.

| | | | | |
|---|---|---|---|---|
| ೨೭ | ಶಿವಾನುಭವ ಸೂತ್ರಸಾರ | ೧ | ೦ | ೦ |
| ೨೮ | ಲಿಂಗಪೂಜೆಯ ತತ್ವಗಳು | ೦ | ೪ | ೦ |
| ೨೯ | ನಿರಂಜನ ವಂಶರತ್ನಾಕರ | ೦ | ೧೨ | ೦ |
| ೩೦ | ಕಾಲಜ್ಞಾನದ ವಚನಗಳು | ೦ | ೧೩ | ೦ |
| ೩೧ | ಬಸವೇಶ್ವರ ಷಟ್‌ಸ್ಥಲ ವಚನದ ಕಥಾಸಾರ | ೧ | ೨ | ೦ |
| ೩೨ | ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆ | ೦ | ೭ | ೦ |
| ೩೩ | ಕೃಷಿಜ್ಞಾನ ಪ್ರದೀಪಿಕೆ | ೨ | ೮ | ೦ |

## (೪) ರಗಳೆಗಳು.

| | | | | |
|---|---|---|---|---|
| ೩೪ | ಹರಿಹರನ ರಗಳೆಗಳು ಭಾಗ ೧ | ೦ | ೧೪ | ೦ |
| ೩೫ | ಹರಿಹರನ ರಗಳೆಗಳು ಭಾಗ ೨ | ೦ | ೭ | ೦ |
| ೩೬ | ಹರಿಹರನ ರಗಳೆಗಳು ಭಾಗ ೩ | ೦ | ೧೦ | ೦ |
| ೩೭ | ಹರಿಹರನ ರಗಳೆಗಳು ಭಾಗ ೪ | ೦ | ೧೩ | ೦ |
| ೩೮ | ಹರಿಹರನ ರಗಳೆಗಳು ಭಾಗ ೫ | ೦ | ೧೩ | ೦ |
| ೩೯ | ಹರಿಹರನ ರಗಳೆಗಳು ಭಾಗ ೬ | ೦ | ೧೪ | ೦ |
| ೪೦ | ಹರಿಹರನ ರಗಳೆಗಳು ಭಾಗ ೭ | ೦ | ೧೨ | ೦ |
| ೪೧ | ತೋಂಟದಾರ್ಯರ ರಗಳೆ | ೦ | ೨ | ೦ |
| ೪೨ | ವೀರಶೈವ ರಗಳೆ | ೦ | ೨ | ೦ |

## (೫) ಕಾವ್ಯಗ್ರಂಥಗಳು.

| | | | | |
|---|---|---|---|---|
| ೪೩ | ವರದಾನಿ ಗುಡ್ಡವ್ವೆಯ ಚರಿತ್ರೆ | ೦ | ೩ | ೦ |
| ೪೪ | ರಾಘವಾಂಕ ಕವಿಕೃತ ಆದಿಶೆಟ್ಟಿ ಪುರಾಣ | ೧ | ೮ | ೦ |
| ೪೫ | ಬೀಳಗಿ ಅರಸುಗಳ ವಂಶಾವಳಿ | ೦ | ೧೩ | ೦ |

## (೬) ಸ್ತೋತ್ರಗಳು ಮತ್ತು ಪದ್ಯಗಳು.

| | | | | |
|---|---|---|---|---|
| ೪೬ | ಶಿವಾನುಭವದರ್ಪಣ- ಮೈಲಾರ ಬಸಪ್ಪನವರು | ೦ | ೧೨ | ೦ |
| ೪೭ | ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ | ೧ | ೮ | ೦ |
| ೪೮ | ಸೋಮೇಶಟ್ಟಿ ಕರಿವೃಷಭೇಂದ್ರ ಕೈವಲ್ಯ ಪದ್ಯಗಳು | ೦ | ೬ | ೦ |
| ೪೯ | ಮಹಿಮ್ನಸ್ತೋತ್ರ (ಶ್ರೀಶಂಭುಲಿಂಗ ಶಿವಾಚಾರ್ಯರು) | ೦ | ೬ | ೦ |
| ೫೦ | ಬಸವ ಮಹಿಮೆ (ಲಾವಣಿ ಪದವು) | ೦ | ೩ | ೦ |
| ೫೧ | ಹರಳಯ್ಯನ ತ್ರಿಪದಿ (ಸುಂದರವಾದ ಮುನ್ನುಡಿ) | ೦ | ೪ | ೦ |
| ೫೨ | ಶರಣಸಾಹಿತ್ಯ (ಸಾಧುಪುರುಷರ ಪದಗಳು) | ೦ | ೮ | ೦ |

೫೪-೭-೦

From,
Shivanubhava
Office
Bijapur.

BOOK-POST.

R. N. B. 2554

## ಇತರ ಗ್ರಂಥಗಳು

| | | |
|---|---|---|
| ೧ | ೬೩ ಪುರಾತನರ ಚರಿತ್ರೆ | ೨ ೦ ೦ |
| ೨ | ದೇಶಭಕ್ತಿಯ ಕಥೆಗಳು | ೮ ೩ ೦ |
| ೩ | ಭಾರತೀಯ ಮಹಾಪುರುಷರು | ೦ ೧೨ ೦ |
| ೪ | ಮೊದಲನೇ ದೇಶದ್ರೋಹಿ | ೦ ೩ ೦ |
| ೫ | ಕೋರಿಕೆ | ೦ ೯ ೦ |
| ೬ | ಕೀರ್ತನ ತರಂಗಿಣಿ | ೦ ೮ ೦ |
| ೭ | ಅಥಣಿ ಗಚ್ಚಿನ ಮಠದ ಶ್ರೀ. ಸಿದ್ಧಲಿಂಗಸ್ವಾಮಿಗಳವರ ಚರಿತ್ರೆ | ೦ ೫ ೦ |
| ೮ | ಚರಲಿಂಗಸ್ವಾಮಿಗಳು ಕಲಬುರ್ಗಿಮಠ ಇವರ ಚರಿತ್ರೆ | ೦ ೩ ೦ |
| ೯ | ಗುರುಧರ್ಮ ನಿರೂಪಣೆ | ೦ ೧೨ ೦ |
| ೧೦ | ವೀರಶೈವರ ಕಾಯಕಗಳು | ೦ ೬ ೦ |





ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ೧೬೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.
ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಜೂನ ೧೯೪೩. [ಸಂಚಿಕೆ ೯

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಸಾಹಿತ್ಯ ಮತ್ತು ಸ್ವಾನುಭಾವ | ಶ್ರೀ. ವ್ಹಿ. ಆರ್. ಕೊಪ್ಪಳ ಧಾರವಾಡ | ೩೧೭ |
| ೨ ಆತ್ಮನಿರೀಕ್ಷಣೆ | ಶ್ರೀ ಜಿ. ಎಸ್. ಕನ್ನೂರ ವಿಜಾಪುರ | ೩೨೧ |
| ೩ ಪರದ್ರವ್ಯವನ್ನಪಹರಿಸಬಾರದು | ಶ್ರೀ. ಶಿವಮೂರ್ತಿ | ೩೨೩ |
| ೪ ಬಸವಸ್ತುತಿ | ಶ್ರೀ. ಸ್ವಾಮಿ ಶಿವಯೋಗಿ ಶಿವಯೋಗಮಂದಿರ | ೩೩೧ |
| ೫ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೩೩೩ |
| ಶಿವಾನುಭವ ಶಬ್ದಕೋಶ | ——— | ೧೯೩–೨೦೦ |
| ವೀರಶೈವ ರಾಜಮನೆತನಗಳ ಚರಿತ್ರೆ | ——— | ೬೫–೬೮ |

ವಿಜಾಪುರ

# ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ದೊರೆಯುವ ಗ್ರಂಥಗಳು.

## (೧) ವಚನ ಗ್ರಂಥಗಳು.

೧ ಹೊಸಪದ್ಧತಿಯ ಬಸವೇಶ್ವರ ವಚನಗಳು ೧ ೮ ೦
೨ ಸಿದ್ಧರಾಮೇಶ್ವರ ವಚನಗಳು ೧ ೮ ೦
೩ ಪ್ರಭುದೇವರ ವಚನಗಳು (ಜಕ್ಕಣಾರ್ಯರ ಟೀಕೆ) ೩ ೬ ೦
೪ ಚನ್ನಬಸವೇಶ್ವರ ವಚನಗಳು ೧ ೨ ೦
೫ ದೇವರದಾಸಿಮಯ್ಯನ ವಚನಗಳು ೦ ೧೩ ೦
೬ ಅಂಬಿಗರ ಚೌಡಯ್ಯನ ವಚನಗಳು ೧ ೪ ೦
೭ ಉರಿಲಿಂಗಪೆದ್ದಿಯ ವಚನಗಳು ೧ ೮ ೦
೮ ಸಂಗನಬಸವೇಶ್ವರನ ವಚನಗಳು ೦ ೧೩ ೦
೯ ಹಡಪದಪ್ಪಣ್ಣನ ವಚನಗಳು ೦ ೧೨
೧೦ ಲಿಂಗಮ್ಮನ ವಚನಗಳು ೦ ೪
೧೧ ಆದಯ್ಯನ ವಚನಗಳು ... ... ೦ ೮
೧೨ ಮಹಾದೇವಿಯಕ್ಕನ ವಚನಗಳು ೦ ೮
೧೩ ಸಕಲೇಶ ಮಾದರಸನ ವಚನಗಳು ೦
೧೪ ಗಣದಾಸಿ ವೀರಣ್ಣನ ವಚನಗಳು ೦
೧೫ ಘನಲಿಂಗನ ವಚನಗಳು ... ... ೦
೧೬ ಶಿವಶರಣರ ಸಂಗೀತ ವಚನಗಳು ೦
೧೭ ಸಂಕೀರ್ಣ ವಚನಗಳು ಭಾಗ ೧ ೧
೧೮ ಮಡಿವಾಳ ಮಾಚಿದೇವನ ವಚನಗಳು ೦
೧೯ ಸಂಕೀರ್ಣ ವಚನಗಳು ಭಾಗ ೨
೨೦ ಶಿವಾನುಭವ ಸೃಷ್ಟಿಯ ವಚನಗಳು
೨೧ ಮಹಾನುಭಾವ ಪ್ರಕಾಶಿಕೆ

## (೨) ವಚನಶಾಸ್ತ್ರದ ಸಂಗ್ರಹ ಗ್ರಂಥಗಳು.

೨೨ ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ
೨೩ ,, ಉತ್ತರಾರ್ಧ ೦
೨೪ ವಚನಶಾಸ್ತ್ರಸಾರ ಭಾಗ ೨
೨೫ ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ ೬
೨೬ ಶೂನ್ಯಸಂಪಾದನೆ ೧

# ಶಿವಾನುಭವ

| ವರ್ಷ ೧೭ | ಜೂನ ೧೯೫೩. | ಸಂಚಿಕೆ ೯ |
|---|---|---|

## ಸಾಹಿತ್ಯ ಮತ್ತು ಸ್ವಾನುಭಾವ.

(ಸಂಗ್ರಾಹಕರು:— ವೀರಭದ್ರಪ್ಪ ಕೊಪ್ಪಳ ಎಮ್. ಎ., ಬಿ. ಟಿ. ಧಾರವಾಡ)

(ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ತಾ. ೭-೫-೫೩ನೇಯ ದಿವಸ ಬಸವಜಯಂತಿ ಉತ್ಸವದ ಸಂದರ್ಭದಲ್ಲಿ ಧಾರವಾಡ ಲಿಂಗಾಯತ ನಗರ ಭವನದಲ್ಲಿ ಮೇಲ್ಕಂಡ ವಿಷಯವನ್ನು ಕುರಿತು ಮಾಡಿದ ಭಾಷಣದ ಸಾರಾಂಶವಿದು )

ಜೀವನಕ್ಕೂ ಸಾಹಿತ್ಯಕ್ಕೂ ನಿಕಟವಾದ ಸಂಬಂಧವಿರುವಂತೆ, ಜೀವನಕ್ಕೂ ಸ್ವಾನುಭಾವಕ್ಕೂ ಅತ್ಯಂತ ನಿಕಟವಾದ ಸಂಬಂಧವಿರುವುದು. ಕೇವಲ ಜನಮನರಂಜನೆಯಿಂದ ಸಾಹಿತ್ಯದ ಗುರಿಯು ಸಾಧಿಸಿದಂತಾಗುವದಿಲ್ಲ. ಆದರ ಉಚ್ಚವಾದ ಧೇಯವು ಉತ್ಕೃಷ್ಟಭಾವನಾವಿಕಾಸದಿಂದ ಉದ್ಧಾರಕಾರ್ಯವನ್ನು ನೆರವೇರಿಸುವುದರಲ್ಲಿದೆ. ಇದು ಸಾಧ್ಯವಾದಷ್ಟು ಮಟ್ಟಿಗೆ ಸಾಹಿತ್ಯದಲ್ಲಿ ತರಗತಿಗಳುಂಟಾಗುವವು. ಬಸವಣ್ಣ ಮೊದಲಾದ ಶಿವಶರಣರ ವಚನಗಳಲ್ಲಿ, ಹರಿಹರದೇವನ ರಗಳೆಗಳಲ್ಲಿ ಸಾಹಿತ್ಯದ ಲಕ್ಷಣಗಳ ಜೊತೆಗೆ ಉತ್ಕೃಷ್ಟ ಭಾವನಾವಿಕಾಸಕ್ಕೆ ಅವಕಾಶವಿರುವದನ್ನು ಮನಗಾಣಬಹುದು. ಇಲ್ಲಿ ಸಾಹಿತ್ಯ ಮತ್ತು ಸ್ವಾನುಭಾವ ಇವುಗಳ ಸಂಗಮವುಂಟು. ಚಿತ್ತವೃತ್ತಿಪವಿತ್ರೀಕರಣವೇ (*Sublimation*) ಶ್ರೇಷ್ಠ ಸಾಹಿತ್ಯದ ಉಚ್ಚತಮವಾದ ಗುರಿಯಾದರೆ, ಚಿತ್ತವೃತ್ತಿನಿರೋಧವೇ (*Spiritualisation*) ಸ್ವಾನುಭಾವಕ್ಕೆ ಗುರಿ. ಒಂದರಿಂದ ಭಾವಾಂತರವು (*Transformation*) ಸಾಧಿಸಿದರೆ,

ಇನ್ನೊಂದರಿಂದ ಭಾವಾತೀತ ಸ್ಥಿತಿಯು (*Transcendance*) ಸಾಧ್ಯವಾಗುವದು. ಭಾವಾಂತರಗೊಳ್ಳುವದಾಗಲಿ, ಭಾವಾತೀತ ಸ್ಥಿತಿಯನ್ನು ಪಡೆಯುವದಾಗಲಿ ಪರಸ್ಪರ ವಿರೋಧವಾದವುಗಳಲ್ಲ; ಪೋಷಕವಾದವುಗಳು. ಈ ದೃಷ್ಟಿಯಿಂದ ಸಾಹಿತ್ಯಕ್ಕೂ ಸ್ವಾನುಭಾವಕ್ಕೂ ಎಷ್ಟೊಂದು ಪರಸ್ಪರ ಮೈತ್ರಿ ಇದೆ ಎಂಬುದು ವ್ಯಕ್ತವಾಗುತ್ತದೆ.

ಜಾಗರದಲ್ಲಿಯಾಗಲಿ, ಸ್ವಪ್ನದಲ್ಲಿಯಾಗಲಿ, ಜ್ಞಾನದ ವ್ಯವಹಾರಕ್ಕೆಲ್ಲ ಇಂದ್ರಿಯಗಳ (ಅದರಲ್ಲಿ ಸ್ಪರ್ಶದ) ಬಳಕೆಯೇ ಕಾರಣವು. ಜೀವನದ ಸಾಮಾನ್ಯವಾದ ವ್ಯವಹಾರವೆಲ್ಲ ಈ ಇಂದ್ರಿಯಜನ್ಯಜ್ಞಾನದಿಂದಲೇ ಸಾಗಿರುವುದು. ಜಾಗರದಲ್ಲಿ ವಿವೇಕದಿಂದ ಮರೆಮಾಜಲು ಶಕ್ಯವಿರುವ ಇಂದ್ರಿಯವೃತ್ತಿಗಳನ್ನು ಸ್ವಪ್ನಸೃಷ್ಟಿಯಲ್ಲಿ ತಡೆಯಲೂ ಪರಿವರ್ತನೆಗೊಳಿಸಲೂ ಸಾಮಾನ್ಯರಿಗೆ ಶಕ್ಯವಿಲ್ಲ. ನಮಗೆ ಜಾಗರದಲ್ಲಿ ಅಸಹ್ಯವಾದುದೂ ಸ್ವಪ್ನದಲ್ಲಿ ತೋರಬಲ್ಲದು; ಅರ್ಥಾತ್ ಜಾಗರವನ್ನು ಸ್ವಾಧೀನಪಡಿಸಿಕೊಂಡಂತೆ ಸ್ವಪ್ನವನ್ನು ಕೈಯಲ್ಲಿಟ್ಟುಕೊಳ್ಳುವದು ಸಾಧ್ಯವಿಲ್ಲ. ಅದಕ್ಕಾಗಿ ಸಾಧನೆ ಬೇಕು. ಅದು ಸ್ವಾನುಭಾವಿಯ ಜೀವನ ಕ್ರಮದಲ್ಲಿ ಕಾಣಬಲ್ಲೆವು. ಸಾಹಿತಿಯಾದವನು ವೃತ್ತಿಜ್ಞಾನವನ್ನು ಹಸನಾಗಿ ಬಣ್ಣಿಸಬಲ್ಲನು, ಆದರೆ ಬದಲು ಮಾಡಲಾರನು. ಸಾಹಿತಿಯ ನೆರವಿನಿಂದ ಇಂದ್ರಿಯಸನ್ನಿಕರ್ಷಜ್ಞಾನದ ಹುರುಡನ್ನು ತಿಳಿದು ಪ್ರಾತಿಭಚಕ್ಷುರುನ್ಮೀಲನಕ್ಕೆ ಸ್ವಾನುಭಾವಿಯು ಗುರಿಯಿಡುವನು. ಅನಿಮಿಷದೃಷ್ಟಿಯನ್ನು ಅರಳಿಸಿಕೊಳ್ಳುವನು; ಅವನಲ್ಲಿ ಕುರುಹಿನ ಸೋಂಕಿನಿಂದ ಅರುಹು ಬೆಳಗುವ ಗೂಢವು ಪುಟಗೊಳ್ಳುವದು. ವಿಷಯಗ್ರಹಣಗೊಳ್ಳುವ ಇಂದ್ರಿಯ ಶಕ್ತಿಯು-ಸಾಂಖ್ಯರ ತನ್ಮಾತ್ರವು-ಚಿತ್‌ಪ್ರಕಾಶಶಕ್ತಿಯಲ್ಲಿ ಪರಿವರ್ತನಗೊಳ್ಳುವದು. ಅಂಥ ಸ್ವಾನುಭಾವಿಯಲ್ಲಿ ಶಿವಶರಣರ ಪ್ರಾಣಲಿಂಗಿಯ ನಿಲವನ್ನು ಅರಿಯಬಹುದು. ಅವನಲ್ಲಿ ಇಂದ್ರಿಯಗಳು ವಿಷಯಗಳತ್ತ ಸಾಗದೆ, ಅವನ ಅನಿಮಿಷ ದೃಷ್ಟಿಯ ಅರಳಿನಲ್ಲಿ ಅವನ ಪ್ರಾತಿಭಚಕ್ಷುರುನ್ಮೀಲನದಲ್ಲಿ ವಿಷಯಗಳ ಮತ್ತು ಅವಕ್ಕೆ ಸಂಬಂಧಿಸಿದ ದೇಶಕಾಲ ಅವಸ್ಥೆಗಳ ಅರಿವು ತಾನೆ ತಾನಾಗಿ ಸ್ಫುರಣಗೊಳ್ಳುವದು. ಅವನಲ್ಲಿ ಚಿತ್‌ಪ್ರಕಾಶದ ಪರಾಶಕ್ತಿಯು ತೊಳಗಿ ಬೆಳಗುವದು. 'ಎಲ್ಲರೊಳು ನೀನೆ ಇರುವೆ. ಎಲ್ಲವ ನೀ ವ್ಯಾಪಿಸಿರುವೆ' ಎಂಬ ಅನುಭವವು ಅವನಲ್ಲಿ ಕರಗಿಗೊಳ್ಳುವದು. ಅವನ ಈ ಜ್ಞಾನವು ಇಂದ್ರಿಯ

ಜನ್ಯಜ್ಞಾನವಲ್ಲ. ಆದ್ದರಿಂದ ಅದು ಅತಂತ್ರ ಜ್ಞಾನವಲ್ಲ. ಅದು ಗ್ರಂಥಸ್ಥವಾಗಿಹ ಆಗಮಜ್ಞಾನವಲ್ಲ; ಆದ್ದರಿಂದ ಶ್ರುತಜ್ಞಾನವೂ ಅಲ್ಲ. ಅದು ದೇವೋನ್ಮಾದದ ನಿರ್ಭರಗಿನಲ್ಲಿ ಹೊರಹೊಮ್ಮುವ ಶುದ್ಧಾತ್ಮಕನ ಅರಿವಿನ ವ್ಯವಹಾರದಲ್ಲಿ ತಲೆದೋರುವ ಸಮ್ಯಕ್‌ಜ್ಞಾನವು; ಆದ್ದರಿಂದ ಅದು ಸ್ವಾನುಭಾವಜ್ಞಾನವು. ಅತಿಮಾನಸವಿಜ್ಞಾನವೆಂದರೂ ಇದುವೇ! ಸಾಹಿತ್ಯವು ಗ್ರಂಥಸ್ಥವಾಗಬಲ್ಲದು; ಆದರೆ ಸ್ವಾನುಭಾವವು ಗ್ರಂಥಸ್ಥವಾಗಲು ಶಕ್ಯವಿಲ್ಲ. ಸ್ವಾನುಭಾವವು ಜೀವಂತ ವ್ಯಕ್ತಿಗಳ ಹೃದಯಸ್ಥವಾಗಿಹುದು. ಸಾಹಿತಿಯ ಜ್ಞಾನವು ವೃತ್ತಿಗೆ ಸಂಬಂಧಿಸಿಹುದರಿಂದ ಅದು ಖಂಡಿತವಾಗಿಹುದು, ಪರಿಮಿತವಾಗಿಹುದು, ಸ್ವಾನುಭಾವಿಗೆ ನಿಲುಕುವ ಜ್ಞಾನವು ಅಖಂಡವಾದುದು, ಅಪರಿಮಿತವಾದುದು, ಸ್ಫುರಣೆಯಿಂದ ಕೂಡಿದುದು, ತ್ವರಿತ ಗತಿಯುಳ್ಳದು; ಅವನ ಅರಿವಿನ ಕಣ್ಣೆರವಿನಲ್ಲಿ ಸೃಷ್ಟಿಯು ಕ್ಷಣಕ್ಷಣಕ್ಕೆ ಹೊಸಹೊಸದಾಗಿ ಕಂಗೊಳಿಸುವದು. ಸಾಹಿತಿಯಲ್ಲಿಯೂ ಸೃಷ್ಟಿಯನ್ನು ಹೊಸತಾಗಿ ಕಾಣುವ ನವದೃಷ್ಟಿಯಿದ್ದರೂ ಅದು ಸೃಷ್ಟಿಯನ್ನು ಇದ್ದಕ್ಕಿದ್ದಂತೆ ಕಾಣಲರಿಯದು. ದೋಷವಳಿದುಕೊಳ್ಳದ ಅವನ ದೃಷ್ಟಿಗೆ ಅದು ತಿರುವುಮುರುವಾಗಿ ತೋರುವದು. ದೃಷ್ಟಿಗಾವರಿಸಿದ ಮರಹಿನ ಪರಿಯು ಓರೆಯಾದ ಸಮ್ಯಕ್‌ಜ್ಞಾನಿಯ ದೃಷ್ಟಿಗೆ ಸೃಷ್ಟಿಯು ಇದ್ದಕ್ಕಿದ್ದಂತೆಯೇ ಕಾಣುವದು. ಮತ್ತು ಅವನ ಆ ದೃಷ್ಟಿಗೆ ಸೃಷ್ಟಿಯಲ್ಲಿಯ ನಾವೀನ್ಯತೆಯು ಸ್ಪಷ್ಟವಾಗುವದು. 'ದಿಟಪುಟಭಕುತಿ ಸಂಪುಟನೆಲೆಗೊಳ್ಳದಾಗಿ ಟೀವಕ ಟಂಬಕನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ' ಎಂಬುದು ಅವನ ಸುಜ್ಞಾನ ದೃಷ್ಟಿಗೆ ನಿಲುಕಿಹುದು. ಅದ್ದರಿಂದ ಸೃಷ್ಟಿಯ ಬಗೆಗೆ ಇಂಥ ಸಮ್ಯಕ್ ದೃಷ್ಟಿಯನ್ನು ಪಡೆಯುವದೇ ಸ್ವಾನುಭಾವಿಗೆ ಇಷ್ಟವಾಗಿಹುದು. ಅದ್ದರಿಂದ ಅವನು ಇಷ್ಟಲಿಂಗಪೂಜಕನು. ಅವನ ಆ ಅಖಂಡವಾದ, ಅಪರಿಮಿತವಾದ ಸ್ಫುರಣಾತ್ಮಕವಾದ, ತ್ವರಿತಗತಿಯ, ಸಮ್ಯಕ್‌ಜ್ಞಾನದ ದೆಸೆಯಿಂದ ಅವನು ಪರಿಪೂರ್ಣ ಜಂಗಮನೆನಿಸಿಕೊಳ್ಳುವನು. ಸಾಹಿತಿಗೆ ಜಡವಾದ ಇಂದ್ರಿಯಗಳ ಬಳಕೆಯಿಂದ ರಸಾಸ್ವಾದನೆ ಪಡೆಯುವದೇ (*Emotion*) ಜೀವನದ ಅತ್ಯಂತಿಕ ಗುರಿಯಾದರೆ, ಸ್ವಾನುಭಾವಿಗೆ ಅರುಹಿನ ಸೋಂಕಿನಿಂದ ಪಾರದರ್ಶಕವಾದ ಇಂದ್ರಿಯಗಳ ಬಳಕೆಯಿಂದ ನಿಟಿಲ ಭ್ರೂಮಧ್ಯದ ಸ್ಫಟಿಕ ವರ್ಣದ ಜ್ಯೋತಿಯಿಂದ, ಸ್ಫುರಣಾತ್ಮಕ ಜ್ಞಾನದಿಂದ,

ಸಮರಸ (*Intuition*) ಹೊಂದುವದೇ ಜೀವನದಲ್ಲಿ ಅವಶ್ಯವಾಗಿಹುದು. ಈ ಮೇಳದಲ್ಲಿ ಸಾಹಿತಿಯು ಮತ್ತು ಸ್ವಾನುಭಾವಿಯು ದೃಷ್ಟಿಗಳಲ್ಲಿ ಮೇಲು ಕೀಳುಗಳನ್ನರಿತುಕೊಳ್ಳಬಹುದು.

(ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿಯ ಸಾಹಿತ್ಯಸಮಿತಿಯವರು ಅಚ್ಚುಗೊಳಿಸಿದ ಹರಿಹರದೇವನ ರಕ್ಷಾಶತಕ, ಪಂಪಾಶತಕ ಇವನ್ನು ಶ್ರೀ ಕುಮಾರಸ್ವಾಮಿಗಳು ಪ್ರಕಟಗೊಳಿಸುವ ಅದೇ ಸಮಯದಲ್ಲಿ ಶತಕಗಳ ಬಗೆಗೆ ಆಗ ತಾನೇ ತಮಗೆ ಸ್ಫುರಣೆಗೊಂಡ ಸಂಗತಿಯನ್ನು ಹೀಗೆ ಹೇಳಿದರು.)

ಒಂದು ಇದು ಯಾವಾಗಲೂ ವ್ಯಕ್ತಿವಾಚಕವಾದುದು, ವಿಶ್ವದಲ್ಲಿ ಅಡಕವಾಗಿಹ ಸಂಗತಿಗಳನ್ನು ಒಂದೊಂದಾಗಿ ಗಣಿಸಬಹುದು. ಆದರೆ ಇಡಿಯ ವಿಶ್ವವು ಅಪಾರವಾದುದರಿಂದ ಅದು ನಮ್ಮ ತಿಳಿಯ ಅಳವಿಗೆ ಒಳಪಡದು. ಅದರ ಬಗೆಗೆ ನಮ್ಮ ದೃಷ್ಟಿಯು ಶೂನ್ಯತೆಗೊಳ್ಳುವದು. ಅದ್ದರಿಂದ ೧ ವ್ಯಕ್ತಿವಾಚಕವಾದರೆ. ೧ ರ ಮುಂದೆ ಬರುವ ಶೂನ್ಯದೊಡನೆ ತೋರುವ ೧೦ ವಿಶ್ವವಾಚಕವಾಗಿಹುದು. ಒಂದರ ಮುಂದೆ ಬರುವ ಶೂನ್ಯವು ವಿಶ್ವವು ಅನಂತವಾಗಿಹುದೆಂಬದನ್ನು ಸೂಚಿಸುವದು ಜೀವ ಜಗತ್ತುದೇವ. ಇವುಗಳಲ್ಲಿ ದೇವನು ಜೀವನಲ್ಲಿಲ್ಲ, ಅದರಂತೆ ಅವನು ಜಗತ್ತಿನಲ್ಲಿಯೂ ಇಲ್ಲ; ಅವನ ನಿಲವು, ವ್ಯಕ್ತಿವಿಶ್ವಗಳನ್ನು ಮೀರಿ ಅಚೆಗಿಹುದು. ಜೀವ ಭಾವವಳಿದಲ್ಲಿ, ಜಗತ್ತಿನ ಕಾಠಿಣ್ಯವು ಕರಗಿದಲ್ಲಿ ದೇವನ ನಿಲವನ್ನು ಅಳೆಯುಲು ಅವಕಾಶವನ್ನು ಕಲ್ಪಿಸಬಹುದು. ಆದರೆ ಅದು ಕೇವಲ ಕಲ್ಪನೆ! ದೇವನನ್ನು ಕಾಣಲಿರುವೆನು ಎಂಬ ಹಂಬಲದಲ್ಲಿ ಆನಂದವಿರುವಂತೆ ಕಂಡಬಳಿಕ ಆ ಆನಂದವಿಲ್ಲ. ಅದು ಪರ್ಯವಸಾನಗೊಳ್ಳುವದು. ಅದರಂತೆ ದೇವನ ನಿಲವೂ ಖಂಡಿತವಾಗುವದು. ಖಂಡಿತವಾದ ಮಾನವನ ಕಲ್ಪನೆಗೆ ದೇವನು ಮೂಲತಃ ಅಖಂಡನು, ಅಳತೆಗೆ ನಿಲುಕದವನು. 'ಅತ್ಯತಿಷ್ಠದ್ದಶಾಂಗುಲನು' ಎಂದು ಶ್ರುತಿಗಳು ದೇವನನ್ನು ವರ್ಣಿಸುವ ರಹಸ್ಯವೂ ಕೂಡ ಇದನ್ನೇ ವ್ಯಕ್ತಗೊಳಿಸುವದು. ರೂಪಕ್ಕೆ ನಿಲುಕದ ದೇವನನ್ನು ರೂಪಿಸಲು ಯತ್ನಿಸಿದರೆ, ಅದು ಶೂನ್ಯವೇ! ಜೀವ, ಜಗತ್ತು, ದೇವ-ವ್ಯಕ್ತಿ, ವಿಶ್ವ, ವಿಶ್ವೋತ್ತೀರ್ಣ ಪರಶಿವ ಇವುಗಳ ಗೂಢವನ್ನು ಎದುರಿಟ್ಟುಕೊಂಡೇ ಕವಿಗಳು ಶತಕದ ಸಾಹಿತ್ಯವನ್ನು ನಿರ್ಮಿಸಿರಬೇಕು. ಹರಿಹರದೇವನಾಗಲಿ ಇನ್ನಾವ ಮಹಾನುಭಾವಿಯಾಗಲಿ ಬರೆದಿಹ ಶತಕಗಳ ಗೂಢವು ಇಂತಿರಬೇಕು.

---

# ಆತ್ಮ ನಿರೀಕ್ಷಣೆ.

(ಲೇಖಕಃ—ಶ್ರೀ. ಜಿ. ಎಸ್. ಕಸ್ನೂರ.)



ಅಭ್ಯಾಸದ ಒಂದು ದಾರಿಯೆಂದರೆ ದಿನಾಲು ತನ್ನನ್ನು ತಾನೇ ಪರೀಕ್ಷಿಸುವದು. ದಿನದ ಎಲ್ಲ ಕೆಲಸಗಳು ತೀರಿದ ನಂತರ ಶಾಂತಚಿತ್ತನಾಗಿ ಈ ಪರೀಕ್ಷೆಯನ್ನು ನಡಿಸಬೇಕು. ಒಂದೊಂದು ಕರ್ತವ್ಯವಿದ್ದ ಭಾಗಗಳಿಗೆ ೧೦೦ಕ್ಕೆ ೫೦ ರಂತೆ ಗುಣಗಳನ್ನು ಕಲ್ಪಿಸಿ ಅದರಲ್ಲಿ ತಾನು ಆ ದಿನ ಎಷ್ಟು ಗುಣ ಪಡೆಯಲರ್ಹನೆಂಬದನ್ನು ನಿರ್ಣಯಿಸಬೇಕು. ಉದಹರಿಸುವದಕ್ಕಾಗಿ—

| ವಿಷಯ | ಒಟ್ಟು ಗುಣ | ಪಡೆದ ಗುಣಗಳು | ಶರಾ |
|---|---|---|---|
| ೧ ಪ್ರಕೃತಿಯ ಸುಧಾರಣೆ | ೧೦೦ | ೮೦ | ಅವಶ್ಯವಿದ್ದ ಎಲ್ಲ ಕ್ರಮವನ್ನು ಅನುಸರಿಸಿತು. ಆದರೆ ವ್ಯಾಯಾಮವು ಮಾಡುವಾಗ ಮನಸ್ಸುಗೊಡದ್ದರಿಂದ ಆಗುವಷ್ಟು ಪರಿಣಾಮವಾಗಲಿಲ್ಲ. ಮಿತ್ರನ ಗುಪ್ತ ಗೋಷ್ಠಿಯನ್ನು ಒಡೆದೆ. ಧ್ಯಾನ ಮಾಡಿದೆ. ಆದರೆ ಅದರಲ್ಲಿ ಮನಸ್ಸು ಇದ್ದಿಲ್ಲ. ಇತ್ಯಾದಿ |
| ೨ ಉದ್ಯೋಗ | ೧೦೦ | ೬೦ | |
| ೩ ನೈತಿಕ ಧೈರ್ಯ | ೫೦ | ೧೦ | |
| ೪ ಇಂದ್ರಿಯ ಸ್ವಾಧೀನತೆ | ೫೦ | ೪೫ | |
| ೫ ಅಧ್ಯಾತ್ಮ ಜ್ಞಾನ ಪ್ರಾಪ್ತಿ | ೧೦೦ | ೫ | |
| ೬ ಅಧ್ಯಾತ್ಮದ ಪ್ರಸ್ತುತ ಅಭ್ಯಾಸ | ೧೦೦ | ೨೫ | |
| | ೫೦೦ | ೨೨೫ | |

‘ಉದ್ಯೋಗವನ್ನು ತತ್ಪರತೆಯಿಂದ ಮಾಡಿದೆನೋ’ ಇಲ್ಲವೆ ‘ಮನಸ್ಸಿಲ್ಲದೆ ಅದು ಒಜ್ಜೆಯಂತಾಯಿತೋ’ ‘ಕೆಲಸದಲ್ಲಿ ಉಲ್ಲಾಸ ಸಮಚಿತ್ತಗಳು ಇದ್ದವೊ’ ಇಲ್ಲವೆ ‘ಕ್ಷೋಭ’ ಕಿರಿಕಿರಿ ಮಾಡುವದು ಇವು ಸೇರಿದ್ದವೋ’ ಇಲ್ಲವೆ ‘ಕೆಲಸ ಎಷ್ಟಾಯಿತು ? ಅದು ಯಶಸ್ವಿಯಾಯಿತೋ ಇಲ್ಲವೋ’ ಮುಂತಾದ್ದನ್ನು ಮುಂಜಾವಿನಿಂದ ಸಂಜೆಯ ವರೆಗೆ ಎಲ್ಲವೂ ನೆನಪು ಮಾಡಿಕೊಂಡು ನಿನಗೆ ಸರಿದೋರಿದಂತೆ ಹೆಚ್ಚು ಇಲ್ಲವೆ ಕಡಿಮೆ ಗುಣಗಳನ್ನು ಹಾಕಬೇಕು. ಏನಾದರೂ ತಪ್ಪು ಲಕ್ಷದಲ್ಲಿ ಬಂದರೆ ಅದನ್ನು ಮಾರ್ಜಿನದಲ್ಲಿ ಉಲ್ಲೇಖಿಸಬೇಕು.

ಅದರಂತೆಯೇ ನೈತಿಕ ಧೈರ್ಯದ ಕಾಲಮಿನಲ್ಲಿ ಅನ್ಯರಗೂಡ ವರ್ತಿಸುವಾಗ ದಾಕ್ಷಿಣ್ಯಕ್ಕೆ ಬಿದ್ದು ತಾನು ಮಾಡಬಾರದೆಂದು ನಿಶ್ಚಯಿಸಿದ್ದನ್ನು ಮಾಡಿದೆನೋ ಹೇಗೆ, ಸತ್ಯವನ್ನು ಬಚ್ಚಿಟ್ಟು ಮುಖಸ್ತುತಿ ಮಾಡಿದೆನೋ ಹೇಗೆ, ನಿಂದೆಗೆ ಕಿವಿಗೊಟ್ಟೆನೋ ಹೇಗೆ, ಎಂದು ಆಹೊತ್ತು ನಡೆದ ಆ ಸಂಗತಿಗಳನ್ನು ಪರೀಕ್ಷಿಸಿ ಗುಣಗಳನ್ನು ಹಾಕತಕ್ಕದ್ದು. ಮತ್ತು ಆದ ತಪ್ಪನ್ನು ಮಾರ್ಜಿನದಲ್ಲಿ ಬರೆಯಬೇಕು. ಅದರಂತೆ ಯಶಸ್ವಿಯಾಗಿ ಸಾಧಿಸಿದ ವಿಶೇಷ ಸಂಗತಿಗಳನ್ನೂ ಉಲ್ಲೇಖಿಸಬೇಕು. ಹೀಗೆಯೇ ತನಗೆ ಅವಶ್ಯವೆನಿಸಿದಷ್ಟು *heads* ಗಳನ್ನು ಮಾಡಿ ಗುಣ ಹಾಕುವ ಒಂದು ಪ್ರಮಾಣವನ್ನು ನಿರ್ಧರಿಸಿಡಬೇಕು. ಮತ್ತು ದಿನದಿನಕ್ಕೆ ಹೆಚ್ಚು ಹೆಚ್ಚು ಗುಣ ಪಡೆಯಲಿಕ್ಕೆ ಯತ್ನ ಮಾಡಬೇಕು. ಅಂತಃಕರಣ ಸಾಕ್ಷಿಯಾಗಿ ಮಾಡಿದ ಸ್ವಪರೀಕ್ಷೆಯಲ್ಲಿ ಪೂರ್ಣ ಯಶಸ್ವಿಯಾಗಲು ಹೆಣಗಿದರೆ ಪ್ರಗತಿಯು ಹಾಂ ಹಾಂ ಅನ್ನುವದಲ್ಲಿ ಆಗುವದು ನಿಃಸಂಶಯವು.

ಧನ-ಮಾಸ ಉದ್ಯೋಗಗಳ ವಿವಿಧತೆ, ಅಧ್ಯಾತ್ಮ ಪ್ರಗತಿಯಲ್ಲಿಯ ಹೆಚ್ಚು ಕಡಿಮೆ, ಇವುಗಳ ಯೋಗದಿಂದ ನಾವು ಮೇಲೆ ಸೂಚಿಸಿದ ಪರೀಕ್ಷೆಯ ವಿಷಯಗಳು ಹಾಗೂ ಗುಣ ಹಾಕುವ ಪ್ರಮಾಣಗಳು ಬೇರೆ ಬೇರೆ ತರವಾಗಿರಬಲ್ಲವೆಂಬದು ಸ್ಪಷ್ಟವದೆ. ಬೌದ್ಧಿಕ ಕೆಲಸ ಹೆಚ್ಚಾಗಿ ಮಾಡುತ್ತಿದ್ದವನ ಪಟ್ಟಿಯಲ್ಲಿ 'ಆರೋಗ್ಯ'ವು ಪ್ರಮುಖಸ್ಥಾನ ಪಡೆದಿದ್ದರೆ, ಕಾಯಕಷ್ಟದ ಮನುಷ್ಯನದು 'ಪುಸ್ತಕಗಳ ಅಭ್ಯಾಸ ಹಾಗು ವಾಚನಾಲಯದಲ್ಲಿ ಓದುವದು' ಮೇಲ್ಮೆ ಗಣಿಸಲ್ಪಡಬಹುದು. ಅಲ್ಪ ಆದಾಯವುಳ್ಳ ಮನುಷ್ಯನು ಸಂತೆ ಮಾಡುವದು ಹಾಗೂ ಮಿತವ್ಯಯಗಳಿಗೆ ಹೆಚ್ಚಿನ ಸ್ಥಾನ ಕೊಟ್ಟರೆ ಶ್ರೀಮಂತ ವ್ಯಾಪಾರಸ್ಥನು ಸಂಪತ್ತಿಯ ಸದ್ವ್ಯಯ, ಸತ್ಪಾತ್ರದಲ್ಲಿ ದಾನಗಳ ಬಗ್ಗೆ ಹೆಚ್ಚು ಗಮನ ಕೊಡಬೇಕಾಗಬಹುದು. ಪ್ರಾಥಮಿಕ ಸಾಧಕನು ಮೂರ್ತಿ ಧ್ಯಾನದಲ್ಲಿ ತೊಡಗಿ ಅಲ್ಲಿಯೇ ಎಲ್ಲ ಲಕ್ಷ ಪೂರೈಸುತ್ತಿದ್ದರೆ ಪ್ರೌಢ ಪರಮಾರ್ಥಿಯು ತುರೀಯಾವಸ್ಥೆಯನ್ನು ಸಾಧಿಸಲು ಯತ್ನಿಸುತ್ತಿರಬಹುದು. ಅವರೆಲ್ಲರೂ ತಮಗೆ ಅನ್ವಯಿಸುವಂತೆ ಮೇಲಿನ ಕೋಷ್ಟಕವನ್ನು ಅನ್ವಯಿಸುವದು ಉಚಿತ, ಅಲ್ಲ ಅವಶ್ಯವೇ ಇರುವದು. ಯಾವದು ಮುಖ್ಯವಿರುವದು ಅಲ್ಲಿ ಪ್ರತಿಯೊಬ್ಬನು ತನ್ನ ಹೆಜ್ಜೆಯು ಮುಂದಕ್ಕೆ ಬೀಳುವಂತೆ ಅಭ್ಯಾಸವನ್ನು ಅನುಸರಿಸುವದೇ ಇರುತ್ತದೆ.

ಮೇಲಿನ ಬರವಣಿಗೆಯು ಬರೇ ದಿನಗೆಲಸಗಳನ್ನು ಉಲ್ಲೇಖಿಸುವ ಅರ್ಥ ಶೂನ್ಯ ವಹಿಯಾಗದೆ ಪ್ರತ್ಯಕ್ಷ ಲಾಭ ನೀಡುವಂತೆ ಎಚ್ಚರ ತಕ್ಕೊಳ್ಳುವದು ಅವಶ್ಯವಿದೆ. ಅದು ಬರುತ್ತಿರುವ ಯಃಶಸ್ಸಿನ ಪ್ರಮಾಣವನ್ನು ಮತ್ತು ಇನ್ನು ಮುಂದೆ ತಾನು ಮಾಡಬೇಕಾದ ಉಪಾಯಗಳನ್ನು ತೋರಿಸುತ್ತಿರಬೇಕು. ಮತ್ತು ಇವನು ಆ ಅನುಭವದ ಬೆಳಕಿನಲ್ಲಿ ಗತಿಶೀಲನಾಗಬೇಕು. ಅಂದರೆ ಧ್ಯೇಯ ಸಾಧನೆಯು ಬೇಗನೆ ಪೂರ್ತಿಗೊಳ್ಳುವದರಲ್ಲಿ ಸಂದೇಹವಿಲ್ಲ.

ತಪ್ಪದೇ ದಿನಚರಿ ಬರೆಯುತ್ತಿದ್ದರೆ ನಾವು ಮೇಲೆ ಹೇಳಿದ ಆತ್ಮ ಪರೀಕ್ಷೆಯನ್ನು ಅದರಲ್ಲಿ ಸಮಾವೇಶ ಮಾಡಬಹುದು. ಇದೂ ಅಲ್ಲದೆ ದಿನಚರಿ ಇಡುವದರಿಂದಾಗುವ ಲಾಭಗಳನ್ನು ಯಥಾಕ್ರಮವಾಗಿ ಹೇಳುವವರೇ ಇದ್ದೇವೆ.

---

## ಪರದ್ರವ್ಯವನ್ನಪಹರಿಸಬಾರದು.

(ಲೇಖಕಃ— ಶಿವಮೂರ್ತಿ.)

ಪರದ್ರವ್ಯವನ್ನಪಹರಿಸದಿರುವದೇ ಶಿವಶರಣರ ಎರಡನೆಯ ಆಚಾರ. ಮನುಷ್ಯನು ತನ್ನ ಸ್ವಾರ್ಥಕ್ಕಾಗಿ ಹೆರವರ ಸೊತ್ತನ್ನಪಹರಿಸುವದು ದೊಡ್ಡ ಪಾಪವು. ಪರರ ದ್ರವ್ಯವನ್ನಪಹರಿಸಬಾರದೆಂಬ ಮಾತೇನೋ ಸುಲಭ. ಆದರೆ ಜಗತ್ತಿನಲ್ಲಿ ಹೆರವರ ಸೊತ್ತನ್ನು ಹರಣ ಮಾಡುವದಕ್ಕಾಗಿ ಎತ್ತ ನೋಡಿದತ್ತ ಕೋಲಾಹಲವು ನಡೆದಿರುವದಲ್ಲ! ಇದಕ್ಕೇನೆನ್ನಬೇಕು? ತಮ್ಮ ಹೊಟ್ಟೆಗೆ ದುಡಿಯಲಾರದೆ ಸೋಮಾರಿಗಳೂ, ಲಜ್ಜೆಗೇಡಿಗಳೂ ಆದ ಬೀದಿಯ ಭಿಕಾರಿಗಳೆಷ್ಟೋ ಜನರು ಹೆರವರ ದುಡ್ಡಿಗಾಗಿ ಅಂಗಲಾಚಿ ಬಾಯಿ ತೆರೆದು ಅದನ್ನು ಸೆಳೆಯುತ್ತಿರುವರಲ್ಲವೇ? ಹಾದಿಯಲ್ಲಿ ಹೋಗುವಾಗ ಅಕಸ್ಮಾತ್ ಹೆರವರ ಬಂಗಾರ ದೊಡವೆಗಳಾಗಲಿ ನೋಟು ರೂಪಾಯಿಗಳಾಗಲಿ ಕಣ್ಣಿಗೆ ಬಿದ್ದಿದ್ದರೆ ಅತ್ತಿತ್ತ ನೋಡಿ ಯಾರೂ ಕಾಣದಿದ್ದರೆ ಅವುಗಳನ್ನು ತಮ್ಮ ಕಿಸೆಯಲ್ಲಿ ಹಾಕಿಕೊಳ್ಳದವರಾರು? ದುಡ್ಡಿಲ್ಲದೆ ಲಕ್ಷಾಂತರ ಜನಗಳು ಉಪವಾಸ ಸಾಯುತ್ತಿರುವಾಗ ನಾಳೆ ತನ್ನ ಹೆಂಡಿರು ಮಕ್ಕಳಿಗೆ ಬಂದೀತೆಂದು

ಬಡವರ ಹೊಟ್ಟೆಯ ಮೇಲೆ ಬಡೆದು ಧನಕೂಡಿ ಹಾಕುವ ಜನರೆಷ್ಟೋ ಬೇಕು? ಹೆರವರು ಹೂಳಿಟ್ಟ ಧನವು ಅಕಸ್ಮಾತ್ ಲಭಿಸಿದರೆ ಅದನ್ನು ತಮಗಾಗಿ ಬಚ್ಚಿಟ್ಟುಕೊಳ್ಳದವರುಂಟೇ? ಪರರ ದುಡ್ಡಿನಾಶೆಗಾಗಿ ವ್ಯಾಪಾರಸ್ಥರು ಸಾಮಾನುಗಳನ್ನು ತುಟ್ಟಿಯಿಂದ ಮಾರಿ ಲಾಭಪಡೆಯು ತ್ತಿರುವರಲ್ಲವೇ? ಶ್ರೀಮಂತರು ಪರಧನದಾಸೆಯಿಂದ ಮಿತಿಮೀರಿ ಬಡ್ಡಿ ತಿಂದು ಹೆರವರ ಹೊಲಮನೆಗಳನ್ನೆಲ್ಲ ಎತ್ತಿಹಾಕುತ್ತಿರುವದು ಅರಿ ಯದ ಮಾತೇ? ಸಮಾಜ, ಸಂಸ್ಥೆ, ರಾಷ್ಟ್ರ ಹಿತಕ್ಕೆಂದು ಅನ್ಯರಿಂದ ದ್ರವ್ಯವನ್ನು ಶೇಖರಿಸಿ ತನ್ನ ಅಡಚಣಿಗಾಗಿ ಅದನ್ನು ಎತ್ತಿ ಹಾಕದ ಜನರೆಷ್ಟು ಮಂದಿ ಇದ್ದಾರೆ? ನೌಕರಿ ಮಾಡುವಾಗ ಹೆರವರು ಲಂಚ ಕೊಟ್ಟರೆ ಅದನ್ನು ಮುಟ್ಟಬಾರದೆಂಬ ನೈತಿಕ ಬೆಂಬಲವಾರಿಗುಂಟು? ಪಾಪ! ಬಡ ಜನಗಳಿಗೆಂದು ಬರಗಾಲದಲ್ಲಿ ಡೋಲು, ಕಾಳುಕಡಿಗಳನ್ನು ಕೊಟ್ಟರೆ ಅದರಲ್ಲಿ ಸಹ ತಮ್ಮ ಪಾಲನ್ನು ಸಾಧಿಸುವ ಅಧಿಕಾರಿಗ ಳೆಷ್ಟೋ ಇರುವರಲ್ಲ! ವರದಕ್ಷಿಣೆಯ ಹೆಸರಿನಿಂದ ಮಾವನ ದುಡ್ಡನ್ನು ಸೆಳೆಯದ ಅಳಿಯನುಂಟೇ? ತೆರವನ್ನು ಮುಂದೆ ಮಾಡಿ ಪರಧನಕ್ಕೆ ಮಗಳನ್ನು ಮಾರುವ ಕನ್ಯಾಪಿತೃಗಳೆಷ್ಟೋ ಇರುವರಲ್ಲವೇ? ನಾನು ಕುಲಗುರು ಮಠದ ಸ್ವಾಮಿಯೆಂಬ ದರ್ಪವನ್ನು ತೋರಿಸಿ ಶಿಷ್ಯರಿಂದ ಒತ್ತಾಯ ಮಾಡಿ ದ್ರವ್ಯ ಅಪಹರಿಸುತ್ತಿರುವರಲ್ಲ! ಮುನಸಿಪಾಲಿಟಿ, ಲೋಕಲ್ ಬೋರ್ಡ, ಕಾಯಿದೆ ಕೌನ್ಸಿಲ್ಲುಗಳ ಚುನಾವಣಿಗೆ ನಿಂತ ಉಮೇದವಾರರ ಕಡೆಯಿಂದ ದುಡ್ಡು ಸೆಳೆಯದ ಮತದಾರರೆಷ್ಟು? ಎಷ್ಟೋ ಜನರು ಶ್ರೀಮಂತರ ಗೆಳೆತನ ಕಟ್ಟಿ ಚಹಾ, ಫರಾಳ, ಪಾರ್ಟಿ ಮೇಜವಾನೆಗಳ ಮುಖಾಂತರವಾಗಿ ಅವರ ದುಡ್ಡನ್ನು ಸದೆಬಡೆಯು ತ್ತಿರುವದಿಲ್ಲವೇ? ಸ್ವಾಮಿಯ ಅಥವಾ ಸಂಸ್ಥೆಯ ಸೇವಾ ಕಾರ್ಯವನ್ನು ಪ್ರಮಾಣಿಕ ರೀತಿಯಿಂದ ಮಾಡದೆ ಮೈಯುಳಿಸಿಕೊಂಡು 'ಹರಾಮು' ತಿನ್ನುವ ನೌಕರರೆಷ್ಟಿಲ್ಲ? ತನಗಿಲ್ಲೆಂದು ಗೆಳೆಯರಿಗೆ ಬಾಯ್ತೆರೆದು ಹಣ ವನ್ನು ಕಡ ತಂದು ಅದನ್ನು ತಿರುಗಿ ಕೊಡುವ ಪ್ರಸಂಗ ಬಂದಾಗ ಮೋರೆ ತಪ್ಪಿಸಿ ಕರೆ ಮೋರೆ ಕಟ್ಟಿಕೊಳ್ಳುವ ಜನರೆಷ್ಟಿಲ್ಲ? ತನ್ನ ದೇಶದ ಸ್ವಾರ್ಥಕ್ಕಾಗಿ ಪರದೇಶದ ವ್ಯಾಪಾರ, ಪೇಟೆ, ಸಂಪತ್ತುಗಳನ್ನು ಹರಣ ಮಾಡುತ್ತಿರುವ ರಾಷ್ಟ್ರಗಳು ನಮ್ಮ ಕಣ್ಮುಂದೆ ಕುಣಿಯುತ್ತಿರುವದಿಲ್ಲವೇ? ಈ ರೀತಿಯಾಗಿ ಒಂದಿಲ್ಲೊಂದು ತರದಿಂದ ಹೆರವರ ಸೊತ್ತನ್ನು ಅಪ

ಹರಿಸುವ ಕಾರ್ಯಗಳು ನಡೆದಿರುವಾಗ ಪರದ್ರವ್ಯವನ್ನಪಹರಿಸಬಾರದೆಂಬ ಶರಣರ ನುಡಿಯು ಎಲ್ಲಿಗೆ ಮುಟ್ಟಬೇಕು? ಆದರೆ ಸತ್ಯಕ್ಕೆ ಸಾವಿಲ್ಲವಷ್ಟೇ? ಅನ್ಯಾಯದ ಗಳಿಕೆ ಅಡವೀಪಾಲು ಎಂಬಂತೆ ಪರರ ಸೊತ್ತನ್ನು ಸೆಳೆದು ಜೀವಿಸುವ ಪ್ರಾಣಿಗಳಿಗೆ ಒಂದಿಲ್ಲೊಂದು ಪರಿಯಿಂದ ಅಳಿಗಾಲವು ಕಟ್ಟಿಟ್ಟದ್ದೇ. ಇವತ್ತು ಸುಖ ದೊರೆತರೆ ನಾಳೆ ದುಃಖವು ಬಂದೇ ಬರುವದು. ಈಗಿನ ಯುದ್ಧವೇ ಇದಕ್ಕೆ ಪ್ರಬಲವಾದ ಉದಾಹರಣೆಯು. ಇದನ್ನರಿತು ಶಿವಶರಣರು ಇಂಥ ಯಾವ ಪರದ್ರವ್ಯಾಪಹಾರದ ಕೆಲಸಕ್ಕೂ ಕೈಹಾಕಲಿಲ್ಲ. ಅವರು ನಿತ್ಯ ಶುದ್ಧ ಕಾಯಕದಿಂದ ದ್ರವ್ಯವನ್ನು ಗಳಿಸಿ ಗುರುಲಿಂಗಜಂಗಮ ದಾಸೋಹಮಾಡಿ ಅರ್ಥಾತ್ ಸತ್ಕಾರ್ಯಕ್ಕೆ ಅದರ ಬಹುಭಾಗವನ್ನು ಸಲ್ಲಿಸಿ ಮಿಕ್ಕ ಸ್ವಲ್ಪ ಪ್ರಸಾದದಿಂದ ತೃಪ್ತರಾಗಿ ಜೀವಿಸುತ್ತಿದ್ದರು. ಶರಣರ ಪಾಠವನ್ನೇ ಬಹು ಜನರು ತಿಳಿದರೆ ಜಗತ್ತಿನಲ್ಲಿ ಹೋರಾಟವೇಳಲು ಶಕ್ಯವೇ? ಜಗತ್ತೆಲ್ಲ ಸುಖ ಶಾಂತಿಯ ತೌರಮನೆಯಾಗುವದು.

ಪರದ್ರವ್ಯವನ್ನು ಮುಟ್ಟಬಾರದೆಂಬ ವಿಷಯದಲ್ಲಿ ಶರಣರು ಎಷ್ಟು ಜಾಗರೂಕರಾಗಿದ್ದರೆಂಬದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ. ಈ ಜಗತ್ತಿನಲ್ಲಿ ಪರಧನವು ಅನಾಯಾಸವಾಗಿ ಕೈಗೆ ಸಿಕ್ಕರೆ ಒಲ್ಲೆನೆಂಬುವರಿಲ್ಲ. ಸುಳ್ಳನ್ನಾಡಿ ಅದನ್ನು ಎತ್ತಿಹಾಕಲಿಕ್ಕೆ ಹವಣಿಸುವವರೇ ಬಹು ಜನರು. ಆದರೆ ಶಿವಶರಣರು ಅಂಥ ಅಳಿಮನಸ್ಸಿನವರಲ್ಲ. ಅವರ ಹಾದಿಯಲ್ಲಿ ಹೆರವರ ಬಂಗಾರ ವಸ್ತ್ರಗಳು ಬಿದ್ದಿದ್ದರೆ ಅವರು ಅವುಗಳನ್ನು ಕಣ್ಣೆತ್ತಿ ನೋಡುವವರಲ್ಲ. ಮೌಳಿಗೆಯಮಾರಯ್ಯ, ಆಯ್ದಕ್ಕಿಮಾರಯ್ಯ ಈ ಶರಣರು ಬಡವರೆಂದು ತಿಳಿದು ಬಸವಣ್ಣನವರು ಕನಿಕರಹುಟ್ಟಿ ಹೊನ್ನಿನ ಚೀಲವನ್ನು ಅವರಿಗೆ ತಿಳಿಯದಂತೆ ಅವರ ಮನೆಯಲ್ಲಿರಿಸಿರಲು ಆ ಶರಣರು ಆ ಹಣವನ್ನು ಕಸದಂತೆ ಉಡುಗಿಬಿಟ್ಟರು. ಕೆಲವರು ಹೆರವರ ದುಡ್ಡು ನುಂಗಿ ಬಂದ ಪಾಪವನ್ನು ಕಳೆದುಕೊಳ್ಳಲಿಕ್ಕೆ ನದಿಯಲ್ಲಿ ಮುಳುಮುಳುಗಿ ಏಳುವರು. ಅಂಥವರ ವಿಷಯವಾಗಿ ಬಸವಣ್ಣನವರು ಹೇಳುವದೇನಂದರೆ "ತೊರೆಯ ಮೀವ ಅಣ್ಣಗಳಿರಾ, ತೊರೆಯಿರೋ ಪರಧನವ. ಪರದ್ರವ್ಯವ ಅಪಹರಿಸಿ ತೊರೆಯಲ್ಲಿ ಮಿಂದರೆ ಆ ತೊರೆಯೆಲ್ಲ ಬರುದೊರೆ ಕಂಡಯ್ಯಾ. ಕಳವ ತೊರೆದರೆ ಒಲಿವ ನಮ್ಮ ಕೂಡಲಸಂಗಮದೇವಾ."

ಕೆಲವರು ಲಿಂಗಪೂಜೆಯ ಆಡಂಬರವನ್ನು ಬೆಳೆಯಿಸಿ ಭಕ್ತರ ಕಡೆಯಿಂದ ದುಡ್ಡು ಎತ್ತಿಹಾಕುವ ಸೋಗುಹಾಕುವರು. ಅಂಥವರ ಬಗ್ಗೆ ಬಸಣ್ಣನವರು ಹೇಳುವದೇನಂದರೆ "ಕುಳಿತು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ. ಲೋಗರರ್ಥವ ಕದಿವ ಕಳ್ಳರ ಕೈಯ್ಯ ಪೂಜೆಯನೊಲ್ಲ ನಮ್ಮ ಕೂಡಲಸಂಗಮದೇವಾ."

ಶರಣರಿಗೆ ಪರವಸ್ತುವೇ ದೊಡ್ಡ ಸಂಪತ್ತಾಗಿರಲು ಬೇರೆ ಐಹಿಕ ಸಂಪತ್ತಿಗೆಂದಿಗೂ ಅವರು ಆಶೆಮಾಡಲಾರರು. ಊರ ಮುಂದೆ ಹಾಲಿನ ಹಳ್ಳವು ಹರಿಯುತ್ತಿದ್ದರೆ ಹಾಲಿನಾಶೆಯಿಂದ ಜನರು ಅದನ್ನು ತೆಗೆದು ಕೊಳ್ಳದಿರುವರೇ? ಆ ವಸ್ತುವು ತಮ್ಮದಲ್ಲವೆಂದು ನಾಚಿಕೆಪಡುವರೇ? ಆದರೆ ಬಿಜ್ಜಳ ಭಾಂಡಾರವೆಲ್ಲ ಬಸವಣ್ಣನವರ ಕೈಯಲ್ಲಿ ಆಡುತ್ತಿದ್ದರೂ ಅವರಿಗೆ ಅದನ್ನು ಅಪಹರಿಸಬೇಕೆಂಬ ಮನಸ್ಸಾಗದೆ ನುಡಿದುದೇನಂದರೆ "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ. ಅದನ್ನು ಕೊಳ್ಳಬೇಕೆಂದು ಲಜ್ಜೆಗೆಡಲೇಕಯ್ಯಾ? ಕೂಡಲಸಂಗಮದೇವರೆನ್ನ ದೊಡ್ಡ ಸಂಪದವಾಗಿರಲು ಬಿಜ್ಜಳನ ಭಾಂಡಾರವೆನಗೇಕಯ್ಯಾ"

ಶರಣರು ತಮ್ಮ ಸ್ವಾರ್ಥಕ್ಕಾಗಿ ಪರರ ಸೇವೆ ಮಾಡುವವರಲ್ಲ. ಆದರೆ ಗುರುಲಿಂಗಜಂಗಮ ದಾಸೋಹಕ್ಕಾಗಿಯೇ ಮಾಡುವರೆಂಬ ಮಾತನ್ನು ಯಾರೂ ಮರೆಯಲಾಗದು. ಒಮ್ಮೆ ಕೆಲವು ಜಂಗಮರು ಬಸವಣ್ಣನವರಿಗೆ ಹೊನ್ನಿನಾಶೆಗಾಗಿ ಬಸವನನ್ನು ಭವಿಯಾದ ಬಿಜ್ಜಳನ ಮಂತ್ರಿಪದವನ್ನು ಕೈಕೊಂಡನೆಂದು ಹಂಗಿಸಿ ನುಡಿದರು. ಆಗ ಬಸವಣ್ಣನವರು ಹೇಳಿದುದೇನಂದರೆ— "ಭವಿ ಬಿಜ್ಜಳನ ಗದ್ದುಗೆಯ ಕುಳ್ಳಿರ್ದು ಓಲಯಿಸಿಹನೆಂಬರಯ್ಯ ಪ್ರಮಥರು. ಕೊಡುವೆನು ಮಾರುತ್ತರವನವರಿಗೆ. ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದೊಡೆ ನಿಮ್ಮಾಣೆಯಯ್ಯಾ ಕೂಡಲಸಂಗಮದೇವಾ" "ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು ಎನ್ನೊಡಲಿಗೆಂದು ಮಡದಿಮಕ್ಕಳಿಗೆಂದು ಮಾನವರ ಬೇಡೆನಯ್ಯಾ ಕೂಡಲಸಂಗಮದೇವಾ." ಶಿವಶರಣರು ಪರಿಶುದ್ಧಕಾಯಕಮಾಡಿ ದುಡ್ಡು ಗಳಿಸಿದರೂ ಕೂಡ ಅದರಲ್ಲಿ ಸ್ವಾರ್ಥದ ಲವಲೇಶವೂ ಇಲ್ಲವೆಂದು ಬಸವಣ್ಣನವರ ವಚನದಿಂದ ಸಿದ್ಧವಾಗುವದಿಲ್ಲವೇ?

ನಾಳೆ ತಮಗೆ ತಮ್ಮ ಹೆಂಡರುಮಕ್ಕಳಿಗೆ ಬಂದೀತೆಂದು ಶರಣರು ಧನವನ್ನು ಕೂಡಿಹಾಕುವವರಲ್ಲ. ಇವತ್ತು ಒಬ್ಬರ ಹೊಟ್ಟೆಗೆ ಸಲ್ಲತಕ್ಕ ಹಣವನ್ನು ನಾಳೆ ನಮ್ಮ ಸಲುವಾಗಿ ಕೂಡಿಡುವದು ಪಾಪವೇ ಸರಿ. ಇವತ್ತಿಗೆ ಕೊಟ್ಟ ಶಿವನು ನಾಳೆ ಹೆಂಡಿರು ಮಕ್ಕಳಿಗೆ ಕೊಡಲಾರನೇ? ದೇವರಲ್ಲಿ ವಿಶ್ವಾಸವಿಲ್ಲವೇ? ಹುಟ್ಟಿಸಿದ ಶಿವನು ಹುಲ್ಲು ಮೇಯಿಸುವನೇ? ಹೆಂಡರು ಮಕ್ಕಳ ಚಿಂತೆ ಮಾಡಲಿಕ್ಕೆ ನಾವಾರು? ಈ ಬಗ್ಗೆ ದೇವರ ದಾಸಿಮಯ್ಯಗಳು ಅಪ್ಪಣೆಕೊಡಿಸಿರುವದೇನಂದರೆ "ಇಂದಿಗೆಂತು ನಾಳಿಗೆಂತು ಎಂದು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ?" ಕ್ರೈಸ್ತನು ದೇವರಿಗೆ ಇಷ್ಟೇ ಬೇಡಿಕೊಂಡಿದ್ದಾನೆ. "ದೇವಾ, ನನಗೆ ಇವತ್ತಿನ ರೊಟ್ಟಿಯನ್ನಷ್ಟೇ ಕೊಡು." ಯಾವ ಪಶುಪಕ್ಷಿಗಳೂ ತಮ್ಮ ಮಕ್ಕಳಮರಿಗಳಿಗೆ ನಾಳಿಗೆಂದು ಕೂಡಿಡುವದಿಲ್ಲ. ಹಣವನ್ನು ಕೂಡಿಡುವದೆಂದರೆ ಕೆಲವು ಬಡಜೀವಿಗಳ ಪ್ರಾಣಘಾತಮಾಡಿದಂತೆಯೇ ಸರಿ. ಕೋಟ್ಯಾಧೀಶರ ಬೊಕ್ಕಸದಲ್ಲಿ ಹಣವು ಕಿಕ್ಕಿರಿದು ತುಂಬಿದ್ದರಿಂದಲೇ ಬಡವರ ಒಡಲುಗಳು ಕಕ್ಕಸಬಡುತ್ತಿರುವವಲ್ಲವೇ?

ದುಡ್ಡು ಗಳಿಸುವದಷ್ಟೇ ಮನುಷ್ಯನ ಅಂತಿಮ ಧ್ಯೇಯವಲ್ಲ. ದುಡ್ಡಿನ ಆಶೆಯುಳ್ಳವರು ಒಬ್ಬರ ಅಧೀನದಲ್ಲಿರುವರು. ದುಡ್ಡಿನ ಸವಿಯು ತಲೆಗೇರಿದರೆ ಮನುಷ್ಯನು ಪರಮಾತ್ಮನನ್ನು ಮರೆತು ದುಡ್ಡಿನ ಬೆನ್ನು ಹತ್ತುತ್ತಾನೆ. ಆದುದರಿಂದ ದುಡ್ಡಿನಾಶೆ ಮಾಡುವದಾದರೂ ಪರದ್ರವ್ಯಾಪಹರಣದಷ್ಟೇ ಪಾಪವು. ಆದುದರಿಂದ ದ್ರವ್ಯದಾಶೆಯಿರಬಾರದೆಂದೇ ಶರಣರು ಈ ಪ್ರಕಾರ ಅಪ್ಪಣೆಕೊಡಿಸಿದ್ದಾರೆ.

"ಆಶೆಯುಳ್ಳಾತ ಒಬ್ಬರ ಆಧೀನದಲ್ಲಿಪ್ಪನು. ಆಶೆಯೇ ದಾಸತ್ವ, ನಿರಾಶೆಯೇ ಈಶತ್ವ, ಅದುಕಾರಣ ನಿರಾಶೆಯಾಗಿರ್ಪುದೇ ಈಶಪದವಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ." ಒಬ್ಬ ಆಂಗ್ಲ ಕವಿಯು ದುಡ್ಡಿನಾಶೆಯ ಬಗ್ಗೆ ಹೇಳಿದ್ದರ ಸಾರಾಂಶವೇನಂದರೆ "ಕೆಲವರಿಗೆ ವಿಪುಲ ಧನವಿರುತ್ತದೆ. ಆದಾಗ್ಯೂ ಮತ್ತಿಷ್ಟು ಬರಲೆಂದು ಆಶೆಮಾಡುತ್ತಾರೆ. ಆದರೆ ನನಗೆ ಸ್ವಲ್ಪೇ ಹಣವುಂಟು. ಆದಾಗ್ಯೂ ಹೆಚ್ಚಿನಾಶೆ ನನಗಿಲ್ಲ. ಬಹಳ ಸಂಪತ್ತಿದ್ದೂ ಹೆಚ್ಚಿಗಾಶೆಮಾಡುವವರೇ ಬಡವರು. ಸ್ವಲ್ಪೇ ಸಂಪತ್ತಿದ್ದರೂ ನಿರಾಶೆಯಾಗಿರುವವರೇ ಧನಿಕರು."

ಅನೇಕರು ತಮ್ಮ ಮನಸ್ಸು ದುರ್ಬಲವಾದದ್ದೂ ಆಶೆಬುರುಕನಾದದ್ದೂ ಎಂದು ಹೇಳದೆ ಹೊನ್ನು ಹೆಣ್ಣು ಮಣ್ಣು ಇವು ಮಾಯವುಳ್ಳವುಗಳು. ಇವು ಮನುಷ್ಯನನ್ನು ಆಶೆಯೆಂಬ ಪಾಶದಲ್ಲಿ ಕೆಡವಿ ಗಾಸಿಗೊಳಿಸುತ್ತವೆ ಎಂದು ಹೇಳುವದುಂಟು. ಈ ಮಾತಿಗೆ ಶರಣರು ಉತ್ತರಕೊಡುವದೇನಂದರೆ "ಹೊನ್ನು ಹೆಣ್ಣು ಮಣ್ಣು ಮಾಯೆಯೆಂಬರು. ಇವಾವೂ ಮಾಯೆಯಲ್ಲ. ಮನದ ಮುಂದಣಾಶೆಯೇ ಮಾಯೆ ಕಾಣಾ ಗುಹೇಶ್ವರಾ."

ಮನುಷ್ಯನು ತಾನು ಗಳಿಸಿದ್ದನ್ನು ತಾನೇ ಉಣ್ಣುವದು ಪಾಪವು. ಅವನು ತನ್ನ ಬಂಧುಬಳಗ ದೈವದವರೊಂದಿಗೆ ಊಟಮಾಡಬೇಕೆಂದು ಶರಣರು ಹೇಳಿದ್ದಾರೆ. ಇಂಥ ಉದಾರ ಬುದ್ಧಿಯು ಈಗಿನ ಮನ್ವಂತರದಲ್ಲಿ ಲೋಪವಾಗಿದೆ. "ಕಾಗೆಯೊಂದಗಳು ಕಂಡರೆ ಕೂಗಿ ಕರೆಯದೇ ತನ್ನ ಬಳಗವನೆಲ್ಲವನು? ಕೋಳಿಯೊಂದು ಗುಟುಕು ಕಂಡರೆ ಕರೆಯದೇ ತನ್ನ ಕುಲವನ್ನೆಲ್ಲವನು? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ ಕಾಣಾ ಕೂಡಲಸಂಗಮದೇವಾ" ಎಂದು ಬಸವಣ್ಣನವರು ಹೇಳಿರುವರು.

ಮನುಷ್ಯನಿಗೆ ಸಂಪತ್ತುಬರಬೇಕಾದರೆ ಅವನ ಪ್ರಯತ್ನ ಪೂರ್ವಜನ್ಮದ ಪುಣ್ಯಗಳಷ್ಟೇ ಸಾಲವು. ಆತನಿಗೆ ಪರಶಿವನ ಕೃಪೆಯು ಬೇಕಾಗುತ್ತದೆ. ಆತನ ಕೃಪೆಯು ತಪ್ಪಿದರೆ ಲಕ್ಷ್ಮಿಯು ಕ್ಷಣಮಾತ್ರದಲ್ಲಿ ಕಣ್ಮರೆಯಾಗುವಳು. ಇದನ್ನರಿತು ಶರಣರು ಸಿರಿಯನ್ನು ನಚ್ಚದೆ ಪರವಸ್ತುವನ್ನೇ ನಂಬುವರು. ಶರಣರು ದ್ರವ್ಯದಾಶೆಯನ್ನು ಪರವಸ್ತುವಿನ ಕಡೆಗೆ ಹೊರಳಿಸಿ ತಮ್ಮ ಜೀವನವನ್ನು ಉದಾತ್ತಗೊಳಿಸಿದ್ದಾರೆ. ಪರಶಿವನ ಕೃಪಾಕೃಪೆಗಳಿಂದಾಗುವ ಲಾಭನಷ್ಟಗಳ ವಿಷಯವಾಗಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ— "ಹರನೀವಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ. ನೆರೆಯದ ವಸ್ತು ನೆರೆವುದು ನೋಡಯ್ಯಾ. ಅರಸುಪರಿವಾರ ಕೈವಾರ ನೋಡಯ್ಯಾ. ಪರಮನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯು ಕಲ್ಲು ಕೊಂಡಂತೆ ಕೂಡಲಸಂಗಮದೇವಾ." ಅದು ಕಾರಣ 'ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ. ಸಿರಿಯೆಂಬುದು ಕನಸಿನ ಪರಿಯಂತೆ

ನೋಡಾ ಎಲೋ ಮರುಳಮಾನವಾ, ಇದನರಿತು ಶ್ರೀಮಹಾದೇವನ ಪೂಜಿಸಿದೊಡೆ ಸ್ಥಿರವಾದ ಪದವಿಯುನೀವನೆಂಬುದಾಗಿ ಶರಣರು ಹೇಳಿದ್ದಾರೆ.

ಇದನ್ನು ತಿಳಿದೂ ತಿಳಿದೂ ಮನುಷ್ಯನು ದೇವರನ್ನು ಮರೆದು ದುಡ್ಡಿನ ಬೆನ್ನುಹತ್ತುತ್ತಿರುವದು ಆಶ್ಚರ್ಯವೇ ಸರಿ. "ಕಾಂಚನವೆಂಬ ನಾಯನೆಚ್ಚಿ ನಾನು ನಿಮ್ಮನು ಮರೆದೆನಯ್ಯಾ, ಕಾಂಚನಕ್ಕೆ ವೇಳೆಯುಲ್ಲದೆ ಲಿಂಗಕ್ಕೆ ವೇಳೆಯಿಲ್ಲಯ್ಯಾ. ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯು ಬಲ್ಲುದೇ ಕೂಡಲಸಂಗಮದೇವಾ." ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ.

ದುಡ್ಡನ್ನು ನಚ್ಚಿ ಕೆಡಬೇಡಿರೆಂದು ಶರಣರು ನಮಗೆ ಈ ರೀತಿಯಾಗಿ ಎಚ್ಚರಿಕೆ ಕೊಟ್ಟಿದ್ದಾರೆ. "ನಾವು ಪಡೆದ ದ್ರವ್ಯವು ನಮ್ಮದೆಂದು ನೆಚ್ಚಬೇಡಿರೋ ಎಲೆ ಹುಚ್ಚ ಮಾನವರಿರಾ, ಅವು ನಿಮ್ಮೊಡವೆಯಾದೊಡೆ ನೀವು ಮಡಿದು ಹೋಗುವಾಗ್ಗೆ ನಿಮ್ಮ ಹಿಂದೆ ಬರ್ಪವೇ? ಹೇಳಿರೋ? ಇದನರಿತು ಮೃಡನ ಸೇವೆಯಲ್ಲಿ ತೊಡಗಿದರೆ ಕಡೆಮೊದಲಿಲ್ಲದ ಪದವು ದೊರೆಕೊಂಬುದು ಅಖಂಡೇಶ್ವರಾ."

ಆದುದರಿಂದ ಶಿವನು ಕೊಟ್ಟ ದುಡ್ಡನ್ನು ಶಿವಕಾರ್ಯಕ್ಕೆ ಸಲ್ಲಿಸದೆ ಆತ್ಮಪುತ್ರರಿಗೆಂದು ಕೂಡಿಡಬೇಡವೆಂದು ಶರಣರು ಹೀಗೆ ಅಪ್ಪಣೆ ಕೊಡಿಸಿದ್ದಾರೆ. "ಅರ್ಥವ ಗಳಿಸಿ ಆತ್ಮಪುತ್ರರಿಗಿರಿಸಬೇಡ ಶಿವನಲ್ಲದೆ ಹಿತವಹರಿಲ್ಲವೆಂದರಿದು ಶಿವನೊಡವೆಯ ಶಿವನವರಿಗೆ ಕೊಡು ಮರುಳೇ ಅರ್ಥದಲ್ಲೇನೂ ಸುಖವಿಲ್ಲ. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ."

ದುಡ್ಡಿನಾಶೆಗಾಗಿ ಶರಣರು ದುಷ್ಟರ ಸೇವೆ ಮಾಡುವವರಲ್ಲ. ದುಡ್ಡುಗಳಿಸುವದೇ ಅವರ ಜೀವನ ಗುರಿಯಲ್ಲ. ಭಕ್ತಿಯ ಗಳಿಕೆಗಾಗಿಯೇ ಅವರು ತಮ್ಮ ಜೀವವನ್ನು ಮೀಸಲಾಗಿರಿಸಿದ್ದಾರೆ. ಈ ಬಗ್ಗೆ ಬಸವಣ್ಣನವರು ಅಪ್ಪಣೆಕೊಡಿಸಿದ್ದೇನಂದರೆ "ದೂಷಕನೊಬ್ಬನು ದೇಶವ ಕೊಟ್ಟರೆ ಆಶೆಮಾಡಿ ಅವನ ಹೊರೆಯಲ್ಲಿರಬೇಡ. ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದು ಕರಲೇಸಯ್ಯಾ ಕೂಡಲಸಂಗಮದೇವಾ."

ಪರದ್ರವ್ಯದಾಶೆಗಾಗಿ ಜಗತ್ತಿನಲ್ಲಿ ಅನೇಕ ಘಟಾಟೋಪಗಳು ನಡೆದಿರುತ್ತವೆ. ಕಳವು, ಕೊಲೆಸುಲಿಗೆ, ಯುದ್ಧ, ಪೇಟೆಗಳ ಲೂಟಿ, ಪರದೇಶಗಳ ಆಕ್ರಮಣ ಮುಂತಾದವುಗಳು ಪರದ್ರವ್ಯದಾಶೆಯಿಂದಲೇ ಜರ

ಗುತ್ತಲಿವೆ. ಆದರೆ 'ಸರ್ವೇಽಪಿ ಸುಖಿನಃ ಸಂತು ಸರ್ವೇ ಸಂತು ನಿರಾಮಯಾಃ। ಸರ್ವೇಭದ್ರಾಣಿ ಪಶ್ಯಂತುಮಾಕಶ್ಚಿತ್ ದುಃಖಮಾಪ್ನುಯಾತ್" ಎಂಬ ಶ್ರುತಿವಾಕ್ಯವು ಗ್ರಂಥದಲ್ಲಿಯೇ ಉಳಿದಿರುವದಲ್ಲದೆ ಆಚರಣೆಯಲ್ಲಿಲ್ಲ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ನಿಜವಾದ ಜಗದುದ್ಧಾರಕರು. ಈಗಿನ ಸುಧಾರಣೆಯು ಎಲ್ಲೆಯನ್ನು ಮೀರಿದ ರಾಷ್ಟ್ರಗಳು ಲೋಕಕಂಟಕಗಳು.

ಈ ಜಗತ್ತಿನ ಜೀವನ ಹೋರಾಟದಲ್ಲಿ ದುರ್ಬಲರು ಸಾಯಲೇ ಬೇಕು. ಬಲ್ಲಿದರು ಬದುಕಬೇಕೆಂಬ ತತ್ವವು ತಲೆದೋರುತ್ತಲಿದೆ. "ಜೀವೋ ಜೀವಸ್ಯ ಜೀವನಂ'' ಎಂಬಂತೆ ಪರರ ಸೊತ್ತನ್ನು ನುಂಗಿಕೊಬ್ಬಿರುವ ಜೀವರುಗಳೇ ಎಲ್ಲೆಡೆಯಲ್ಲಿಯೂ ಕಂಡುಬರುತ್ತಿವೆ. ಶ್ರೀಮಂತರು, ಗಿರಣಿ ಯಜಮಾನರಾದ ಕೋಟ್ಯಾಧೀಶರು, ಸರಕಾರಗಳು ಬಡವರ ಸತ್ವವನ್ನು ಹೀರಿ ಕೊಬ್ಬಿರುತ್ತವೆ. ಈಗಿನ ಜಾಗತಿಕ ಯುದ್ಧವು ಪರರಾಷ್ಟ್ರಗಳ ರಕ್ತವನ್ನು ಹೀರಬೇಕೆಂಬ ಲಾಲಸೆಯಿಂದಲೇ ಪ್ರಾದುರ್ಭವಿಸಿರುತ್ತದೆ.

ಮನುಷ್ಯನು ಪವಿತ್ರವಾದ ಕಾಯಕದಿಂದ ಗಳಿಸಿದ ಸಂಪತ್ತೇ ದೈವೀ ಸಂಪತ್ತು ಅದೇ ಶಿವನಿಗೆ ಸಲ್ಲುವದು. ಒಬ್ಬರ ಗಂಟಲವನ್ನು ಹಿಸುಕಿ ಗಳಿಸಿದ್ದು ಆಸುರೀ ಸಂಪತ್ತು. ಅದು ಶಿವನಿಗೆ ಸಲ್ಲದು. ದೈವೀ ಸಂಪತ್ತಿನಿಂದ ಮೋಕ್ಷ ಲಭಿಸುತ್ತದೆ. ಆಸುರೀಸಂಪತ್ತು ಮನುಷ್ಯನನ್ನು ಬಂಧನಕ್ಕೀಡುಮಾಡುತ್ತದೆ. ಈ ಬಗ್ಗೆ ಭಗವದ್ಗೀತೆಯು ಹೇಳುವದೇನಂದರೆ— "ದೈವೀಸಂಪದ್ವಿಮೋಕ್ಷಾಯನಿ ಬಂಧಾಯಾಸುರೀಮತಾ." ಆಸುರೀಸಂಪತ್ತಿನ ಆಶೆಗಾಗಿ ಕೋಟ್ಯಾನುಕೋಟಿ ಜೀವಿಗಳು ಪ್ರತಿನಿತ್ಯ ಆಹುತಿಯಾಗುತ್ತಲಿವೆ. ಆದರೆ ಪರಮಾತ್ಮನಿಗಾಗಿ ಜೀವಕೊಡುವ ಮನುಜರಾರೂ ಇಲ್ಲ. ಇದಕ್ಕಾಗಿ ಪ್ರಭುದೇವರು ಹೇಳುವದೇನಂದರೆ "ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಗುಹೇಶ್ವರಾ ನಿನಗಾಗಿ ಸತ್ತವರನೊಬ್ಬರನೂ ಕಾಣೆ.

ದುಡ್ಡಿನಾಶೆಯು ಬಹಳ ಕೆಟ್ಟ. ಇದರಿಂದ ಎಷ್ಟೋ ಸಾರ್ವಜನಿಕ ಸಂಸ್ಥೆಗಳು ಧನಾಪಹಾರದಿಂದ ನಿಂತುಹೋಗಿವೆ. ದುಡ್ಡಿನ ವ್ಯವಹಾರದಿಂದ ಗೆಳೆಯರು ಕೂಡ ವೈರಿಗಳಾಗುತ್ತಾರೆ. ದುಡ್ಡಿನಾಶೆಯಿಂದ ತಾಯಿಮಕ್ಕಳ ನಡುವಿನ ಪ್ರೇಮವು ಕೆಟ್ಟುಹೋಗುತ್ತದೆ. ಮಕ್ಕಳು

ತಿಜೂರಿಯು ಕೈಯು ತಮಗೆ ಬರಲೆಂದು ತಮ್ಮ ತಂದೆಗಳ ಶೀಘ್ರ ಮರಣವನ್ನಪೇಕ್ಷಿಸುತ್ತಾರೆ. ಆದ್ದರಿಂದಲೇ ದುಡ್ಡು ದುರ್ಗುಣದ ತೌರ ಮನೆಯೆಂದು ಗಾದೆಯುಂಟಾಗಿದೆ. ಆದ್ದರಿಂದ ಕ್ಷಣಿಕವಾದ ದುಡ್ಡಿನಾಶೆಯನ್ನು ಯಾರೂ ಮಾಡಬಾರದು. ಅದರಲ್ಲಂತೂ ಪರದ್ರವ್ಯಾಪಹರಣವನ್ನು ಸರ್ವಥಾ ಮಾಡಬಾರದು. ಯಾರು ಪರರ ದ್ರವ್ಯವನ್ನು ಅಪಹರಿಸುವದಿಲ್ಲವೋ ಅವರೇ ಸಿರಿವಂತರಾಗುವರೆಂದು ಚೆನ್ನಬಸವಣ್ಣನವರು ಫಲಶ್ರುತಿಯನ್ನು ಹೇಳಿದ್ದಾರೆ. ಪರರ ಸೊತ್ತನ್ನು ಸೆಳೆದವರು ಶ್ರೀಮಂತರಲ್ಲ. ಸತ್ಯಕಾಯಕದಿಂದ ಗಳಿಸಿ ಶಿವಾರ್ಪಣ ಮಾಡುವವರು ಶ್ರೀಮಂತರು. ನಮ್ಮ ಶರಣರೇ ನಿಜವಾದ ಶ್ರೀಮಂತರು. ಜಗತ್ತಿನಲ್ಲಿ ಹೆಚ್ಚಿನ ಶ್ರೀಮಂತರಾರೆಂದರೆ ನಮ್ಮ ಶರಣರು.

---

## ಬಸವ-ಸ್ತುತಿ.

(ಶ್ರೀ ಸ್ವಾಮೀ ಶಿವಯೋಗಿ? ಶಿವಯೋಗಮಂದಿರ ಅವರಿಂದ)

---

೧

ದೇವ ದೇವನಾಜ್ಞೆಯಿಂದ
ಶಿರೆಯು ತಲಕೆ ಇಳಿದು ಬಂದ
ಪರಮಪಾವನಾಂಗನಾದ
ಬಸವ ತಂದೆಯು;
ಜಗದ ಜನದ ಮರಹು ಕಳೆವ
ಸುಜನ ಬಂಧುವು.

೨

ಧರಣಿಯಲ್ಲಿ ವೀರಶೈವ
ರಮಲ ಕೀರ್ತಿ ಬೆಳಗಲೆಂದು
ಕರುಣೆಯಿಂದ ತಾನು ತನ್ನ
ಮನದ ಲಂದನು;
ಮನದ ಮಲಿನದುಡಿಗೆಯನ್ನು
ಕಳೆದುನಿಂದನು.

೩

ಸತ್ಯನಿತ್ಯ ಶರಣನೆಂದು
ಹತ್ತು ಜನರು ಹೊಗಳುತಿರಲು,
'ಕುತ್ತು ತುತಿಯು ಎನಗೆ' ಎಂದು
ಪೇಳುತಿರ್ದನು;
ಸತ್ಯಸಂಧನಾಗಿ ಜಗದಿ
ಬಾಳುತಿರ್ದನು.

೪

ಮರ್ತ್ಯವೆಂಬುದೊಂದು ದೊಡ್ಡ
ಟಂಕಸಾಲೆಯೆಂದು ಬಗೆದು
ಭೃತ್ಯ-ಭಾವದಿಂದ ಬಾಗಿ
ನುತಿಸುತಿರ್ದನು;
ಅತ್ತಲಿತ್ತ ಚಲಿಸದಂತೆ
ತುತಿಸುತಿರ್ದನು.

೫

ಜಗದ ದುಃಖವವನ ದುಃಖ
ಜಗದ ಸುಖವೆಯವನ ಸುಖವು
ಜಗವೆ ಪ್ರಾಣವಾಗಿ ಬಾಳಿ
ಬದುಕುತಿರ್ದನು;
ಇದುವೆ ತನಗೆ ದಿವ್ಯವೆಂದು
ಬಗೆಯುತಿರ್ದನು.

೬

ಬಸವನೆಮಗೆ ಜೀವಜ್ಯೋತಿ
ಬಸವನೆಮಗೆ ದಯಾಮೂರ್ತಿ
ಬಸವನೆಮಗೆ ಶಾಂತಿಕಾಂತಿ
ದಾಂತಿದಾಯಕ;
ಅವನೆ ಜನ್ಮ-ಬಂಧುವೆಮಗೆ
ಮುಕ್ತಿ-ದಾಯಕ.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್‌ಎಲ್. ಬಿ. ವಕೀಲ ವಿಜಾಪುರ.)

ಲೇಖಾಂಕ ೨೧.

## ಬಿಜ್ಜಳನ ಮತವಾವುದು ?

ವೀರಶೈವ ಮತ್ತು ಜೈನ ಗ್ರಂಥಕಾರರು ಬಿಜ್ಜಳನು ಜೈನನೆಂದು ವರ್ಣಿಸುತ್ತ ಬಂದಿದ್ದಾರೆ. ಮತ್ತು ಅವನು ಜೈನನಿದ್ದನೆಂತಲೇ ಸಾಮಾನ್ಯ ತಿಳುವಳಿಕೆ ಇದೆ. ಆದರೆ ಅವನು ಜೈನನಾಗಿರದೆ, ಶೈವ ಧರ್ಮವನ್ನು ಪಾಲಿಸುತ್ತಿನೆಂದು "ಪ್ರಬುದ್ಧ ಕರ್ನಾಟಕ" "ಸಾಹಿತ್ಯ ಪರಿಷತ್ಪತ್ರಿಕೆ" ಇಂಥ ಕೆಲವು ಪತ್ರಿಕೆಗಳಲ್ಲಿ ಅನೇಕ ವಿದ್ವಾಂಸರು ಲೇಖಗಳನ್ನು ಬರೆದದ್ದು ಕಂಡು ಬರುತ್ತದೆ. ಆದರೆ ಅವುಗಳಲ್ಲಿ ಅವರು ಪ್ರತಿಪಾದಿಸಿದ ಕಾರಣಗಳು ಸಮರ್ಪಕವಾಗಿರುವದಿಲ್ಲೆಂದು ನಮಗೆ ತೋರುತ್ತದೆ. ೧೧ನೇ ೧೨ನೇ, ೧೩ನೇ ಶತಮಾನಗಳಲ್ಲಿ ಜೈನ, ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಸಂಬಂಧವು ಯಾವ ತರದ್ದಿತ್ತೆಂಬುದನ್ನು ಈ ಲೇಖಕರು ನಿರೀಕ್ಷಿಸಿದ್ದರೆ ಅವರು ಹೀಗೆ ಪ್ರತಿಪಾದಿಸುತ್ತಿದ್ದಿಲ್ಲೆಂದು ನಮಗೆ ತೋರುತ್ತದೆ.

ಬಿಜ್ಜಳನು ದೇವಾಲಯಗಳಿಗೆ ದಾನ ಕೊಟ್ಟದ್ದನ್ನು ಉಲ್ಲೇಖಿಸುವ ಶಾಸನಗಳ ಸಂಖ್ಯೆಯು ದೇಶದಲ್ಲಿ ಬಹು ದೊಡ್ಡದಾಗಿದೆ. ಅವುಗಳಲ್ಲಿ ಅವನು ಅನೇಕ ಶೈವ ದೇವಾಲಯಗಳಿಗೆ ಸಹ ದಾನ ಕೊಟ್ಟದ್ದೇ ಈ ಲೇಖಕರು ಹೀಗೆ ಭಾವಿಸಿದ್ದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಆದರೆ ಇಷ್ಟು ಮಾತ್ರದಿಂದ ಬಿಜ್ಜಳನು ಜೈನ ಧರ್ಮೀಯನಲ್ಲೆಂದು ಹೇಳಲಿಕ್ಕೆ ಬರಲಾರದು. ಈ ಕಾಲದ ಕರ್ನಾಟಕ ರಾಜರು ಯಾವ ಮತಸ್ಥರಿದ್ದರೂ ಎಲ್ಲ ಧರ್ಮೀಯರಿಗೆ ಅವರು ನಿರಾತಂಕವಾಗಿ ದಾನ ಕೊಟ್ಟದ್ದು ಕಂಡು ಬರುತ್ತದೆ. ಆಗಿನ ರಾಜರಲ್ಲಿ ಧರ್ಮಾಂಧತೆಯ ವರ್ತನೆಯು ಅತ್ಯಲ್ಪ ಪ್ರಮಾಣದಿಂದ ತೋರಿ ಬರುತ್ತದೆ. ಅಥವಾ ಅದು ಇಲ್ಲವೆಂದರೂ ಸಲ್ಲುತ್ತದೆ. ಉದಾಹರಣಾರ್ಥವಾಗಿ ಹೊಯಸಳರ ವಿಷ್ಣುವರ್ಧನರಾಜನು ತನ್ನ ಮೊದಲಿನ ಜೈನ ಧರ್ಮವನ್ನು ಬಿಟ್ಟುಕೊಟ್ಟು ಶ್ರೀ ವೈಷ್ಣವ ಧರ್ಮವನ್ನು ಹೊಂದಿದರೂ ಕೂಡ ಅವನೂ ಅವನ ಹೆಂಡತಿಯೂ ಅನೇಕ ಜಿನಾಲಯಗಳಿಗೆ ಉಂಬಳಿಗಳನ್ನು ಹಾಕಿ ಕೊಟ್ಟರು

ತ್ತಾರೆ. ಅವನ ಕಾಲಕ್ಕೆ ಸಮಿೂಪಸ್ಥನಾದ ಬಿಜ್ಜಳನು ಶೈವ, ಕಾಳಾ ಮುಖ ಶಿವಾಲಯುಗಳಿಗೆ ದಾನ ಹಾಕಿ ಕೊಟ್ಟಂತೆ ಕಲ್ಯಾಣ ಪಟ್ಟಣ ದಲ್ಲಿ ಒಂದು ಜಿನಾಲಯುಕ್ಕೂ ಕೂಡ ಶಾಸನವನ್ನು ಹಾಕಿ ಕೊಟ್ಟಿದ್ದಾನೆ. ಆಗಿನ ಕಾಲದಲ್ಲಿ ಜೈನ, ಬ್ರಾಹ್ಮಣ ಮತ್ತು ಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ಮತ್ತು ಅನ್ನೋದಕ ವ್ಯವಹಾರಗಳು ನಿರಾತಂಕವಾಗಿ ನಡಿಯುತ್ತಿದ್ದುವಲ್ಲದೆ ಅವರಲ್ಲಿ ಪರಸ್ಪರ ಧರ್ಮಪರಿವರ್ತನೆಗಳೂ ಕೂಡ ಆಗುತ್ತಾ ಇದ್ದವು ಒಬ್ಬ ಜೈನ ಧರ್ಮೀಯನಾದ ಕವಿಯು ಶೈವ ಧರ್ಮದ ದೀಕ್ಷೆಯನ್ನು ಹೊಂದಿದ ಬಳಿಕ ಅದರಲ್ಲಿ ಯಾವ ಸಾರವೂ ತೋರದ್ದರಿಂದ ತಾನು ಪುನಃ ಜೈನನಾದೆನೆಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿ ದ್ದಾನೆ. ನಾಗವರ್ಮನೆಂಬ ಒಬ್ಬ ಜೈನ ಮಹಾ ಕವಿಯು. ಆದರೆ ಅವನು ಮೊದಲು ಬ್ರಾಹ್ಮಣನಾಗಿದ್ದನೆಂದು ಹೇಳಲ್ಪಡುತ್ತದೆ. ಬಸವೇ ಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರ ಚರಿತ್ರೆಗಳನ್ನು ನಾವು ನಿರೀಕ್ಷಿಸಿ ದಲ್ಲಿ ಇದೇ ಸಂಗತಿಯು ದೃಢಪಡುತ್ತದೆ. ಶಿವಶರಣಿಯಾದ ಸುಗ್ಗಳೆಗೆ ಜೈನ ಧರ್ಮೀಯನಾದ ಜಯಸಿಂಹನು ಗಂಡನಾಗಿದ್ದನು. ಶಿವಶರಣ ನಾದ ಆದಯ್ಯನು ಜೈನಳಾದ ಪದ್ಮಾವತಿಯನ್ನು ಲಗ್ನವಾಗಿದ್ದನು. ಹರಿಹರನು ರೇವಣಸಿದ್ಧೇಶ್ವರನ ರಗಳೆಯನ್ನು ರಚಿಸಿದ್ದಾನೆ. ಅದರಲ್ಲಿ ರೇವಣಸಿದ್ಧೇಶ್ವರನು ವೀರಶೈವನಲ್ಲದ ಬಿಜ್ಜಳನ ಮಗಳನ್ನು ಲಗ್ನವಾ ಗಿದ್ದನೆಂದು ಹೇಳಲ್ಪಟ್ಟಿದೆ.

ಈ ವರೆಗೆ ಆಗಿ ಹೋದ ವೀರಶೈವ ಮತ್ತು ಜೈನ ಗ್ರಂಥಕಾ ರರು ಬಿಜ್ಜಳನು ಜೈನನೆಂದು ಯಾವಾಗಲೂ ವರ್ಣಿಸುತ್ತಾ ಬಂದಿ ದ್ದಾರೆ. ಇದಕ್ಕೆ ವಿರೋಧವಾಗಿ ಅವರಲ್ಲಿ ಅಪವಾದಾತ್ಮಕವಾಗಿ ಒಬ್ಬ ನಾದರೂ ಅವನು ಶೈವನೆಂದು ಹೇಳಿದ್ದು ದೊರೆಯುವದಿಲ್ಲ. ಅವರಿ ಲ್ಲರೂ ಬಿಜ್ಜಳನು ಜೈನನೆಂತಲೇ ಹೇಳುತ್ತ ಬಂದಿದ್ದಾರೆ. ಆದ್ದರಿಂದ ಈ ಸಂಗತಿಯು ಸ್ಪಷ್ಟ ರೀತಿಯಿಂದ ಗೊತ್ತಾಗುವ ವರೆಗೆ ಬಿಜ್ಜಳನು ಜೈನನೆಂದು ನಂಬುವದೇ ಯೋಗ್ಯವೆಂದು ನಮಗೆ ತೋರುತ್ತದೆ.

ಆಗಿನ ರಾಜರು ಜೈನ ಶೈವ ದೇವಾಲಯಗಳಲ್ಲಿ ಅವ ಭೇದವ ನ್ನೆಣಿಸದೆ ದಾನ ಮಾಡುತ್ತಿದ್ದರು. ಆದ್ದರಿಂದ ಬಿಜ್ಜಳನು ಶೈವ ದೇವಾ ಲಯುಗಳಿಗೆ ದೇಣಿಗೆ ಕೊಟ್ಟ ಮಾತ್ರದಿಂದ ಅವನು ಶೈವನಾಗಿದ್ದನೆಂದು ಮೇಲ್ಕಂಡ ಲೇಖಕರು ವಿಧಾನ ಮಾಡಿರುವದು ತಪ್ಪೆಂದು ನಮಗೆ ತೋರುತ್ತದೆ.

## ಬಸವೇಶ್ವರನ ಹೆಂಡತಿಯರು ಯಾರು ?

ಬಸವೇಶ್ವರನಿಗೆ ಇಬ್ಬರು ಹೆಂಡರಿದ್ದರೆಂದು ವೀರಶೈವ ಗ್ರಂಥಕಾರರೆಲ್ಲರೂ ಒಮ್ಮತದಿಂದ ಹೇಳುತ್ತಾರೆ. ಆದರೆ ಅವರಲ್ಲೊಬ್ಬಳ ಹೆಸರಿನ ವಿಷಯವಾಗಿ ಮಾತ್ರ ಅವರಲ್ಲಿ ಭಿನ್ನಾಭಿಪ್ರಾಯವಿದೆ. ಗಂಗಾಂಬಿಕೆ ಎಂಬ ಹೆಸರಿನ ಹೆಂಡತಿ ಇದ್ದಳೆಂದು ಎಲ್ಲ ಗ್ರಂಥಕಾರರು ಒಪ್ಪುತ್ತಾರೆ. ಆದರೆ ಇನ್ನೊಬ್ಬಳ ಹೆಸರು ಮಾಯಿದೇವಿಯೆಂದು ಹರಿಹರ ಕವಿಯು ಹೇಳುತ್ತಾನೆ. ಆದರೆ ಉಳಿದ ಗ್ರಂಥಕಾರರು ಆಕೆಯ ಹೆಸರು ನೀಲಾಂಬಿಕೆ ಎಂದಿದ್ದಿತೆಂದು ಹೇಳುತ್ತಾರೆ. ಬಸವೇಶ್ವರನ ಹೆಂಡರಲ್ಲಿ ನೀಲಾಂಬಿಕೆಯು ಬಹು ಪ್ರಸಿದ್ಧಳು. ಅವಳು ವೀರಶೈವಾಚಾರ ಸಂಪನ್ನೆಯು. ಆಕೆಯ ಪತಿಭಕ್ತಿ ಮತ್ತು ಲಿಂಗಭಕ್ತಿ ಇವುಗಳ ವಿಷಯವಾಗಿ ಅಸಂಖ್ಯ ಸ್ತೋತ್ರ ಪದಗಳು ವೀರಶೈವ ವಾಙ್ಮಯದಲ್ಲಿ ದೊರೆಯುತ್ತವೆ. ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕಪ್ಪಡಿ ಸಂಗಮೇಶ್ವರನಲ್ಲಿಗೆ ತೆರಳಿದ ಬಳಿಕ ಅವಳು ತನ್ನ ಇಷ್ಟಲಿಂಗದಲ್ಲಿಯೇ ಬಯಲಾದಳೆಂದು ವೀರಶೈವ ಪುರಾಣಗಳಲ್ಲಿ ಉಲ್ಲೇಖಗಳಿವೆ. ಆಕೆಯ ಹೆಸರಿನ ಒಂದು ದೇವಾಲಯವೂ ಒಂದು ಉಪಲಬ್ಧವಿದೆ. ಅದು ಕೃಷ್ಣಾತೀರದಲ್ಲಿ ಕಪ್ಪಡಿಸಂಗಮ ಸ್ಥಾನದಿಂದ ಒಂದು ಮೈಲಿನ ಮೇಲೆ ತಂಗಡಗಿ ಗ್ರಾಮದ ನೆರೆಯಲ್ಲಿ ಇದೆ. ಬಸವೇಶ್ವರನು ಸಂಗಮನಾಥನಲ್ಲಿ ಐಕ್ಯ ಹೊಂದಿದನೆಂಬ ಸುದ್ದಿಯನ್ನು ಕೇಳಿದ ಕೂಡಲೆ ಆಕೆಯು ಅಲ್ಲಿ ಬಯಲಾದಳೆಂದು ಸ್ಥಾನಿಕ ಐತಿಹ್ಯವಿದೆ. ಅಲ್ಲಿ ಆಕೆಯ ಹೆಸರಿನ ಒಂದು ಸಮಾಧಿಯೂ ಉಂಟು. ಇದು ನೀಲಾಂಬಿಕೆಯದೇ ಆಗಿರಬೇಕು. ಆಕೆಯ ತಂದೆಯ ಹೆಸರು ಸಿದ್ಧಣ್ಣ ಮಂತ್ರಿ ಎಂದು ವೀರಶೈವ ಪುರಾಣಗಳಲ್ಲಿ ಉಲ್ಲೇಖಗಳು ಇವೆ. ಈ ವಿಷಯದಲ್ಲಿ ಯಾರಲ್ಲಿಯೂ ಮತಭೇದಗಳಿಲ್ಲ. ಹರಿಹರ ಕವಿಯೂ ಕೂಡ ಸಿದ್ಧದಂಡೇಶನ ಮಗಳನ್ನೇ ಬಸವೇಶ್ವರನು ಲಗ್ನವಾದನೆಂದು ಹೇಳುತ್ತಾನೆ. ಅದ್ದರಿಂದ ನೀಲಾಂಬಿಕೆಯ ಮೊದಲಿನ ಹೆಸರು ಅವನು ಹೇಳುವಂತೆ ಮಾಯಿದೇವಿ ಎಂದಿರಬಹುದು. ಅದರೆ ಲಗ್ನವಾದ ಬಳಿಕ "ನೀಲಾಂಬಿಕೆ" ಎಂಬ ಹೆಸರು ರೂಢವಾಗಿರಬೇಕೆಂದು ತೋರುತ್ತದೆ.

ಗಂಗಾಂಬಿಕೆಯು ನೀಲಾಂಬಿಕೆಯಷ್ಟು ವೀರಶೈವ ವಾಙ್ಮಯದಲ್ಲಿ ಪ್ರಸಿದ್ಧಳಾಗಿರುವದಿಲ್ಲ. ಆದರೆ ಉಭಯ ಪತ್ನಿಯರು ವಚನಗಳನ್ನು ರಚಿಸಿದಂತೆ ಕಂಡುಬರುತ್ತದೆ. ಗಂಗಾಂಬಿಕೆಯ ಮುದ್ರಿಕೆಯು "ಗಂಗಾಪ್ರಿಯ

ಕೂಡಲಸಂಗಮ" ಎಂತಲೂ ನೀಲಾಂಬಿಕೆಯ ಮುದ್ರಿಕೆಯು "ಬಸವ ಪ್ರಿಯ ಕೂಡಲಸಂಗಮದೇವ" ಎಂತಲೂ ಇವೆ. ನೀಲಾಂಬಿಕೆಯ ಕೆಲವು ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಗಂಗಾಬಿಕೆಯ ವಚನಗಳು ನಮಗೆ ಇನ್ನೂ ಉಪಲಬ್ಧವಾಗಿಲ್ಲ.

ಹರಿಹರನ ರಗಳೆಯಲ್ಲಿ ಬಸವೇಶ್ವರನು ಮೊದಲು ಮಂಗಳವಾಡಕ್ಕೆ ಹೋಗಿರಲು ಅಲ್ಲಿ ಸಿದ್ದಣ್ಣ ದಂಡೇಶನ ಪರಿಚಯವಾಯಿತೆಂತಲೂ ಅವನ ಮಗಳ ಲಗ್ನವು ಅಲ್ಲಿಯೇ ಆಯಿತೆಂತಲೂ ಹೇಳುತ್ತಾನೆ. ಆದರೆ ಗಂಗಾಂಬಿಕೆಯ ಲಗ್ನವು ಕಲ್ಯಾಣದಲ್ಲಿ ಆಯಿತೆಂಬ ಉಲ್ಲೇಖಗಳಿರುತ್ತವೆ. ಬಸವೇಶ್ವರನು ಮೊದಲು ಮಂಗಳವಾಡಕ್ಕೆ ಹೋಗಿ ಹಿಂದುಗಡೆ ಕಲ್ಯಾಣಕ್ಕೆ ಹೋದದ್ದರಿಂದ ಬಸವೇಶ್ವರನಿಗೆ ಮೊದಲು ನೀಲಾಂಬಿಕೆ ಯೊಡನೆ ಲಗ್ನವಾಗಿರಬೇಕು ಮತ್ತು ಹಿಂದುಗಡೆ ಗಂಗಾಂಬಿಕೆಯ ಲಗ್ನವಾಗಿರಬೇಕೆಂಬ ಅನುಮಾನವು ಉಂಟಾಗುತ್ತದೆ.

## ಸಿದ್ದಣ್ಣ ದಂಡೇಶ ಮತ್ತು ಬಲದೇವ ಮಂತ್ರಿಗಳು ಐತಿಹಾಸಿಕ ಪುರುಷರೋ?

ಗಂಗಾಂಬಿಕೆಯ ತಂದೆಯಾದ ಬಲದೇವನು ಮತ್ತು ನೀಲಾಂಬಿಕೆಯ ತಂದೆಯಾದ ಸಿದ್ದಣ್ಣ ದಂಡೇಶನು ಇವರು ಕಾಲ್ಪನಿಕ ಪುರುಷರೋ, ಐತಿಹಾಸಿಕ ಪುರುಷರೋ ಎಂಬದನ್ನು ವಿವೇಚಿಸುವದು ಮಹತ್ವವಾದುದು. ಬಿಜ್ಜಳನ ಅನೇಕ ಶಿಲಾ ಶಾಸನಗಳಲ್ಲಿ ಇವರ ಹೆಸರುಗಳು ಉಪಲಬ್ಧವಿದ್ದರೆ ಅವರು ಐತಿಹಾಸಿಕ ಪುರುಷರೆಂದು ತಿಳಿಯಲು ಯಾವ ಪ್ರತ್ಯವಾಯವಿರುವದಿಲ್ಲ. ಈ ಶಾಸನಗಳಲ್ಲಿ ಬಿಜ್ಜಳನ ಅನೇಕ ದಂಡಾಧಿಕಾರಿಗಳ ಹೆಸರುಗಳು ನಮಗೆ ದೊರಕುತ್ತವೆ. ಅವುಗಳನ್ನು ನಾವು ಕೆಳಗೆ ಕೊಡುತ್ತೇವೆ.

(೧) ವಿಜಯಪಾಂಡ್ಯನು ಮೈಸೂರಿನ ಉತ್ತರಭಾಗವಾದ ನೋಳಂಬವಾಡಿಯನ್ನು ಆಳುತ್ತಿದ್ದನು. ಈತನು ಅತಿ ಪ್ರಸಿದ್ಧನು.

(೨) ಬನವಾಸಿ ಪ್ರಾಂತವನ್ನು ಕಾಸಪ್ಪಯ್ಯ ಅಥವಾ ಕೇಶಿರಾಜನು ಆಳುತ್ತಿದ್ದನು. ಈತನಾದರೂ ಬಿಜ್ಜಳನ ದಂಡಾಧಿಪತಿಗಳಲ್ಲಿ ಪ್ರಸಿದ್ಧನು.

(೩) ಮೈಲಾರಯ್ಯನೆಂಬವನು ಕೆಲವು ಕಾಲ ತರ್ದವಾಡಿ ನಾಡನ್ನು ಆಳುತ್ತಿದ್ದನು.

(೪) ಮಹಾದೇವರಸನೆಂಬವನು ಕೆಲವು ಕಾಲ ಬನವಾಸಿ ನಾಡನ್ನು ಆಳುತ್ತಿದ್ದನು.

(೫) ದಂಡನಾಯಕ ಶ್ರೀಧರನು ಅಣ್ಣಿಗೆರಿಯಲ್ಲಿ ಆಳುತ್ತಿದ್ದನು.

(೬) ಬರ್ಮರಸನು ಬಹು ಪ್ರಸಿದ್ಧ ದಂಡನಾಯಕನು. ಇವನು ಕೆಲವು ಕಾಲ ಬನವಾಸಿ ನಾಡು, ಕೆಲವು ಕಾಲ ತರ್ದೆವಾಡಿನಾಡಿನಲ್ಲಿ ಆಳುತ್ತಿದ್ದನು.

(೭) ದಂಡನಾಯಕ ಅಮ್ಮಣ್ಣನು ಬೆಳ್ವೊಲವನ್ನು ಆಳುತ್ತಿದ್ದನು. ಇದು ಧಾರವಾಡ ಜಿಲ್ಹೆಯ ಈಶಾನ್ಯ ಭಾಗವು.

(೮) ಶಿಲಾಹಾರ ವಂಶದ ವಿಜಯಾದಿತ್ಯನು ಕರ್ಹಾಡ ಪ್ರಾಂತ ದಲ್ಲಿ 'ವಾಳವಡೆ' ಎಂಬಲ್ಲಿ ಆಳುತ್ತಿದ್ದನು.

(೯) ರಟ್ಟರಾಜರ ಕಾರ್ತವೀರ್ಯನು ಸವದತ್ತಿಯಲ್ಲಿ ಆಳುತ್ತಿದ್ದನು.

(೧೦) ದಂಡನಾಯಕ ಸಿದ್ಧಪ್ಪಯ್ಯನು ಹಾನಗಲ್ಲಿನಲ್ಲಿ ಆಳು ತ್ತಿದ್ದನು.

(೧೧) ಬಲದೇವನು ಕುಕನೂರಲ್ಲಿ ಆಳುತ್ತಿದ್ದನು.

(೧೨) ಚಾವುಂಡ ಮಹಾಮಂಡಳೇಶ್ವರನು ಎರೆಯಂಬರಗೆ ಅಂದರೆ ಯೆಲಬುರ್ಗಿಯಲ್ಲಿ ಆಳುತ್ತಿದ್ದನು. ಈತನು ಬಹು ಪ್ರಸಿದ್ಧನು.

(೧೩) ಕಲಿಯಮ್ಮರಸನೆಂಬ ಹೆಸರಿನ ಒಬ್ಬ ದಂಡಾಧಿಪತಿಯೂ ಇದ್ದನು.

ಈ ಪ್ರಕಾರ ಬಿಜ್ಜಳನ ದಂಡನಾಯಕರ ಹೆಸರುಗಳು ನಮಗೆ ಉಪ ಲಬ್ಧವಿವೆ. ಈ ಪಟ್ಟಿಯಲ್ಲಿ ಸಿದ್ಧಣ್ಣ ಮತ್ತು ಬಲದೇವ ಈ ಉಭತರ ಹೆಸರು ಗಳು ಬಂದಿವೆ. ಈ ಉಭಯತರ ಹೆಸರುಗಳು ಏಕಕಾಲಕ್ಕೆ ನಮಗೆ ಇಲ್ಲಿ ದೊರೆಯುವದರಿಂದ ಇವರೇ ಬಸವೇಶ್ವರನಿಗೆ ತಮ್ಮ ಹೆಣ್ಣು ಮಕ್ಕಳನ್ನು ಕೊಟ್ಟು ಲಗ್ನ ಮಾಡಿರಬೇಕೆಂದು ಅನುಮಾನ ಮಾಡಬಹುದಾಗಿದೆ. ಈ ಉಭಯತರ ಹೆಸರುಗಳುಳ್ಳ ಬೇರೆ ಪ್ರಧಾನಿಗಳು ಇವರು ಏಕೆ ಇರ ಬಾರದೆಂದು ಶಂಕೆಯನ್ನು ಮಾಡಲು ಅವಕಾಶವಿದೆ. ಆದರೆ ಈ ಶಂಕೆ ಯನ್ನು ಸಮರ್ಥಿಸಲು ಬಲವಾದ ಕಾರಣಗಳು ದೊರೆಯುವ ವರೆಗೆ ಈ ಶಿಲಾಶಾಸನಗಳಲ್ಲಿ ಉಪಲಬ್ಧವಾದವರೇ ಬಸವೇಶ್ವರನ ಮಾವಂದಿರ ಬೇಕೆಂದು ಗ್ರಹಿಸಲು ಅಡ್ಡಿ ತೋರುವದಿಲ್ಲ.

---

(ಮುಂದೆ ಸಾಗುವದು)

# ಶಿವಾನುಭವ ಪತ್ರಿಕೆಗೆ ಸಹಾಯ.

ಯುದ್ಧಜನ್ಯ ಪರಿಸ್ಥಿತಿಯ ಮೂಲಕ ಕಾಗದದ ಬೆಲೆಯು ಮಿತಿ ಮೀರಿ ಹೆಚ್ಚಿರುತ್ತದೆ. ಕಾಗದವನ್ನು ದೊರಕಿಸುವದು ಸಹ ಕಷ್ಟಕರವಾಗ ಹತ್ತಿದೆ. ಈ ಸ್ಥಿತಿಯಲ್ಲಿ ಶಿವಾನುಭವ ಪತ್ರಿಕೆಯನ್ನು ನಡಿಸುವದು ದುಸ್ತರವಾಗಿರುತ್ತದೆ. ಅದನ್ನು ನಿಲ್ಲಿಸುವ ಪ್ರಸಂಗವೂ ಕೂಡ ಮುಂದೆ ಬರಬಹುದಾಗಿ ತೋರುತ್ತದೆ. ಆದರೆ ಹಾಗೆ ಮಾಡುವ ಪೂರ್ವದಲ್ಲಿ ಶಕ್ಯವಿದ್ದಷ್ಟು ಪ್ರಯತ್ನಿಸಿ ಪತ್ರಿಕೆ ಗೋಸ್ಕರ ಸಹಾನುಭೂತಿಯುಳ್ಳವರ ಕಡೆಯಿಂದ ಸಹಾಯ ದ್ರವ್ಯವನ್ನು ದೊರಕಿಸಬೇಕೆಂಬ ಉದ್ದೇಶದಿಂದ ನಾವು ನಮ್ಮ ಮ್ಯಾನೇಜರರನ್ನು ಸೊಲ್ಲಾಪುರ ಪಟ್ಟಣಕ್ಕೆ ಕಳಿಸಲಾಗಿ ಅಲ್ಲಿಯ ಮಹನೀಯರಿಂದ ಕೆಳಗೆ ಕಾಣಿಸಿದಂತೆ ಸಹಾಯವು ದೊರೆತಿರುತ್ತದೆ. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ. ಅವರ ಅನುಕರಣವನ್ನು ಎಲ್ಲ ಕಡೆಯ ಶಿವಾನುಭವ ಪ್ರೇಮಿಗಳು ಅನುಸರಿಸಬೇಕೆಂದು ನಮ್ಮ ಸವಿನಯ ವಿನಂತಿ ಅದೆ. ಹೀಗೆ ಸಹಾಯ ದೊರೆತಲ್ಲಿ ಪತ್ರಿಕೆಯನ್ನು ಮೊದಲಿನಂತೆ ೬೪ ಪುಟಗಳ ವರೆಗೂ ಹೆಚ್ಚಿಸುವೆವು.

## ಸಹಾಯ ದ್ರವ್ಯವನ್ನು ಕೊಟ್ಟವರ ಹೆಸರುಗಳು.

ರೂ. ೫೧ ಶ್ರೀಮಂತ ನಾಗಪ್ಪಾ ಅಣ್ಣಾ ಕಾಡಾದಿ ಎಮ್. ಎಲ್. ಸಿ.

ರೂ. ೨೫ ರಾ. ಬ. ನಾಗಪ್ಪಾ ಅಣ್ಣಾ ಅಬ್ದುಲಪೂರಕರ

ರೂ. ೨೫ ರಾ. ರಾ. ಅಣ್ಣಾರಾವ ಧಂಗೆ

ರೂ. ೧೧ ,, ಜಿ. ಪ್ಪಿ. ಲೋಣಿ

ರೂ. ೫ ,, ಶಿವಪ್ಪಾ ಸರಸಂಬಿ

ರೂ. ೫ ,, ಮಲಕಪ್ಪ ಲೋಣಿಕರ

ವಿಜಾಪುರ
ತಾ. ೧೪-೬-೪೩

ಫ. ಗು. ಹಳಕಟ್ಟಿ
ಸಂಪಾದಕ 'ಶಿವಾನುಭವ.'




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಜೂನ ೧೯೪೩. [ಸಂಚಿಕೆ ೯

## ವಿಷಯಾನುಕ್ರಮಣಿಕೆ.


| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಸಾಹಿತ್ಯ ಮತ್ತು ಸ್ವಾನುಭಾವ | ಶ್ರೀ. ವ್ಹಿ. ಆರ್. ಕೊಪ್ಪಳ<br>ಧಾರವಾಡ | ೩೧೭ |
| ೨ ಆತ್ಮನಿರೀಕ್ಷಣೆ | ಶ್ರೀ ಜಿ. ಎಸ್. ಕನ್ನೂರ<br>ವಿಜಾಪುರ | ೩೨೧ |
| ೩ ಪರದ್ರವ್ಯವನ್ನಪಹರಿಸಬಾರದು | ಶ್ರೀ. ಶಿವಮೂರ್ತಿ | ೩೨೩ |
| ೪ ಬಸವಸ್ತುತಿ | ಶ್ರೀ. ಸ್ವಾಮಿ ಶಿವಯೋಗಿ<br>ಶಿವಯೋಗಮಂದಿರ | ೩೩೧ |
| ೫ ಬಸವೇಶ್ವರನ ಚರಿತ್ರ | ರಾ|| ಬ|| ಪಿ. ಜಿ. ಹಳಕಟ್ಟಿ<br>ವಿಜಾಪುರ | ೩೩೩ |
| ೬ ಶಿವಾನುಭವ ಶಬ್ದಕೋಶ | —— | ೧೯೩–೨೦೦ |
| ೭ ವೀರಶೈವ ಮಹಾಮನೆತನಗಳ ಚರಿತ್ರೆ | —— | ೬೫–೬೮ |

ವಿಜಾಪುರ

# ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ದೊರೆಯುವ ಗ್ರಂಥಗಳು.

## (೧) ವಚನ ಗ್ರಂಥಗಳು.

| | | | | |
|---|---|---|---|---|
| ೧ | ಹೊಸಪದ್ಧತಿಯ ಬಸವೇಶ್ವರ ವಚನಗಳು | ೧ | ೮ | ೦ |
| ೨ | ಸಿದ್ಧರಾಮೇಶ್ವರ ವಚನಗಳು | ೧ | ೮ | ೦ |
| ೩ | ಪ್ರಭುದೇವರ ವಚನಗಳು (ಜಕ್ಕಣಾರ್ಯರ ಟೀಕೆ) | ೩ | ೬ | ೦ |
| ೪ | ಚನ್ನಬಸವೇಶ್ವರ ವಚನಗಳು | ೧ | ೨ | ೦ |
| ೫ | ದೇವರದಾಸಿಮಯ್ಯನ ವಚನಗಳು | ೦ | ೧೩ | ೦ |
| ೬ | ಅಂಬಿಗರ ಚೌಡಯ್ಯನ ವಚನಗಳು | ೧ | ೪ | ೦ |
| ೭ | ಉರಿಲಿಂಗಪೆದ್ದಿಯ ವಚನಗಳು | ೧ | ೮ | ೦ |
| ೮ | ಸಂಗನಬಸವೇಶ್ವರನ ವಚನಗಳು | ೦ | ೧೩ | ೦ |
| ೯ | ಹಡಪದಪ್ಪಣ್ಣನ ವಚನಗಳು | ೦ | ೧೨ | ೦ |
| ೧೦ | ಲಿಂಗಮ್ಮನ ವಚನಗಳು | ೦ | ೪ | ೦ |
| ೧೧ | ಆದಯ್ಯನ ವಚನಗಳು ... ... | ೦ | ೮ | ೦ |
| ೧೨ | ಮಹಾದೇವಿಯಕ್ಕನ ವಚನಗಳು | ೦ | ೮ | ೦ |
| ೧೩ | ಸಕಲೇಶ ಮಾದರಸನ ವಚನಗಳು | ೦ | ೪ | ೦ |
| ೧೪ | ಗಣದಾಸಿ ವೀರಣ್ಣನ ವಚನಗಳು | ೦ | ೪ | ೦ |
| ೧೫ | ಘನಲಿಂಗನ ವಚನಗಳು ... ... | ೦ | ೭ | ೦ |
| ೧೬ | ಶಿವಶರಣರ ಸಂಗೀತ ವಚನಗಳು | ೦ | ೫ | ೦ |
| ೧೭ | ಸಂಕೀರ್ಣ ವಚನಗಳು ಭಾಗ ೧ | ೧ | ೪ | ೦ |
| ೧೮ | ಮಡಿವಾಳ ಮಾಚಿದೇವನ ವಚನಗಳು | ೦ | ೧೨ | ೦ |
| ೧೯ | ಸಂಕೀರ್ಣ ವಚನಗಳು ಭಾಗ ೨ | ೧ | ೨ | ೦ |
| ೨೦ | ಶಿವಾನುಭವ ಸೃಷ್ಟಿಯ ವಚನಗಳು | ೦ | ೧೦ | ೦ |
| ೨೧ | ಮಹಾನುಭಾವ ಪ್ರಕಾಶಿಕೆ | ೦ | ೩ | ೦ |

## (೨) ವಚನಶಾಸ್ತ್ರದ ಸಂಗ್ರಹ ಗ್ರಂಥಗಳು.

| | | | | |
|---|---|---|---|---|
| ೨೨ | ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ | ೪ | ೦ | ೦ |
| ೨೩ | ,, ಉತ್ತರಾರ್ಧ | ೩ | ೦ | ೦ |
| ೨೪ | ವಚನಶಾಸ್ತ್ರಸಾರ ಭಾಗ ೨ | ೫ | ೦ | [illegible] |
| ೨೫ | ವಚನಶಾಸ್ತ್ರಸಾರ ಭಾಗ ೩ ಪೂರ್ವಾರ್ಧ | ೨ | ೮ | [illegible] |
| ೨೬ | ಶೂನ್ಯಸಂಪಾದನೆ | ೩ | ೧೨ | ೯ |

# ಶಿವಾನುಭವ

| ವರ್ಷ ೧೭ | ಜೂನ ೧೯೪೩. | ಸಂಚಿಕೆ ೯ |
| --- | --- | --- |


## ಸಾಹಿತ್ಯ ಮತ್ತು ಸ್ವಾನುಭಾವ.


(ಸಂಗ್ರಾಹಕರು:— ವೀರಭದ್ರಪ್ಪ ಕೊಪ್ಪಳ ಎಮ್. ಎ., ಬಿ. ಟಿ. ಧಾರವಾಡ)


---

(ಧಾರವಾಡದ ನವಕಲ್ಯಾಣಮಠದ ಶ್ರೀ ಕುಮಾರಸ್ವಾಮಿಗಳು ತಾ. ೬-೫-೪೩ನೇಯ ದಿವಸ ಬಸವಜಯಂತಿ ಉತ್ಸವದ ಸಂದರ್ಭದಲ್ಲಿ ಧಾರವಾಡ ಲಿಂಗಾಯತ ನಗರ ಭವನದಲ್ಲಿ ಮೇಲ್ಕಂಡ ವಿಷಯವನ್ನು ಕುರಿತು ಮಾಡಿದ ಭಾಷಣದ ಸಾರಾಂಶವಿದು)

ಜೀವನಕ್ಕೂ ಸಾಹಿತ್ಯಕ್ಕೂ ನಿಕಟವಾದ ಸಂಬಂಧವಿರುವಂತೆ, ಜೀವನಕ್ಕೂ ಸ್ವಾನುಭಾವಕ್ಕೂ ಅತ್ಯಂತ ನಿಕಟವಾದ ಸಂಬಂಧವಿರುವುದು. ಕೇವಲ ಜನಮನರಂಜನೆಯಿಂದ ಸಾಹಿತ್ಯದ ಗುರಿಯು ಸಾಧಿಸಿದಂತಾಗುವದಿಲ್ಲ. ಅದರ ಉಚ್ಚವಾದ ಧ್ಯೇಯವು ಉತ್ಕೃಷ್ಟಭಾವನಾವಿಕಾಸದಿಂದ ಉದ್ಧಾರಕಾರ್ಯವನ್ನು ನೆರವೇರಿಸುವುದರಲ್ಲಿದೆ. ಇದು ಸಾಧ್ಯವಾದಷ್ಟು ಮಟ್ಟಿಗೆ ಸಾಹಿತ್ಯದಲ್ಲಿ ತರಗತಿಗಳುಂಟಾಗುವವು. ಬಸವಣ್ಣ ಮೊದಲಾದ ಶಿವಶರಣರ ವಚನಗಳಲ್ಲಿ, ಹರಿಹರದೇವನ ರಗಳೆಗಳಲ್ಲಿ ಸಾಹಿತ್ಯದ ಲಕ್ಷಣಗಳ ಜೊತೆಗೆ ಉತ್ಕೃಷ್ಟ ಭಾವನಾವಿಕಾಸಕ್ಕೆ ಅವಕಾಶವಿರುವದನ್ನು ಮನಗಾಣಬಹುದು. ಇಲ್ಲಿ ಸಾಹಿತ್ಯ ಮತ್ತು ಸ್ವಾನುಭಾವ ಇವುಗಳ ಸಂಗಮವುಂಟು. ಚಿತ್ತವೃತ್ತಿಪವಿತ್ರೀಕರಣವೇ (*Sublimation*) ಶ್ರೇಷ್ಠ ಸಾಹಿತ್ಯದ ಉಚ್ಚತಮವಾದ ಗುರಿಯಾದರೆ, ಚಿತ್ತವೃತ್ತಿನಿರೋಧವೇ (*Spiritualisation*) ಸ್ವಾನುಭಾವಕ್ಕೆ ಗುರಿ. ಒಂದರಿಂದ ಭಾವಾಂತರವು (*Transformation*) ಸಾಧಿಸಿದರೆ,

ಇನ್ನೊಂದರಿಂದ ಭಾವಾತೀತ ಸ್ಥಿತಿಯು (*Transcendance*) ಸಾಧ್ಯವಾಗುವದು. ಭಾವಾಂತರಗೊಳ್ಳುವದಾಗಲಿ, ಭಾವಾತೀತ ಸ್ಥಿತಿಯನ್ನು ಪಡೆಯುವದಾಗಲಿ ಪರಸ್ಪರ ವಿರೋಧವಾದವುಗಳಲ್ಲ; ಪೋಷಕವಾದವುಗಳು. ಈ ದೃಷ್ಟಿಯಿಂದ ಸಾಹಿತ್ಯಕ್ಕೂ ಸ್ವಾನುಭಾವಕ್ಕೂ ಎಷ್ಟೊಂದು ಪರಸ್ಪರ ಮೈತ್ರಿ ಇದೆ ಎಂಬುದು ವ್ಯಕ್ತವಾಗುತ್ತದೆ.

ಜಾಗರದಲ್ಲಿಯಾಗಲಿ, ಸ್ವಪ್ನದಲ್ಲಿಯಾಗಲಿ, ಜ್ಞಾನದ ವ್ಯವಹಾರಕ್ಕೆಲ್ಲ ಇಂದ್ರಿಯುಗಳ (ಅದರಲ್ಲಿ ಸ್ಪರ್ಶದ) ಬಳಕೆಯೇ ಕಾರಣವು. ಜೀವನದ ಸಾಮಾನ್ಯವಾದ ವ್ಯವಹಾರವೆಲ್ಲ ಈ ಇಂದ್ರಿಯಜನ್ಯಜ್ಞಾನದಿಂದಲೇ ಸಾಗಿರುವುದು. ಜಾಗರದಲ್ಲಿ ವಿವೇಕದಿಂದ ಮರೆಮಾಜಲು ಶಕ್ಯವಿರುವ ಇಂದ್ರಿಯವೃತ್ತಿಗಳನ್ನು ಸ್ವಪ್ನಸೃಷ್ಟಿಯಲ್ಲಿ ತಡೆಯುಲೂ ಪರಿವರ್ತನೆಗೊಳಿಸಲೂ ಸಾಮಾನ್ಯರಿಗೆ ಶಕ್ಯವಿಲ್ಲ. ನಮಗೆ ಜಾಗರದಲ್ಲಿ ಅಸಹ್ಯವಾದುದೂ ಸ್ವಪ್ನದಲ್ಲಿ ತೋರಬಲ್ಲದು; ಅರ್ಥಾತ್ ಜಾಗರವನ್ನು ಸ್ವಾಧೀನಪಡಿಸಿಕೊಂಡಂತೆ ಸ್ವಪ್ನವನ್ನು ಕೈಯಲ್ಲಿಟ್ಟುಕೊಳ್ಳುವದು ಸಾಧ್ಯವಿಲ್ಲ. ಅದಕ್ಕಾಗಿ ಸಾಧನೆ ಬೇಕು. ಅದು ಸ್ವಾನುಭಾವಿಯ ಜೀವನ ಕ್ರಮದಲ್ಲಿ ಕಾಣಬಲ್ಲೆವು. ಸಾಹಿತಿಯಾದವನು ವೃತ್ತಿಜ್ಞಾನವನ್ನು ಹಸನಾಗಿ ಬಣ್ಣಿಸಬಲ್ಲನು, ಆದರೆ ಬದಲು ಮಾಡಲಾರನು. ಸಾಹಿತಿಯ ನೆರವಿನಿಂದ ಇಂದ್ರಿಯಸನ್ನಿಕರ್ಷಜ್ಞಾನದ ಹುರುಡನ್ನು ತಿಳಿದು ಪ್ರಾತಿಭಚಕ್ಷುರುನ್ಮೀಲನಕ್ಕೆ ಸ್ವಾನುಭಾವಿಯು ಗುರಿಯಿಡುವನು. ಅನಿಮಿಷದೃಷ್ಟಿಯನ್ನು ಅರಳಿಸಿಕೊಳ್ಳುವನು; ಅವನಲ್ಲಿ ಕುರುಹಿನ ಸೋಂಕಿನಿಂದ ಅರುಹು ಬೆಳಗುವ ಗೂಢವು ಪುಟಗೊಳ್ಳುವದು. ವಿಷಯಗ್ರಹಣಗೊಳ್ಳುವ ಇಂದ್ರಿಯ ಶಕ್ತಿಯು-ಸಾಂಖ್ಯರ ತನ್ಮಾತ್ರವು-ಚಿತ್‌ಪ್ರಕಾಶಶಕ್ತಿಯಲ್ಲಿ ಪರಿವರ್ತನಗೊಳ್ಳುವದು. ಅಂಥ ಸ್ವಾನುಭಾವಿಯಲ್ಲಿ ಶಿವಶರಣರ ಪ್ರಾಣಲಿಂಗಿಯ ನಿಲವನ್ನು ಅರಿಯಬಹುದು. ಅವನಲ್ಲಿ ಇಂದ್ರಿಯಗಳು ವಿಷಯಗಳತ್ತ ಸಾಗದೆ, ಅವನ ಅನಿಮಿಷ ದೃಷ್ಟಿಯ ಅರಳಿನಲ್ಲಿ ಅವನ ಪ್ರಾತಿಭಚಕ್ಷುರುನ್ಮೀಲನದಲ್ಲಿ ವಿಷಯಗಳ ಮತ್ತು ಅವಕ್ಕೆ ಸಂಬಂಧಿಸಿದ ದೇಶಕಾಲ್ಮ ಅವಸ್ಥೆಗಳ ಅರಿವು ತಾನೆ ತಾನಾಗಿ ಸ್ಫುರಣಗೊಳ್ಳುವದು. ಅವನಲ್ಲಿ ಚಿತ್‌ಪ್ರಕಾಶದ ಪರಾಶಕ್ತಿಯು ತೊಳಗಿ ಬೆಳಗುವದು. 'ಎಲ್ಲರೊಳು ನೀನೆ ಇರುವೆ. ಎಲ್ಲವ ನೀ ವ್ಯಾಪಿಸಿರುವೆ' ಎಂಬ ಅನುಭವವು ಅವನಲ್ಲಿ ಕರಿಗೊಳ್ಳುವದು. ಅವನ ಈ ಜ್ಞಾನವು ಇಂದ್ರಿಯ

ಜನ್ಯಜ್ಞಾನವಲ್ಲ. ಆದ್ದರಿಂದ ಅದು ಅತಂತ್ರ ಜ್ಞಾನವಲ್ಲ. ಅದು ಗ್ರಂಥಸ್ಥವಾಗಿಹ ಆಗಮಜ್ಞಾನವಲ್ಲ; ಆದ್ದರಿಂದ ಶ್ರುತಜ್ಞಾನವೂ ಅಲ್ಲ. ಅದು ದೇವೋನ್ಮಾದದ ನಿಬ್ಬೆರಗಿನಲ್ಲಿ ಹೊರಹೊಮ್ಮುವ ಶುದ್ಧಾತ್ಮಕನ ಅರಿವಿನ ವ್ಯವಹಾರದಲ್ಲಿ ತಲೆದೋರುವ ಸಮ್ಯಕ್‌ಜ್ಞಾನವು; ಆದ್ದರಿಂದ ಅದು ಸ್ವಾನುಭಾವಜ್ಞಾನವು. ಅತಿಮಾನಸವಿಜ್ಞಾನವೆಂದರೂ ಇದುವೇ! ಸಾಹಿತ್ಯವು ಗ್ರಂಥಸ್ಥವಾಗಬಲ್ಲದು; ಆದರೆ ಸ್ವಾನುಭಾವವು ಗ್ರಂಥಸ್ಥವಾಗಲು ಶಕ್ಯವಿಲ್ಲ. ಸ್ವಾನುಭಾವವು ಜೀವಂತ ವ್ಯಕ್ತಿಗಳ ಹೃದಯಸ್ಥವಾಗಿಹುದು. ಸಾಹಿತಿಯ ಜ್ಞಾನವು ವೃತ್ತಿಗೆ ಸಂಬಂಧಿಸಿಹುದರಿಂದ ಅದು ಖಂಡಿತವಾಗಿಹುದು, ಪರಿಮಿತವಾಗಿಹುದು, ಸ್ವಾನುಭಾವಿಗೆ ನಿಲುಕುವ ಜ್ಞಾನವು ಅಖಂಡವಾದುದು, ಅಪರಿಮಿತವಾದುದು, ಸ್ಫುರಣೆಯಿಂದ ಕೂಡಿದುದು, ತ್ವರಿತ ಗತಿಯುಳ್ಳದು; ಅವನ ಅರಿವಿನ ಕಣ್ದೆರವಿನಲ್ಲಿ ಸೃಷ್ಟಿಯು ಕ್ಷಣಕ್ಷಣಕ್ಕೆ ಹೊಸಹೊಸದಾಗಿ ಕಂಗೊಳಿಸುವದು. ಸಾಹಿತಿಯಲ್ಲಿಯೂ ಸೃಷ್ಟಿಯನ್ನು ಹೊಸತಾಗಿ ಕಾಣುವ ನವದೃಷ್ಟಿಯಿದ್ದರೂ ಅದು ಸೃಷ್ಟಿಯನ್ನು ಇದ್ದಕ್ಕಿದ್ದಂತೆ ಕಾಣಲರಿಯದು. ದೋಷವಳಿದುಕೊಳ್ಳದ ಅವನ ದೃಷ್ಟಿಗೆ ಅದು ತಿರುವುಮುರುವಾಗಿ ತೋರುವದು. ದೃಷ್ಟಿಗಾವರಿಸಿದ ಮರಹಿನ ಪರಿಯು ಓರೆಯಾದ ಸಮ್ಯಕ್‌ಜ್ಞಾನಿಯ ದೃಷ್ಟಿಗೆ ಸೃಷ್ಟಿಯು ಇದ್ದಕ್ಕಿದ್ದಂತೆಯೇ ಕಾಣುವದು. ಮತ್ತು ಅವನ ಆ ದೃಷ್ಟಿಗೆ ಸೃಷ್ಟಿಯಲ್ಲಿಯ ನಾವೀನ್ಯತೆಯು ಸ್ಪಷ್ಟವಾಗುವದು. 'ದಿಟಪುಟಭಕುತಿ ಸಂಪುಟನೆಲೆಗೊಳ್ಳದಾಗಿ ಟೀವಕ ಟಂಬಕನನಾಡಿಸುತ್ತಿದ್ದಿಶಯ್ಯಾ ನಿನ್ನ ಮಾಯೆ' ಎಂಬುದು ಅವನ ಸುಜ್ಞಾನ ದೃಷ್ಟಿಗೆ ನಿಲುಕಿಹುದು. ಆದ್ದರಿಂದ ಸೃಷ್ಟಿಯ ಬಗೆಗೆ ಇಂಥ ಸಮ್ಯಕ್ ದೃಷ್ಟಿಯನ್ನು ಪಡೆಯುವದೇ ಸ್ವಾನುಭಾವಿಗೆ ಇಷ್ಟವಾಗಿಹುದು. ಆದ್ದರಿಂದ ಅವನು ಇಷ್ಟಲಿಂಗಪೂಜಕನು. ಅವನ ಆ ಅಖಂಡವಾದ, ಅಪರಿಮಿತವಾದ ಸ್ಫುರಣಾತ್ಮಕವಾದ, ತ್ವರಿತಗತಿಯ, ಸಮ್ಯಕ್‌ಜ್ಞಾನದ ದೆಸೆಯಿಂದ ಅವನು ಪರಿಪೂರ್ಣ ಜಂಗಮನೆನಿಸಿಕೊಳ್ಳುವನು. ಸಾಹಿತಿಗೆ ಜಡವಾದ ಇಂದ್ರಿಯಗಳ ಬಳಕೆಯಿಂದ ರಸಾಸ್ವಾದನೆ ಪಡೆಯುವದೇ (*Emotion*) ಜೀವನದ ಆತ್ಯಂತಿಕ ಗುರಿಯಾದರೆ, ಸ್ವಾನುಭಾವಿಗೆ ಅರುಹಿನ ಸೋಂಕಿನಿಂದ ಪಾರದರ್ಶಕವಾದ ಇಂದ್ರಿಯಗಳ ಬಳಕೆಯಿಂದ ನಿಟಿಲ ಭ್ರೂಮಧ್ಯದ ಸ್ಫಟಿಕ ವರ್ಣದ ಜ್ಯೋತಿಯಿಂದ, ಸ್ಫುರಣಾತ್ಮಕ ಜ್ಞಾನದಿಂದ,

ಸಮರಸ (*Intuition*) ಹೊಂದುವದೇ ಜೀವನದಲ್ಲಿ ಅವಶ್ಯವಾಗಿಹುದು. ಈ ಮೇಳದಲ್ಲಿ ಸಾಹಿತಿಯ ಮತ್ತು ಸ್ವಾನುಭಾವಿಯ ದೃಷ್ಟಿಗಳಲ್ಲಿ ಮೇಲು ಕೀಳುಗಳನ್ನರಿತುಕೊಳ್ಳಬಹುದು.

(ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿಯ ಸಾಹಿತ್ಯಸಮಿತಿಯವರು ಅಚ್ಚುಗೊಳಿಸಿದ ಹರಿಹರದೇವನ ರಕ್ಷಾಶತಕ, ಪಂಪಾಶತಕ ಇವನ್ನು ಶ್ರೀ ಕುಮಾರಸ್ವಾಮಿಗಳು ಪ್ರಕಟಗೊಳಿಸುವ ಅದೇ ಸಮಯದಲ್ಲಿ ಶತಕಗಳ ಬಗೆಗೆ ಆಗ ತಾನೇ ತಮಗೆ ಸ್ಫುರಣೆಗೊಂಡ ಸಂಗತಿಯನ್ನು ಹೀಗೆ ಹೇಳಿದರು.)

ಒಂದು ಇದು ಯಾವಾಗಲೂ ವ್ಯಕ್ತಿವಾಚಕವಾದುದು, ವಿಶ್ವದಲ್ಲಿ ಅಡಕವಾಗಿಹ ಸಂಗತಿಗಳನ್ನು ಒಂದೊಂದಾಗಿ ಗಣಿಸಬಹುದು. ಆದರೆ ಇಡಿಯ ವಿಶ್ವವು ಅಪಾರವಾದುದರಿಂದ ಅದು ನಮ್ಮ ತಿಳಿಯ ಅಳವಿಗೆ ಒಳಪಡದು. ಅದರ ಬಗೆಗೆ ನಮ್ಮ ದೃಷ್ಟಿಯು ಶೂನ್ಯತೆಗೊಳ್ಳುವದು. ಆದ್ದರಿಂದ ೧ ವ್ಯಕ್ತಿವಾಚಕವಾದರೆ. ೧ ರ ಮುಂದೆ ಬರುವ ಶೂನ್ಯದೊಡನೆ ತೋರುವ ೧೦ ವಿಶ್ವವಾಚಕವಾಗಿಹುದು. ಒಂದರ ಮುಂದೆ ಬರುವ ಶೂನ್ಯವು ವಿಶ್ವವು ಅನಂತವಾಗಿಹುದೆಂಬದನ್ನು ಸೂಚಿಸುವದು ಜೀವ ಜಗತ್ತುದೇವ. ಇವುಗಳಲ್ಲಿ ದೇವನು ಜೀವನಲ್ಲಿಲ್ಲ, ಅದರಂತೆ ಅವನು ಜಗತ್ತಿನಲ್ಲಿಯೂ ಇಲ್ಲ; ಅವನ ನಿಲವು, ವ್ಯಕ್ತಿವಿಶ್ವಗಳನ್ನು ಮೀರಿ ಆಚೆಗಿಹುದು. ಜೀವ ಭಾವವಳಿದಲ್ಲಿ, ಜಗತ್ತಿನ ಕಾಠಿಣ್ಯವು ಕರಗಿದಲ್ಲಿ ದೇವನ ನಿಲವನ್ನು ಅಳಿಯಲು ಅವಕಾಶವನ್ನು ಕಲ್ಪಿಸಬಹುದು. ಆದರೆ ಅದು ಕೇವಲ ಕಲ್ಪನೆ! ದೇವನನ್ನು ಕಾಣಲಿರುವೆನು ಎಂಬ ಹಂಬಲದಲ್ಲಿ ಆನಂದವಿರುವಂತೆ ಕಂಡಬಳಿಕ ಆ ಆನಂದವಿಲ್ಲ. ಅದು ಪರ್ಯವಸಾನಗೊಳ್ಳುವದು. ಅದರಂತೆ ದೇವನ ನಿಲವೂ ಖಂಡಿತವಾಗುವದು. ಖಂಡಿತವಾದ ಮಾನವನ ಕಲ್ಪನೆಗೆ ದೇವನು ಮೂಲತಃ ಅಖಂಡನು, ಅಳತೆಗೆ ನಿಲುಕದವನು. 'ಅತ್ಯತಿಷ್ಠದ್ದಶಾಂಗುಲನು' ಎಂದು ಶ್ರುತಿಗಳು ದೇವನನ್ನು ವರ್ಣಿಸುವ ರಹಸ್ಯವೂ ಕೂಡ ಇದನ್ನೇ ವ್ಯಕ್ತಗೊಳಿಸುವದು. ರೂಪಕ್ಕೆ ನಿಲುಕದ ದೇವನನ್ನು ರೂಪಿಸಲು ಯತ್ನಿಸಿದರೆ, ಅದು ಶೂನ್ಯವೇ! ಜೀವ, ಜಗತ್ತು, ದೇವ-ವ್ಯಕ್ತಿ, ವಿಶ್ವ, ವಿಶ್ವೋತ್ತೀರ್ಣ ಪರಶಿವ ಇವುಗಳ ಗೂಢವನ್ನು ಎದುರಿಟ್ಟುಕೊಂಡೇ ಕವಿಗಳು ಶತಕದ ಸಾಹಿತ್ಯವನ್ನು ನಿರ್ಮಿಸಿರಬೇಕು. ಹರಿಹರದೇವನಾಗಲಿ ಇನ್ನಾವ ಮಹಾನುಭಾವಿಯಾಗಲಿ ಬರೆದಿಹ ಶತಕಗಳ ಗೂಢವು ಇಂತಿರಬೇಕು.

---

# ಆತ್ಮ ನಿರೀಕ್ಷಣೆ.

(ಲೇಖಕಃ— ಶ್ರೀ. ಜಿ. ಎಸ್. ಕಸ್ನೂರ.)

ಅಭ್ಯಾಸದ ಒಂದು ದಾರಿಯೆಂದರೆ ದಿನಾಲು ತನ್ನನ್ನು ತಾನೇ ಪರೀಕ್ಷಿಸುವದು. ದಿನದ ಎಲ್ಲ ಕೆಲಸಗಳು ತೀರಿದ ನಂತರ ಶಾಂತಚಿತ್ತನಾಗಿ ಈ ಪರೀಕ್ಷೆಯನ್ನು ನಡಿಸಬೇಕು. ಒಂದೊಂದು ಕರ್ತವ್ಯವಿದ್ದ ಭಾಗಗಳಿಗೆ ೧೦೦ಕ್ಕೆ ೫೦ ರಂತೆ ಗುಣಗಳನ್ನು ಕಲ್ಪಿಸಿ ಅದರಲ್ಲಿ ತಾನು ಆ ದಿನ ಎಷ್ಟು ಗುಣ ಪಡೆಯಲರ್ಹನೆಂಬದನ್ನು ನಿರ್ಣಯಿಸಬೇಕು. ಉದಹರಿಸುವದಕ್ಕಾಗಿ—

| ವಿಷಯು | ಒಟ್ಟು ಗುಣ | ಪಡೆದ ಗುಣಗಳು | ಶರಾ |
| --- | --- | --- | --- |
| ೧ ಪ್ರಕೃತಿಯ ಸುಧಾರಣೆ | ೧೦೦ | ೮೦ | ಅವಶ್ಯವಿದ್ದ ಎಲ್ಲ ಕ್ರಮವ |
| ೨ ಉದ್ಯೋಗ | ೧೦೦ | ೬೦ | ನ್ನು ಅನುಸರಿಸಿತು. ಆದ |
| ೩ ನೈತಿಕ ಧೈರ್ಯ | ೫೦ | ೧೦ | ರೆ ವ್ಯಾಯಾಮ ಮಾಡು |
| ೪ ಇಂದ್ರಿಯ ಸ್ವಾಧೀನತೆ | ೫೦ | ೪೫ | ವಾಗ ಮನಸ್ಸುಗೊಡದ್ದ |
| ೫ ಅಧ್ಯಾತ್ಮ ಜ್ಞಾನ ಪ್ರಾಪ್ತಿ | ೧೦೦ | ೫ | ರಿಂದ ಆಗುವಷ್ಟು ಪರಿಣಾ |
| ೬ ಅಧ್ಯಾತ್ಮದ ಪ್ರಸ್ತುತ | ೧೦೦. | ೨೫ | ಮವಾಗಲಿಲ್ಲ. ಮಿತ್ರನ |
| ಅಭ್ಯಾಸ | | | ಗುಪ್ತ ಗೋಷ್ಠಿಯನ್ನು |
| | ೫೦೦ | ೨೨೫ | ಒಡೆದೆ. ಧ್ಯಾನ ಮಾಡಿದೆ. |
| | | | ಆದರೆ ಅದರಲ್ಲಿ ಮನಸ್ಸು |
| | | | ಇದ್ದಿಲ್ಲ. ಇತ್ಯಾದಿ |

'ಉದ್ಯೋಗವನ್ನು ತತ್ಪರತೆಯಿಂದ ಮಾಡಿದೆನೋ' ಇಲ್ಲವೆ 'ಮನಸ್ಸಿಲ್ಲದೆ ಅದು ಒಜ್ಜೆಯಂತಾಯಿತೋ' 'ಕೆಲಸದಲ್ಲಿ ಉಲ್ಲಾಸ ಸಮಚಿತ್ತಗಳು ಇದ್ದವೊ' ಇಲ್ಲವೆ 'ಕ್ಷೋಭ' ಕಿರಿಕಿರಿ ಮಾಡುವದು ಇವು ಸೇರಿದ್ದವೋ' ಇಲ್ಲವೆ 'ಕೆಲಸ ಎಷ್ಟಾಯಿತು ? ಅದು ಯಶಸ್ವಿಯಾಯಿತೋ ಇಲ್ಲವೋ' ಮುಂತಾದ್ದನ್ನು ಮುಂಜಾವಿನಿಂದ ಸಂಜೆಯ ವರೆಗೆ ಎಲ್ಲವೂ ನೆನಪು ಮಾಡಿಕೊಂಡು ನಿನಗೆ ಸರಿದೋರಿದಂತೆ ಹೆಚ್ಚು ಇಲ್ಲವೆ ಕಡಿಮೆ ಗುಣಗಳನ್ನು ಹಾಕಬೇಕು. ಏನಾದರೂ ತಪ್ಪು ಲಕ್ಷದಲ್ಲಿ ಬಂದರೆ ಅದನ್ನು ಮಾರ್ಜಿನದಲ್ಲಿ ಉಲ್ಲೇಖಿಸಬೇಕು.

ಆದರಂತೆಯೇ ನೈತಿಕ ಧೈರ್ಯದ ಕಾಲಮಿನಲ್ಲಿ ಅನ್ಯರಗೂಡ ವರ್ತಿಸುವಾಗ ದಾಕ್ಷಿಣ್ಯಕ್ಕೆ ಬಿದ್ದು ತಾನು ಮಾಡಬಾರದೆಂದು ನಿಶ್ಚಯಿಸಿದ್ದನ್ನು ಮಾಡಿದೆನೋ ಹೇಗೆ, ಸತ್ಯವನ್ನು ಬಚ್ಚಿಟ್ಟು ಮುಖಸ್ತುತಿ ಮಾಡಿದೆನೋ ಹೇಗೆ. ನಿಂದೆಗೆ ಕಿವಿಗೊಟ್ಟೆನೋ ಹೇಗೆ, ಎಂದು ಆಹೊತ್ತು ನಡೆದ ಆ ಸಂಗತಿಗಳನ್ನು ಪರೀಕ್ಷಿಸಿ ಗುಣಗಳನ್ನು ಹಾಕತಕ್ಕದ್ದು. ಮತ್ತು ಆದ ತಪ್ಪನ್ನು ಮಾರ್ಜಿನದಲ್ಲಿ ಬರೆಯಬೇಕು. ಅದರಂತೆ ಯಶಸ್ವಿಯಾಗಿ ಸಾಧಿಸಿದ ವಿಶೇಷ ಸಂಗತಿಗಳನ್ನೂ ಉಲ್ಲೇಖಿಸಬೇಕು. ಹೀಗೆಯೇ ತನಗೆ ಅವಶ್ಯವೆನಿಸಿದಷ್ಟು *heads* ಗಳನ್ನು ಮಾಡಿ ಗುಣ ಹಾಕುವ ಒಂದು ಪ್ರಮಾಣವನ್ನು ನಿರ್ಧರಿಸಿಡಬೇಕು. ಮತ್ತು ದಿನದಿನಕ್ಕೆ ಹೆಚ್ಚುಹೆಚ್ಚು ಗುಣ ಪಡೆಯಲಿಕ್ಕೆ ಯತ್ನ ಮಾಡಬೇಕು. ಅಂತಃಕರಣ ಸಾಕ್ಷಿಯಾಗಿ ಮಾಡಿದ ಸ್ವಪರೀಕ್ಷೆಯಲ್ಲಿ ಪೂರ್ಣ ಯಶಸ್ವಿಯಾಗಲು ಹೆಣಗಿದರೆ ಪ್ರಗತಿಯು ಹಾಂ ಹಾಂ ಅನ್ನುವದಲ್ಲಿ ಆಗುವದು ನಿಃಸಂಶಯವು.

ಧನ-ಮಾಸ ಉದ್ಯೋಗಗಳ ವಿವಿಧತೆ, ಆಧ್ಯಾತ್ಮ ಪ್ರಗತಿಯಲ್ಲಿಯ ಹೆಚ್ಚು ಕಡಿಮೆ, ಇವುಗಳ ಯೋಗದಿಂದ ನಾವು ಮೇಲೆ ಸೂಚಿಸಿದ ಪರೀಕ್ಷೆಯ ವಿಷಯಗಳು ಹಾಗೂ ಗುಣ ಹಾಕುವ ಪ್ರಮಾಣಗಳು ಬೇರೆ ಬೇರೆ ತರವಾಗಿರಬಲ್ಲವೆಂಬದು ಸ್ಪಷ್ಟವದೆ. ಬೌದ್ಧಿಕ ಕೆಲಸ ಹೆಚ್ಚಾಗಿ ಮಾಡುತ್ತಿದ್ದವನ ಪಟ್ಟಿಯಲ್ಲಿ 'ಆರೋಗ್ಯ'ವು ಪ್ರಮುಖಸ್ಥಾನ ಪಡೆದಿದ್ದರೆ, ಕಾಯಕಷ್ಟದ ಮನುಷ್ಯನದು 'ಪುಸ್ತಕಗಳ ಅಭ್ಯಾಸ ಹಾಗು ವಾಚನಾಲಯದಲ್ಲಿ ಓದುವದು' ಮೇಲ್ಮೆ ಗಣಿಸಲ್ಪಡಬಹುದು. ಅಲ್ಪ ಆದಾಯವುಳ್ಳ ಮನುಷ್ಯನು ಸಂತೆ ಮಾಡುವದು ಹಾಗೂ ಮಿತವ್ಯಯಗಳಿಗೆ ಹೆಚ್ಚಿನ ಸ್ಥಾನ ಕೊಟ್ಟರೆ ಶ್ರೀಮಂತ ವ್ಯಾಪಾರಸ್ಥನು ಸಂಪತ್ತಿಯ ಸದ್ವ್ಯಯ, ಸತ್ಪಾತ್ರದಲ್ಲಿ ದಾನಗಳ ಬಗ್ಗೆ ಹೆಚ್ಚು ಗಮನ ಕೊಡಬೇಕಾಗಬಹುದು. ಪ್ರಾಥಮಿಕ ಸಾಧಕನು ಮೂರ್ತಿ ಧ್ಯಾನದಲ್ಲಿ ತೊಡಗಿ ಅಲ್ಲಿಯೇ ಎಲ್ಲ ಲಕ್ಷ ಪೂರೈಸುತ್ತಿದ್ದರೆ ಪ್ರೌಢ ಪರಮಾರ್ಥಿಯು ತುರೀಯಾವಸ್ಥೆಯನ್ನು ಸಾಧಿಸಲು ಯತ್ನಿಸುತ್ತಿರಬಹುದು. ಅವರೆಲ್ಲರೂ ತಮಗೆ ಅನ್ವಯಿಸುವಂತೆ ಮೇಲಿನ ಕೋಷ್ಟಕವನ್ನು ಅನ್ವಯಿಸುವದು ಉಚಿತ, ಅಲ್ಲ ಅವಶ್ಯವೇ ಇರುವದು. ಯಾವದು ಮುಖ್ಯವಿರುವದು ಅಲ್ಲಿ ಪ್ರತಿಯೊಬ್ಬನು ತನ್ನ ಹೆಜ್ಜೆಯು ಮುಂದಕ್ಕೆ ಬೀಳುವಂತೆ ಅಭ್ಯಾಸವನ್ನು ಅನುಸರಿಸುವದೇ ಇರುತ್ತದೆ.

ಮೇಲಿನ ಬರವಣಿಗೆಯು ಬರೇ ದಿನಗೆಲಸಗಳನ್ನು ಉಲ್ಲೇಖಿಸುವ ಅರ್ಥ ಶೂನ್ಯ ವಹಿಯಾಗದೆ ಪ್ರತ್ಯಕ್ಷ ಲಾಭ ನೀಡುವಂತೆ ಎಚ್ಚರ ತಕ್ಕೊಳ್ಳುವದು ಅವಶ್ಯವಿದೆ. ಅದು ಬರುತ್ತಿರುವ ಯಶಸ್ಸಿನ ಪ್ರಮಾಣವನ್ನು ಮತ್ತು ಇನ್ನು ಮುಂದೆ ತಾನು ಮಾಡಬೇಕಾದ ಉಪಾಯಗಳನ್ನು ತೋರಿಸುತ್ತಿರಬೇಕು. ಮತ್ತು ಇವನು ಆ ಅನುಭವದ ಬೆಳಕಿನಲ್ಲಿ ಗತಿಶೀಲನಾಗಬೇಕು. ಅಂದರೆ ಧ್ಯೇಯ ಸಾಧನೆಯು ಬೇಗನೆ ಪೂರ್ತಿಗೊಳ್ಳುವದರಲ್ಲಿ ಸಂದೇಹವಿಲ್ಲ.

ತಪ್ಪದೇ ದಿನಚರಿ ಬರೆಯುತ್ತಿದ್ದರೆ ನಾವು ಮೇಲೆ ಹೇಳಿದ ಆತ್ಮ ಪರೀಕ್ಷೆಯನ್ನು ಅದರಲ್ಲಿ ಸಮಾವೇಶ ಮಾಡಬಹುದು. ಇದೂ ಅಲ್ಲದೆ ದಿನಚರಿ ಇಡುವದರಿಂದಾಗುವ ಲಾಭಗಳನ್ನು ಯಥಾಕ್ರಮವಾಗಿ ಹೇಳುವವರೇ ಇದ್ದೇವೆ.

---

# ಪರದ್ರವ್ಯವನ್ನಪಹರಿಸಬಾರದು.

(ಲೇಖಕ:— ಶಿವಮೂರ್ತಿ.)

ಪರದ್ರವ್ಯವನ್ನಪಹರಿಸದಿರುವದೇ ಶಿವಶರಣರ ಎರಡನೆಯ ಆಚಾರ. ಮನುಷ್ಯನು ತನ್ನ ಸ್ವಾರ್ಥಕ್ಕಾಗಿ ಹೆರವರ ಸೊತ್ತನ್ನಪಹರಿಸುವದು ದೊಡ್ಡ ಪಾಪವು. ಪರರ ದ್ರವ್ಯವನ್ನಪಹರಿಸಬಾರದೆಂಬ ಮಾತೇನೋ ಸುಲಭ. ಆದರೆ ಜಗತ್ತಿನಲ್ಲಿ ಹೆರವರ ಸೊತ್ತನ್ನು ಹರಣ ಮಾಡುವದಕ್ಕಾಗಿ ಎತ್ತ ನೋಡಿದತ್ತ ಕೋಲಾಹಲವು ನಡೆದಿರುವದಲ್ಲ! ಇದಕ್ಕೇನೆನ್ನಬೇಕು? ತಮ್ಮ ಹೊಟ್ಟೆಗೆ ದುಡಿಯಲಾರದೆ ಸೋಮಾರಿಗಳೂ, ಲಜ್ಜೆಗೇಡಿಗಳೂ ಆದ ಬೀದಿಯ ಭಿಕಾರಿಗಳೆಷ್ಟೋ ಜನರು ಹೆರವರ ದುಡ್ಡಿಗಾಗಿ ಅಂಗಲಾಚಿ ಬಾಯಿ ತೆರೆದು ಅದನ್ನು ಸೆಳೆಯುತ್ತಿರುವರಲ್ಲವೇ? ಹಾದಿಯಲ್ಲಿ ಹೋಗುವಾಗ ಅಕಸ್ಮಾತ್ ಹೆರವರ ಬಂಗಾರ ದೊಡವೆಗಳಾಗಲಿ ನೋಟು ರೂಪಾಯಿಗಳಾಗಲಿ ಕಣ್ಣಿಗೆ ಬಿದ್ದಿದ್ದರೆ ಅತ್ತಿತ್ತ ನೋಡಿ ಯಾರೂ ಕಾಣದಿದ್ದರೆ ಅವುಗಳನ್ನು ತಮ್ಮ ಕಿಸೆಯಲ್ಲಿ ಹಾಕಿಕೊಳ್ಳದವರಾರು? ದುಡ್ಡಿಲ್ಲದೆ ಲಕ್ಷಾಂತರ ಜನಗಳು ಉಪವಾಸ ಸಾಯುತ್ತಿರುವಾಗ ನಾಳೆ ತನ್ನ ಹೆಂಡಿರು ಮಕ್ಕಳಿಗೆ ಬಂದೀತೆಂದು

ಬಡವರ ಹೊಟ್ಟೆಯ ಮೇಲೆ ಬಡೆದು ಧನಕೂಡಿ ಹಾಕುವ ಜನರೆಷ್ಟೋ ಬೇಕು ? ಹೆರವರು ಹೂಳಿಟ್ಟ ಧನವು ಅಕಸ್ಮಾತ್ ಲಭಿಸಿದರೆ ಅದನ್ನು ತಮಗಾಗಿ ಬಚ್ಚಿಟ್ಟುಕೊಳ್ಳದವರುಂಟೇ ? ಪರರ ದುಡ್ಡಿನಾಶೆಗಾಗಿ ವ್ಯಾಪಾರಸ್ಥರು ಸಾಮಾನುಗಳನ್ನು ತುಟ್ಟಿಯಿಂದ ಮಾರಿ ಲಾಭಪಡೆಯು ತ್ತಿರುವರಲ್ಲವೇ ? ಶ್ರೀಮಂತರು ಪರಧನದಾಸೆಯಿಂದ ಮಿತಿಮೀರಿ ಬಡ್ಡಿ ತಿಂದು ಹೆರವರ ಹೊಲಮನೆಗಳನ್ನೆಲ್ಲ ಎತ್ತಿಹಾಕುತ್ತಿರುವದು ಅರಿ ಯದ ಮಾತೇ ? ಸಮಾಜ, ಸಂಸ್ಥೆ, ರಾಷ್ಟ್ರ ಹಿತಕ್ಕೆಂದು ಅನ್ಯರಿಂದ ದ್ರವ್ಯವನ್ನು ಶೇಖರಿಸಿ ತನ್ನ ಅಡಚಣಿಗಾಗಿ ಅದನ್ನು ಎತ್ತಿ ಹಾಕದ ಜನರೆಷ್ಟು ಮಂದಿ ಇದ್ದಾರೆ ? ನೌಕರಿ ಮಾಡುವಾಗ ಹೆರವರು ಲಂಚ ಕೊಟ್ಟರೆ ಅದನ್ನು ಮುಟ್ಟಬಾರದೆಂಬ ನೈತಿಕ ಬೆಂಬಲವಾರಿಗುಂಟು ? ಪಾಪ! ಬಡ ಜನಗಳಿಗೆಂದು ಬರಗಾಲದಲ್ಲಿ ಡೋಲು, ಕಾಳುಕಡಿಗಳನ್ನು ಕೊಟ್ಟರೆ ಅದರಲ್ಲಿ ಸಹ ತಮ್ಮ ಪಾಲನ್ನು ಸಾಧಿಸುವ ಅಧಿಕಾರಿಗ ಳೆಷ್ಟೋ ಇರುವರಲ್ಲ ! ವರದಕ್ಷಿಣೆಯ ಹೆಸರಿನಿಂದ ಮಾವನ ದುಡ್ಡನ್ನು ಸೆಳೆಯದ ಅಳಿಯನುಂಟೇ ? ತೆರವನ್ನು ಮುಂದೆ ಮಾಡಿ ಪರಧನಕ್ಕೆ ಮಗಳನ್ನು ಮಾರುವ ಕನ್ಯಾಪಿತೃಗಳೆಷ್ಟೋ ಇರುವರಲ್ಲವೇ ? ನಾನು ಕುಲಗುರು ಮಠದ ಸ್ವಾಮಿಯೆಂಬ ದರ್ಪವನ್ನು ತೋರಿಸಿ ಶಿಷ್ಯರಿಂದ ಒತ್ತಾಯ ಮಾಡಿ ದ್ರವ್ಯ ಅಪಹರಿಸುತ್ತಿರುವರಲ್ಲ ! ಮುನಸಿಪಾಲಿಟಿ, ಲೋಕಲ್ ಬೋರ್ಡ, ಕಾಯಿದೆ ಕೌನ್ಸಿಲ್ಲುಗಳ ಚುನಾವಣಿಗೆ ನಿಂತ ಉಮೇದವಾರರ ಕಡೆಯಿಂದ ದುಡ್ಡು ಸೆಳೆಯದ ಮತದಾರರೆಷ್ಟು ? ಎಷ್ಟೋ ಜನರು ಶ್ರೀಮಂತರ ಗೆಳೆತನ ಕಟ್ಟಿ ಚಹಾ, ಫರಾಳ, ಪಾರ್ಟಿ ಮೇಜವಾನಿಗಳ ಮುಖಾಂತರವಾಗಿ ಅವರ ದುಡ್ಡನ್ನು ಸದೆಬಡೆಯು ತ್ತಿರುವದಿಲ್ಲವೇ ? ಸ್ವಾಮಿಯ ಅಥವಾ ಸಂಸ್ಥೆಯ ಸೇವಾ ಕಾರ್ಯವನ್ನು ಪ್ರಮಾಣಿಕ ರೀತಿಯಿಂದ ಮಾಡದೆ ವ್ಯಯಮಾಳಿಸಿಕೊಂಡು 'ಹರಾಮು' ತಿನ್ನುವ ನೌಕರರೆಷ್ಟಿಲ್ಲ? ತನಗಿಲ್ಲೆಂದು ಗೆಳೆಯರಿಗೆ ಬಾಯ್ತೆರೆದು ಹಣ ವನ್ನು ಕಡ ತಂದು ಅದನ್ನು ತಿರುಗಿ ಕೊಡುವ ಪ್ರಸಂಗ ಬಂದಾಗ ಮೋರೆ ತಪ್ಪಿಸಿ ಕರೆ ಮೋರೆ ಕಟ್ಟಿಕೊಳ್ಳುವ ಜನರೆಷ್ಟಿಲ್ಲ ? ತನ್ನ ದೇಶದ ಸ್ವಾರ್ಥಕ್ಕಾಗಿ ಪರದೇಶದ ವ್ಯಾಪಾರ, ಪೇಟೆ, ಸಂಪತ್ತುಗಳನ್ನು ಹರಣ ಮಾಡುತ್ತಿರುವ ರಾಷ್ಟ್ರಗಳು ನಮ್ಮ ಕಣ್ಮುಂದೆ ಕುಣಿಯುತ್ತಿರುವದಿಲ್ಲವೇ? ಈ ರೀತಿಯಾಗಿ ಒಂದಿಲ್ಲೊಂದು ತರದಿಂದ ಹೆರವರ ಸೊತ್ತನ್ನು ಅಪ

ಹರಿಸುವ ಕಾರ್ಯಗಳು ನಡೆದಿರುವಾಗ ಪರದ್ರವ್ಯವನ್ನಪಹರಿಸಬಾರದೆಂಬ ಶರಣರ ನುಡಿಯು ಎಲ್ಲಿಗೆ ಮುಟ್ಟಬೇಕು? ಆದರೆ ಸತ್ಯಕ್ಕೆ ಸಾವಿಲ್ಲವಷ್ಟೇ? ಅನ್ಯಾಯದ ಗಳಿಕೆ ಅಡವೀಪಾಲು ಎಂಬಂತೆ ಪರರ ಸೊತ್ತನ್ನು ಸೆಳೆದು ಜೀವಿಸುವ ಪ್ರಾಣಿಗಳಿಗೆ ಒಂದಿಲ್ಲೊಂದು ಪರಿಯಿಂದ ಆಳಿಗಾಲವು ಕಟ್ಟಿಟ್ಟದ್ದೇ. ಇವತ್ತು ಸುಖ ದೊರೆತರೆ ನಾಳೆ ದುಃಖವು ಬಂದೇ ಬರುವದು. ಈಗಿನ ಯುದ್ಧವೇ ಇದಕ್ಕೆ ಪ್ರಬಲವಾದ ಉದಾಹರಣೆಯು. ಇದನ್ನರಿತು ಶಿವಶರಣರು ಇಂಥ ಯಾವ ಪರದ್ರವ್ಯಾಪಹಾರದ ಕೆಲಸಕ್ಕೂ ಕೈಹಾಕಲಿಲ್ಲ. ಅವರು ನಿತ್ಯ ಶುದ್ಧ ಕಾಯಕದಿಂದ ದ್ರವ್ಯವನ್ನು ಗಳಿಸಿ ಗುರುಲಿಂಗಜಂಗಮ ದಾಸೋಹಮಾಡಿ ಅರ್ಥಾತ್ ಸತ್ಕಾರ್ಯಕ್ಕೆ ಅದರ ಬಹುಭಾಗವನ್ನು ಸಲ್ಲಿಸಿ ಮಿಕ್ಕ ಸ್ವಲ್ಪ ಪ್ರಸಾದದಿಂದ ತೃಪ್ತರಾಗಿ ಜೀವಿಸುತ್ತಿದ್ದರು. ಶರಣರ ಪಾಠವನ್ನೇ ಬಹು ಜನರು ತೀಡಿದರೆ ಜಗತ್ತಿನಲ್ಲಿ ಹೋರಾಟವೇಳಲು ಶಕ್ಯವೇ? ಜಗತ್ತೆಲ್ಲ ಸುಖ ಶಾಂತಿಯ ತೌರಮನೆಯಾಗುವದು.

ಪರದ್ರವ್ಯವನ್ನು ಮುಟ್ಟಬಾರದೆಂಬ ವಿಷಯದಲ್ಲಿ ಶರಣರು ಎಷ್ಟು ಜಾಗರೂಕರಾಗಿದ್ದರೆಂಬದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ. ಈ ಜಗತ್ತಿನಲ್ಲಿ ಪರಧನವು ಅನಾಯಾಸವಾಗಿ ಕೈಗೆ ಸಿಕ್ಕರೆ ಒಲ್ಲೆನೆಂಬುವರಿಲ್ಲ. ಸುಳ್ಳನ್ನಾಡಿ ಅದನ್ನು ಎತ್ತಿಹಾಕಲಿಕ್ಕೆ ಹವಣಿಸುವವರೇ ಬಹು ಜನರು. ಆದರೆ ಶಿವಶರಣರು ಅಂಥ ಅಳಿಮನಸ್ಸಿನವರಲ್ಲ. ಅವರ ಹಾದಿಯಲ್ಲಿ ಹೆರವರ ಬಂಗಾರ ವಸ್ತ್ರಗಳು ಬಿದ್ದಿದ್ದರೆ ಅವರು ಅವುಗಳನ್ನು ಕಣ್ಣೆತ್ತಿ ನೋಡುವವರಲ್ಲ. ಮೌಳಿಗೆಯ ಮಾರಯ್ಯ, ಆಯ್ದಕ್ಕಿಮಾರಯ್ಯ ಈ ಶರಣರು ಬಡವರೆಂದು ತಿಳಿದು ಬಸವಣ್ಣನವರು ಕನಿಕರಹುಟ್ಟಿ ಹೊನ್ನಿನ ಚೀಲವನ್ನು ಅವರಿಗೆ ತಿಳಿಯದಂತೆ ಅವರ ಮನೆಯಲ್ಲಿರಿಸಿರಲು ಆ ಶರಣರು ಆ ಹಣವನ್ನು ಕಸದಂತೆ ಉಡುಗಿಬಿಟ್ಟರು. ಕೆಲವರು ಹೆರವರ ದುಡ್ಡು ನುಂಗಿ ಬಂದ ಪಾಪವನ್ನು ಕಳೆದುಕೊಳ್ಳಲಿಕ್ಕೆ ನದಿಯಲ್ಲಿ ಮುಳುಮುಳುಗಿ ಏಳುವರು. ಅಂಥವರ ವಿಷಯವಾಗಿ ಬಸವಣ್ಣನವರು ಹೇಳುವದೇನಂದರೆ "ತೊರೆಯ ಮೀವ ಅಣ್ಣಗಳಿರಾ, ತೊರೆಯಿರೋ ಪರಧನವ. ಪರದ್ರವ್ಯವ ಅಪಹರಿಸಿ ತೊರೆಯಲ್ಲಿ ಮಿಂದರೆ ಆ ತೊರೆಯೆಲ್ಲ ಬರುದೊರೆ ಕಂಡಯ್ಯಾ. ಕಳವ ತೊರೆದರೆ ಒಲಿವ ನಮ್ಮ ಕೂಡಲಸಂಗಮದೇವಾ."

ಕೆಲವರು ಲಿಂಗಪೂಜೆಯ ಆಡಂಬರವನ್ನು ಬೆಳೆಯಿಸಿ ಭಕ್ತರ ಕಡೆಯಿಂದ ದುಡ್ಡು ಎತ್ತಿಹಾಕುವ ಸೋಗುಹಾಕುವರು. ಅಂಥವರ ಬಗ್ಗೆ ಬಸಣ್ಣನವರು ಹೇಳುವದೇನಂದರೆ "ಕುಳಿತು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯಾ. ಲೋಗರರ್ಥವ ಕದಿವ ಕಳ್ಳರ ಕೈಯ್ಯ ಪೂಜೆಯನೊಲ್ಲ ನಮ್ಮ ಕೂಡಲಸಂಗಮದೇವಾ."

ಶರಣರಿಗೆ ಪರವಸ್ತುವೇ ದೊಡ್ಡ ಸಂಪತ್ತಾಗಿರಲು ಬೇರೆ ಐಹಿಕ ಸಂಪತ್ತಿಗೆಂದಿಗೂ ಅವರು ಆಶೆಮಾಡಲಾರರು. ಊರ ಮುಂದೆ ಹಾಲಿನ ಹಳ್ಳವು ಹರಿಯುತ್ತಿದ್ದರೆ ಹಾಲಿನಾಶೆಯಿಂದ ಜನರು ಅದನ್ನು ತೆಗೆದು ಕೊಳ್ಳದಿರುವರೇ? ಆ ವಸ್ತುವು ತಮ್ಮದಲ್ಲವೆಂದು ನಾಚಿಕೆಪಡುವರೇ? ಆದರೆ ಬಿಜ್ಜಳ ಭಾಂಡಾರವೆಲ್ಲ ಬಸವಣ್ಣನವರ ಕೈಯಲ್ಲಿ ಆಡುತ್ತಿದ್ದರೂ ಅವರಿಗೆ ಅದನ್ನು ಅಪಹರಿಸಬೇಕೆಂಬ ಮನಸ್ಸಾಗದೆ ನುಡಿದುದೇನಂದರೆ "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ. ಅದನ್ನು ಕೊಳ್ಳಬೇಕೆಂದು ಲಜ್ಜೆಗೆಡಲೇಕಯ್ಯಾ? ಕೂಡಲಸಂಗಮದೇವರೆನ್ನ ದೊಡ್ಡ ಸಂಪದವಾಗಿರಲು ಬಿಜ್ಜಳನ ಭಾಂಡಾರವೆನಗೇಕಯ್ಯಾ"

ಶರಣರು ತಮ್ಮ ಸ್ವಾರ್ಥಕ್ಕಾಗಿ ಪರರ ಸೇವೆ ಮಾಡುವವರಲ್ಲ. ಆದರೆ ಗುರುಲಿಂಗಜಂಗಮ ದಾಸೋಹಕ್ಕಾಗಿಯೇ ಮಾಡುವರೆಂಬ ಮಾತನ್ನು ಯಾರೂ ಮರೆಯಲಾಗದು. ಒಮ್ಮೆ ಕೆಲವು ಜಂಗಮರು ಬಸವಣ್ಣನವರಿಗೆ ಹೊನ್ನಿನಾಶೆಗಾಗಿ ಬಸವನನ್ನು ಭವಿಯಾದ ಬಿಜ್ಜಳನ ಮಂತ್ರಿಪದವನ್ನು ಕೈಕೊಂಡನೆಂದು ಹಂಗಿಸಿ ನುಡಿದರು. ಆಗ ಬಸವಣ್ಣನವರು ಹೇಳಿದುದೇನಂದರೆ— "ಭವಿ ಬಿಜ್ಜಳನ ಗದ್ದುಗೆಯ ಕುಳ್ಳಿರ್ದು ಓಲಯಿಸಿಹನೆಂಬರಯ್ಯ ಪ್ರಮಥರು. ಕೊಡುವೆನು ಮಾರುತ್ತರವನವರಿಗೆ. ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದೊಡೆ ನಿಮ್ಮಾಣೆಯಯ್ಯಾ ಕೂಡಲಸಂಗಮದೇವಾ" "ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು ಎನ್ನೊಡಲಿಗೆಂದು ಮಡದಿಮಕ್ಕಳಿಗೆಂದು ಮಾನವರ ಬೇಡೆನಯ್ಯಾ ಕೂಡಲಸಂಗಮ ದೇವಾ." ಶಿವಶರಣರು ಪರಿಶುದ್ಧಕಾಯಕಮಾಡಿ ದುಡ್ಡು ಗಳಿಸಿದರೂ ಕೂಡ ಅದರಲ್ಲಿ ಸ್ವಾರ್ಥದ ಲವಲೇಶವೂ ಇಲ್ಲವೆಂದು ಬಸವಣ್ಣನವರ ವಚನದಿಂದ ಸಿದ್ಧವಾಗುವದಿಲ್ಲವೇ?

ನಾಳೆ ತಮಗೆ ತಮ್ಮ ಹೆಂಡರುಮಕ್ಕಳಿಗೆ ಬಂದೀತೆಂದು ಶರಣರು ಧನವನ್ನು ಕೂಡಿಹಾಕುವವರಲ್ಲ. ಇವತ್ತು ಒಬ್ಬರ ಹೊಟ್ಟೆಗೆ ಸಲ್ಲತಕ್ಕ ಹಣವನ್ನು ನಾಳೆ ನಮ್ಮ ಸಲುವಾಗಿ ಕೂಡಿಡುವದು ಪಾಪವೇ ಸರಿ. ಇವತ್ತಿಗೆ ಕೊಟ್ಟ ಶಿವನು ನಾಳೆ ಹೆಂಡಿರು ಮಕ್ಕಳಿಗೆ ಕೊಡಲಾರನೇ? ದೇವರಲ್ಲಿ ವಿಶ್ವಾಸವಿಲ್ಲವೇ? ಹುಟ್ಟಿಸಿದ ಶಿವನು ಹುಲ್ಲು ಮೇಯಿಸುವನೇ? ಹೆಂಡರು ಮಕ್ಕಳ ಚಿಂತೆ ಮಾಡಲಿಕ್ಕೆ ನಾವಾರು? ಈ ಬಗ್ಗೆ ದೇವರ ದಾಸಿಮಯ್ಯಗಳು ಅಪ್ಪಣೆಕೊಡಿಸಿರುವದೇನಂದರೆ "ಇಂದಿಗೆಂತು ನಾಳಿಗೆಂತು ಎಂದು ಚಿಂತಿಸಲೇಕೆ? ತಂದಿಕ್ಕುವ ಶಿವಂಗೆ ಬಡತನವೇ ರಾಮನಾಥಾ?" ಕ್ರೈಸ್ತನು ದೇವರಿಗೆ ಇಷ್ಟೇ ಬೇಡಿಕೊಂಡಿದ್ದಾನೆ. "ದೇವಾ, ನನಗೆ ಇವತ್ತಿನ ರೊಟ್ಟಿಯನ್ನಷ್ಟೇ ಕೊಡು." ಯಾವ ಪಶುಪಕ್ಷಿಗಳೂ ತಮ್ಮ ಮಕ್ಕಳಮರಿಗಳಿಗೆ ನಾಳಿಗೆಂದು ಕೂಡಿಡುವದಿಲ್ಲ. ಹಣವನ್ನು ಕೂಡಿಡುವದೆಂದರೆ ಕೆಲವು ಬಡಜೀವಿಗಳ ಪ್ರಾಣಘಾತಮಾಡಿದಂತೆಯೇ ಸರಿ. ಕೋಟ್ಯಾಧೀಶರ ಬೊಕ್ಕಸದಲ್ಲಿ ಹಣವು ಕಿಕ್ಕಿರಿದು ತುಂಬಿದ್ದರಿಂದಲೇ ಬಡವರ ಒಡಲುಗಳು ಕಕ್ಕಸಬಡುತ್ತಿರುವವಲ್ಲವೇ?

ದುಡ್ಡು ಗಳಿಸುವದಷ್ಟೇ ಮನುಷ್ಯನ ಅಂತಿಮ ಧ್ಯೇಯವಲ್ಲ. ದುಡ್ಡಿನ ಆಶೆಯುಳ್ಳವರು ಒಬ್ಬರ ಆಧೀನದಲ್ಲಿರುವರು. ದುಡ್ಡಿನ ಸವಿಯು ತಲೆಗೇರಿದರೆ ಮನುಷ್ಯನು ಪರಮಾತ್ಮನನ್ನು ಮರೆತು ದುಡ್ಡಿನ ಬೆನ್ನು ಹತ್ತುತ್ತಾನೆ. ಆದುದರಿಂದ ದುಡ್ಡಿನಾಶೆ ಮಾಡುವದಾದರೂ ಪರದ್ರವ್ಯಾಪಹರಣದಷ್ಟೇ ಪಾಪವು. ಆದುದರಿಂದ ದ್ರವ್ಯದಾಶೆಯಿರಬಾರದೆಂದೇ ಶರಣರು ಈ ಪ್ರಕಾರ ಅಪ್ಪಣೆಕೊಡಿಸಿದ್ದಾರೆ.

"ಆಶೆಯುಳ್ಳಾತ ಒಬ್ಬರ ಆಧೀನದಲ್ಲಿಪ್ಪನು. ಆಶೆಯೇ ದಾಸತ್ವ, ನಿರಾಶೆಯೇ ಈಶತ್ವ, ಅದುಕಾರಣ ನಿರಾಶೆಯಾಗಿರ್ಪುದೇ ಈಶಪದಮಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ." ಒಬ್ಬ ಆಂಗ್ಲ ಕವಿಯು ದುಡ್ಡಿನಾಶೆಯ ಬಗ್ಗೆ ಹೇಳಿದ್ದರ ಸಾರಾಂಶವೇನಂದರೆ "ಕೆಲವರಿಗೆ ವಿಪುಲ ಧನವಿರುತ್ತದೆ. ಆದಾಗ್ಯೂ ಮತ್ತಿಷ್ಟು ಬರಲೆಂದು ಆಶೆಮಾಡುತ್ತಾರೆ. ಆದರೆ ನನಗೆ ಸ್ವಲ್ಪೇ ಹಣವುಂಟು. ಆದಾಗ್ಯೂ ಹೆಚ್ಚಿನಾಶೆ ನನಗಿಲ್ಲ. ಬಹಳ ಸಂಪತ್ತಿದ್ದೂ ಹೆಚ್ಚಿಗಾಶೆಮಾಡುವವರೇ ಬಡವರು. ಸ್ವಲ್ಪೇ ಸಂಪತ್ತಿದ್ದರೂ ನಿರಾಶೆಯಾಗಿರುವವರೇ ಧನಿಕರು."

ಅನೇಕರು ತಮ್ಮ ಮನಸ್ಸು ದುರ್ಬಲವಾದದ್ದೂ ಆಶೆಬುರುಕವಾದದ್ದೂ ಎಂದು ಹೇಳದೆ ಹೊನ್ನು ಹೆಣ್ಣು ಮಣ್ಣು ಇವು ಮಾಯವುಳ್ಳವುಗಳು. ಇವು ಮನುಷ್ಯನನ್ನು ಆಶೆಯೆಂಬ ಪಾಶದಲ್ಲಿ ಕೆಡವಿ ಗಾಸಿಗೊಳಿಸುತ್ತವೆ ಎಂದು ಹೇಳುವದುಂಟು. ಈ ಮಾತಿಗೆ ಶರಣರು ಉತ್ತರಕೊಡುವದೇನಂದರೆ "ಹೊನ್ನು ಹೆಣ್ಣು ಮಣ್ಣು ಮಾಯೆಯೆಂಬರು. ಇವಾವೂ ಮಾಯೆಯಲ್ಲ. ಮನದ ಮುಂದಣಾಶೆಯೇ ಮಾಯೆ ಕಾಣಾ ಗುಹೇಶ್ವರಾ."

ಮನುಷ್ಯನು ತಾನು ಗಳಿಸಿದ್ದನ್ನು ತಾನೇ ಉಣ್ಣುವದು ಪಾಪವು. ಅವನು ತನ್ನ ಬಂಧುಬಳಗ ದೈವದವರೊಂದಿಗೆ ಊಟಮಾಡಬೇಕೆಂದು ಶರಣರು ಹೇಳಿದ್ದಾರೆ. ಇಂಥ ಉದಾರ ಬುದ್ಧಿಯು ಈಗಿನ ಮನ್ವಂತರದಲ್ಲಿ ಲೋಪವಾಗಿದೆ. "ಕಾಗೆಯೊಂದಗಳು ಕಂಡರೆ ಕೂಗಿ ಕರೆಯದೇ ತನ್ನ ಬಳಗವನೆಲ್ಲವನು? ಕೋಳಿಯೊಂದು ಗುಟುಕು ಕಂಡರೆ ಕರೆಯದೇ ತನ್ನ ಕುಲವನ್ನೆಲ್ಲವನು ? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ ಕಾಣಾ ಕೂಡಲಸಂಗಮದೇವಾ" ಎಂದು ಬಸವಣ್ಣನವರು ಹೇಳಿರುವರು.

ಮನುಷ್ಯನಿಗೆ ಸಂಪತ್ತುಬರಬೇಕಾದರೆ ಅವನ ಪ್ರಯತ್ನ ಪೂರ್ವಜನ್ಮದ ಪುಣ್ಯಗಳಷ್ಟೇ ಸಾಲವು. ಆತನಿಗೆ ಪರಶಿವನ ಕೃಪೆಯು ಬೇಕಾಗುತ್ತದೆ. ಆತನ ಕೃಪೆಯು ತಪ್ಪಿದರೆ ಲಕ್ಷ್ಮಿಯು ಕ್ಷಣಮಾತ್ರದಲ್ಲಿ ಕಣ್ಮರೆಯಾಗುವಳು. ಇದನ್ನರಿತು ಶರಣರು ಶಿರಿಯನ್ನು ನಚ್ಚದೆ ಪರವಸ್ತುವನ್ನೇ ನಂಬುವರು. ಶರಣರು ದ್ರವ್ಯದಾಶೆಯನ್ನು ಪರವಸ್ತುವಿನ ಕಡೆಗೆ ಹೊರಳಿಸಿ ತಮ್ಮ ಜೀವನವನ್ನು ಉದಾತ್ತಗೊಳಿಸಿದ್ದಾರೆ. ಪರಶಿವನ ಕೃಪಾಕೃಪೆಗಳಿಂದಾಗುವ ಲಾಭನಷ್ಟಗಳ ವಿಷಯವಾಗಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ— "ಹರನೀವಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ. ನೆರೆಯದ ವಸ್ತು ನೆರೆವುದು ನೋಡಯ್ಯಾ. ಅರಸುಪರಿವಾರ ಕೈವಾರ ನೋಡಯ್ಯಾ. ಪರಮನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯು ಕಲ್ಲು ಕೊಂಡಂತೆ ಕೂಡಲಸಂಗಮದೇವಾ." ಅದು ಕಾರಣ 'ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ. ಸಿರಿಯೆಂಬುದು ಕನಸಿನ ಪರಿಯಂತೆ

ನೋಡಾ ಎಲೋ ಮರುಳಮಾನವಾ, ಇದನರಿತು ಶ್ರೀಮಹಾದೇವನ ಪೂಜಿಸಿದೊಡೆ ಸ್ಥಿರವಾದ ಪದವಿಯುನೀವನೆಂಬುದಾಗಿ ಶರಣರು ಹೇಳಿದ್ದಾರೆ.

ಇದನ್ನು ತಿಳಿದೂ ತಿಳಿದೂ ಮನುಷ್ಯನು ದೇವರನ್ನು ಮರೆದು ದುಡ್ಡಿನ ಬೆನ್ನುಹತ್ತುತ್ತಿರುವದು ಆಶ್ಚರ್ಯವೇ ಸರಿ. "ಕಾಂಚನವೆಂಬ ನಾಯನೆಚ್ಚಿ ನಾನು ನಿಮ್ಮನು ಮರೆದೆನಯ್ಯಾ, ಕಾಂಚನಕ್ಕೆ ವೇಳೆಯುಲ್ಲದೆ ಲಿಂಗಕ್ಕೆ ವೇಳೆಯಿಲ್ಲಯ್ಯಾ. ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯು ಬಲ್ಲುದೇ ಕೂಡಲಸಂಗಮದೇವಾ." ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ.

ದುಡ್ಡನ್ನು ನೆಚ್ಚಿ ಕೆಡಬೇಡಿರೆಂದು ಶರಣರು ನಮಗೆ ಈ ರೀತಿಯಾಗಿ ಎಚ್ಚರಿಕೆ ಕೊಟ್ಟಿದ್ದಾರೆ. "ನಾವು ಪಡೆದ ದ್ರವ್ಯವು ನಮ್ಮದೆಂದು ನೆಚ್ಚಬೇಡಿರೋ ಎಲೆ ಹುಚ್ಚ ಮಾನವರಿರಾ, ಅವು ನಿಮ್ಮೊಡವೆಯಾದೊಡೆ ನೀವು ಮಡಿದು ಹೋಗುವಾಗ್ಗೆ ನಿಮ್ಮ ಹಿಂದೆ ಬರ್ಪವೇ? ಹೇಳಿರೋ? ಇದನರಿತು ವೃಡನ ಸೇವೆಯಲ್ಲಿ ತೊಡಗಿದರೆ ಕಡೆಮೊದಲಿಲ್ಲದ ಪದವು ದೊರೆಕೊಂಬುದು ಅಖಂಡೇಶ್ವರಾ."

ಆದುದರಿಂದ ಶಿವನು ಕೊಟ್ಟ ದುಡ್ಡನ್ನು ಶಿವಕಾರ್ಯಕ್ಕೆ ಸಲ್ಲಿಸದೆ ಆತ್ಮಪುತ್ರರಿಗೆಂದು ಕೂಡಿಡಬೇಡವೆಂದು ಶರಣರು ಹೀಗೆ ಅಪ್ಪಣೆಕೊಡಿಸಿದ್ದಾರೆ. "ಅರ್ಥವ ಗಳಿಸಿ ಆತ್ಮಪುತ್ರರಿಗಿರಿಸಬೇಡ ಶಿವನಲ್ಲದೆ ಹಿತವಹರಿಲ್ಲವೆಂದರಿದು ಶಿವನೊಡವೆಯ ಶಿವನವರಿಗೆ ಕೊಡು ಮರುಳೇ ಅರ್ಥದಲ್ಲೇನೂ ಸುಖವಿಲ್ಲ. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ."

ದುಡ್ಡಿನಾಶೆಗಾಗಿ ಶರಣರು ದುಷ್ಟರ ಸೇವೆ ಮಾಡುವವರಲ್ಲ. ದುಡ್ಡುಗಳಿಸುವದೇ ಅವರ ಜೀವನ ಗುರಿಯಲ್ಲ. ಭಕ್ತಿಯ ಗಳಿಕೆಗಾಗಿಯೇ ಅವರು ತಮ್ಮ ಜೀವವನ್ನು ಮೀಸಲಾಗಿರಿಸಿದ್ದಾರೆ. ಈ ಬಗ್ಗೆ ಬಸವಣ್ಣನವರು ಅಪ್ಪಣೆಕೊಡಿಸಿದ್ದೇನಂದರೆ "ದೂಷಕನೊಬ್ಬನು ದೇಶವ ಕೊಟ್ಟರೆ ಆಶೆಮಾಡಿ ಅವನ ಹೊರೆಯಲ್ಲಿರಬೇಡ. ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದು ಕರಲೇಸಯ್ಯಾ ಕೂಡಲಸಂಗಮದೇವಾ."

ಪರದ್ರವ್ಯದಾಶೆಗಾಗಿ ಜಗತ್ತಿನಲ್ಲಿ ಅನೇಕ ಘಟಾಟೋಪಗಳು ನಡೆದಿರುತ್ತವೆ. ಕಳವು, ಕೊಲೆಸುಲಿಗೆ, ಯುದ್ಧ, ಪೇಟೆಗಳ ಲೂಟಿ, ಪರದೇಶಗಳ ಆಕ್ರಮಣ ಮುಂತಾದವುಗಳು ಪರದ್ರವ್ಯದಾಶೆಯಿಂದಲೇ ಜರ

ಅನೇಕರು ತಮ್ಮ ಮನಸ್ಸು ದುರ್ಬಲವಾದದ್ದೂ ಆಶೆಬುರುಕವಾದದ್ದೂ ಎಂದು ಹೇಳದೆ ಹೊನ್ನು ಹೆಣ್ಣು ಮಣ್ಣು ಇವು ಮಾಯವುಳ್ಳವುಗಳು. ಇವು ಮನುಷ್ಯನನ್ನು ಆಶೆಯೆಂಬ ಪಾಶದಲ್ಲಿ ಕೆಡವಿ ಗಾಸಿಗೊಳಿಸುತ್ತವೆ ಎಂದು ಹೇಳುವದುಂಟು. ಈ ಮಾತಿಗೆ ಶರಣರು ಉತ್ತರಕೊಡುವದೇನಂದರೆ "ಹೊನ್ನು ಹೆಣ್ಣು ಮಣ್ಣು ಮಾಯೆಯೆಂಬರು. ಇವಾವೂ ಮಾಯೆಯಲ್ಲ. ಮನದ ಮುಂದಣಾಶೆಯೇ ಮಾಯೆ ಕಾಣಾ ಗುಹೇಶ್ವರಾ."

ಮನುಷ್ಯನು ತಾನು ಗಳಿಸಿದ್ದನ್ನು ತಾನೇ ಉಣ್ಣುವದು ಪಾಪವು. ಅವನು ತನ್ನ ಬಂಧುಬಳಗ ದೈವದವರೊಂದಿಗೆ ಊಟಮಾಡಬೇಕೆಂದು ಶರಣರು ಹೇಳಿದ್ದಾರೆ. ಇಂಥ ಉದಾರ ಬುದ್ಧಿಯು ಈಗಿನ ಮನ್ವಂತರದಲ್ಲಿ ಲೋಪವಾಗಿದೆ. "ಕಾಗೆಯೊಂದಗಳು ಕಂಡರೆ ಕೂಗಿ ಕರೆಯದೇ ತನ್ನ ಬಳಗವನೆಲ್ಲವನು? ಕೋಳಿಯೊಂದು ಗುಟುಕು ಕಂಡರೆ ಕರೆಯದೇ ತನ್ನ ಕುಲವನ್ನೆಲ್ಲವನು? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗೆ ಕೋಳಿಗಿಂತ ಕರಕಷ್ಟ ಕಾಣಾ ಕೂಡಲಸಂಗಮದೇವಾ" ಎಂದು ಬಸವಣ್ಣನವರು ಹೇಳಿರುವರು.

ಮನುಷ್ಯನಿಗೆ ಸಂಪತ್ತುಬರಬೇಕಾದರೆ ಅವನ ಪ್ರಯತ್ನ ಪೂರ್ವಜನ್ಮದ ಪುಣ್ಯಗಳಷ್ಟೇ ಸಾಲವು. ಆತನಿಗೆ ಪರಶಿವನ ಕೃಪೆಯು ಬೇಕಾಗುತ್ತದೆ. ಆತನ ಕೃಪೆಯು ತಪ್ಪಿದರೆ ಲಕ್ಷ್ಮಿಯು ಕ್ಷಣಮಾತ್ರದಲ್ಲಿ ಕಣ್ಮರೆಯಾಗುವಳು. ಇದನ್ನರಿತು ಶರಣರು ಸಿರಿಯನ್ನು ನಚ್ಚದೆ ಪರವಸ್ತುವನ್ನೇ ನಂಬುವರು. ಶರಣರು ದ್ರವ್ಯದಾಶೆಯನ್ನು ಪರವಸ್ತುವಿನ ಕಡೆಗೆ ಹೊರಳಿಸಿ ತಮ್ಮ ಜೀವನವನ್ನು ಉದಾತ್ತಗೊಳಿಸಿದ್ದಾರೆ. ಪರಶಿವನ ಕೃಪಾಕೃಪೆಗಳಿಂದಾಗುವ ಲಾಭನಷ್ಟಗಳ ವಿಷಯವಾಗಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ— "ಹರನೀವಕಾಲಕ್ಕೆ ಸಿರಿಯು ಬೆನ್ನಲ್ಲಿ ಬಕ್ಕು. ಹರಿದು ಹೆದ್ದೊರೆಯು ಕೆರೆ ತುಂಬಿದಂತಯ್ಯಾ. ನೆರೆಯದ ವಸ್ತು ನೆರೆವುದು ನೋಡಯ್ಯಾ. ಅರಸುಪರಿವಾರ ಕೈವಾರ ನೋಡಯ್ಯಾ. ಪರಮನಿರಂಜನನು ಮರೆವ ಕಾಲಕ್ಕೆ ತುಂಬಿದ ಹರವಿಯ ಕಲ್ಲು ಕೊಂಡಂತೆ ಕೂಡಲಸಂಗಮದೇವಾ." ಅದು ಕಾರಣ 'ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ. ಸಿರಿಯೆಂಬುದು ಕನಸಿನ ಪರಿಯಂತೆ

ನೋಡಾ ಎಲೋ ಮರುಳಮಾನವಾ, ಇದನರಿತು ಶ್ರೀಮಹಾದೇವನ ಪೂಜಿಸಿದೊಡೆ ಸ್ಥಿರವಾದ ಪದವಿಯುನೀವನೆಂಬುದಾಗಿ ಶರಣರು ಹೇಳಿದ್ದಾರೆ.

ಇದನ್ನು ತಿಳಿದೂ ತಿಳಿದೂ ಮನುಷ್ಯನು ದೇವರನ್ನು ಮರೆದು ದುಡ್ಡಿನ ಬೆನ್ನುಹತ್ತುತ್ತಿರುವದು ಆಶ್ಚರ್ಯವೇ ಸರಿ. "ಕಾಂಚನವೆಂಬ ನಾಯನೆಚ್ಚಿ ನಾನು ನಿಮ್ಮನು ಮರೆದೆನಯ್ಯಾ, ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲಯ್ಯಾ. ಹಡಿಕಿಗೆ ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ ಕೂಡಲಸಂಗಮದೇವಾ." ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ.

ದುಡ್ಡನ್ನು ನಚ್ಚಿ ಕೆಡಬೇಡಿರೆಂದು ಶರಣರು ನಮಗೆ ಈ ರೀತಿಯಾಗಿ ಎಚ್ಚರಿಕೆ ಕೊಟ್ಟಿದ್ದಾರೆ. "ನಾವು ಪಡೆದ ದ್ರವ್ಯವು ನಮ್ಮದೆಂದು ನೆಚ್ಚಬೇಡಿರೋ ಎಲೆ ಹುಚ್ಚ ಮಾನವರಿರಾ, ಅವು ನಿಮ್ಮೊಡವೆಯಾದೊಡೆ ನೀವು ಮಡಿದು ಹೋಗುವಾಗ್ಗೆ ನಿಮ್ಮ ಹಿಂದೆ ಬರ್ಪವೇ? ಹೇಳಿರೋ? ಇದನರಿತು ಮೃಡನ ಸೇವೆಯಲ್ಲಿ ತೊಡಗಿದರೆ ಕಡೆಮೊದಲಿಲ್ಲದ ಪದವು ದೊರೆಕೊಂಬುದು ಅಖಂಡೇಶ್ವರಾ."

ಆದುದರಿಂದ ಶಿವನು ಕೊಟ್ಟ ದುಡ್ಡನ್ನು ಶಿವಕಾರ್ಯಕ್ಕೆ ಸಲ್ಲಿಸದೆ ಆತ್ಮಪುತ್ರರಿಗೆಂದು ಕೂಡಿಡಬೇಡವೆಂದು ಶರಣರು ಹೀಗೆ ಅಪ್ಪಣೆ ಕೊಡಿಸಿದ್ದಾರೆ. "ಅರ್ಥವ ಗಳಿಸಿ ಆತ್ಮಪುತ್ರರಿಗಿರಿಸಬೇಡ ಶಿವನಲ್ಲದೆ ಹಿತವಹರಿಲ್ಲವೆಂದರಿದು ಶಿವನೊಡವೆಯ ಶಿವನವರಿಗೆ ಕೊಡು ಮರುಳೇ ಅರ್ಥದಲ್ಲೇನೂ ಸುಖವಿಲ್ಲ. ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ."

ದುಡ್ಡಿನಾಶೆಗಾಗಿ ಶರಣರು ದುಷ್ಟರ ಸೇವೆ ಮಾಡುವವರಲ್ಲ. ದುಡ್ಡುಗಳಿಸುವದೇ ಅವರ ಜೀವನ ಗುರಿಯಲ್ಲ. ಭಕ್ತಿಯ ಗಳಿಕೆಗಾಗಿಯೇ ಅವರು ತಮ್ಮ ಜೀವವನ್ನು ಮೀಸಲಾಗಿರಿಸಿದ್ದಾರೆ. ಈ ಬಗ್ಗೆ ಬಸವಣ್ಣನವರು ಅಪ್ಪಣೆಕೊಡಿಸಿದ್ದೇನಂದರೆ "ದೂಷಕನೊಬ್ಬನು ದೇಶವ ಕೊಟ್ಟರೆ ಆಶೆಮಾಡಿ ಅವನ ಹೊರೆಯಲ್ಲಿರಬೇಡ. ಮಾದರ ಶಿವಭಕ್ತನಾದರೆ ಆತನ ಹೊರೆಯಲ್ಲಿ ಭೃತ್ಯನಾಗಿರ್ಪುದು ಕರಲೇಸಯ್ಯಾ ಕೂಡಲಸಂಗಮದೇವಾ."

ಪರದ್ರವ್ಯದಾಶೆಗಾಗಿ ಜಗತ್ತಿನಲ್ಲಿ ಅನೇಕ ಘಟಾಟೋಪಗಳು ನಡೆದಿರುತ್ತವೆ. ಕಳವು, ಕೊಲೆಸುಲಿಗೆ, ಯುದ್ಧ, ಪೇಟೆಗಳ ಲೂಟಿ, ಪರದೇಶಗಳ ಆಕ್ರಮಣ ಮುಂತಾದವುಗಳು ಪರದ್ರವ್ಯದಾಶೆಯಿಂದಲೇ ಜರ

ಗುತ್ತಲಿವೆ. ಆದರೆ 'ಸರ್ವೇಽಪಿ ಸುಖಿನಃ ಸಂತು ಸರ್ವೇ ಸಂತು ನಿರಾಮಯಾಃ। ಸರ್ವೇಭದ್ರಾಣಿ ಪಶ್ಯಂತುಮಾಕಶ್ಚಿತ್ ದುಃಖಮಾಪ್ನುಯಾತ್" ಎಂಬ ಶ್ರುತಿವಾಕ್ಯವು ಗ್ರಂಥದಲ್ಲಿಯೇ ಉಳಿದಿರುವದಲ್ಲದೆ ಆಚರಣೆಯಲ್ಲಿಲ್ಲ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ನಿಜವಾದ ಜಗದುದ್ಧಾರಕರು. ಈಗಿನ ಸುಧಾರಣೆಯು ಎಲ್ಲೆಯನ್ನು ಮೀರಿದ ರಾಷ್ಟ್ರಗಳು ಲೋಕಕಂಟಕಗಳು.

ಈ ಜಗತ್ತಿನ ಜೀವನ ಹೋರಾಟದಲ್ಲಿ ದುರ್ಬಲರು ಸಾಯಲೇಬೇಕು. ಬಲ್ಲಿದರು ಬದುಕಬೇಕೆಂಬ ತತ್ವವು ತಲೆದೋರುತ್ತಲಿದೆ. "ಜೀವೋ ಜೀವಸ್ಯ ಜೀವನಂ" ಎಂಬಂತೆ ಪರರ ಸೊತ್ತನ್ನು ನುಂಗಿಕೊಬ್ಬಿರುವ ಜೀವರುಗಳೇ ಎಲ್ಲೆಡೆಯಲ್ಲಿಯೂ ಕಂಡುಬರುತ್ತಿವೆ. ಶ್ರೀಮಂತರು, ಗಿರಣಿ ಯಜಮಾನರಾದ ಕೋಟ್ಯಾಧೀಶರು, ಸರಕಾರಗಳು ಬಡವರ ಸತ್ವವನ್ನು ಹೀರಿ ಕೊಬ್ಬಿರುತ್ತವೆ. ಈಗಿನ ಜಾಗತಿಕ ಯುದ್ಧವು ಪರರಾಷ್ಟ್ರಗಳ ರಕ್ತವನ್ನು ಹೀರಬೇಕೆಂಬ ಲಾಲಸೆಯಿಂದಲೇ ಪ್ರಾದುರ್ಭವಿಸಿರುತ್ತದೆ.

ಮನುಷ್ಯನು ಪವಿತ್ರವಾದ ಕಾಯಕದಿಂದ ಗಳಿಸಿದ ಸಂಪತ್ತೇ ದೈವೀ ಸಂಪತ್ತು ಅದೇ ಶಿವನಿಗೆ ಸಲ್ಲುವದು. ಒಬ್ಬರ ಗಂಟಲವನ್ನು ಹಿಸುಕಿ ಗಳಿಸಿದ್ದು ಅಸುರೀ ಸಂಪತ್ತು. ಅದು ಶಿವನಿಗೆ ಸಲ್ಲದು. ದೈವೀ ಸಂಪತ್ತಿನಿಂದ ಮೋಕ್ಷ ಲಭಿಸುತ್ತದೆ. ಅಸುರೀಸಂಪತ್ತು ಮನುಷ್ಯನನ್ನು ಬಂಧನಕ್ಕೀಡುಮಾಡುತ್ತದೆ. ಈ ಬಗ್ಗೆ ಭಗವದ್ಗೀತೆಯು ಹೇಳುವದೇನಂದರೆ— "ದೈವೀಸಂಪದ್ವಿಮೋಕ್ಷಾಯನಿ ಬಂಧಾಯಾಸುರೀಮತಾ." ಅಸುರೀಸಂಪತ್ತಿನ ಆಶೆಗಾಗಿ ಕೋಟ್ಯಾನುಕೋಟಿ ಜೀವಿಗಳು ಪ್ರತಿನಿತ್ಯ ಆಹುತಿಯಾಗುತ್ತಲಿವೆ. ಆದರೆ ಪರಮಾತ್ಮನಿಗಾಗಿ ಜೀವಕೊಡುವ ಮನುಜರಾರೂ ಇಲ್ಲ. ಇದಕ್ಕಾಗಿ ಪ್ರಭುದೇವರು ಹೇಳುವದೇನಂದರೆ "ಹೊನ್ನಿಗಾಗಿ ಸತ್ತವರು ಕೋಟಿ, ಹೆಣ್ಣಿಗಾಗಿ ಸತ್ತವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಗುಹೇಶ್ವರಾ ನಿನಗಾಗಿ ಸತ್ತವರನೊಬ್ಬರನೂ ಕಾಣೆ.

[illegible] ದುಡ್ಡಿನಾಶೆಯು ಬಹಳ ಕೆಟ್ಟ. ಇದರಿಂದ ಎಷ್ಟೋ ಸಾರ್ವಜನಿಕ ಸಂಸ್ಥೆಗಳು ಧನಾಪಹಾರದಿಂದ ನಿಂತುಹೋಗಿವೆ. ದುಡ್ಡಿನ ವ್ಯವಹಾರದಿಂದ ಗೆಳೆಯರು ಕೂಡ ವೈರಿಗಳಾಗುತ್ತಾರೆ. ದುಡ್ಡಿನಾಶೆಯಿಂದ ತಾಯಿಮಕ್ಕಳ ನಡುವಿನ ಪ್ರೇಮವು ಕೆಟ್ಟುಹೋಗುತ್ತದೆ. ಮಕ್ಕಳು

ತಿಜೂರಿಯು ಕೈಯು ತಮಗೆ ಬರಲೆಂದು ತಮ್ಮ ತಂದೆಗಳ ಶೀಘ್ರ ಮರಣವನ್ನಪೇಕ್ಷಿಸುತ್ತಾರೆ. ಆದ್ದರಿಂದಲೇ ದುಡ್ಡು ದುರ್ಗುಣದ ತೌರ ಮನೆಯೆಂದು ಗಾದೆಯುಂಟಾಗಿದೆ. ಆದ್ದರಿಂದ ಕ್ಷಣಿಕವಾದ ದುಡ್ಡಿನಾಶೆಯನ್ನು ಯಾರೂ ಮಾಡಬಾರದು. ಅದರಲ್ಲಂತೂ ಪರದ್ರವ್ಯಾಪಹರಣವನ್ನು ಸರ್ವಥಾ ಮಾಡಬಾರದು. ಯಾರು ಪರರ ದ್ರವ್ಯವನ್ನು ಅಪಹರಿಸುವದಿಲ್ಲವೋ ಅವರೇ ಸಿರಿವಂತರಾಗುವರೆಂದು ಚೆನ್ನಬಸವಣ್ಣನವರು ಫಲಶ್ರುತಿಯನ್ನು ಹೇಳಿದ್ದಾರೆ. ಪರರ ಸೊತ್ತನ್ನು ಸೆಳೆದವರು ಶ್ರೀಮಂತರಲ್ಲ. ಸತ್ಯಕಾಯಕದಿಂದ ಗಳಿಸಿ ಶಿವಾರ್ಪಣ ಮಾಡುವವರು ಶ್ರೀಮಂತರು. ನಮ್ಮ ಶರಣರೇ ನಿಜವಾದ ಶ್ರೀಮಂತರು. ಜಗತ್ತಿನಲ್ಲಿ ಹೆಚ್ಚಿನ ಶ್ರೀಮಂತರಾರೆಂದರೆ ನಮ್ಮ ಶರಣರು.

---

## ಬಸವ–ಸ್ತುತಿ.

(ಶ್ರೀ ಸ್ವಾಮೀ ಶಿವಯೋಗಿ? ಶಿವಯೋಗಮಂದಿರ ಅವರಿಂದ)

೧

ದೇವ ದೇವನಾಜ್ಞೆಯಿಂದ
ತಿರೆಯ ತಲಕೆ ಇಳಿದು ಬಂದ
ಪರಮಪಾವನಾಂಗನಾದ
ಬಸವ ತಂದೆಯು;
ಜಗದ ಜನದ ಮರಹು ಕಳೆವ
ಸುಜನ ಬಂಧುವು.

೨

ಧರಣಿಯಲ್ಲಿ ವೀರಶೈವ
ರಮಲ ಕೀರ್ತಿ ಬೆಳಗಲೆಂದು
ಕರುಣೆಯಿಂದ ತಾನು ತನ್ನ
ಮನದ ಲಂದನು;
ಮನದ ಮಲಿನದುಡಿಗೆಯನ್ನು
ಕಳೆದುನಿಂದನು.

೩

ಸತ್ಯನಿತ್ಯ ಶರಣನೆಂದು
ಹತ್ತು ಜನರು ಹೊಗಳುತಿರಲು,
'ಕುತ್ತು ತುತಿಯು ಎನಗೆ' ಎಂದು
ಪೇಳುತಿರ್ದನು;
ಸತ್ಯಸಂಧನಾಗಿ ಜಗದಿ
ಬಾಳುತಿರ್ದನು.

೪

ಮರ್ತ್ಯವೆಂಬುದೊಂದು ದೊಡ್ಡ
ಟಂಕಸಾಲೆಯೆಂದು ಬಗೆದು
ಭೃತ್ಯ-ಭಾವದಿಂದ ಬಾಗಿ
ನುತಿಸುತಿರ್ದನು;
ಅತ್ತಲಿತ್ತ ಚಲಿಸದಂತೆ
ತುತಿಸುತಿರ್ದನು.

೫

ಜಗದ ದುಃಖವವನ ದುಃಖ
ಜಗದ ಸುಖವೆಯವನ ಸುಖವು
ಜಗವೆ ಪ್ರಾಣವಾಗಿ ಬಾಳಿ
ಬದುಕುತಿರ್ದನು;
ಇದುವೆ ತನಗೆ ದಿವ್ಯವೆಂದು
ಬಗೆಯುತಿರ್ದನು.

೬

ಬಸವನೆಮಗೆ ಜೀವಜ್ಯೋತಿ
ಬಸವನೆಮಗೆ ದಯಾಮೂರ್ತಿ
ಬಸವನೆಮಗೆ ಶಾಂತಿಕಾಂತಿ
ದಾಂತಿದಾಯಕ;
ಅವನೆ ಜನ್ಮ-ಬಂಧುವೆಮಗೆ
ಮುಕ್ತಿ-ದಾಯಕ.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್‌ಎಲ್. ಬಿ. ವಕೀಲ ವಿಜಾಪುರ.)

ಲೇಖಾಂಕ ೨೧.

## ಬಿಜ್ಜಳನ ಮತವಾವುದು ?

ವೀರಶೈವ ಮತ್ತು ಜೈನ ಗ್ರಂಥಕಾರರು ಬಿಜ್ಜಳನು ಜೈನನೆಂದು ವರ್ಣಿಸುತ್ತ ಬಂದಿದ್ದಾರೆ. ಮತ್ತು ಅವನು ಜೈನನಿದ್ದನೆಂತಲೇ ಸಾಮಾನ್ಯ ತಿಳುವಳಿಕೆ ಇದೆ. ಆದರೆ ಅವನು ಜೈನನಾಗಿರದೆ, ಶೈವ ಧರ್ಮವನ್ನು ಪಾಲಿಸುತ್ತಿನೆಂದು "ಪ್ರಬುದ್ಧ ಕರ್ನಾಟಕ" "ಸಾಹಿತ್ಯ ಪರಿಷತ್ಪತ್ರಿಕೆ" ಇಂಥ ಕೆಲವು ಪತ್ರಿಕೆಗಳಲ್ಲಿ ಅನೇಕ ವಿದ್ವಾಂಸರು ಲೇಖಗಳನ್ನು ಬರೆದದ್ದು ಕಂಡು ಬರುತ್ತದೆ. ಆದರೆ ಅವುಗಳಲ್ಲಿ ಅವರು ಪ್ರತಿಪಾದಿಸಿದ ಕಾರಣಗಳು ಸಮರ್ಪಕವಾಗಿರುವದಿಲ್ಲೆಂದು ನಮಗೆ ತೋರುತ್ತದೆ. ೧೧ನೇ ೧೨ನೇ, ೧೩ನೇ ಶತಮಾನಗಳಲ್ಲಿ ಜೈನ, ಬ್ರಾಹ್ಮಣ ಮತ್ತು ವೀರಶೈವ ಸಮಾಜಗಳಲ್ಲಿ ಪರಸ್ಪರ ಸಂಬಂಧವು ಯಾವ ತರದ್ದಿತ್ತೆಂಬುದನ್ನು ಈ ಲೇಖಕರು ನಿರೀಕ್ಷಿಸಿದ್ದರೆ ಅವರು ಹೀಗೆ ಪ್ರತಿಪಾದಿಸುತ್ತಿದ್ದಿಲ್ಲೆಂದು ನಮಗೆ ತೋರುತ್ತದೆ.

ಬಿಜ್ಜಳನು ದೇವಾಲಯುಗಳಿಗೆ ದಾನ ಕೊಟ್ಟದ್ದನ್ನು ಉಲ್ಲೇಖಿಸುವ ಶಾಸನಗಳ ಸಂಖ್ಯೆಯು ದೇಶದಲ್ಲಿ ಬಹು ದೊಡ್ಡದಾಗಿದೆ. ಅವುಗಳಲ್ಲಿ ಅವನು ಅನೇಕ ಶೈವ ದೇವಾಲಯುಗಳಿಗೆ ಸಹ ದಾನ ಕೊಟ್ಟದ್ದೇ ಈ ಲೇಖಕರು ಹೀಗೆ ಭಾವಿಸಿದ್ದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಆದರೆ ಇಷ್ಟು ಮಾತ್ರದಿಂದ ಬಿಜ್ಜಳನು ಜೈನ ಧರ್ಮೀಯನಲ್ಲೆಂದು ಹೇಳಲಿಕ್ಕೆ ಬರಲಾರದು. ಈ ಕಾಲದ ಕರ್ನಾಟಕ ರಾಜರು ಯಾವ ಮತಸ್ಥರಿದ್ದರೂ ಎಲ್ಲ ಧರ್ಮೀಯರಿಗೆ ಅವರು ನಿರಾತಂಕವಾಗಿ ದಾನ ಕೊಟ್ಟದ್ದು ಕಂಡು ಬರುತ್ತದೆ. ಆಗಿನ ರಾಜರಲ್ಲಿ ಧರ್ಮಾಂಧತೆಯ ವರ್ತನೆಯು ಅತ್ಯಲ್ಪ ಪ್ರಮಾಣದಿಂದ ತೋರಿ ಬರುತ್ತದೆ. ಅಥವಾ ಅದು ಇಲ್ಲವೆಂದರೂ ಸಲ್ಲುತ್ತದೆ. ಉದಾಹರಣಾರ್ಥವಾಗಿ ಹೊಯಸಳರ ವಿಷ್ಣುವರ್ಧನರಾಜನು ತನ್ನ ಮೊದಲಿನ ಜೈನ ಧರ್ಮವನ್ನು ಬಿಟ್ಟುಕೊಟ್ಟು ಶ್ರೀ ವೈಷ್ಣವ ಧರ್ಮವನ್ನು ಹೊಂದಿದರೂ ಕೂಡ ಅವನೂ ಅವನ್ನ ಹೆಂಡತಿಯೂ ಅನೇಕ ಜಿನಾಲಯುಗಳಿಗೆ ಉಂಬಳಿಗಳನ್ನು ಹಾಕಿ ಕೊಟ್ಟರು

ತ್ತಾರೆ. ಅವನ ಕಾಲಕ್ಕೆ ಸಮೀಪಸ್ತನಾದ ಬಿಜ್ಜಳನು ಶೈವ, ಕಾಳಾ ಮುಖ ಶಿವಾಲಯಗಳಿಗೆ ದಾನ ಹಾಕಿ ಕೊಟ್ಟಂತೆ ಕಲ್ಯಾಣ ಪಟ್ಟಣ ದಲ್ಲಿ ಒಂದು ಜಿನಾಲಯಕ್ಕೂ ಕೂಡ ಶಾಸನವನ್ನು ಹಾಕಿ ಕೊಟ್ಟಿದ್ದಾನೆ. ಆಗಿನ ಕಾಲದಲ್ಲಿ ಜೈನ, ಬ್ರಾಹ್ಮಣ ಮತ್ತು ಶೈವ ಸಮಾಜಗಳಲ್ಲಿ ಪರಸ್ಪರ ಲಗ್ನ ಮತ್ತು ಅನ್ನೋದಕ ವ್ಯವಹಾರಗಳು ನಿರಾತಂಕವಾಗಿ ನಡಿಯುತ್ತಿದ್ದುವಲ್ಲದೆ ಅವರಲ್ಲಿ ಪರಸ್ಪರ ಧರ್ಮಪರಿವರ್ತನೆಗಳೂ ಕೂಡ ಆಗುತ್ತಾ ಇದ್ದವು ಒಬ್ಬ ಜೈನ ಧರ್ಮೀಯನಾದ ಕವಿಯು ಶೈವ ಧರ್ಮದ ದೀಕ್ಷೆಯನ್ನು ಹೊಂದಿದ ಬಳಿಕ ಅದರಲ್ಲಿ ಯಾವ ಸಾರವೂ ತೋರದ್ದರಿಂದ ತಾನು ಪುನಃ ಜೈನನಾದೆನೆಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿ ದ್ದಾನೆ. ನಾಗವರ್ಮನೆಂಬ ಒಬ್ಬ ಜೈನ ಮಹಾ ಕವಿಯು. ಆದರೆ ಅವನು ಮೊದಲು ಬ್ರಾಹ್ಮಣನಾಗಿದ್ದನೆಂದು ಹೇಳಲ್ಪಡುತ್ತದೆ. ಬಸವೇ ಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರ ಚರಿತ್ರೆಗಳನ್ನು ನಾವು ನಿರೀಕ್ಷಿಸಿ ದಲ್ಲಿ ಇದೇ ಸಂಗತಿಯು ದೃಢಪಡುತ್ತದೆ. ಶಿವಶರಣೆಯಾದ ಸುಗ್ಗಳೆಗೆ ಜೈನ ಧರ್ಮೀಯನಾದ ಜಯಸಿಂಹನು ಗಂಡನಾಗಿದ್ದನು. ಶಿವಶರಣ ನಾದ ಆದಯ್ಯನು ಜೈನಳಾದ ಪದ್ಮಾವತಿಯನ್ನು ಲಗ್ನವಾಗಿದ್ದನು. ಹರಿಹರನು ರೇವಣಸಿದ್ಧೇಶ್ವರನ ರಗಳೆಯನ್ನು ರಚಿಸಿದ್ದಾನೆ. ಅದರಲ್ಲಿ ರೇವಣಸಿದ್ಧೇಶ್ವರನು ವೀರಶೈವನಲ್ಲದ ಬಿಜ್ಜಳನ ಮಗಳನ್ನು ಲಗ್ನವಾ ಗಿದ್ದನೆಂದು ಹೇಳಲ್ಪಟ್ಟಿದೆ.

ಈ ವರೆಗೆ ಆಗಿ ಹೋದ ವೀರಶೈವ ಮತ್ತು ಜೈನ ಗ್ರಂಥಕಾ ರರು ಬಿಜ್ಜಳನು ಜೈನನೆಂದು ಯಾವಾಗಲೂ ವರ್ಣಿಸುತ್ತಾ ಬಂದಿ ದ್ದಾರೆ. ಇದಕ್ಕೆ ವಿರೋಧವಾಗಿ ಅವರಲ್ಲಿ ಅಪವಾದಾತ್ಮಕವಾಗಿ ಒಬ್ಬ ನಾದರೂ ಅವನು ಶೈವನೆಂದು ಹೇಳಿದ್ದು ದೊರೆಯುವದಿಲ್ಲ. ಅವರೆ ಲ್ಲರೂ ಬಿಜ್ಜಳನು ಜೈನನೆಂತಲೇ ಹೇಳುತ್ತ ಬಂದಿದ್ದಾರೆ. ಆದ್ದರಿಂದ ಈ ಸಂಗತಿಯು ಸ್ಪಷ್ಟ ರೀತಿಯಿಂದ ಗೊತ್ತಾಗುವ ವರೆಗೆ ಬಿಜ್ಜಳನು ಜೈನನೆಂದು ನಂಬುವದೇ ಯೋಗ್ಯವೆಂದು ನಮಗೆ ತೋರುತ್ತದೆ.

ಆಗಿನ ರಾಜರು ಜೈನ ಶೈವ ದೇವಾಲಯಗಳಲ್ಲಿ ಆವ ಭೇದವ ನ್ನೆಣಿಸದೆ ದಾನ ಮಾಡುತ್ತಿದ್ದರು. ಆದ್ದರಿಂದ ಬಿಜ್ಜಳನು ಶೈವ ದೇವಾ ಲಯಗಳಿಗೆ ದೇಣಿಗೆ ಕೊಟ್ಟ ಮಾತ್ರದಿಂದ ಅವನು ಶೈವನಾಗಿದ್ದನೆಂದು ಮೇಲ್ಕಂಡ ಲೇಖಕರು ವಿಧಾನ ಮಾಡಿರುವದು ತಪ್ಪೆಂದು ನಮಗೆ ತೋರುತ್ತದೆ.

## ಬಸವೇಶ್ವರನ ಹೆಂಡತಿಯರು ಯಾರು?

ಬಸವೇಶ್ವರನಿಗೆ ಇಬ್ಬರು ಹೆಂಡರಿದ್ದರೆಂದು ವೀರಶೈವ ಗ್ರಂಥಕಾರರೆಲ್ಲರೂ ಒಮ್ಮತದಿಂದ ಹೇಳುತ್ತಾರೆ. ಆದರೆ ಅವರಲ್ಲೊಬ್ಬಳ ಹೆಸರಿನ ವಿಷಯವಾಗಿ ಮಾತ್ರ ಅವರಲ್ಲಿ ಭಿನ್ನಾಭಿಪ್ರಾಯವಿದೆ. ಗಂಗಾಂಬಿಕೆ ಎಂಬ ಹೆಸರಿನ ಹೆಂಡತಿ ಇದ್ದಳೆಂದು ಎಲ್ಲ ಗ್ರಂಥಕಾರರು ಒಪ್ಪುತ್ತಾರೆ. ಆದರೆ ಇನ್ನೊಬ್ಬಳ ಹೆಸರು ಮಾಯಿದೇವಿಯೆಂದು ಹರಿಹರ ಕವಿಯು ಹೇಳುತ್ತಾನೆ. ಆದರೆ ಉಳಿದ ಗ್ರಂಥಕಾರರು ಆಕೆಯ ಹೆಸರು ನೀಲಾಂಬಿಕೆ ಎಂದಿದ್ದಿತೆಂದು ಹೇಳುತ್ತಾರೆ. ಬಸವೇಶ್ವರನ ಹೆಂಡರಲ್ಲಿ ನೀಲಾಂಬಿಕೆಯು ಬಹು ಪ್ರಸಿದ್ಧಳು. ಅವಳು ವೀರಶೈವಾಚಾರ ಸಂಪನ್ನೆಯು. ಆಕೆಯ ಪತಿಭಕ್ತಿ ಮತ್ತು ಲಿಂಗಭಕ್ತಿ ಇವುಗಳ ವಿಷಯವಾಗಿ ಅಸಂಖ್ಯ ಸ್ತೋತ್ರ ಪದಗಳು ವೀರಶೈವ ವಾಙ್ಮಯದಲ್ಲಿ ದೊರೆಯುತ್ತವೆ. ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಕಪ್ಪಡಿ ಸಂಗಮೇಶ್ವರನಲ್ಲಿಗೆ ತೆರಳಿದ ಬಳಿಕ ಅವಳು ತನ್ನ ಇಷ್ಟಲಿಂಗದಲ್ಲಿಯೇ ಬಯಲಾದಳೆಂದು ವೀರಶೈವ ಪುರಾಣಗಳಲ್ಲಿ ಉಲ್ಲೇಖಗಳಿವೆ. ಆಕೆಯ ಹೆಸರಿನ ಒಂದು ದೇವಾಲಯವೂ ಒಂದು ಉಪಲಬ್ಧವಿದೆ. ಅದು ಕೃಷ್ಣಾತೀರದಲ್ಲಿ ಕಪ್ಪಡಿಸಂಗಮ ಸ್ಥಾನದಿಂದ ಒಂದು ಮೈಲಿನ ಮೇಲೆ ತಂಗಡಗಿ ಗ್ರಾಮದ ನೆರೆಯಲ್ಲಿ ಇದೆ. ಬಸವೇಶ್ವರನು ಸಂಗಮನಾಥನಲ್ಲಿ ಐಕ್ಯ ಹೊಂದಿದನೆಂಬ ಸುದ್ದಿಯನ್ನು ಕೇಳಿದ ಕೂಡಲೆ ಆಕೆಯು ಅಲ್ಲಿ ಬಯಲಾದಳೆಂದು ಸ್ಥಾನಿಕ ಐತಿಹ್ಯವಿದೆ. ಅಲ್ಲಿ ಆಕೆಯ ಹೆಸರಿನ ಒಂದು ಸಮಾಧಿಯೂ ಉಂಟು. ಇದು ನೀಲಾಂಬಿಕೆಯದೇ ಆಗಿರಬೇಕು. ಆಕೆಯ ತಂದೆಯ ಹೆಸರು ಸಿದ್ಧಣ್ಣ ಮಂತ್ರಿ ಎಂದು ವೀರಶೈವ ಪುರಾಣಗಳಲ್ಲಿ ಉಲ್ಲೇಖಗಳು ಇವೆ. ಈ ವಿಷಯದಲ್ಲಿ ಯಾರಲ್ಲಿಯೂ ಮತಭೇದಗಳಿಲ್ಲ. ಹರಿಹರ ಕವಿಯೂ ಕೂಡ ಸಿದ್ಧದಂಡೇಶನ ಮಗಳನ್ನೇ ಬಸವೇಶ್ವರನು ಲಗ್ನವಾದನೆಂದು ಹೇಳುತ್ತಾನೆ. ಆದ್ದರಿಂದ ನೀಲಾಂಬಿಕೆಯ ಮೊದಲಿನ ಹೆಸರು ಅವನು ಹೇಳುವಂತೆ ಮಾಯಿದೇವಿ ಎಂದಿರಬಹುದು. ಆದರೆ ಲಗ್ನವಾದ ಬಳಿಕ "ನೀಲಾಂಬಿಕೆ" ಎಂಬ ಹೆಸರು ರೂಢವಾಗಿರಬೇಕೆಂದು ತೋರುತ್ತದೆ.

ಗಂಗಾಂಬಿಕೆಯು ನೀಲಾಂಬಿಕೆಯಷ್ಟು ವೀರಶೈವ ವಾಙ್ಮಯದಲ್ಲಿ ಪ್ರಸಿದ್ಧಳಾಗಿರುವದಿಲ್ಲ. ಆದರೆ ಉಭಯ ಪತ್ನಿಯರು ವಚನಗಳನ್ನು ರಚಿಸಿದಂತೆ ಕಂಡುಬರುತ್ತದೆ. ಗಂಗಾಂಬಿಕೆಯ ಮುದ್ರಿಕೆಯು "ಗಂಗಾಪ್ರಿಯ

ಕೂಡಲಸಂಗಮ" ಎಂತಲೂ ನೀಲಾಂಬಿಕೆಯ ಮುದ್ರಿಕೆಯು "ಬಸವ ಪ್ರಿಯ ಕೂಡಲಸಂಗಮದೇವ" ಎಂತಲೂ ಇನೆ. ನೀಲಾಂಬಿಕೆಯ ಕೆಲವು ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಗಂಗಾಬಿಕೆಯ ವಚನಗಳು ನಮಗೆ ಇನ್ನೂ ಉಪಲಬ್ಧವಾಗಿಲ್ಲ.

ಹರಿಹರನ ರಗಳೆಯಲ್ಲಿ ಬಸವೇಶ್ವರನು ಮೊದಲು ಮಂಗಳವಾಡಕ್ಕೆ ಹೋಗಿರಲು ಅಲ್ಲಿ ಸಿದ್ದಣ್ಣ ದಂಡೇಶನ ಪರಿಚಯವಾಯಿತೆಂತಲೂ ಅವನ ಮಗಳ ಲಗ್ನವು ಅಲ್ಲಿಯೇ ಆಯಿತೆಂತಲೂ ಹೇಳುತ್ತಾನೆ. ಆದರೆ ಗಂಗಾಂಬಿಕೆಯ ಲಗ್ನವು ಕಲ್ಯಾಣದಲ್ಲಿ ಆಯಿತೆಂಬ ಉಲ್ಲೇಖಗಳಿರುತ್ತವೆ. ಬಸವೇಶ್ವರನು ಮೊದಲು ಮಂಗಳವಾಡಕ್ಕೆ ಹೋಗಿ ಹಿಂದುಗಡೆ ಕಲ್ಯಾಣಕ್ಕೆ ಹೋದದ್ದರಿಂದ ಬಸವೇಶ್ವರನಿಗೆ ಮೊದಲು ನೀಲಾಂಬಿಕೆಯೊಡನೆ ಲಗ್ನವಾಗಿರಬೇಕು ಮತ್ತು ಹಿಂದುಗಡೆ ಗಂಗಾಂಬಿಕೆಯ ಲಗ್ನವಾಗಿರಬೇಕೆಂಬ ಅನುಮಾನವು ಉಂಟಾಗುತ್ತದೆ.

## ಸಿದ್ದಣ್ಣ ದಂಡೇಶ ಮತ್ತು ಬಲದೇವ ಮಂತ್ರಿಗಳು ಐತಿಹಾಸಿಕ ಪುರುಷರೋ?

ಗಂಗಾಂಬಿಕೆಯ ತಂದೆಯಾದ ಬಲದೇವನು ಮತ್ತು ನೀಲಾಂಬಿಕೆಯ ತಂದೆಯಾದ ಸಿದ್ದಣ್ಣ ದಂಡೇಶನು ಇವರು ಕಾಲ್ಪನಿಕ ಪುರುಷರೋ, ಐತಿಹಾಸಿಕ ಪುರುಷರೋ ಎಂಬದನ್ನು ವಿವೇಚಿಸುವದು ಮಹತ್ವವಾದುದು. ಬಿಜ್ಜಳನ ಅನೇಕ ಶಿಲಾ ಶಾಸನಗಳಲ್ಲಿ ಇವರ ಹೆಸರುಗಳು ಉಪಲಬ್ಧವಿದ್ದರೆ ಅವರು ಐತಿಹಾಸಿಕ ಪುರುಷರೆಂದು ತಿಳಿಯಲು ಯಾವ ಪ್ರತ್ಯವಾಯವಿರುವದಿಲ್ಲ. ಈ ಶಾಸನಗಳಲ್ಲಿ ಬಿಜ್ಜಳನ ಅನೇಕ ದಂಡಾಧಿಕಾರಿಗಳ ಹೆಸರುಗಳು ನಮಗೆ ದೊರಕುತ್ತವೆ. ಅವುಗಳನ್ನು ನಾವು ಕೆಳಗೆ ಕೊಡುತ್ತೇವೆ.

(೧) ವಿಜಯಪಾಂಡ್ಯನು ಮೈಸೂರಿನ ಉತ್ತರಭಾಗವಾದ ನೋಳಂಬವಾಡಿಯನ್ನು ಆಳುತ್ತಿದ್ದನು. ಈತನು ಅತಿ ಪ್ರಸಿದ್ಧನು.

(೨) ಬನವಾಸಿ ಪ್ರಾಂತವನ್ನು ಕಾಸಪ್ಪಯ್ಯ ಅಥವಾ ಕೇಶಿರಾಜನು ಆಳುತ್ತಿದ್ದನು. ಈತನಾದರೂ ಬಿಜ್ಜಳನ ದಂಡಾಧಿಪತಿಗಳಲ್ಲಿ ಪ್ರಸಿದ್ಧನು.

(೩) ಮೈಲಾರಯ್ಯನೆಂಬವನು ಕೆಲವು ಕಾಲ ತರ್ದವಾಡಿ ನಾಡನ್ನು ಆಳುತ್ತಿದ್ದನು.

(೪) ಮಹಾದೇವರಸನೆಂಬವನು ಕೆಲವು ಕಾಲ ಬನವಾಸಿ ನಾಡನ್ನು ಆಳುತ್ತಿದ್ದನು.

(೫) ದಂಡನಾಯಕ ಶ್ರೀಧರನು ಅಣ್ಣಿಗೆರೆಯಲ್ಲಿ ಆಳುತ್ತಿದ್ದನು.

(೬) ಬರ್ಮರಸನು ಬಹು ಪ್ರಸಿದ್ಧ ದಂಡನಾಯಕನು. ಇವನು ಕೆಲವು ಕಾಲ ಬನವಾಸಿ ನಾಡು, ಕೆಲವು ಕಾಲ ತರ್ದೆವಾಡಿನಾಡಿನಲ್ಲಿ ಆಳುತ್ತಿದ್ದನು.

(೭) ದಂಡನಾಯಕ ಅಮ್ಮಣ್ಣನು ಬೆಳ್ವೊಲವನ್ನು ಆಳುತ್ತಿದ್ದನು. ಇದು ಧಾರವಾಡ ಜಿಲ್ಲೆಯ ಈಶಾನ್ಯ ಭಾಗವು.

(೮) ಶಿಲಾಹಾರ ವಂಶದ ವಿಜಯಾದಿತ್ಯನು ಕರ್ಹಾಡ ಪ್ರಾಂತ ದಲ್ಲಿ 'ವಾಳವಡೆ' ಎಂಬಲ್ಲಿ ಆಳುತ್ತಿದ್ದನು.

(೯) ರಟ್ಟ ರಾಜರ ಕಾರ್ತವೀರ್ಯನು ಸವದತ್ತಿಯಲ್ಲಿ ಆಳುತ್ತಿದ್ದನು.

(೧೦) ದಂಡನಾಯಕ ಸಿದ್ದಪ್ಪಯ್ಯನು ಹಾನಗಲ್ಲಿನಲ್ಲಿ ಆಳು ತ್ತಿದ್ದನು.

(೧೧) ಬಲದೇವನು ಕುಕನೂರಲ್ಲಿ ಆಳುತ್ತಿದ್ದನು.

(೧೨) ಚಾವುಂಡ ಮಹಾಮಂಡಳೇಶ್ವರನು ಎರೆಯಂಬರಗೆ ಅಂದರೆ ಯೆಲಬುರ್ಗಿಯಲ್ಲಿ ಆಳುತ್ತಿದ್ದನು. ಈತನು ಬಹು ಪ್ರಸಿದ್ಧನು.

(೧೩) ಕಲಿಯಮ್ಮರಸನೆಂಬ ಹೆಸರಿನ ಒಬ್ಬ ದಂಡಾಧಿಪತಿಯೂ ಇದ್ದನು.

ಈ ಪ್ರಕಾರ ಬಿಜ್ಜಳನ ದಂಡನಾಯಕರ ಹೆಸರುಗಳು ನಮಗೆ ಉಪ ಲಬ್ಧವಿವೆ. ಈ ಪಟ್ಟಿಯಲ್ಲಿ ಸಿದ್ದಣ್ಣ ಮತ್ತು ಬಲದೇವ ಈ ಉಭತರ ಹೆಸರು ಗಳು ಬಂದಿವೆ. ಈ ಉಭಯತರ ಹೆಸರುಗಳು ಏಕಕಾಲಕ್ಕೆ ನಮಗೆ ಇಲ್ಲಿ ದೊರೆಯುವದರಿಂದ ಇವರೇ ಬಸವೇಶ್ವರನಿಗೆ ತಮ್ಮ ಹೆಣ್ಣು ಮಕ್ಕಳನ್ನು ಕೊಟ್ಟು ಲಗ್ನ ಮಾಡಿರಬೇಕೆಂದು ಅನುಮಾನ ಮಾಡಬಹುದಾಗಿದೆ. ಈ ಉಭಯತರ ಹೆಸರುಗಳುಳ್ಳ ಬೇರೆ ಪ್ರಧಾನಿಗಳು ಇವರು ಏಕೆ ಇರ ಬಾರದೆಂದು ಶಂಕೆಯನ್ನು ಮಾಡಲು ಅವಕಾಶವಿದೆ. ಆದರೆ ಈ ಶಂಕೆ ಯನ್ನು ಸಮರ್ಥಿಸಲು ಬಲವಾದ ಕಾರಣಗಳು ದೊರೆಯುವ ವರೆಗೆ ಈ ಶಿಲಾಶಾಸನಗಳಲ್ಲಿ ಉಪಲಬ್ಧವಾದವರೇ ಬಸವೇಶ್ವರನ ಮಾವಂದಿರ ಬೇಕೆಂದು ಗ್ರಹಿಸಲು ಅಡ್ಡಿ ತೋರುವದಿಲ್ಲ.

---

(ಮುಂದೆ ಸಾಗುವದು)

# ಶಿವಾನುಭವ ಪತ್ರಿಕೆಗೆ ಸಹಾಯ.

ಯುದ್ಧಜನ್ಯ ಪರಿಸ್ಥಿತಿಯ ಮೂಲಕ ಕಾಗದದ ಬೆಲೆಯು ಮಿತಿ ಮೀರಿ ಹೆಚ್ಚಿರುತ್ತದೆ. ಕಾಗದವನ್ನು ದೊರಕಿಸುವದು ಸಹ ಕಷ್ಟಕರವಾಗ ಹತ್ತಿದೆ. ಈ ಸ್ಥಿತಿಯಲ್ಲಿ ಶಿವಾನುಭವ ಪತ್ರಿಕೆಯನ್ನು ನಡಿಸುವದು ದುಸ್ತರವಾಗಿರುತ್ತದೆ. ಆದನ್ನು ನಿಲ್ಲಿಸುವ ಪ್ರಸಂಗವೂ ಕೂಡ ಮುಂದೆ ಬರಬಹುದಾಗಿ ತೋರುತ್ತದೆ. ಆದರೆ ಹಾಗೆ ಮಾಡುವ ಪೂರ್ವದಲ್ಲಿ ಶಕ್ಯವಿದ್ದಷ್ಟು ಪ್ರಯತ್ನಿಸಿ ಪತ್ರಿಕೆ ಗೋಸ್ಕರ ಸಹಾನುಭೂತಿಯುಳ್ಳವರ ಕಡೆಯಿಂದ ಸಹಾಯ ದ್ರವ್ಯವನ್ನು ದೊರಕಿಸಬೇಕೆಂಬ ಉದ್ದೇಶದಿಂದ ನಾವು ನಮ್ಮ ಮ್ಯಾನೇಜರರನ್ನು ಸೊಲ್ಲಾಪುರ ಪಟ್ಟಣಕ್ಕೆ ಕಳಿಸಲಾಗಿ ಅಲ್ಲಿಯ ಮಹನೀಯರಿಂದ ಕೆಳಗೆ ಕಾಣಿಸಿದಂತೆ ಸಹಾಯವು ದೊರೆತಿರುತ್ತದೆ. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ. ಅವರ ಅನುಕರಣವನ್ನು ಎಲ್ಲ ಕಡೆಯ ಶಿವಾನುಭವ ಪ್ರೇಮಿಗಳು ಅನುಸರಿಸಬೇಕೆಂದು ನಮ್ಮ ಸವಿನಯ ವಿನಂತಿ ಆದೆ. ಹೀಗೆ ಸಹಾಯ ದೊರೆತಲ್ಲಿ ಪತ್ರಿಕೆಯನ್ನು ಮೊದಲಿನಂತೆ ೬೪ ಪುಟಗಳ ವರೆಗೂ ಹೆಚ್ಚಿಸುವೆವು.

## ಸಹಾಯ ದ್ರವ್ಯವನ್ನು ಕೊಟ್ಟವರ ಹೆಸರುಗಳು.

ರೂ. ೫೧ ಶ್ರೀಮಂತ ನಾಗಪ್ಪಾ ಅಣ್ಣಾ ಕಾಡಾದಿ ಎಮ್. ಎಲ್. ಸಿ.

ರೂ. ೨೫ ರಾ. ಬ. ನಾಗಪ್ಪಾ ಅಣ್ಣಾ ಅಬ್ದುಲಪೂರಕರ

ರೂ. ೨೫ ರಾ. ರಾ. ಅಣ್ಣಾರಾವ ಥಂಗೆ

ರೂ. ೧೧ ,, ಜಿ. ಪ್ಠಿ. ಲೋಣಿ

ರೂ. ೫ ,, ಶಿವಪ್ಪಾ ಸರಸಂಬಿ

ರೂ. ೫ ,, ಮಲಕಪ್ಪ ಲೋಣಿಕರ

ವಿಜಾಪುರ
ತಾ. ೧೪-೬-೪೩

ಫ. ಗು. ಹಳಕಟ್ಟಿ
ಸಂಪಾದಕ 'ಶಿವಾನುಭವ.'

ಶಿವಾನುಭವ ಗ್ರಂಥಮಾಲಾ ನಂ॥ ೨೮

# ಶಿವಾನುಭವ ಶಬ್ದಕೋಶ.



ಸಂಪಾದಕರು:

ರಾ. ಬ. ಪಿ. ಜಿ. ಹಳಕಟ್ಟಿ, ಬಿ. ಎ., ಎಲ್. ಎಲ್. ಬಿ.

ವಿಜಾಪುರ.



೧೯೪೩



ಬೆಲೆ: ರೂ॥ ೨—೮—೦

ಇದನ್ನು ವಿಜಾಪುರದಲ್ಲಿ
ರಾ. ಬ. ಪಿ. ಜಿ. ಹಳಕಟ್ಟಿ ಬಿ. ಏ., ಎಲ್. ಎಲ್. ಬಿ. ಇವರು
ತಮ್ಮ **ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ** ಮುದ್ರಿಸಿದರು.
ಮತ್ತು ಅವರು ವಿಜಾಪುರದಲ್ಲಿ
ಉಪಲಿಬುರುಜದ ಹತ್ತರ ೧೬೨೦ (ಅ) ನೇ ಮನೆಯಲ್ಲಿ
ಪ್ರಕಟಿಸಿದರು.

# ಪ್ರಸ್ತಾವನೆ.

ನಾವು ಈಗ 'ಶಿವಾನುಭವ ಶಬ್ದಕೋಶ' ಎಂಬ ಹೆಸರಿನ ಈ ಗ್ರಂಥವನ್ನು ಸಿದ್ಧಗೊಳಿಸಿ ವಾಚಕರೆದುರಿಗೆ ಇಟ್ಟಿದ್ದೇವೆ. ಶಿವಾನುಭವ ಶಾಸ್ತ್ರದಲ್ಲಿ ಉಪಯೋಗಿಸಲ್ಪಡುವ ಶಬ್ದಗಳ ಅರ್ಥವನ್ನು ಸಂಕ್ಷಿಪ್ತವಾಗಿ ವಿವರಿಸುವದೇ ನಮ್ಮ ಉದ್ದೇಶವಾಗಿರುತ್ತದೆ. ವಚನಕಾರರು ಕೆಲವೊಂದು ವಿಷಯವನ್ನು ತೆಗೆದುಕೊಂಡು ಕ್ರಮಯುಕ್ತವಾಗಿ ಅದನ್ನು ನಿರೂಪಿಸುತ್ತ ಹೋಗುವದಿಲ್ಲ. ಅವರಿಗೆ ಸ್ಫೂರ್ತಿಯುಂಟಾದಾಗ ಅವರು ಬರೆದ ಉಕ್ತಿಗಳು ಅವು ಇರುತ್ತವೆ. ಅವುಗಳನ್ನು ಅವರು ನುಡಿಯುವಲ್ಲಿ ವಿಷಯಗಳ ಮುಖ್ಯ ಭಾವವು ವಾಚಕರಿಗೆ ತಿಳಿದಿರುತ್ತದೆಂದು ಭಾವಿಸಿ ಅವರು ವಚನಗಳನ್ನು ರಚಿಸುವದುಂಟು. ಆದರೆ ಈ ಕಾಲದಲ್ಲಿ ವಚನಕಾರರ ತತ್ವಗಳು ಬಹು ಜನರಿಗೆ ಗೊತ್ತಿರುವದಿಲ್ಲ, ಆದಕಾರಣ ಅವರು ಬರೆದ ವಚನಗಳ ಅರ್ಥವು ಅವರಿಗೆ ಚನ್ನಾಗಿ ಆಗುವದಿಲ್ಲ. ವಚನಗಳ ಅರ್ಥವು ತಮಗೆ ತಿಳಿಯುವದಿಲ್ಲೆಂದು ಬಹು ಜನರು ಯಾವಾಗಲೂ ಅನ್ನುತ್ತಿರುವದರಿಂದ ಅವರಿಗೆ ಉಪಯೋಗವಾಗಬೇಕೆಂದು ನಾವು ಈ ಗ್ರಂಥವನ್ನು ಸಿದ್ಧಪಡಿಸಿದ್ದೇವೆ.

ವೀರಶೈವ ಮತವು ಕೆಲವೊಂದು ವಿಶಿಷ್ಟ ಸ್ವರೂಪವನ್ನು ಹೊಂದಿರುತ್ತದೆ. ಅದಕ್ಕೆ ಷಟ್‌ಸ್ಥಲ ಸಿದ್ಧಾಂತವೆಂಬ ಹೆಸರು ಬಂದಿದೆ. ಅದು ಆಗಂತುಕವಾಗಿ ಉಂಟಾದ ಧರ್ಮವಲ್ಲ. ಅನೇಕ ವಿದ್ವಾಂಸರು ಮತ್ತು ಶಿವಾನುಭವಿಗಳು ಅದರ ಸಲುವಾಗಿ ದುಡಿದಿರುತ್ತಾರೆ. ಅದ್ದರಿಂದ ಅದರಲ್ಲಿ ಅನೇಕ ಅಂಗೋಪಾಂಗಗಳು ಉಂಟಾಗಿ ಅದು ಸ್ವತಂತ್ರ ಧರ್ಮದ ಮತ್ತು ವಾಙ್ಮಯದ ಸ್ವರೂಪವನ್ನು ಹೊಂದಿದೆ. ಇದರಲ್ಲಿ ವಿಶಿಷ್ಟಾರ್ಥವುಳ್ಳ ಅಸಂಖ್ಯ ಶಬ್ದಗಳು ಬರುತ್ತವೆ. ಆದರೆ ಈಚೆಗೆ ವಚನಶಾಸ್ತ್ರದ ಅಭ್ಯಾಸವು ನಿಂತುಹೋಗಿರುವದರಿಂದ ಈ ಶಬ್ದಗಳ ಅರ್ಥವು ವಾಚಕರಿಗೆ ಚನ್ನಾಗಿ ಬೋಧವಾಗುವದಿಲ್ಲ. ಬಹು ಜನರಿಗೆ ವಚನಗಳ ಅರ್ಥವು ಸರಿಯಾಗಿ ಆಗದ್ದಕ್ಕೆ ಇದೇ ಮುಖ್ಯ ಕಾರಣವಿರುತ್ತದೆ.

ಈ ತೊಂದರೆಯನ್ನು ಶಕ್ಯವಿದ್ದಷ್ಟು ದೂರ ಮಾಡಲು ನಾವು ಈ ಗ್ರಂಥದಲ್ಲಿ ಯತ್ನಿಸಿದ್ದೇವೆ. ಈ ಕಾರ್ಯವನ್ನು ನಾವು ಕೈಕೊಂಡ

ಕೂಡಲೆ ಅದು ಬಹು ಬಿಕ್ಕಟ್ಟಿನದಾಗಿ ನಮಗೆ ತೋರಿ ಬರಹತ್ತಿತು. ಯಾಕಂದರೆ ಶಿವಾನುಭವ ಶಬ್ದಗಳಿಗೆ ಸಂದರ್ಭಾನುಸಾರ ಅನೇಕ ಅರ್ಥಗಳು ಉಂಟಾಗುತ್ತವೆ. ಅವುಗಳೆಲ್ಲವನ್ನು ನಾವು ಒತ್ತಟ್ಟಿಗೆ ಸಂಗ್ರಹಿಸಿ ವಿಶದವಾಗಿ ಬರೆಯುವದು ಬಹು ಅಸಾಧ್ಯವಾದ ಕೆಲಸವೆಂದು ನಮಗೆ ತೋರಿತು. ಆದರೂ ಈ ಕಾರ್ಯವನ್ನು ನಾವು ಪ್ರಾರಂಭವಾಡಿ ಮುಗಿಸಿದ್ದಾಗಿದೆ. ಇದು ಎಷ್ಟರಮಟ್ಟಿಗೆ ಯಶಸ್ವಿಯಾಗಿದೆಂಬುದನ್ನು ಪರೀಕ್ಷಿಸುವ ಭಾರವನ್ನು ನಾವು ವಾಚಕರ ಕಡೆಗೆ ಬಿಡುತ್ತೇವೆ. ಇದರಲ್ಲಿ ಅನೇಕ ದೋಷಗಳಿರಬಹುದು. ವಾಚಕರು ಅಂಥವುಗಳನ್ನು ನಮಗೆ ತಿಳಿಸಿದಲ್ಲಿ ನಾವು ಅವರಿಗೆ ಬಹಳ ಆಭಾರಿಯಾಗುವೆವು.

ಈ ಕೋಶವನ್ನು ಸಿದ್ಧಪಡಿಸುವಲ್ಲಿ ಶಬ್ದಗಳ ಭಾವವು ಅತಿ ಸ್ಫುಟವಾಗಿಯೂ ಸಂಕ್ಷಿಪ್ತವಾಗಿಯೂ ಇರಬೇಕೆಂದು ನಾವು ಉದ್ದೇಶಪಟ್ಟು ಇದೇ ರೀತಿಯನ್ನು ನಾವು ಶಕ್ಯವಿದ್ದಷ್ಟು ಅನುಸರಿಸುತ್ತ ಬಂದಿದ್ದೇವೆ. ನಿಜವಾಗಿ ಒಂದೊಂದು ವಿಷಯ ನಿರೂಪಣೆಗೆ ದೊಡ್ಡ ದೊಡ್ಡ ಲೇಖಗಳೇ ಬೇಕು. ಅವುಗಳಲ್ಲಿ ಗೂಡಾರ್ಥಗಳೂ ಇವೆ. ಅವುಗಳನ್ನೆಲ್ಲ ನಿರೂಪಿಸಲು ಪ್ರಯತ್ನಿಸದೆ ಅವುಗಳ ಸಾಮಾನ್ಯಾರ್ಥವನ್ನು ಆದಷ್ಟು ತಿಳಿಯಾದ ಭಾಷೆಯಲ್ಲಿ ಬರೆಯಲು ಪ್ರಯತ್ನಿಸಿದ್ದೇವೆ. ಶಿವಾನುಭವ ಶಾಸ್ತ್ರದ ಅಭ್ಯಾಸವನ್ನು ಆರಂಭ ಮಾಡುವವರಿಗೆ ಈ ಗ್ರಂಥದ ಉಪಯೋಗವು ಹೆಚ್ಚು ಆಗಬಹುದೆಂದು ಎಣಿಸಿದ್ದೇವೆ. ಆದರೆ ವಿಷಯಗಳ ವಿಶೇಷ ಜ್ಞಾನ ಮಾಡಿಕೊಳ್ಳಲಪೇಕ್ಷಿಸುವವರು ಮೂಲ ವಚನಗ್ರಂಥಗಳನ್ನೇ ನೋಡಬೇಕೆಂದು ನಮ್ಮ ಸೂಚನೆ ಇದೆ.

ಈ ಶಿವಾನುಭವ ಶಬ್ದಕೋಶಕ್ಕೆ ಆಧಾರ ಗ್ರಂಥಗಳು ನಾವು ರಚಿಸಿದ ವಚನಶಾಸ್ತ್ರಸಾರ ಭಾಗ ೧ ಮತ್ತು ಭಾಗ ೩ ಇದರ ಪೂರ್ವಾರ್ಧ ಮತ್ತ ಉತ್ತರಾರ್ಧ ಇವುಗಳೇ ಇರುತ್ತವೆ. ಈ ಗ್ರಂಥಗಳಲ್ಲಿ ಷಟ್‌ಸ್ಥಲ ಸಿದ್ಧಾಂತದ ಮಹತ್ವದ ವಚನಗಳಿರುತ್ತವೆ. ಶಿವಾನುಭವ ಶಾಸ್ತ್ರವು ಬಹು ಗಹನವಾದ ವಿಷಯವು. ಅದರ ತತ್ವಗಳು ಇನ್ನೂ ಅಪರಿಚಿತವಾಗಿರುತ್ತವೆ ಅವುಗಳನ್ನು ತಿಳಿದುಕೊಳ್ಳಲಪೇಕ್ಷಿಸುವವರು ಈ ಶಿವಾನುಭವ ಶಬ್ದಕೋಶವನ್ನು ಮೊದಲು ಓದಿ ನೋಡತಕ್ಕದ್ದು. ಆ ಮೇಲೆ ಬೇರೆ ಬೇರೆ ವಿಷಯಗಳ ವಿಸ್ತೃತ ಭಾವವನ್ನು ವಚನಶಾಸ್ತ್ರಸಾರ ೧ನೇ, ೩ನೇ ಭಾಗಗಳಲ್ಲಿ ಪರಿಶೀಲನೆ ಮಾಡಿ ತಿಳಿದುಕೊಳ್ಳತಕ್ಕದ್ದು. ಅಂದರೆ ಈಗಿನ ಗ್ರಂಥವು ವಚ

ನಶಾಸ್ತ್ರಸಾರ ೨ನೇ ೩ನೇ ಭಾಗಗಳನ್ನು ತಿಳಿಯಲು ಒಂದು ಕೈಪಿಡಿಯೆಂದು ಮಾತ್ರ ವಾಚಕರು ಭಾವಿಸಿ ಅದರ ಉಪಯೋಗವನ್ನು ಆ ರೀತಿ ಮಾಡತಕ್ಕದ್ದೆಂದು ನಮ್ಮ ಸವಿನಯ ಸೂಚನೆ ಇದೆ

ಈ ಗ್ರಂಥವನ್ನು ನಾವು ಮೊದಲು ಪ್ರಾರಂಭಿಸುವಲ್ಲಿ ಇದರ ಮುಂದಿನ ರಚನೆ ಮತ್ತು ರೂಪು ರೇಷೆಗಳನ್ನು ನಾವು ಎಷ್ಟು ಮಾತ್ರವೂ ಮಾಡಿಕೊಂಡಿದ್ದಿಲ್ಲ. ವಿಷಯಾನುಸಾರ ಪತ್ರಿಕೆಯಲ್ಲಿ ಈ ಕೋಶವನ್ನು ಮುಂದುವರಿಸುತ್ತ ಬಂದಿದ್ದೇವೆ. ಆದ್ದರಿಂದ ವಿಷಯಗಳ ಪ್ರತಿಪಾದನೆಯಲ್ಲಿ ಅಲ್ಲಲ್ಲಿ ತಡೆಗಳುಂಟಾಗುತ್ತ ಬಂದಿದ್ದು ವಾಚಕರ ನಿದರ್ಶನಕ್ಕೆ ಬರಬಹುದು. ಅಂಥ ವಿಷಯಗಳನ್ನು ನಮಗೆ ವಾಚಕರು ತಿಳಿಯಪಡಿಸಿದಲ್ಲಿ ಅವುಗಳನ್ನು ನಾವು ಮುಂದಿನ ಆವೃತ್ತಿಯಲ್ಲಿ ಸರಿಪಡಿಸಿಕೊಳ್ಳುವೆವು.

ಈ ಗ್ರಂಥದಲ್ಲಿ ಶಬ್ದಗಳ ಭಾವವನ್ನು ಬರೆಯುವಲ್ಲಿ ನಾವು ನಮಗೆ ತಿಳಿದಂತೆ ಅದನ್ನು ವಾಚಕರೆದುರಿಗೆ ಇಡುವ ಸಾಹಸವನ್ನು ಮಾಡಿದ್ದೇವೆ. ಈ ಕಾಲಕ್ಕೆ ವಚನಗಳ ಅಭ್ಯಾಸವು ಕ್ರಮೇಣ ಹೆಚ್ಚುತ್ತ ನಡೆದಿರುವದರಿಂದ ವಾಚಕರಿಗೆ ನಮ್ಮ ನಿರೂಪಣೆಯಲ್ಲಿ ದೋಷಗಳು ಕಂಡುಬಂದಲ್ಲಿ ಅವುಗಳನ್ನು ಅವರು ನಮಗೆ ಅವಶ್ಯವಾಗಿ ತಿಳಿಸಬೇಕು. ಶಬ್ದಗಳ ಅರ್ಥ ಮತ್ತು ಭಾವಗಳನ್ನು ಪತ್ರಿಕೆಯಲ್ಲಿ ಬರೆಯುವಲ್ಲಿ ಬಹಳಸಾರೆ ಅವಸರದಿಂದ ಬರೆಯಬೇಕಾಗಿ ಬಂದಿದೆ. ಆದ್ದರಿಂದ ನಾವು ಈ ತರದ ವಿನಂತಿಯನ್ನು ಮಾಡಿಕೊಂಡಿದ್ದೇವೆ.

# ಅನುಕ್ರಮಣಿಕೆ.



(ಈ ಅನುಕ್ರಮಣಿಕೆಯಲ್ಲಿ ವಿಷಯಗಳ ಸ್ಥೂಲ ನಿರ್ದೇಶ ಮಾತ್ರವಿದೆ.)


| | ವಿಷಯಗಳು. | ಗುಂಪುಗಳು. |
|---|---|---|
| (೧) | ಜಗತ್ತಿನ ಆವಿರ್ಭಾವ ... ... | ೧-೩೫ |
| (೨) | ದೇಹದ ವಿವರಣೆಗಳು ... ... | ೩೬-೪೮ |
| (೩) | ಷಟ್‌ಸ್ಥಲಗಳು ... ... ... | ೫೧-೬೮ |
| (೪) | ಮೂವತ್ತಾರ ಸ್ಥಲಗಳು ... ... | ೬೯-೮೭ |
| (೫) | ಸ್ಥಲವಿಭೇದಗಳು ... ... | ೮೮-೯೫ |
| (೬) | ಏಕೋತ್ತರ ಶತಸ್ಥಲಗಳು ... ... | ೯೬-೧೦೮ |
| (೭) | ಆಚಾರ ಸಂಬಂಧದ ವಿಷಯಗಳು ... | ೧೦೯-೧೨೪ |
| (೮) | ಗುರುಲಿಂಗಜಂಗಮಗಳು ... ... | ೧೨೫-೧೩೭ |
| (೯) | ಪಾದೋದಕ ಪ್ರಸಾದಗಳು ... ... | ೧೩೮-೧೬೮ |
| (೧೦) | ವಿಭೂತಿ ... ... | ೧೬೯-೧೭೩ |
| (೧೧) | ರುದ್ರಾಕ್ಷಿ ... ... | ೧೭೪-೧೭೭ |
| (೧೨) | ಮಂತ್ರ ವಿಷಯಗಳು ... ... | ೧೭೮-೨೭೦ |
| (೧೩) | ಜಪವಿಷಯಗಳು ... ... | ೨೭೧ ೨೯೮ |
| (೧೪) | ಮಿಶ್ರಾರ್ಪಣ ವಿಷಯಗಳು ... ... | ೨೯೯-೩೦೫ |
| (೧೫) | ಪಂಚೀಕರಣ ... ... | ೩೦೬-೩೧೪ |
| (೧೬) | ಮಾರ್ಗಕ್ರಿಯೆಗಳು ಮತ್ತು ಮೀರಿದ ಕ್ರಿಯೆಗಳು | ೩೧೮-೩೫೩ |
| (೧೭) | ಪೂಜಾರ್ಚನೆ ವಿಧಿವಿಧಾನಗಳು ... | ೩೫೪-೩೮೮ |
| (೧೮) | ವಿವಿಧವಿಷಯಗಳು ... ... | ೩೮೯-೪೦೩ |




(೧) ಅಗ್ನಿಧಾರಣೆಃ— ಕಾಲಾಗ್ನಿಯನೆಬ್ಬಿಸಿ ಕಮಲನಾಳದ ತುದಿಯನಡರಿ ಮಹಾಜ್ಯೋತಿಯ ಪ್ರಭೆಯಲ್ಲಿರುವದು. (೨) ನಾಡಿಧಾರಣೆಃ— ಮನುಷ್ಯನಲ್ಲಿ ಸುಷುಮ್ನಾ ನಾಡಿ ಇದ್ದು ಅದನ್ನು ಚೈತನ್ಯಗೊಳಿಸುತ್ತ ಮಹಾಜ್ಯೋತಿಯ ಪ್ರಕಾಶವ ಕಾಂಬುದು. (೩) ವಾಯುಧಾರಣೆಃ— ಮಹಾವಾಯುವನು ಪಿಡಿದು ಸಮಚಿತ್ತನಾಗಿ ಮೂಲ ಜ್ವಾಲೆಯನೆಬ್ಬಿಸುವದು. (೪) ಅಮೃತ ಧಾರಣೆಃ— ಜ್ಞಾನಪ್ರಕಾಶವಾಗಿಹ ಮಹಾಜ್ಯೋತಿ ಎಂಬ ಅಮೃತವನುಂಡರೆ ಹಸಿವು ತೃಷೆಗಳಡಗಿ ಅನಂತ ಸ್ವರೂಪನಾಗಿರುವುದು (೫) ಆಧಾರ ಧಾರಣೆಃ— ಪ್ರಾಣವೇ ಪೀಠಿಕೆಯಾಗಿ ಶಿವನೆಂಬ ಶಿವಲಿಂಗವ ನೆಲೆಗೊಳಿಸಿ ಅರ್ಚಿಸಿ ಭೇದವಿಲ್ಲದೆ ಬೆರೆವುದು.

(೩೮೦) ದೀಕ್ಷಾವಿಧಿಃ— ೧ನೇ ವಿಧಃ— ಭವಿತನಕ್ಕೆ ಹೇಸಿ ಭಕ್ತನಾಗಬೇಕೆಂಬುವವನಿಗೆ ಮಾಡತಕ್ಕ ದೀಕ್ಷಾವಿಧಿಗಳ ಅಂಗಗಳುಃ— (೧) ಕಾಯಶುದ್ಧ, ಜೀವಶುದ್ಧ, ಆತ್ಮಶುದ್ಧ ಮಾಡುವುದು. (೨) ವಾಕ್ಕು, ಪಾಣಿ, ಪಾದ, ಗುಹ್ಯ, ಪಾಯುವೆಂಬ ಕರ್ಮೇಂದ್ರಿಯಗಳ ಮೇಲಣ ಇಂದ್ರಿಯ ಲಿಖಿತವನ್ನು ತೊಡೆದು ಲಿಂಗಲಿಖಿತ ಮಾಡುವುದು (೩) ಅಂತಃಕರಣ ಚತುಷ್ಟಯಗಳ ನಿವರ್ತನೆ (೪) ಪಂಚಭೂತಸ್ಥಾನದ ಅಧಿದೇವತೆಗಳನ್ನು ತೋರುವುದು.

(೫) ಹೀಗೆ ಶುದ್ಧಾತ್ಮನ ಮಾಡಿದ ಬಳಿಕ ಗಣ ತಿಂಥಿಣಿಯ ಮುಂದೆ ನಿಲ್ಲಿಸಿ ದಂಡಪ್ರಣಾಮವನ್ನು ಮಾಡಿಸುವುದು, ಕೈವಿಡಿದೆತ್ತುವುದು.

(೬) ಭೂಶುದ್ಧಿಯನ್ನು ಮಾಡುವುದು. ಆಮೇಲೆ ಚೌಕಮಧ್ಯದಲ್ಲಿ ಕುಳ್ಳಿರಿಸುವುದು. ಗುರುಕಲಶ ಸ್ಥಾಪನೆ ಮಾಡುವುದು.

(೭) ಜಲಶುದ್ಧಿಯನ್ನು ಮಾಡುವುದು (೮) ಜಂಗಮಕ್ಕೆ ಪಾದಾರ್ಚನೆಯನ್ನು ಮಾಡುವುದು. (೯) ಕುಮಾರಶಾವನು ಜಲಾಧಿವಾಸ ಮಾಡುವುದು.

(೧೦) ಶಿಷ್ಯನ ಹಸ್ತವನ್ನು ಶೋಧಿಸುವುದು. (೧೧) ವಿಭೂತಿಯನ್ನು ಧರಿಸುವುದು, (೧೨) ರುದ್ರಾಕ್ಷಿಧಾರಣ, (೧೩) ಜಲಾಧಿವಾಸದೊಳಗಣ ಕುಮಾರಶಾವನ್ನು ತೆಗೆಯುವುದು, ಸಿಲೆಯ ಪೂರ್ವಾಶ್ರಯವನ್ನು ಕಳೆಯುವುದು. (೧೪) ಶಿಲೆಗೆ ಪ್ರಾಣಪ್ರತಿಷ್ಠೆ ಮಾಡುವುದು.

(೧೧) ದೇವರಿಗೆ ಸ್ನಪನ, (೧೨) ದೇವರಿಗೆ ವಸ್ತ್ರಸಮರ್ಪಣ, (೧೩) ಗಂಧಸಮರ್ಪಣ, (೧೪) ಅಕ್ಷತಸಮರ್ಪಣ, (೧೫) ಪುಷ್ಪಸಮರ್ಪಣ, (೧೬) ಧೂಪವನ್ನರ್ಪಿಸುವುದು, (೧೭) ದೀಪಸಮರ್ಪಣ, (೧೮) ನೈವೇದ್ಯಸಮರ್ಪಣ, (೧೯) ತಾಂಬೂಲ ಸಮರ್ಪಣ, (೨೦) ಮಂತ್ರ ಪುಷ್ಪ ಸಮರ್ಪಣ, (೨೧) ನಮಸ್ಕಾರ, (೨೨) ಅನುಷ್ಠಾನ, (೨೩) ಉರಸ್ಥಲದ ಸೆಜ್ಜೆಯಲ್ಲಿ ಲಿಂಗವನ್ನು ಧರಿಸುವುದು.

(೨೩) ಶಿಷ್ಯನ ವಾಯು ಪ್ರಾಣಿತ್ವವ ಕಳೆದು, ಲಿಂಗ ಪ್ರಾಣಿಯ ಮಾಡುವುದು, (೨೪) ಅಗ್ರೋದಕವನ್ನು ಸರ್ವಾಂಗದ ಮೇಲೆ ತಳಿವುದು, (೨೫) ವಿಭೂತಿಯ ಪಟ್ಟವನ್ನು ಕಟ್ಟುವದು, (೨೬) ಶಿಷ್ಯನ ದುರಕ್ಷರವ ತೊಡೆವುದು, (೨೭) ಲಲಾಟದಲ್ಲಿ ಲಿಂಗ ಲಿಖಿತವನ್ನು ಬರೆವುದು.

(೨೮) ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸುವುದು, (೨೯) ಶಿಷ್ಯನ ಕರ್ಣದಲ್ಲಿ ಶಿವಮಂತ್ರವನ್ನು ನಿರೂಪಿಸುವುದು, (೩೦) ಶತಪತ್ರದೊಳಗಣ ಕಳೆಯನ್ನು ಪ್ರಜ್ವಲಿಸಿ ಪ್ರಾಣದಲ್ಲಿ ಪ್ರಾಣಲಿಂಗವನ್ನು ನೆಲೆಗೊಳಿಸಿ ಇಷ್ಟಲಿಂಗಸ್ಥಲವನ್ನು ತೋರಿಸಿ ಶಿಷ್ಯನನ್ನು ಕೃತಕೃತ್ಯನನ್ನು ಮಾಡುವುದು.

ಬೇರೆ ದೀಕ್ಷಾವಿಧಿಗಳು ಅನೇಕ ಇವೆ. ಆದರೆ ಅವುಗಳಲ್ಲಿ ಶೈವಪದ್ಧತಿಗಳು ಬಹಳ ಸೇರಿಕೊಂಡಿವೆ. ಅವು ಅನೇಕ ಕಡೆಗೆ ಪ್ರಚಾರದಲ್ಲಿಯೂ ಇವೆ. ಆದರೆ ಅವು ವಚನಕಾರರ ತತ್ವಗಳಿಗೆ ಹೊಂದುವದಿಲ್ಲ. ಹೇಗೆ ಶಿವಪೂಜೆಯಲ್ಲಿ ಶೈವಪದ್ಧತಿಗಳು ಕೂಡಿವೆಯೋ, ಹಾಗೆಯೇ ಇವುಗಳಲ್ಲಿಯೂ ಕೂಡಿವೆ. ಆದುದರಿಂದ ಅವುಗಳನ್ನು ನಾವು ಇಲ್ಲಿ ಉಲ್ಲೇಖಿಸಿರುವದಿಲ್ಲ.

(೩೮೧) ತ್ರಿವಿಧ ದೀಕ್ಷೆಗಳು:— ಇವು ಕ್ರಿಯಾದೀಕ್ಷೆ, ಮಂತ್ರ ದೀಕ್ಷೆ, ಮತ್ತು ವೇಧಾದೀಕ್ಷೆ ಎಂದಿವೆ. ಕ್ರಿಯಾದೀಕ್ಷೆಯಿಂದ ಕಾಯಕ್ಕೆ, ಮಂತ್ರದೀಕ್ಷೆಯಿಂದ ಪ್ರಾಣಕ್ಕೆ, ಮತ್ತು ವೇಧಾದೀಕ್ಷೆಯಿಂದ ಮನಕ್ಕೆ ಉಪದೇಶ ಮಾಡುವುದು.

(೩೮೨) ೨೧ ವಿಧ ದೀಕ್ಷೆಗಳು:— (೧) ಆಜ್ಞಾದೀಕ್ಷೆ, ಉಪಮಾ ದೀಕ್ಷೆ, ಸ್ವಸ್ತಿಕಾರೋಹಣ, ಕಳಶಾಭಿಷೇಕ, ವಿಭೂತಿ ಪಟ್ಟ, ಲಿಂಗಾ

ಯುತ, ಲಿಂಗಸ್ವಾಯುತ ಈ ಏಳನ್ನು ಕಾಯಕ್ಕುಪದೇಶ ಮಾಡುವುದು. (೨) ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಅಧ್ಯಾತ್ಮ, ಅನುಗ್ರಹ, ಸತ್ಯಶುದ್ಧ ಈ ಏಳನು ಪ್ರಾಣಕ್ಕುಪದೇಶ ಮಾಡುವುದು. (೩) ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಲಿಂಗ ನಿಜ, ಮನೋಲ್ಲಯ, ಸದ್ಯೋನ್ಮುಕ್ತಿ ಈ ಏಳನು ಮನಕ್ಕುಪದೇಶ ಮಾಡುವುದು.

(೩೮೩) ಅಷ್ಟವಿಧ ಸಮಾಧಿಗಳುಃ— ಇವು ಯಾವವೆಂದರೆಃ- (೧) ನಿರ್ವಾಣ ಸಮಾಧಿಃ— ಇದು ನಿರವಯಸ್ಥಲಕ್ಕೆ ಕಾರಣವಾದ ಶೂನ್ಯ ಲಿಂಗಾನುಭವವುಳ್ಳವರಿಗೆ ಸಂಬಂಧವು. (೨) ಚಿದಾನಂದ ಸಮಾಧಿ- ನಿರಾಮಯಸ್ಥಲಕ್ಕೆ ಕಾರಣವಾದ ನಿಃಕಲ ಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೩) ನಿರವಯ ಸಮಾಧಿಃ— ನಿಜೈಕ್ಯಸ್ಥಲಕ್ಕೆ ಕಾರಣವಾದ ಮಹಾಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೪) ನಿಜಶಿವಸಮಾಧಿಃ—ಶರಣಸ್ಥಲಕ್ಕೆ ಕಾರಣವಾದ ಪ್ರಸಾದ ಲಿಂಗಾನುಭವವುಳ್ಳವರಿಗೆ ಸಂಬಂಧವು. (೫) ಬಯಲಸಮಾಧಿಃ— ಪ್ರಾಣಲಿಂಗಕ್ಕೆ ಕಾರಣವಾದ ಜಂಗಮ ಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೬) ಗೋಳಕಸಮಾಧಿಃ— ಪ್ರಸಾದಿಸ್ಥಲಕ್ಕೆ ಕಾರಣವಾದ ಶಿವ ಲಿಂಗಾನುಭವವ ಹೊಂದಿದವರಿಗೆ ಸಂಬಂಧವು. (೭) ಗೋಮುಖ ಸಮಾಧಿಃ— ಮಹೇಶ್ವರಸ್ಥಲಕ್ಕೆ ಕಾರಣವಾದ ಗುರುಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು. (೮) ಕ್ರಿಯಾಸಮಾಧಿಃ— ಸದ್ಭಕ್ತಿಕಾರಣವಾದ ಆಚಾರ ಲಿಂಗಾನುಭವವನ್ನು ಹೊಂದಿದವರಿಗೆ ಸಂಬಂಧವು.

(೩೮೪) ಸಮಾಧಿ ಕ್ರಿಯೆಃ— ಇದು ಅಂತ್ಯವಿಧಿಯಾಗಿದೆ. ಇದರಲ್ಲಿಯ ಭಾಗಗಳು ಅವವೆಂದರೆಃ— (೧) ಲಿಂಗೈಕ್ಯಂಗೆ ಘನಮಾರ್ಗದ ಎಚ್ಚರವನ್ನು ಹುಟ್ಟಿಸುವುದು. (೨) ಗುರುವಾಕ್ಯ ಪ್ರಮಾಣವಾಗಿ ನಡೆದು ನುಡಿದು ಆಚರಿಸಿ ಬಯಲಾದ ಮಹಾಮಹಿಮರ ಕಥಾ ಪ್ರಸಂಗಗಳನು ಓದಿ ಅನುಭಾವವ ಮಾಡುವದು. (೩) ರೋದನಗಳನ್ನು ಮಾಡದೆ ಮಂಗಳ ಮಹೋತ್ಸವದಂತೆ ವರ್ತಿಸುವುದು. (೪) ಸಮಾಧಿಯ ಮಾಡುವುದು. (೫) ಪಂಚಾಭಿಷೇಕಗಳಿಂದ ಸ್ನಾನವ ಮಾಡಿಸಿ, ಮಂಟಪವ ರಚಿಸಿ, ಆಸನದಲ್ಲಿ ಮೂರ್ತ ಮಾಡಿಸಿ. (೬) ಪುಷ್ಪಾಂಜಲಿಯನ್ನು

ಮಾಡುವದು. (೭) ಸಮಾಧಿಸ್ಥಳಕ್ಕೆ ತರುವದು. (೮) ಲಿಂಗೈಕ್ಯ ಶರಣನ ನಡೆನುಡಿಯಾಚರಣೆಯ ವೃತ್ತಾಂತವನ್ನು ಉಗ್ಗಡಿಸುವುದು. (೯) ಸಮಾಧಿಗೆ ಪಾದೋದಕ ಹಾಕುವದು. (೧೦) ಸಮಾಧಿ ಮಂಟಪದಲ್ಲಿ ಮೂರ್ತವ ಮಾಡಿಸುವದು. (೧೧) ಸರ್ವಾಂಗಕ್ಕೆ ಪ್ರಣವ ಸಂಬಂಧವಾದ ತಗಡು ಸಂಬಂಧಿಸುವದು. (೧೨) ಪುಷ್ಪಾಂಜಲಿ. (೧೩) ಕವಾಟಬಂಧನ. (೧೪) ಸಮಾಧಿಗೆ ವೃತ್ತಿಕೆಯ ತುಂಬುವುದು. (೧೫) ಮೇಲೆ ಗದ್ದುಗೆಯ ಮಾಡುವದು.

ಸೂಚನೆಃ— ವೀರಶೈವಕ್ಕೆ ಸಂಬಂಧಿಸದೆ ಇದ್ದಂಥ ಅನೇಕ ಆಚಾರಗಳುಂಟು. ಅವುಗಳು ಶೈವ ಕರ್ಮಗಳಾಗಲಿ ಇಲ್ಲವೆ ವೈದಿಕ ಕರ್ಮಗಳಾಗಲಿ ಅಥವಾ ಮಿಶ್ರ ಕರ್ಮಗಳಾಗಲಿ ಇರುತ್ತವೆ. ಅವುಗಳನ್ನು ವಚನಕಾರರು ನಿರಾಕರಿಸಿದ್ದಾರೆ. ಆದರೂ ರೂಢಿಯಲ್ಲಿ ಇಂಥ ಅನೇಕ ಆಚಾರಗಳು ವೀರಶೈವರಲ್ಲಿ ಬಂದಿವೆ. ಮತ್ತು ಅವುಗಳು ವೀರಶೈವ ಗ್ರಂಥಗಳಲ್ಲಿ ಆಗಿಂದಾಗ್ಗೆ ಉಲ್ಲೇಖಿಸಲ್ಪಡುತ್ತವೆ. ಆದ್ದರಿಂದ ಅವುಗಳು ಕೆಳಗೆ ಹೇಳಲ್ಪಟ್ಟಿರುತ್ತವೆ.

(೩೮೫) ಶೋಡಶ ಕರ್ಮಗಳುಃ— (ಅ) ಇವು ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, (ದೀಕ್ಷಾ) ಉಪಾಕರ್ಮ, ಉತ್ಸರ್ಜನ, ವೇದವ್ರತ, ಗೌದಾನಿಕ, ಸ್ನಾತಕ, ವಿವಾಹ, ಸ್ಮಾರ್ತಾಗ್ನಿಹೋತ್ರ, ಔರ್ಧ್ವದೇಹಿಕ, ಇವು ಇರುತ್ತವೆ. (ಬ) (೧) ಗರ್ಭಾದಾನ (೨) ಪುಂಸವನ (೩) ಸೀಮಂತೋನ್ನಯನ (೪) ಅನವಲೋಮನ (೫) ಜಾತಕರ್ಮ (೬) ನಾಮಕರಣ (೭) ದುಗ್ಧಪ್ರಾಶನ (೮) ಸೂರ್ಯಚಂದ್ರಾವಲೋಕನ (೯) ನಿಷ್ಕ್ರಮಣ (೧೦) ಕರ್ಣವೇಧ (೧೧) ಅನ್ನಪ್ರಾಶನ (೧೨) ಚೌಲ (೧೩) ವಿದ್ಯಾರಂಭ (೧೪) ದೀಕ್ಷಾ (೧೫) ವಿವಾಹ (೧೬) ಅಂತ್ಯೇಷ್ಟಿ

(೩೮೬) ಷಟ್‌ಕರ್ಮಗಳುಃ— ಇವು ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ, ಎಂದಿವೆ.

(೩೮೭) ದಶಕರ್ಮಗಳುಃ— ಗರ್ಭಾದಾನ, ಸೀಮಂತ, ಜಾತಕರ್ಮ (ಲಿಂಗಧಾರಣ), ನಾಮಕರಣ, ಕರ್ಣವೇಧ, ಚೌಲ, ವಿದ್ಯಾರಂಭ, ದೀಕ್ಷಾ, ವಿವಾಹ, ಅಂತ್ಯೇಷ್ಟಿ,

(೩೮೮) ನವವಿಧ ಭಕ್ತಿಗಳುಃ— ಇವು ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖತ್ವ, ಆತ್ಮಾರ್ಪಣ, ಎಂದಿವೆ.

(೩೮೯) ನವಶಕ್ತಿಗಳುಃ— ಕಾಕಿನಿ, ದಾಕಿನಿ, ಲಾಕಿನಿ, ಶಾಕಿನಿ, ಡಾಕಿನಿ, ಅಕಿನಿ, ನಿರ್ಮಾಯಶಕ್ತಿ, ನಿಭ್ರಾಂತಶಕ್ತಿ, ನಿರ್ಭಗ್ನಶಕ್ತಿ ಎಂದಿವೆ.

(೩೯೦) ೨೮ ಆಗಮಗಳುಃ— ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮ, ದೀಪ್ತಾಗಮ, ಸೂಕ್ಷ್ಮಾಗಮ, ಸಹಸ್ರಾಗಮ, ಅಂಶುಮಾನಾಗಮ, ಸುಪ್ರಬೋಧಾಗಮ, ವಿಜಯಾಗಮ, ನಿಶ್ವಾಸಾಗಮ, ಸ್ವಯಂಭುವಾಗಮ, ಅನಿಲಾಗಮ, ವೀರಾಗಮ, ರೌರವಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಬಿಂಬಾಗಮ, ಪ್ರೋದ್ಗೀತಾಗಮ, ಲಲಿತಾಗಮ, ಸಿದ್ಧಾಗಮ, ಸಂತಾನಾಗಮ, ಸರ್ವೋಕ್ತಾಗಮ, ಪಾರಮೇಶ್ವರಾಗಮ, ಕಿರಣಾಗಮ, ವಾತುಲಾಗಮ, ಎಂದು ೨೮ ಆಗಮಗಳಿವೆ.

(೩೯೧) ಹದಿನೆಂಟು ಪುರಾಣಗಳುಃ— ಬ್ರಹ್ಮಪುರಾಣ, ಪದ್ಮಪುರಾಣ, ವಿಷ್ಣುಪುರಾಣ, ಶೈವಪುರಾಣ, ಭಾಗವತಪುರಾಣ, ನಾರದೀಯಪುರಾಣ, ಮಾರ್ಕಂಡೇಯಪುರಾಣ, ಆಗ್ನೇಯಪುರಾಣ, ಭವಿಷ್ಯತ್ಪುರಾಣ, ಬ್ರಹ್ಮವೈವರ್ತಪುರಾಣ, ಲೈಂಗಪುರಾಣ, ವರಾಹಪುರಾಣ, ಸ್ಕಾಂದಪುರಾಣ, ವಾಮನಪುರಾಣ, ಕೂರ್ಮಪುರಾಣ, ಮತ್ಸ್ಯಪುರಾಣ, ಗಾರುಡಪುರಾಣ, ಬ್ರಹ್ಮಾಂಡಪುರಾಣ, ಎಂದಿವೆ. ಇವುಗಳಲ್ಲಿ ಸ್ಕಂದ, ಶೈವ, ಲೈಂಗ, ಕೂರ್ಮ, ವಾಮನ, ವರಾಹ, ಭವಿಷ್ಯತ್ತು, ಮತ್ಸ್ಯ, ಮಾರ್ಕಂಡೇಯ, ಬ್ರಹ್ಮಾಂಡ ಇವು ಹತ್ತು ಶಿವಪುರಾಣಗಳು.

(೩೯೨) ಆರು ದರ್ಶನಗಳುಃ— ಶೈವ, ಶಾಕ್ತ, ವೈಷ್ಣವ, ಸೌರ, ಗಾಣಾಪತ್ಯ, ಮಾಯಾವಾದಿ, ಇವು ಆರು ದರ್ಶನಗಳು.

(೩೯೩) ಪಂಚ ಸೂತಕಗಳುಃ—

೧ ನೇ ವಿಧಃ— ಇವು ಜಾತಿಸೂತಕ, ಜನನ ಸೂತಕ, ಪ್ರೇತ ಸೂತಕ, ರಜಸೂತಕ, ಉಚ್ಛಿಷ್ಟ ಸೂತಕ, ಇವು ಐದು ಸೂತಕಗಳು.

೨ ನೇ ವಿಧಃ- ಆರುಸ್ಥಲಗಳ ಪ್ರಕಾರ ಆರು ಸೂತಕಗಳು ಇವೆಃ— ಅವು ಕುಲಸೂತಕ, ಛಲಸೂತಕ, ತನುಸೂತಕ, ಮನಸೂತಕ, ನೆನ

ಹುಸೂತಕ, ಭಾವಸೂತಕ ಎಂದಿವೆ. ಇವು ಭಕ್ತ ಮಹೇಶಾದಿ ಸ್ಥಲಗಳಿಗೆ ಅನುಕ್ರಮವಾಗಿ ಸಂಬಂಧಿಸಿವೆ.

(೩೯೪) ಶೈವವಿಧಗಳು:—

(ಅ) ಶೈವ, ಪಾಶುಪತ, ಸೋಮ, ದಕ್ಷಿಣ, ಕಾಳಾಮುಖ, ಲಾಕುಳ, (ಯಾಮಳ)

(ಬ) ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಅಂತ್ಯಶೈವ, ಪ್ರವರಶೈವ. ಆದಿಶೈವರು ಶಿವದ್ವಿಜರು. ದೀಕ್ಷೆಹೊಂದಿದ ಶಿವದ್ವಿಜರು ಮಹಾಶೈವರು. ನೃಪರಿಗೂ ವೈಶ್ಯರಿಗೂ ದೀಕ್ಷೆಯನ್ನಿತ್ತರೆ, ಅವರು ಅನುಶೈವರು. ಶೂದ್ರರಿಗೆ ದೀಕ್ಷೆಯನ್ನಿತ್ತರೆ ಅವರು ಅವಾಂತರ ಶೈವರು. ಬ್ರಾಹ್ಮಣನಿಂದ ಶೂದ್ರಸ್ತ್ರೀಯರಲ್ಲಿ ಹುಟ್ಟಿದವರು ಪ್ರವರಶೈವರು. ಅಂತ್ಯಜರಿಗೆ ದೀಕ್ಷೆಯನ್ನಿತ್ತರೆ ಅವರು ಅಂತ್ಯಶೈವರು.

(ಕ) ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತ. ಶಕ್ತಿಪರವಾದುದು ವಾಮವು. ಭೈರವಪರವಾದುದು ದಕ್ಷಿಣವೆನಿಸುವುದು. ಸಪ್ತಮಾತೃಕಾಪರವಾದುದು ಮಿಶ್ರವು. ಪರಶಿವ ಪರವಾದುದು ಸಿದ್ಧಾಂತವು. ಹೀಗೆ ಶೈವ ಭೇದಗಳಿವೆ.

(ಡ) ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ. ಶಿವನನ್ನು ಪೂಜಿಸುವವರು ಸಾಮಾನ್ಯರು. ಶಿವ, ವಿಷ್ಣು, ಬ್ರಹ್ಮ, ಷಣ್ಮುಖ, ಗಣಪತಿ ಇಂಥ ದೇವತೆಗಳನ್ನೆಲ್ಲ ಪೂಜಿಸುವವರು ಮಿಶ್ರಶೈವರು. ಶಿವನನೊಬ್ಬನನ್ನೇ ಪೂಜಿಸುವವರು ಶುದ್ಧ ಶೈವರು. ಇವರಿಗೆ ಲಿಂಗ ಧಾರಣವಿದೆ. ಸಂಕಲ್ಪ ವಿಕಲ್ಪಗಳನ್ನು ದೂರಮಾಡಿ ಆತ್ಮತತ್ವದ ವಿಚಾರ ಮಾಡುವವರು ವೀರಶೈವರು.

ಟೀಪು:— ಶಿವಶರಣರು ಮತ್ತು ವಚನಕಾರರು ಇಂಥ ಯಾವ ಭೇದವನ್ನೂ ಎಣಿಸುವದಿಲ್ಲ. ಅವರು ಭವಿ, ಭಕ್ತ ಎಂಬ ಎರಡೇ ಭೇದಗಳನ್ನು ಎಣಿಸುತ್ತಾರೆ. ವೀರಶೈವ ದೀಕ್ಷೆಹೊಂದಿದವರಲ್ಲಿ ಯಾವ ತರದ ಭೇದವನ್ನು ಅವರು ಎಣಿಸುವದಿಲ್ಲ.

(೩೯೫) ಐಕ್ಯದ ಭೇದಗಳು:- ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಇವು ಆಯಾಧರ್ಮದವರ ಧ್ಯೇಯಗಳಾಗಿವೆ.

(೩೯೬) ಕಾಂಡಗಳು:— ಕರ್ಮಕಾಂಡ, ಭಕ್ತಿಕಾಂಡ, ಜ್ಞಾನ ಕಾಂಡಗಳು ಎಂದಿವೆ.

(೩೯೭) ಗೋತ್ರಗಳು:— ವೀರ, ನಂದಿ, ವೃಷಭ, ಭೃಂಗೀ, ಸ್ಕಂದ ಇವು ೫ ಗೋತ್ರಗಳು. ಇವು ಅನುಕ್ರಮವಾಗಿ ಪಡ್ವಿಡಿ, ವೃಷ್ಟಿ, ಮುಕ್ತಾ ಗುಚ್ಛ, ಲಂಬನ, ಪಂಚವರ್ಣ ಇದ್ದು ಇವುಗಳ ಕನ್ನಡ ಹೆಸರುಗಳು ವಾಡಿಕೆಯಲ್ಲಿವೆ. ಅವು ಪಡವಿಡಿ ಬಗೆ, ಮಳೆ ಬಗೆ, ಮುತ್ತಿನ ಕಂತೆಯು ಬಗೆ. ಲಂಬನ ಬಗೆ ಮತ್ತು ಪಂಚವಣ್ಣಿಗೆಯು ಬಗೆ ಎಂದಿವೆ. ಇವು ಗಳಿಗೆ ರೇವಣಸಿದ್ಧ, ಮರುಳಾರಾಧ್ಯ, ಏಕೋರಾಮ, ಪಂಡಿತಾರಾಧ್ಯ, ವಿಶ್ವಾರಾಧ್ಯ ಇವರು ಅನುಕ್ರಮವಾಗಿ ಮೂಲ ಗುರುಗಳು.

(೩೯೮) ಏಕಾದಶ ರುದ್ರರು:— ವೀರಭದ್ರ, ಶಂಭು, ಗಿರೀಶ, ಅಜೈಕಪಾತ್, ಅಹಿರ್ಬುಧ್ನ್ಯ, ಪಿನಾಕಿ, ಸ್ಥಾಣು, ಪಶುಪತಿ, ಭವ, ಉಗ್ರ, ತ್ರಿಟ್‌ಪತಿ.

(೩೯೯) ಅಷ್ಟದಿಕ್ಪಾಲಕರು:— ಇಂದ್ರ, ಅಗ್ನಿ, ಯಮ, ನಿರ ಋತಿ, ವರುಣ, ವಾಯು, ಕುಬೇರ, ಈಶಾನ.

(೪೦೦) ಸಪ್ತಸಾಗರಗಳು:— ಲವಣ ಸಮುದ್ರ, ಕ್ಷೀರಸಮುದ್ರ, ದಧಿಸಮುದ್ರ, ಘೃತಸಮುದ್ರ, ಇಕ್ಷುಸಮುದ್ರ, ಸುರಾಸಮುದ್ರ, ಸ್ವಾದೂ ದಕಸಮುದ್ರ.

(೪೦೧) ಹದಿನಾಲ್ಕು ಲೋಕಗಳು:— ಅತಳ, ವಿತಳ, ಸುತಳ, ಮಹೀತಳ, ತಳಾತಳ, ರಸಾತಳ, ಪಾತಾಳ; ಭೂಲೋಕ, ಭುವ ರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋ ಲೋಕ, ಸತ್ಯಲೋಕ.

(೪೦೨) ಪಂಚ ಯಜ್ಞಗಳು:— ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಬ್ರಹ್ಮಯಜ್ಞ ಎಂದಿವೆ.

(೪೦೩) ಉದ್ಧರಣೆಗಳು:— ವೀರಶೈವ ತತ್ವಗಳ ಮರ್ಮವನ್ನು ತಿಳಿಯಲಿಕ್ಕೆ ಉದ್ಧರಣೆಗಳು ಸಾಧನವಾಗಿವೆ. ಅವು ೩೨ ಇವೆ. ಅವು ಗಳ ಹೆಸರುಗಳು:— ಅನಾದಿ ಭಕ್ತೋದ್ಧರಣೆ, ಅಷ್ಟಾವರಣೋದ್ಧರಣೆ,

ಅನಾದಿ ಜಂಗವೋದ್ಧರಣೆ, ಗೋಮುಖೋದ್ಧರಣೆ, ಪ್ರಣವೋದ್ಧರಣೆ, ಮಕುಟೋದ್ಧರಣೆ, ಶೂನ್ಯಲಿಂಗೋದ್ಧರಣೆ, ಚಿದಂಬರೋದ್ಧರಣೆ, ಷಡ್ಬ್ರಹ್ಮೋದ್ಧರಣೆ, ಪಂಚಮೂರ್ತಿ ಲಿಂಗೋದ್ಧರಣೆ, ಶಾಂಭವೀಚಕ್ರೋದ್ಧರಣೆ, ವೃಷಭೋದ್ಧರಣೆ, ನವಚಕ್ರೋದ್ಧರಣೆ, ತತ್ವಪಂಚೀಕರಣೋದ್ಧರಣೆ, ಮಂತ್ರಪಂಚೀಕರಣೋದ್ಧರಣೆ, ಲಿಂಗಪಂಚೀಕರಣೋದ್ಧರಣೆ, ಮಹಾಲಿಂಗೋದ್ಧರಣೆ, ಷಡಕ್ಷರೋದ್ಧರಣೆ, ಬಸವೋದ್ಧರಣೆ, ನೂರೆಂಟು ಪ್ರಣವೋದ್ಧರಣೆ, ಅಧಃಕುಂಡಲಿ ಶಕ್ತಿಪ್ರಣವೋದ್ಧರಣೆ, ಊರ್ಧ್ವಕುಂಡಲಿ ಶಕ್ತಿಪ್ರಣವೋದ್ಧರಣೆ, ಜ್ಞಾನಚಕ್ರೋದ್ಧರಣೆ, ನೂರೆಂಟುತೆರದ ಅರ್ಪಣೋದ್ಧರಣೆ, ಅರುವತ್ತಾರು ತೆರದ ಕರಣಾರ್ಪಣೋದ್ಧರಣೆ, ನಾಲ್ವತ್ತೆಂಟು ತೆರದ ಅರ್ಪಣೋದ್ಧರಣೆ, ಇನ್ನೂರುಹದಿನಾರು ತೆರದ ಅರ್ಪಣೋದ್ಧರಣೆ, ಮೂವತ್ತಾರುತೆರದ ಮಿಶ್ರಾರ್ಪಣೋದ್ಧರಣೆ, ಕಾಯಾರ್ಪಣೋದ್ಧರಣೆ, ಅಂಗಷಡಕ್ಷರೋದ್ಧರಣೆ, ಲಿಂಗಷಡಕ್ಷರೋದ್ಧರಣೆ, ಲಯಯೋಗ ಸಮಾಧಿ.

ನಮಾಜಿನ ಮಂದಿರಗಳು, ಹಿಂದೂ ಜನರ ದೇವಾಲಯುಗಳು ಮತ್ತು ಮಠಗಳು ಇವುಗಳಲ್ಲಿ ವ್ಯಕ್ತವಾಗುತ್ತದೆ.

ವೀರಶೈವ ಸಮಾಜೇತಿಹಾಸದಲ್ಲಿ ಇದೇ ರೀತಿಯು ಕಂಡುಬರುತ್ತದೆ. ಮೊದಲು ಶಿವಾನುಭವದ ಪ್ರಸಾರ ಕಾರ್ಯಗಳು ವಚನಗಳ ದ್ವಾರಾ ಬಸವೇಶ್ವರನ ಕಾಲದಲ್ಲಿ ಬಹು ಬಲವಾದ ರೀತಿಯಿಂದ ನಡೆದವು. ಆಗ ಶಿವಾನುಭವ ಮಂಟಪವು ಕಲ್ಯಾಣದಲ್ಲಿ ಸ್ಥಾಪಿತವಾಯಿತು. ಮುಂದೆ ಗ್ರಾಮಾಂತರಗಳಲ್ಲಿ ವಚನಕಾರರ ಪ್ರಸಾರ ಕಾರ್ಯಗಳು ಹೆಚ್ಚುತ್ತ ಹೋದಹಾಗೆ ಮಠಗಳು ದೇಶದಲ್ಲೆಲ್ಲ ಸ್ಥಾಪಿಸಲ್ಪಡಹತ್ತಿದವು. ಹೀಗೆ ಬಸವೇಶ್ವರನ ಕಾಲದಲ್ಲಿ ಸಮಾಜದಲ್ಲಿ ಒಂದು ಬಲವಾದ ಸಂಘಟನೆಯುಂಟಾಯಿತು.

ಮುಂದೆ ಮುಸಲ್ಮಾನರು ಕರ್ನಾಟಕವನ್ನು ಆಕ್ರಮಣ ಮಾಡಲು ದೇಶದಲ್ಲಿ ಧಾರ್ಮಿಕ ಅವನತಿಯುಂಟಾಯಿತು. ಆದರೆ ನೂರೊಂದು ವಿರಕ್ತರು ದೇವರಾಯನ ಕಾಲದಲ್ಲಿ ಉದ್ಭವಿಸಿ ಅಡಗಿಹೋಗಿದ್ದ ವಚನ ಶಾಸ್ತ್ರವನ್ನು ಪುನಃ ಬೆಳಕಿಗೆ ತಂದರು. ದೇವರಾಯನ ತರುವಾಯ ದೇಶದಲ್ಲಿ ಶಾಂತತೆಯು ಉಳಿಯಲಿಲ್ಲ. ಆದ್ದರಿಂದ ಅವನ ಕಾಲದಲ್ಲಿ ಉಂಟಾದ ಪ್ರಯತ್ನಗಳಿಗೆ ಒಂದು ಸಂಘಟಿತ ಸ್ವರೂಪವು ಪ್ರಾಪ್ತವಾಗಲಿಲ್ಲ. ಆದರೆ ಮುಂದೆ ಕೆಲವು ವರ್ಷಗಳಲ್ಲಿಯೇ ತೋಂಟದಾರ್ಯರು ಉದ್ಭವಿಸಿ ನೂರೊಂದು ವಿರಕ್ತರು ಆರಂಭಿಸಿದ ಕಾರ್ಯದಲ್ಲಿ ಒಂದು ಮಹತ್ವದ ಸಂಘಟನೆಯನ್ನುಂಟುಮಾಡಿದರು.

ತೋಂಟದಾರ್ಯರಲ್ಲಿ ನೂರಾರುಜನ ಶಿವಾನುಭವಿಗಳೂ ವಿದ್ವಾಂಸರೂ ನೆರೆಯಲು ತೋಂಟದಾರ್ಯರು ಅವರನ್ನು ಸಮಸ್ತ ದೇಶಗಳಿಗೆ ಕಳಿಸಿ ಶಿವಾನುಭವದ ತತ್ವಗಳನ್ನು ಪ್ರಸಾರಮಾಡುವ ಕಾರ್ಯದಲ್ಲಿ ಉದ್ಯುಕ್ತರಾದರು. ಈ ಬೋಧಕರು ಮಾಡಬೇಕಾದ ಕಾರ್ಯಗಳು ನಿರಂಜನವಂಶ ರತ್ನಾಕರದಲ್ಲಿ ಬಹುಚನ್ನಾಗಿ ವಿವರಿಸಲ್ಪಟ್ಟಿವೆ. ಅದರಲ್ಲಿ ಹೇಳಿರುವದೇನಂದರೆ ತೋಂಟದಾರ್ಯರು— 'ಆ ಗಣವರರಿಗೆ ......ಆಶೀರ್ವಾದವಂ ಮಾಡಿ ಅಪ್ಪಣೆಯುಂ ಕೊಟ್ಟು ದೇಶಾಟಣಕ್ಕೆ ಕಳುಹಿದರು. ಅನಂತರ ಆ ಚರವರರು ದೇಶಾಂತರವಂ ಮಾಡುತ್ತ ಗ್ರಾಮಪೇಟೆಯ ಮನೆಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳಿಗೆ

ಷಟ್‌ಸ್ಥಲ ಜ್ಞಾನೋಪದೇಶವನ್ನು ಮಾಡುತ್ತ ಅನ್ಯ ಮತಸ್ಥರಾದ ಪರ ವಾದಿಗಳಂ ಮಹತ್ವದಿಂ ಶಾಸ್ತ್ರಮುಖದಿಂ ಗೆಲಿಯುತ್ತ ಶಿವಭಕ್ತಿಯು ನುಂಟು ಮಾಡುತ್ತ, ಆ ಭಕ್ತರ ಭಕ್ತಿಯಿಂ ದೇಶಮಧ್ಯದಿ ತಮ್ಮ ಮಠ ಮಾನ್ಯ ಕಾಣಿಕೆ ವರ್ಷಾಶನಗಳಂ ಪಡೆದು ಆ ಮಠಗಳಲ್ಲಿ ತಮ್ಮ ಸೂತ್ರಿಕರಾದ ಮರಿಗಳಂ ಇಡುತ್ತ ದೇಶಗಳಲ್ಲಿ ಭಕ್ತರಿಂ ಕಾಣಿಕೆಯಂ ಎತ್ತಿ ತಮ್ಮಯ ಗುರುಸನ್ನಿಧಿಗೆ ವಾಣಿಜ್ಯ ಪುರದ ಶೂನ್ಯಸಿಂಹಾಸನಕ್ಕೆ ಕಾರಣಕರ್ತರಾದ ತೋಂಟದಾರ್ಯ ಸ್ವಾಮಿಗಳವರ ದಾಸೋಹಕ್ಕೆ ಕಳುಹಿಸುತ್ತ ಬಂದರು. ಆ ಏಳುನೂರು ಚರಮೂರ್ತಿಗಳ ಹಸ್ತಾಬ್ಜ ದಿಂದ ಸಂಜನಿತರಾದ ವಿರಕ್ತರು ಮೂರುಸಾವಿರವಾದರು. ಅಂತು ಕೂಡಿ ಏಳುನೂರು ಚರಮೂರ್ತಿಗಳಿಗೆ ಮೂರುಸಾವಿರ ವಿರಕ್ತ ಮಹೇ ಶ್ವರರಿಗೆ ತೋಂಟದಾರ್ಯ ಸ್ವಾಮಿಗಳವರೇ ಜಗದ್ಗುರುಗಳೆಂದೆಣಿ ಸಿದರು.' ಇದರಲ್ಲಿ ತೋಂಟದಾರ್ಯರು ಮಠಗಳ ಮೂಲಕ ಮಾಡಿದ ಸಂಘಟನೆಯ ರೂಪರೇಷೆಯು ವಿಶದವಾಗಿ ನಿರೂಪಿಸಲ್ಪಟ್ಟಿರುತ್ತದೆ.

ಈ ವಿರಕ್ತರು ಜನರಲ್ಲಿ ವಚನಶಾಸ್ತ್ರದ ತತ್ವಗಳನ್ನು ನಿರೂಪಿಸುತ್ತ ಇಡೀ ದಕ್ಷಿಣ ಹಿಂದುಸ್ತಾನವನ್ನು ವ್ಯಾಪಿಸಿದರು. ಅವರ ಮಠಗಳು ಬರೀ ಮೈಸೂರ ಪ್ರಾಂತದಲ್ಲಷ್ಟೇ ಅಲ್ಲ, ಆದರ ಉತ್ತರ ಭಾಗದಲ್ಲಿದ್ದ ಮುಸಲ್ಮಾನರ ರಾಜ್ಯಗಳಲ್ಲಿ, ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳು ದೇಶಗಳಲ್ಲಿ ಸಹ ಪಸರಿಸಿದವು. ಇವುಗಳಲ್ಲಿ ನಿಯೋಜಿತರಾದ ವಿರಕ್ತ ಮೂರ್ತಿಗಳು ಶಿವಶರಣರ ತತ್ವಗಳನ್ನು ಜನರಲ್ಲಿ ಪ್ರಸಾರ ಮಾಡ ಹತ್ತಿದರು. ಇದರಿಂದ ಸಮಾಜದಲ್ಲಿ ಒಂದು ಬಲವಾದ ಸಂಘಟನೆ ಯುಂಟಾಗಿ ಅದರ ಧಾರ್ಮಿಕ ವರ್ಚಸ್ಸು ದೇಶದಲ್ಲಿ ಬೆಳೆಯಹತ್ತಿತು. ಈ ಮಠಗಳಲ್ಲಿ ಅಧಿಕಾರ ಹೊಂದಿದ ಅನೇಕ ಪಟ್ಟಾಧಿಕಾರಿಗಳು ವಿದ್ವ ತ್ತೆಯುಳ್ಳವರಾಗಿ ಅನೇಕ ಗ್ರಂಥಗಳನ್ನು ರಚಿಸಿದ್ದು ತೋರಿಬರುತ್ತದೆ. ಅವರು ಪುರಾಣಗಳನ್ನೂ ಅನೇಕ ಬಗೆಯ ಕಾವ್ಯಗಳನ್ನೂ ತ್ರಿಪದಿಗಳನ್ನೂ ಸಾಂಗತ್ಯಗಳನ್ನೂ ರಗಳೆಗಳನ್ನೂ ಪದಪದ್ಯಗಳನ್ನೂ ರಚಿಸಿ ಪ್ರಸಿದ್ಧರಾ ಗಿದ್ದಾರೆ.

ಈ ಪ್ರಕಾರ ತೋಂಟದ ಸಿದ್ಧಲಿಂಗೇಶ್ವರರು ವೀರಶೈವ ಮತೋ ದ್ಧಾರಕರ್ಮೋಸ್ಕರ ಮಹತ್ವದ ಕಾರ್ಯಗಳನ್ನು ಮಾಡಿ ಕಡೆಗೆ ಮೈಸೂರು ಸೀಮೆಯಲ್ಲಿರುವ ಎಡೆಯೂರಲ್ಲಿ ಸಮಾಧಿಸ್ಥರಾದರು.

ತೋಂಟದಾರ್ಯರ ತರುವಾಯ ಬೋಳಬಸವೇಶ್ವರರು ಪೀಠಾಧಿಪತಿಗಳಾದರು. ಅವರು ತಮ್ಮ ಗುರುಗಳಂತೆ ದೇಶದಲ್ಲಿ ಧರ್ಮೋಪದೇಶವನ್ನು ಮಾಡುತ್ತ ಸಂಚರಿಸುತ್ತ ಮದಗಿರಿ ಎಂಬಲ್ಲಿ ದೇಹವಿಟ್ಟರು. ಆ ಮೇಲೆ ಸಿದ್ಧವೀರೇಶ ಸ್ವಾಮಿಗಳೆಂಬವರು ಪಟ್ಟಾಧಿಕಾರಿಗಳಾಗಿ ಅವರು ವಾದದಲ್ಲಿ ಇತರ ಮತಸ್ಥರನ್ನು ಜಯಿಸಿ, ೧೨ ಸಾವಿರ ಜನರಿಗೆ ಲಿಂಗಧಾರಣವನ್ನು ಮಾಡಿದರೆಂದು ತಿಳಿಯುತ್ತದೆ. ಅವರ ತರುವಾಯ ಗುರುಸಿದ್ಧ ದೇಶಿಕೇಂದ್ರ ಸ್ವಾಮಿಗಳೆಂಬವರು ಗುಮ್ಮಳಾಪುರ ಅಂದರೆ ಈಗಿನ ಗೂಳೂರನ್ನು ತಮ್ಮ ಮುಖ್ಯ ಸ್ಥಾನವನ್ನಾಗಿ ಮಾಡಿಕೊಂಡು ಅಲ್ಲಿಯೇ ಬಯಲಾದರು.

ಈ ಪೀಠಾಧಿಪತಿಗಳ ಕಾಲದಲ್ಲಿ ಅನೇಕ ವೀರಶೈವ ಗ್ರಂಥಕಾರರೂ ವಚನವಾಙ್ಮಯ ಪಾರಂಗತರೂ ಉತ್ಪನ್ನರಾಗಿದ್ದಾರೆ. ಅತ್ಯಂತ ಪ್ರಸಿದ್ಧನಾದ ನಿಜಗುಣ ಶಿವಯೋಗಿಯು, ಸುರಂಗ ಕವಿಯು, ಭಾವ ಚಿಂತಾರತ್ನವನ್ನು ಬರೆದ ಗುಬ್ಬಿಯ ಮಲ್ಲಣಾರ್ಯನು, ಶೂನ್ಯ ಸಂಪಾದನೆಯನ್ನು ರಚಿಸಿದ ಗೂಳೂರು ಸಿದ್ಧವೀರಣ್ಣೊಡೆಯರು ಹೀಗೆ ಅನೇಕ ಗ್ರಂಥಕಾರರೂ ಶಿವಾನುಭವಿಗಳೂ ಉದಯಿಸಿ ವೀರಶೈವ ಸಂಸ್ಕೃತಿಯನ್ನು ಈ ಕಾಲದಲ್ಲಿ ಹೆಚ್ಚಿಸಿದರು.

---

## ೧೧ನೇ ಪ್ರಕರಣ.

## ಮುಸಲ್ಮಾನ ಬಾದಶಹರ ಆಳಿಕೆಯಲ್ಲಿ ವೀರಶೈವರು.

೧೪ನೇ ಶತಮಾನವು ಕರ್ನಾಟಕದ ಅವನತಿಯ ಕಾಲವೆಂದು ನಾವು ಹಿಂದೆ ೫ನೆಯ ಪ್ರಕರಣದಲ್ಲಿ ವಿವರಿಸಿದ್ದೇವೆ. ಈ ಕಾಲದಲ್ಲಿ ಮುಸಲ್ಮಾನರ ದಾಳಿಗಳ ಮೂಲಕ ಕರ್ನಾಟಕದ ರಾಜ್ಯಗಳು ಮುಳುಗಿ ಹೋದವು. ಹಾಗೆಯೇ ವಾಙ್ಮಯ ಚಟುವಟಿಕೆಗಳೂ ಕೂಡ ಪೂರ್ಣವಾಗಿ ನಿಂತುಹೋದವು. ಈ ಶತಮಾನದ ಮಧ್ಯಭಾಗದಲ್ಲಿ ಬಾಮನಿ ರಾಜ್ಯವು ಕಲಬುರ್ಗಿಯಲ್ಲಿ ಸ್ಥಾಪಿತವಾಯಿತು. ಮತ್ತು ಅದು ಸುಮಾರು ೧೫೦ ವರ್ಷಗಳ ವರೆಗೆ ಬಾಳಿತು. ಅದರ ಆರಂಭದ ಅರಸರು ಧರ್ಮಾಂಧರಾಗಿ ವರ್ತಿಸಿದರೆಂಬುದು ವಿಜಯನಗರದ ಅರಸರೊಡನೆ ಅವರು

ನಡೆಸಿದ ಕಾಳಗಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ. ಒಬ್ಬ ಬಾದಶಹನು 'ವಲ್ಲೀ' ಎಂಬ ಬಿರುದನ್ನು ಸಂಪಾದಿಸಲು ಲಕ್ಷಾವಧಿ ಹಿಂದುಗಳ ಸಂಹಾರ ವನ್ನು ಈ ಕಾಲದಲ್ಲಿ ಮಾಡಿದ್ದು ಇತಿಹಾಸದಿಂದ ತಿಳಿದುಬರುತ್ತದೆ. ೧೫ನೇ ಶತಮಾನದ ಮಧ್ಯಭಾಗದಲ್ಲಿ ಈ ಬಾಮನಿ ರಾಜ್ಯದಲ್ಲಿ ೫ ವಿಭಾಗಗಳಾ ದವು. ಅವುಗಳಲ್ಲಿ ಒಂದು ವಿಭಾಗವು ವಿಜಾಪುರ ಪಟ್ಟಣದಲ್ಲಿ ಸ್ಥಾಪಿತವಾ ಯಿತು. ಅಲ್ಲಿ ಆಳಿದ ಅರಸರು 'ಅದಿಲ್‌ಶಾಹಿ ಬಾದಶಹರು' ಎಂಬ ಹೆಸರುಳ್ಳವರಾಗಿ, ಸುಮಾರು ೨೦೦ ವರ್ಷ ಅಂದರೆ ೧೬೮೬ ರ ವರೆಗೆ ರಾಜ್ಯವಾಳಿದರು.

ಈ ಮುಸಲ್ಮಾನ ಬಾದಶಹರಿಂದ ಹಿಂದೂ ಸಂಸ್ಕೃತಿಗೆ ಯಾವ ತರಹದಿಂದಲೂ ಪ್ರೋತ್ಸಾಹ ದೊರಿಯಲಿಲ್ಲ. ಇಷ್ಟೇ ಅಲ್ಲ, ಈ ಕಾಲ ದಲ್ಲಿ ಹಿಂದೂ ಸಂಸ್ಕೃತಿಯನ್ನು ಅಳಿದು ಬಿಡುವ ಕಾರ್ಯಗಳು ಸಹ ಬಹಿ ರಂಗವಾಗಿ ನಡೆದಿದ್ದವೆಂಬುದು ವಿಜಾಪುರ ಪಟ್ಟಣದಲ್ಲಿ ಈಗಲೂ ತೋರಿ ಬರುವ ಅವಶೇಷಗಳಿಂದ ವ್ಯಕ್ತವಾಗುತ್ತದೆ. ಅದರ ಅರಕಿಲ್ಲೆಯಲ್ಲಿ ಕೆಲವು ಮಸೀದೆಗಳಿವೆ. ಅವುಗಳನ್ನು ಕಟ್ಟುವಲ್ಲಿ ಹಿಂದೂ ದೇವಾಲ ಯಗಳ ಕಂಭಗಳನ್ನು ಉಪಯೋಗಿಸಿದ್ದು ಕಂಡು ಬರುತ್ತದೆ. ಈ ಕಂಭಗಳಮೇಲೆ ಸುಂದರವಾದ ಚಿತ್ರಗಳೂ ಪುರಾತನ ಶಾಸನಗಳೂ ಇವೆ. ಈ ಶಾಸನಗಳಲ್ಲಿ ದೇವಗಿರಿ ಯಾದವ ರಾಜರು ಇಲ್ಲಿಯ ನರಸಿಂಹ ದೇವಸ್ಥಾನಕ್ಕೆ ಉಂಬಳಿಹಾಕಿ ಕೊಟ್ಟಿದ್ದರ ಉಲ್ಲೇಖಗಳಿವೆ. ಆದರೆ ಆ ನರಸಿಂಹ ದೇವಾಲಯವು ಈಗ ಪಟ್ಟಣದಲ್ಲಿರುವದಿಲ್ಲ. ಅದು ಪಟ್ಟಣ ದಿಂದ ಮೂರುಮೈಲು ದೂರವಿರುವ ತೊರವಿಗ್ರಾಮಕ್ಕೆ ಮುಸಲ್ಮಾನರ ಅಂಜಿಕೆಗೋಸ್ಕರ ಸ್ಥಾನಾಂತರ ಹೊಂದಿದಂತೆ ತೋರುತ್ತದೆ. ಕಂದ ಕದ ಒಂದು ಭಾಗದಲ್ಲಿ ಈಗ ನರಸಿಂಹ ದೇವಾಲಯುವೆಂದು ಕರೆ ಯಲ್ಪಡುವ ಒಂದು ಚಿಕ್ಕ ಕಟ್ಟಡವಿದೆ. ಅದರ ಮೇಲಿಂದ ಮುಸಲ್ಮಾನ ಬಾದಶಹರು ಎಲ್ಲ ಧರ್ಮದವರಲ್ಲಿ ಸಮಭಾವವುಳ್ಳವರಾಗಿದ್ದರೆಂದು ಅನೇ ಕರ ತಿಳಿವಳಿಕೆ ಇದೆ. ಆದರೆ ಈ ಗುಡಿಯು ನರಸಿಂಹ ದೇವರದಿರದೆ, 'ಹಿರೇ ಒಡೆಯರ' ಎಂಬ ಹೆಸರಿನ ಒಂದು ದೈವತದ್ದಾಗಿರುತ್ತದೆ. ೧

(೧) ವಿಜಾಪುರ ಜಿಲ್ಲಾ ಸೊನ್ನದ ದೇಸಾಯರಿಂದ ಇದಕ್ಕೆ ನೇಮಣೂಕು ಇದ್ದು ಅವರ ಕಾಗದ ಪತ್ರಗಳಲ್ಲಿ ಈ ದೇವತೆಯ ಹೆಸರು 'ಹಿರೋಡ್ಯಾ' ಎಂದಿದೆ. ಇದು ಕುರುಬರ ದೇವತೆಯಾಗಿರಬಹುದೆಂದು ತೋರುತ್ತದೆ.

## (೩) ಗದ್ಯ ಗ್ರಂಥಗಳು.

| | | | | |
|---|---|---|---|---|
| ೨೭ | ಶಿವಾನುಭವ ಸೂತ್ರಸಾರ | ೧ | ೦ | ೦ |
| ೨೮ | ಲಿಂಗಪೂಜೆಯ ತತ್ವಗಳು | ೧ | ೪ | ೦ |
| ೨೯ | ನಿರಂಜನ ವಂಶರತ್ನಾಕರ | ೦ | ೧೨ | ೦ |
| ೩೦ | ಕಾಲಜ್ಞಾನದ ವಚನಗಳು | ೦ | ೧೩ | ೦ |
| ೩೧ | ಬಸವೇಶ್ವರ ಷಟ್‌ಸ್ಥಲ ವಚನಹ ಕಥಾಸಾರ | ೧ | ೨ | ೦ |
| ೩೨ | ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆ | ೦ | ೭ | ೬ |
| ೩೩ | ಕೃಷಿಜ್ಞಾನ ಪ್ರದೀಪಿಕೆ | ೨ | ೮ | ೦ |

## (೪) ರಗಳೆಗಳು.

| | | | | |
|---|---|---|---|---|
| ೩೪ | ಹರಿಹರನ ರಗಳೆಗಳು ಭಾಗ ೧ | ೦ | ೧೪ | ೦ |
| ೩೫ | ಹರಿಹರನ ರಗಳೆಗಳು ಭಾಗ ೨ | ೦ | ೭ | ೦ |
| ೩೬ | ಹರಿಹರನ ರಗಳೆಗಳು ಭಾಗ ೩ | ೦ | ೧೦ | ೦ |
| ೩೭ | ಹರಿಹರನ ರಗಳೆಗಳು ಭಾಗ ೪ | ೦ | ೧೩ | ೦ |
| ೩೮ | ಹರಿಹರನ ರಗಳೆಗಳು ಭಾಗ ೫ | ೦ | ೧೩ | ೦ |
| ೩೯ | ಹರಿಹರನ ರಗಳೆಗಳು ಭಾಗ ೬ | ೦ | ೧೪ | ೦ |
| ೪೦ | ಹರಿಹರನ ರಗಳೆಗಳು ಭಾಗ ೭ | ೧ | ೦ | ೦ |
| ೪೧ | ತೋಂಟದಾರ್ಯರ ರಗಳೆ | ೦ | ೨ | ೦ |
| ೪೨ | ವೀರಶೈವ ರಗಳೆ | ೦ | ೨ | ೬ |

## (೫) ಕಾವ್ಯಗ್ರಂಥಗಳು.

| | | | | |
|---|---|---|---|---|
| ೪೩ | ವರದಾನಿ ಗುಡ್ಡವ್ವೆಯ ಚರಿತ್ರೆ | ೦ | ೩ | ೦ |
| ೪೪ | ರಾಘವಾಂಕ ಕವಿಕೃತ ಆದಿಶೆಟ್ಟಿ ಪುರಾಣ | ೧ | ೮ | ೦ |
| ೪೫ | ಬೀಳಗಿ ಅರಸುಗಳ ವಂಶಾವಳಿ | ೦ | ೧೩ | ೦ |

## (೬) ಸ್ತೋತ್ರಗಳು ಮತ್ತು ಪದ್ಯಗಳು.

| | | | | |
|---|---|---|---|---|
| ೪೬ | ಶಿವಾನುಭವದರ್ಪಣ- ಮೈಲಾರ ಬಸಪ್ಪನವರು | ೦ | ೧೨ | ೦ |
| ೪೭ | ಸಿದ್ಧಲಿಂಗೇಶ್ವರ ಏಕೋತ್ತರ ಶತಸ್ಥಲ | ೧ | ೮ | ೦ |
| ೪೮ | ಸೋಮೇಶೆಟ್ಟಿ ಕಂವೃಷಭೇಂದ್ರ ಕೈವಲ್ಯ ಪದ್ಯಗಳು | ೦ | ೬ | ೦ |
| ೪೯ | ಮಹಿಮ್ನಸ್ತೋತ್ರ (ಶ್ರೀಶಂಭುಲಿಂಗ ಶಿವಾಚಾರ್ಯರು) | ೦ | ೬ | ೦ |
| ೫೦ | ಬಸವ ಮಹಿಮೆ (ಲಾವಣಿ ಪದವು) | ೦ | ೩ | ೦ |
| ೫೧ | ಹರಳಯ್ಯನ ತ್ರಿಪದಿ (ಸುಂದರವಾದ ಮುನ್ನುಡಿ) | ೦ | ೪ | ೦ |
| ೫೨ | ಶರಣಸಾಹಿತ್ಯ (ಸಾಧುಪುರುಷರ ಪದಗಳು) | ೦ | ೮ | ೦ |

## ಮುಂಬಯಿ ಸರಕಾರದವರು

## ಪಾಸ ಮಾಡಿದ "ಲೋಣಿ" ಇವರ ಗ್ಯಾಸ ಪ್ಲಾಂಟಗಳನ್ನೇ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯ ಖರ್ಚು ಬಹಳೇ ಕಡಿಮೆ ಇದ್ದು [illegible] ಸ್ಟಾರ್ಟವಾಗಿ ಭರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳ ಸುಲಭ. ವಾಹನಗಳಿಗೆ ಬಿಲಕೂಲ ಅಪಾಯವಿಲ್ಲ. ದೃಷ್ಟಿಗೆ ಶುಭಕ. ಇದಲ್ಲದೆ ಟ್ರ್ಯಾಯಿರಿಂಗ ಕಾರ್ಸ ಮತ್ತು ಆಯಿಲ್ ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟಿವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

**ದಿ ಲೋಣಿ ಇಂಜನಿಯರಿಂಗ ವರ್ಕ್ಸ ಸೋ[illegible]ಪೂರ.**



**BOOK-POST.**

R. N. B. 2554

ಶ್ರೀ. ರಾ|| ರಾ||

ಚನ್ನಮಲ್ಲಪ್ಪ ಸಿದ್ದಪ್ಪ ಬಡೇಮಿ
ಪೋ. ಬನಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್

Shri [illegible] va
Office
[illegible]pur

ಈ ಪತ್ರಿಕೆ[illegible] ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಜುಲೈ ೧೯೪೩. [ಸಂಚಿಕೆ ೧೦

## ವಿಷಯಾನುಕ್ರಮಣಿಕೆ.



| ವಿಷಯಗಳು. | ಲೇಖಕರು. | ಪುಟ |
|---|---|---|
| ೧ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೩೩೯ |
| ೨ ಸುಳ್ಳಾಡಬಾರದು | ಶ್ರೀ. ಶಿವಮೂರ್ತಿ | ೩೫೧ |
| ೩ ರಾ। ಬ। ಪಿ. ಜಿ. ಹಳಕಟ್ಟಿ ವಿಜಾಪುರ ಇವರ ೬೪ನೇ ವರ್ಷದ ವರ್ಧಂತ್ಯುತ್ಸವ | —— | ೩೫೮ |
| ೪ ವೀರಶೈವ ರಾಜಮನೆತನಗಳ ಚರಿತ್ರೆ | —— | ೬೯—೭೬ |



---

## ಶಿವಾನುಭವ ಪತ್ರಿಕೆಗೆ ಸಹಾಯ.

ಕೆಳಗೆ ಕಾಣಿಸಿದ ಮಹನೀಯರು ಶಿವಾನುಭವ ಪತ್ರಿಕೆಗೆ ಸಹಾಯ ಧನವನ್ನು ನಮಗೆ ಕಳಿಸಿದ್ದು ಅದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ವಿಜಾಪುರ
೧೧-೭-೪೩

ಪಿ. ಜಿ. ಹಳಕಟ್ಟಿ
ಸಂಪಾದಕ
ಶಿವಾನುಭವ

ಶ್ರೀ ವ್ಹಿ. ಜಿ. ಸಾಲಮನಿ ಬಿ. ಎ. ಎಲೆಲ್. ಬಿ ಧಾರವಾಡ ೧೦೦ ರೂ.
ಶ್ರೀ ನಿಜಗುಣಸ್ವಾಮಿಗಳು ಗುರುವಿರುಪಾಕ್ಷಸ್ವಾಮಿಗಳು ಕಿರೀಟಮಠ ಸೋಲ್ಲಾಪುರ ೧೧ ರೂ.
ಶ್ರೀ ಜಿ. ವ್ಹಿ. ಡಫಳಾಪುರ ,, ೨೫ ರೂ.
ಶ್ರೀ ಹತನೂರು ಮಾಲಿ ಪಾಟೀಲ ಸಕ್ರೆಪ್ಪ ಗೌಡರು ರಾಯಚೂರ ೧೧ ರೂ.
ಶ್ರೀ ರಾಸ್ತಾಪುರ ಮುನಿಯಪ್ಪ ರಾಯಚೂರ ೧೦ ರೂ.
ಶ್ರೀ ಬಸವಂತರಾವ ಪಾಟೀಲ ,, ೧೦ ರೂ.
ಶ್ರೀ ಹತನೂರ ಸಕ್ರೆಪ್ಪ ,, ೧೦ ರೂ.
ಶ್ರೀ ಗಣದಿನ್ನಿ ತಿಮ್ಮಣ್ಣ ,, ೧೦ ರೂ.
ಶ್ರೀ ಪಲ್ಲಕ್ಕಿ ನಾಗಪ್ಪ ,, ೫ ರೂ.
ಶ್ರೀ ಎನ್. ಶಿದ್ರಾಮಪ್ಪ ವಕೀಲ ,, ೧೦ ರೂ.
ಶ್ರೀ ಶಂಕರೆಪ್ಪ ವಕೀಲ ,, ೫ ರೂ.
ಶ್ರೀ ಜೆ. ರಂಗಣ್ಣ ,, ೫ ರೂ.
ಶ್ರೀ ಎನ್. ಶರಣಪ್ಪ ವಕೀಲ ,, ೬ ರೂ.
ಶ್ರೀ ಶರಣಬಸವೇಶ್ವರ ದೇವಸ್ಥಾನದ ಯಜಮಾನರಾದ ೧೫ ರೂ.
ಶ್ರೀ ದೊಡ್ಡಪ್ಪ ಅಪ್ಪಾಸಾಹೇಬ ಉರ್ಫ ಶರಣಬಸವೇಶ್ವರ ಗುಲಬುರ್ಗಾ
ಶ್ರೀ ಶಿವಮೂರ್ತಿ ಮಹಾಸ್ವಾಮಿಗಳು ಗದ್ದಿಗೆಮಠ ಗುಲ್ಬುರ್ಗಾ ೮ ರೂ.
ಶ್ರೀ ನಾಗಪ್ಪ ಮಹಾಲಿಂಗಪ್ಪ ಚಿಂಚೋಳಿ ,, ೧೧ ರೂ.

# ಶಿವಾನುಭವ

ವರ್ಷ ೧೭ | ಜುಲೈ ೧೯೪೩. | ಸಂಚಿಕೆ ೧೦

## ಬಸವೇಶ್ವರನ ಚರಿತ್ರೆ.

(ರಾ. ಬ ಪಿ. ಜಿ. ಹಳಕಟ್ಟಿ, ಬಿ. ಎ. ಎಲೆಲ್. ಬಿ. ವಿಜಾಪುರ).

ಲೇಖಾಂಕ ೨೨

### (ಬಸವೇಶ್ವರನು ಮಂತ್ರಿಪದವನ್ನು ಹೊಂದಿದ್ದು)

ನಾವು ಹಿಂದಿನ ಲೇಖಗಳಲ್ಲಿ ಬಸವೇಶ್ವರನು ಬಿಜ್ಜಳನ ಆಡಳಿತೆಯಲ್ಲಿ ಕೆಲವೊಂದು ಸಣ್ಣ ಉದ್ಯೋಗವನ್ನು ಆರಂಭದಲ್ಲಿ ಸ್ವೀಕರಿಸಿ ಮುಂದೆ ಅವನು ತನ್ನ ಯೋಗ್ಯತೆಯನ್ನು ತೋರಿಸುತ್ತ ಕಡೆಗೆ ಉಚ್ಚಸ್ಥಾನವನ್ನು ಹೊಂದಿರಬೇಕೆಂದು ಊಹಿಸಿ ಅನೇಕ ಲೇಖಗಳಲ್ಲಿ ಬರೆದಿರುತ್ತೇವೆ. ಆದರೆ ಇದೇ ವಿಷಯವಾಗಿ ಕೆಲವು ಪುರಾಣಾಂತರ್ಗತ ಕಥೆಗಳಿದ್ದು ಅವುಗಳನ್ನು ಕುರಿತು ನಾವು ಈ ಲೇಖದಲ್ಲಿ ಪ್ರಸ್ತಾಪಿಸಲಿಚ್ಛಿಸಿದ್ದೇವೆ. ಈ ಮಹತ್ವದ ವಿಷಯ ವಿವೇಚನೆಯಲ್ಲಿ ಐತಿಹಾಸಿಕ ದೃಷ್ಟಿಯಿಂದ ಸಂಭಾವ್ಯವಾವುದೆಂಬುದನ್ನು ಕುರಿತು ನಿರೂಪಿಸಬೇಕಾಗುತ್ತದೆ. ಕೇವಲ ಶ್ರದ್ಧೆಯ ಮೂಲಕ ಉಂಟಾಗಿರುವ ಕಟ್ಟು ಕಥೆಗಳಿಗೆ ಶಕ್ಯವಿದ್ದಷ್ಟರ ಮಟ್ಟಿಗೆ ಮಹತ್ವದ ಸ್ಥಾನವನ್ನು ಕೊಡದೆ ಅವುಗಳಲ್ಲಿರುವ ಸತ್ಯಾಂಶವನ್ನು ಕಂಡುಹಿಡಿಯಬೇಕಾಗುತ್ತದೆ. ಇದು ಭಾವನಾಪ್ರಿಯ ಜನತೆಗೆ ಅಷ್ಟು ರುಚಿಸಲಿಕ್ಕಿಲ್ಲ. ಅವರು ಇದರಲ್ಲಿ ನಮ್ಮನ್ನು ಆಕ್ಷೇಪಿಸುವ ಸಂಭವವೂ ಉಂಟು. ಆದರೆ ಐತಿಹಾಸಿಕ ಸಂಭವನೀಯ ಸಂಗತಿಗಳಿಗೆ ಯಾವಾಗಲೂ ಹೆಚ್ಚು ಬೆಲೆ ಇದೆ ಎಂಬುದನ್ನು ಅವರು ದಯಮಾಡಿ ತಮ್ಮ ಲಕ್ಷದಲ್ಲಿ ತರಬೇಕೆಂದು ನಮ್ಮ ವಿನಂತಿ ಇದೆ. ಬಸವೇಶ್ವರನು

ಮಂತ್ರಿಪದ ಹೊಂದಿದ್ದರ ವಿಷಯವಾಗಿ ಕೆಳಗೆ ಕಾಣಿಸಿದ ಕಾರಣ ಗಳು ಪುರಾಣಗಳಲ್ಲಿ ಯಾವಾಗಲೂ ಮುಂದೆ ಮಾಡಲ್ಪಡುವದುಂಟು.

(೧) ಬಸವೇಶ್ವರನು ಬಿಜ್ಜಳನ ಆಸ್ಥಾನವನ್ನು ಮೊದಲು ಪ್ರವೇಶ ಮಾಡಲಾಗಿ ಒಂದು ಲಿಖಿತವು ಆಕಾಶದಿಂದ ಅವನ ಸನ್ನಿಧಿಯಲ್ಲಿ ಬಂದು ಬಿದ್ದಿತು. ಆಗ ಅದರಲ್ಲಿಯ ಅಕ್ಷರಗಳನ್ನು ಓದಿ ಅರ್ಥ ಹೇಳುವಲ್ಲಿ ಆ ಸ್ಥಾನದಲ್ಲಿರುವವರಲ್ಲಿ ಆರಿಗೂ ಬಾರದೆ ಹೋಗಲು ಕಡೆಗೆ ಬಸವೇಶ್ವರ ನೊಬ್ಬನೇ ಅದನ್ನು ಓದಲು ಸಮರ್ಥನಾದನು. ಮತ್ತು ಅದರಲ್ಲಿ ಲಿಖಿ ಸಿದಂತೆ ಸಿಂಹಾಸನದ ಕೆಳಗೆ ಒಂದು ದೊಡ್ಡ ನಿಧಿಯು ಬಿಜ್ಜಳನಿಗೆ ಹಸ್ತಗತವಾಯಿತು. ಹೀಗೆ ಬಿಜ್ಜಳನು ಬಸವೇಶ್ವರನ ವಿದ್ವತ್ತಿಗೆ ಮೆಚ್ಚಿ ದವನಾಗಿ ಮತ್ತು ಹೇರಳ ಹಣವನ್ನು ಸಂಪಾದಿಸಿದವನಾಗಿ ಬಸವೇ ಶ್ವರನಿಗೆ ಮಂತ್ರಿಪದವನ್ನಿತ್ತನು.

(೨) ಬಿಜ್ಜಳನಿಗೆ ಬಲದೇವನೆಂಬ ಮಂತ್ರಿಯು ಇದ್ದು ಈ ಮಂತ್ರಿಯು ತನ್ನ ಮಗಳಾದ ಗಂಗಾದೇವಿಯನ್ನು ಬಸವೇಶ್ವರನಿಗೆ ಕೊಟ್ಟು ಲಗ್ನ ಮಾಡಿದನು. ಬಲದೇವ ಮಂತ್ರಿಯು ತೀರಿಕೊಳ್ಳಲು ಯೋಗ್ಯರಾದ ಮಂತ್ರಿಗಳಾರೂ ದೊರೆಯದಿರಲು ತೆರವಾದ ಅವನ ಸ್ಥಾನದಲ್ಲಿ ಬಿಜ್ಜ ಳನು ಅವನ ಅಳಿಯನಾದ ಬಸವೇಶ್ವರನನ್ನೇ ನೇಮಿಸಿಕೊಂಡನು.

(೩) ಬಿಜ್ಜಳನಿಗೆ ಸಿದ್ಧದಂಡಾಧಿಪನೆಂಬವನು ಮಂತ್ರಿಯಾಗಿದ್ದು ಬಸವೇಶ್ವರನು ಅವನ ಸಹಾಯದಿಂದ ಬಿಜ್ಜಳನಲ್ಲಿ ಒಂದು ನೌಕರಿಯನ್ನು ಸಂಪಾದಿಸಿದವನಾದನು. ಮುಂದೆ ಸಿದ್ಧಣ್ಣ ಮಂತ್ರಿಯು ಮಕ್ಕಳಿ ಲ್ಲದೆ ತೀರಿಕೊಳ್ಳಲು ಬಸವೇಶ್ವರನು ಅವನ ಗೋತ್ರದವನಾದ್ದರಿಂದ ಅವನ ಧನವೆಲ್ಲವು ಅವನ ವಶಕ್ಕೆ ಬಂದಿತು. ಮುಂದೆ ಸಿದ್ಧಣ್ಣ ದಂಡೇ ಶನು ಗತಿಸಲು ಬಿಜ್ಜಳನು ಆತನ ಮಂತ್ರಿಯ ಅಧಿಕಾರವನ್ನೆಲ್ಲ ಬಸ ವೇಶ್ವರನ ವಶಕ್ಕೆ ಒಪ್ಪಿಸಿದನು. ಹೀಗೆ ಅಧಿಕಾರ ಹೊಂದಿದ ಬಳಿಕ ಬಸವನು ಗಂಗಾದೇವಿ ಮಾಯಿದೇವಿ ಎಂಬಿಬ್ಬರನ್ನು ಲಗ್ನವಾದನು. ಇದ್ದು ಹರಿಹರ ಕವಿಯ ಹೇಳಿಕೆಯು.

(೪) ಜೈನರು ಬರೆದ ಪುರಾಣಗಳಲ್ಲಿ ಬೇರೊಂದು ಕಥೆ ಇದೆ. ಅವುಗಳ ಮೇರೆಗೆ ಬಿಜ್ಜಳನು ಬಸವೇಶ್ವರನ ತಂಗಿಯಾದ ಪದ್ಮಾವತಿ ಯನ್ನು ಮೋಹಿಸಿ ಅವಳನ್ನು ಲಗ್ನ ಮಾಡಿಕೊಂಡನು. ಅವನು ಆಕೆ

ಯಲ್ಲಿ ಆಸಕ್ತನಾಗಿ ತನ್ನ ರಾಜ್ಯ ಭಾರವನ್ನೆಲ್ಲ ಬಸವೇಶ್ವರನಿಗೆ ಒಪ್ಪಿಸಿ ತಾನು ವ್ಯರ್ಥವಾಗಿ ಕಾಲ ಕಳೆಯಲಿಕ್ಕೆ ಹತ್ತಿದನು.

ಈ ಕಥೆಗಳಲ್ಲಿ ಯಾವದೂ ಐತಿಹಾಸಿಕ ಸಂಗತಿಗಳಿಗೆ ಮೇಳಗೂಡುವದಿಲ್ಲೆಂದು ನಮಗೆ ತೋರುತ್ತದೆ.

## ಪದ್ಮಾವತಿಯು ಕಾಲ್ಪನಿಕ ಸ್ತ್ರೀಯಳು.

ಜೈನರು ಉಲ್ಲೇಖಿಸಿರುವ ಪದ್ಮಾವತಿಯು ಕೇವಲ ಕಾಲ್ಪನಿಕ ಸ್ತ್ರೀಯಳೆಂದೂ ಬಸವೇಶ್ವರನು ಇನ್ನೂ ಮೊಲೆಗೂಸು ಇದ್ದಾಗಳೇ ಅವನ ತಂದೆ ತಾಯಿಗಳು ತೀರಿಕೊಂಡದ್ದರಿಂದ ಅವನೇ ಎಲ್ಲರಿಗೂ ಚಿಕ್ಕವನಾಗಿದ್ದನೆಂತಲೂ ಆದ್ದರಿಂದ ಅವನಿಗೆ ಇನ್ನೊಬ್ಬ ತಂಗಿ ಹುಟ್ಟುವ ಸಂಭವವಿಲ್ಲೆಂತಲೂ, ಒಂದು ವೇಳೆ ಇಂಥವಳು ಹುಟ್ಟಿದ್ದರೆ ಬಸವೇಶ್ವರನು ಮಂಗಳವಾಡಕ್ಕೆ ಹೋಗುವ ಪೂರ್ವದಲ್ಲಿಯೇ ಅವಳು ಲಗ್ನವಾಗುವಷ್ಟು ದೊಡ್ಡವಳಾಗುತ್ತಿದ್ದಳೆಂತಲೂ ಈ ಮೊದಲಾದ ಸಂಗತಿಗಳನ್ನು ನಾವು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ (೧೬-೧೧-೫೬೫) ಒಂದು ವಿಸ್ತೃತ ಲೇಖವನ್ನು ಬರೆದಿದ್ದೇವೆ. ಅದನ್ನು ವಾಚಕರು ಓದಿ ನೋಡಬೇಕು. ಬಸವೇಶ್ವರನಿಗೆ ಅಪಮಾನ ಮಾಡಬೇಕೆಂಬ ಉದಿಶ್ಯವಾಗಿ ಅವನ ಇದಿರಾಳಿಗಳು ಬುದ್ಧಿಪೂರ್ವಕವಾಗಿ ಹುಟ್ಟಿಸಿದ ಕಟ್ಟು ಕಥೆಯು ಇದಾಗಿದೆಂದು ನಮಗೆ ತೋರುತ್ತದೆ. ಇಲ್ಲಿ ಹೇಳಿದ ಸಂಗತಿಗಳು ನಂಬಲರ್ಹವಾದುವಲ್ಲೆಂದು ನಮಗೆ ತೋರುತ್ತಿದೆ.

## ಬಸವೇಶ್ವರನು ಶಿವಲಿಖಿತವನ್ನೋದಿದ್ದು.

ಆಕಾಶದಿಂದ ಒಂದು ಲಿಖಿತವು ಒಡ್ಡೋಲಗದಲ್ಲಿ ಬೀಳಲು ಅದನ್ನು ಬಸವೇಶ್ವರನು ಓದಿ ನೋಡಲು ಅವನಿಗೆ ಮಂತ್ರಿ ಪದವು ದೊರೆಯಿತೆಂದು ವೀರಶೈವರಲ್ಲಿ ಕಥೆಯೊಂದಿದೆ. ಬಸವೇಶ್ವರನ ಪ್ರತಿಯೊಂದು ಚರಿತ್ರೆಯಲ್ಲಿ ಮತ್ತು ಪುರಾಣದಲ್ಲಿ ಈ ಕಥೆಯು ಬಹು ವಿಸ್ತೃತವಾಗಿ ನಿರೂಪಿಸಲ್ಪಟ್ಟಿರುತ್ತದೆ. ಈ ಕಥೆಯು ಇಲ್ಲದ ಅವನ ಚರಿತ್ರೆಯೇ ಇಲ್ಲವೆಂದು ನಾವು ಹೇಳಬಹುದು. ಭೀಮ ಕವಿಯ ಬಸವ ಪುರಾಣದಲ್ಲಿ ಈ ಕಥೆಯಿದ್ದು ಅವನ ತರುವಾಯ ೬೦೦ ವರ್ಷಗಳ ವರೆಗೆ ಪ್ರಕಟವಾದ ಅಥವಾ ರಚಿಸಲ್ಪಟ್ಟ ಪ್ರತಿಯೊಂದು ಪುರಾಣದಲ್ಲಿ ಮತ್ತು ಬಸವೇಶ್ವರನ ಎಲ್ಲ ಚರಿತ್ರೆಗಳಲ್ಲಿ ಈ ವಿವರಣೆಯು ಯಾವಾ

ಗಲೂ ಇದ್ದೇ ಇರುತ್ತದೆ. ಇದು ಅತ್ಯಂತ ಪ್ರಚಲಿತವಾದ ಬಸವೇಶ್ವರನ ಮುಖ್ಯ ಕಥಾಭಾಗವಾಗಿದೇದು ನಾವು ಹೇಳದಿರಲಾರೆವು. ಆದರೆ ಇದರಲ್ಲಿಯ ಪವಾಡದ ಶಕ್ಯಾಶಕ್ಯತೆಯ ವಿಷಯವಾಗಿ ನಾವು ಎಷ್ಟು ಮಾತ್ರವೂ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವದಿಲ್ಲ. ಆದರೆ ಈ ಕಥೆಯು ಹರಿಹರನ ರಗಳೆಯಲ್ಲಿ ಏಕೆ ಬಂದಿಲ್ಲೆಂಬುದು ಮಾತ್ರ ವಿಚಾರ ಮಾಡತಕ್ಕ ಸಂಗತಿಯಾಗಿದೆಂದು ನಾವು ಹೇಳಬಯಸುತ್ತೇವೆ. ಇದು ಒಂದು ವೇಳೆ ಅಪ್ರಸಿದ್ಧ ಕಥೆಯಾಗಿದ್ದು ಅದನ್ನು ಅವನು ಒಂದು ವೇಳೆ ಉಲ್ಲೇಖಿಸದೆ ಹೋಗಿದ್ದರೆ, ಅದರ ಮೇಲೆ ನಾವು ಯಾವ ತರದ ಊಹೆಯನ್ನು ಕಟ್ಟಲು ಆಸ್ಪದವಿರುತ್ತಿದ್ದಿಲ್ಲ. ಆದರೆ ಈ ಸಂಗತಿಯು ಬಸವೇಶ್ವರನ ಆಯುಷ್ಯದಲ್ಲಿ ಘಟಿಸಿದ ಒಂದು ಮಹತ್ವದ ಸಂಗತಿಯು. ಇಂಥ ಸಂಗತಿಯನ್ನು ವಿವರಿಸುವದನ್ನು ಹರಿಹರ ಕವಿಯು ಬಿಟ್ಟು ಕೊಟ್ಟಿದ್ದಾನೆ. ಇದರಿಂದ ಅವನ ಕಾಲದಲ್ಲಿ ಈ ಕಥೆಯು ಜನತೆಯಲ್ಲಿ ಇದ್ದಿಲ್ಲವೆಂತಲೇ ನಾವು ಅನುಮಾನ ಮಾಡುತ್ತೇವೆ. ಈ ಸಂಗತಿಯ ಮೂಲಕ ಈ ಕಥೆಯು ಅಷ್ಟು ವಿಶ್ವಸನೀಯವಾದುದಲ್ಲೆಂದು ನಮಗೆ ತೋರುತ್ತದೆ. ಪುರಾಣಿಕರು ಹಿಂದುಗಡೆ ಹುಟ್ಟಿಸಿದ ಕಥೆಯು ಇದಾಗಿರಬಹುದು. ಆದುದರಿಂದ ಲಿಪಿಯನ್ನು ಓದಿದ್ದಕ್ಕಾಗಿ ಬಿಜ್ಜಳನು ಬಸವೇಶ್ವರನಿಗೆ ಮಂತ್ರಿಪದ ಕೊಟ್ಟನೆಂಬುದನ್ನು ನಾವು ನಂಬಲಾರೆವು.

ಲಿಪಿಗಳು ಇದ್ದ ಸ್ಥಾನಗಳಲ್ಲಿ ದ್ರವ್ಯವು ದೊರೆಯುತ್ತದೆಂಬ ತಿಳುವಳಿಕೆಯು ಎಲ್ಲ ಕಡೆಗೆ ಈಗಲೂ ಇರುತ್ತದೆ. ಆದ್ದರಿಂದ ಅವು ಇದ್ದ ಕಂಭಗಳನ್ನೂ ದೇವಾಲಯಗಳಲ್ಲಿರುವ ಮೂರ್ತಿಗಳನ್ನೂ ಅಜ್ಞಾನಿಗಳು ಭಂಗ ಮಾಡಿದ್ದನ್ನು ನಾವು ಯಾವಾಗಲೂ ನೋಡುತ್ತೇವೆ. ಇದೇ ತರದ ತಿಳುವಳಿಕೆಯು ಬಸವೇಶ್ವರನು ಲಿಪಿಯನ್ನು ಓದಿ ಅದರ ಮೂಲಕ ಅವನು ದ್ರವ್ಯವನ್ನು ಬಿಜ್ಜಳನಿಗೆ ದೊರಕಿಸಿಕೊಟ್ಟನೆಂಬುದರಲ್ಲಿ ಧ್ವನಿತವಾಗುತ್ತದೆ.

### ಮಾಮಂದಿರ ಸ್ಥಾನದಲ್ಲಿ ಬಸವೇಶ್ವರನಿಗೆ ಮಂತ್ರಿಪದ ದೊರಕಿದ್ದು

ಬಲದೇವನು ಅಥವಾ ಸಿದ್ದಣ್ಣೊಡೆಯರು ತೀರಿಕೊಂಡ ಬಳಿಕ ಮಂತ್ರಿಯ ಸ್ಥಳವು ಬಸವೇಶ್ವರನಿಗೆ ದೊರಕಿತೆಂದು ಅನೇಕ ಪುರಾಣ

ಗಳಲ್ಲಿ ಹೇಳಲ್ಪಟ್ಟಿರುತ್ತದೆ. ಮಂತ್ರಿಯು ಸತ್ತ ಬಳಿಕ ಅವನ ಮಕ್ಕಳಿಗೆ ಅವರ ಸ್ಥಾನವನ್ನು ಕೊಟ್ಟಿದ್ದು ಅರಸರ ಇತಿಹಾಸದಲ್ಲಿ ಕ್ವಚಿತ್ತಾಗಿ ತೋರಿಬರುವದುಂಟು. ಆದರೆ ಅವರ ಅಳಿಯಂದಿರಗೆ ದೊರೆತದ್ದು ಮಾತ್ರ ನಮಗೆ ಎಲ್ಲಿಯೂ ತೋರಿಬಂದಿಲ್ಲ. ಆದ್ದರಿಂದ ಬಸವೇಶ್ವರನಿಗೆ ಮಂತ್ರಿಯಸ್ಥಾನವು ದೊರೆತದ್ದಕ್ಕೆ ಈ ಸಂಗತಿಯು ಮಹತ್ವದ ಕಾರಣವಲ್ಲೆಂದು ನಮಗೆ ತೋರುತ್ತದೆ.

ಬಲದೇವ ಮಂತ್ರಿ ಅಥವಾ ಸಿದ್ದಣ್ಣಮಂತ್ರಿ ಇವರು ತೀರಿಕೊಂಡ ಬಳಿಕ ಬಿಜ್ಜಳನಿಗೆ ಸಮರ್ಥರಾದ ಮಂತ್ರಿಗಳು ದೊರೆಯದೆ ಹೋದದ್ದರಿಂದ ಅವನು ಶೋಧ ಮಾಡುತ್ತಿರುವಲ್ಲಿ ಬಸವೇಶ್ವರನೇ ದೊರೆತನೆಂದು ಈ ಎಲ್ಲ ಕಥೆಗಳಲ್ಲಿ ಬಹುಶಃ ಹೇಳಲ್ಪಟ್ಟಿರುತ್ತದೆ. ಆದರೆ ಬಿಜ್ಜಳನ ಕಾಲದ ಕರ್ನಾಟಕದ ಇತಿಹಾಸವನ್ನು ಅರಿಯದೇ ಇದ್ದದ್ದೇ ಈ ತಿಳುವಳಿಕೆಗೆ ಕಾರಣವೆಂದು ನಮಗೆ ತೋರುತ್ತದೆ. ಅವನ ಕಾಲದಲ್ಲಿ ಅತ್ಯಂತ ಪ್ರಖ್ಯಾತರಾದ ದಂಡಾಧಿಪತಿಗಳೂ ವಿದ್ವಾಂಸರೂ ಧರ್ಮನಿಷ್ಠರೂ ಅವನ ಕೈಕೆಳಗೆ ಕೆಲಸ ಮಾಡುತ್ತಿದ್ದರು. ಕೇಶಿರಾಜನು ಮತ್ತು ಬರ್ಮ ದಂಡಾಧಿಪತಿಯು ಅತ್ಯಂತ ಸಮರ್ಥರಾದ ಮತ್ತು ಶೂರರಾದ ಸೇನಾಪತಿಗಳು, ಮತ್ತು ಧರ್ಮನಿಷ್ಠರು. ೧೧೪೪ ರಲ್ಲಿ ಆಳುತ್ತಿದ್ದ ಸಿಂದವಂಶದ ಮೊದಲನೇ ಪೆರ್ಮಾಡಿಯು ಬಹು ಶೂರಪುರುಷನು. ಅವನು ಗೋವೆಯ ಕದಂಬರನ್ನೂ ಹೊಯಸಳರಾಜನನ್ನೂ ಸಹ ಸೋಲಿಸಿದ್ದಾನೆ. ಅವನ ತಮ್ಮನಾದ ಚಾವುಂಡನಿಗೆ ಬಿಜ್ಜಳನು ತನ್ನ ಮಗಳಾದ ಸಿರಿಯದೇವಿಯನ್ನು ಲಗ್ನ ಮಾಡಿಕೊಟ್ಟಿದ್ದಾನೆ. ಇಂಥ ಪ್ರಮುಖ ಮಂಡಳಾಧೀಶ್ವರರಲ್ಲಿ ಒಬ್ಬನನ್ನಾದರೂ ಬಿಜ್ಜಳನು ತನ್ನ ಮಂತ್ರಿಯನ್ನಾಗಿ ನೇಮಿಸಿಕೊಳ್ಳಬಹುದಾಗಿತ್ತು. ಆದ್ದರಿಂದ ಬಲದೇವ ಮಂತ್ರಿ ಅಥವಾ ಸಿದ್ಧಣ್ಣೊಡೆಯರು ಇವರು ತೀರಿಕೊಂಡ ಬಳಿಕ ಸಮರ್ಥರಾದವರು ತನ್ನ ರಾಜ್ಯದಲ್ಲಿ ಇರದ್ದರಿಂದ ಬಿಜ್ಜಳನು ಬಸವೇಶ್ವರನನ್ನು ಹುಡುಕಿಕೊಂಡು ಅವನಿಗೆ ಪ್ರಧಾನಿ ಪಟ್ಟವನ್ನು ಕಟ್ಟಿದನೆಂದು ತಿಳಿಯುವದು ಇತಿಹಾಸಕ್ಕೆ ಮತ್ತು ಆಗಿನ ವಸ್ತುಸ್ಥಿತಿಗೆ ಸಮಗೂಡುವದಿಲ್ಲ.

ಹರಿಹರನು ತನ್ನ ರಗಳೆಯಲ್ಲಿ ಮಂತ್ರಿಯಾದ ಬಲದೇವನನ್ನು ಉಲ್ಲೇಖಿಸುವದಿಲ್ಲ. ಆದರೆ ಸಿದ್ದಣ್ಣಮಂತ್ರಿಯನ್ನು ಮಾತ್ರ ಅವನು ಉಲ್ಲೇಖಿಸಿ

ಈತನು ತೀರಿಕೊಂಡ ಬಳಿಕ ಬಸವನಿಗೆ ಪ್ರಧಾನಿಪಟ್ಟವಾಯಿತೆಂದು ಹೇಳುತ್ತಾನೆ. ಬೇರೆ ಕೆಲವು ವೀರಶೈವ ಪುರಾಣಗಳಲ್ಲಿ ಸಿದ್ಧಣ್ಣೊಡೆಯರನನ್ನು ಮಂತ್ರಿ ಎಂದು ಉಲ್ಲೇಖಿಸದೆ, ಬಲದೇವ ಮಂತ್ರಿಯನ್ನು ಉಲ್ಲೇಖಿಸಿದ್ದು ಕಂಡುಬರುತ್ತದೆ. ಆದರೆ ನೀಲಾಂಬಿಕೆಗೆ ಲಗ್ನವಾಗುವ ಸಂದರ್ಭದಲ್ಲಿ ಮಾತ್ರ ಸಿದ್ದಣ್ಣ ಮಂತ್ರಿಯ ಉಲ್ಲೇಖಗಳು ಬೇರೆ ಕೆಲವು ಪುರಾಣಗಳಲ್ಲಿ ಬರುತ್ತವೆ. ಹೀಗೆ ಬಸವೇಶ್ವರನಿಗೆ ಮಂತ್ರಿಪದವು ದೊರೆತ ವಿಷಯದಲ್ಲಿ ಪುರಾಣಗಳಲ್ಲಿ ಏಕವಾಕ್ಯತೆಯು ಇರುವದಿಲ್ಲ.

## ಬಸವೇಶ್ವರನು ಮಂತ್ರಿಯಾದಾಗ್ಗೆ ಅವನ ಮಾವಂದಿರು ತೀರಿಕೊಂಡಿದ್ದಿಲ್ಲ.

ಬಿಜ್ಜಳನು ಚಕ್ರಾಧಿಪತಿಯಾಗಿ ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳಿದ್ದು ೧೧೬೨ ರಿಂದ ೧೧೬೮ ರ ವರೆಗೆ. ಅದಕ್ಕೂ ಪೂರ್ವದಲ್ಲಿ ಅವನು ಸ್ವತಂತ್ರನಾಗಿದ್ದರೂ ಚಾಲುಕ್ಯರಾಜನನ್ನು ಹೆಸರಿಗೆ ಮಾತ್ರ ರಾಜನನ್ನಾಗಿ ಮಾಡಿ ಇಟ್ಟುಕೊಂಡಿದ್ದನು. ಈ ಸಂಗತಿಯನ್ನು ನಾವು ಲಕ್ಷಿಸಿದಲ್ಲಿ ಬಸವೇಶ್ವರನಿಗೆ ಪ್ರಧಾನಿಯ ಸ್ಥಳವು ದೊರೆತದ್ದು ಬಿಜ್ಜಳನಿಗೆ ಪಟ್ಟವಾದ ಬಳಿಕ ಅಂದರೆ ೧೧೬೨ ರಲ್ಲಿ ಎಂದು ನಾವು ಭಾವಿಸಬೇಕಾಗುತ್ತದೆ. ಮುಂದೆ ಅವನು ಆರು ವರ್ಷ ಅಂದರೆ ೧೧೬೮ ರ ವರೆಗೆ ಮಂತ್ರಿಪದಾರೂಢನಾಗಿ ಕಾರ್ಯ ಮಾಡುತ್ತ ಬಂದನು. ಆದ್ದರಿಂದ ೧೧೬೨ ರ ಪೂರ್ವದಲ್ಲಿಯೇ ಅವನ ಮಾವಂದಿರಾದ ಬಲದೇವ ಮಂತ್ರಿ ಅಥವಾ ಸಿದ್ದಣ್ಣ ಒಡೆಯರು ಈ ಉಭಯತರು ಗತಿಸಿರಬೇಕೆಂದು ತಿಳಿಯಬೇಕಾಗುತ್ತದೆ. ಆದರೆ ಆಗ ಅವರು ಗತಿಸದೆ ಜೀವಂತ ಇದ್ದದ್ದು ಶಿಲಾಶಾಸನಗಳಿಂದ ನಮಗೆ ತಿಳಿದುಬರುತ್ತದೆ. ಸಿದ್ದಣ್ಣ ಮಂತ್ರಿಯು ೧೧೬೫ ರಲ್ಲಿ ಹಾನಗಲ್ಲಿನಲ್ಲಿ ಆಳುತ್ತಿದ್ದನೆಂದು ಹಾವೇರಿ ತಾಲೂಕಿನಲ್ಲಿರುವ ಎಕ್ಸಂಬಾ ಎಂಬ ಗ್ರಾಮದ ಶಿಲಾಶಾಸನದಿಂದ ತಿಳಿದುಬರುತ್ತದೆ. ಬಲದೇವ ಮಂತ್ರಿಯು ೧೧೬೩ ರಲ್ಲಿ ಕುಕನೂರಲ್ಲಿ ಆಳುತ್ತಿದ್ದನೆಂದು ಪಟ್ಟದಕಲ್ಲಿನಲ್ಲಿಯ ಶಿಲಾಶಾಸನದಿಂದ ತಿಳಿದುಬರುತ್ತದೆ. ಈ ಎರಡನೇ ಶಾಸನವು ಸಿಂದವಂಶದ ಎರಡನೇ ಚಾವುಂಡನದಾಗಿರುತ್ತದೆ. ಈ ಸಂಗತಿಗಳಿಂದ ಮಾವಂದಿರು ತೀರಿಕೊಂಡದ್ದರಿಂದ ಅವರ ಸ್ಥಾನಗಳು ಬಸವೇಶ್ವರನಿಗೆ ದೊರೆತವೆಂಬುವದರಲ್ಲಿ ಸತ್ಯಾಂಶವಿಲ್ಲೆಂದು ತೋರಿಬರುತ್ತದೆ.

ಮೇಲಿನ ಸಂಗತಿಗಳನ್ನು ನಾವು ಒಟ್ಟಾರೆ ವಿಚಾರ ಮಾಡಿದಲ್ಲಿ ಪುರಾಣಗಳಲ್ಲಿಯ ಈ ಕಥೆಗಳಿಗೂ ಐತಿಹಾಸಿಕ ಸಂಗತಿಗಳಿಗೂ ಏನೂ ಮೇಳಗೂಡುವದಿಲ್ಲ. ಬಸವೇಶ್ವರನ ಚರಿತ್ರೆಗೆ ಮಹತ್ವ ಬರಬೇಕೆಂದು ಪುರಾಣಿಕರು ಕಾಲಕಾಲಕ್ಕೆ ಹುಟ್ಟಿಸಿದ ಕಥೆಗಳು ಇವಾಗಿವೆಂದು ನಮಗೆ ತೋರುತ್ತದೆ.

## ಬಸವೇಶ್ವರನು ಮಂತ್ರಿಯಾಗಲು ಕಾರಣಗಳು

ಬಸವೇಶ್ವರನು ಹೇಗೆ ಮಂತ್ರಿಯಾದನೆಂಬುದನ್ನು ನಮ್ಮ ಹಿಂದಿನ ಲೇಖಗಳಲ್ಲಿ ಅನೇಕಾವರ್ತಿ ವಿವರಿಸುತ್ತ ಬಂದಿದ್ದೇವೆ. ಅದು ಸ್ವಾಭಾವಿಕವಾದ ಸರಳ ವೃತ್ತಾಂತವಿದೆ. ಅದು ಏನೆಂದರೆ— ಬಸವೇಶ್ವರನು ಆರಂಭದಲ್ಲಿ ಬಿಜ್ಜಳನ ಆಡಳಿತೆಯಲ್ಲಿ ಕೆಲವೊಂದು ಸಣ್ಣ ನೌಕರಿಯನ್ನು ಪಡೆದಿದ್ದಾನೆ. ಅದು ಹರಿಹರನು ಹೇಳುವಂತೆ 'ಗಣಕ' ಅಂದರೆ ಲೆಕ್ಕ ಮಾಡುವ ಕಾರಕೂನ ಈ ಸ್ಥಳವು ಇದ್ದರೂ ಇರಬಹುದು. ಮುಂದೆ ಬಸವೇಶ್ವರನು ತನ್ನ ವಚನಗಳಲ್ಲಿ ಹೇಳುವಂತೆ ಅವನು ರಾಜ್ಯದಲ್ಲಿ ಬೊಕ್ಕಸದ ಅಧಿಕಾರಿಯಾದನು. ಮುಂದೆ ಅವನು ದಂಡಾಧಿಪತಿಯೂ ಆದನು. ಅಷ್ಟರಲ್ಲಿ ಅವನಿಗೆ ಯುದ್ಧ ಕಲೆಯ ಜ್ಞಾನವೂ ಆದಂತೆ ತೋರುತ್ತದೆ. ಈ ಸ್ಥಾನದಲ್ಲಿ ಅವನು ಇದ್ದಾಗ್ಗೆ ಅವನು ಬಹುಜನ ಸಮಾಜದಲ್ಲಿ ಧರ್ಮ ಬೋಧೆ ಮಾಡುವ ಕಾರ್ಯವನ್ನು ಮಾಡುತ್ತಲೇ ಬಂದನು. ಅವನು ಬಿಜ್ಜಳನ ಕೂಡ ರಾಜ್ಯದ ಎಲ್ಲ ಭಾಗಗಳಲ್ಲಿ ಸಂಚಾರಮಾಡುತ್ತಿರಬಹುದು. ಇದರಿಂದ ಅವನು ರಾಜ್ಯದಲ್ಲಿ ಅತ್ಯಂತ ಗೌರವ ಸ್ಥಾನವನ್ನು ಪಡೆದು ಜನಪ್ರಿಯನಾದನು. ಹೀಗೆ ಅವನು ತನ್ನ ಯೋಗ್ಯತೆಯಿಂದ ಕ್ರಮೇಣ ಮೇಲಕ್ಕೆ ಬಂದಿದ್ದಾನೆ. ಅವನು ತನಗೆ ದೊರೆದ ಅಧಿಕಾರವನ್ನು ದುರುಪಯೋಗ ಮಾಡದೆ ಜನರನ್ನು ಸುಧಾರಿಸುವಲ್ಲಿ ಉಪಯೋಗಿಸಿದ್ದಾನೆ. ಧರ್ಮ ಬೋಧೆಯನ್ನು ಮಾಡುತ್ತ ಹೋಗಿದ್ದಾನೆ. ಅತ್ಯಂತ ಹಿಂದೆ ಬಿದ್ದ ಜನರನ್ನು ಉದ್ಧಾರ ಮಾಡಲು ಯತ್ನಿಸಿದ್ದಾನೆ. ಹೀಗೆ ಅವನು ಅರಸನಿಗೆ ಮತ್ತು ಜನರಿಗೆ ಪ್ರಿಯನಾಗಿ ದಂಡಾಧಿಪತಿಯ ಉದ್ಯೋಗವನ್ನು ಹೊಂದಿದವನಾಗಲು ಸೇನಾಪತಿಯಾದ ಬಲದೇವನೂ ಸಿದ್ದಣ್ಣೊಡೆಯನೂ ತಮ್ಮ ತಮ್ಮ ಹೆಣ್ಣು ಮಕ್ಕಳನ್ನು ಅವನಿಗೆ ಕೊಟ್ಟು ಲಗ್ನ ಮಾಡಿದ್ದಾರೆ. ಇಷ್ಟರಲ್ಲಿ ಬಿಜ್ಜಳನು ಚಾಲುಕ್ಯ ರಾಜನನ್ನು ತಳ್ಳಿ ತಾನೇ ಚಕ್ರಾಧಿಪತ್ಯವನ್ನು ವಹಿ

ಸುವ ಪ್ರಯತ್ನದಲ್ಲಿರಬೇಕು. ಈ ಕಾರ್ಯದಲ್ಲಿ ಬಸವೇಶ್ವರನು ಅವನಿಗೆ ವಿಶೇಷ ಸಹಾಯ ಮಾಡಿರಬೇಕೆಂದು ತೋರುತ್ತದೆ. ಬಸವೇಶ್ವರನ ಈ ಸಹಾಯದ ಮೂಲಕ ಬಿಜ್ಜಳನು ಚಾಲುಕ್ಯರ ಸಿಂಹಾಸನವನ್ನು ಆಕ್ರಮಿಸಿದ ಬಳಿಕ ಅಂದರೆ ೧೧೬೨ ರಲ್ಲಿ ಅವನು ಕೃತಜ್ಞತಾಭಾವವುಳ್ಳವನಾಗಿ ರಾಜ್ಯದಲ್ಲಿಯ ತನ್ನ ಇತರ ಸಮರ್ಥರಾದ ಸೇನಾಪತಿಗಳನ್ನು ಬಿಟ್ಟು ಬಸವೇಶ್ವರನನ್ನೇ ಆರಿಸಿಕೊಂಡು ಅವನಿಗೆ ಉಚ್ಚ ಸ್ಥಾನ ಕೊಟ್ಟಿದ್ದಾನೆ. ಈ ಪ್ರಕಾರ ಘಟನೆಗಳು ನಡೆದಿರಬೇಕೆಂದು ನಮಗೆ ತೋರುತ್ತದೆ.

## ಬಸವೇಶ್ವರನು ಇಬ್ಬರು ಹೆಂಡಂದಿರನ್ನು ಮಾಡಿ ಕೊಂಡದ್ದರ ಕಾರಣಗಳು

ಈ ಕಾಲದಲ್ಲಿ ಬಸವೇಶ್ವರನು ಬಲದೇವ ಮತ್ತು ಸಿದ್ದಣ್ಣೊಡೆಯರು ಇವರ ಪ್ರೀತಿಯನ್ನೂ ಸಹಾಯವನ್ನೂ ಬಯಸುವವನಾಗಿ ಈ ಉಭಯತರ ಹೆಣ್ಣುಮಕ್ಕಳನ್ನು ಲಗ್ನವಾಗಿರಬಹುದು. ಬಸವೇಶ್ವರನಲ್ಲಿ ಸ್ತ್ರೀ ಲಂಪಟತನವು ಏನೂ ಇರುವದಿಲ್ಲ. ಇದು ಅವನ ಅನೇಕ ವಚನಗಳಿಂದ ವ್ಯಕ್ತವಾಗುತ್ತದೆ. ಹೀಗಿದ್ದರೂ ಅವನು ಇಬ್ಬರು ಹೆಂಡಿರನ್ನು ಏಕೆ ಲಗ್ನವಾಗಬೇಕು ? ಇದಕ್ಕೆ ಕಾರಣವಾವುದೆಂಬುದನ್ನು ನಾವು ಪರೀಕ್ಷಿಸಿದರೆ ತನ್ನ ಸ್ಥಾನವನ್ನು ಈ ಉಭಯ ಮಂತ್ರಿಗಳ ಸಹಾಯವನ್ನು ಪಡೆಯುವದಕ್ಕೋಸ್ಕರ ಇಬ್ಬರು ಹೆಂಡಿರನ್ನು ಬಸವೇಶ್ವರನು ಲಗ್ನ ಮಾಡಿಕೊಂಡಿರಬಹುದು.

ಬಸವೇಶ್ವರನು ಕಲ್ಯಾಣದ ಮುಖ್ಯ ಅರಸನಾದ ಚಾಲುಕ್ಯ ರಾಜನನ್ನು ಬಿಟ್ಟುಕೊಟ್ಟು ಬಿಜ್ಜಳನಂಥ ಮಾಂಡಲಿಕನಿಗೆ ಸಹಾಯವನ್ನು ಏಕೆ ಮಾಡಿದನೆಂಬ ಪ್ರಶ್ನೆವು ಇಲ್ಲಿ ಉದ್ಭವಿಸುತ್ತದೆ. ಇದನ್ನು ವಿಶದ ಪಡಿಸುವ ಒಂದು ವಚನವು ಅವನ ವಚನಗಳಲ್ಲಿ ಉಪಲಬ್ಧವಿದೆ. ಅದನ್ನು ನಾವು ಕೆಳಗೆ ಚರ್ಚಿಸುತ್ತೇವೆ.

'ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವ. ಕೆಟ್ಟಿತ್ತು, ಕಲ್ಯಾಣ ಹಾಳಾಯಿತ್ತು ನೋಡಾ! ಒಬ್ಬ ಜಂಗಮದ ಅಭಿಮಾನದಿಂದ ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು ಸಂದಿತ್ತು, ಕೂಡಲಸಂಗಮದೇವ ನಿಮ್ಮ ಕಳವಳಿಕೆಗೆ'

ಈ ವಚನದಲ್ಲಿ ಬಸವೇಶ್ವರನು ಈ ಕಾಲಕ್ಕೆ ಒದಗಿದ ಕೆಲವು ಸಂದರ್ಭಗಳನ್ನು ವಿವರಿಸುತ್ತಾನೆ. ಅವು ಯಾವವೆಂದರೆ:—

(೧) ಕಲ್ಯಾಣಪಟ್ಟಣವು ಕೆಟ್ಟಿದ್ದು ಮತ್ತು ಹಾಳಾದದ್ದು.

(೨) ಚಾಳುಕ್ಯರಾಯನ ಆಳಿಕೆ ಹೋದದ್ದು.

(೩) ಒಬ್ಬ ಜಂಗಮನ ಅಭಿಮಾನದ ಮೂಲಕ ಈ ಸಂಗತಿಗಳು ಘಟಿಸಿದ್ದು.

(೪) ಚಾಳುಕ್ಯರಾಯನು ಪರಮಾತ್ಮನಿಗೆ ಕಳವಳಿಕೆ ಉಂಟಾಗುವ ಹಾಗೆ ಕಾರ್ಯಮಾಡಿದ್ದು.

ಈ ಪ್ರಕಾರ ಬಸವೇಶ್ವರನು ಕೆಲವು ಸಂಗತಿಗಳನ್ನು ವಿವರಿಸಿದ್ದು ಅವುಗಳಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದವುಗಳನ್ನು ಮಾತ್ರ ಇಲ್ಲಿ ಚರ್ಚಿಸುತ್ತೇವೆ.

ಚಾಳುಕ್ಯರಾಯನ ಆಳಿಕೆಯು ಹೋಯಿತೆಂದು ಉಲ್ಲೇಖಿಸಿದ್ದು ಅದು ನಿಜವಾಗಿ ಒದಗಿದ ಘಟನೆ ಇದೆ.

೧೧೫೫ ರಲ್ಲಿ ಬಿಜ್ಜಳನು ಮಂಡಳಾಧೀಶ್ವರನು ಮಾತ್ರವಿದ್ದರೂ ಅವನು ತನ್ನ ರಾಜನಾದ ೩ನೇ ತೈಲಪನನ್ನು ಆಗ ಪಟ್ಟದಿಂದ ಕೂಡಲೆ ತಳ್ಳದೆ ಸರ್ವಾಧಿಪತಿಯಾಗಿ ತಾನೇ ರಾಜ್ಯವಾಳಹತ್ತಿದನು. ಈ ರೀತಿ ಅವನು ೧೧೬೨ ರ ವರೆಗೆ ಆಳುತ್ತ ಈ ವರ್ಷ ಅವನು ತೈಲಪನನ್ನು ಪೂರ್ಣವಾಗಿ ಪಟ್ಟದಿಂದ ತಳ್ಳಿ ತಾನೇ ಸಿಂಹಾಸನಾರೂಢನಾದನು.

ಮುಂದೆ ಬಿಜ್ಜಳನೂ ಅವನ ತರುವಾಯ ಅವನ ಮಕ್ಕಳೂ ೧೧೮೨ರ ವರೆಗೆ ರಾಜ್ಯವಾಳಿದ ಬಳಿಕ ನಾಲ್ವಡಿ ತೈಲಪನ ಮಗನಾದ ಸೋಮೇಶ್ವರನು ಕಲಚೂರ್ಯವಂಶದ ಆಗಿನ ರಾಜನನ್ನು ತಳ್ಳಿ ತಾನೇ ೧೧೮೯ ರ ವರೆಗೆ ರಾಜ್ಯವಾಳಿದನು. ಆದರೆ ಮುಂದೆ ದೇವಗಿರಿಯಾದವ ರಾಜನು ದುರ್ಬಲರಾದ ಚಾಲುಕ್ಯ ರಾಜನನ್ನು ತಳ್ಳಿಹಾಕಿ ಅವನ ಇಡೀ ಕರ್ನಾಟಕ ರಾಜ್ಯವನ್ನು ಕೈವಶಮಾಡಿಕೊಂಡನು. ಈ ಸಂಗತಿಗಳು ಇತಿಹಾಸದಿಂದ ದೃಢಪಟ್ಟಿವೆ.

ಶ್ರೀಯುತ ಗೋವಿಂದ ಪೈ ಇವರು ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಮಾಡಿದ ಒಂದು ಭಾಷಣದಲ್ಲಿ ಮೇಲಿನ

ವಚನವನ್ನು ಉದಹರಿಸಿ ಆದರ ಮೇಲಿಂದ ಅವರು ಬಸವೇಶ್ವರನು ೧೧೮೯ ರ ವರೆಗೆ ಅಂದರೆ ಬಿಜ್ಜಳನ ತರುವಾಯ ೨೦ ವರ್ಷ ಜೀವಿಸಿದ್ದನೆಂತಲೂ, ಇಷ್ಟೇ ಅಲ್ಲ, ಅವನು ೧೨೦೦ ಇಸ್ವಿಯ ವರೆಗೂ ಸಹ ಇರಬೇಕೆಂತಲೂ ಅನುಮಾನ ಮಾಡಿದರು. ಆದರೆ ಅವರು ತೈಲಪನು ೧೧೬೩ ರಲ್ಲಿ ತಳ್ಳಿಹಾಕಲ್ಪಟ್ಟಿದ್ದನ್ನು ಲಕ್ಷಕ್ಕೆ ತೆಗೆದುಕೊಂಡಿರುವದಿಲ್ಲ. ಮೇಲಿನ ವಚನದಲ್ಲಿ ಈ ವರ್ಷ ಉಂಟಾದ ರಾಜ್ಯಕ್ರಾಂತಿಯನ್ನು ಸೂಚಿಸುತ್ತದೆಂದು ನಮಗೆ ತೋರುತ್ತದೆ. ಬಸವೇಶ್ವರನು ಬಿಜ್ಜಳನು ತೀರಿಕೊಂಡ ತರುವಾಯ ೨೦ ವರ್ಷ ಅಥವಾ ೩೦ ವರ್ಷ ಬದುಕಿದನೆಂದು ಭಾವಿಸಿದರೆ ವೀರಶೈವ ಪುರಾಣಗಳಿಗೂ ಐತಿಹಾಸಿಕ ಅನೇಕ ವಿಷಯಗಳಿಗೂ ಮೇಳಗೂಡುವದಿಲ್ಲ. ಈ ವಿಷಯವನ್ನು ಯೋಗ್ಯ ಸ್ಥಾನದಲ್ಲಿ ನಾವು ಸವಿಸ್ತಾರವಾಗಿ ನಿರೂಪಿಸುವೆವು.

ಜಂಗಮನ ಅಭಿಮಾನದ ಮೂಲಕ ಮತ್ತು ಪರಮಾತ್ಮನಿಗೆ ಕಳವಳಿಕೆಯಾಗುವ ರೀತಿಯಿಂದ ಚಾಲುಕ್ಯ ರಾಜನು ವರ್ತಿಸಿದ್ದರಿಂದ ಅವನ ಆಳಿಕೆಯು ಹೋಯಿತ್ತೆಂದು ಈ ವಚನದಲ್ಲಿ ಹೇಳಿದ್ದು ಎರಡನೇ ಸಂಗತಿಯು. ಇದರಲ್ಲಿ ಚಾಲುಕ್ಯ ರಾಜನು ಅಂದರೆ ತೈಲಪನು ವೀರಶೈವ ಸಮಾಜವನ್ನು ಮತ್ತು ಧರ್ಮವನ್ನು ವಿರೋಧಿಸಿ ನಡೆದನೆಂಬ ಭಾವವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಆದರೆ ಈ ಚಾಲುಕ್ಯ ರಾಜನಂತೆ ಬಿಜ್ಜಳನು ಮಾತ್ರ ಈ ಕಾಲಕ್ಕೆ ನಡೆಯದೆ ಅವನು ವೀರಶೈವರಿಗೆ ಅನುಕೂಲವಾಗಿ ನಡೆಯುತ್ತಿದ್ದನೆಂದು ತೋರುತ್ತದೆ. ಅವನಲ್ಲಿದ್ದ ಸಿದ್ದಣ್ಣ ಮಂತ್ರಿ ಮೊದಲಾದ ದಂಡಾಧಿಪತಿಗಳು ವೀರಶೈವರಾಗಿದ್ದರು. ಬಸವೇಶ್ವರನು ಮಂಗಳವಾಡದಲ್ಲಿದ್ದಾಗ ಅನೇಕ ಶಿವಶರಣರು ಅವನಲ್ಲಿಗೆ ಬಂದು ಆಶ್ರಯಹೊಂದಿದರೆಂದು ಹರಿಹರನ ಬಸವರಾಜ ರಗಳೆಯಿಂದ ಗೊತ್ತಾಗುತ್ತದೆ. ಬಿಜ್ಜಳನು ಅಲ್ಲಿ ಆಳುತ್ತಿದ್ದರೂ ಬಸವೇಶ್ವರನು ತನ್ನ ಧರ್ಮಬೋಧೆಯ ಕಾರ್ಯಗಳನ್ನು ನಿರಾತಂಕವಾಗಿ ನಡಿಸಿದ್ದನು. ಬಸವೇಶ್ವರನಕಿಂತಲೂ ಮೊದಲು ಆಗಿಹೋದ ರೇವಣಸಿದ್ಧೇಶ್ವರನು ಸಹ ಬಿಜ್ಜಳನು ಆಸ್ಥಾನದಲ್ಲಿ ಮನ್ನಣೆಹೊಂದಿದವನಾಗಿದ್ದನು. ಆದರೆ ಬಿಜ್ಜಳನು ಹೇಗೆ ಶಿವಶರಣರಿಗೆ ಆಶ್ರಯಕೊಟ್ಟನೋ ಹಾಗೆ ಅವನ ರಾಜನಾದ ತೈಲಪನು ಮಾತ್ರ ಅವರಿಗೆ ಆಶ್ರಯಕೊಟ್ಟಿಲ್ಲೆಂದು ನಾವು ಮೇಲೆ ಉದಹರಿಸಿದ ವಚನದಿಂದ ತಿಳಿಯುತ್ತದೆ. ಇಷ್ಟೇ ಅಲ್ಲ, ಅವನು ಅವರಲ್ಲಿ

ವೈರಭಾವವನ್ನು ತಾಳಿ ಬಾಧಿಸುತ್ತಿರಬಹುದು. ರೇವಣಸಿದ್ಧೇಶ್ವರನು ಕೆಲಕಾಲ ಕಲ್ಯಾಣ ಪಟ್ಟಣದಲ್ಲಿ ವಾಸಿಸಿದನೆಂದು ಅವನ ಪುರಾಣದಲ್ಲಿ ಹೇಳಿದೆ. ಆದರೆ ಆಗ ಅವನು ಅಲ್ಲಿ ಬಹಿರಂಗವಾಗಿ ಇರದೆ ಒಬ್ಬ ಗಾಣಿಗನ ಮನೆಯಲ್ಲಿ ಗುಪ್ತವಾಗಿ ಇದ್ದದರಿಂದ ಚಾಲುಕ್ಯ ರಾಜನು ವೀರಶೈವರಿಗೋಸ್ಕರ ವೈರಭಾವದಿಂದ ನಡೆಯುತ್ತಿರಬೇಕೆಂದು ಊಹಿಸಬೇಕಾಗುತ್ತದೆ. ಈತರದ ವೈರಭಾವವು ಆಗಿನ ವೀರಶೈವರಿಗೂ ಚಾಲುಕ್ಯ ರಾಜನಿಗೂ ಇದ್ದದರಿಂದ ಬಸವೇಶ್ವರನೂ ಅವನ ಅನುಯಾಯಿಗಳೂ ಚಾಲುಕ್ಯ ರಾಜನ ವಿರೋಧಿಗಳಾಗಿಯೂ ಬಿಜ್ಜಳನಿಗೆ ಸಹಾಯಕರಾಗಿಯೂ ವರ್ತಿಸಿರಬಹುದು.

ಮೇಲಿನ ವಚನದಲ್ಲಿ ಕಲ್ಯಾಣ ಕೆಟ್ಟಿತ್ತು, ಹಾಳಾಯಿತ್ತು ಎಂಬ ಶಬ್ದಗಳಿವೆ. ೧೧೬೨ ರಲ್ಲಿ ಕಲ್ಯಾಣಕ್ಕೆ ಈ ಸ್ಥಿತಿಯುಂಟಾಯಿತೋ ಹೇಗೆಂಬುದು ಗೂಢ ಪ್ರಶ್ನೆಯಾಗಿದೆ. ಕಲ್ಯಾಣ ಹಾಳಾದದ್ದು ಈ ಕಾಲಕ್ಕೆ ಅಲ್ಲ, ಆದರೆ ಈ ಶತಮಾನದ ಅಂತ್ಯಭಾಗದಲ್ಲಿ ಎಂದು ಶ್ರೀಗೋವಿಂದ ಪೈ ಇವರು ಭಾವಿಸಿ ಬಸವೇಶ್ವರನು ಆ ವರೆಗೂ ಜೀವಿಸಿದ್ದನೆಂದು ಊಹಿಸಿರುತ್ತಾರೆ ಆದರೆ ಆಗ ಯಾದವ ರಾಜರು ರಾಜ್ಯವನ್ನು ಆಕ್ರಮಿಸಿದವರು. ಅವರು ಮುಸಲ್ಮಾನರಂತೆ ಹಿಂದೂ ರಾಜ್ಯಗಳ ರಾಜಧಾನಿಗಳನ್ನು ಕೆಡಿಸಿಲ್ಲ ಇಷ್ಟೇ ಅಲ್ಲ, ಅವರು ಈ ಕಾಲಕ್ಕೆ ಶಿವಶರಣರನ್ನು ಮನ್ನಿಸಿದ್ದೂ ಅವರಿಗೆ ಉಂಬಳಿಗಳನ್ನು ಹಾಕಿಕೊಟ್ಟದ್ದೂ ಅನೇಕ ಶಾಸನಗಳಿಂದ ಗೊತ್ತಾಗುತ್ತದೆ. ಅಂತಸ್ಥ ಕಲಹಗಳ ಮೂಲಕ ಕಲ್ಯಾಣ ೧೧೬೨ ರಲ್ಲಿ ಕೆಟ್ಟಿರಬಹುದು. ರಾಜಧಾನಿಗಳಲ್ಲಿ ಹಾವಳಿಗಳಿದ್ದು ಈ ರೀತಿ ಆಗಿದ್ದು ಇತಿಹಾಸದಲ್ಲಿ ಆಗಿಂದಾಗ್ಗೆ ಕಂಡುಬರುತ್ತದೆ. ಇಂಥ ಪರಿಸ್ಥಿತಿಯು ಉಂಟಾಗಿರಬಹುದೋ ಹೇಗೆಂದು ಅನುಮಾನವು ಉಂಟಾಗುತ್ತದೆ. ಆದರೆ ಇದಕ್ಕೆ ಬಿಜ್ಜಳನು ಕಾರಣವಾಗಿರಲಿಕ್ಕಿಲ್ಲ. ಯಾಕಂದರೆ ಅದಕ್ಕೂ ಪೂರ್ವದಲ್ಲಿಯೇ ಅವನು ರಾಜ್ಯದಲ್ಲಿ ಸರ್ವಾಧಿಪತಿಯಾಗಿ ರಾಜ್ಯವಾಳುತ್ತಿದ್ದನು. ಆದ್ದರಿಂದ ಈ ಬಿಕ್ಕಟ್ಟು, 'ಒಬ್ಬ ಜಂಗಮನ ಅಭಿಮಾನ'ದ ಮೂಲಕ ಈ ವಚನದಲ್ಲಿ ಹೇಳಿದಂತೆ ಆಗಿರಬಹುದು. ಅಂದರೆ ಚಾಲುಕ್ಯ ರಾಜನು ವೀರಶೈವರನ್ನು ಹಿಂಸೆ ಮಾಡಿರಬೇಕು, ಇದರಿಂದ ಪಟ್ಟಣದಲ್ಲಿ ದಂಗೆಗಳೆದ್ದಿರಬೇಕು, ಇದರಿಂದ ಕಲ್ಯಾಣವು ಕೆಲಕಾಲ ಕೆಟ್ಟುಹೋಗಿರಬೇಕು, ಮತ್ತು ಜನರು ಅದನ್ನು ಬಿಟ್ಟು ಹೋಗಿ

ರಬೇಕು, ಬಿಜ್ಜಳನು ಈ ಸಂಧಿಯನ್ನು ಸಾಧಿಸಿ ಚಾಲುಕ್ಯ ರಾಜನನ್ನು ಪಟ್ಟದಿಂದ ತಳ್ಳಿ ತಾನೇ ಪಟ್ಟಾಧಿಕಾರಿಯಾಗಿರಬೇಕೆಂದು ತೋರುತ್ತದೆ.

ಈ ಕಾಲದ ಇತಿಹಾಸವು ನಮಗೆ ಇನ್ನೂ ಅಪರಿಚಿತವಿದೆ. ಹಾಗೆಯೇ ವೀರಶೈವರ ಇತಿಹಾಸವೂ ಇದೆ. ಆದರೆ ವೀರಶೈವ ವಾಙ್ಮಯದಲ್ಲಿ ಮತ್ತು ಶಾಸನಗಳಲ್ಲಿ ಇತಿಹಾಸದ ಕಣಗಳು ಅಲ್ಲಲ್ಲಿ ಮಿನುಕುತ್ತಿರುತ್ತವೆ. ಅವುಗಳನ್ನು ನಾವು ಆಯ್ದು ಅವುಗಳು ಸೂಚಿಸುವ ಮಾರ್ಗದಿಂದ ನಾವು ಚಲಿಸುತ್ತ ಮುಂದೆ ಹೋಗಬೇಕಾಗುತ್ತದೆ ಹೀಗೆ ನಾವು ಸದ್ಯಸ್ಥಿತಿಯಲ್ಲಿ ಉಜ್ವಲವಾದ ವೀರಶೈವೇತಿಹಾಸವನ್ನು ಪ್ರಕಾಶಗೊಳಿಸಬೇಕಾಗಿದೆ.

ಒಟ್ಟಿಗೆ ಕಂಡುಬರುವದೇನಂದರೆ, ಬಿಜ್ಜಳನು ಬಸವೇಶ್ವರನ ಮತ್ತು ವೀರಶೈವರ ಸಹಾಯದಿಂದಲೇ ಮುಂದುವರಿದಿದ್ದಾನೆ. ಅವರಿಂದಲೇ ಅವನಿಗೆ ಒಂದು ಮಹತ್ವದ ರಾಜ್ಯದ ಪಟ್ಟವು ದೊರೆತಿದೆ. ಇದಕ್ಕೋಸ್ಕರ ಅವನು ಬಸವೇಶ್ವರನಿಗೆ ಪ್ರೀತನಾಗಿ ಅವನಿಗೆ ಪ್ರಧಾನಿಯ ಸ್ಥಳವನ್ನು ಕೊಟ್ಟಿದ್ದಾನೆಂದು ನಮಗೆ ತೋರುತ್ತದೆ.

(ಮುಂದೆಸಾಗುವದು.)

---

# ಸುಳ್ಳಾಡಬಾರದು.

(ಲೇ.— ಶಿವಮೂರ್ತಿ)



ಸುಳ್ಳಾಡದಿರುವದೇ ಶಿವಶರಣರ ೩ನೆಯ ಆಚಾರ. ಸುಳ್ಳಾಡಬೇಡವೆಂಬುದು ನಿಷೇಧ ವಾಕ್ಯವು. ಸತ್ಯವನ್ನು ನುಡಿ ಎಂಬುದು ವಿಧಿ ವಾಕ್ಯವು. ಇವೆರಡರರ್ಥ ಒಂದೇ. ಆದರೆ ಸುಳ್ಳಾಡಬೇಡ ಎಂಬುದು ನಮಗೆ ಹೆಚ್ಚು ಎಚ್ಚರಕೊಡುತ್ತದೆ. ಯಾಕಂದರೆ ಸತ್ಯವನ್ನಾಡುವದಕ್ಕಿಂತ ಸುಳ್ಳಾಡುವ ಪ್ರವೃತ್ತಿಯು ಮನುಷ್ಯನಿಗೆ ಹೆಚ್ಚಾಗಿರುತ್ತದೆ. ಅಂಥ ಪ್ರವೃತ್ತಿಗೆ ತಡೆ ಹಾಕಲಿಕ್ಕೆ ಶರಣರು ಸುಳ್ಳಾಡಬಾರದೆಂಬ ಆಚಾರವನ್ನಿಟ್ಟುಕೊಂಡಿದ್ದಾರೆ. ಈ ಜಗತ್ತಿನಲ್ಲಿ ಸುಳ್ಳಾಡದವರು ಬಹು ವಿರಳ. ನಾವು ದಿನಾಲು ಕ್ಷುಲ್ಲಕ ಕಾರಣದ ಸಲುವಾಗಿ ಎಷ್ಟೋ ಸುಳ್ಳುಗಳನ್ನು ಹೇಳುತ್ತಿರುತ್ತೇವೆ. ಆದರೆ ನಾವು ಸುಳ್ಳಾಡುತ್ತೇವೆಂಬ ಕಲ್ಪನೆಯು ಕೂಡ ನಮ್ಮ ಮನಸ್ಸಿನಲ್ಲಿ ಬರುವದಿಲ್ಲ. ಸುಳ್ಳಾಡುವದೊಂದು ಸಹಜ ಸ್ವಭಾವವಾಗಿ ಬಿಟ್ಟಿದೆ. "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂದು ವೇದಾಂತಿಗಳು ಹೇಳುವದುಂಟು. ಜಗತ್ತೇ ಮಿಥ್ಯಾಸ್ವರೂಪವಾಗಿರುವದರಿಂದ ಜಗದ ಜೀವಿಗಳು ಸುಳ್ಳಾಡುವದು ಸಹಜವು. ಪರವಸ್ತುವೊಂದು ಸತ್ಯವಾಗಿರುವದರಿಂದ ಆ ಪರಮಾತ್ಮನ ಸ್ವರೂಪಿಗಳಾದಂಥವರು ಮಾತ್ರ ಸತ್ಯವನ್ನಾಡುವದುಂಟು. ಅಂತೆಯೇ ಸತ್ಯದಲ್ಲಿ ಹರಿಶ್ಚಂದ್ರ, ಸತ್ಯದಲ್ಲಿ ಧರ್ಮರಾಜ ಎಂಬ ಒಂದೆರಡು ಉದಾಹರಣೆಗಳು ಮಾತ್ರ ನಮ್ಮ ನಿದರ್ಶನಕ್ಕೆ ಬರುತ್ತವೆ. ಶಿವಶರಣರು ಪರಶಿವನ ಸ್ವರೂಪಿಗಳಾದ್ದರಿಂದ ಅವರು ಸುಳ್ಳನ್ನೆಂದಿಗೂ ಆಡರು. ಅವರು 'ಪುಸಿಯನೆಲ್ಲಿಯೂ ನುಡಿಯದಿಹ ಸತ್ಯ' ವನ್ನೇ ಆಡುವರು.

ಸತ್ಯದ ವಿಷಯವಾಗಿ ಸಂಸ್ಕೃತದಲ್ಲಿ ಅನೇಕ ನೀತಿಯ ವಾಕ್ಯಗಳುಂಟು. 'ಸತ್ಯಂ ವದ ಧರ್ಮಂಚರ' ಅಂದರೆ ಸತ್ಯವನ್ನು ನುಡಿ ಧರ್ಮದಂತೆ ನಡೆ. 'ಸತ್ಯಮೇವ ಜಯತೆ ನಾನೃತಂ' ಅಂದರೆ ಸತ್ಯಕ್ಕೇ ಜಯವುಂಟು ಸುಳ್ಳಿಗಲ್ಲ. 'ಅಶ್ವಮೇಧ ಸಹಸ್ರೇಭ್ಯಃ ಸತ್ಯಮೇವಾತಿರಿಚ್ಯತೇ' ಅಂದರೆ ಸಾವಿರ ಯಜ್ಞ ಮಾಡುವದಕ್ಕಿಂತ ಒಂದು ಸತ್ಯವನ್ನಾಡು

ವದು ಹೆಚ್ಚು ಶ್ರೇಯಸ್ಕರವು. "ಸತ್ಯಮೇವ ಸೌಂದರ್ಯಂ ಸೌಂದರ್ಯ ಮೇವ ಸತ್ಯಂ" ಅಂದರೆ ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ. ಇತ್ಯಾದಿ ವಾಕ್ಯಗಳಿಂದ ಸತ್ಯವು ಮಾನವ ಜೀವನದ ಶ್ರೇಯಸ್ಕರವಾದ ಧ್ಯೇಯವೆಂದು ಸಿದ್ಧವಾಗುತ್ತದೆ.

ಸತ್ಯವನ್ನು ನುಡಿಯಬೇಕೆಂಬುದೇನೋ ಸುಲಭ. ಆದರೆ ಸತ್ಯವುಳ್ಳ ಮನಸ್ಸು-ನಡೆ-ನುಡಿಗಳುಳ್ಳವರು ಅಪರೂಪ. ನುಡಿದಂತೆ ನಡೆಯಬೇಕು. ನಡೆದಂತೆ ನುಡಿಯಬೇಕು. ಇದೇ ಸತ್ಯ. ಮಹಾತ್ಮರು ಸತ್ಯಭಾಷಿಗಳಾಗಿರುತ್ತಾರೆ. ದುರಾತ್ಮರು ಅಸತ್ಯವಾದಿಗಳಾಗಿರುತ್ತಾರೆ. ಸಂಸ್ಕೃತದಲ್ಲಿ 'ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ। ಮನಸ್ಯನ್ಯ ದ್ವಚಸ್ಯನ್ಯತ್ಕರ್ಮಣ್ಯನ್ಯದ್ದುರಾತ್ಮನಾಂ। ಅಂದರೆ ಪುಣ್ಯಶಾಲಿಗಳು ಮನಸ್ಸು ಮಾತು ಕೃತಿಗಳಲ್ಲಿ ಒಂದೇ ರೀತಿಯಾಗಿರುತ್ತಾರೆ. ಇದೇ ಸತ್ಯ. ಆದರೆ ದುಷ್ಟರಿಗೆ ಮನಸ್ಸಿನ ತಕ್ಕಂತೆ ಮಾತಿರುವದಿಲ್ಲ. ಮಾತಿಗೆ ಸರಿಯಾಗಿ ಕೃತಿಯಿರುವದಿಲ್ಲ. ಇದೇ ಅಸತ್ಯ.

ಸತ್ಯವನ್ನಾಡುವದು ಆತ್ಮಬಲಶಾಲಿಯ ಲಕ್ಷಣವು. ಸುಳ್ಳಾಡುವದು ದುರ್ಬಲಾತ್ಮರ ಲಕ್ಷಣವು. ಆತ್ಮ ವೀರರು ಜಗತ್ತೇ ತಮ್ಮ ವಿರುದ್ಧ ನಿಂತರೂ ಮುಗಿಲೇ ತಮ್ಮ ಮೇಲೆ ಹರಿದು ಬಿದ್ದರೂ ತಮ್ಮ ಸದಸದ್ವಿವೇಕ ಬುದ್ಧಿಗೆ ತೋಚಿದ ಸತ್ಯವನ್ನು ನಿರ್ಭೀತಿಯಿಂದ ಹೇಳಲಿಕ್ಕೆ ಎಂದೂ ಹಿಂಜರಿಯುವದಿಲ್ಲ. ದುರ್ಬಲಾತ್ಮರು ಸತ್ಯವನ್ನು ಹೇಳಿದರೆ ಎಲ್ಲಿ ಅನಿಷ್ಟಗಳೊದಗುವವೋ ಎಂದು ಹೆದರಿ ಹುದುಗಿಕೊಳ್ಳುತ್ತಾರೆ. ಸತ್ಯವಂತರು ಜಗತ್ತಿನ ನ್ಯಾಯ ನಿಷ್ಠುರತೆ, ದಯಾ ದಾಕ್ಷಿಣ್ಯ, ಆಚಾರ ಅನಾಚಾರಗಳಿಗೆ ಅಂಜಿ ತಮ್ಮ ಸತ್ಯವನ್ನು ಬಿಡುವದಿಲ್ಲ. ಸಾಕ್ರೆಟಿಸನಿಗೆ ವಿಷ ಕೊಟ್ಟರೂ 'ಆತ್ಮವು ಅಮರ'ವಿರುತ್ತದೆಂಬ ಸತ್ಯವನ್ನು ಬಿಡಲಿಲ್ಲ. ಕ್ರೈಸ್ತನಿಗೆ ಮಳೆ ಜಡಿದು ಕೊಂದರೂ 'ದೇವರೊಬ್ಬನೇ ಇದ್ದಾನೆಂಬ' ಸತ್ಯದಿಂದ ತೊಲಗಲಿಲ್ಲ. ಗ್ಯಾಲಿಲಿಯೋನನ್ನು ಕಾಯ್ದ ಉಸುಕಿನಲ್ಲಿ ನಿಲ್ಲಿಸಿ ಹಿಂಸೆ ಪಡಿಸಿದರೂ 'ಪೃಥ್ವಿಯು ಸೂರ್ಯನ ಸುತ್ತು ತಿರುಗುತ್ತದೆಂಬ ಸತ್ಯದಿಂದ ವಿಮುಖನಾಗಲಿಲ್ಲ. ಬಸವಣ್ಣನವರು ಸತ್ಯವನ್ನು ನುಡಿಯುವಾಗ ಸತ್ಯವನ್ನಾಚರಿಸುವಾಗ ಯಾರಿಗೂ ಹೆದರುವದಿಲ್ಲವೆಂದು ಧಾರಾಳವಾಗಿ ಹೇಳಿದ್ದಾರೆ. "ನ್ಯಾಯನಿಷ್ಠುರ ದಯಾದಾಕ್ಷಿಣ್ಯಪರ ನಾನಲ್ಲಯ್ಯಾ. ಲೋಕವಿರೋಧಿ. ಸತ್ಯವ ನುಡಿವಲ್ಲಿ ಶರಣ

ನಾನಾರಿಗೂ ಅಂಜುವವನಲ್ಲ. ಕೂಡಲಸಂಗಮದೇವಾ ನಿಮ್ಮ ರಾಜ ತೇಜದೊಳಿಪ್ಪೆನಾಗಿ." ಸತ್ಯವನ್ನಾಡುವವರಿಗೆ ಜನಗಳು ಹಿಂಸೆಕೊಟ್ಟರೂ ಪರಮಾತ್ಮನ ಕೃಪೆಯು ಅವರಿಗುಂಟು.

ಎಷ್ಟೋ ಜನಗಳು ತಮ್ಮ ಹೊಟ್ಟೆಯ ಮೇಲೆ ಅಥವಾ ಜೀವದ ಮೇಲೆ ಭಯಂಕರ ಪ್ರಸಂಗಬಂದಾಗ ಸುಳ್ಳು ಹೇಳಿ ಪಾರಾಗುವದುಂಟು. ಆದರೆ ಬಸವಣ್ಣನವರು ಜೀವಕ್ಕೆ ಹೆದರಿ ಸತ್ಯವನ್ನು ಹೇಳದೆ ಬಿಟ್ಟಿಲ್ಲ. ಅವರು ಹೇಳುವದೇನಂದರೆ— "ನಾಳೆಬಪ್ಪುದು ನಮಗಿಂದೇ ಬರಲಿ. ಇಂದೆ ಬಪ್ಪುದು ನಮಗೆ ಈಗಳೇ ಬರಲಿ. ಇದಕಾರಂಜುವರು? ಇದ ಕಾರಳಕುವರು? 'ಜಾತಸ್ಯ ಮರಣಂ ಧ್ರುವಂ' ಎಂಬುದಾಗಿ ಕೂಡಲ ಸಂಗಮದೇವ ಬರೆದ ಬರಹವ ತಪ್ಪಿಸುವೊಡೆ ಹರಿಬ್ರಹ್ಮಾದಿಗಳಿಗೆ ಅಳ ವಲ್ಲ." ಸತ್ಯದಲ್ಲಿನಿಂದ ಶರಣರು ಹೊಟ್ಟೆಯ ಪಾಡಿಗಾಗಿ ಮಾನವರಿ ಗೆಂದೂ ಬಾಯಿ ತೆರೆಯಲಾರರು. ಉಪವಾಸಬಿದ್ದಾದರೂ ಸತ್ತಾರು. ಸತ್ಯವನ್ನು ಬಿಡಲಾರರು. 'ಕಾಯದ ಕಳವಳಕ್ಕಂಜಿ ಕಾಯಯ್ಯಾ ಎನ್ನೆನು. ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು. ಆಣೆ ನಿಮ್ಮಾಣೆ ಕೂಡಲಸಂಗಮದೇವಾ ಸತ್ಯವ ತೊರೆದು ಮಾನವರ ಬೇಡೆನು."

ಸತ್ಯವನ್ನಾಚರಿಸುವಾಗ ಎಂಥ ಅಪಮಾನ ಗಂಡಾಂತರಗಳೊದ ಗಿದರೂ ಸತ್ಯ ಶರಣರು ಎದೆಗುಂದುವದಿಲ್ಲ. ಈ ವಿಷಯದಲ್ಲಿ ಬಸವಣ್ಣ ನವರು ಹೇಳುವದೇನಂದರೆ— "ಅರ್ಥವನರ್ಥವ ಮಾಡಿ ಕೋಳಾಹಳಂ ಗೈಯುತ್ತಿರಲಿ. ಹುಟ್ಟಿದ ಮಕ್ಕಳ ಕಡಿದು ಚಲ್ಲುತ್ತಿರಲಿ. ಮುಟ್ಟಿದ ಸ್ತ್ರೀಯ ಕಣ್ಣಮುಂದೆ ಅವಮಾನಂ ಗೈಯುತ್ತಿರಲಿ. ಇವೆಲ್ಲ ಹೊರಗಣವು. ಇನ್ನು ನನ್ನಂಗದ ಮೇಲೆ ಬರಲಿ. ಇಕ್ಕುವ ಶೂಲ ಪ್ರಾಪ್ತಿಸಲಿ. ಹಿಡಿ ಕಂಡವ ಮಾಡಿ ಕಡಿಯುತ್ತಿರಲಿ. ಮತ್ತೆಯೂ ಲಿಂಗಾರಾಧನೆಯ ಮಾಡುವೆ. ಜಂಗಮಾರಾಧನೆಯ ಮಾಡುವೆ. ಪ್ರಸಾದಕ್ಕೆ ತಪ್ಪೆನು. ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದೊಡೆ ನೀ ನಂದೇ ಮೂಗ ಕೊಯ್ಯಾ ಕೂಡಲಸಂಗಮದೇವಾ."

ಶಿವಶರಣರಂಥ ನೈತಿಕ ಬಲವಿಲ್ಲದ ಸಾಮಾನ್ಯ ಜೀವರು ಪ್ರತಿ ನಿತ್ಯ ನಾನಾ ರೀತಿಯಾಗಿ ಸುಳ್ಳು ಹೇಳುತ್ತಿರುವದು ನಮ್ಮ ನಿದರ್ಶ ನಕ್ಕೆ ಬರುತ್ತದೆ." ಸುಳ್ಳು ಹೇಳಿ ಪಾರಾಗುವದು ಇಲ್ಲವೆ ವೈಯುಳಿ

ಸಿಕೊಳ್ಳುವದು ಜನರ ಸ್ವಭಾವವಾಗಿ ಬಿಟ್ಟಿದೆ. ಎಷ್ಟೋ ಜನಗಳು ಸ್ವಾರ್ಥಸಾಧನೆಗಾಗಿ ಸುಳ್ಳು ಸುಳ್ಳೆ ಆಣೆಗಳ ಸುರಿಮಳೆಯನ್ನು ಸುರಿಸುವರು. ಬಹು ಜನರು ಚೇಷ್ಟೆಗಾಗಿ ಇಲ್ಲವೆ ಮನೋರಂಜನೆಗಾಗಿ ತಮ್ಮ ಮಾತಿನಲ್ಲಿ ಸುಳ್ಳುಗಳನ್ನು ಕೊಚ್ಚಿ ತಮ್ಮ ಜಾಣ್ಮೆಯನ್ನು ವ್ಯಕ್ತಗೊಳಿಸುವರು. ಎಷ್ಟೋ ಜನ ಡಾಂಭಿಕರು ತಾವು ಗೌರವಶಾಲಿಗಳೆಂದು ಸುಳ್ಳು ಸುಳ್ಳೆ ಹೊಗಳಿಕೊಂಡು ಸಮಾಜದಲ್ಲಿ ಮೆರೆಯುತ್ತಿರುವರು. ವಕೀಲರು ಪಕ್ಷಗಾರರಿಗೆ ಮತ್ತು ಸಾಕ್ಷಿದಾರರಿಗೆ ಸುಳ್ಳು ಸಾಕ್ಷಿ ಪುರಾವುಗಳನ್ನು ಹೇಳಲಿಕ್ಕೆ ಹಚ್ಚಿ ಖಟಲೆಗಳನ್ನು ಗೆದೆಯಲಿಕ್ಕೆ ಮುಂದುವರಿಯುವರು ಅನೇಕ ಕಸಬುದಾರರಾದ ಶಿಂಪಿಗ, ಬಡಿಗ, ಅಕ್ಕಸಾಲಿಗ, ನಾವದಿಗ ಮೊದಲಾದವರು ಸುಳ್ಳು ಹೇಳದ ಹೊರ್ತು ಅವರ ವ್ಯವಹಾರವೇ ಸಾಗುವದಿಲ್ಲ. ಸುಳ್ಳನ್ನು ಸಾಧಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವವರೇ ಎತ್ತನೋಡಿದತ್ತ ಕಂಡುಬರುತ್ತಾರೆ. ಅಂದಮೇಲೆ ಸತ್ಯದಿಂದೇನು ಪ್ರಯೋಜನವೆಂದು ಕೇಳಬಹುದು. ಕಲಿಯುಗದಲ್ಲಿ ಸತ್ಯಕ್ಕೆ ಇಂಬಿಲ್ಲದಂತಾಗಿದೆ. ಸುಳ್ಳಿಗೆ ತಡೆಯಿಲ್ಲದಂತಾಗಿದೆ. ಸುಳ್ಳಾಡಿ ಸುಖದಿಂದ ಬಾಳುವವರೇ ಹೆಚ್ಚು. ಸತ್ಯವನಾಡುವವರಿಗೆ ಸಂಕಟ ತೊಂದರೆಗಳು ಪದೇ ಪದೇ ಬರುತ್ತವೆ. ಇದು ಕಾಲವೈಪರೀತ್ಯ.

ಆದರೆ ನಿಜವಾಗಿ ವಿಚಾರಿಸಿದರೆ ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲವೆಂಬ ಮಾತೇ ನಿಜವಾವುದು. ಈಗ ಜಗತ್ತು ಸತ್ಯವಂತರ ಅನುಗ್ರಹದಿಂದಲೇ ನಡೆದಿರುವುದಲ್ಲದೆ ಎಲ್ಲರೂ ಸುಳ್ಳಿನ ಬುಳ್ಳರಾದರೆ ರಸತಳಕ್ಕಿಳಿಯುತ್ತಿತ್ತು. ಅದಕ್ಕಾಗಿಯೇ ಸರ್ವಜ್ಞನು "ಸತ್ಯವಂತರ ನೀನು ಸತ್ತರೆಂದೆನಬೇಡ। ಹೆತ್ತವ್ವ ಮಗನ ಕರೆವಂತೆ ನಿನ್ನನವ। ರೆತ್ತಿಕೊಂಬುವರು ಸರ್ವಜ್ಞ.॥ ಸತ್ಯವಂತರು ಸತ್ತರೂ ಅವರ ತತ್ವಗಳು ಜಗತ್ತಿಗೆ ಮಾರ್ಗದರ್ಶಿಗಳಾಗಿರುವದರಿಂದ ಜಗತ್ತು ನಡೆದಿರುತ್ತದೆ. ಸತ್ಯಶಾಲಿಗಳು ಸುಳ್ಳು ಹೇಳಿದರೆ ಈ ಜಗತ್ತು ಉಳಿಯಲು ಶಕ್ಯವಿಲ್ಲ. ಅಂತೆಯೇ ಸರ್ವಜ್ಞನು ಇನೊಂದು ವಚನದಲ್ಲಿ ಹೇಳಿರುವದೇನಂದರೆ "ಸತ್ಯರು ಹುಸಿದೊಡೆ। ಒತ್ತಿ ಹರಿದೊಡೆ ಶರಧಿ। ಉತ್ತಮರು ತಪ್ಪಿನಡೆದರೆ ಲೋಕವಿನ್ನೆತ್ತ ಸಾರುವದು ಸರ್ವಜ್ಞ॥ ಸುಳ್ಳು ಹೇಳಿ ಜನರು ಕೆಲಕಾಲ ಸುಖವಾಗಿ ಜೀವಿಸಬಹುದು. ಆದರೆ ಮುಂದೆ ಅವರ

ಬಹುತರ ಎಲ್ಲ ದೇವಾಲಯುಗಳ ಸುತ್ತಲೂ ಗೋಡೆಗಳು ಎತ್ತರವಾ ಗಿದ್ದು ಹೊರಗಿನಿಂದ ಕಟ್ಟಡಗಳು ದೇವಾಲಯುಗಳೆಂದು ಸಹ ಗುರುತಿ ಸುವಂತಿರುವದಿಲ್ಲ. ಅವುಗಳಲ್ಲಿ ಸ್ಥಾಪಿಸಲ್ಪಟ್ಟ ದೇವತೆಗಳು ಭೂಮಿಯು ಒಳಗೆ ತಗ್ಗಿನಲ್ಲಿ, ಕೂಡಲೆ ಕಣ್ಣಿಗೆ ಬೀಳದಂಥ ಸ್ಥಳಗಳಲ್ಲಿರುತ್ತವೆ. ಈ ಜಿಲ್ಲೆಯಲ್ಲಿಯು ಕೆಲವು ದೇವಾಲಯುಗಳ ಗರ್ಭಗುಡಿಗಳ ಮುಂದೆ ಸಂರಕ್ಷಣೆಗಾಗಿ ಅಡ್ಡಗೋಡೆಗಳನ್ನು ಕಟ್ಟಿದ್ದಾಗಿದೆ. ೧ ಅವು ಇನ್ನೂ ಹಾಗೆಯೇ ಇವೆ. ಕೆಲವು ದೇವಾಲಯುಗಳಲ್ಲಿಯು ದೈವತವನ್ನು ಮುಖ್ಯ ಸ್ಥಾನದಿಂದ ತೆಗೆದುಹಾಕಿ ಕಟ್ಟಡದ ಮಹತ್ವವಲ್ಲದ ಭಾಗಗಳಲ್ಲಿ ಕುಳ್ಳಿ ರಿಸಿದ್ದು ತೋರಿಬರುತ್ತದೆ. ೨ ಪೂಜ್ಯರಾದ ಮಠಾಧಿಪತಿಗಳ ಸಮಾಧಿ ಗಳು ಮುಸಲ್ಮಾನರ ಗೋರಿಗಳ ಹಾಗೆ ತೋರುವಂತೆ ಕಟ್ಟಲ್ಪಟ್ಟಿವೆ. ದೇವಾಲಯುಗಳಲ್ಲಿರುವ ಸುಂದರವಾದ ಮೂರ್ತಿಗಳ ಅವಯುವಗಳು ಭಿನ್ನ ಮಾಡಲ್ಪಟ್ಟಿವೆ. ೩ ಪಂಢರಪುರದಲ್ಲಿಯು ವಿಠ್ಠಲನ ಮೂರ್ತಿಯು ವಿಜಯುನಗರಕ್ಕೆ ಸ್ಥಳಾಂತರ ಮಾಡಲ್ಪಟ್ಟಿತು. ಈ ಎಲ್ಲ ಸಂಗತಿಗಳು ಉತ್ತರ ಕರ್ನಾಟಕಕ್ಕೊದಗಿದ ದುರವಸ್ಥೆಯುನ್ನು ತೋರಿಸುತ್ತವೆ. ಈ ಸ್ಥಿತಿಯು ಇಲ್ಲಿರುವ ವೀರಶೈವರಿಗೂ ಪ್ರಾಪ್ತವಾದದ್ದು ಮೇಲೆ ಹೇಳಿದ ಉದಾಹರಣೆಗಳಿಂದಲೇ ಕಂಡುಬರುತ್ತದೆ.

ಆದರೆ ಬಹುಜನ ಸಮಾಜದಲ್ಲಿ ಬೇರೂರಿದ ಸಂಸ್ಕೃತಿಯುನ್ನು ಕಿತ್ತುಹಾಕಲಿಕ್ಕೆ ಬಹು ಕಾಲವು ಬೇಕು. ಬಲಾತ್ಕಾರದ ವರ್ತನೆಯಿಂದ ಇದು ಸಾಧ್ಯವಾಗಲಾರದು. ಉತ್ತರ ಕರ್ನಾಟಕದ ಪ್ರತಿಯೊಂದು ಪಟ್ಟಣ ಮತ್ತು ಹಳ್ಳಿಯುಲ್ಲಿ ವೀರಶೈವರ ದಟ್ಟವಾದ ವಸತಿ ಇದೆ. ಮತ್ತು ಅವುಗಳಲ್ಲಿ ಅವರ ಗುರುಸ್ಥಲದ ಮತ್ತು ವಿರಕ್ತಾಶ್ರಮಿಗಳ ಮಠಗಳಿರುತ್ತವೆ. ವೀರಶೈವ ಸಮಾಜದ ಕಟ್ಟು ಈ ಮಠಗಳಿಗೆ ಬಹಳ ಸಂಬಂಧಪಟ್ಟದ್ದಿರುತ್ತದೆ. ಮುಸಲ್ಮಾನ ಧರ್ಮವು ಗ್ರಾಮಾಂತರಗಳಲ್ಲಿ ಪ್ರಸಾರಹೊಂದಲಿಕ್ಕೆ ಈ ಮಠಗಳಿಂದ ಬಲವಾದ ತಡೆಯುಂಟಾಯಿತು. ಯಾವ ಧರ್ಮದಲ್ಲಿ ವ್ಯವಸ್ಥಿತ ಸಮಾಜ ರಚನೆಯೂ ಉಚ್ಚ ವಾಙ್ಮ ಯುವೂ ಇರುತ್ತವೆಯೋ ಆ ಧರ್ಮದ ತಳಹದಿಯು ಯಾವಾಗಲೂ ಭದ್ರ

---

(೧) ದೇವರಹಿಪ್ಪರಿಗೆಯು ಮಲ್ಲಿಕಾರ್ಜುನ ದೇವಾಲಯು. (೨) ರೇವಣಸಿದ್ಧೇಶ್ವರನ ಸ್ಥಾನವಾದ ಹೊರ್ತಿಯು ಸಿದ್ಧೇಶ್ವರ ದೇವಾಲಯು. ಬಾಗೇವಾಡಿಯು ಬಸವೇಶ್ವರನ ದೇವಾಲಯು. (೩) ಬದಾಮಿಯುಲ್ಲಿಯು ದೇವಾಲಯುಗಳು.

ವಾಗಿರುತ್ತದೆ. ಅಲ್ಲದೆ ಕರ್ನಾಟಕದಲ್ಲಿ ನುಗ್ಗಿದ ಮುಸಲ್ಮಾನರ ಸಂಖ್ಯೆಯು ಬಹಳ ಕಡಿಮೆ ಪ್ರಮಾಣದಿಂದಿದ್ದಿತು. ಅವರು ಬಹುತರವಾಗಿ ದಂಡಿನ ಠಾಣ್ಯಗಳಲ್ಲಿ ಮತ್ತು ದೊಡ್ಡ ಪಟ್ಟಣಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದರು. ಆದ್ದರಿಂದ ಅವರ ಧಾರ್ಮಿಕ ಚಟುವಟಿಕೆಗಳು ಗ್ರಾಮಾಂತರಗಳಲ್ಲಿ ಪಸರಿಸಿ ಅಲ್ಲಿಯ ಜನರ ಮೇಲೆ ಪರಿಣಾಮ ಮಾಡಲಿಕ್ಕೆ ತೊಂದರೆಗಳಾದವು.

ಇದಲ್ಲದೆ ಮುಸಲ್ಮಾನರಲ್ಲಿ ಧರ್ಮಾಂಧತೆಯು ಹೆಚ್ಚಾಗಿ ತೋರಿಬರಹತ್ತಿದ್ದು ಮುಖ್ಯವಾಗಿ ಬಾಮನಿ ಬಾದಶಹರ ಆರಂಭ ಕಾಲದಲ್ಲಿ. ಆದರೆ ಇದು ಇವರಲ್ಲಿ ಬರಬರುತ್ತ ಕಡಿಮೆಯಾಗುತ್ತ ನಡೆಯಿತು. ಮುಂದೆ ಇವರ ರಾಜ್ಯದಲ್ಲಿ ಐದು ಸ್ವತಂತ್ರ ವಿಭಾಗಗಳಾದವು. ಆಗ ದೇಶದಲ್ಲಿ ಹೊಸ ಪರಿಸ್ಥಿತಿಯುಂಟಾಯಿತು. ಈ ವಿಭಾಗಗಳನ್ನು ಆಳುತ್ತಿದ್ದ ಮುಸಲ್ಮಾನ ರಾಜರಲ್ಲಿ ಪರಸ್ಪರ ಕದನಗಳು ಯಾವಾಗಲೂ ಸಂಭವಿಸಹತ್ತಿದವು. ಆದ್ದರಿಂದ ಅವರು ತಮ್ಮ ತಮ್ಮ ಭಾಗಗಳಲ್ಲಿಯ ಬಹುಜನ ಸಮಾಜದ ಪ್ರೀತಿ ವಿಶ್ವಾಸಗಳನ್ನು ಪಡೆದು ತಮ್ಮ ರಾಜ್ಯವನ್ನು ನಡಿಸಬೇಕಾಗಹತ್ತಿತು. ಇದರಿಂದ ಅವರ ಧರ್ಮಪ್ರಸಾರ ಕಾರ್ಯದಲ್ಲಿ ತಡೆಯುಂಟಾಗಹತ್ತಿತು. ಈ ಸ್ಥಿತಿಯುಂಟಾಗಲಿಕ್ಕೆ ಇನ್ನೊಂದು ಬಲವಾದ ಕಾರಣವು ಈ ಕಾಲದಲ್ಲಿ ಸಂಭವಿಸಿತು.

ವಿಜಾಪುರ ಬಾದಶಹರ ರಾಜ್ಯದ ಆರಂಭ ಕಾಲದಲ್ಲಿ ಅಂದರೆ ೧೫ನೇ ಮತ್ತು ೧೬ನೇ ಶತಮಾನಗಳಲ್ಲಿ ಮಹಾರಾಷ್ಟ್ರ ಮತ್ತು ಕರ್ನಾಟಕ ದೇಶಗಳಲ್ಲಿ ಒಂದು ಮಹತ್ತರವಾದ ಧರ್ಮಕ್ರಾಂತಿಯುಂಟಾಯಿತು. ಮಹಾರಾಷ್ಟ್ರದಲ್ಲಿ ಅಸಂಖ್ಯ ಸಾಧುಸಂತರು ಉಗಮಿಸಿದರು. ಅವರು ಅಲ್ಲಿಯ ಹಿಂದುತ್ವವನ್ನು ಕಾಯ್ದರು. ಅದರಂತೆ ಕರ್ನಾಟಕದಲ್ಲಿ ೧೦೧ ವಿರಕ್ತರೂ, ತೋಂಟದಾರ್ಯರೂ ಉಗಮಿಸಿ ಒಂದು ಬಲವಾದ ಧಾರ್ಮಿಕ ಚಳವಳಿಯನ್ನು ಮಾಡಿದ್ದಲ್ಲದೆ ವೀರಶೈವ ಸಮಾಜದಲಿ ಒಂದು ಸಂಘಟನೆಯನ್ನುಂಟು ಮಾಡಿದರು. ಆಗ ವಚನಕಾರರ ಉದಾರ ವಿಚಾರಗಳು ಪ್ರಬಲವಾಗಹತ್ತಿದವು. ಉತ್ತರಕರ್ನಾಟಕದಲ್ಲಿಯೂ ಕೂಡ ಈ ಚಳವಳಿಯು ಪಸರಿಸಿತು. ವೀರಶೈವರಲ್ಲಿ ಅತ್ಯಂತ ಪ್ರಸಿದ್ಧನಾದ ಮೊಗ್ಗೆಯ ಮಾಯಿದೇವನು ಐಹೊಳೆಯವನು. ಪ್ರೌಢರಾಯನ ಕಾವ

ವನ್ನು ಬರೆದ ಅದ್ರೇಶನು ಬಾಗೇವಾಡಿಯ ತಾಲೂಕಿನಲ್ಲಿರುವ ಕೊಲ್ಹಾರ ದವನು. ಇದೇ ಕಾಲಕ್ಕೆ ಸಾರಂಗದೇವರೂ ಇವರ ತರುವಾಯ ಅಧಿಕಾರಹೊಂದಿದ ಇಬ್ಬರು ಮಠಾಧೀಶ್ವರರೂ ಕೂಡಲಸಂಗಮ ಕ್ಷೇತ್ರದಲ್ಲಿ ನಿಂತುಕೊಂಡು ಉತ್ತರ ಮತ್ತು ಮಧ್ಯ ಕರ್ನಾಟಕ ಪ್ರದೇಶಗಳಲ್ಲಿಯೂ, ದ್ರಾವಿಡ ದೇಶದಲ್ಲಿಯೂ ಮಹತ್ವದ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದರು. ಈ ಪ್ರಯತ್ನಗಳ ಮೂಲಕ ಮುಸಲ್ಮಾನ ಧರ್ಮದ ಪ್ರಸಾರವು ಈ ಭಾಗದಲ್ಲಿ ಕಡಿಮೆಯಾಯಿತು.

೧೫೮೫ ರಲ್ಲಿ ಚನ್ನಬಸವ ಪುರಾಣವನ್ನು ಬರೆದ ವಿರೂಪಾಕ್ಷ ಪಂಡಿತನು ಈ ಸಾರಂಗದೇವರನ್ನು ತನ್ನ ಗ್ರಂಥದಲ್ಲಿ ಸ್ತುತಿಸಿದ್ದಾನೆ. ಆದ್ದರಿಂದ ಅವರು ಇದಕ್ಕೂ ಮೊದಲಿನವರೆಂದು ಸಿದ್ಧವಾಗುತ್ತದೆ. ಇವರು ಅನೇಕ ದೇಸಾಯರನ್ನು ಸಂದರ್ಶಿಸಿ ಅವರಿಗೆ ವೀರಶೈವ ಮತವನ್ನು ಬೋಧಿಸಿದ್ದೂ ಅವರಿಂದ ಮನ್ನಣೆಯನ್ನು ಹೊಂದಿದ್ದೂ ಅವರ ಚರಿತ್ರೆಯಿಂದ ತಿಳಿದುಬರುತ್ತದೆ. ಈ ದೇಸಗತಿಗಳ ಮುಖಾಂತರ ರಾಜ್ಯಭಾರ ಮಾಡುವ ಪದ್ಧತಿಯನ್ನು ಮೊದಲು ನೆಲೆಗೊಳಿಸಿದವರು ವಿಜಾಪುರದ ಆದಿಲ್‌ಶಾಹೀ ಬಾದಶಹರು. ಅವರಕಿಂತ ಮೊದಲು ದೇಸಗತಿಗಳು ಎಲ್ಲಿಯೂ ಇರಲಿಲ್ಲ. ಈ ಬಾದಶಹರು ೧೪೮೯ ರಿಂದ ಆಳಹತ್ತಿದ್ದರಿಂದ ಈ ವರ್ಷದ ತರುವಾಯ ಸಾರಂಗದೇವರು ಪ್ರಸಿದ್ಧಿಗೆ ಬಂದಿರಬೇಕೆಂದು ತೋರುತ್ತದೆ.[೧] ಆದ್ದರಿಂದ ಇವರು ೧೦೧ ವಿರಕ್ತರ ಅಥವಾ ತೋಂಟದಾರ್ಯರ ಸಮಕಾಲೀನರೆಂದು ಅನುಮಾನ ಮಾಡಬಹುದಾಗಿದೆ.

ಸಾರಂಗದೇವರು ತಮ್ಮ ಜೀವಿತದ ಕಾಲದಲ್ಲಿ ಅನೇಕ ರಾಜರಿಂದಲೂ ರಾಜಕೀಯ ಮಹಾಪುರುಷರಿಂದಲೂ ಮನ್ನಣೆಯನ್ನು ಹೊಂದಿದರು. ಆದ್ದರಿಂದ ಇವರನ್ನು ಕುರಿತು ಇಲ್ಲಿ ಹೆಚ್ಚಿಗೆ ವಿವರಿಸುವದು ಅವಶ್ಯವಿದೆ.

---

(೧) ಇವರ ಚರಿತ್ರ ಗ್ರಂಥವು ಕೂಡಲಸಂಗಮದಲ್ಲಿದ್ದ ಕಪ್ಪಡಿ ಸಾರಂಗಮಠ ಮತ್ತು ಗುಳೇದಗುಡ್ಡದಲ್ಲಿಯ ಸಾರಂಗಮಠ ಇಲ್ಲಿ ಉಪಲಬ್ಧವಿದ್ದು ಅವುಗಳ ಆಧಾರದಿಂದ ನಾವು ಶಿವಾನುಭವ ಸಂಪುಟ ೬ ಸಂಚಿಕೆ ೨ ಪುಟ ೭೩ ಇದರಲ್ಲಿ ಲೇಖ ಬರೆದದ್ದನ್ನು ನಾವು ಆಧಾರವಾಗಿಟ್ಟುಕೊಂಡು ಮುಂದಿನ ವಿವರಣೆಗಳನ್ನು ಇಲ್ಲಿ ವಿವರಿಸಿದ್ದೇವೆ.ವೆ. —ಗ್ರಂಥಕರ್ತ.

ಸಾರಂಗದೇವರು ಶ್ರೀಶೈಲಪರ್ವತದಲ್ಲಿ ಕೆಲಕಾಲ ವಾಸಿಸಿ ಮುಂದೆ ಅವರು ದ್ರಾವಿಡ ದೇಶಕ್ಕೆ ಬಂದು ಅಲ್ಲಿ ಪುಲಿಚೆರೆ (ಈಗಿನ ಪಾಂಡಿಚೆರಿ) ಯ ಅರಸನಿಂದ ಸನ್ಮಾನವನ್ನು ಹೊಂದಿ ಅವನಿಗೆ ವೀರಶೈವ ದೀಕ್ಷೆಯನ್ನಿತ್ತು ಅವನಿಂದ ಕುಂಭಕೋಣದಲ್ಲಿ ಒಂದು ಮಹತ್ವದ ಮಠವನ್ನೂ ಉಂಬಳಿಯನ್ನೂ ಪಡೆದರು. ಈ ಮಠವು ಮುಂದೆ ಬಹಳ ಉನ್ನತಾವಸ್ಥೆಯನ್ನು ಹೊಂದಲು ತಮಿಳು ಮತ್ತು ಮಲಬಾರ ಪ್ರಾಂತಗಳಲ್ಲಿಯ ಅನೇಕ ಸಮಾಜಗಳು ಅದರ ಶಿಷ್ಯತ್ವವನ್ನು ವಹಿಸಿದವು. ಮುಂದೆ ಸಾರಂಗದೇವರು ತುಮುಕೂರಿಗೆ ಬಂದು ಅಲ್ಲಿ ಕೆಲ ದಿನವಿದ್ದು ಮುಂದೆ ಅವರು ಕಪ್ಪಡಿಸಂಗಮೇಶ್ವರನಲ್ಲಿಗೆ ಬಂದು ಅಲ್ಲಿ ಒಂದು ಮಠವನ್ನು ಸ್ಥಾಪಿಸಿ ಅಲ್ಲಿಯೇ ವಾಸಮಾಡಹತ್ತಿದರು. ಅವರು ಈ ಪ್ರಾಂತದಲ್ಲಿ ಧರ್ಮಬೋಧೆ ಮಾಡುತ್ತ ಸಂಚರಿಸುತ್ತ ಕಾಲಕಳೆದರು. ಅವರು ಆಲಮೇಲ, ಅಬ್ದುಲ್‌ಪುರ, ಸಿಂದಗಿ, ಬಾಗೇವಾಡಿ, ಬೆಳ್ಳುಬ್ಬಿ, ಕೊಲ್ಹಾರ, ಯರ್ಜರಿ, ಹುನಗುಂದ, ಕೆಲೂರು ಈ ಸ್ಥಳಗಳಿಗೆ ಆಗಮಿಸಿ ಅಲ್ಲಿಯ ಜನರನ್ನೂ ದೇಸಗತಿ ಗ್ರಾಮುಗಳಾದ ಆಲಮೇಲ, ಕೊಲ್ಹಾರ, ಯರ್ಜರಿ, ಹುನಗುಂದ, ಕೆಲೂರು ಇಲ್ಲಿಯ ದೇಸಾಯರನ್ನೂ ಕಂಡು ಅವರಿಂದ ಮನ್ನಣೆಯನ್ನು ಹೊಂದಿದ್ದೂ ಮುಂದೆ ಹಾಗೆಯೇ ಅವರು ನಿಜಾಮನ ರಾಜ್ಯದಲ್ಲಿಯ ಕುಷ್ಟಿಗಿ ತಾಲೂಕಿನಲ್ಲಿಯ ಚಳ್ಳಗಿರಿ ದೇಸಾಯರಿಗೆ ದೀಕ್ಷೆಯನ್ನು ಕೊಟ್ಟು ಆನೆಗುಂದಿಗೆ ಬಂದು ಅಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದೂ ಅವರ ಚರಿತ್ರೆಯಿಂದ ತಿಳಿದುಬರುತ್ತಿದೆ. ಕಡೆಗೆ ಅವರು ಕಪ್ಪಡಿಸಂಗಮೇಶ್ವರನ ದೇವಾಲಯದ ಸ್ಥಾನದಲ್ಲಿಯೇ ಸಮಾಧಿಸ್ಥರಾದರು.

ಅವರ ತರುವಾಯ ಅವರ ತಮ್ಮನ ಮಗನಾದ ಶಿವಸಂಗಪ್ಪಯ್ಯನೆಂಬವರು ಮಠಾಧಿಕಾರಿಗಳಾದರು. ಇವರೂ, ಬಾಳೇಹಳ್ಳಿ ಸಿಂಹಾಸನಾಧಿಪತಿಗಳಾದ ಚನ್ನವೀರಸ್ವಾಮಿಗಳೂ, ಪರ್ವತ ಸಿಂಹಾಸನಾಧಿಪತಿಗಳಾದ ವೀರಭಿಕ್ಷಾವರ್ತಿಗಳೂ, ಕೊಟ್ಟೂರು ಗ್ರಾಮದಲ್ಲಿ ಸೇರಿ ಹರಪನಹಳ್ಳಿಯ ಸಂಸ್ಥಾನದ ದೊರೆಗೆ ವೀರಶೈವ ದೀಕ್ಷೆಯನ್ನು ಕೊಟ್ಟರು. ಸಾರಂಗ ಮಠಾಧೀಶ್ವರರು ಪಂಚಾಚಾರ್ಯರಲ್ಲಿ ಒಬ್ಬರಾದ ಮರುಳಸಿದ್ಧೇಶ್ವರ ಪೀಠದ ಅನುವರ್ತಿಗಳಾಗಿದ್ದರೆಂದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ.

ಶಿವಸಂಗಪ್ಪ ಇವರ ತರುವಾಯ ಅವರ ಮಗನಾದ ಸಣ್ಣಸಾರಂಗೇಶ್ವರರು ಅಧಿಕಾರಾರೂಢರಾದರು. ಅವರು ಬಹಳ ವಿದ್ಯಾವಂತರಾಗಿದ್ದರು. ಅವರು ಮೂಲಸಾರಂಗೇಶ್ವರರಂತೆಯೇ ಅನೇಕ ಮಹತ್ಕಾರ್ಯಗಳನ್ನು ಈ ಕಾಲದಲ್ಲಿ ಮಾಡಿದರು. ಅವರು ಹರಪನಹಳ್ಳಿಯ ದೊರೆಯ ಸನ್ನಿಧಿಯಲ್ಲಿ ವೀರಶೈವ ಮತದ ಹೆಚ್ಚುಳವನ್ನು ಕುರಿತು ಇತರ ಮತಸ್ಥರೊಡನೆ ಪ್ರಸ್ತಾಪಿಸಿ, ಅರಸನಿಗೆ ಮತಬೋಧೆ ಮಾಡಿ, ಮುಂದೆ ಕೆಲವು ದಿನ ಕಾಶಿಯಲ್ಲಿ ಕಳೆದು, ಸಂಗಮಸ್ಥಾನಕ್ಕೆ ತಿರುಗಿ ಬಂದು, ಅಲ್ಲಿಂದ ಬಾಗಲಕೋಟೆಯ ದೇಸಾಯಿ ಸರನಾಡಗೌಡರನ್ನು ಕಂಡು, ಕಮತಿಗಿ, ಐಹೊಳೆ, ಪಟ್ಟದಕಲ್ಲು ಇಲ್ಲಿಯ ಬೇಡರ ದೊರೆಗಳಿಗೆ ವೀರಶೈವ ದೀಕ್ಷೆಯನ್ನಿತ್ತು ಉಪ್ಪಲದಿನ್ನಿ, ಬೀಳಗಿ, ಶಿರೂರ ಈ ಮೊದಲಾದ ಅನೇಕ ಗ್ರಾಮಗಳಿಗೆ ಹೋಗಿ ಬೋಧೆ ಮಾಡಿದರು. ಇವರ ಹಸ್ತದಿಂದಲೇ ಗುಳೇದಗುಡ್ಡ ಗ್ರಾಮವು ಮೊದಲು ಸ್ಥಾಪಿತವಾಯಿತು.

ಸಾರಂಗಮಠದ ಈ ಮೂವರು ಧರ್ಮಾಧಿಕಾರಿಗಳ ಪ್ರಯತ್ನಗಳಿಂದ ಉತ್ತರ ಕರ್ನಾಟಕದಲ್ಲಿದ್ದ ಬಹುಜನ ದೇಸಾಯರು ನಾಡಗೌಡರು ವೀರಶೈವ ಧರ್ಮಕ್ಕೆ ದೃಢವಾಗಿ ಹೊಂದಿದ್ದಲ್ಲದೆ ಇತರ ಧರ್ಮೀಯರು ಸಹ ಈ ಧರ್ಮದಲ್ಲಿ ಸೇರ್ಪಡೆಯಾದರು. ಇದರಿಂದ ಸಾರಂಗದೇವರು 'ದೇಸಾಯಿಗುರು' ಎಂಬ ಬಿರುದನ್ನು ಹೊಂದಿದವರಾದರು. ಈ ಕಾಲದಲ್ಲಿ ದೇಸಾಯಿಗಳು ಬಹುಜನಸಮಾಜದ ಮೇಲೆ ಅತ್ಯಂತ ವರ್ಚಸ್ಸುಳ್ಳವರು. ವಿಜಾಪುರ ಬಾದಶಹರ ಕಾಲದಲ್ಲಿ ಅವರೇ ದಂಡಾಳುಗಳನ್ನು ಕೂಡಿಸಿ ಯುದ್ಧಗಳಲ್ಲಿ ಅವರಿಗೆ ಸಹಾಯವಾಗುತ್ತಿದ್ದರು. ಆದ್ದರಿಂದ ಅವರಲ್ಲಿ ಈ ಬಾದಶಹರು ಅಪ್ರೀತಿಯನ್ನುಂಟು ಮಾಡುವ ಸಂಭವವಿದ್ದಿಲ್ಲ. ಇವರು ಈ ಪ್ರಕಾರ ವೀರಶೈವಧರ್ಮನಿರತರಾದದ್ದರಿಂದ ಗ್ರಾಮಾಂತರಗಳಲ್ಲಿ ಮುಸಲ್ಮಾನ ಧರ್ಮವು ಪ್ರಸಾರ ಹೊಂದಲಿಕ್ಕೆ ಬಲವಾದ ತಡೆಯುಂಟಾಯಿತು. ಬೇರೆ ಪ್ರಾಂತಗಳಲ್ಲುಂಟಾದಂತೆ ಒಂದುವೇಳೆ ಈ ದೇಸಗತಿಯವರು ಮುಸಲ್ಮಾನರ ವರ್ಚಸ್ಸಿಗೆ ಒಳಗಾಗಿ ಧರ್ಮಾಂತರ ಮಾಡಿದ್ದರೆ ಮುಸಲ್ಮಾನ ಧರ್ಮವು ಗ್ರಾಮಗಳಲ್ಲೆಲ್ಲ ಒತ್ತರದಿಂದ ಪ್ರಸಾರವಾಗುತ್ತಿತ್ತು. ಆದರೆ ಸಾರಂಗಮಠದಲ್ಲಿದ್ದ ಮೂವರು ಅಧಿಕಾರಿಗಳು ಮೂರು ತಲಾಂತರ ಧಾರ್ಮಿಕ ವರ್ಚಸ್ಸುಳ್ಳವರಾಗಿದ್ದ ಮೂಲಕ ಉತ್ತರ ಕರ್ನಾಟಕದಲ್ಲಿ ಈ ಸ್ಥಿತಿಯುಂಟಾಗಲಿಲ್ಲ. ಹೀಗೆ ದಕ್ಷಿಣ ಕರ್ನಾ

ಟಕದಲ್ಲಿ ತೋಂಟದಾರ್ಯರು ಮತ್ತು ಉತ್ತರ ಕರ್ನಾಟಕದಲ್ಲಿ ಸಾರಂಗ ದೇವರು ಈ ಕಾಲದಲ್ಲಿ ವೀರಶೈವ ಧರ್ಮವನ್ನು ಕಾಯ್ದಿದ್ದಾರೆ.

ಸಾರಂಗದೇವರು ರಾಜಕೀಯ ಪುರುಷರ ಮೇಲೆ ತಮ್ಮ ಧಾರ್ಮಿಕ ವರ್ಚಸ್ಸನ್ನು ಕೆಡಹಿದವರಾಗಿದ್ದರೆ, ಅವರ ಕಾಲದಲ್ಲಿ ಅಥವಾ ಅವರ ಕಿಂತಲೂ ಸ್ವಲ್ಪ ಪೂರ್ವದಲ್ಲಿ ಉತ್ತರ ಕರ್ನಾಟಕದ ಪಶ್ಚಿಮ ಮತ್ತು ಪೂರ್ವ ಭಾಗಗಳಲ್ಲಿ ಕೆಲವು ಮಹತ್ವದ ಮಠಗಳು ಉದಯವಾಗಿ ಜನತೆಯಲ್ಲಿ ವೀರಶೈವ ಧರ್ಮವನ್ನು ಸ್ಥಿರಪಡಿಸಿದವು. ಪಶ್ಚಿಮ ಭಾಗ ದಲ್ಲಿ ಶ್ರೀ ಕಾಡಸಿದ್ಧೇಶ್ವರರ ಅನೇಕ ಮಠಗಳೂ ಪೂರ್ವ ಭಾಗದಲ್ಲಿ ಅಮರೇಶ್ವರ, ಕಲ್ಯಾಣ ಮೊದಲಾದ ಕಡೆಗೆ ಉಂಟಾಗಿದ ಸಾವಿರದೇವರ ಮಠಗಳೂ ಗ್ರಾಮಾಂತರಗಳಲ್ಲಿದ್ದ ಅನೇಕ ವಿರಕ್ತ ಮತ್ತು ಗುರುಸ್ಥಲದ ಮಠಗಳೂ ಈ ಕಾರ್ಯ ಮಾಡಿರುತ್ತವೆ. ದಕ್ಷಿಣ ಕರ್ನಾಟಕ ಭಾಗ ದಲ್ಲಿ ತೋಂಟದಾರ್ಯರೂ ಅವರ ಮುಂದಿನವರೂ ಆದರ ಪೂರ್ವ ಭಾಗ ದಲ್ಲಿ ಅನಂತಪುರ ಜಿಲ್ಹೆಯಲ್ಲಿರುವ ಉರುಕೊಂಡೆ ಮತ್ತು ಕೋಲಾರ ಜಿಲ್ಲೆ ಯಲ್ಲಿರುವ ಗೂಳೂರು ಇಲ್ಲಿಯ ಮಠಾಧೀಶ್ವರರಲ್ಲನೇಕರೂ ಸಾಮಾನ್ಯ ಜನತೆಯ ಮೇಲೆಯೂ ಇಲ್ಲಿ ಉತ್ಪನ್ನರಾದ ತೆಲುಗು ಪಾಳ್ಯಗಾರರ ಮೇಲೆಯೂ ತಮ್ಮ ಧಾರ್ಮಿಕ ವರ್ಚಸ್ಸನ್ನು ಬೀರಿದ್ದಾರೆ. ಕರ್ನಾ ಟಕದ ಮಧ್ಯದೇಶದಲ್ಲಿ ಸಂಗಮದ ಸಾರಂಗಮಠಾಧೀಶ್ವರರೊಡನೆ ಉಜ್ಜಿನಿ ಮತ್ತು ಬಾಳೇಹಳ್ಳಿ ಸಿಂಹಾಸನಾಧಿಪತಿಗಳೂ ದ್ರಾವಿಡ ಮತ್ತು ಮಲಯಾಳ ಭಾಗಗಳಲ್ಲಿ ಕುಂಭಕೋಣಂದಲ್ಲಿರುವ ಸಾರಂಗಮಠಾ ಧೀಶ್ವರರೂ ಧರ್ಮೋದ್ಧಾರ ಕಾರ್ಯ ಮಾಡಿದ್ದಾರೆ. ಇವರೆಲ್ಲರು ವಿಶಾಲ ಮನಸ್ಕರಾಗಿ ದೇಶದಲ್ಲಿ ಉಂಟಾದ ಮುಸಲ್ಮಾನರ ಪ್ರಾಬಲ್ಯದ ಕಾಲ ದಲ್ಲಿ ವೀರಶೈವ ಸಂಸ್ಕೃತಿಯನ್ನು ಎತ್ತಿ ಹಿಡಿದಿದ್ದಾರೆ.

---

# ೧೨ನೇ ಪ್ರಕರಣ.

## ೧೬ನೇ ಮತ್ತು ೧೭ನೇ ಶತಮಾನಗಳಲ್ಲಿ ವೀರಶೈವ ಸಂಸ್ಕೃತಿಯು.

ಕರ್ನಾಟಕದಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದ ವಿಜಯನಗರದ ಅರಸರು ೧೬ನೇ ಶತಮಾನದಲ್ಲಿ ಮತ್ತು ಆದಿಲ್‌ಶಾಹೀ ಬಾದಶಹರು ೧೭ನೇ ಶತಮಾನದಲ್ಲಿ ನಷ್ಟಹೊಂದಿದ ತರುವಾಯ ಇಡೀ ದೇಶವನ್ನು ಏಕೀಕೃತಮಾಡಿ ರಾಜ್ಯವಾಳುವ ಸಾಮರ್ಥ್ಯವನ್ನು ಹೊಂದಿದ ಯಾವ ಮಹಾಪುರುಷನೂ ಉದಯವಾಗಲಿಲ್ಲ. ಇಡೀ ನಾಡಿನಲ್ಲಿ ಸಣ್ಣ ಸಣ್ಣ ಪಾಳೆಯಗಾರರೂ ದೇಸಗತಿಗಳನ್ನಾಳುವವರೂ ಉದ್ಭವಿಸಿದರು. ಅವರೆಲ್ಲರೂ ತಾವು ಆಕ್ರಮಿಸಿದ ಭಾಗಗಳನ್ನಷ್ಟೇ ಸ್ವತಂತ್ರತೆಯಿಂದ ಆಳಹತ್ತಿದರು. ಇದರಿಂದ ದೇಶದಲ್ಲಿ ಅವ್ಯವಸ್ಥೆಯುಂಟಾಗಿ ಕರ್ನಾಟಕದ ಸಂಸ್ಕೃತಿಯು ಲೋಪವಾಗಿರಬಹುದೆಂದು ಅನೇಕರು ಎಣಿಸಬಹುದು. ಆದರೆ ಈ ಸ್ಥಿತಿಯುಂಟಾಗದೆ ಸಾಮಾನ್ಯ ಜನರು ಶಾಂತತೆಯಿಂದಲೂ ಸುಸ್ಥಿತಿಯಿಂದಲೂ ಇದ್ದದ್ದಲ್ಲದೆ ವಾಙ್ಮಯಾತ್ಮಕ ಚಟುವಟಿಕೆಗಳೂ ಕೂಡ ಈ ಕಾಲದಲ್ಲಿ ಭರದಿಂದ ನಡೆದಿದ್ದು ಕಂಡುಬರುತ್ತದೆ. ಈ ಸಂಗತಿಗಳು ಈಗಿನ ಮತ್ತು ಮುಂದಿನ ಪ್ರಕರಣಗಳಲ್ಲಿ ನಿರೂಪಿಸಲ್ಪಡುವವು.

೧೨ನೇ ಶತಮಾನದಲ್ಲಿ ಬಸವೇಶ್ವರಾದಿ ಶಿವಶರಣರು ಉದ್ಭವಿಸಿ ವಚನವಾಙ್ಮಯದ ಮೂಲಕ ದೇಶದಲ್ಲೆಲ್ಲ ಧರ್ಮಜಾಗ್ರತಿಯನ್ನುಂಟು ಮಾಡಿದರು. ಇದು ವೀರಶೈವ ಧರ್ಮದ ಪ್ರಸಾರದ ಕಾಲವು. ಮುಂದೆ ಮುಸಲ್ಮಾನರು ಕರ್ನಾಟಕದ ಮೇಲೆ ದಾಳಿ ಇಟ್ಟು ಇಲ್ಲಿ ತಮ್ಮ ರಾಜ್ಯಗಳನ್ನು ಸ್ಥಾಪಿಸಿದರು. ಆಗ ದೇಶದಲ್ಲಿ ಸ್ವಸ್ಥತೆಯು ಉಳಿಯಲಿಲ್ಲ. ಇದು ಧಾರ್ಮಿಕ ಅವನತಿಯ ಕಾಲವು. ಆದರೆ ಮುಂದೆ ೧೫ನೇ ಶತಮಾನದಲ್ಲಿ ವಿಜಯನಗರದ ರಾಜರ ಆಳಿಕೆಯಲ್ಲಿ ವೀರಶೈವರ ಧಾರ್ಮಿಕ ವಾಙ್ಮಯವು ಪುನಃ ಉಚ್ಚ ಸ್ಥಿತಿಗೆ ಬಂದಿತು. ಇದರ ಪರಿಣಾಮವಾಗಿ ಹೊಸ ಜಾಗ್ರತೆಯು ಬಹು ಜನ ಸಮಾಜದಲ್ಲಿ ಉಂಟಾಯಿತು. ಈ ಜಾಗ್ರತಿಯು ವಿಶೇಷ ತರದ ಸಂಘಟನೆಯನ್ನು ಹೊಂದಿದ್ದರಿಂದ ದೇಶದಲ್ಲಿ ಮಹತ್ವದ ಮಠಗಳು ಉದಯವಾದವು. ಅವುಗಳ

ಪ್ರಭಾವದಿಂದ ಜನತೆಯಲ್ಲಿಯೂ ರಾಜಕೀಯ ಪುರುಷರಲ್ಲಿಯೂ ಉಚ್ಚ ಧಾರ್ಮಿಕ ಭಾವನೆಗಳುಂಟಾದವು. ಇದು ೧೬ ನೇ ಮತ್ತು ೧೭ ನೇ ಶತಮಾನಗಳಲ್ಲಿ ಕಂಡುಬರುತ್ತದೆ. ಹೀಗೆ ಇದು ಮಠಾಧಿಪತಿಗಳ ಯುಗ ವೆಂದು ನಾವು ಹೇಳಬಹುದು.

ಈ ಕಾಲದಲ್ಲಿ ಬಹುಜನ ವೀರಶೈವ ರಾಜಕೀಯ ಪುರುಷರು ದೇಶದಲ್ಲಿ ರಾಜ್ಯವಾಳುತ್ತಿದ್ದದ್ದು ಕಂಡುಬರುತ್ತದೆ. ಅವರಲ್ಲನೇಕರು ಮೊದಲು ವೀರಶೈವೇತರರಿದ್ದರೂ ಹಿಂದುಗಡೆ ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ. ಅವರು ವೀರಶೈವ ಗ್ರಂಥಕಾರರಿಗೆ ಉತ್ತೇಜನಕೊಟ್ಟಿ ದ್ದಾರೆ. ಕೆಲವರು ಗ್ರಂಥಕಾರರೂ ಆಗಿದ್ದಾರೆ. ಈ ಪರಿಣಾಮವ ನ್ನುಂಟು ಮಾಡಿದ್ದು ಈ ಕಾಲದ ವೀರಶೈವ ವಾಙ್ಮಯವು.

೧೪ನೇ ಮತ್ತು ೧೫ನೇ ಶತಮಾನಗಳು ತಾತ್ವಿಕ ಯುಗವೆಂತಲೂ ೧೬ನೇ ೧೭ನೇ ಶತಮಾನಗಳು ಭಕ್ತಿಯ ಯುಗವೆಂತಲೂ ನಾವು ಕರೆಯ ಬಹುದು. ತಾತ್ವಿಕ ಯುಗದಲ್ಲಿ ಷಟ್‌ಸ್ಥಲ ಶಾಸ್ತ್ರದ ತತ್ವಗಳು ಪ್ರಚಾರ ಹೊಂದಿದವು. ಅದನ್ನು ನಾವು ವಚನಕಾರರ ಯುಗವೆಂತಲೂ ಕರೆ ಯಬಹುದು. ಈ ಭಕ್ತಿಯ ಯುಗದಲ್ಲಿ ಹಿಂದಿನ ಕಾಲದ ಶಿವಶರಣರ, ಮಹತ್ವಿಕರ ಮತ್ತು ಮಠಾಧಿಕಾರಿಗಳ ಚರಿತ್ರೆಗಳು ಪ್ರಚುರಹೊಂದಿದವು. ಅವು ಸಾಂಗತ್ಯ, ಷಟ್ಪದಿ, ತ್ರಿಪದಿ ಇವೇ ಮೊದಲಾದವುಗಳ ಮೂಲಕ ನಿರೂಪಿಸಲ್ಪಟ್ಟವು. ಅನೇಕ ತರದ ಸ್ತೋತ್ರಗಳೂ ಪದ್ಯಗಳೂ ಹಾಡು ಗಳೂ ರಚಿಸಲ್ಪಟ್ಟವು. ಇವುಗಳಲ್ಲಿ ಭಕ್ತಿ ರಸವು ಪ್ರಾಧಾನ್ಯವಾಗಿರುತ್ತದೆ. ಆದರೆ ವಚನಶಾಸ್ತ್ರವೂ ಶಿವಾನುಭವ ವಿಷಯದ ತಾತ್ವಿಕ ಗ್ರಂಥರಚನಾ ಪ್ರಯತ್ನಗಳೂ ಹಿಂದೆ ಬಿದ್ದವು. ಆದರೂ ಈ ಕಾಲದಲ್ಲಿ ವಾಙ್ಮಯವು ವಿಧವಿಧವಾದ ರೀತಿಗಳಿಂದ ದೇಶದಲ್ಲಿ ಪ್ರವಹಿಸಿರುತ್ತದೆ. ಈ ರೀತಿಗಳಾವ ವೆಂಬುದನ್ನು ನಾವು ಇಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತೇವೆ.

**ಷಟ್‌ಪದಿ ಕಾವ್ಯಗಳುಃ—** ಷಟ್‌ಪದಿ ಕಾವ್ಯಗಳ ಸಂಖ್ಯೆಯು ಹಿಂದಿನ ಶತಮಾನಗಳಲ್ಲಿ ಅತ್ಯಲ್ಪವಾಗಿದ್ದಿತು. ಆಗ ರಾಘವಾಂಕ, ಭೀಮಕವಿ, ಪದ್ಮಣಾಂಕ ಹೀಗೆ ಹಲಕೆಲವರು ಮಾತ್ರ ಉಪಲಬ್ಧರಿ ದ್ದಾರೆ. ಆದರೆ ಈ ೧೬ನೇ ೧೭ನೇ ಶತಮಾನಗಳಲ್ಲಿ ಅವರು ಬಹು ಸಂಖ್ಯಾಕರಾಗಿ ಉದಯವಾಗಿದ್ದಾರೆ. ಅವರು ಬರೆದ ಗ್ರಂಥಗಳಲ್ಲನೇ

| | | |
|---|---|---|
| ಶ್ರೀ ಅಣ್ಣಪ್ಪ ನವೋಶಿ | ಗುಲ್ಬುರ್ಗಾ | ೫ ರೂ. |
| ಶ್ರೀ ಮಹಾಂತಪ್ಪ ಅಲ್ಲದ | ,, | ೫ ರೂ. |
| ಶ್ರೀ ಪ್ರಭುರಾವ ಗಂದಿಗುಡಿ | ,, | ೫ ರೂ. |
| ಶ್ರೀ ಮೋದಿ ಅ್ಯಂಡ ಕೋ. | ,, | ೫ ರೂ. |
| ಶ್ರೀ ಶಿವಶಂಕರಪ್ಪ ಭೀಮಣ್ಣ | ,, | ೫ ರೂ. |
| ಶ್ರೀ ಶಿವಾನಂದ ಆಯಿಲ್ ಮಿಲ್ | ,, | ೫ ರೂ. |
| ಶ್ರೀ ವೀರಪ್ಪನವರು ಕರವೀರಶೆಟ್ಟರ | ಹುಬ್ಬಳ್ಳಿ | ೫ ರೂ. |
| ಶ್ರೀ ಗಂಗಾಧರಪ್ಪ ಇರಪಣ್ಣವರ | ,, | ೫ ರೂ. |
| ಶ್ರೀ ಈರಪ್ಪ ಇರಪಣ್ಣವರ | ,, | ೨ ರೂ. |
| ಶ್ರೀ ಗಂಗಾಧರಪ್ಪ ಶಂಕರಪ್ಪ ಟೆಂಗಿನಕಾಯಿ | ,, | ೨ ರೂ. |
| ಶ್ರೀ ಶಿವಮೂರ್ತೆಪ್ಪ ಚನಮಲ್ಲಪ್ಪ ಕುಬಸದ | ,, | ೨ ರೂ. |
| ಶ್ರೀ ಬಸಪ್ಪ ಬಸಲಿಂಗಪ್ಪ ಪಾವಟೆ | ,, | ೨ ರೂ. |
| ಶ್ರೀ ಸಂಗಪ್ಪ ಗಂಗಪ್ಪ ಶಿಗ್ಗಲಿ | ,, | ೧ ರೂ. |
| ಶ್ರೀ ಬಸಪ್ಪ ನಾಗಪ್ಪ ಲಕ್ಕೀಮರದ | ,, | ೧ ರೂ. |
| ಶ್ರೀ ಚಂದ್ರಶೇಖರಪ್ಪ ಮಲ್ಲಪ್ಪ ಲಕ್ಕುಂಡಿ | ,, | ೧ ರೂ. |
| ಶ್ರೀ ಗುರಬಸಪ್ಪ ಮಲ್ಲಪ್ಪ ತಡಲಗಿ | ,, | ೧ ರೂ. |
| ಶ್ರೀ ಗುರಸಿದ್ದಪ್ಪ ಬಸೆಟ್ಟೆಪ್ಪ ಆಳಗುಂಡಿಗಿ | ,, | ೧ ರೂ. |
| ಶ್ರೀ ವೀರಭದ್ರಪ್ಪ ಮೂರುಸಾವಿರಪ್ಪ ಕಮಡೊಳ್ಳಿ | ,, | ೨ ರೂ. |
| ಶ್ರೀ ಚಂದ್ರಶೇಖರಪ್ಪ ನಾಗಠಾಣ | ,, | ೫ ರೂ. |
| ಶ್ರೀ ಎಸ್. ಬಿ. ಹಿರೇಮಠ ವಕೀಲ ಹಾವೇರಿ | | ೨೦ ರೂ. |
| ಶ್ರೀ ಸದಾನಂದಪ್ಪ ಗುರಸಿದ್ದಪ್ಪ ಬೊಮ್ಮಣ್ಣ ಕಮಲಾಪೂರ ಜಿ. ಗುಲಬುರ್ಗಾ | | ೫ ರೂ. |
| ಶ್ರೀ ಶಿಣೂರ ರುದ್ರಪ್ಪನವರು | ಯಾದಗಿರಿ | ೨೧ ರೂ. |
| ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಪ್ರಿನ್ಸಿಪಾಲ ಶಂಕರ ಸಂಸ್ಕೃತ ಕಾಲೇಜ ಯಾದಗಿರಿ | | ೧೦ ರೂ. |
| ಶ್ರೀ ಎಸ್. ಆರ್. ಕಂಠಿ ಡಾಕ್ಟರ ,, | | ೧೦ ರೂ. |
| ಶ್ರೀ ಶರಣಪ್ಪ ಎಕ್ಕೆಳ್ಳಿ | ,, | ೧೧ ರೂ. |
| ಶ್ರೀ ಎನ್. ರುದ್ರಪ್ಪ ವಕೀಲರು | ಯಾದಗಿರಿ | ೧೦ ರೂ. |

---




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.
ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೭] ಸಪ್ಟಂಬರ. ೧೯೪೩. [ಸಂಚಿಕೆ (

## ವಿಷಯಾನುಕ್ರಮಣಿಕೆ.


| ವಿಷಯುಗಳು. | ಲೇಖಕರು. | ಪುಟ |
|---|---|---|
| ೧ ಹೂತುಗಾರಿಕೆಯು ವ್ಯವಸ | ಶ್ರೀ. ವೀರಭದ್ರಪ್ಪ ಕೊಪ್ಪಳ ಧಾರವಾಡ | ೩೯೩ |
| ೨ ಪ್ರಾಣಹಿಂಸೆ ಮಾಡಬೇಡ. | ಶ್ರೀ. ಶಿವಮೂರ್ತಿ --- | ೩೯೯ |
| ೩ ಬಸವೇಶ್ವರನ ಚರಿತ್ರೆ | ರಾ॥ ಬ॥ ಪಿ. ಜಿ. ಹಳಕಟ್ಟಿ ವಿಜಾಪುರ | ೪೦೮ |
| ೪ ವೀರಶೈವ ರಾಜಮನೆತನಗಳ ಚರಿತ್ರೆ | ರಾ। ಬ। ಪಿ. ಜಿ. ಹಳಕಟ್ಟಿ. | ೮೫–೯೨ |
| ೫ ಸಂಕೀರ್ಣ ವಚನಗಳು ಭಾ. ೩. | — — — | ೯೨—೯೫ |

# ಶಿವಾನುಭವಕ್ಕೆ ಸಹಾಯ.

ಈಗಿನ ಶಿವಾನುಭವ ಸಂಚಿಕೆಯು ಈ ಪತ್ರಿಕೆಯ ೧೭ನೆಯ ವರ್ಷದ ಕಡೆಯದಾಗಿದೆ. ಅದರ ಮುಂದಿನ ಸಂಚಿಕೆಯಿಂದ ಅದಕ್ಕೆ ೧೮ನೆಯ ವರ್ಷವು ಪ್ರಾರಂಭವಾಗುತ್ತದೆ. ೧೯೨೬ನೇ ಇಸ್ವಿಯಲ್ಲಿ ಅದು ಪ್ರಾರಂಭವಾಗಿದ್ದು ಅದು ಯಾವ ವರ್ಷವೂ ನಿಲ್ಲದೆ ಈ ವರೆಗೆ ಪ್ರಕಟವಾಗುತ್ತ ಬಂದಿರುತ್ತದೆ. ಆದರೆ ಅದಕ್ಕೆ ಈ ವರ್ಷ ಕಠಿಣಪರಿಸ್ಥಿತಿಯುಂಟಾಗಿದ್ದರ ಮೂಲಕ ಅದನ್ನು ನಿಲ್ಲಿಸುವ ಪ್ರಸಂಗವು ಒದಗಿತ್ತು. ಆದ್ದರಿಂದ ಅದರ ಸಲುವಾಗಿ ಸಹಾಯ ನಿಧಿಯನ್ನು ಏರ್ಪಡಿಸುವ ಪ್ರಯತ್ನವನ್ನು ಮಾಡಲು ನಮಗೆ ಅನೇಕ ಮಹನೀಯರು ಸೂಚಿಸಿದ್ದರಿಂದ ಈ ನಿಧಿಯನ್ನು ಕೂಡಿಸುವ ಪ್ರಯತ್ನವನ್ನು ಕೈಕೊಳ್ಳಲಾಯಿತು. ಶಿವಾನುಭವ ಪತ್ರಿಕೆಯನ್ನು ನಾವು ಹೋದ ೧೭ ವರ್ಷ ಅಖಂಡವಾಗಿ ನಡಿಸಿದ್ದರ ಫಲವಾಗಿ ಅದಕ್ಕೋಸ್ಕರ ವೀರಶೈವ ಜನತೆಯಲ್ಲಿ ಅಭಿಮಾನ ಮತ್ತು ಪ್ರೀತಿಗಳುಂಟಾಗಿದ್ದದ್ದು ಈ ಕಾಲದಲ್ಲಿ ನಮಗೆ ತೋರಿಬಂದಿತು. ಮತ್ತು ಅನೇಕ ಮಹನೀಯರು ಅದಕ್ಕೆ ಸಹಾಯವನ್ನು ಉದಾರಹಸ್ತದಿಂದ ನೀಡಹತ್ತಿದ್ದಾರೆ. ಇದರಿಂದ ಪತ್ರಿಕೆಯನ್ನು ಮುಂದುವರಿಸಲು ನಮಗೆ ಧೈರ್ಯವು ಉಂಟಾಗಿದೆ. ಒಂದು ವೇಳೆ ಹೀಗೆಯೇ ಅದಕ್ಕೆ ಸಹಾಯವು ದೊರೆತಲ್ಲಿ ಅದು ಕೈಕೊಂಡಿರುವ ವಾಙ್ಮಯ ಸಂಶೋಧನದ ಕಾರ್ಯಗಳನ್ನು ಇನ್ನೂ ಹೆಚ್ಚಿಗೆ ಭರದಿಂದ ಮುಂದೆ ಸಾಗಿಸಲು ಅದಕ್ಕೆ ಶಕ್ಯವಾಗುತ್ತದೆ. ಈ ನಿಧಿಯನ್ನು ಸಂಗ್ರಹಿಸುವಲ್ಲಿ ನಮಗೆ ಸಹಾಯವಾದ ಎಲ್ಲ ಮಹನೀಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಅವರ ಹೆಸರುಗಳನ್ನು ಪ್ರತಿತಿಂಗಳು ಈ ಪತ್ರಿಕೆಯಲ್ಲಿ ಪ್ರಕಟಪಡಿಸುತ್ತ ಹೋಗುವೆವು. ಮತ್ತು ಅವರಿಗೆ ಪತ್ರಿಕೆಯ ಸಂಚಿಕೆಗಳನ್ನೂ ಕಳಿಸುವೆವು. ಈ ತಿಂಗಳು ನಮಗೆ ಸಹಾಯ ಮಾಡಿದವರ ಹೆಸರುಗಳನ್ನು ಇದೇ ಸಂಚಿಕೆಯಲ್ಲಿ ಮುಂದೆ ಕಾಣಿಸಿರುತ್ತೇವೆ.

ಶಿವಾನುಭವ ಸಹಾಯ ನಿಧಿಗೋಸ್ಕರ ಕೂಡಿದ ಈ ಹಣದಿಂದ ನಮ್ಮ ಸಂಶೋಧನ ಕಾರ್ಯಗಳನ್ನು ಈವರೆಗಿನಕಿಂತಲೂ ಹೆಚ್ಚು ಬಲವಾಗಿ ಸಾಗಿಸಲಿಕ್ಕೆ ನಮಗೆ ಸಹಾಯವಾಗದೆ ಇರದು.

— ಸಂಪಾದಕ.

# ಶಿವಾನುಭವ

| ವರ್ಷ ೧೭ | ಸಪ್ಟಂಬರ ೧೯೪೩. | ಸಂಚಿಕೆ ೧೨ |
| --- | --- | --- |

## ಮಾತುಗಾರಿಕೆಯ ಮೈಮೆ.

(ಸಂಗ್ರಾಹಕರು—ಶ್ರೀ. ವೀರಭದ್ರಪ್ಪ ಕೊಪ್ಪಳ ಎಂ. ಎ.; ಬಿ. ಟಿ. ಧಾರವಾಡ.)

---

(ಧಾರವಾಡ ನವಕಲ್ಯಾಣಮಠದ ಶ್ರೀಕುಮಾರಸ್ವಾಮಿಗಳು ಬಿ. ಏ. ಅವರು ತಾರೀಖು ೨೯-೭-೧೯೪೩ನೆಯ ದಿವಸ ಧಾರವಾಡದ ರಾಜಾ ಲಖಮಗೌಡಾ ಸರದೇಸಾಯಿ ಹಾಯಸ್ಕೂಲಿನ ವಕ್ತೃತ್ವಸಂಘದ ಪ್ರಾರಂಭೋತ್ಸವದ ಕಾಲಕ್ಕೆ ಮಾಡಿದ ಭಾಷಣದ ಸಾರಾಂಶವಿದು.)

ಮಾತನಾಡುವದು ಕಲೆ; ಆದರೆ ಮಾತಾಡುವದೆಲ್ಲ ಕಲೆಯಲ್ಲ. ಸಂತೆಯ ಸಪ್ಪಳವು ಸಂಗೀತವಲ್ಲ; ಅದರಂತೆ ಸೂರಿನ ಕಂಬಿಯನ್ನು (*Tuning fork*) ಬಾರಿಸುವುದರಿಂದ ಹೊರಡುವ ಧ್ವನಿಯೂ ಸಂಗೀತವಲ್ಲ. ಆದರೆ ಪಿಯಾನೊದಿಂದ ಹೊರಟ ಸುಸ್ವರ ಸಮ್ಮೇಳನವು ಸಂಗೀತವೆನಿಸಿಕೊಂಬುದು. ಸಂಗೀತವು ಮೂಲದಲ್ಲಿ ಸಪ್ಪಳವೇ ಆಗಿದ್ದರೂ ಅದು ತಾಳಮೇಳ. ಲಯನಯಗಳೊಂದಿಗೆ ಕೂಡಿದಲ್ಲದೆ ಸಂಗೀತವೆನಿಸದು. ಸಂಗೀತದಂತೆ ಮಾತನಾಡುವದೂ ಒಂದು ಕಲೆಯಾಗಿರುವುದರಿಂದ ರೀತಿನೀತಿಯರಿಯದ ಮಾತುಗಾರಿಕೆಯು ಕಲೆಯೆನಿಸದು. ಮಾತಿನ ರೀತಿಗೆ ಮತ್ತು ನೀತಿಗೆ ವೈಖರಿಯೆಂದು ಹೆಸರು. ವೈಖರಿಯಿಂದ ಬೆರೆತ ವಾಣಿಗೆ ವಕ್ತೃತ್ವ (*oratory*) ಎಂದು ಹೇಳಲಾಗುವದು. 'ಮಾತೆಂಬುದು ಜ್ಯೋತಿರ್ಲಿಂಗ' ವೆಂದು ಪ್ರಭುದೇವರು ಹೇಳಿರುವರು. ಇದರಿಂದ ಪ್ರಕಾಶಮಯನಾದ ಪರಶಿವನ ಅರಿವನ್ನು ಬೀರುವ ಸಾಮರ್ಥ್ಯವು ಮಾತಿನಲ್ಲಿ ಇದೆಯೆಂದು ವ್ಯಕ್ತವಾಗುವದು.

ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದು, ಭಕ್ತದೇಹಿಕ ದೇವ ಅನಿಮಿಷನಾಗಿ. ಕೂಡಲಸಂಗಮದೇವ ಭಕ್ತನ ನುಡಿಯು ನಡುವೆ ರಾಶಿಯಾಗಿಪ್ಪನು.

ಕೆರೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಂಗಳ ಕಾಣಬಹುದು. ನಮ್ಮ ಕೂಡಲ ಸಂಗನ ಶರಣರು ಮನದೆರೆದು ಮಾತನಾಡಿದರೆ ಲಿಂಗವ ಕಾಣಬಹುದು.

ನುಡಿದರೆ ಮುತ್ತಿನ ಹಾರದಂತಿರಬೇಕು. ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು. ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವನೆಂತೊಲಿವನಯ್ಯಾ.

ಬಸವಣ್ಣನ ಇವೆಲ್ಲ ಮಾತುಗಳಲ್ಲಿ ಮಾತಿನ ಮಹಿಮೆಯು ಒಡಮೂಡಿಹುದು. ಆದುದರಿಂದ ಈ ಮಹಿಮೆಮಯ ಮಾತಿನ ನೆಲೆಕಲೆಗಳನ್ನರಿಯುವದು ಅವಶ್ಯವಾದುದು.

ವಕ್ತೃತ್ವ ಕಲೆಯ ಉಗಮವನ್ನು ಕಾಣಬಯಸುವುದಾದರೆ ಕಲೆಗಳ ಮೂಲಸ್ಥಾನವನ್ನು ಕಂಡುಹಿಡಿಯಬೇಕು. ಕಲೆಯೆಂದರೇನೆಂಬ ಬಗೆಗೆ ಪಾಶ್ಚಿಮಾತ್ಯರು ಕೂಲಂಕಷವಾಗಿ ವಿವೇಚಿಸಿದ್ದಾರೆ. ದೇವನಿರ್ಮಿತ ಸೃಷ್ಟಿಯ ಸೊಬಗನ್ನು ಸವಿಯುವುದರಲ್ಲಿ ಮಾನವನಿಗುಂಟಾದ ಆನಂದದ ನಿರೂಪಣೆಯೇ ಕಲೆಯೆಂದು ರಸ್ಕಿನನು ಹೇಳಿರುತ್ತಾನೆ. (*All great art is the expression of man's delight in God's work, not his own*). ಸೃಷ್ಟಿಕರ್ತನ ಬಗೆಗೆ ಒಪ್ಪಿಕೊಳ್ಳಲಾರದ ಬುದ್ಧಿಗೆ ಸೃಷ್ಟಿಯೇ ಘನವಾಗಿ ಕಾಂಬುದು. ಅದೃಶ್ಯ ವ್ಯಕ್ತಿಗಿಂತ ದೃಶ್ಯಸೃಷ್ಟಿಯತ್ತ ಸಾಮಾನ್ಯವಾಗಿ ದೃಷ್ಟಿಯು ಹರಿಯಿರುವುದು. ಸೃಷ್ಟಿಯಲ್ಲಿ ಹುದುಗಿದ ಸೌಂದರ್ಯಾತಿಶಯವನ್ನರಿಯಲಿಕ್ಕೆ ಬೇಕಾಗುವ ಸಾಧನಸಾಮಗ್ರಿಗಳನ್ನು ಸೃಷ್ಟಿಯೇ ನಿರ್ಮಿಸಿದೆ. ಅವುಗಳ ನೆರವಿನಿಂದ ಇಂಥ ಸೃಷ್ಟಿಯನ್ನು ಇದ್ದಕ್ಕಿದ್ದಂತೆ ಬಣ್ಣಿಸುವದು ಕಲೆಯೆಂದೂ ಹೇಳುವರು. ಆದರೆ ಇಲ್ಲಿ ಸೃಷ್ಟಿಯ ಸೌಂದರ್ಯಾತಿಶಯವನರಿತು ಮನವಾರೆ ಆನಂದಗೊಂಡು ಅದನ್ನು ಈ ಬಣ್ಣನೆಯಿಂದ ವ್ಯಕ್ತಗೊಳಿಸುವುದೇ ಕಲೆಗೆ ಉದ್ದೇಶವೆನ್ನಬೇಕು. ಸೃಷ್ಟಿಯಲ್ಲಿಯ ಅನಂತವಾದ ಅದ್ಭುತ ಚಮತ್ಕಾರಗಳನ್ನು ಕಂಡು ಅಚ್ಚ

ರಿಯೂ (*Admiration*) ಅದರಲ್ಲಿಯ ಭಯಪ್ರದವಾದ ದೃಶ್ಯಗಳನ್ನು ಕಂಡು ಅಂಜಿಕೆಯೂ (*Awe*) ಜೀವನದ ಸೌಕರ್ಯಕ್ಕೋಸುಗ ಅದರಲ್ಲಿ ತೋರಿದ ಒಡವೆಗಳಿಗಾಗಿ ಕೃತಜ್ಞತೆಯೂ (*Gratitude*) ತನಗೆ ನಿಲುಕಲಾರದ ಅದರ ಗೂಢದ ಗಹನತೆಗಾಗಿ ಅಲ್ಪಜ್ಞತೆಯೂ (*Negative self-feeling*) ಮಾನವನ ಆ ಬುದ್ಧಿಯಲ್ಲಿ ಮೂಡುವದು ಸಹಜವಾದುದು. ಮಾನವನು ಈ ವರೆಗೂ ಗಳಿಸಿಕೊಂಡ ಮತ್ತು ಅದರಿಂದ ಹೆಮ್ಮೆಪಟ್ಟುಕೊಳ್ಳಬಹುದಾದ ವಿಜ್ಞಾನವಿಸ್ತಾರದಿಂದ ಸೃಷ್ಟಿಯ ಆಳವು ತಿಳಿದಿಲ್ಲ; ವಿಶ್ವದ ಗತಿಯು ನಿಲುಕಿಲ್ಲ. ಮಾನವನಿಗೆ ಕೈಸೆರೆಯಾದ ಈ ಜ್ಞಾನದಿಂದ ವಿಶ್ವಗತಿಯು ಅವನಿಗೆ ಇನ್ನಷ್ಟು ಗೂಢವಾಗಿಯೇ ಬಿಟ್ಟಿರುವದು. ಆದುದರಿಂದ ಅನಂತವಾದ ಅಖಂಡವಾದ ಶಕ್ತಿಗಳನ್ನು ಗರ್ಭೀಕರಿಸಿಕೊಂಡ ವಿಶ್ವದ ತೋರಿಕೆಗೆ ಅಚ್ಚರಿ ಅಂಜಿಕೆ ಕೃತಜ್ಞತೆ ಅಲ್ಪಜ್ಞತೆಗಳನ್ನು ತಾಳಿ ಅದಕ್ಕಾಗಿ ಬಾಗಿ ನಡೆಯುವ ವೃತ್ತಿಯು ಮಾನವನದಾಗುವದು. ಇದಕ್ಕೆ ಭಕ್ತಿ (*Religious consciousness*) ಎಂದು ಹೇಳಲಾಗುವದು. ಅದೃಶ್ಯ ವ್ಯಕ್ತಿಯಿರಲಿ ದೃಶ್ಯಸೃಷ್ಟಿಯಿರಲಿ ಅದಕ್ಕೋಸುಗ ಹೀಗೆ ಬಾಗಿ ನಡೆಯುವುದರಲ್ಲಿಯೆ ಭಕ್ತಿರಸದ ಸೊನೆಯು ಸೂಸುವುದು. ಮತ್ತು ಈ ಭಕ್ತಿರಸದಲ್ಲಿಯೇ ಸಕಲ ಕಲೆಗಳ ಉಗಮವುಂಟು. (*The highest art is always the most religious and the greatest artist is always a devout man —Blaikie*) ಹೃದಯವೇ ಭಕ್ತಿರಸಕ್ಕೆ ಬೀಡು. ಭಕ್ತಿರಸಾನುಭವವನ್ನು ತಿಳಿಗೆ ಇಳಿಸಿ ರೂಪಕ್ಕೆ ನಿಲಿಸುವದೇ ಕಲೆಗೆ ಅತ್ಯಂತಿಕ ಗುರಿಯಾಗಿಹುದು. (*The object of art is to crystallize emotion into thought and then fix it in form —Delsarte*) ಕಲೆಯಲ್ಲಿ ಮೇಲಾದುದೆಲ್ಲ ಭಾವ ತುಂಬಿ ಹೊರಹೊಮ್ಮಿದುದು. ಮತ್ತು ಅಂಥ ಭಾವಕ್ಕೇ ಅದು ನೇರವಾಗಿ ಇಳಿಯುವದು. ಅದನ್ನು ವ್ಯಕ್ತಗೊಳಿಸುವ ಭಾವವೈಶಾಲ್ಯತೆಯ ಘನತೆಗನುಗುಣವಾಗಿ ಕಲೆಯ ಬೆಲೆಯು ತಿಳಿಯುವದು. (*All that is good in art is the expression of one soul talking to another, and is precious according to the greatness of the soul that utters it —Ruskin*). ಇದು ಕಾರಣ ಅರಿವಿನ ಬೆಳಕನ್ನು ಬೀರುವ ಭಕ್ತಿರಸತೈಲಕ್ಕೆ ಪ್ರಣತಿಯಂತಿಹ

ಹೃದಯವೇ ಕಲೆಗಳಿಗೆ ಸೆಲೆಯಾಗಿಹುದು. ವಕ್ತೃತ್ವ ಕಲೆಗಾದರೂ ಈ ಹೃದಯವೇ ಸೆಲೆಯು.

ಹೃದಯದಿಂದ ಹೊರಹೊಮ್ಮುವ ವಾಣಿಯು ಸಬಲವಾಗಿ ಸರಲವಾಗಿ ಸುಲಲಿತವಾಗಿ ಸುಬೋಧವಾಗಿ ಸುರಮ್ಯವಾಗಿ ಇಹುದು. ಮಾತುಗಾರನ ಮಾತಿನಲ್ಲಿ ಜ್ಯೋತಿಯನ್ನು ಕಾಣಬೇಕಾದರೆ ಅದು ಹೃದಯದ ಆಳದಿಂದ ಬೆಳೆದಿರಬೇಕು. ಭಾಷಾಶಾಸ್ತ್ರವು ಇಲ್ಲವೆ ಅಲಂಕಾರಶಾಸ್ತ್ರವು ಅದನ್ನು ಕಲಿಸಲಾರದು. ಎದೆ ತುಂಬಿ ಅದು ಹೊರಹೊಮ್ಮಬೇಕಾದುದರಿಂದ ಅದರಷ್ಟು ಕಷ್ಟಸಾಧ್ಯವಾದುದು ಬೇರೊಂದಿಲ್ಲ.

ಮಾತಿನೊಳಗಣ ಮಾತು ಜ್ಞಾನಿಯ ಮಾತೆ ಮಾಣಿಕವೆನಿಸುದು
ಮಾತ ಪರರೊಳ್ ಬಿಚ್ಚುವಜ್ಞರ ಮಾತು ತೂತೆಂದೆನಿಸುದು
ಮಾತು ಹೃದಯದಿ ಹೊರಡಲಾತ್ಮ ಜ್ಯೋತಿ ತಾನೆ ಪೊಳೆವುದು

ಎಂದು ಹೇಳುವದು ಯಥಾರ್ಥವಾಗಿಯೇ ಇದೆ. ಹೃದಯದಿಂದ ಮೊಳೆವ ಮಾತು ಹೃದಯಕ್ಕೆ ನೇರವಾಗಿ ಇಳಿಯಬೇಕಾದುದರಿಂದ ಅದರ ಮೂಲವನ್ನು ಭಾವವ ಬಿಟ್ಟು ಬೇರೆಡೆಗೆ ಹುಡುಕಲಾಗದು. (*The language of the heart which comes from the heart and goes to the heart is always simple, graceful and full of power, but no art of rhetoric can teach it. It is at once the easiest and most difficult language—difficult, since it needs a heart to speak it; easy, because its periods though rounded and full of harmony are still unstudied–Bovee*). ನುಡಿಯುವ ಮಾತು ಪರಿಣಾಮಕಾರಿಯಾಗಬೇಕಾದರೆ ಕೇವಲ ಹಾವಭಾವಗಳು ಪ್ರಾಮುಖ್ಯವಲ್ಲ; ಆದರೆ ಅವು ಭಾವತುಂಬಿ ಹೊರಹೊಮ್ಮಬೇಕು. ಅಲ್ಲಿ ಬುದ್ಧಿಯ ಬೆಳಕು ಭಾವದ ತುಳುಕು ಬೆಳಗಬೇಕು, ತೊಳಗಬೇಕು. ಆದುದರಿಂದ ಭಾವದಿಂದ ವಿಷಯವನ್ನು ಕಲಿಯಬೇಕು; ಭಾವದಿಂದ ವಿಚಾರವನ್ನು ಗ್ರಹಿಸಬೇಕು; ಭಾವದಿಂದ ವಿಚಾರವು ಹೊರಹೊಮ್ಮುತ್ತಿರಬೇಕು. ಶ್ರೀ ಅರವಿಂದರು ಹೇಳುವಂತೆ ಬಂಗಾಲಿಯು ಮನಮುಗ್ನವಾಗಿ ಭಾವತುಂಬಿ ಕಲಿಯುತ್ತಾನೆ. ಅದು ಕಾರಣ ಅವನ ಜೀವನದಲ್ಲಿ ಭಕ್ತಿರಸವು ಹೊರಸೂಸುತ್ತಿದೆ. ಅಂತೆಯೇ ಅವನು

ಎಂದೆಂದಿಗೂ ಮುಂದಾಳುವಾಗಿದ್ದಾನೆ, ಇಂದಿಗೂ ಮುಂದಾಳುವಾಗಿದ್ದಾನೆ ಭಾವಭರಿತನಾಗಿದ್ದವನು ಮುಂದಾಳುವೆಂದಿಗೂ ಆಗನು. (*The Bengali has always led and still leads the thought of India, for he has the invaluable gift of thinking with the heart*).

ಮಾತಿನಲ್ಲಿ ಬುದ್ಧಿಯ ಬೆಳಕೂ ಭಾವದ ತುಳುಕೂ ಹೊರಹೊಮ್ಮಿ ಮಾತನಾಡುವ ವಕ್ತೃತ್ವಶಾಲಿಗಳು ಅನೇಕರಾಗಿ ಹೋಗಿದ್ದಾರೆ. ಅಥೆನ್ಸದ ಡೆಮಾಸ್ಥೆನೀಸ, ಇಂಗ್ಲಂಡಿನ ಬರ್ಕ ಮತ್ತು ಭಾರತದ ಸುರೇಂದ್ರನಾಥ ಬಾನರಜಿ ಇವರು ಜನರಲ್ಲಿ ಅಗ್ರಗಣ್ಯರು. ನಿಜವಾದ ವಕ್ತೃತ್ವದಂತಹ ಅಸ್ತ್ರವಿನ್ನೊಂದಿಲ್ಲ. ಸೀಝರನು ತನ್ನ ವಾಕ್ಚಾತುರಿಯಿಂದ ಜನರಲ್ಲಿ ಅಂಜಿಕೆಯ ಮೊಳಕೆಯನ್ನೂರಿ ಅವರನ್ನು ತನ್ನತ್ತಲೆಳೆಯುತ್ತಿದ್ದನು. ಆದರೆ ಸಿಸಿರೊ ಅವನು ಜನರಲ್ಲಿ ಪ್ರೇಮವನ್ನು ತೋರಿ ಅವರ ಮೌಢ್ಯವನ್ನು ತೂರಿ, ಅವರನ್ನು ತನ್ನ ಅಂಕಿತದಲ್ಲಿಟ್ಟುಕೊಳ್ಳುತ್ತಿದ್ದನು. ಅದರ ಪರಿಣಾಮವಾಗಿ ಸೀಝರನಲ್ಲಿಯೇ ಅವನ ವಾಗ್ಬಾಣವು ಅಳಿಯಿತು; ಸಿಸಿರೊನದು ಮಾತ್ರ ಇಂದಿಗೂ ಉಳಿಯಿತು. ರೋಮದ ಜನರು ಸಿಸಿರೊನ ಮಿರುಗುಗೊಂಡ ಸತತವಾಗಿ ಸುರಿಯುವ ವಾಗ್ಧಾರೆಯನ್ನನುಭವಿಸಿ ಅದು ಎಂಥ ಭವ್ಯವಾದ ಭಾಷಣವೆಂದು ಬೆರಳು ಕಚ್ಚಿ ಬೆರಗಾಗಿ ತೆರಳುತ್ತಿದ್ದರು. ಅಥೆನ್ಸದ ಜನರು ಮಾತ್ರ ಡೆಮಾಸ್ಥೆನೀಸನ ಮಾತುಗಳನ್ನು ಕೇಳಿ ಮುಯ್ಯವನ್ನು ತೀರಿಸಿಕೊಳ್ಳಲೋಸುಗ 'ಏಳಿರಿ, ನಡಕಟ್ಟಿರಿ, ಫಿಲಿಪನೊಡನೆ ಹೋರಾಡಿರಿ' ಎಂದೆನ್ನುತ್ತ ಚೆದುರುತ್ತಿದ್ದರು; ಯಾಕಂದರೆ ಅವರ ಹೃದಯದಲ್ಲಿ ನೇರವಾಗಿ ನೆಡುವಂತೆ ಅವನು ತನ್ನ ಮಾತುಗಳನ್ನು ಆಡುತ್ತಿದ್ದನು, ಮತ್ತು ಆ ಮಾತಿನ ಲಹರಿಯಲ್ಲಿ ತಾನು ತನ್ನನ್ನು ಮರೆತುಬಿಡುತ್ತಿದ್ದನು, ಅವರೂ ಸಹ ತಾವು ತಮ್ಮನ್ನು ತುಂಬಾ ಮರೆತು ಎದುರಿಗಿದ್ದುದನ್ನು ಅರಿಯುವಂತೆ ಮಾಡಿಬಿಡುತ್ತಿದ್ದನು. ಬರ್ಕನಲ್ಲಿ ಭಾವದ ತುಳುಕು ಹೆಚ್ಚಿದ್ದರೆ ಪಿಟ್ಟನಲ್ಲಿ ಬುದ್ಧಿಯ ಬೆಳಕು ಹೆಚ್ಚು ಇರುತ್ತಿತ್ತು. ಪಿಟ್ಟನ ಮಾತುಗಳಿಗಿಂತ ಬರ್ಕನ ಮಾತುಗಳು ಹೆಚ್ಚು ಪರಿಣಾಮಕಾರಿಯಾಗಿರುತ್ತಿದ್ದವು. ಆದುದರಿಂದ ಪಿಟ್ಟನಿಗಿಂತ ಬರ್ಕನು ಉತ್ತಮನಾದ ವಕ್ತಾರನಾಗಿದ್ದನು. ಸುರೇಂದ್ರನಾಥ ಬಾನರಜಿಯ ವಾಗ್ಝರಿಯೂ ಬರ್ಕನಂತೆಯೇ ಅವ್ಯಾಹತವಾಗಿ

ಸಾಗುತ್ತಿತ್ತು. ಆದುದರಿಂದ ಅವನಿಗೆ ವಂಗದೇಶದ ಬರ್ಕನೆಂದು ಕರೆಯುತ್ತಿದ್ದರು. ಡೆಮಾಸ್ಥೆನೀಸನ ತರುವಾಯ ಬರ್ಕ, ಬರ್ಕನ ತರುವಾಯ ಸುರೇಂದ್ರನಾಥ ಇವರು ಅದ್ವಿತೀಯ ವಕ್ತೃಗಳಾಗಿದ್ದರು. ಇವರ ಭಾಷಣಗಳಲ್ಲಿ ಭಾವ ಭಾಷೆ ಬುದ್ಧಿಗಳ ಸಮ್ಮೇಳನವು ಒಡೆದುಕಾಣುತ್ತಿತ್ತು.

ಕನ್ನಡ ನಾಡಿನಲ್ಲಿಯೂ ಹಿಂದಕ್ಕೆ ಸುಪ್ರಸಿದ್ಧವಾದ ಭಾವಬುದ್ಧಿಗಳ ಬೆಡಗಿನಿಂದ ವೈಭವಶಾಲಿಗಳಾಗಿದ್ದ ವಕ್ತಾರರನೇಕರಿದ್ದರು. ಕ್ರಿ. ಶ. ೧೨ನೆಯ ಶತಮಾನದಲ್ಲಿ ಶಿವಶರಣರು ಸ್ಥಾಪಿಸಿದ ಅನುಭವಮಂಟಪವು ಈಗಿನಂತಹ ವಕ್ತೃತ್ವ ಸಂಸ್ಥೆಗಳನ್ನು ಹೋಲುತ್ತಿತ್ತು. ಅಲ್ಲಿ ಅಧ್ಯಾತ್ಮಿಕ ವಿಷಯಗಳನ್ನು ಕುರಿತು ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ಭಾರತದ ಎಲ್ಲೆಡೆಗಳಿಂದ ನೆರೆದ ಸ್ತ್ರೀಪುರುಷರಲ್ಲಿ ಚರ್ಚೆ ನಡೆಯುತ್ತಿದ್ದಿತು. ಶಿವಶರಣರು ತಮ್ಮ ಅನುಭವಕ್ಕೆ ವೇದ್ಯವಾದ ಸಂಗತಿಯನ್ನು ಅನುಭವಮಂಟಪಕ್ಕೆ ತಂದು ವಚನರೂಪವಾಗಿ ಮಂಡಿಸುತ್ತಿದ್ದರು. ಅದರ ವಿವೇಚನೆಯಾದ ಬಳಿಕ ಮಥಿತಾರ್ಥವನ್ನು ವಚನಭಂಡಾರಿ ಶಾಂತರಸನು ಕೂಡಿಹಾಕಿ ಬರೆದಿಟ್ಟುಕೊಳ್ಳುತ್ತಿದ್ದನು ಎಂದು ಅನುಭವಮಂಟಪದ ಐತಿಹ್ಯದಿಂದ ತಿಳಿದು ಬರುವದು. ಶೂನ್ಯಸಂಪಾದನೆ ಎಂಬ ಗ್ರಂಥದಿಂದ ಅನುಭವಮಂಟಪದಲ್ಲಿ ನಡೆಯುತ್ತಿದ್ದ ಚರ್ಚೆಗಳ ಸ್ವರೂಪವನ್ನು ಅರಿಯಬಹುದು. ವಚನವೆಂದರೆ ಮೂಲತಃ ನುಡಿ, ಮಾತು ಎಂದೇ ಅರ್ಥವಾಗುತ್ತದೆ. ಶಿವಶರಣರು ಭಾವಶುದ್ಧವಾಗಿ ಅನುಭವ ಮಂಟಪದಲ್ಲಿ ನುಡಿದ ಮಾತುಗಳು ನೇರವಾಗಿ ಹೃದಯದಿಂದಿಳಿದು ಹೃದಯಕ್ಕೆ ತಟ್ಟುವ ಸಾಮರ್ಥ್ಯವುಳ್ಳವುಗಳು. ಆದುದರಿಂದ ಇಲ್ಲಿ ಭಾವಭಾಷೆಗಳ ಸಮನ್ವಯವನ್ನು ಕಾಣಬಹುದು. ಸಾಹಿತ್ಯ ದೃಷ್ಟಿಯಿಂದ ಇವು ಬರೆಯಲ್ಪಟ್ಟವುಗಳಾಗಿರದಿದ್ದರೂ ಉತ್ಕೃಷ್ಟಭಾವನಾವಿಕಾಸವೇ ಲಕ್ಷಣವಾಗಿರುವ ಉತ್ತಮ ಸಾಹಿತ್ಯವೆನಿಸಲು ತಕ್ಕವಾಗಿರುವವು. ಪಾಂಡಿತ್ಯದ ಬಿರುದು ಬಾವುಲಿಗಳು ಶಿವಶರಣರಿಗಿರದಿದ್ದರೂ ಅವರ ಶಬ್ದಗಳಲ್ಲಿ ಶಕ್ತಿಯಿದೆ; ಅವರ ನುಡಿಯಲ್ಲಿ ಬೆಡಗಿದೆ; ಅವರ ಮಾತಿನಲ್ಲಿ ಜ್ಯೋತಿಯಿದೆ; ಅವರ ವಾಣಿಯಲ್ಲಿ ವೈಶಿಷ್ಟ್ಯವಿದೆ; ಅವರ ವಿಚಾರ ಸರಣಿಯಲ್ಲಿ ನಾವೀನ್ಯತೆಯಿದೆ. ಭಾವದಿಂದ ಗ್ರಹಿಸಿ ಬಳಸಿದ ಅವರ ಮಾತು ವ್ಯಕ್ತಿ ಮತ್ತು ಜನಸಾಮಾನ್ಯದ ಭಾವದೋಷವನ್ನು, ಆಚಾರಹೀನತೆಯನ್ನು ಖಂಡಿಸುವಲ್ಲಿ ನಿಶಿತವಾದ ಶಸ್ತ್ರವಾಗಿ ಅಸ್ತ್ರವಾಗಿ ಅಲಗಾಗಿ

ಅಂಕುಶವಾಗಿ ಭಾಲೆಯಾಗಿ ಬರ್ಚಿಯಾಗಿ ಪರಿಣಮಿಸುತ್ತಿತ್ತು. ಗುಣ ಸಂಪಾದನೆಯ ಮಾಡುವಲ್ಲಿ ಅದು ತಿದ್ದಿ ಮುದ್ದಾದ ಮಾಟಾದ ನೀಟಾದ ಸುಲಲಿತವಾದ ಸುರಮ್ಯವಾದ ಸ್ತುತಿಯಾಗಿ ಶೋಭಿಸುತ್ತಿತ್ತು. ಮತ್ತು ಲಿಂಗಾಂಗ ಸಾಮರಸ್ಯದ ಬಗೆಯನ್ನರುಹುವಲ್ಲಿ ಅದು ಆಪ್ತವಚನ ವಾಗಿ ಶಾಸ್ತ್ರವಾಗಿ ಮಿರುಗುಗೊಳ್ಳುತ್ತಿತ್ತು. ಅನುಭವಮಂಟಪದಲ್ಲಿ ಬಳಸುತ್ತಿದ್ದ ಮಾತುಗಳ ವೈಮೆ ಇಂತಿಹುದು.

ವಕ್ತೃತ್ವ ಕಲೆಯನ್ನು ಸ್ವಾಧೀನಪಡಿಸಿಕೊಳ್ಳಬಯಸುವವರಿಗೆ ಭಾವ ಶುದ್ಧವಾಗಿ ವಿಚಾರಿಸಿ, ಭಾವಬದ್ಧವಾಗಿ ಆ ವಿಚಾರಗಳನ್ನು ಮಂಡಿಸುವ ಅಭ್ಯಾಸವನ್ನಿಟ್ಟುಕೊಳ್ಳುವದು ಪ್ರಾಮುಖ್ಯವಾದುದು.

---

## ಪ್ರಾಣಹಿಂಸೆ ಮಾಡಬೇಡ.

(ಲೇ:— ಶಿವಮೂರ್ತಿ.)

ಪ್ರಾಣಹಿಂಸೆ ಮಾಡದಿಹುದೇ ಜನೆಯ ಆಚಾರ. ಕೊಲ್ಲುವದಷ್ಟೇ ಹಿಂಸೆಯಲ್ಲ. ನಿರಪರಾಧಿ ಪ್ರಾಣಿಗಳ ಮನನೋಯಿಸುವದೂ ವ್ಯಥೆಪಡಿಸುವದೂ ಹಿಂಸೆಯೇ ಸರಿ. ಶರಣರು ನಿರಪರಾಧಿ ಜೀವರುಗಳ ಹಿಂಸೆಯನ್ನೆಂದಿಗೂ ಮಾಡಲಾರರು, ಮನವನ್ನೆಂದಿಗೂ ನೋಯಿಸರು.

'ಮಾ ಹಿಂಸ್ಯಾತ್ ಸರ್ವಭೂತಾನಿ' ಅಂದರೆ ಯಾವ ಪ್ರಾಣಿಗಳ ಹಿಂಸೆಯನ್ನೂ ಮಾಡಬೇಡವೆಂದು ವೇದವಾಕ್ಯವು ಸಾರುತ್ತದೆ. ಸೃಷ್ಟಿಯೊಳಗಿನ ಎಲ್ಲ ಪ್ರಾಣಿಗಳ ಮೇಲೆ ಪ್ರೇಮ ಮಾಡುವದೇ ಪರಮಾತ್ಮನಿಗೆ ಪ್ರಿಯಕರ. ಅವುಗಳನ್ನು ಪೀಡಿಸುವುದಾಗಲಿ ಕೊಲ್ಲುವುದಾಗಲಿ ಆತನಿಗೆ ಅಪ್ರಿಯ. ಹಿಂಸಾತ್ಮರಿಗೆ ಪರಮಾತ್ಮನ ಅನುಗ್ರಹವುಂಟಾಗದೆ ಅವರು ಆತನ ಕೋಪಶಾಪಗಳಿಗೆ ಗುರಿಯಾಗುವರು. 'ಆತ್ಮವತ್ ಸರ್ವಭೂತಾನಿ ಯಃ ಪಶ್ಯತಿ ಸ ಪಂಡಿತಃ' ಅಂದರೆ ತನಗಾಗುವ ದುಃಖ

ನೋವುಗಳು ಇತರ ಪ್ರಾಣಿಗಳಿಗೂ ಆಗುವದೆಂದು ತಿಳಿದು ಅವುಗಳನ್ನು ಯಾವನು ಪ್ರೇಮದಿಂದ ಕಾಣುವನೋ ಅವನೇ ಪಂಡಿತನು. 'ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ' ಎಂಬ ನೀತಿಯಾದರೂ ಪ್ರಾಣಿಹಿಂಸೆ ಮಾಡದೆ ಪ್ರಾಣಿದಯೆ ತೋರಿಸಬೇಕೆಂಬ ತತವವನ್ನೇ ಪುರಸ್ಕರಿಸುತ್ತದೆ. ಸಕಲ ಪ್ರಾಣಿಗಳನ್ನು ಲಿಂಗಸ್ವರೂಪವಾಗಿ ಕಾಣಬೇಕೆಂದು ಪ್ರಾಣಲಿಂಗಿ ತತ್ವವು ಸಾರುತ್ತದೆ. ಆದುದರಿಂದ ಶಿವಶರಣರೆಲ್ಲ ಪರವಸ್ತುವಿನಲ್ಲಿಟ್ಟಂತೆ ಆತನು ಸೃಜಿಸಿದ ಸಕಲ ಪ್ರಾಣಿಗಳ ಮೇಲೆ ಪ್ರೇಮ ಮಾಡುವರೇ ವಿನಾ ಅವುಗಳಿಗೆ ದುಃಖ ನೋವುಗಳನ್ನೆಂದಿಗೂ ಉಂಟುಮಾಡಲಾರರು.

"ಕೊಲ್ಲದಿರ್ಪುದೆ ಧರ್ಮ । ಬಲ್ಲರಿಗೆ ಸಮ್ಮತ[illegible] ಅಲ್ಲದೆ ಪೀರಿ ಕೊಲುವವನು ನರಕದೊಳು ನಿಲ್ಲದೆ ಮಾಣ ಸರ್ವಜ್ಞ" ॥ ಅಂದರೆ ಅಹಿಂಸೆಯೇ ಶ್ರೇಷ್ಠ ಧರ್ಮವು. ಹಿಂಸೆ ಮಾಡುವವರು ನರಕದಲ್ಲಿ ಹೊರಳಾಡುವರು ಎಂದು ಸರ್ವಜ್ಞನು ಹೇಳಿದ್ದಾನೆ. "ದಯವಿಲ್ಲದ ಧರ್ಮವದಾವುದಯ್ಯಾ. ದಯುವೇ ಬೇಕು ಸಕಲಪ್ರಾಣಿಗಳಲ್ಲಿ. ದಯುವೇ ಧರ್ಮದ ಮೂಲವಯ್ಯಾ. ಕೂಡಲಸಂಗಮದೇವರಂತಲ್ಲದೊಲ್ಲನಯ್ಯಾ." ಎಂದು ಬಸವಣ್ಣನವರು ಅಪ್ಪಣೆಕೊಡಿಸಿದ್ದಾರೆ. ನಾವು ಸಕಲ ಪ್ರಾಣಿಗಳ ಮೇಲೆ ದಯೆಯನ್ನು ತೋರಿಸುವದೇ ಶ್ರೇಷ್ಠವಾದ ಧರ್ಮವು. ಅಂತೆಯೇ 'ಅಹಿಂಸಾ ಪರಮೋಧರ್ಮಃ' ಎಂಬ ಶ್ರುತಿವಾಕ್ಯವು ಜಗತ್ಪ್ರಸಿದ್ಧವಾಗಿದೆ.

ಕ್ರೈಸ್ತನು ಹೇಳಿರುವದೇನಂದರೆ "*Thou shalt do no murder. Put up thy sword again into its place. For all they that take the sword, shall perish with the sword.*" ಅಂದರೆ ನೀನು ಜೀವಹಿಂಸೆ ಮಾಡಬೇಡ. ನಿನ್ನ ಖಡ್ಗವನ್ನು ಒರೆಗಾಣಿಸು. ಖಡ್ಗವನ್ನು ಹಿಡಿದವರೆಲ್ಲ ಖಡ್ಗಕ್ಕೇನೇ ಆಹುತಿಯಾಗುವರು. "ನಾನೊಂದು ಸುರಗಿಯನೇನೆಂದು ಹಿಡಿವೆನು? ಏನಕಿತ್ತೇನನಿರಿವೆನು? ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥಾ" ಎಂದು ದೇವರದಾಸಿಮಯ್ಯನವರು ಅಪ್ಪಣೆಕೊಡಿಸಿದ್ದಾರೆ. ಅಂದರೆ ಜಗವೆಲ್ಲ ಪರಮಾತ್ಮನ ಸ್ವರೂಪವಾಗಿರುವದರಿಂದ ಕತ್ತಿಯನ್ನೆತ್ತಬಾರದೆಂದೇ ಅವರ ತತ್ವವು.

ಆದರೆ ಜಗತ್ತಿನಲ್ಲಿ ಎತ್ತನೋಡಿದತ್ತ ಹಿಂಸೆಯೇ ನಡೆದಿರುವದಲ್ಲ! ಅಹಿಂಸೆಗೆ ಎಡೆಯೆಲ್ಲಿದೆ? ಹೊಟ್ಟೆಯ ಆಹಾರದ ಸಲುವಾಗಿ ಪ್ರಾಣಿಗಳ ವಧೆಯು ಯಥೇಚ್ಛವಾಗಿ ನಡೆಯುತ್ತಿದೆ. ಯುದ್ಧದಲ್ಲಿ ಅಸಂಖ್ಯ ಜೀವರುಗಳ ಆಹುತಿಯು ಎಗ್ಗಿಲ್ಲದೆ ಸಾಗುತ್ತಲಿದೆ. ಹಿಂದಕ್ಕೆ ಯಜ್ಞಯಾಗಾದಿಗಳಲ್ಲಿಯೂ ಈಗ ಬಲಿಯ ರೂಪದಿಂದಲೂ ಲಕ್ಷಾಂತರ ಮೂಕ ಪ್ರಾಣಿಗಳ ಹಿಂಸೆಯಾಗುವದುಂಟು. ತನ್ನ ಸ್ವಾರ್ಥಸಾಧನೆಗಾಗಿ ಮನುಷ್ಯನು ಪರಹಿಂಸಾಕಾರ್ಯಗಳನ್ನು ತಡೆಯಿಲ್ಲದೆ ರಾಕ್ಷಸನಂತೆ ನಡೆಯಿಸುತ್ತಿದ್ದಾನೆ. ಇವೆಲ್ಲವುಗಳನ್ನು ನಿರೀಕ್ಷಿಸಿದರೆ ಅಹಿಂಸೆಯು ಶಾಸ್ತ್ರದೊಳಗಿನ ಮಾತೇ ಹೊರತು ಲೋಕವ್ಯವಹಾರದಲ್ಲಿ ನಡೆಯಲಾರದೆಂಬ ಭಾವವು ತೋರುತ್ತಿದೆ.

'ಜೀವೋ ಜೀವಸ್ಯ ಜೀವನಂ' ಅಂದರೆ ಒಂದು ಜೀವವನ್ನು ತಿಂದು ಇನ್ನೊಂದು ಜೀವವು ಬದುಕುತ್ತದೆ. ಬಲವಂತರು ಬಾಳಬೇಕು. ದುರ್ಬಲರು ಸಾಯಬೇಕು ಎಂಬ ತತ್ವವು ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಕಂಡುಬರುತ್ತಿದೆ. ದೇವನು ಸಹ ದುರ್ಬಲ ಘಾತಕನಾಗಿದ್ದಾನೆ. "ಅಶ್ವಂ ನೈವ ಗಜಂ ನೈವ ಸಿಂಹಂ ನೈವಚ ನೈವಚ। ಅಜಾಪುತ್ರಂ ಬಲಿಂ ದದ್ಯಾತ್ ದೇವೋ ದುರ್ಬಲಘಾತಕಃ॥ ಅಂದರೆ ದೇವನು ದುರ್ಬಲವಾದ ಕುರಿಕೋಳಿಗಳ ಬಲಿಬೇಡುವನೇ ವಿನಾ ಬಲವಾದ ಸಿಂಹ ಹುಲಿ ಆನೆಗಳನ್ನು ಬಲಿಬೇಡುವದಿಲ್ಲ. ಆದ್ದರಿಂದ ಸಬಲರು ದುರ್ಬಲರನ್ನು ಘಾತಿಸುವದೇ ಜಗತ್ತಿನ ಧರ್ಮವಾಗಿ ಬಿಟ್ಟಿದೆ. ಅಂತೆಯೇ ದೊಡ್ಡ ಮೀನಗಳು ಸಣ್ಣ ಮೀನಗಳನ್ನು ತಿನ್ನುವವು. ಬೆಕ್ಕುಗಳು ಇಲಿಗಳನ್ನು ನುಂಗುವವು. ದೊಡ್ಡ ಪಕ್ಷಿಗಳು ಸಣ್ಣ ಪಕ್ಷಿಗಳನ್ನ ತಿಂಬುವವು. ಸಣ್ಣ ಪಕ್ಷಿಗಳು ಕ್ರಿಮಿಕೀಟಕಗಳನ್ನು ಭಕ್ಷಿಸುವವು. ಬಲಾಢ್ಯ ರಾಷ್ಟ್ರಗಳು ದುರ್ಬಲರಾಷ್ಟ್ರಗಳನ್ನು ನುಂಗಿ ನೀರು ಕುಡಿಯುವವು. ಸಿರಿವಂತರು ಬಡವರ ಸೊತ್ತನ್ನು ಹೀರಿ ಹಿಪ್ಪೆಮಾಡುವರು. ಮಾಂಸಾಹಾರಿಗಳು ತಮ್ಮ ನಾಲಿಗೆಯ ಚಾಪಲ್ಯಕ್ಕಾಗಿ ಮೂಕ ಪ್ರಾಣಿಗಳ ವಧೆ ಮಾಡುವರು.

ಸರ್ವಜ್ಞನು ಹೇಳುವದೇನಂದರೆ "ಜೀವಿ ಜೀವಿಯ ತಿಂದು ಜೀವಿಪುದು ಜಗವೆಲ್ಲ। ಜೀವದಿಂ ಹೊರಗೆ ತಿಂಬರನು। ನಾ ಕಾಣೆ। ಜೀವನೇ ಜಗವು ಸರ್ವಜ್ಞ॥" ಒಂದು ಜೀವದಿಂದಲೇ ಇನ್ನೊಂದು

ಜೀವವು ಬಾಳುವದರಿಂದ ಹಿಂಸೆಗೆ ಎಲ್ಲೆಡೆಯಲ್ಲಿಯೂ ಆಸ್ಪದವುಂಟು. ಈ ಜಗತ್ತಿನಲ್ಲಿ ಅರ್ಧಕ್ಕರ್ಧ ಜನರಿಗೆ ಮಾಂಸವೇ ಆಹಾರವಾಗಿರುವದು. ಈ ವಿಷಯದಲ್ಲಿ ಸರ್ವಜ್ಞನು ಹೇಳಿರುವದೇನಂದರೆ "ಚರಜೀವವನು ತಿಂದು ಚರಿಸುವದು ಜಗವರ್ಧ। ಚರಿಸದ ಜೀವಗಳ ತಿಂದು ಜಗವರ್ಧ। ಚರಿಸುವದು ನೋಡ ಸರ್ವಜ್ಞ॥" ಆದುದರಿಂದ ತಾನು ಬದುಕಲೇಬೇಕಾದ ಆಹಾರಕ್ಕಾಗಿ ಒಂದುವೇಳೆ ಪ್ರಾಣಿವಧೆ ಆಗಬಹುದು ಆದರೆ ಎಲ್ಲಿ ಸಸ್ಯಾದಿ ಪದಾರ್ಥಗಳೂ ಹಣ್ಣುಹಂಪಲಗಳೂ ಸಮೃದ್ಧವಾಗಿ ಬೆಳೆಯುವವೋ ಅಂಥ ನಾಡುಗಳಲ್ಲಿ ಆಹಾರಕ್ಕಾಗಿ ಪ್ರಾಣಿವಧೆ ಮಾಡುವದು ಪಾಶವು. ಒಂದು ಜೀವಿಯು ಅನ್ಯಜೀವಿಯನ್ನು ತಿಂದು ಬೇರೆ ಜೀವಗಳನ್ನು ಹುಟ್ಟಿಸುವದರಿಂದ ಜೀವಗಳು ನಾಶವಾದಂತಾಗುವದಿಲ್ಲ. ಆದರೆ ಸ್ವಾರ್ಥದುರಾಶೆಗಳಿಂದ ಪ್ರಾಣಿಹಿಂಸೆ ಮಾಡುವದೇ ಪಾಪವೆಂದು ಸರ್ವಜ್ಞನ ಮತ. ಆದಕ್ಕಾಗಿ ಅವನು ಹೇಳಿದ್ದೇನಂದರೆ "ಜೀವಿಜೀವವ ತಿಂದು ಜೀವಗಳ ಹುಟ್ಟಿಸಲು। ಸಾವು ಎಲ್ಲಿಯದು? ಸ್ವಾರ್ಥವೆ ಜಗದೊಳಗೆ ಸಾವು ಕಾಣಯ್ಯ ಸರ್ವಜ್ಞ॥"

ಕೆಲವು ಹಿಂಸ್ರ ಪಶುಗಳು ಕ್ರಿಮಿಕೀಟಗಳು ಮನುಷ್ಯನಿಗೆ ಬಾಧೆಪಡಿಸುವದರಿಂದ ಅವುಗಳ ಬೇಟೆಯಾಡುವದಾಗಲಿ ಕೊಲ್ಲುವದಾಗಲಿ ಹಿಂಸೆಯೆನಿಸಿಲ್ಲ. ಹುಲಿ ಚಿರ್ಚ ಸಿಂಹ ಮೊದಲಾದವುಗಳು ಊರದನಗಳನ್ನು ಹಿಂಸೆಪಡಿಸುತ್ತಿರುವದರಿಂದ ರಾಜರು ಅವುಗಳ ಬೇಟೆಯಾಡಿ ಸುರಕ್ಷತೆಯನ್ನುಂಟು ಮಾಡುವರು. ಹಾವು ಚೇಳುಗಳಿಂದ ನಮಗೆ ಬಾಧೆಯಾಗುವ ಕಾರಣ ಅವುಗಳನ್ನು ಜನರು ಕೊಲ್ಲುವದುಂಟು ಇವೆಲ್ಲ ಹಿಂಸೆಯೊಳಗೆ ಬರುವದಿಲ್ಲ.

ಜೈನರು ಅಹಿಂಸಾವ್ರತವನ್ನು ಬಹು ಸೂಕ್ಷ್ಮವಾಗಿ ಆಚರಿಸಬೇಕೆಂದು ಹೇಳುತ್ತಾರೆ. ಯಾವ ಪ್ರಾಣಿಗಳನ್ನೂ ಎಂದೂ ಕೊಲ್ಲಬಾರದೆಂಬದೇನೋ ಉತ್ತಮ ಗುಣವೇ ಸರಿ. ಅಂತೆಯೇ ಸರ್ವಜ್ಞನು "ಕೊಲುವ ಧರ್ಮವ ನೊಯ್ದು ಒಲೆಯೊಳಗೆ ಇಕ್ಕುವಾ। ಕೊಲಲಾಗದೆಂಬ ಜೈನನ ಮತವೆನ್ನ। ತಲೆಯ ಮೇಲಿರಲಿ ಸರ್ವಜ್ಞ॥" ಹೀಗೆ ಜೈನ ಧರ್ಮವನ್ನು ಸರ್ವಜ್ಞನು ತಲೆಯ ಮೇಲೆ ಹೊತ್ತರೂ ಅತಿ ದೀರ್ಘಕ್ಕೆ ಹೋಗಿ ಜೈನರು ಮಾಡುತ್ತಿರುವ ದೋಷವನ್ನು ಆತನು

ಅಲ್ಲಗಳೆಯದೆ ಬಿಟ್ಟಿಲ್ಲ. ಜೈನರು ಹೇನು ಕೂರಿಗಳನ್ನು ಕೊಲ್ಲದೆ ಕಡೆಗೆ ಚಲ್ಲುವರು. ಆಮೇಲೆ ಅವು ಸತ್ತವೋ ಬದುಕಿದವೋ ಅದರ ವಿಚಾರ ಮಾಡುವದಿಲ್ಲ. ಆದರೆ ತನ್ನಲ್ಲಿ ಹುಟ್ಟಿದ ಜೀವಿಗಳ ರಕ್ಷಣೆ ಮಾಡುವವನೇ ನಿಜವಾದ ಜೈನನೆಂಬದು ಸರ್ವಜ್ಞನ ಮತ. "ಹೇನು ಕೂರಿಗಳನ್ನು। ತಾನಾಗಿ ಜಿನಕೊಲ್ಲ। ಸ್ಥಾನಪಲ್ಲಟವ ಮಾಡಿದೊಡಾ ಮೇಲೆ ಏನಾದುದರಿಯ ಸರ್ವಜ್ಞ॥ ಪ್ರಾಣಿರಕ್ಷಣೆಯೇ ನಿಜವಾದ ಧರ್ಮವೆಂದು ಹೇಳುವಲ್ಲಿ ಸರ್ವಜ್ಞನು "ಎಂತು ಜೀವಿಯ ಕೊಲ್ಲ। ದಂತಿಹುದು ಜಿನ ಧರ್ಮ। ಜಂತುಗಳ ತಾನು ತೊರೆಯದಲೆ। ಸಲುಹುತಿ। ರ್ಪಂತವನೆ ಜೈನ ಸರ್ವಜ್ಞ॥"

ಬೌದ್ಧರು ಯಜ್ಞಯಾಗಾದಿಗಳಲ್ಲಾಗುವ ಹಿಂಸೆಯನ್ನು ಖಂಡಿಸಿದರು. ಸಸ್ಯ ಸಮೃದ್ಧವಾದ ದೇಶದಲ್ಲಿ ದೇವರ ಹೆಸರಿನಿಂದ ಮೂಲಕ ಪ್ರಾಣಿಗಳನ್ನು ಬಲಿಕೊಟ್ಟು ಅವುಗಳನ್ನು ಭಕ್ಷಿಸುವದು ಪಾಪವು. ಅದನ್ನು ನೋಡಿ ಸಹಿಸಲಾರದೆ ಬುದ್ಧ ಮಹಾತ್ಮನು ಅಹಿಂಸಾ ತತ್ವವನ್ನು ಸಾರಿದನು. ಬಸವಾದಿ ಶರಣರು ಸಹ ಯಜ್ಞಯಾಗಾದಿಗಳಲ್ಲಾಗುವ ಹಿಂಸೆಯನ್ನು ಖಂಡತುಂಡವಾಗಿ ನಿಷೇಧಿಸಿದ್ದಾರೆ. ಹೋತುಗಳ ವಧೆಯನ್ನು ಕಂಡು ಅನುಕಂಪಿತ ಹೃದಯರಾಗಿ ಬಸವಣ್ಣನವರು ಹೇಳಿರುವದೇನಂದರೆ "ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ ಅಳು ಕಂಡೆಯಾ. ವೇದವನೋದಿದವರ ಮುಂದೆ ಅಳು ಕಂಡೆಯಾ. ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ. ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವಾ." 'ಆಯಿಸಲ್ಯಾಂಡ' ಮೊದಲಾದ ಶಾಕಾಹಾರ ಸಿಗದ ನಾಡುಗಳಲ್ಲಿ ಜನಗಳು ಕರಡಿ ಚಿಗರಿಗಳನ್ನು ತಿಂದು ಜೀವಿಸುವದುಂಟು. ಅವರಿಗಾಗಿ ಇಂಥ ಮಾತುಗಳನ್ನು ಶರಣರು ಹೇಳುವದಿಲ್ಲ. ಆದರೆ ಕಾಳುಕಡಿಗಳು ಸಮೃದ್ಧವಾಗಿ ಸಿಗುವ ಸುಭಿಕ್ಷವಾದ ನಾಡಿನಲ್ಲಿ ಹೋತನ್ನು ಕೊಂದು ತಿಂಬ ಹಿಂಸಕರಿಗೆ ಬಸವಣ್ಣನವರು ಬುದ್ಧಿವಾದ ಹೇಳಿದ್ದಾರೆ.

ಒಂದು ರಾಷ್ಟ್ರವು ಪರರಾಷ್ಟ್ರಗಳ ಸೊತ್ತನ್ನು ಹೀರಿ ತಾನು ಸೊಕ್ಕಬೇಕೆಂಬ ದುಷ್ಟ ಲಾಲಸೆಯ ಮೂಲಕವಾಗಿಯೇ ಯುದ್ಧಗಳು ನಡೆದಿರುತ್ತವೆ. ಅದಕ್ಕಾಗಿ ಲಕ್ಷಾಂತರ ಜೀವರುಗಳ ಆಹುತಿಯಾಗುತ್ತಿದೆ. ಶರಣರು ಯುದ್ಧದಲ್ಲಾಗುವ ಹಿಂಸೆಯನ್ನು ನಿಷೇಧಿಸುತ್ತಾರೆ. ಅವರು

ಹೇಳುವದೇನಂದರೆ "ಆದಿಪುರಾಣ ಅಸುರರಿಗೆ ಮಾರಿ. ವೇದಪುರಾಣ ಹೋತಿಂಗೆ ಮಾರಿ. ರಾಮಪುರಾಣ ರಕ್ಕಸರಿಗೆ ಮಾರಿ. ಭಾರತ ಪುರಾಣ ಬಂಧುಗಳಿಗೆ ಮಾರಿ. ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ ಕೂಡಲಸಂಗಮ ದೇವಾ" ಹಿಂದೆ ಕಾಲಕಾಲಕ್ಕೆ ಹೊನ್ನಿಗಾಗಿಯೋ, ಹೆಣ್ಣಿಗಾಗಿಯೋ ಮಣ್ಣಿಗಾಗಿಯೋ ಅನೇಕ ಯುದ್ಧಗಳಾದವು. ಈಗಲೂ ನಡೆದಿರುತ್ತವೆ. ಇಂಥ ಜೀವಘಾತಕದ ಯುದ್ಧಗಳನ್ನು ಶರಣರೆಂದಿಗೂ ಮನ್ನಿಸಲಾರರು. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಶ್ರೇಷ್ಠರು. ತಮ್ಮ ಧರ್ಮದ ಮೇಲೆ ಆಚಾರ ವ್ರತಗಳ ಮೇಲೆ ಯಾರಾದರೂ ಕೈ ಮಾಡಿದರೆ ಮಾತ್ರ ತತ್ವರಕ್ಷಣೆಗಾಗಿ ನಿಂದಕರ ಮತ್ತು ಹಿಂಸಕರ ಮೇಲೆ ಖಡ್ಗವನ್ನೆತ್ತಿ ಗಣಾಚಾರವನ್ನು ಪಾಲಿಸುವರು. ಉಳಿದ ಐಹಿಕ ವಿಷಯಲೋಲುಪತೆಯಿಂದ ಖಡ್ಗವನ್ನೆತ್ತುವವರಲ್ಲ. ಯುದ್ಧ ಮಾಡಿದರೆ ವೀರಸ್ವರ್ಗಸಿಗುತ್ತದೆಂದಾಗಲಿ. ಪರಚಕ್ರಗಳನ್ನು ಗೆದ್ದು ಕೀರ್ತಿಧ್ವಜವನ್ನು ಮೆರೆಯಿಸಬೇಕೆಂಬ ಲಾಲಸೆಯಿಂದಾಗಲಿ, ಪರರ ಸೊತ್ತನ್ನು ನುಂಗಿ ನೀರಿಳಿಯಬೇಕೆಂಬ ಸ್ವಾರ್ಥಗುಣದಿಂದಾಗಲಿ ಅವರು ಹೋರಾಡುವಂಥವರಲ್ಲ. ತಮ್ಮ ವ್ರತನೇಮಾದಿಗಳಿಗೆ ಭಂಗತರುವ ದುರುಳರನ್ನಷ್ಟೇ ಅವರು ದಂಡಿಸುವರು. ಇಲ್ಲವೆ ದುಷ್ಟರ ನೆರವಿನಿಂದ ದೂರಾಗುವರು. ಇಲ್ಲವೆ ಅಪಮಾನಕ್ಕೆ ಗುರಿಯಾಗದೆ ಪ್ರಾಣವನ್ನು ನೀಗಿ ಬಿಡುವರು. ಆದರೆ ಹೇಡಿತನದಿಂದ ಒಬ್ಬರ ದಾಸ್ಯಕ್ಕೊಳಗಾಗಿ ತಮ್ಮ ವ್ರತನೇಮಾದಿಗಳಿಗೆ ಭಂಗತಂದುಕೊಳ್ಳುವವರಲ್ಲ.

ಕ್ರೈಸ್ತನು ಹೇಳುವ ಅಹಿಂಸಾ ವ್ರತವು ಅತ್ಯಂತ ಹೆಚ್ಚಿನ ತರಗತಿಯದಾಗಿರುತ್ತದೆ. ಅದು ಜನಸಾಮಾನ್ಯರಿಗೆ ಮೀರಿದುದು. ಮಾನವಲೋಕದ ದೇವರಷ್ಟೇ ಅದನ್ನು ಆಚರಿಸಬಲ್ಲರು. ಕ್ರಿಸ್ತನಲ್ಲಿ ಸಹನಶೀಲತೆಯು ಪರಾಕಾಷ್ಠೆಯನ್ನು ಮುಟ್ಟಿದೆ. ಆತನು ಹೇಳುವದೇನಂದರೆ, "*Love your enemies as you love your friends. Bless them that cure you. Do good to them that hate you. Pray for them which dispitefully use you and persecute you.*" ಅಂದರೆ ನೀವು ನಿಮ್ಮ ಮಿತ್ರರನ್ನು ಪ್ರೀತಿಸುವಂತೆ ಶತ್ರುಗಳನ್ನೂ ಪ್ರೀತಿಸಿರಿ. ನಿಮ್ಮನ್ನು ಶಪಿಸುವವರಿಗೆ ಅನುಗ್ರಹಿಸಿರಿ. ನಿಮ್ಮನ್ನು ತಿರಸ್ಕರಿಸುವವರಿಗೆ ಒಳಿತುಮಾಡಿರಿ. ನಿಮ್ಮನ್ನು ಕೆಟ್ಟರೀ

ತಿಯಿಂದ ಕಾಣುವವರಿಗೂ ನಿಮ್ಮ ಸುತ್ತ ಕೈತೊಳೆದುಕೊಂಡು ಬೆನ್ನುಹತ್ತಿದವರಿಗೂ ದೇವರು ಒಳ್ಳೇ ಮತಿಯನ್ನೀಯಲೆಂದು ಪ್ರಾರ್ಥಿಸಿರಿ. ಕ್ರಿಸ್ತನ ಮತದಲ್ಲಿ ತಲೆಯನ್ನು ಕತ್ತರಿಸುವದಕ್ಕಿಂತ ಹೃದಯವನ್ನು ಗೆಲ್ಲುವದೇ ಹೆಚ್ಚಿನ ಧರ್ಮವೆನಿಸುತ್ತದೆ. "*It is better to win the heart than to overthrow the head.*" ನಮ್ಮ ಮುಪ್ಪಿನ ಷಡಕ್ಷರ ಸ್ವಾಮಿಗಳಾದರೂ ಇದೇ ರೀತಿಯಾಗಿ ಹೇಳಿದ್ದಾರೆ. "ಎನ್ನನೆಲ್ಲ ವಿಧಗಳಿಂದ ಕಾಡಿದವರಿಗೆ। ಎನ್ನ ಪೂಜೆ ಫಲಗಳೆಲ್ಲ ಉನ್ನತವೊಳು ಅವರಿಗಾಗಿ ಸುಖದಿ ಬಾಳಲಿ॥

'ಶಠಂ ಪ್ರತಿ ಶಾಠ್ಯಂ' ಅಂದರೆ ಕೆಡಕು ಮಾಡಿದವನಿಗೆ ಕೆಡಕು ಮಾಡಿಯೇ ತೀರಬೇಕು. 'ಕಂಟಕೇನ್ಯೈವ ಕಂಟಕಂ' ಅಂದರೆ ಮುಳ್ಳಿನಿಂದಲೇ ಮುಳ್ಳನ್ನು ಕಿತ್ತೊಗೆಯಬೇಕು ನಂಬ ಪ್ರತೀಕಾರ ಗುಣಕ್ಕೆ ಕ್ರಿಸ್ತನ ಮತದಲ್ಲಿ ಎಳ್ಳಷ್ಟು ಇಂಬಿಲ್ಲ. "ನಿನ್ನ ಕೋಟನ್ನು ಕಸೆದುಕೊಂಡವರಿಗೆ ಜಾಕೀಟನ್ನು ಕೊಡು. ಬಲಕೆನ್ನೆಯ ಮೇಲೆ ಹೊಡೆದವರಿಗೆ ಎಡಕೆನ್ನೆಯನ್ನು ನೀಡು." ಎಂಬ ಸಹನಶೀಲ ಗುಣವು ಸಾಮಾನ್ಯರಲ್ಲಿ ಬರುವದು ಅತ್ಯಂತ ಕಠಿಣವು. ಕ್ರಿಸ್ತನಂಥ ಸತ್ಪುರುಷನಿಗೆ ಮಾತ್ರ ಇಂಥ ಸೈರಣೆಯು ಸಲ್ಲುವದಲ್ಲದೆ ಅನ್ಯರಿಗೆ ಸಲ್ಲುವದೇ ?

ಮಹಾತ್ಮಾ ಗಾಂಧಿಯವರ ಸತ್ಯಾಗ್ರಹವು ಒಂದು ತರಹದ ಅಹಿಂಸೆಯೇನೋ ನಿಜ. ಆದರೆ ಸತ್ಯಾಗ್ರಹಿಗಳು ಬಲಕೆನ್ನೆಯ ಮೇಲೆ ಹೊಡೆದರೆ ತಿರುಗಿ ಪ್ರತೀಕಾರ ಮಾಡುವದಿಲ್ಲ ಅಷ್ಟೇ. ಆದರೆ ಎಡಕೆನ್ನೆಯನ್ನು ಮಾತ್ರ ಕೊಡಲಾರರು. ಕೋಟು ಕಸೆದುಕೊಂಡರೆ ಸುಮ್ಮನಿರಬಹುದು. ಆದರೆ ಜಾಕೀಟನ್ನು ತಾವಾಗಿಯೇ ಬಿಚ್ಚಿಕೊಡಲಾರರು. ಅಹಿಂಸೆಯು ಹೇಡಿಗಳ ಲಕ್ಷಣವೆಂದು ಯಾರೂ ಸರ್ವಥಾ ತಿಳಿಯಬಾರದು. ಅದು ಸಾಮಾನ್ಯರ ಶಸ್ತ್ರವಲ್ಲ. ಹೇಡಿಗಳ ತುತ್ತಲ್ಲ. ಅದನ್ನು ಆಚರಿಸುವವರು ಮಹಾಮಹಿಮರಿರಲೇಬೇಕು. ಕ್ರೈಸ್ತನಂಥ ಸೈರಣೆಯು ಬಸವಾದಿ ಶರಣರಲ್ಲಿಯೂ ಕಂಡುಬರುತ್ತಿದೆ. ಒಮ್ಮೆ ಒಬ್ಬ ಕಳ್ಳನು ನೀಲಮ್ಮನವರ ಕರ್ಣಾಭರಣಗಳನ್ನುಬಿಚ್ಚಿಕೊಳ್ಳುವಾಗ ಬಸವಣ್ಣನವರಿಗೆ ಎಚ್ಚರವಾಗಲು "ನಮ್ಮ ಅಯ್ಯನ ಕೈ ನೊಂದೀತು. ಆಭರಣಗಳನ್ನು ತೆಗೆದುಕೊಡಾ" ಎಂದು ಹೆಂಡತಿಗೆ ಸಿಟ್ಟುಮಾಡಿದರಂತೆ. ಒಮ್ಮೆ ಕಳ್ಳರು

ಬಸವಣ್ಣನವರ ಆವುಗಳನ್ನು ಕದ್ದೊಯ್ದಿರಲು ಗೋಪಾಲಕರು ಈ ಸುದ್ದಿಯನ್ನು ಬಸವಣ್ಣನವರಿಗೆ ತಿಳಿಸಿದರು. ತತ್‌ಕ್ಷಣವೇ ಅವರು ಗೋಪಾಲರಿಗೆ "ಆಕಳ ಕಳ್ಳರು ಕೊಂಡರೆನಬೇಡೆಲವೋ. ಸಂಗ ಕೊಂಡಿಲ್ಲೆಂದು ಗಳಹದಿರೆಲವೋ. ಅಲ್ಲಿ ಉಂಬನು ಸಂಗ, ಇಲ್ಲಿ ಉಂಬನು ಸಂಗ. ಕೂಡಲಸಂಗಮದೇವನೇಕೋ ಭಾವ ಕಾಣಿರೋ." ಎಂದು ಹೇಳಿ ಕರುಗಳನ್ನು ಸಹ ಆಕಳುಗಳ ಬಳಿಗೆ ಕಳುಹಿಸಿಕೊಟ್ಟರಂತೆ. ಮುಪ್ಪಿನ ಷಡಕ್ಷರಸ್ವಾಮಿಗಳು ತಮ್ಮ ಹಾಡಿನಲ್ಲಿ ತೋರಿಸಿದ ಸೈರಣೆಗೆ ಪಾರಾವಾರವೇ ಇಲ್ಲ.

ಚರನು ಓರ್ವ ಬಂದು ಎನ್ನ । ಸಿರದ ಮೇಲೆ ಕೆರವಗಾಲ । ಒರಸೆ ಶಿವಷಡಾಕ್ಷರಾಂಕ ಬಂದು ಕರುಣದಿ ॥ ಚರಣಯುಗವ[illegible]ನೆನ್ನ । ಶಿರದ ಮೇಲೆಯೆನುತ ನಂಬಿ । ಹರುಷಬಡುವ ಭಕ್ತಿಯೆನಗೆ ಎಂದಿಗಪ್ಪುದೋ ಶಿವನೇ ॥

ಕ್ರೈಸ್ತನು ದುಷ್ಟರ ದುರ್ವರ್ತನೆಗೆ ತಳಮಳಗೊಂಡು ದೇವರಿಗೆ ಪ್ರಾರ್ಥಿಸಿಕೊಂಡರೆ ಶರಣರು ದುಷ್ಟರಾಚರಿಸುವ ಹಿಂಸೆಯನ್ನು ಪರಮಾತ್ಮನೇ ತನ್ನ ಪರೀಕ್ಷಾರ್ಥವಾಗಿ ಮಾಡುವನೆಂದು ಹರುಷಬಡುವರು. ಕ್ರಿಸ್ತನಿಗೂ ಶರಣರಿಗೂ ಇಷ್ಟೇ ಭೇದ.

ಕ್ರಿಸ್ತನು ಬೇರೊಂದೆಡೆಗೆ ಹೇಳುವದೇನಂದರೆ "*Fear not them who kill thy body but are not able to kill the soul but rather fear him who sacrifices both his body and soul in hell.*" ಅಂದರೆ ಶರೀರವನ್ನು ಕೊಲ್ಲುವವನಿಗೆಂದೂ 'ಹೆದರಬೇಡ. ಯಾಕಂದರೆ ಆತನು ನಿನ್ನ ಆತ್ಮವನ್ನೆಂದಿಗೂ ಕೊಲ್ಲಲಾರನು. ಆದರೆ ಯಾವಾತನು ತನ್ನ ಶರೀರವನ್ನೂ ಆತ್ಮವನ್ನೂ ನರಕಯಾತನೆಗೆ ಆಹುತಿ ಕೊಡುವನೋ ಅವನಿಗೆ ಮಾತ್ರ ಅಂಜು."

ಮತ್ತೊಂದೆಡೆಗೆ ಕ್ರೈಸ್ತನು ಹೀಗೆ ಹೇಳಿದ್ದಾನೆ. "*He that findeth life shall lose it and he that loseth life for my sake shall find it*" ಅಂದರೆ ಜೀವವನ್ನುಳಿಸಿಕೊಳ್ಳಬೇಕೆಂಬುವವರು ಸಾಯಲೇಬೇಕು. ಆದರೆ ಪರಮಾತ್ಮನಿಗಾಗಿ ಸತ್ತ

ವರು ಯಾವಾಗಲೂ ಜೀವಿಸಿರುವರು. ಇದೇ ಮಾತನ್ನೇ ಬಸವಣ್ಣ ನವರು ಸ್ವಲ್ಪ ಹೆಚ್ಚುಕಡಿಮೆಯಾಗಿ ಹೇಳಿರುವರು. ಬಿಜ್ಜಳ ದೊರೆಯು ಹರಳಯ್ಯ ಮಧುವಯ್ಯಗಳನ್ನು ಶೂಲಕ್ಕೇರಿಸಿ ಕೊಲ್ಲಿಸುವೆನೆಂಬ ಹಟ ಹಿಡಿದಾಗ ಬಸವೇಶನು ಹಡಪದಪ್ಪಣ್ಣಗಳ ಮುಖಾಂತರವಾಗಿ ಹರಳ ಯ್ಯನಿಗೂ ನೀಲಮ್ಮನಿಗೂ ಈ ಪ್ರಕಾರ ಸಂದೇಶವನ್ನು ಕಳಿಸಿ ಕೂಡಲ ಸಂಗಯ್ಯನಲ್ಲಿ ಐಕ್ಯವಾದನು.

ಕೊಂದವರು ಸಾಯುವರು ಕೊಲ್ಲದೆ ನಂದದಿಂದ ಸತ್ತವರು ಬಾಳ್ವರು, ಕುಂದದೀ ನುಡಿಯನ್ನರುಹು ಹರಳೇಶ ಶರಣಂಗೆ ॥

ಸಂದ ಶರಣನ ಕೊಲೆಯು ಮುನ್ನವೆ ಹೊಂದುವೆನು ಸಂಗನೊಳ ಗೈಕ್ಯವ ಮುಂದಿಹಾಗಿನಿ ನೀಲಲೋಚನೆಗಿದನು ನೀನರುಹು ॥

ಅಹಿಂಸಾ ವ್ರತವನ್ನಾಚರಿಸುವವರು ಸತ್ಪುರುಷರಾಗುವರೆಂದು ಚಿನ್ನ ಬಸವಣ್ಣನವರು ಫಲಶ್ರುತಿಯನ್ನು ಹೇಳಿದ್ದಾರೆ. ಒಟ್ಟಿನ ಮೇಲೆ ಸ್ವಾರ್ಥ ಕ್ಕಾಗಿ ಪರರಿಗೆ ಕೆಡಕುಮಾಡುವದೇ ಹಿಂಸೆಯು. ಪರಪೀಡೆಗಿಂತ ಅಧಿಕ ವಾದ ಪಾಪವಿಲ್ಲೆಂದು ಶಾಸ್ತ್ರಗಳು ಸಾರುತ್ತವೆ. ಆದುದರಿಂದ ಶರಣ ರಾಚರಿಸುವ ಅಹಿಂಸಾವ್ರತವೇ ಜಗನ್ಮಾನ್ಯವಾದುದು.

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

ಲೇಖಾಂಕ ೨೪.

## ಶಿವಾನುಭವಮಂಟಪ.

ನಾವು "ಬಸವೇಶ್ವರನು ಮಂತ್ರಿಯಾದ ಬಳಿಕ ಮಾಡಿದ ಕಾರ್ಯಗಳು" ಎಂಬ ಶೀರ್ಷಿಕೆಯನ್ನಿಟ್ಟುಕೊಂಡು ಹಿಂದಿನ ತಿಂಗಳಿನ ಸಂಚಿಕೆಯಲ್ಲಿ ಬರೆದ ಲೇಖದಲ್ಲಿ ಅವನ (೧) ರಾಜಕಾರಣ, (೨) ಧರ್ಮೋದ್ಧಾರ ಕಾರ್ಯಗಳು, (೩) ಪವಾಡಗಳು, ಎಂದು ಮೂರು ವಿಭಾಗಗಳನ್ನು ಮಾಡಿ ಮೊದಲನೆಯದಾದ ರಾಜಕಾರಣವನ್ನು ಕುರಿತು ಪ್ರಸ್ತಾಪಿಸಿದೆವು. ಈಗಿನ ಲೇಖದಲ್ಲಿ 'ಧರ್ಮೋದ್ಧಾರ ಕಾರ್ಯಗಳು' ಈ ವಿಷಯವನ್ನು ಕುರಿತು ಬರೆಯಬೇಕಾಗಿದ್ದು ಬಸವೇಶ್ವರನು ಈ ಕಾರ್ಯವನ್ನು ಜರಗಿಸುವದಕ್ಕೋಸ್ಕರ 'ಶಿವಾನುಭವಮಂಟಪ'ವನ್ನು ರಚಿಸಿದ್ದು ಇದರ ಸ್ವರೂಪವನ್ನು ಕುರಿತು ನಾವು ಬಹು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸುವೆವು. ಈ ಮಂಟಪನನ್ನು ಕುರಿತು ಇಷ್ಟರಲ್ಲಿಯೇ ಅನೇಕ ಲೇಖಕರು ತಮ್ಮ ವಿಚಾರಗಳನ್ನು ಪ್ರಕಟಮಾಡಿದ್ದಾರೆ. ಆದ್ದರಿಂದ ಅವುಗಳನ್ನು ನಾವು ಈ ಲೇಖದಲ್ಲಿ ಪುನರುಕ್ತಿ ಮಾಡದೆ ಈ ಮಂಟಪದ ಮೂಲಕ ವೀರಶೈವ ವಾಙ್ಮಯದ ಮೇಲೆ ಆವ ಪರಿಣಾಮಗಳಾದವು, ವೀರಶೈವ ಧರ್ಮಪ್ರಸಾರ ಕಾರ್ಯದಲ್ಲಿ ಅದರಿಂದ ಯಾವ ಪ್ರಯೋಜನಗಳಾದವು, ಈ ವಿಷಯಗಳನ್ನು ಕುರಿತು ಬಹು ಸಂಕ್ಷಿಪ್ತವಾಗಿ ವಿವರಿಸುತ್ತೇವೆ.

ಬಸವೇಶ್ವರನ ಚರಿತ್ರೆಯ ವಿಷಯವಾಗಿ ನಾವು ಬರೆಯುತ್ತ ಬಂದ ಲೇಖಗಳಲ್ಲಿ ಈಗಿನದು ೨೪ನೆಯದಾಗಿದೆ. ಈ ಲೇಖಮಾಲೆಯ ಮುಂದಿನ ಲೇಖಗಳಾವವೆಂಬುದನ್ನು ತಿಳಿಯಲು ನಮ್ಮ ಬಹುಜನ ವಾಚಕರು ಕುತೂಹಲಪಟ್ಟಿರುತ್ತಾರೆ. ನಾವು ಈ ಲೇಖಗಳನ್ನು ಬಹು ತೀವ್ರವಾಗಿಯೇ ಮುಗಿಸಿ ಈ ವರೆಗೆ ನಾವು ಚರ್ಚಿಸಿದ ವಿಷಯಗಳನ್ನೊಳಕೊಂಡ ಒಂದು ಸ್ವತಂತ್ರ ಗ್ರಂಥವನ್ನೇ ರಚಿಸುವದು ಅವಶ್ಯವೆಂದು ಕಂಡು ಬರಹತ್ತಿದೆ.

ನಾವು ಈ ಲೇಖದ ತರುವಾಯ (೧) ಒಂದು ಲಕ್ಷ ತೊಂಬತ್ತಾರು ಸಾವಿರ ಜಂಗಮರಾರು? (೨) ಬಸವೇಶ್ವರ ಮತ್ತು ಬಿಜ್ಜಳ ಇವರಲ್ಲಿದ್ದ ಪರಸ್ಪರ ಸಂಬಂಧವಾವುದು? (೩) ಬಸವೇಶ್ವರನ ಕಾರ್ಯ ಧೋರಣಗಳಾವವು? (೪) ವಚನವಾಙ್ಮಯದ ಮೂಲಕ ಉಂಟಾದ ಸಮಾಜಸಂಘಟನೆ (೫) ಹರಳಯ್ಯ ಮಧುವಯ್ಯಗಳ ವಿಷಯ (೬) ಉಳವಿಯ ಕದನ ಈ ವಿಷಯಗಳನ್ನು ಕ್ರಮವಾಗಿ ವಿವೇಚಿಸಿ ಕಡೆಗೆ ಬಸವೇಶ್ವರನ ಪವಾಡಗಳ ನಿಜಸ್ಥಿತಿಯನ್ನು ಕುರಿತು ಚರ್ಚಿಸುವೆವು. ನಮ್ಮ ಹತ್ತಿರ 'ಬಸವೇಶ್ವರ ದೇವರ ಪವಾಡ' ಎಂಬ ಹೆಸರಿನ ಚಿಕ್ಕದಾದ ಒಂದು ಗ್ರಂಥವಿದೆ. ಆದರಲ್ಲಿ ಒಂದೊಂದು ಪವಾಡಕ್ಕೆ ಒಂದೊಂದು ವಾರ್ಧಿಕ ಷಟ್ಪದಿಯು ಇದ್ದು ಈ ಗ್ರಂಥವನ್ನು ಮೊದಲು ಪ್ರಸಿದ್ಧಿಸುವದು ಅವಶ್ಯವಿದೆ. ಯಾಕಂದರೆ ಅದು ವಾಚಕರ ಕಯ್ಯಲ್ಲಿ ಇದ್ದರೆ ಪವಾಡಗಳ ವಿಷಯವಾಗಿ ನಾವು ಕೊಡುವ ಅಭಿಪ್ರಾಯಗಳು ಯೋಗ್ಯವೋ ಆಯೋಗ್ಯವೋ ಎಂಬದನ್ನು ವಾಚಕರು ಅರಿಯಲು ಶಕ್ಯವಾಗುತ್ತದೆ.

ಬಸವೇಶ್ವರನು ಆಗಿ ಹೋಗಿ ಇಂದಿಗೆ ಎಂಟುನೂರು ವರ್ಷಗಳಾದವು. ಇಷ್ಟು ಕಾಲಾವಧಿಯಾದ ಬಳಿಕ ಅವನ ಆಯುಷ್ಯದ ಪ್ರತಿಯೊಂದು ತಿಂಗಳಲ್ಲಿ ಅಥವಾ ವರ್ಷದಲ್ಲಿ ಆವ ಆವ ಸಂಗತಿಗಳು ಘಟಿಸಿದವೆಂಬುದನ್ನು ಗೊತ್ತುಪಡಿಸುವದು ಈಗ ದುಸ್ತರವಾದುದು. ಆದರೂ ಅವನ ಚಿಕ್ಕ ವಯಸ್ಸಿನಲ್ಲಿ ಸಮಾಜದ ಮತ್ತು ದೇಶದ ಪರಿಸ್ಥಿತಿ ಹೇಗಿತ್ತು, ಇದರ ಮೂಲಕ ಅವನ ಮನಸ್ಸಿನ ಮೇಲೆ ಆವ ಪರಿಣಾಮಗಳಾದವು, ಧರ್ಮ ಪ್ರಸಾರ ಕಾರ್ಯದಲ್ಲಿ ಅವನು ಕೈಕೊಂಡ ಧೋರಣಗಳಾವವು, ಇದರಲ್ಲಿ ಅವನಿಗೆ ಆವ ತಡೆಗಳುಂಟಾದವು, ಅವುಗಳನ್ನು ಅವನು ಹೇಗೆ ಪರಿಹಾರ ಮಾಡಿದನು, ಇಂಥ ಸಾಮಾನ್ಯ ವಿಷಯಗಳನ್ನು ಕುರಿತು ಭಿನ್ನ ಮತಗಳು ಉಂಟಾಗುವ ಅವಶ್ಯವಿಲ್ಲ. ಹಾಗೆಯೇ ಅವನ ನೈತಿಕ ವೃತ್ತಿಗೆ ಕುಂದು ತರುವ ವಿಷಯಗಳನ್ನು ನಾವು ಅವಶ್ಯವಾಗಿ ಚರ್ಚಿಸಬೇಕು ಈ ಧೋರಣವನ್ನಿಟ್ಟುಕೊಂಡು ನಾವು ಈ ವರೆಗೆ ೨೪ ಲೇಖಗಳನ್ನು ಪ್ರಸಿದ್ಧಿಸಿದ್ದೇವೆ. ಇವುಗಳಲ್ಲಿ ಚರ್ಚಾಸ್ಪದವಾದ ಅನೇಕ ವಿಷಯಗಳಿದ್ದರೂ ಅವುಗಳ ಬಗ್ಗೆಯೂ ನಾವು ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತ ಬಂದಿದ್ದೇವೆ. ಇದರಲ್ಲಿ ನಾವು ಬಸ

ವೇಶ್ವರನ ವಚನಗಳು, ಅವನ ವಿಷಯವಾಗಿ ರೂಢವಾಗಿದ್ದ ಐತಿಹ್ಯಗಳು, ಶಿಲಾಶಾಸನಗಳು, ಅವನ ಕಾಲದಲ್ಲಿ ಕರ್ನಾಟಕದಲ್ಲಿ ಸಂಭವಿಸಿದ ರಾಜಕಾರಣಗಳು, ಇವೇ ಮೊದಲಾದವುಗಳು ಅವನ ಚರಿತ್ರೆಯ ಮೇಲೆ ಆವ ಪ್ರಕಾಶವನ್ನು ಕೆಡಹುತ್ತವೆಂಬುದನ್ನು ವಿವೇಚಿಸುತ್ತ ಬಂದಿದ್ದೇವೆ. ನಮ್ಮ ಅಭಿಪ್ರಾಯಗಳನ್ನು ನಾವು ವಾಚಕರ ವಿಚಾರಕ್ಕೋಸ್ಕರ ಮಾತ್ರ ಅವರ ಮುಂದೆ ಇಟ್ಟಿದ್ದು ಅವುಗಳಲ್ಲಿಯ ದೋಷಗಳನ್ನು ಮತ್ತು ತಪ್ಪುಗಳನ್ನು ಅವರು ನಮಗೆ ತಿಳಿಯಪಡಿಸಿದಲ್ಲಿ ನಾವು ಅವರಿಗೆ ನಾವು ಬಹಳ ಆಭಾರಿಯಾಗುವೆವು. ನಾವು ಈಗ ಶಿವಾನುಭವ ಮಂಟಪದ ವಿಷಯವಾಗಿ ಈ ಲೇಖದಲ್ಲಿ ಬಹು ಸಂಕ್ಷಿಪ್ತವಾಗಿ ಚರ್ಚಿಸಲೆಣಿಸಿದ್ದೇವೆ.

## ಶಿವಾನುಭವ ಮಂಟಪದ ವೈಶಿಷ್ಟ್ಯಗಳು.

ಶಿವಾನುಭವ ಮಂಟಪದ ಸ್ವರೂಪದಲ್ಲಿ ಕೆಲವು ವೈಶಿಷ್ಟ್ಯಗಳಿವೆ. ಅವುಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ವಿವರಿಸಿರುತ್ತೇವೆ.

(೧) ಶಿವಾನುಭವ ಮಂಟಪದಲ್ಲಿ ಬಸವೇಶ್ವರನು ತಾನೊಬ್ಬ ಧರ್ಮಸ್ಥಾಪಕ ಅಥವಾ ಧರ್ಮ ಸುಧಾರಕನೆಂದು ಭಾವಿಸಿಕೊಂಡು ಅಲ್ಲಿ ವರ್ತಿಸಿರುವದಿಲ್ಲ. ಇದು ಅವನ ವಚನಗಳಲ್ಲಾಗಲಿ ಅಥವಾ ಅವನ ವರ್ತನೆಯಲ್ಲಾಗಲಿ ಎಷ್ಟು ಮಾತ್ರವೂ ಕಂಡುಬರುವದಿಲ್ಲ. ಇತರ ಶಿವಶರಣರೂ ಅವನಂತೆಯೇ ವರ್ತಿಸಿದ್ದಾರೆ. ಇದು ಈ ಮಂಟಪದ ಒಂದು ವೈಶಿಷ್ಟ್ಯವಾಗಿದೆ. ಜೇಜಸ ಕ್ರೈಸ್ತ ಮತ್ತು ಮಹಮ್ಮದ ಪೈಗಂಬರರು ಹೇಗೆ ತಾವು ದೇವ ಪ್ರಣೀತರಾಗಿ ಜನರನ್ನುದ್ಧಾರ ಮಾಡುವದಕ್ಕೋಸ್ಕರ ಅವತರಿಸಿ ಬಂದಿರುವೆವೆಂದು ಸಾರಿದರೋ, ಹಾಗೆ ಬಸವೇಶ್ವರನಾಗಲಿ ಇಲ್ಲವೆ ಇತರ ಶರಣರಾಗಲಿ ತಮ್ಮ ವಿಷಯವಾಗಿ ಎಲ್ಲಿಯೂ ಹೀಗೆ ಹೇಳಿಕೊಂಡಿರುವದಿಲ್ಲ. ಬಸವೇಶ್ವರನು ಬಹುಶ್ರುತನಾಗಿದ್ದನೆಂಬುದು ಅವನ ವಚನಗಳಿಂದ ಬಹು ಚನ್ನಾಗಿ ಗೊತ್ತಾಗುತ್ತದೆ. ಅವನು ವೇದಗಳು, ಪುರಾಣಗಳು, ಉಪನಿಷತ್ತುಗಳು, ಆಗಮಗಳು, ಇವುಗಳನ್ನೆಲ್ಲ ಚನ್ನಾಗಿ ಪರಿಶೀಲಿಸಿದವನಾಗಿದ್ದಾನೆಂಬದು ಅವನ ವಚನಗಳಲ್ಲಿ ಆಗಿಂದಾಗ್ಗೆ ಬರುವ ಅವತರಣಿಕೆಗಳಿಂದ ಸ್ಪಷ್ಟವಾಗುತ್ತದೆ. ಆದರೂ ಕೂಡ ಬಸವೇಶ್ವರನು ತಾನೊಬ್ಬ ಉಚ್ಚ ಧಾರ್ಮಿಕ ಮನುಷ್ಯನೆಂಬ ಭಾವವನ್ನು ತಾಳದೆ, ತಾನೊಬ್ಬ ದೀನ ಮನುಷ್ಯನು, ಗೊತ್ತಿಲ್ಲದವನು,

ಎಂದು ಭಾವಿಸಿಕೊಂಡು ಶಿವಾನುಭವ ಮಂಟಪದಲ್ಲಿ ವರ್ತಿಸಿದ್ದು ಕಂಡು ಬರುತ್ತದೆ. ಇದನ್ನು ನಾವು ಅವನ ಅನೇಕ ವಚನಗಳಲ್ಲಿ ಕಂಡುಹಿಡಿಯಬಹುದಾಗಿದೆ. ಅವನು ತನ್ನ ವಚನಗಳಲ್ಲಿ ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂತಲೂ 'ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ' ಎಂತಲೂ 'ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದಿನಿತಿಲ್ಲ. ಎನ್ನ ಭಕ್ತನೆಂಬರು ...... ನಾನೇನು ಪಾಪವ ಮಾಡಿಹೆನು' ಎಂತಲೂ 'ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯ' ಎಂತಲೂ ತನ್ನನ್ನು ಕುರಿತು ಪದೇ ಪದೇ ಹೇಳಿಕೊಳ್ಳುತ್ತಾನೆ. ಇದರ ಮೇಲಿಂದ ಶಿವಾನುಭವ ಮಂಟಪದಲ್ಲಿ ಬಸವೇಶ್ವರನು ಹೇಗೆ ವರ್ತಿಸುತ್ತಿದ್ದನೆಂಬುದನ್ನು ನಾವು ಅನುಮಾನ ಮಾಡಬಹುದಾಗಿದೆ. ಒಬ್ಬ ಸಮಾಜೋದ್ಧಾರಕನು ಸಮಾಜ ಸುಧಾರಣಾ ಕಾರ್ಯಗಳಲ್ಲಿ ಯಾವ ಮನೋವೃತ್ತಿಯುಳ್ಳವನಾಗಿರಬೇಕೆಂಬ ವಿಷಯದಲ್ಲಿ ಬಸವೇಶ್ವರನ ಈ ವರ್ತನೆಯು ಎಲ್ಲರಿಂದಲೂ ಅನುಕರಣೀಯವಾಗಿದೆ. ಜನರ ಮನೋವೃತ್ತಿಯನ್ನು ಆಕರ್ಷಣ ಮಾಡುವಲ್ಲಿ ಬಸವೇಶ್ವರನು ಯಾವ ಮಂತ್ರ ತಂತ್ರಗಳನ್ನು ಉಪಯೋಗಿಸಿರುವದಿಲ್ಲ. ಆದರೆ ಅವನಲ್ಲಿ ಸಮಾಜ ಸಂಸ್ಕರಣ ಕಾರ್ಯಕ್ಕೋಸ್ಕರ ಉತ್ಕಟ ಪ್ರೀತಿ, ಜನತೆಯ ಬಗ್ಗೆ ನಿಶ್ಚಲವಾದ ಪ್ರೇಮ, ತನ್ನ ವೃತ್ತಿಯಲ್ಲಿ ನಿಸ್ಕಪಟ ಭಾವ ಇವುಗಳಿದ್ದದರಿಂದಲೇ ಅವನು ಅತ್ಯಂತ ಲೋಕಪ್ರಿಯವಾಗಿ ಮಹತ್ತರವಾದ ಕಾರ್ಯಗಳನ್ನು ಮಾಡಲು ಶಕ್ತನಾದನೆಂದು ತೋರುತ್ತದೆ.

(೨) ಶಿವಾನುಭವಮಂಟಪದಲ್ಲಿ ವಿಷಯ ಚರ್ಚೆಗಳಿಗೆ ಯಾವ ಪ್ರತಿಬಂಧವೂ ಇದ್ದಿಲ್ಲೆಂಬುದು ಇದರ ಎರಡನೆಯ ವೈಶಿಷ್ಟ್ಯವಾಗಿದೆ. ಶಿವಶರಣರ ವಾಙ್ಮಯದಲ್ಲಿ ಶಿವಾನುಭವ ಎಂಬ ಶಬ್ದವು ಆಗಿಂದಾಗ್ಗೆ ಬರುತ್ತಿದ್ದು ಇಲ್ಲಿ ಅನುಭಾವವೆಂದರೆ ತನಗುಂಟಾದ ಅನುಭವವನ್ನು ಬೇರೊಬ್ಬ ಅನುಭಾವಿಯೊಡನೆ ಚರ್ಚಿಸಿ ಆದರಂತೆ ವರ್ತಿಸುವದು ಎಂಬ ವಿಶೇಷಾರ್ಥವು ಇದರಲ್ಲಿದೆ. ಬಸವೇಶ್ವರನ ಕಾಲದಲ್ಲಿ ಉಂಟಾದ ಶಿವಾನುಭವ ಮಂಟಪದ ರೀತಿಗನುಸರಿಸಿ ಈ ವಿಧದ ಅರ್ಥವು ಈ ಶಬ್ದಕ್ಕೆ ಬಂದಿರಬಹುದೆಂದು ತೋರುತ್ತದೆ. ಈ ಮಂಟಪದಲ್ಲಿ ವಿಚಾರವಿನಿಮಯಗಳುಂಟಾಗಿ ಅಲ್ಲಿ ಆದ ನಿರ್ಧಾರಗಳಿಗನುಸಾರವಾಗಿ ವಚನಗಳು ರಚಿ

ಸಲ್ಪಟ್ಟಬಳಿಕ ಅವು ಪ್ರಸಾರಹೊಂದುತ್ತಿದ್ದವು. ಹೀಗೆ ಈ ಕಾಲದಲ್ಲಿ ಉಂಟಾದ ವಚನವಾಙ್ಮಯವು ಒಬ್ಬಾನೊಬ್ಬ ವ್ಯಕ್ತಿಯು ನಿರ್ಧಾರವಾಗಿ ಹೇಳಿದ್ದನ್ನು ಅಂಧತೆಯಿಂದ ಸ್ವೀಕರಿಸಿ ರಚಿಸಿದವುಗಳಲ್ಲ. ಅವು ಪರಸ್ಪರರು ಚರ್ಚಿಸಿ ಬರೆದವುಗಳಿರುತ್ತವೆ. ಶಿವಾನುಭವಮಂಟಪವು ಪ್ರಜಾಪ್ರಭುತ್ವದ ತತ್ವಗಳು ದೃಢವಾಗಿ ಮೂಡಿಕೊಂಡಂಥ ಒಂದು ಸಂಸ್ಥೆ ಎಂದು ನಾವು ಈಗಿನ ಭಾಷೆಯಲ್ಲಿ ಹೇಳಬಹುದು.

(೩) ಶಿವಾನುಭವಮಂಟಪದಲ್ಲಿ ಜಾತಿವಿಶಿಷ್ಟ ಉಚ್ಚನೀಚ ಭಾವಗಳಿರದೆ, ಅದರಲ್ಲಿ ಎಲ್ಲರಿಗೂ ಪ್ರವೇಶವಿದ್ದದ್ದು ಅದರ ಮೂರನೆಯ ವೈಶಿಷ್ಟ್ಯವಾಗಿದೆ. ಅದರಲ್ಲಿ ಅಂತ್ಯಜ ಮೊದಲ್ಗೊಂಡು ಬ್ರಾಹ್ಮಣ ವರ್ಗದ ವರೆಗೂ ಎಲ್ಲ ಜಾತಿಯ ಜನರಿಗೆ ಪ್ರವೇಶವಿತ್ತು. ಕಟ್ಟಿಗೆ ಹೊರೆ ಮಾರಿ ಉಪಜೀವಿಸುವವನಿಂದ ಸೈನ್ಯಾಧಿಪತಿಯ ವರೆಗೂ ಎಲ್ಲ ಅಧಿಕಾರಿಗಳಿಗೆ ಮತ್ತು ಕೈಕಸಬುದಾರರಿಗೆ ಅದರಲ್ಲಿ ಅಂಗವಹಿಸಲು ಯಾವ ಪ್ರತಿಬಂಧವೂ ಇರಲಿಲ್ಲ. ಈ ಕಾರಣದ ಮೂಲಕವೇ ವಚನ ವಾಙ್ಮಯದಲ್ಲಿ ವಿಶ್ವಬಂಧುತ್ವದ ವಿಚಾರಗಳುಂಟಾಗಲು ಆಸ್ಪದವಾಯಿತು.

(೪) ಶಿವಾನುಭವಮಂಟಪದಲ್ಲಿ ಅನೇಕ ತರದ ವಿಚಾರವುಳ್ಳವರು ನೆರೆದು ಚರ್ಚಿಸಿ ಒಂದು ನಿರ್ಣಯಕ್ಕೆ ಬರುತ್ತಿದ್ದದರಿಂದ ಅವರು ರಚಿಸಿದ ವಚನಗಳಲ್ಲಿ ಯಾವತರದ ಮತಭೇದಗಳುಂಟಾಗಿರುವದಿಲ್ಲ. ಇದು ಶಿವಾನುಭವಮಂಟಪದ ನಾಲ್ಕನೆಯ ವೈಶಿಷ್ಟ್ಯವಾಗಿದೆ ಅವುಗಳ ನಿರೂಪಣೆಯಲ್ಲಿ ವೈಚಿತ್ರ್ಯವಿದ್ದರೂ ಅವುಗಳಲ್ಲಿ ಭಿನ್ನಾಭಿಪ್ರಾಯಗಳಿರುವದಿಲ್ಲ. ಅವೆಲ್ಲವೂ ಒಂದೇ ಬಗೆಯ ತತ್ವಗಳನ್ನು ಪ್ರತಿಪಾದಿಸುತ್ತವೆ. ಈ ತತ್ವಗಳು ಮುಂದೆ ಮಧ್ಯಕಾಲದಲ್ಲಿ ಮರೆಮಾಜಿದರೂ ಕೂಡ, ಅವುಗಳನ್ನು ೧೨ನೇ ಶತಮಾನದಲ್ಲಿ ಆಗಿಹೋದ ಶಿವಶರಣರು ನಿರೂಪಿಸಲಿ, ಅಥವಾ ೧೫ನೇ ಶತಮಾನದಲ್ಲಿಯ ಮಠಾಧಿಕಾರಿಗಳು ನಿರೂಪಿಸಲಿ, ಅಥವಾ ಈಚೀಚೆಗೆ ಉಂಟಾಗಿರುವ ಅಖಂಡೇಶ್ವರನ ವಚನಗಳು, ಕಾರ್ಯಭೂಪತಿಯ ವೇದಸಂಜೀವನಿ, ಇಂಥ ಗ್ರಂಥಗಳಲ್ಲಿ ನಿರೂಪಿತವಾಗಿರಲಿ, ಅವೆಲ್ಲವೂ ಒಂದೇ ಬಗೆಯ ಸಿದ್ಧಾಂತವನ್ನು, ಒಂದೇ ಬಗೆಯ ತತ್ವಗಳನ್ನು, ನಿರೂಪಿಸುತ್ತವೆಯೇ ಹೊರ್ತು ಅವುಗಳಲ್ಲಿ ಯಾವ ತರದ ಮತಭೇದಗಳಿರುವದಿಲ್ಲ. ಶಿವಾನುಭವಮಂಟಪದ ಚರ್ಚೆಯ ಪರಿಣಾಮವು ಇದಾಗಿದೆ. ಅಲ್ಲದೆ ಶಿವಶರಣರ ವಚನಗಳು ನೀತಿ, ವಿಚಾರ, ಆತ್ಮ

ಸ್ವಾಧಾರಣೆ, ವಿಶ್ವಬಂಧುತ್ವ ಇಂಥ ಉದಾತ್ತ ಮತ್ತು ವಿಸ್ತೃತ ತತ್ವಗಳನ್ನು ಅವಲಂಬಿಸಿರುವ ಮೂಲಕ ಅವುಗಳಲ್ಲಿ ಮತಭೇದಗಳಾಗುವ ಸಂಭವವಿಲ್ಲ. ವಚನಕಾರರ ವಿವೇಚನೆಯ ಪದ್ಧತಿಯಲ್ಲಿ ಭಿನ್ನತೆಗಳಿರಬಹುದು. ಆದರೆ ಅವುಗಳಲ್ಲಿಯ ಮೂಲಭೂತ ತತ್ವಗಳು ಶಾಶ್ವತವಾದವುಗಳಿರುತ್ತವೆ. ಅವು ಈಗಿನ ಕಾಲಕ್ಕೂ ಕೂಡ ಅನ್ವಯಿಸುತ್ತವೆ.

ಬಸವೇಶ್ವರನ ಶಿವಾನುಭವಮಂಟಪದಲ್ಲಿ ಮುಖ್ಯ ಭಾಗವನ್ನು ವಹಿಸಿ ಕಾರ್ಯ ಮಾಡಿದ ಶಿವಶರಣರಾರೆಂಬುದನ್ನು ನಾವು ಇಲ್ಲಿ ಉಲ್ಲೇಖಿಸುವದು ಅವಶ್ಯವಿದೆ. ಈ ಸಂಗತಿಯನ್ನು ಕಂಡುಹಿಡಿಯುವಲ್ಲಿ ನಾವು ಶಿವಶರಣರ ಚರಿತ್ರೆಗಳನ್ನು ಸಂಶೋಧಿಸಿ ಅವರಲ್ಲಿ ಯಾರು ಬಸವೇಶ್ವರನಿಗೆ ಸಮಕಾಲೀನರಾಗಿದ್ದುಕೊಂಡು ವಚನಗಳನ್ನು ರಚಿಸಿರುವರೋ ಅವರೇ ಶಿವಾನುಭವಮಂಟಪದಲ್ಲಿರಬೇಕೆಂದು ಊಹಿಸಬೇಕಾಗುತ್ತದೆ. ಹೀಗೆ ಸಂಶೋಧಿಸಿದಲ್ಲಿ ಕೆಳಗೆ ಕಾಣಿಸಿದ ಶಿವಶರಣರು ಶಿವಾನುಭವಮಂಟಪದಲ್ಲಿದ್ದರೆಂದು ನಮಗೆ ತೋರುತ್ತದೆ. ಅವರು ಯಾರೆಂದರೆಃ —

(೧) ಬಸವ (೨) ಚನ್ನಬಸವ (೩) ಸಿದ್ಧರಾಮ (೪) ಪ್ರಭುದೇವ (೫) ಮಡಿವಾಳ ಮಾಚಿದೇವ (೬) ಕಿನ್ನರೀ ಬ್ರಹ್ಮಯ್ಯ (೭) ಮೋಳಿಗೆಯ ಮಾರಯ್ಯ (೮) ಗಟ್ಟಿವಾಳಯ್ಯ (೯) ಚಿಕ್ಕಯ್ಯ (೧೦) ನಾಗಲಾಂಬಿಕೆ (೧೧) ಮರುಳ ಶಂಕರದೇವ (೧೨) ನೀಲಾಂಬಿಕೆ (೧೩) ಉಡುತಡಿಯ ಮಹಾದೇವಿ (೧೪) ಡೋಹರ ಕಕ್ಕಯ್ಯ (೧೫) ಮಧುವರಸ (೧೬) ಹರಳಯ್ಯ (೧೭) ಸೊಡ್ಡಳ ಬಾಚರಸ (೧೮) ಕೂಗಿನಮಾರಿತಂದೆ (೧೯) ನುಲಿಯ ಚಂದಯ್ಯ (೨೦) ಶಿವನಾಗಮಯ್ಯ (೨೧) ಮೋಳಿಗೆಯ ಮಾರಯ್ಯನ ಪತ್ನಿ ಮಹಾದೇವಿ (೨೨) ಹಡಪದಪ್ಪಣ್ಣ (೨೩) ಹಡಪದಪ್ಪಣ್ಣನ ಹೆಂಡತಿ ಲಿಂಗಮ್ಮ (೨೪) ಅಯದಕ್ಕಿ ಮಾರಯ್ಯ (೨೫) ಅಮುಗಿದೇವಯ್ಯ (೨೬) ಅಮುಗಿದೇವಯ್ಯನ ಹೆಂಡತಿ ರಾಯಮ್ಮ (೨೭) ಭಂಡಾರಿ ಶಾಂತಯ್ಯ (೨೮) ಮುಗ್ಧಸಂಗಯ್ಯ (೨೯) ಶಿವಲೆಂಕಮಂಚಣ್ಣ (೩೦) ರಾಯಸದಮಂಚಣ್ಣ (೩೧) ಹಡಪದ ರೇಚಣ್ಣ (೩೨) ಪಡಿಹಾರಿ ಉತ್ತಣ್ಣ (೩೩) ಢಕ್ಕೆಯ ಬೊಮ್ಮಣ್ಣ (೩೪) ತಂಗಟೂರು ಮಾರಯ್ಯ.

ಇವರಲ್ಲಿ ಒಬ್ಬಿಬ್ಬರನ್ನು ಬಿಟ್ಟು ಉಳಿದವರೆಲ್ಲರೂ ವಚನಕಾರರಿದ್ದಾರೆ. ಅವರ ವಚನಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಲ್ಲಿ ಅವುಗಳ ಭಾಷೆ, ನಿರೂಪಣಾ ಪದ್ಧತಿ, ಭಾವ ಇವುಗಳಲ್ಲಿ ಒಂದೇ ವಿಧವು ತೋರಿ ಬರುತ್ತದೆ. ಸುಮಾರು ೩೦೦ ಜನ ವಚನಕಾರರ ಹೆಸರುಗಳು ಈಗ ನಮಗೆ ಉಪಲಬ್ಧವಿದ್ದು ಅವರೆಲ್ಲರೂ ಬಸವನ ಕಾಲದವರೆಂದು ಅನೇಕರು ಭಾವಿಸಿರುತ್ತಾರೆ. ಆದರೆ ಅವರ ಚರಿತ್ರೆಗಳನ್ನು ನಾವು ಪರೀಕ್ಷಿಸಿದಲ್ಲಿ ಮೇಲೆ ಕಾಣಿಸಿದ ವಚನಕಾರರ ಹೊರ್ತು ಉಳಿದವರು ಬಸವೇಶ್ವರನಿಗೆ ಸಂಬಂಧಪಡುವದಿಲ್ಲ. ಅವರಲ್ಲಿ ಎಂಟು ಹತ್ತು ಜನರು ಮಾತ್ರ ಅವನಿಗಿಂತ ಹಿಂದಿನವರೆಂದು ಕಂಡುಬರುತ್ತದೆ. ಈ ಎಂಟು ಹತ್ತು ಜನರು ಯಾರೆಂದರೆಃ— (೧) ದೇವರದಾಸಿಮಯ್ಯ (೨) ಕೊಂಡಗುಳಿಯ ಕೇಶಿರಾಜ (೩) ತೆಲುಗು ಜೊಮ್ಮಣ್ಣ (೪) ಶಂಕರದಾಸಿಮಯ್ಯ (೫) ಬಾಹೂರು ಬೊಮ್ಮಯ್ಯ (೬) ಇಳಿಹಾಳ ಬ್ರಹ್ಮಯ್ಯ (೭) ಮಾದರ ಚನ್ನಯ್ಯ (೮) ಕೆಂಭಾವಿ ಭೋಗಣ್ಣ (೯) ಶ್ವಪಚಯ್ಯ ಮತ್ತು (೧೦) ಸಾಮವೇದಿ ಈ ಪ್ರಕಾರ ಇರುತ್ತಾರೆ. ಇವರು ಬಸವೇಶ್ವರನಕಿಂತಲೂ ಮೊದಲಿನವರು. ಮೇಲಿನ ೩೪ ಜನರು ಬಸವೇಶ್ವರನ ಶಿವಾನುಭವ ಮಂಟಪದಲ್ಲಿದ್ದವರು ಮತ್ತು ಉಳಿದ ಸುಮಾರು ೨೫೦ ಜನರು ಅವನ ತರುವಾಯ ಆದವರು ಇರುತ್ತಾರೆ. ಇವರು ೧೩ನೇ ಶತಮಾನದ ಅಂತ್ಯದ ವರೆಗೆ ಕಾಲಕಾಲಕ್ಕೆ ಆಗಿರುತ್ತಾರೆ. ಅವರೆಲ್ಲರು ಶಿವಾನುಭವ ಮಂಟಪದಲ್ಲಿ ನಿರ್ಧಾರವಾದ ತತ್ವಗಳನ್ನು ಮುಂದೆ ದೇಶದಲ್ಲಿ ಪ್ರಸಾರ ಮಾಡುತ್ತ ಬಂದಿದ್ದಾರೆ. ಹೀಗೆ ವಚನವಾಙ್ಮಯವು ಸುಮಾರು ೧೦೦-೧೫೦ ವರ್ಷಗಳ ವರೆಗೆ ಬೆಳೆಯುತ್ತ ಅತ್ಯಂತ ವೈಶಾಲ್ಯವನ್ನು ಹೊಂದುತ್ತ ಬಂದಿರುತ್ತದೆ.

# ಶಿವಾನುಭವ ಸಹಾಯ ಸಿಧಿ.

**ರಬಕವಿ:**— (೧) ರಾಮಪ್ಪ ಲಕ್ಷ್ಮಣಪ್ಪ ಚಿಕ್ಕೋಡಿ ೧೦೦ ರೂ, (೨) ಸಣಕಲ್ಲ ಬ್ರದರ್ಸ ೧೦ ರೂ, (೩) ಶಂಭಪ್ಪ ಚನಬಸಪ್ಪ ಕೊಕ್ಕಳಕಿ ೧೦ ರೂ, (೪) ವೀರಪ್ಪ ಶಿವಪ್ಪ ಅರಬಳ್ಳಿ ೫ ರೂ, (೫) ಕಾಡಪ್ಪ ವಿರಭದ್ರಪ್ಪ ಮಾಲಾಪುರ ೫ ರೂ, (೬) ರೇವಣ್ಣಪ್ಪ ಮುದಕಪ್ಪ ಬಾಪುರಿ ೫ ರೂ, (೭) ಮಿತ್ರಸಮೂಹ ಮುದ್ರಣಾಲಯ ೫ ರೂ, (೮) ವಿರಭದ್ರಪ್ಪ ದುಂಡಪ್ಪ ಅಬ್ಬುಲಪುರಕರ ೫ ರೂ, (೯) ಎಸ್. ಜಿ. ಸಾಬೋಜಿ ೫ ರೂ, (೧೦) ನಾಗಪ್ಪ ಭೂಜಪ್ಪ ದುರಡಿ ೧೦ ರೂ.

**ಬನಹಟ್ಟಿ:**— (೧೧) ದುಂಡಪ್ಪ ನಾಗಪ್ಪ ಖವಾಸಿ ೫ ರೂ, (೧೨) ಚನವೀರಪ್ಪ ಅಬಕಾರ ೨೫ ರೂ, (೧೩) ಚನಮಲ್ಲಪ್ಪ ಸಿದ್ದಪ್ಪ ಬಡೇಮಿ ೧೦ ರೂ, (೧೪) ಚಿನ್ನಪ್ಪ ಕಾಡಪ್ಪ ಧಬಾಡಿ ೫ ರೂ, (೧೫) ಗಂಗಪ್ಪ ಯಾತಗೇರಿ ಮತ್ತು ತುಳಜಪ್ಪ ಕಾಳಗಿ ೫ ರೂ, (೧೬) ಸಿದ್ರಾಮಪ್ಪ ಗಿರಿಮಲ್ಲಪ್ಪ ಚರಕಿ ೩ ರೂ.

**ಮಹಾಲಿಂಗಪೂರ:**— (೧೭) ಶ್ರೀಮಂತ ಬಸಲಿಂಗಪ್ಪ ಮಲ್ಲಪ್ಪ ಘಟನಟ್ಟಿ ೨೫ ರೂ, (೧೮) ಸಿದ್ಧಲಿಂಗಪ್ಪ ಗುರಸಿದ್ಧಪ್ಪ ಅಷ್ಟಗಿ ೧೦ ರೂ, (೧೯) ಮಹಾರುದ್ರಪ್ಪ ಗುರುಪಾದಪ್ಪ ಝುಂಜಪ್ಪನವರ ೫ ರೂ, (೨೦) ಶ್ರೀಗುರುಲಿಂಗಸ್ವಾಮಿ ಗುರುಬಸವಲಿಂಗಸ್ವಾಮಿ ಮಹಾಲಿಂಗೇಶ್ವರ ೫ ರೂ.

**ತೇರದಾಳ:**—(೨೧) ಬಸವಪ್ರಭು ಅಲ್ಲಯ್ಯ ದೊಡ್ಡಮನಿ ೨೫ ರೂ. (೨೨) ಈಶ್ವರಪ್ಪ ಅಲ್ಲಪ್ಪ ಮಹಾಬಳಶೆಟ್ಟಿ ೫ ರೂ, (೨೩) ದುಂಡಪ್ಪ ಬಸಪ್ಪ ಮುಚ್ಚಂಡಿ ರೂ.

**ಗೋಕಾಕ:**— (೨೪) ಶ್ರೀಮತಿ ರುದ್ರಮ್ಮ ಕೊಂ ಶಿವಲಿಂಗಪ್ಪ ಉಮರಾಣಿ ೫೧ ರೂ, (೨೫) ವ್ಹಿ. ಸಿ. ಅಂಗಡಿ ಸಬ್‌ಜಜ್ಜ ೧೦ ರೂ, (೨೬) ಪರಪ್ಪ ಚನ್ನಪ್ಪ ಹಂದಿಗುಂದ ೧೧ ರೂ, (೨೭) ಎಂ. ಎಸ್. ವಂಟಮುರಿಮಠ ೫ ರೂ, (೨೮) ಶಿದ್ರಾಮಯ್ಯ ವಂಟಮುರಿಮಠ ೫ ರೂ, (೨೯) ಗುರುಸಿದ್ದಯ್ಯನವರು ಕವಟಾಳಿಮಠ ೧೫ ರೂ, (೩೦) ಶಿವಲಿಂಗಮಹಾಸ್ವಾಮಿಗಳು ಸಾವಳಿಗಿಮಠ ೧೦ ರೂ, (೩೧) ಎಂ. ಕೆ.

ಅಷ್ಟಗಿ ವಕೀಲರು ೫ ರೂ, (೩೨) ವ್ಹಿ. ಬಿ. ಶೆಡಬಾಳ ರೆವಿನ್ಯೂ ಕ್ಲಾರ್ಕ ೫ ರೂ, (೩೩) ಬಸವಂತರಾವ ರುದ್ರಪ್ಪ ಭಾವಿಕಟ್ಟಿ ೫ ರೂ, (೩೪) ಗುರಲಿಂಗಪ್ಪ ವಿರಭದ್ರಪ್ಪ ಘೋಡಗೇರಿ ೫ ರೂ, (೩೫) ಆರ್. ಎಸ್. ಹೂಲಿ ಇನ್ಸಪೇಕ್ಟರ ವೇಟ್ಸ ಆ್ಯಂಡ ಮೇಜರ್ಸ ೫ ರೂ, (೩೬) ನಾಗಪ್ಪ ರಾಮಪ್ಪ ಮಗಡುಮ್ಮ ೫ ರೂ, (೩೭) ಸಿದ್ದಪ್ಪ ಅಡಿವೆಪ್ಪ ನೇಗಿನಾಳ ೧೦ ರೂ, (೩೮) ಈಶ್ವರಪ್ಪ ಸಿದ್ರಾಮಪ್ಪ ಹಾಳಭಾವಿ ೨೫ ರೂ, (೩೯) ವಿರುಪಾಕ್ಷಪ್ಪ ನಿಂಗಪ್ಪ ನಿಪ್ಪಾಣಿ ೧೦ ರೂ, (೪೦) ಬಸಪ್ಪ ರಾಮಪ್ಪ ಚಿಕ್ಕೋಡಿ ೫ ರೂ, (೪೧) ಡಾ. ವ್ಹಿ. ಬಿ ಹಾಳಭಾವಿ ೧೦ ರೂ, (೪೨) ಕಾಡಪ್ಪ ಪರಮಶೆಟ್ಟಿ ಪಾಟೀಲ ೧೦ ರೂ, (೪೩) ವೀರಪ್ಪ ಅಡಿವೆಪ್ಪ ಕರ್ಣಿ ೫ ರೂ, (೪೪) ಶ್ರೀಶೈಲಪ್ಪ ಶಿವಮೂರ್ತೆಪ್ಪ ಉಪ್ಪಿನ ಮತ್ತು ಚಿನ್ನಪ್ಪ ತೊರಗಲ್ ೫ ರೂ, (೪೫) ಮಲ್ಲಿಕಾರ್ಜುನಪ್ಪ ರಾಚಪ್ಪ ತಂಬಾಕೆ ೫ ರೂ, (೪೬) ಎಸ್. ಜಿ. ನಂದೀಮಠ ಮತ್ತು ಆರ್. ಸಿ. ಪಾಟೀಲ ೫ ರೂ, (೪೭) ರಾಮಯ್ಯ ಅಪ್ಪಯ್ಯಸ್ವಾಮಿ ಮಡ್ಡಯ್ಯನವರ ೫ ರೂ, (೪೮) ಪರಪ್ಪ ಗುರಲಿಂಗಪ್ಪ ಕಲ್ಯಾಣಶೆಟ್ಟಿ ೫ ರೂ, (೪೯) ವಿರುಪಾಕ್ಷಯ್ಯ ವೀರಯ್ಯ ಮುನ್ನೊಳ್ಳಿಮಠ ೫ ರೂ, (೫೦) ಗುರುಪಾದಪ್ಪ ಚನ್ನಗಿರೆಪ್ಪ ಗಲಗಲಿ ೫ ರೂ, (೫೧) ಭೂಪಾಲ ದೊಡ್ಡಪ್ಪ ಡೋಂಗರೆ ೫ ರೂ, (೫೨) ಕಲ್ಲಪ್ಪ ದಾದಪ್ಪ ಕಿತ್ತೂರ ೫ ರೂ, (೫೩) ರಾಮಚಂದ್ರ ಯಲ್ಲಪ್ಪ ಚವ್ಹಾಣ ೫ ರೂ, (೫೪) ಶ್ರೀಕಾಡದೇವರ ಮಠದ ಮಹಾಸ್ವಾಮಿಗಳು ಮರಡಿಮಠ ೧೦ ರೂ, (೫೫) ದಿ. ಡೆಕ್ಕನ್ ಮೋಟಾರ ಸರ್ವ್ಹಿಸ ೫ ರೂ, (೫೬) ಗುರುಸಿದ್ದಪ್ಪ ವಿರಭದ್ರಪ್ಪ ಸವಣೂರ ೫ ರೂ, (೫೭) ಸಿ. ಎಸ್. ಪಾಟೀಲ ೫ ರೂ, (೫೮) ಬಸವಣ್ಣೆಪ್ಪ ಬಸಲಿಂಗಪ್ಪ ಮರಕಂಬಿ ೫ ರೂ, (೫೯) ಬಸನಗೌಡ ಸೋಮನಗೌಡ ಇನಾಮತಿ ೫ ರೂ, (೬೦) ದತ್ತಾತ್ರೇಯ ಶೇಷಗಿರಿ ತಲ್ಲೂರ ೫ ರೂ, (೬೧) ಗುರುಪಾದಪ್ಪ ಪಾಂಡಪ್ಪ ಪಾರನಟ್ಟಿ ೫ ರೂ, (೬೨) ನಾಗಪ್ಪ ರುದ್ರಪ್ಪ ಪಾಟೀಲ ೫ ರೂ, (೬೩) ತುಳಜಪ್ಪ ಪುನ್ನಪ್ಪ ಕಾಗಲಿ ೫ ರೂ.

**ಬೆಳಗಾವ**:— (೬೪) ವೀರಪ್ಪ ಶಿವಲಿಂಗಪ್ಪ ವಿರುಪಾಕ್ಷಿ ೧೦ ರೂ, (೬೫) ಎಂ. ಪಿ. ಮಾಲಿ ೧೦ ರೂ, (೬೬) ವ್ಹಿ. ಡಿ. ಫಾಳಿ ೧೦ ರೂ, (೬೭) ಪಿ. ಸಿ. ಬಾಕಿನರ ೧೦ ರೂ, (೬೮) ಡಾ. ಎಸ್. ಸಿ. ನಂದೀಮಠ ೧೦ ರೂ, (೬೯) ವಿರುಪಾಕ್ಷಪ್ಪನವರು ಶ್ರಿಂಗಾರಿ ಶಹಪುರ ೧॥ ಮಾಮ

ಲೇದಾರ ೧೦ ರೂ, (೭೦) ವ್ಹಿ. ಪಿ. ಕಿತ್ತೂರ ವಕೀಲ ೧೦ ರೂ, (೭೧) ಮಹಾದೇವಪ್ಪ ಕಿತ್ತೂರ ಕೋರಿಚಟಿ ೫ ರೂ, (೭೨) ಸೋಮಶೇಖರ ಶಾಸ್ತ್ರಿ ಪಟ್ಟದದೇವರು ಹಿರೇಮಠ ೫ ರೂ, (೭೩) ಭೋಜಪ್ಪ ಶಿವಲಿಂಗಪ್ಪ ಭೋಜ ೫ ರೂ, (೭೪) ಪ್ರೊ. ಜಿ. ಎಸ್. ಪರಮಶಿವಯ್ಯಾ ೫ ರೂ. (೭೫) ಬಿ. ಎಂ. ಏಳಕೋಟಿ ೨೫ ರೂ, (೭೬) ವ್ಹಿ. ಸಿ. ಮೆಡ್ಲೇರಿ ಮ್ಯಾನೇಜರ ಡಿ. ಸಿ. ಬ್ಯಾಂಕ ೫ ರೂ, (೭೭) ಶ್ರೀ ದುರುದುಂಡೀಶ್ವರ ಮಹಾಸ್ವಾಮಿಗಳು ೧೧ ರೂ. (೭೮) ಶ್ರೀ ಸಿದ್ಧರಾಮಸ್ವಾಮಿಗಳು ಅಂಕಲಗಿಮಠ ೧೧ ರೂ, (೭೯) ಶ್ರೀ ಸೇಗುಣಿಸಿಸ್ವಾಮಿಗಳು ೧೧ ರೂ, (೮೦) ಶ್ರೀ ದೇಸನೂರಮಠ ಸ್ವಾಮಿಗಳು ೧೧ ರೂ. (೮೧) ಶ್ರೀ ಶಿವಬಸವ ಮಹಾಸ್ವಾಮಿಗಳು ನಾಗನೂರ ೧೧ ರೂ, (೮೨) ಶ್ರೀ ಮಹಾಂತ ದೇಶಿಕರು ಇಳಕಲ್ಲ ೨ ರೂ, (೮೩) ಎಸ್. ಬಿ. ಜವಳಿ ಬಿ. ಎ. ಎಲ್‌ಎಲ್. ಬಿ. ವಕೀಲ ೧೦ ರೂ, (೮೪) ಶಿವಪ್ಪ ಕಂಕಣಮೇಲಿ ೫ ರೂ, (೮೫) ಮಲ್ಲಪ್ಪ ಶಿವಪ್ಪ ಬಿಳ್ಳೂರು ೫ ರೂ, (೮೬) ನಿಂಗಪ್ಪ ಸಿದ್ದಪ್ಪ ಮುರಗೋಡ ೫ ರೂ.

**ಶಹಾಪುರ:**— (೮೭) ಶಿದ್ದಪ್ಪ ಚನಬಸಪ್ಪ ಕಿತ್ತೂರ ೫ ರೂ, (೮೮) ಶಂಕ್ರಪ್ಪ ಚನಬಸಪ್ಪ ಕಿತ್ತೂರ ೫ ರೂ, (೮೯) ಶಂಕರೆಪ್ಪ ಚನಬಸಪ್ಪ ಇಂಡಿ ೫ ರೂ, (೯೦) ಚನಬಸಪ್ಪ ಪರಪ್ಪ ಮಿರ್ಜಿ ೫ ರೂ, (೯೧) ತುಳಜಪ್ಪ ರುದ್ರಪ್ಪ ಗಚ್ಚಿ ೫ ರೂ, (೯೨) ಅಪ್ಪಯ್ಯ ಶಿವಲಿಂಗಪ್ಪ ಭೋಜ ೫ ರೂ, (೯೩) ವಿರುಪಾಕ್ಷಪ್ಪ ಶಿದ್ರಾಮಪ್ಪ ಬೆಂಬಳಗಿ ೨೦ ರೂ, (೯೪) ವ್ಹಿ. ಜಿ. ಜಿಗಜಿನ್ನಿ ವಕೀಲ ೫ ರೂ,

**ದಾವಣಗೆರೆ:**— (೯೫) ವೀರಶೈವ ವಿದ್ಯಾವರ್ಧಕಸಂಘ ೧೦೦ರೂ.

**ಖಾನಾಪುರ** (ಜಿ. ಬೆಳಗಾವ):— (೯೬) ಬಸಲಿಂಗಪ್ಪ ಹೊಸಮನಿ ೫ ರೂ.

**ಯಾದಗಿರಿ:**— (೯೭) ಚನ್ನಪ್ಪ ಸಜ್ಜನಶೆಟ್ರು ೫ ರೂ, (೯೮) ಹಂಪಣ್ಣಾ ಸಜ್ಜನಶೆಟ್ರು ೮ ರೂ. ೯ ಅಣೆ, (೯೯) ಚಟ್ನಳ್ಳಿ ವೀರಣ್ಣಾ ೧೦ ರೂ, (೧೦೦) ರಾಮರಡ್ಡಿ ವಕೀಲ ೧೦ ರೂ, (೧೦೧) ಸಿದ್ದನಗೌಡರು ಕುಲಕರ್ಣಿ ಕಲಮಂಗಿ ಜಿ. ರಾಯಚೂರ ೫ ರೂ,

**ಮಂಟೆಮುರಿ** (ಜಿ. ಬೆಳಗಾವಿ):— (೧೦೨) ಬಸವಪ್ಪ ಚನ್ನಪ್ಪ ಪಟ್ಟೇದ ೫ ರೂ.

ಮುಂಬಯಿ ಸರಕಾರದವರು

ಪಾಸ ಮಾಡಿದ "ಲ್ರೋಣಿ" ಇವರ ಗ್ಯಾಸ ಪ್ಲಾಂಟಗಳನ್ನೇ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯ ಖರ್ಚು ಬಹಳೇ ಕಡಿಮೆ ಇದ್ದು, ಬೇಗನೆ ಸ್ಟಾರ್ಟವಾಗಿ ಭರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳೇ ಸುಲಭ. ಮಶಿನರಿಗಳಿಗೆ ಬಿಲಕೂಲ ಅಪಾಯವಿಲ್ಲ. ದೃಷ್ಟಿಗೆ ಶುಭಕ. ಇದಲ್ಲದೆ ಟ್ಯುಯಿರಿಂಗ ಕಾರ್ಸ [illegible] ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟಿವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

**ದಿ ಲ್ರೋಣಿ ಇಂಜನಿಯರಿಂಗ ವರ್ಕ್ಸ ಸೋಲಾಪೂರ.**

**BOOK-POST.** R. N. B. 2554

ಶ್ರೀ. ರಾ|| ರಾ||

ವಿ. ಎಸ್. ನ್ಹಿ ಹಂಜಿ, ಎಂ. ಎ.
ಪೋ. ಬೈಲಹೊಂಗಲ
Dt, Belgaum

From,
**Shivanubhava Office Bijapur.**

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.